# KANNADA EXPOSITION OF THE GITA

## SRIMAD BHAGAVAD GITA

Thriteeya Shatka, Part 3: By C. M. Vijiaraghavachar. (Pp. 1626 to 2220. Author, No. 3. North Public Sq. Road, "Bharadwaja Asram" Basavangudi, Bangalore. Price Rs 4)

Mr. C M. Vijiaraghavacharya, who, in his 82nd year, is actively engaged in philosophical pursuits, has now placed before the public the third part of his critical and expository discussion of the Gita, according to the 'Visishtadvaita" school of traditional interpretation, written in Kannada language It may be recalled that the first volume of the work known as "Acharya-hridaya-anveshinee" was noticed in The Hindu in 1939 and the second in 1942. Mr. Acharya has kept his own critical and expository discussion strictly close to Ramanuja's "Gita Bhashya" Vedanta Eesikas's "Tatparyachandrika" and Yamuna's "Gita-arthasara" The stanzas of the Gita have been done into Kannada and the import of each is thoroughly and systematically discutsed in the light of the classic, traditional interpretations. The volume under notice contains as subect matter five chapters of the Gita, 13-14 15-16 and 17, and I learn the 18th chapter could not be included on account of certain printing difficulties It may be stated without even the slightest exaggeration that the title of the work is fully justified and substantiated in view of the actual performance of the author who has fully assimilated the excellent and unexceptionable contents of the classics of Ramanuja, Vedanta-Desika and Yamuna

The 13th chapter of the Gita is believed to throw an apple of discord and the vexata quaestio has been-what is the correct interpretation of the intriguing, term "Kshetragnya"? It is well known that the term has been interpreted by Sankara in support of his Monism or Monistic Absolutism and such an interpretation has been challenged and refuted by Ramanuja and his commentators.After a complete and full dress discussion Mr Vijiarahavcharya clinches the matter thus "Ekatma vadavanna helovarige Sruti Smriti Itihasa Purana vakyagaligella virodhavaguttadendu vistarisibeli layitu" (P. 1825). Mr Acharya maintiains that the monistic or absolutistic interpretation of the term "Kshetrajnya" focussed and converging on identity between the finite self(jiva) and the Infinite (Iswara), has to be rejected as being flatly contradictory to theconsolidated import of the several sacred texts like Sruti, Smriti, et hoc. Whatever European and American Experimental Psychoiogists may assert in support of unmitigated Behaviorism, the Vedanta insists on the recognition of a non-material entity or entities subject to the countless vicissitudes of transmigratory career

As the concluding stanza indicates, the 15th chapter contains an exposition of the valued secret doctrine for the guidance of genuine aspirants. ("GuhyatamamSastram")This chapter considerably reinforces the conclusions indicated in the 13th, and particularly the two celebrated stanzas "Dvavimau-Purushau. . ." and "Uttamah-Purushastu-anayah. . " (Chap. 15-16 17) convey the truth that the transmigrating entity is not identical with the Absolute, and summing up the central and cardinal conclusion in illuminating and incisive language, Mr. Acharya points out that unless the erring and struggling finite selves put forth sufficient spiritual endeavour in order to earn the grace of the Supreme Lord of the Universe, they can never hope to secure freedom from apparently endless cycles of births Such grace, however, cannot be had for the merest asking. It is all hard and uphill task A programme of spiritual training and practice is sketched in this chapter,(Stanzas 4 and 5 "Tatah-padam....puranee" and "Nirmana moha-avyama-tat"). Mr. Acharya has made it strikingly clear taht Rama nuja's insistence on the practice of the spiritual programme is philosophically uncompromising and withal quite unexceptionable. He writes: "Aaatana anugrahakke patraraguvadakke ee Adhyana 4-5 slokagalalli heliruva upayanushtanavannu madidarene mokshavu " (p. 2033).

Notwithstanding the direct and unequivocal statements contained in the Gita, some have administered a pacifistic orientation to the doctrine that in certain contexts it becomes a sacred duty to fight the forces of evil, hypocrisy and humbug. To every spiritual aspirant two courses of conduct, are open,. One course is dictated and determined by self-willed egotism or egotistic self-willedness (Kama Kara) The other is revealed and proclaimed by consolidated wisdom of the ages crystallised in sacred scriptures that are understood as the direction and command of the Supreme Lord, (Sastravidhi) It is the latter course alone that would lead one to the promised land of spiritual bliss and unalloyed happiness. In the particular context of the Mahabharata Arjuna was told that fight he must as a "Kshatriya" If he ran away, he would be ridiculed as a coward. Expounding the Lord's message to Arjuna, Mr. Acharya forcibly puts the conclusion thus: "Kama karatah neenu pravarttisi yuddha madodillavendiruvadu ninage uchita dharma vallavu. Hage madidare neenu Aasuree prakritiyagi anarthagalige guriyaguvi.

I shall content myself with only one more citation. The 17th chapter of the Gita contains a masterly analysis of the psychological constitution of three types of personality differing from one another in cognitive, emotive, and conative behaviorism attempted on the basis of the familiar doctrine of the three Gunas. Each type reveals its own characterisic psycho-physical application to environmental study and reactions (Sraddha). The threefold

classification of types. cuts across through, ritualistic performances, penances, food and gifts, speech, in fact through all the departments of life. Absolute purity and selflessness or absence of egotistic sclfishness are strictly enjoined on aspirants. Arjuna is taught that a courss ot conduct not in conformity with the Vedic standards and torms of Dharma revealed by the Vedas (Vaidika Dharma and Karma) notwithstanding the virtue of concentrated application. should be studiously shunned, and likewise is to be shunned the course of conduct that is devoid of spirituslised concentration notwithstanding its cxternal conformity with Vedic torms and standards, Emphasising this truth communicated to Arjuna by the Lord, Mr. Vijiaraghavacharya puts tne matter effectively in a nut-shell in the following manner: "Sraddha yukta-Avaidika karmavu Sraddha heena Vaidika karmavu eradu nindisalappattavu...." (p. 2214). One might well engage in disruptive and anti-sooial activity with application. concentration, and diligence and doggedness Such activity, however, would never rank spiritually higher at all. Not would the adoption of wooden and empty Vedic formalistic routine. Thus the Gita counsels a happy and harmonious combination of spiritually purified and rectified application and concentration (sraddha) and loyalty to Vaidik Dharma. The Gitaic ideal is the pursuit of the path of Sattvika Sraddha.

Here and there there are typograpeical errorsi and departures from strict, orthodox Kannada idiom which I have not here listed, but, none of these could in any way affect the uniformly sustained general excellence and charm of Mr Acharya's exposition.'

R. Naga Raja Sarma.

ಮೈಸೂರು ಚಾಮುಂಡೀಪುರ ಡೋರ್ ನಂ 2940
ತಾ॥ 9—3—1948

ಶ್ರೀಮದ್ವೇದಮಾರ್ಗೇತ್ಯಾದಿ ಶುಭಗುಣ ಭೂಷಿತರಾದ ರಾಜಶ್ರೀಯುತರಾದ
ವಿಜಯರಾಘವಾಚಾರ್ಯರವರ ಸನ್ನಿಧಿಯಲ್ಲಿ ಹೊಳವನಹಳ್ಳಿ ಶೇಷಾಚಾರ್ಯನ
ನತಿಪೂರ್ವಕ ವಿಜ್ಞಾಪನಾ.

ತಾವು ಪರಮ ವಿಶ್ವಾಸದಿಂದ ಕಳುಹಿಸಿದ ಶ್ರೀ ಗೀತಾ ತೃತೀಯ ಷಷ್ಕಾರ್ಥ ಸಂಪುಟವು ಮತ್ತು ಬೇರೆ ಬರೆಸಿದ ಕಾರ್ಡು ಸಹ ಸೇರಿ ಬಹು ಸಂತೋಷಕರವಾಯಿತು. **ಪೂರ್ವೇ ಪೂರ್ವೇ ಯತೋ ವಿಷ್ಣೋಃ ಸನ್ನಿಧಾನಂ ಪ್ರಮಾಧಿಕಂ। ಸಾಮರ್ಥ್ಯಾಧಿಕ್ಯಮೇಷಾ** ಮಿತ್ಯಾದಿ ಪ್ರಮಾಣ ವಚನಾನುಸಾರ ಈಗಿರುವ ತ್ರಿಮತಸ್ಥ ಬ್ರಾಹ್ಮಣರ ಪೈಕಿ ತಾವು ಹಿರಿಯರು. ತತ್ರಾಪಿ ಶ್ರೀ ಹರಿ ಗುರುಭಕ್ತಿ ಶಾಸ್ತ್ರಾರ್ಥ ಗ್ರಹಣಶಕ್ತಿ, ಗ್ರಂಥರಚನಾರ್ಹತೆ, ತದನುಗುಣ ಬುದ್ಧಿ, ದೇಹೇಂದ್ರಿಯ ಶಕ್ತಿ, ಸ್ವಯಂ ಸುಬೋಧಕ ಲೇಖಕ ಶಕ್ತಿ, ಇತ್ಯಾದಿಗಳೆಲ್ಲವೂ ಮೇಲೆ ಉದಾಹರಿಸುವ ವಚನಾನುಸಾರ ಶ್ರೀ ಪರಮಾತ್ಮನ ಸನ್ನಿಧಾನವು ಪೂರ್ವಿಕರಲ್ಲಿ ಅಧಿಕವಾದುದು. (**ಸನ್ನಿಧಾನಂತು ತತ್ಪ್ರೋಕ್ತಂ ಸಾಮರ್ಥ್ಯವ್ಯಂಜನಂ ಹರೇಃ**) ಎಂಬ ಸ್ಮೃತ್ಯನುಸಾರ ಶ್ರೀ ಹರಿಯ ಸಾಮರ್ಥ್ಯ ಪ್ರಕಟನೆಗೆ ಸನ್ನಿಧಾನವೆಂದು ಜ್ಞಾನಿ ಮತವು. ಆ ದೃಷ್ಟಿಯಿಂದ ತನ್ನ ಅಂತರಾತ್ಮನು ತನ್ನ ಶಕ್ತಿಯನ್ನು ತನ್ನ ಅನುಗ್ರಹಕ್ಕೆ ಪಾತ್ರರಾದ ತಮ್ಮ ಶರೀರಿ ಆಗಿ ಈ ಅಸಾಧಾರಣವಾದ ಕಾರ್ಯ ನೆರವೇರಿಸುತ್ತಾನೆಂದು ನಾನು ತಿಳಿದದ್ದನ್ನು ಸಂತೋಷದಿಂದ ಶ್ರುತಪಡಿಸಿರುತ್ತೇನೆ. 'ಇನ್ನು ೧೮ನೇ ಅಧ್ಯಾಯ ವೊಂದಾದರೂ ಷಟ್ಕತ್ರಯಾರ್ಥ ಸಂಗ್ರಹ, ಭಕ್ತಿ ಪ್ರಪತ್ತಿಗಳ ತತ್ವ. ಶರಣಾಗತಿ ಎಂಬುದರ ವಿವರಣ ಇತ್ಯಾದಿ ವಿಷಯಕ್ಕೇನೆ ವಂದು ಸಂಪುಟವಾಗಬಹುದೆಂದು ತಿಳಿದಿಸ್ತೇನೆ. ಇತಃಪರ ೪ನೆಯ ಸಂಪುಟದ ಮುದ್ರಣ ಮತ್ತು ಶ್ರೀಮನ್ನಾರಾಯಣಾಷ್ಟಾಕ್ಷರಾದಿ

ಮಹಾಮಂತ್ರಾರ್ಥ ಗ್ರಂಥಗಳು ರಚಿತವಾಗಿ ಮುದ್ರಣ ಮಾಡಿಸಿ ತಮ್ಮ ಸಂಕಲ್ಪವನ್ನು ಸತ್ಯ ಮಾಡಿಸಿ ಭಗವಂತನು ತಮಗೆ ಆಯುರಾರೋಗ್ಯಾದಿ ಸಂಪತ್ಪ್ರದನಾಗಿ ರಕ್ಷಿಸಬೇಕೆಂದು ಪ್ರಾರ್ಥಿಸುತ್ತೇನೆ. ಈಚಿಗೆ ನನಗೆ ಜ್ವರಾದಿ ಬಾಧೆ ಆಗಿ ಇದ್ದು ಭಗವದನುಗ್ರಹದಿಂದ ಆರೋಗ್ಯ ಹೊಂದುತ್ತಿದ್ದೇನೆ. ನಾನು ಶ್ರೀ ಬ್ರಹ್ಮಮೀಮಾಂಸಾ ಶಾಸ್ತ್ರ ವಿಮರ್ಶೆ ಮಾಡಿ ಬರೆಯುತ್ತಿದ್ದೇನೆ. ತಮ್ಮ ಗ್ರಂಥವನ್ನು ನಾನೇ ಅವಕಾಶವಾದಾಗ ಓದಿಕೇಳುತ್ತೇನೆ. ಇತಿನತಿಪೂರ್ವಿಕಾ ವಿಜ್ಞಪ್ತಿಃ

**ಧ. ಹೊ. ಶೇಷಾಚಾರ್ಯ**

---

ವಿದಿತಮಸ್ತು ಮದೀಯಾಂ ವಿಜ್ಞಾಪನಮಿದಂ. ನಿಖಿಲವಿದ್ವದವತಂಸಾನಾಂ ಆಸ್ತಿಕ ಜನ ಪರಿಬೃಢಾನಾಂ ಶ್ರೀಮದ್ವ್ಯಾಖ್ಯಾಕಾರ ಸಂಪ್ರದಾಯ ರಹಸ್ಯವಿದಾಂ. ಯಸ್ಮಿನ್ ಮಹೀಮಂಡಲ ಮಂಡನಾಯಮಾನ ಕರ್ಣಾಟದೇಶಾಧೀಶ್ವರಸ್ಯ ವಿದ್ವದ್ಗಣ ಸಮಲಂಕೃತಾ ಸ್ಥಾನಮಂಟಪಸ್ಯ ಶ್ರೀ ಕೃಷ್ಣರಾಜೇಂದ್ರಸ್ಯ ವಿದ್ಯಾಶಾಲಾಯಾಂ ಅಧ್ಯಕ್ಷ್ಯಸ್ಯ ಸತ್ತ್ವಾತ್ ಶ್ರೀಮದ್ವೇದಮಾರ್ಗ ಪ್ರತಿಷ್ಠಾಪಕಾಃ ಶ್ರೀಮಂತಃ ಶ್ರೀ ವಿಜಯರಾಘವಾಚಾರ್ಯ ಮಹೋದಯಾಃ ಧ ಷಾಸ್ಮೃತೇಸ್ಸ ನಿತರ ಸಾಧಾರಣೀಂ ಪ್ರೈದಷ್ಟ ಪದವೀಂ ಪ್ರಾಪ್ತಾ ಅಪಿ ಗೀರ್ವಾಣ ಭಾಷಾಯಾ ಸಂಸ್ಕೃತಿ ಮಾತ್ರ ಪರಿಶೀಲನೇನ ಪಾಂಡಿತ್ಯಮಧಿಗತಾಃ ಅಧಿಕಾರ ಸಮಯೇಪಿ ಬಾಲ್ಯಮಾನ ಕಾಲಿಕ ಭಗ ಸ್ವಟಾಕ್ಷ ಲಬ್ಧ ಚಿತ್ತ ಶುದ್ಧಿದ್ವಾರಾ ವೇದೋದಿತ ಕರ್ಮಾನುಷ್ಠಾನಸ್ಯ ಉದ್ದಾತ್ಯ ಭಗವದಾರಾಧನ ರೂಪತ್ವಾನುಸಂಧಾನ ಪೂರ್ವಕಂ ಆಸನ್. ಇದಾನೀಂ ತ್ರೋಃಸ್ಮಾತ್ಪ್ರದ್ಯುತಂ ಉಪದೇಶಂ ವರ್ತಮಾನಾಃ ಪತೇಃ ಪರಮ ಪುರುಷ ಚರಣೇಯತಾ ಹೇತುಭೂತ ಕಲ್ಯಾಣ ಗುಣವಿಭೂಷಿತಾಃ ಭಗವತಃ ಕೃಪಯಾ ಪರಿಶುದ್ಧಾಂತಃಕರಣಾಃ ಗುರುವರ ಕಟಾಕ್ಷ ಲಬ್ಧ ನಿಗಮಾನ್ತಾರ್ಥಾಃ ಜಗದಾಭರಣ ವಕುಳಾಭರಣ, ನಾಥ, ಯಾಮುನ, ಯತಿವರ, ನಿಗಮಾನ್ತ ಗುರೂತ್ತಂಸಾದಿಭಿರನುಗೃಹೀತಾನ್ ನಿವೃತ್ತ ತರ್ಷೈರನುಸಂಧೇಯಾನ್, ಅನವದ್ಯಗಂಧ ಸೈದೇಶಿಕಾನ್, ದ್ರಾವಿಡ ಸಂಸ್ಕೃತ ದಿವ್ಯಪ್ರಬಂಧಾನ್ ಅನವರತ ಮನುಸಂಧಾಯ ಭಗವತ್ಪ್ರಸಾದ ಲಬ್ಧವಾನ್ ಪ್ರಸಾದಾತಿಶಯೇನ, ತದೀಯ ಗಭೀರತಮ ತಾತ್ಪರ್ಯಾಂಶಾನುದ್ಧೃತ್ಯ ಸಂಸ್ಕೃತ ಭಾಷಾಪರಿಚಯ ವಿದೂರವರ್ತಿನಾಂ, ಪರಿಚಯವತಾಮಪಿ ಜನಾನಾಂ ಸುಖಬೋಧಾಯ ಕರ್ಣಾಟ ಭಾಷಯಾ ವ್ಯವೃಣ್ವನ್. ಶ್ರೀಮನ್ನಿಗಮಾನ್ತ ದೇಶಿಕಾನುಗೃಹೀತಾನಾಂ ಸ್ತೋತ್ರಾಣಾಂಚ ವಿವೃತಿ ಮಕುರ್ವನ್. ರಹಸ್ಯತ್ರಯಸಾರ ಪ್ರಬಂಧ ವಿವರಣೇ, ಗೀತಾ ಭಾಷ್ಯ ತಾತ್ಪರ್ಯ ಚಂದ್ರಿಕಯೋಃ ವಿವರಣೇಚ ಮಹಾನ್ ಪ್ರಯತ್ನಃ ಪ್ರದರ್ಶಿತಃ. ಆಶ್ಚರ್ಯಾವಹಶ್ಚಾಯಂ ಯದ್ಭಗವದ್ವ್ಯಾಖ್ಯಾಕರ ನಿಗಮಾನ್ತ ದೇಶಿಕ ಸಂಪ್ರದಾಯಾಃ ಸ್ಫುಟತರಂ ಪ್ರಕಾಶಿತಾಃ ಸಂಪ್ರದಾಯಾ ವಿರೋಧೇನ ಅರ್ಥಾನ್ತರಾಣ್ಯಪಿ ಪ್ರಕಾಶಿತಾಃ ಪ್ರತಿಭಾವಿಶೇಷೇಣ. ಆಪಾದಮಸ್ತಕಂ ಶ್ರೀಮದ್ವಿಜಯರಾಘವಾಚಾರ್ಯಕೃತ ವ್ಯಾಖ್ಯಾ ಪ್ರಬಂಧ ಪರಿಶೀಲನೇನ ತೇಷಾಂ ಪ್ರಯತ್ನಂ ಸಫಲೀ ಕುರ್ವನ್ತು ಪ್ರೇಕ್ಷಾವಂತ ಇತ್ಯಭ್ಯರ್ಥಯೇ.

ಜಯನ್ತು ವಿಬುಧೋತ್ತಮಾ ವಿಜಯರಾಘವಾಭಿಧಾಃ
ತದೀಯ ಕೃತಯೋ ಜಯನ್ತ್ವಪಸಿಷತ್ಪ್ರದೀಪಾ ಇವ ।
ಪರನ್ತ್ವಿಹಮಾನವಾಃ ಕೃತಿವರಾ ಇಮಾಃ ಪ್ರಕೃತಾಃ
ಭವನ್ತು ವಿಬುಧೋಪಮಾಃ ಸಪದಿ ಸತ್ಯಮತ್ಯದ್ಭುತಂ ।

ಶ್ರೀರಾಮಮಿಶ್ರವಂಶ್ಯಃ
**ಕಸ್ತೂರೀ ರಂಗಾಚಾರ್ಯಃ**

# ಶ್ರೀಮದ್ಭಗವದ್ಗೀತಾ ತೃತೀಯ ಷಟ್ಕದ ಶ್ಲೋಕಗಳ ಅಕಾರಾದಿಯು

ಶ್ರೀಯೈ ನಮಃ

ಶ್ರೀನಿವಾಸಾಯ ನಮಃ

# ಶ್ರೀಮದ್ಭಗವದ್ಗೀತಾಯಾಮ್

## ಅಷ್ಟಾದಶೋಽಧ್ಯಾಯಃ

**ಭಾ. ಅವ. ಅತೀತೇನಾಧ್ಯಾಯದ್ವಯೇನ, ಅಭ್ಯುದಯ ನಿಶ್ಶ್ರೇಯಸ ಸಾಧನ ಭೂತಂ ವೈದಿಕಮೇವ ಕರ್ಮ, ನಾನ್ಯತ್; ವೈದಿಕಸ್ಯ ಚ ಕರ್ಮಣ ಸ್ಸಾಮಾನ್ಯ ಲಕ್ಷಣಂ ಪ್ರಣವಾನ್ವಯಃ; ತತ್ರ ಮೋಕ್ಷಾಭ್ಯುದಯ ಸಾಧನಯೋ ರ್ಭೇದಃ ತತ್ಸಚ್ಛಬ್ದ ನಿರ್ದೇಶ್ಯತ್ವೇನ; ಮೋಕ್ಷಸಾಧನಂಚ ಕರ್ಮ ಫಲಾಭಿಸಂಧಿರಹಿತಂ ಯಜ್ಞಾದಿಕಮ್; ತದಾರಂಭಶ್ಚ ಸತ್ತ್ವೋದ್ರೇಕಾದ್ಭವತಿ; ಸತ್ತ್ವವೃದ್ಧಿಶ್ಚ ಸಾತ್ತ್ವಿಕಾಹಾರ ಸೇವಯಾ,- ಇತ್ಯುಕ್ತಮ್.**

---

**ಭಾಷ್ಯಾವತಾರಿಕೆಯು.** ಕೊನೆಯ ಮೂರು ಅಧ್ಯಾಯಗಳಾದ ೧೬, ೧೭, ೧೮ ರಲ್ಲಿ ಮಾಡತಕ್ಕ ಕರ್ಮಗಳ ಪಶೋಧನೆಯು ಹೇಳಲ್ಪಡುವುದನ್ನು ಸೂಚಿಸಿ, ದೈವಾಸುರ ವಿಭಾಗ ದಿಂದ ಕರ್ಮಗಳು ಎರಡು ವಿಧವೆಂದೂ, ಸಾತ್ತ್ವಿಕವೇ ಉಪಾದೇಯವೆಂದೂ, ರಾಜಸ ತಾಮಸ ಗಳು ಅಗ್ರಾಹ್ಯಗಳೆಂದೂ ಹೇಳಿ, ಸಾತ್ತ್ವಿಕ ಕರ್ಮಗಳಿಗೇನೇ ಶ್ರದ್ಧೆಯುಂಟೆಂದೂ ಪರಮ ಪುರುಷಾ ರಾಧನಾರೂಪವೆಂದೂ ಫಲಾಭಿಸಂಧಿಯಿಲ್ಲದೆ ಮಾಡುವ ಯಜ್ಞ ದಾನ ತಪಸ್ಸುಗಳಿಗೆ **ಓಂ ತತ್ಸತ್** ಎಂಬ ನಿರ್ದೇಶ ಉಂಟೆಂದು ಹೇಳಲ್ಪಟ್ಟಿತು ಎಂದು ಹಿಂದಿನ ಎರಡು ಅಧ್ಯಾಯಗಳ ಅಭಿಪ್ರಾಯವೆಂದು ಹೇಳುವುದಕ್ಕಾಗಿಯೂ, ಈ ಮುಂದಿನ ಕೊನೆಯ ಅಧ್ಯಾಯಕ್ಕೂ ಹಿಂದಿನ ಎರಡಕ್ಕೂ ಇರುವ ಸಙ್ಗತಿಯನ್ನು ಸೂಚಿಸುವುದಕ್ಕಾಗಿಯೂ **ಅತೀತೇನಾಧ್ಯಾಯದ್ವಯೇನ** ಎಂದಾರಂಭಿಸಿ ಹೇಳುತ್ತಾರೆ:—**ಅತೀತೇನಾಧ್ಯಾಯದ್ವಯೇನ**-ಕಳೆದ ಹೋದ ಹಿಂದಿನ ೧೬-೧೭ನೆಯ ಎರಡು ಅಧ್ಯಾಯಗಳಿಂದ, (೧) **ಅಭ್ಯುದಯ**-ಐಹಿಕ ಸ್ವರ್ಗಾದಿ ಶ್ರೇಯಸ್ಸು ಗಳಿಗೂ, **ನಿಶ್ಶ್ರೇಯಸ**-ಪರಮ ಶ್ರೇಯಸ್ಸಾದ ಮೋಕ್ಷಕ್ಕೂ, **ಸಾಧನ ಭೂತಂ**-ಸಾಧನವಾದುದು, **ವೈದಿಕಂ ಕರ್ಮ ಏವ**-ವೇದ ವಿಹಿತಗಳಾದ ಯಜ್ಞ ದಾನ ತಪಸ್ಸುಗಳೇ, **ನಾನ್ಯತ್**-ಇತರ ಕರ್ಮಗಳು ಹಾಗೆ ಅಭ್ಯುದಯ ನಿಶ್ಶ್ರೇಯಸ್ಸುಗಳಿಗೆ ಸಾಧನವಲ್ಲವು ಎಂದೂ (೨) **ವೈದಿಕಸ್ಯಚ ಕರ್ಮಣಃ**-ಮತ್ತು ವೈದಿಕ ಕರ್ಮದ, ಸಾಮಾನ್ಯವಾದ ಲಕ್ಷಣವು, **ಪ್ರಣವಾನ್ವಯಃ**-ಪ್ರಣವದೊಂದಿಗೆ ಸೇರಿಸಿ ಹೇಳಬೇಕೆಂದೂ, (೩) **ತತ್ರ**-ಆ ಸಂದರ್ಭದಲ್ಲಿ, ಮೋಕ್ಷಕ್ಕೂ ಇತರ ಶ್ರೇಯಸ್ಸುಗಳೆರಡಕ್ಕೂ ಸಾಧನವಾಗಿರುವುದರಲ್ಲಿ ಭೇದವು, **ತತ್ ಸತ್ ಶಬ್ದ ನಿರ್ದೇಶ್ಯತ್ವೇನ**-ತತ್ ಸತ್ ಎಂಬ ಶಬ್ದಗಳ ವ್ಯವಹಾರದಿಂದ ಎಂದೂ, (೪) **ಮೋಕ್ಷ ಸಾಧನಂ ಚ ಕರ್ಮ ಫಲಾಭಿಸಂಧಿ ರಹಿತಂ ಯಜ್ಞಾದಿಕಂ**-ಮತ್ತು ಮೋಕ್ಷಕ್ಕೆ ಸಾಧನ ಭೂತ ಕರ್ಮವು, ಫಲಾಭಿಸಂಧಿ ರಹಿತವಾದ, **ಯಜ್ಞಾದಿಕಂ**-ಯಜ್ಞ ದಾನ ತಪಸ್ಸೇ ಮೊದ ಲಾದವು ಎಂದೂ, (೫) **ತದಾರಂಭಶ್ಚ**-ಅಂತಹ ಮೋಕ್ಷ ಸಾಧನ ಭೂತವಾದ ಕರ್ಮಗಳ ಆರಂ ಭವಾದರೋ, **ಸತ್ತ್ವೋದ್ರೇಕಾದ್ಭವತಿ**-ಸತ್ತ್ವಾಭಿವೃದ್ಧಿಯಿಂದುಂಟಾಗುತ್ತದೆಂದೂ, (೬) **ಸತ್ತ್ವ ವೃದ್ಧಿಶ್ಚ**-ಸತ್ತ್ವಗುಣಾಭಿವೃದ್ಧಿಯಾದರೋ, **ಸಾತ್ತ್ವಿಕಾಹಾರಸೇವಯಾ**-ಸಾತ್ತ್ವಿಕಾಹಾರ ಸೇವನೆ ಯಿಂದ, **ಇತ್ಯುಕ್ತಮ್**-ಎಂದೂ, ಹೇಳಲ್ಪಟ್ಟಿತು. ವೈದಿಕ ಕರ್ಮಗಳಿಗೆಲ್ಲಾ **ಓಂ ತತ್ ಸತ್** ಎಂಬ ನಿರ್ದೇಶವು ಮುಮುಕ್ಷು ಬುಭುಕ್ಷು ಸಾಮಾನ್ಯವಾಗಿರುವಾಗ ಈಗ **ತತ್** ಎಂಬ ಶಬ್ದವು ಮೋಕ್ಷಸಾಧನತ್ವವನ್ನೂ **ಸತ್** ಎಂಬ ಶಬ್ದವು ಅಭ್ಯುದಯ ಸಾಧನತ್ವವನ್ನೂ ಹೀಗೆ

**ಭಾ. ಅವ. ಅನನ್ತರಂ ಮೋಕ್ಷಸಾಧನತಯಾ ನಿರ್ದಿಷ್ಟಯೋಃ ತ್ಯಾಗ ಸಂನ್ಯಾಸಯೋರೈಕ್ಯಂ, ತ್ಯಾಗಸ್ಯಚಸ್ವರೂಪಂ, ಭಗವತಿ ಸರ್ವೇಶ್ವರೇಚ ಸರ್ವ ಕರ್ಮಣಾಂ ಕರ್ತೃತ್ವಾನುಸಂಧಾನಂ, ಸತ್ವರಜಸ್ತಮಸಾಂ ಕಾರ್ಯವರ್ಣನೇನ ಸತ್ವಗುಣಸ್ಯಾವಶ್ಯೋಪಾದೇಯತ್ವಂ, ಸ್ವವರ್ಣೋಚಿತಾನಾಂ ಕರ್ಮಣಾಂ ಪರಮ ಪುರುಷಾರಾಧನ ಭೂತಾನಾಂ ಪರಮ ಪುರುಷಪ್ರಾಪ್ತಿ ನಿರ್ವರ್ತನ ಪ್ರಕಾರಃ, ಕೃತ್ಸ್ನಸ್ಯ ಗೀತಾ ಶಾಸ್ತ್ರಸ್ಯ ಸಾರಾರ್ಥೋ ಭಕ್ತಿಯೋಗ, ಇತ್ಯೇತೆ ಪ್ರತಿಪಾದ್ಯನ್ತೇ.**

---

ಅವುಗಳಿಗಿರುವ ಭೇದ ನಿರ್ದೇಶದಿಂದ **ಓಂ ತತ್** ಎಂದು ಮೋಕ್ಷಾರ್ಥಿಯು ಹೇಳತಕ್ಕದ್ದೆಂದೂ, ಇತರರು **ಓಂ ಸತ್** ಎಂದು ಹೇಳತಕ್ಕದ್ದೆಂದೂ ವಿಭಾಗಿಸಿ ಹೇಳಲಿಲ್ಲವು. ಆ ಪದಗಳ ವ್ಯವಹಾರದಿಂದ ತೋರುವ ಲಕ್ಷಣದಲ್ಲಿರುವ ವ್ಯತ್ಯಾಸವು ಹಿಂದೆ ೧೭ನೆಯ ಅಧ್ಯಾಯದ, ೨೫, ೨೬ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟ ಅಭಿಪ್ರಾಯವನ್ನು ಉಪಪಾದಿಸಿದರು; **ಓಂ ತತ್** ಎಂಬ ಪ್ರಯೋಗವು ಗಾಯತ್ರ್ಯಾದಿ ಮಂತ್ರಗಳಲ್ಲಿ ಕಂಡು ಬಂದರೂ, **ಓಂ ಸತ್** ಎಂಬ ಪ್ರಯೋಗವನ್ನು ಎಲ್ಲಿಯೂ ಕಾಣಲಿಲ್ಲವು. ಮೋಕ್ಷಸಾಧನವಲ್ಲದ ಕರ್ಮಗಳು ವಿವಾಹಾದಿಗಳುಂಟು; ಅವುಗಳಲ್ಲಿ **ಓಂ ಸತ್** ಎಂಬ ಪ್ರಯೋಗವನ್ನು ಕಾಣಲಿಲ್ಲವು. ಗೀತಾಶಾಸ್ತ್ರವೇ ಮೋಕ್ಷಶಾಸ್ತ್ರವು; ಮಹರ್ಷಿಯೇ **ಓಂ ತತ್ಸದಿತಿ** ನಿರ್ದೇಶವು ವ್ಯವಹಾರವೆಂದು ಪ್ರಯೋಗ ಮಾಡಿರುತ್ತಾರೆ. ಇದಕ್ಕಿಂತ ಬೇರೆ ಮೇಲುಪಜ್ಞೆಯನ್ನು ಅಪೇಕ್ಷಿಸುವ ಆವಶ್ಯಕವಿಲ್ಲವು. ಆದುದರಿಂದ ಶ್ರೀ ಯತಿವರ್ಯರು ಇಲ್ಲಿ ಅಭ್ಯುದಯಸಾಧನ ಮೋಕ್ಷಸಾಧನವೆಂದು ವಿಭಾಗಿಸಿ ಹೇಳಿದುದು ಆ ಪದಗಳಿಗಿರುವ ವೈಲಕ್ಷಣ್ಯವನ್ನು ಮಾತ್ರ ಬೋಧಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಪರಬ್ರಹ್ಮವು **ಪ್ರತ್ಯಕ್ಷವಲ್ಲದುದರಿಂದ** ತತ್ ಎಂಬ ಪ್ರಯೋಗವು; ಆತನಲ್ಲಿ ಜ್ಞಾನವಿಟ್ಟು, ಆತನನ್ನು ಆರಾಧಿಸುವದರಿಂದ ಉತ್ಕೃಷ್ಟವಾದುದಾಗಿ **ಸತ್** ಎಂಬ ಪ್ರಯೋಗವು; ಇದೀಗ ಅಭಿಪ್ರಾಯವು. ಆದುದರಿಂದ ಇಂತಹ ಸಾತ್ವಿಕ ಕರ್ಮಗಳಿಗೆ ನಿರ್ದೇಶವು ಹೇಗೆ? ಎಂದರೆ ಶ್ರೀ ಕೃಷ್ಣಭಗವಾನರವರೇ "ಓಂ ತತ್ಸದಿತಿ ನಿರ್ದೇಶಃ" ಎಂದು ೨೩ನೆಯ ಶ್ಲೋಕದಲ್ಲಿ ಪ್ರತಿಜ್ಞಾ ವಾಕ್ಯರೂಪದಲ್ಲಿ ಹೇಳಿ, ಅದನ್ನೇ ಮುಂದೆ ೨೪ರಿಂದ ಆರಂಭಿಸಿ ನಾಲ್ಕು ಶ್ಲೋಕಗಳ ಮೂಲಕ ಉಪಪಾದಿಸಿರುತ್ತಾರೆ.

ಮುಂದೆ ಈ ಕೊನೆಯ ಅಧ್ಯಾಯದಲ್ಲಿ ಹೇಳಲ್ಪಡುವದೇನೆಂಬುದನ್ನು ತಿಳಿಸುತ್ತಾರೆ.— **ಅನನ್ತರಂ**-ಈ ೧೬, ೧೭ನೆಯ ಅಧ್ಯಾಯಗಳಾದನಂತರ ಈ ೧೮ನೆಯ ಅಧ್ಯಾಯದಲ್ಲಿ, (೧) **ಮೋಕ್ಷಸಾಧನತಯಾ ನಿರ್ದಿಷ್ಟಯೋಃ**-ಮೋಕ್ಷಕ್ಕೆ ಸಾಧನಭೂತಗಳೆಂದು ಹೇಳಲ್ಪಟ್ಟಿರುವ, **ತ್ಯಾಗ ಸಂನ್ಯಾಸಯೋರೈಕ್ಯಂ**-ತ್ಯಾಗ ಮತ್ತು ಸಂನ್ಯಾಸ ಎಂಬೆರಡು ಶಬ್ದಗಳೂ ಸಮಾನಾರ್ಥವುಳ್ಳವೆಂದೂ, ಶ್ರೀ ಯತಿವರ್ಯರು ಪ್ರತಿಯೊಂದು ಅಧ್ಯಾಯದ ಅವತಾರಿಕೆಯಲ್ಲಿ ಶ್ರೀ ಯಾಮುನಮುನಿಗಳ ಸಙ್ಗ್ರಹ ಶ್ಲೋಕವನ್ನು ಅನುಸರಿಸಿ ಹೇಳಿದ ಹಾಗೆ ಈ ಅಧ್ಯಾಯದಲ್ಲೂ **"ಈಶ್ವರೇ ಕರ್ತೃತಾ ಬುದ್ಧಿ ಸ್ಸತ್ವೋಪಾದೇಯತಾ ನ್ತಿಮೇ। ಸ್ವಕರ್ಮ ಪರಿಣಾಮಶ್ಚ ಶಾಸ್ತ್ರ ಸಾರಾರ್ಥ ಉಚ್ಯತೇ"** ಎಂಬ ಅವರ ಸಙ್ಗ್ರಹಶ್ಲೋಕವನ್ನನುಸರಿಸಿಯೇ ಹೇಳಿರುತ್ತಾರೆ. ಆದರೆ ಇಲ್ಲಿ **"ತ್ಯಾಗ ಸಂನ್ಯಾಸಯೋರೈಕ್ಯಂ"** ಎಂಬುದು ಸಙ್ಗ್ರಹಶ್ಲೋಕದಲ್ಲಿ ಹೇಳದಿದ್ದರೂ ಶ್ರೀ ಯತಿವರ್ಯರು ಹೇಳಿದುದು ಹೇಗೆ? ಎಂದರೆ **"ಈಶ್ವರೇ ಕರ್ತೃತಾ ಬುದ್ಧಿಃ"** ಎಂಬುದರಲ್ಲೇ ಕರ್ಮಗಳ ಸ್ವರೂಪ ಮಮತಾಫಲ ಸಮರ್ಪಣಗಳು ಸೇರಿದವಾದುದರಿಂದ ಶ್ರೀ ಯಾಮುನಮುನಿಗಳು ಪೃಥಕ್ಕಾಗಿ ಹೇಳಲಿಲ್ಲವೆಂದು ಭಾವಿಸತಕ್ಕದ್ದು. (೨) **ಭಗವತಿ ಸರ್ವೇಶ್ವರೇಚ ಸರ್ವ ಕರ್ಮಣಾಂ ಕರ್ತೃತ್ವಾನುಸಂಧಾನಂ**-ತಾನು ಮಾಡುವ ನಿತ್ಯ ನೈಮಿತ್ತಿಕ ಯಜ್ಞ ದಾನ ತಪಸ್ಸುಗಳಾದ ಸಮಸ್ತಗಳಾದ ಕರ್ಮಗಳ ಕರ್ತೃತ್ವವೂ ತನ್ನದಲ್ಲವು,

ಪರಮಶೇಷಿಯಾದ ಸರ್ವೇಶ್ವರನಾದ ಭಗವಂತನದೇ ಎಂಬ ಅನುಸಂಧಾನವಿರಬೇಕೆಂಬುದೂ, (೩) **ಸತ್ತ್ವರಜಸ್ತಮಸಾಂ**-ಸತ್ತ್ವರಜಸ್ತಮೋಗುಣಗಳಿಂದುಂಟಾದ, **ಕಾರ್ಯವರ್ಣನೇನ**-ಕಾರ್ಯದ ಒಳ್ಳೇ ಮತ್ತು ಕೆಟ್ಟ ಫಲಗಳ ವರ್ಣನೆಯಿಂದ, **ಸತ್ತ್ವಗುಣಸ್ಯಾವಶ್ಯೋಪಾದೇಯತ್ವಂ**-ಸತ್ಫಲದಾಯಿಕವಾದ ಸತ್ತ್ವಗುಣವೇ ಮುಖ್ಯವಾಗಿ ಗ್ರಾಹ್ಯವೆಂಬುದೂ, (೪) **ಸ್ವವರ್ಣೋಚಿತಾನಾಂ ಕರ್ಮಣಾಂ**-ತನ್ನ ಬ್ರಾಹ್ಮಣಾದಿ ವರ್ಣಗಳಿಗೆ ಯೋಗ್ಯಗಳಾದ ಕರ್ಮಗಳು, **ಪರಮಪುರುಷಾರಾಧನ ಭೂತಾನಾಂ**-ಪರಮಪುರುಷನ ಆರಾಧನ ರೂಪಗಳಾದುದರಿಂದ, ಅವುಗಳಿಗೆ, **ಪರಮಪುರುಷಪ್ರಾಪ್ತಿ ನಿರ್ವರ್ತನಪ್ರಕಾರಃ**-ಪರಮಪುರುಷನ ಸಾಯುಜ್ಯಪ್ರಾಪ್ತಿಯುಂಟುಮಾಡುವ ಪ್ರಕಾರವೂ, (೫) **ಕೃತ್ಸ್ನಸ್ಯ ಗೀತಾಶಾಸ್ತ್ರಸ್ಯ ಸಾರಾರ್ಥಃ ಭಕ್ತಿಯೋಗಃ**-ಈ ಸಮಸ್ತವಾದ ಗೀತಾಶಾಸ್ತ್ರದ ಸಾರಭೂತವಾದ ಅಭಿಪ್ರಾಯವು, ಭಕ್ತಿಯೋಗ ಎಂಬುದೂ, ಇದು ೬೫ನೆಯ ಶ್ಲೋಕವನ್ನು ಕುರಿತದ್ದು, **ಇತ್ಯೇತೇ**-ಹೀಗೆ ಈ ಐದು ವಿಷಯಗಳೆಲ್ಲಾ, **ಪ್ರತಿಪಾದ್ಯನ್ತೇ**-ಪ್ರತಿಪಾದಿಸಲ್ಪಡುವುವು. ಶ್ರೀ ಯಾಮುನಮುನಿಗಳ ಗೀತಾರ್ಥ ಸಙ್ಗ್ರಹದ ಪ್ರಥಮ ಶ್ಲೋಕವಾದ "**ಸ್ವಧರ್ಮ ಜ್ಞಾನವೈರಾಗ್ಯ ಸಾಧ್ಯಭಕ್ತ್ಯೈಕ ಗೋಚರಃ**" ಎಂಬುದನ್ನನುಸರಿಸಿ ಗೀತೆಯ ಸಾರಾರ್ಥವು ಭಕ್ತಿಯೋಗವೆಂದು ಹೇಳಿದರು. ಅರ್ಜುನನು ಕ್ಷತ್ರಿಯನಾಗಿ ಭಕ್ತಿಯೋಗಾಧಿಕಾರಿಯಾದುದರಿಂದ ಅಭಿಪ್ರಾಯವು ಸರಿಹೋಯಿತು. ಆದರೆ ಅರ್ಜುನನು ಅಧಿಕಾರಿಯಾಗಿದ್ದರೂ ಉಪಾಸನಕ್ಕೆ ಅಶಕ್ತ್ಯತೆಯನ್ನು ಪ್ರದರ್ಶಿಸಿ ತೋರಿಸಿದುದರಿಂದಲೂ, ಗೀತಾಶಾಸ್ತ್ರವು ದ್ವಿಜರಲ್ಲದೆ ಉಪಾಸನಕ್ಕೆ ಅರ್ಹತೆಯಿಲ್ಲದಿರುವವರಿಗೂ ಅನ್ವಯಿಸುವ ಹಾಗೆ, "**ಮಾಂ ಹಿ ಪಾರ್ಥವ್ಯಪಾಶ್ರಿತ್ಯ**" ಎಂದಾರಂಭಿಸಿ "**ಸ್ತ್ರಿಯೋವೈಶ್ಯಾಸ್ತಥಾ ಶೂದ್ರಾ ತೇಽಪಿ ಯಾನ್ತಿ ಪರಾಂಗತಿಮ್**" ಎಂಬಲ್ಲಿ ಹೇಳಿರುವ ಹಾಗೆ, ಪ್ರಪದನವನ್ನೂ ಪರಮಹಿತವಾದ ಉಪಾಯವನ್ನಾಗಿ ಗೀ. ೬೬ರಲ್ಲಿ ಹೇಳಿರುವದರಿಂದ, ಅದೂ ಗೀತಾ ಸಾರಾರ್ಥದಲ್ಲೇ ಸೇರಿತು. ಶ್ರೀ ಯಾಮುನ ಮುನಿಗಳು ಇದನ್ನು ಶ್ಲೇಷೆಯ ಮೂಲಕ ಮೇಲಿನ ಪ್ರಥಮ ಶ್ಲೋಕದಲ್ಲಿ ಸಾಧ್ಯಭಕ್ತಿ ಎಂಬ ಪ್ರಯೋಗದಿಂದ ಶರಣಾಗತಿ ಎಂದು ಸೂಚಿಸಿರುತ್ತಾರೆ. ಶ್ರೀ ವ್ಯಾಸರು ಎಲ್ಲೆಲ್ಲಿ **ಭಜತೇ** ಎಂಬ ಪದವನ್ನು ಉಪಯೋಗಿಸಿರುತ್ತಾರೋ, ಅಲ್ಲೆಲ್ಲಾ ಎರಡು ಉಪಾಯಗಳಾದ ಉಪಾಸನ, ಪ್ರಪದನವನ್ನು ಎರಡನ್ನೂ ಸೂಚಿಸುವದಕ್ಕಾಗಿ ಹಾಗೆ ಪ್ರಯೋಗವು.

(೧) **ತ್ಯಾಗ ಸಂನ್ಯಾಸಯೋರೈಕ್ಯಂ**-ಇವುಗಳ ಐಕ್ಯವನ್ನು ಇಲ್ಲಿ ಹೇಳಲು ಕಾರಣವೇನೆಂದು ಪ್ರಶ್ನಿಸಬಹುದು. ಮೋಕ್ಷಪ್ರಾಪ್ತಿಗೆ ಕರ್ಮ ಸನ್ನ್ಯಾಸರೂಪ ನಿವೃತ್ತಿಧರ್ಮವೇ ಹೇತುವೆಂದು ಹೇಳಲ್ಪಟ್ಟಿತು. ಸರ್ವಕರ್ಮ ಫಲತ್ಯಾಗವೂ ಮುಮುಕ್ಷು ಮಾಡುವ ಕರ್ಮಗಳಿಗೆ ಆವಶ್ಯಕವೆಂದೂ ಹೇಳಲ್ಪಟ್ಟಿತು. ಕರ್ಮಸಂನ್ಯಾಸವು, ಸರ್ವಕರ್ಮ ಫಲತ್ಯಾಗಕ್ಕಿಂತ ಬೇರೆಯಾಗಿ ವರ್ಣಾಶ್ರಮ ರೂಪಧರ್ಮಗಳೆಂದು ಅರ್ಥಮಾಡಿ ಅವುಗಳನ್ನು ಬಿಡಬೇಕೆಂದು ಕರ್ಮಸಂನ್ಯಾಸದಿಂದ ಏರ್ಪಟ್ಟರೆ, ಅರ್ಜುನನು ತಾನು ಈಗ ಯುದ್ಧದಿಂದ ನಿವೃತ್ತನಾಗಿರುವದು ಸರಿಯೇ ಎಂದು ಯೋಚಿಸಿ ಪ್ರಥಮ ಶ್ಲೋಕದಲ್ಲಿ ಪ್ರಶ್ನಿಸುತ್ತಾನಾದುದರಿಂದ, ಅವೆರಡೂ ಏಕಾರ್ಥವುಳ್ಳವೆಂದು ಉಪದೇಶಿಸಬೇಕಾಯಿತು. ಅರ್ಜುನನಿಗೆ ಯುದ್ಧದಿಂದ ನಿವೃತ್ತಿಯು ಸಾಧ್ಯವಿಲ್ಲವೆಂಬುದು ಮುಂದೆ ೪೬ನೆಯ ಶ್ಲೋಕದಲ್ಲಿ "**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ**" ಎಂದು ಸಿದ್ಧಾಂತಿಸುವದರಿಂದ, ೭೩ನೆಯ ಶ್ಲೋಕದಲ್ಲಿ **ನಷ್ಟೋಮೋಹಃ ಸ್ಮೃತಿರ್ಲಬ್ಧಾ** ಎಂದೂ, **ಕರಿಷ್ಯೇ ವಚನಂತವ** ನಿನ್ನ ಆಜ್ಞೆಯಪ್ರಕಾರವಾಗಿ ಯುದ್ಧಮಾಡುತ್ತೇನೆಂದೂ ಹೇಳಿರುತ್ತಾನೆ. ಇದರಿಂದ ಈತನಿಗೆ ಮೋಹಜ್ಞಾನವು ಅಲ್ಲಿವರೆಗೂ ಅನುಸರಿಸಿಯೇ ಇತ್ತೆಂಬುದು ಏರ್ಪಡುತ್ತದೆ. ಮೋಹಜ್ಞಾನವು ಎಷ್ಟು ಉಪದೇಶಿಸಿದರೂ ಅನೇಕರಿಗೆ ಬೇಗ ಬಿಟ್ಟುಹೋಗುವದಿಲ್ಲವೆಂಬುದು ಈ ಸಂದರ್ಭದಲ್ಲಿ ವ್ಯಕ್ತಪಡುತ್ತದೆ. ಆಂಜನೇಯನು ಸೀತೆಯ ಸಂಶಯಜ್ಞಾನವನ್ನು ಹೋಗಲಾಡಿಸಲು ಎಷ್ಟು ಶ್ರಮಪಟ್ಟನೆಂಬುದು ರಾಮಾಯಣ ಸುಂದರ

ಕಾಂಡದಲ್ಲಿ ಉಪಪಾದಿತವು. ಸೀತೆಯು ಸರ್ವಜ್ಞಳಾಗಿರುವದರಿಂದ ಮೋಹಜಜ್ಞಾನವಿಲ್ಲದಿದ್ದರೂ ಲೋಕ ವಿಡಂಬನಾರ್ಥವಾಗಿ ಹಾಗೆ ನಟನೆಯು. ಇವೆರಡು ಪದಗಳೂ ಏಕಾರ್ಥವುಳ್ಳವಾದರೆ ಇವುಗಳಿಂದ ಏರ್ಪಡುವ ಅಭಿಪ್ರಾಯವೇನು? ಎಂದರೆ ಶ್ರೀ ಯಾಮುನ ಮುನಿಗಳ ಸಙ್ಗ್ರಹಾರ್ಥದಲ್ಲಿ **"ಈಶ್ವರೇ ಕರ್ತೃತಾಬುದ್ಧಿಃ"** ಎಂದರೆ ಈಶ್ವರನೇ ಕರ್ತಾವಾಗಿ ನಡೆಸುತ್ತಾನೆಂಬ ಕರ್ಮದಲ್ಲಿ ಸ್ವರೂಪ, ಮಮತಾ ಫಲತ್ಯಾಗವೆಂಬ ಭಾವವು.

(೨) ಫಲಾಭಿಸಂಧಿಯಿಲ್ಲದೆ ಪರಮ ಪುರುಷಾರಾಧನರೂಪವಾದುವು ಈತನಿಗೆ ವಿಹಿತಗಳಾದ ಕರ್ಮಗಳು ಎಂದಿಷ್ಟು ಮಾತ್ರವೇ ಸಾಲದು, ಅಂತಹ ಕರ್ಮಗಳನ್ನು ಮಾಡಿಸುವವನೂ ಪರಮಪುರುಷನೇ ಎಂಬ ಅಭಿಸಂಧಿಯೂ ಇರಬೇಕೆಂದು **ಭಗವತಿ ಕರ್ತೃತ್ವಾನುಸಂಧಾನಂ** ಎಂದು ಹೇಳಲ್ಪಟ್ಟಿತು. ಇದು ಮುಂದೆ **ನೈವಂ ಚೈವಾತ್ರ ಪಂಚಮಂ** (೧೪) ಎಂಬಲ್ಲಿ ಉಪಪಾದಿಸಲ್ಪಡುತ್ತದೆ. ಈ ಅಭಿಪ್ರಾಯದಿಂದುಂಟಾಗುವ ಪೂರ್ವಪಕ್ಷಗಳಿಗೆ ಸಮಾಧಾನವೂ ಸಹ ಅಲ್ಲಿ ಹೇಳಲ್ಪಡುತ್ತದೆ.

(೩) **ಸತ್ತ್ವಗುಣಸ್ಯಾವಶ್ಯೋಪಾದೇಯತ್ವಂ**-ಜ್ಞಾನ, ಕರ್ಮ, ಕರ್ತಾ, ಬುದ್ಧಿ, ಧೃತಿ ಇವುಗಳೆಲ್ಲಾ ಸಾತ್ತ್ವಿಕ ರಾಜಸ ತಾಮಸವಾಗಿ ಮೂರು ವಿಧವೆಂದೂ, ಅವುಗಳಲ್ಲಿ ಸಾತ್ತ್ವಿಕವೇ ಉಪಾದೇಯವೆಂದು ಮುಂದೆ ೧೯ನೆಯ ಶ್ಲೋಕದಲ್ಲಿ ಆರಂಭಿಸಿ ಹೇಳಲ್ಪಡುವುದನ್ನು ಸಙ್ಗ್ರಹವಾಗಿ ಇಲ್ಲಿ ಸೂಚಿಸಿರುತ್ತಾರೆ.

(೪) ಸ್ವವರ್ಣೋಚಿತ ಕರ್ಮಗಳನ್ನು ಪರಮ ಪುರುಷಾರಾಧನಾರೂಪವೆಂದು ಅನುಷ್ಠಿಸಿದರೆ ಪರಮ ಪುರುಷಪ್ರಾಪ್ತಿಗೆ ಹೇತುವಾಗುತ್ತದೆಂಬುದು ೪೪-೪೫ನೆಯ ಶ್ಲೋಕಗಳಲ್ಲಿ ಸಿದ್ಧಾನ್ತಿಸಿ ಹೇಳಲ್ಪಟ್ಟಿರುತ್ತದೆ.

(೫) ಗೀತಾಶಾಸ್ತ್ರದ ಸಾರಾರ್ಥವು, (೧) ಭಕ್ತಿಯೋಗವೇ ಎಂದು ಹಿಂದೆ ೩೪ನೆಯ ಶ್ಲೋಕದಲ್ಲೂ ಮತ್ತು ೧೨-ಲನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟ ಅರ್ಥವನ್ನೇ ನಿಗಮನದಲ್ಲಿ ೬೫ನೆಯ ಶ್ಲೋಕದಲ್ಲಿ ಅಙ್ಗಿಯನ್ನು ಹೇಳಿ, ಅದಕ್ಕೆ ಮುಖ್ಯವಾದ ಅಙ್ಗವನ್ನು ೬೪ನೆಯ ಶ್ಲೋಕದಲ್ಲಿ ಹೇಳಿ ಅಂತಹ ಗುರೂಪಾಯವನ್ನು ಅನುಷ್ಠಿಸುವ ಯೋಗ್ಯತೆಯು ತನಗಿಲ್ಲವೇ ಎಂದು ಶೋಕಸಂತಪ್ತನಾಗಿ ಕಾರ್ಪಣ್ಯವನ್ನೂ ಮಹಾ ವಿಶ್ವಾಸವನ್ನೂ ತೋರಲಾಗಿ, ಅಂತವನಿಗೆ ಲಘೂಪಾಯವನ್ನು ೬೬ನೆಯ ಶ್ಲೋಕದಲ್ಲಿ ತಿಳಿಸುವದರಿಂದ, ಈ ೬೬ನೆಯ ಶ್ಲೋಕವೂ ಸಹ ಗೀತಾಶ್ಲೋಕಗಳ ಸಾರಭೂತಾರ್ಥವು. ಇದೂ ಅಲ್ಲದೆ ೬೫ನೆಯ ಶ್ಲೋಕದಲ್ಲಿ ಹೇಳಿರುವ ಮನ್ಮನನಾಗಿ ಮದ್ಭಕ್ತನಾಗಿ, ಮದ್ಯಾಜಿಯಾಗಿ, ನನ್ನನ್ನು ನಮಸ್ಕರಿಸಿದವನಾಗಿರುವದು ೬೬ನೆಯ ಶ್ಲೋಕದಲ್ಲಿ ಹೇಳುವ ಪ್ರಪದನಕ್ಕೂ ಬೇಕಾದವಾದುದರಿಂದ ಈ ಎರಡು ಶ್ಲೋಕಗಳನ್ನೂ ಒಟ್ಟುಕೂಡಿಸಿ, ಪ್ರಪದನವೇ ಗೀತೆಯ ಸಾರಭೂತಾರ್ಥವಾಗಿ ಹೇಳಿತೆಂದೂ ಭಾವಿಸಬಹುದು. ಆ ಎರಡು ಶ್ಲೋಕಗಳ ಅಭಿಪ್ರಾಯವನ್ನು ಶ್ರೀ ಕೃಷ್ಣಭಗವಾನ್‌ರವರು, **ಸರ್ವಗುಹ್ಯತಮ**ನುವಾದುದು ಎಂದು, ಅದನ್ನು ಪುನಃ ನಿನಗೆ ಜ್ಞಾಪಕವನ್ನು ಕೊಡುವೆನು, **ಭೂಯಃ ಶೃಣು** ಎಂದು ಹೇಳಿ,

**"ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥೬೫॥**
**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" ॥೬೬॥**

ಇಲ್ಲಿ ಈ ಎರಡು ಶ್ಲೋಕಗಳಿಂದ ಮಹನೀಯರಾದ ಶ್ರೀ ವೇದವ್ಯಾಸರು ಸರ್ವಜ್ಞನಾದ ಲೀಲಾ ಸಾರಥಿಯ ದಿವ್ಯೋಕ್ತಿಯ ಮೂಲಕ ಮೋಕ್ಷಸಾಧನೋಪಾಯಗಳು ಎರಡೆಂದೂ, (೧)

**ಭಾ. ಅವತಾರಿಕೆಯು. ತತ್ರ ತಾವತ್ತ್ಯಾಗ ಸನ್ನ್ಯಾಸಯೋಃ ಪೃಥಕ್ತ್ವೈಕತ್ವ ನಿರ್ಣಯಾಯ, ಸ್ವರೂಪ ನಿರ್ಣಯಾಯ ಚಾ ಽರ್ಜುನಃ ಪೃಚ್ಛತಿ.—**

---

ಮನ್ಮನಾಭವವೆಂಬ ಶ್ಲೋಕದಿಂದ ಪರಮಾತ್ಮನೋಪಾಸನವೆಂದೂ ಇದು ಗುರುತರ ಉಪಾಯವೆಂದೂ, (೨) ಸರ್ವಧರ್ಮಾನ್ ಎಂಬ ಶ್ಲೋಕದಿಂದ ಭರನ್ಯಾಸ ಅಥವಾ ಶರಣಾಗತಿ ಎಂದೂ ಇದು ಸುಲಭೋಪಾಯವೆಂದೂ, ಹೀಗೆ ಗೀತೆಯಲ್ಲಿ ಆದಿಯಿಂದಲೂ ಎರಡು ಉಪಾಯಗಳೂ ಹೇಳಲ್ಪಟ್ಟಿವೆ ಎಂದೂ, ತಿಳಿಸಿರುತ್ತಾರೆ. ಶ್ರೀ ವ್ಯಾಸೋಕ್ತಿಯೆಲ್ಲಾ ಹೀಗೆ ಅಮೋಘವಾದವು. ಮೊದಲು ಮನ್ಮನಾಭವ ಎಂಬ ಉಪಾಸನೋಪಾಯವನ್ನು ಇನ್ನೊಂದುಸಲ ಹೇಳಿದರು. ಇದು ಮಾಡಲು ಕಷ್ಟವೇ ಎಂದು ಅರ್ಜುನನು ಶೋಕಿಸುತ್ತಾನೆ. ಶೋಕಿಸಿದನೆಂಬುದು **ಮಾಶುಚಃ** ಎಂಬ ಕರುಣಾಪೀಯೂಷ ಜಲಧಿಯ ಸಮಾಧಾನೋಕ್ತಿಯಿಂದ ವ್ಯಕ್ತವು. ಹಾಗೆ ಆತನ ಶೋಕನಿವಾರಣವನ್ನು ಲಘುವಾದ **ಉಪಾಯವಾದ ಶರಣಾಗತಿ** ಮಾರ್ಗವನ್ನು ಉಪದೇಶಿಸಿ ನಿಗಮನ ಮಾಡಿರುತ್ತಾರೆ. **ಆಗಲಿ ಶರಣಾಗತಿ** ವಿವರಣೆಯು ಬೇಡವೋ ? ಎಂದರೆ ಈಗ ಅದಕ್ಕೆ ಸಮಯವಿಲ್ಲವು; ಯುದ್ಧಕಾಲವು. ಅದನ್ನು ಹಿಂದೆಯೇ ತ್ರೇತಾಯುಗದಲ್ಲೇ ಶ್ರೀ ರಾಮಾವತಾರಿಯಾಗಿ ವಿವರಿಸಿರುತ್ತಾರೆಂದು ತಿಳಿಯುವದು. **“ಭಕ್ತ್ಯಾ ಪರಮಯಾ ವಾಪಿ ಪ್ರಪತ್ತ್ಯಾ ವಾ ಮಹಾಮತೇ । ಪ್ರಾಪ್ಯೋಽಹಂ ನಾನ್ಯಥಾ ಪ್ರಾಪ್ಯೋ ಮಮ ಕೈಙ್ಕರ್ಯಲಿಪ್ಸುಭಿಃ”** ಎಂಬ ಪ್ರಮಾಣವು ಇಲ್ಲಿ ಅನುಸಂಧೇಯವು. ಈ ಗೀತಾಸಾರಭೂತಾರ್ಥವನ್ನು ನಿಗಮನದಲ್ಲಿ ಪುನಃ ಜ್ಞಾಪಿಸಿರುತ್ತಾರೆ. ಇಲ್ಲಿ **ಮದ್ಯಾಜೀ** ಎಂದೂ ನಿಗಮನದಲ್ಲಿ ಹೇಳಿರುವದರಿಂದ, ಸರ್ವಕರ್ಮಪರಿತ್ಯಾಗವನ್ನು ಜ್ಞಾನಿಯು ಮಾಡಬಹುದೆಂಬ ಕೆಲವರ ವಾದಕ್ಕೆ ಸರ್ವಾತ್ಮನಾ ಅನುಕೂಲವಿಲ್ಲವು; **ಮಾಂ ನಮಸ್ಕುರು** ಎಂದೂ ಹೇಳಿರುವದರಿಂದ ಉಪಾಸ್ಯವು ದಿವ್ಯಮಙ್ಗಳ ವಿಗ್ರಹಯುಕ್ತವೆಂದು ತೋರುತ್ತದೆ. ಅಶರೀರವಾಗಿಯೂ ನಿರ್ಗುಣವಾಗಿಯೂ ಇರುವ ಪರಬ್ರಹ್ಮನು ಉಪಾಸ್ಯನೆಂಬ ವಾದಕ್ಕೂ ಅನುಕೂಲವಿಲ್ಲವು. **ಮಾಂ** ಎಂಬ ಪದದಿಂದ ಶ್ರೀ ಕೃಷ್ಣಭಗವಾನನಾಗಿರುವ ದಿವ್ಯಮಙ್ಗಳ ವಿಗ್ರಹವೇ ಉಪಾಸ್ಯವಾಗುವದರಲ್ಲಿ ಸಂದೇಹವಿಲ್ಲವು. ಈ ಮೇಲಿನ ಎರಡನೆಯ ಶ್ಲೋಕದಲ್ಲಿ ಪ್ರಾಪ್ಯವೇ ಬೇರೇ, ಪ್ರಾಪ್ತಾವೇ ಬೇರೇ ಎಂಬುದು ಸ್ಫುಟವಾಗಿರುವದರಿಂದ ಮುಕ್ತದೆಶೆಯು ಸ್ವರೂಪೈಕ್ಯಸ್ಥಿತಿಯು ಎಂಬ ವಾದಕ್ಕೂ ಅನುಕೂಲವಿಲ್ಲವು. ಶ್ರೀಮಚ್ಛಂಕರಾಚಾರ್ಯರು ಮುಕ್ತಿಯು ಸ್ವರೂಪೈಕ್ಯವೆಂದು ಹೇಳಲಿಲ್ಲವು. ಮಹಾನುಭಾವರು ಮುಕ್ತ್ಯವಸ್ಥೆಯನ್ನು ಹೇಗೆ ವರ್ಣಿಸಿರುತ್ತಾರೆಂದರೆ.-ಪರಮಸಾಧ್ವಿಯು ತನ್ನ ಪತಿಯನ್ನು ಬಹುಕಾಲವಗಲಿ, ಆತನನ್ನು ಅನಂತರ ಪತಿಯ ಅನುಗ್ರಹದಿಂದಲೇ ಹೋಗಿ ಸೇರಿದರೆ ಹೇಗೆ ನಿರತಿಶಯಾನಂದವೋ, ಅಂತಹ ಅವಸ್ಥೆಯೆಂದು ಉಪದೇಶಿಸಿರುತ್ತಾರೆ. ಇದು ಪ್ರಾಮಾಣಿಕೋಪದೇಶವು.

ಈ ೧೮ನೆಯ ಅಧ್ಯಾಯವು ಹಿಂದಿನ ಎಲ್ಲಾ ಉಪದೇಶವನ್ನೂ ನಿಗಮನದಲ್ಲಿ ಅನುವಾದ ಮಾಡುವ ಅಧ್ಯಾಯವಾದುದರಿಂದ, ಹಿಂದೆ ೧೭ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿದುದನ್ನೆಲ್ಲಾ ಸಙ್ಗ್ರಹಿಸಿ ಹೇಳಿ, ಕೊನೆಗೆ ಈ ಅಮೋಘಶಾಸ್ತ್ರದ ಪರಮ ಹಿತರೂಪದ ಸಾಧನೋಪಾಯಗಳು ಎರಡು ವಿಧಗಳೆಂದು ಹೇಳಿ ಮುಗಿಸುತ್ತಾರೆ.—

ಈ ಅಧ್ಯಾಯದಲ್ಲಿ ಪ್ರಥಮತಃ ಉಪಪಾದಿಸುವದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ—**ತತ್ರ ತಾವತ್**-ಅವುಗಳ ಉಪಪಾದನೆಯಲ್ಲಿ ಮೊದಲು, **ತ್ಯಾಗಸನ್ನ್ಯಾಸಯೋಃ**-ಕರ್ತೃತ್ಯಾಗ ಕರ್ಮಸನ್ನ್ಯಾಸ ಶಬ್ದಗಳಿಗೆ, **ಪೃಥಕ್ತ್ವೈಕತ್ವನಿರ್ಣಯಾಯ**-ಬೇರೆ ಅರ್ಥಗಳುಳ್ಳವೇ ಅಥವಾ ಒಂದೇ ಅರ್ಥವುಳ್ಳವೇ ಎಂಬುದನ್ನು ನಿರ್ಣಯಿಸುವದಕ್ಕಾಗಿಯೂ **ಸ್ವರೂಪ ನಿರ್ಣಯಾಯ ಚ**-ಆ ತ್ಯಾಗಸನ್ನ್ಯಾಸಗಳ ಸ್ವರೂಪದ ನಿರ್ಣಯಕ್ಕಾಗಿಯೂ, **ಅರ್ಜುನಃ ಪೃಚ್ಛತಿ**-ಅರ್ಜುನನು ಪ್ರಶ್ನಿಸುತ್ತಾನೆ. ಶಾಸ್ತ್ರಪಙ್ಕ್ತಿಗಳಲ್ಲಿ ಕರ್ಮಸನ್ನ್ಯಾಸ ಮತ್ತು ಕರ್ಮತ್ಯಾಗವೂ

**ಅರ್ಜುನ ಉವಾಚ.—**

**ಮೂ. ಸನ್ನ್ಯಾಸಸ್ಯ ಮಹಾ ಬಾಹೋ ತತ್ತ್ವ ಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯಚ ಹೃಷೀಕೇಶ ಪೃಥಕ್ಕೇಶಿ ನಿಷೂದನ ॥೧॥**

---

ಮುಮುಕ್ಷುವಿಗೆ ಅನೇಕ ಕಡೆಗಳಲ್ಲಿ ಉಪದೇಶಿಸಲ್ಪಟ್ಟಿವೆ. ಇವೆರಡೂ ಒಂದೇ ಅರ್ಥವುಳ್ಳವೇ? ಅಥವಾ ಬೇರೆ ಬೇರೆ ಅರ್ಥವುಳ್ಳವೇ? ಅವುಗಳ ಲಕ್ಷಣವೇನು? ಎಂದು ತಿಳಿಯಲು ಕುತೂಹಲಯುಕ್ತನಾಗಿ ಪ್ರಶ್ನಿಸುತ್ತಾನೆಂಬ ಭಾವವು.

**ತತ್ತ್ವತಾವತ್** ಎಂಬ ವಾಕ್ಯದಿಂದ ಅರ್ಜುನಪ್ರಶ್ನೆಯ ಮುಖ್ಯಾಭಿಪ್ರಾಯವೇನೆಂದರೆ- ಯಜ್ಞ ದಾನ ತಪಸ್ಸುಗಳು ಸ್ವರ್ಗಾದಿ ಭೋಗಪ್ರಾಪ್ತಿಗೆ ಸಾಧನವಾದವು. ಅವೇ ಹೇಗೆ ಮೋಕ್ಷ ಸಾಧನಕ್ಕೂ ಕಾರಣಭೂತವಾಗುತ್ತವೆ ಎಂದು ವಿಶೇಷಿಸಿ ಚನ್ನಾಗಿ ತಿಳಿಯುವ ಉದ್ದಿಶ್ಯವಾಗಿ ಎಂದು ಹೇಳಬಹುದು. ಅಥವಾ ಸನ್ನ್ಯಾಸಶಬ್ದವು ನಾಲ್ಕನೆಯ ಆಶ್ರಮವನ್ನೂ ಸೂಚಿಸುವಂತಾದ್ದಾದುದರಿಂದ, ಏನಾದರೂ ಎರಡು ಪದಗಳು ಭಿನ್ನಾರ್ಥವೇನಾದರೂ ಉಳ್ಳವೋ ಎಂಬ ಶಙ್ಕಾದಿಂದಲಾಗಲಿ ಪ್ರಶ್ನೆಯು.

**ಮೂಲಕ್ಕೆ ಅರ್ಥವು—**ಈ ಶ್ಲೋಕದಲ್ಲಿನ ಪ್ರಶ್ನೆಗೆ ಕಾರಣವೇನಿರಬಹುದೆಂಬುದು ನ್ಯಾಯವಾಗಿ ಚರ್ಚಿಸಿ ತಿಳಿಯತಕ್ಕ ವಿಷಯವಾಗಿರುತ್ತದೆ. ಕೆಲವರು ಮೋಕ್ಷಾರ್ಥಿಗೆ ವಿಹಿತ ಕರ್ಮಗಳ ಪರಿತ್ಯಾಗವು ಬೋಧಿಸಲ್ಪಟ್ಟಿರುತ್ತದೆಂದು ಹೇಳುವರು. ಅದರ ನಿರ್ಣಯಕ್ಕಾಗಿ ಅರ್ಜುನಪ್ರಶ್ನೆಯು. "ನಿಯತಂ ಕುರುಕರ್ಮತ್ವಂ" ಎಂದು ೩-೮ ಹೇಳಿದ್ದರೂ, ಮೋಹವು ಕಳೆಯದೆ, ಐದನೆಯ ಅಧ್ಯಾಯಾರಂಭದಲ್ಲೂ, "**ಸನ್ನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂಚ ಶಂಸಸಿ**" ಎಂಬಲ್ಲಿ ಈ ಚರ್ಚೆಯೇ ಸ್ವಲ್ಪಮಟ್ಟಿಗೆ ನಡದಿರುತ್ತದೆ. ಅರ್ಜುನನಿಗೆ ಯುದ್ಧಮಾಡಲು ಇಷ್ಟವಿಲ್ಲವು. ಈ ಯುದ್ಧಕರ್ಮವನ್ನು ತ್ಯಜಿಸಲು, ಶಾಸ್ತ್ರದಲ್ಲಿ ಏನಾದರೂ ಅವಕಾಶವಿದೆಯೇ ಎಂದು ನೋಡುಗೊಂಡಿರುತ್ತಾನೆ. "**ಯೋಗಿನಃ ಕರ್ಮ ಕುರ್ವನ್ತಿ ಸಙ್ಗಂ ತ್ಯಕ್ತ್ವಾತ್ಮಶುದ್ಧಯೇ । ಯುಕ್ತಃ ಕರ್ಮ ಫಲಂ ತ್ಯಕ್ತ್ವಾ ಶಾನ್ತಿಮಾಪ್ನೋತಿ ನೈಷ್ಠಿಕೀಂ**" (ಗೀ. ೫, ೧೧-೧೨) ಎಂದು ಪುನಃ ಹಿಂದೆ ಹೇಳಿದುದನ್ನೇ ಸಮರ್ಥಿಸಿ ಹೇಳಿದ್ದರೂ ಭ್ರಮೆಯು ಕಳೆಯಲಿಲ್ಲವು. ಪುನಃ ಅದೇ ಮೋಹಬುದ್ಧಿಯಿಂದಲೇ ಪ್ರಶ್ನಿಸುತ್ತಾನೆ. ಏನೆಂದರೆ—ಕರ್ಮಸನ್ನ್ಯಾಸ ಕರ್ಮತ್ಯಾಗವೆಂದರೇನು? ಎಂದು ಕೇಳುತ್ತಾನೆ. ಮುಂದೆ "**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ । ಸ್ವೇಸ್ವೇಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ**" ಎಂದು ಸ್ಥಾಪಿಸಿ, ತನ್ನ ವರ್ಣಾಶ್ರಮಕ್ಕೆ ವಿಹಿತ ಕರ್ಮಗಳನ್ನು ಅನುಷ್ಠಿಸಲೇಬೇಕೆಂದು, ಅದೇ ಕ್ರಮೇಣ ಉಪಾಯಾನುಷ್ಠಾನಕ್ಕೆ ಕಾರಣವಾಗಿ ಮೋಕ್ಷಪ್ರಾಪ್ತಿಗೆ ಸಹಾಯಕವಾಗುತ್ತದೆಂದೂ ಹೇಳಿ ಮುಗಿಸುವದರಿಂದ, ಅದನ್ನೇ ಸಿದ್ಧಾನ್ತವಚನವಾಗಿ ಭಾವಿಸಿ, ಅರ್ಜುನನು ಕಡೆಗೆ "**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ**" ಎಂದೂ, "**ಕರಿಷ್ಯೇ ವಚನಂ ತವ**" ಎಂದೂ ಹೇಳಿ, ಯುದ್ಧೋನ್ಮುಖನಾದುದರಿಂದ ಈ ಪ್ರಶ್ನೆಯನ್ನೂ ಸಹ ಮೋಹಬುದ್ಧಿಯಿಂದಲೇ ಮಾಡಿರಬೇಕೆಂದು ತೋರಿಬರುತ್ತದೆ. ಅರ್ಜುನನಿಗೆ ಆದಿಯಿಂದಲೂ, ಮನಸ್ಸು ಚಂಚಲವಾಗಿ ಪರಮಾತ್ಮನಲ್ಲೇ ಸ್ಥಿರವಾಗಿ ನಿಲ್ಲಿಸಲು ಕಷ್ಟವೆಂಬ ಶೋಕವು ಬಾಧಿಸುತ್ತಿರುತ್ತದೆ. "**ಚಂಚಲ ಹಿ ಮನಃ ಕೃಷ್ಣ**" (೬-೩೪ನೆಯ ಶ್ಲೋಕವನ್ನು ನೋಡಿ. ಪುನಃ ೧೨ನೆಯ ಅಧ್ಯಾಯದ ಪ್ರಥಮಶ್ಲೋಕದಲ್ಲಿ ಅರ್ಜುನಪ್ರಶ್ನೆಗೆ ಅದೇ ಕಾರಣವು. ಸರ್ವೇಶ್ವರನ ಸಮಾಧಾನೋಕ್ತಿಗಳನ್ನೇ ೯ ರಿಂದ ೧೨ನೆಯ ಶ್ಲೋಕಗಳನ್ನು ಪರಾಂಬರಿಸಿ) ಇಲ್ಲಿಯೂ ಅದೇ ಶೋಕವೇ ಇರುತ್ತದೆ. ಈ ಪ್ರಶ್ನೆಗೆ ಎರಡೂ ಒಂದೇ ಅಭಿಪ್ರಾಯವುಳ್ಳವು ಎಂದು ಮುಂದೆ ಉತ್ತರವನ್ನು ಹೇಳುತ್ತಾರೆ—**ಹೇ ಮಹಾ ಬಾಹೋ-"ಪಿಶಾಚಾನ್ ದಾನವಾನ್ ಯಕ್ಷಾನ್ ಪೃಥಿವ್ಯಾಂ ಚೈವ ರಾಕ್ಷಸಾನ್ । ಅಙ್ಗುಳ್ಯಗ್ರೇಣ ತಾನ್ ಹನ್ಯಾ ಮಿಚ್ಛನ್ ಹರಿಗಹೇ**

ಶ್ವರ" (ರಾ. ಯುದ್ಧ. ೧೮-೨೩) ಎಂದರೆ ಪೃಥುವಿಯಲ್ಲಿರುವ ಪಿಶಾಚಾದಿ ಸಮಸ್ತರನ್ನೂ ನಾನು ಸಙ್ಕಲ್ಪಿಸಿದರೆ, ಒಂದು ಬೆರಳು ತುದಿಯಿಂದ ನಿರ್ಮೂಲವಮಾಡಿಬಿಡುವೆನೆಂದು ಶ್ರೀ ರಾಮಾವತಾರದಲ್ಲಿ ಹೇಳಲ್ಪಟ್ಟ ಹಾಗೆ ಬಾಹು ಪರಾಕ್ರಮ ಉಳ್ಳವನೇ, ಮತ್ತೂ ೧೪೦೦೦ ರಾಕ್ಷಸರನ್ನೂ "**ಅರ್ಧಾಧಿಕ ಮುಹೂರ್ತೇನ ರಾಮೇಣ ನಿಶಿತಶ್ಶರೈಃ । ಚತುರ್ದಶ ಸಹಸ್ರಾಣಿ ರಕ್ಷಸಾಂ ಕಾಮರೂಪಿಣಾಮ್ । ಖರದೂಷಣ ಮುಖ್ಯಾನಾಂ ನಿಹತಾನಿ ಮಹಾಹವೇ**" (ರಾ. ಅರ. ೩೦-೩೪) ಎಂದು ಹೇಳಿರುವ ಹಾಗೆ ಅಲ್ಪಕಾಲದಲ್ಲಿ ಸಂಹರಿಸಿದ **ಮಹಾಬಾಹೋ** ಎಂಬ ಸಂಬೋಧನೆಯು. ಅಥವಾ ನರಕಾಸುರಾದಿಗಳನ್ನು ವಧಿಸಿ ಸ್ತ್ರೀಯರನ್ನೆಲ್ಲಾ ಸೆರೆಯಿಂದ ಬಿಡಿಸಿದವನಾದುದರಿಂದಲಾಗಲಿ **ಮಹಾಬಾಹೋ**-ಮಹತ್ತಾದ ಭುಜ ಪರಾಕ್ರಮವನ್ನುಳ್ಳವನೇ ! **ಸನ್ನ್ಯಾಸಸ್ಯ**-ಮೋಕ್ಷ ಸಾಧನವಾಗಿ ಹೇಳಲ್ಪಟ್ಟ ಕರ್ಮಸನ್ನ್ಯಾಸ ಪದದ ಎಂದರೆ (ಕರ್ಮಕರ್ತೃತ್ವ ಮಮತಾ ಫಲ ಸನ್ನ್ಯಾಸದ) ಎಂಬ ಭಾವವು, **ತತ್ತ್ವಂ**-ಯಥಾರ್ಥಸ್ವರೂಪವನ್ನು, **ವೇದಿತುಮ್**-ತಿಳಿಯುವದಕ್ಕಾಗಿ, **ಇಚ್ಛಾಮಿ**-ಅಪೇಕ್ಷಿಸುವೆನು. ಹಾಗೆಯೇ **ತ್ಯಾಗಸ್ಯ**-ಮೋಕ್ಷಕ್ಕೆ ಹೇತುಭೂತವಾಗಿ ಹೇಳಲ್ಪಟ್ಟ, ತ್ಯಾಗಶಬ್ದದ, **ತತ್ತ್ವಂ ಪೃಥಕ್**-ಯಥಾರ್ಥಸ್ವರೂಪವು ಬೇರೆಯಾಗಿರುವುದು ಏನಾದರೂ ಇದ್ದರೆ ಅದನ್ನೂ ಸಹ, **ಹೇ ಹೃಷೀಕೇಶ**-ಬ್ರಹ್ಮಾದಿ ಜೀವಕೋಟಿಗಳ ಇಂದ್ರಿಯಗಳಿಗೂ ನಿಯಾಮಕನಾದ ಶ್ರೀ ಕೃಷ್ಣನೇ ! **ಹೇ ಕೇಶಿ ನಿಷೂದನ**-ಕಂಸನಿಂದ ಕಳುಹಿಸಲ್ಪಟ್ಟ ಕೇಶಿ ಎಂಬ ರಾಕ್ಷಸನನ್ನು ಕೊಂದವನೇ ! **ವೇದಿತು ಮಿಚ್ಛಾಮಿ**-ತಿಳಿಯಲು ಅಪೇಕ್ಷಿಸುವೆನು. ಈ ಸನ್ನ್ಯಾಸತ್ಯಾಗ ಶಬ್ದಗಳು ಒಂದುವೇಳೆ ಶಾಸ್ತ್ರಗಳಲ್ಲಿ ಭಿನ್ನಾರ್ಥಗಳುಳ್ಳವು ಎಂದು ಹೇಳಲ್ಪಟ್ಟಿದ್ದರೆ ಅವುಗಳ ಅರ್ಥಗಳನ್ನು ತಿಳಿಯಲು ಅಪೇಕ್ಷಿಸುತ್ತೇನೆ. ಒಂದುವೇಳೆ ಸಮಾನಾರ್ಥಗಳಾಗಿ ಒಂದೇಯಾಗಿದ್ದರೂ ಆಗಲೂ, ಅದು ಹೇಗೆ ಎಂದು ತಿಳಿಯಲು ಅಪೇಕ್ಷಿಸುವೆನು ಎಂಬ ಭಾವವು. ಶಾಸ್ತ್ರದಲ್ಲೇನೋ ಎರಡೂ ಮೋಕ್ಷಸಾಧನ ಭೂತಗಳೆಂದು ಕೇಳಿರುವೆನು. ಆದುದರಿಂದ ಕರ್ಮಸನ್ನ್ಯಾಸವೆಂದರೇನು ? ಕರ್ಮತ್ಯಾಗವೆಂದರೇನು ? ದಯಮಾಡಿ ತಿಳಿಸು ಎಂದು ಅರ್ಜುನ ಪ್ರಶ್ನೆಯು. ಇಲ್ಲಿ **ಹೃಷೀಕೇಶ** ಎಂಬ ಸಂಬೋಧನೆಯಿಂದ ತೋರುವ ಅಭಿಪ್ರಾಯವೇನೆಂದರೆ ? ನಿನ್ನ ಪ್ರೇರಣೆಯಿಲ್ಲದೆ ಯಾವ ಕರ್ಮಗಳೂ ನಡೆಯುವದಿಲ್ಲವು. ಹೀಗಿರುವಾಗ ಒಂದೇ ವಿಧ ಕರ್ಮವು ಸ್ವಲ್ಪ ಭೇದದಿಂದ ಒಬ್ಬನಿಗೆ ಅಶಾಶ್ವತಫಲಕ್ಕೆ ಸಾಧನವಾಗಿಯೂ, ಇನ್ನೊಬ್ಬನಿಗೆ ಶಾಶ್ವತಫಲಕ್ಕೆ ಸಾಧನವಾಗಿಯೂ ಇರುವದು ಹೇಗೆ ಎಂಬ ಭಾವವೂ ಸೂಚಿತವು. ಇದು ಮುಂದಕ್ಕೆ ಅತ್ಯಾಗಿಗಳ ಸಂದರ್ಭದಲ್ಲಿ ೧೪-೧೫ ಶ್ಲೋಕಗಳಲ್ಲಿ ಚರ್ಚಿಸಲ್ಪಡುತ್ತದೆ. **ಕೇಶಿ ನಿಷೂದನ** ಎಂಬ ಸಂಬೋಧನೆಯಿಂದ ತೋರಿಬರುವ ಅರ್ಥವೇನೆಂದರೆ, ದುಷ್ಟನಿಗ್ರಹವು ನಿನ್ನ ಅವತಾರ ಕರ್ತವ್ಯವೆಂದು ಭಾವಿಸಿ ದುಷ್ಟನಾದ ಕೇಶಿಯನ್ನು ನೀನು ಸಂಹರಿಸಿದವನು. ಇದನ್ನು ಅನುಸರಿಸಿಯೇ ಈಗ ದುರ್ಯೋಧನಾದಿಗಳನ್ನು ಯುದ್ಧದಲ್ಲಿ ಕೊಲ್ಲತಕ್ಕದ್ದೆಂದು ಉಪದೇಶಿಸುವ ಅವಸರವಾಗಿರುತ್ತದೆಂಬುದು ಸೂಚಿತವು. ಈ ಹನನ ಕರ್ಮವೂ ಕ್ಷತ್ರಿಯನಾದ ನನಗೆ ವಿಹಿತ ಕರ್ಮವಾಗಿ, ನನಗೆ ಕ್ರಮೇಣ ಮೋಕ್ಷಹೇತುವಾಗಬೇಕಾದರೆ ಈ ಅಭಿಪ್ರಾಯವೇ ಕರ್ಮ ಸನ್ನ್ಯಾಸ, ಕರ್ಮತ್ಯಾಗ ಶಬ್ದಗಳಲ್ಲೇ ಅಂತರ್ಗತವೇ ? ತಿಳಿಯಲಪೇಕ್ಷಿಸುತ್ತೇನೆಂಬ ಭಾವವನ್ನೂ ಸಹ ಈ **ಕೇಶಿ ನಿಷೂದನ** ಎಂಬ ಸಂಬೋಧನೆಯಿಂದ ತೋರಿಬರುತ್ತದೆ. ಇಂತಹ ಹನನ ಕರ್ಮವನ್ನು ನಮ್ಮಗಳ ತಿಳುವಳಿಕೆಗಾಗಿ ನೀನೇ ಅನುಷ್ಠಿಸಿ ತೋರಿದ **ಕೇಶಿ ನಿಷೂದನನೇ** ಎಂಬ ಭಾವವು. ಈ ದುಷ್ಟನಿಗ್ರಹವು ಕ್ಷತ್ರಿಯನಿಗೆ ವಿಹಿತಕರ್ಮವೇ ಸರಿ ಎಂದು ಅರ್ಥಾಂಗೀಕಾರದಿಂದ ಹೇಳಿದ ಸಂಬೋಧನೆಯೆಂದೂ, ಭಾವಿಸಬಹುದಾಗಿರುತ್ತದೆ. ನೀನೇ ದುಷ್ಟನಿಗ್ರಹವನ್ನು ಮಾಡಿ ಧರ್ಮಾನುಷ್ಠಾನ ಹೀಗೆ ಎಂದು ತೋರಿಸಿರುವದರಿಂದ ನಾನೂ ಕೂಡ ನಿನ್ನ ಉಪದೇಶಾನುಗುಣವಾಗಿ ಮಾಡಬೇಕಾಗಿ ತೋರುತ್ತದೆಂಬ ಅರ್ಥಾಂಗೀಕಾರ ಭಾವವೂ ಇದರಿಂದ ತೋರಿಬರುತ್ತದೆ.

**ಭಾ.** **ತ್ಯಾಗಸನ್ನ್ಯಾಸೌ ಹಿ ಮೋಕ್ಷಸಾಧನತಯಾ ವಿಹಿತೌ.—(೧) "ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇ ನೈಕೇ ಅಮೃತತ್ವಮಾನಶುಃ... ವೇದಾನ್ತವಿಜ್ಞಾನ ಸುನಿಶ್ಚಿತಾರ್ಥಾಸ್ಸನ್ನ್ಯಾಸಯೋಗಾದ್ಯತಯಶ್ಶುದ್ಧಸತ್ತ್ವಾಃ । ತೇ ಬ್ರಹ್ಮಲೋಕೇ ತು ಪರಾನ್ತಕಾಲೇ ಪರಾಮೃತಾತ್ಪರಿಮುಚ್ಯನ್ತಿ ಸರ್ವೇ" ಇತ್ಯಾದಿಷು. ಅಸ್ಯ ಸನ್ನ್ಯಾಸಸ್ಯ ತ್ಯಾಗಸ್ಯ ಚ ತತ್ತ್ವಂ-ಯಾಥಾತ್ಮ್ಯಂ, ಪೃಥಗ್ವೇದಿತುಮಿಚ್ಛಾಮಿ । ಅಯಮಭಿಪ್ರಾಯಃ—ಕಿಮೇತೌ ಸನ್ನ್ಯಾಸತ್ಯಾಗಶಬ್ದೌ ಪೃಥಗರ್ಥೌ ಉತೈಕಾರ್ಥಾವೇವ? ಯದಾ ಪೃಥಗರ್ಥೌ ತದಾ ಅನಯೋಃ ಪೃಥಕ್ತ್ವೇನ ಸ್ವರೂಪಂ ವೇದಿತುಮಿಚ್ಛಾಮಿ; ಏಕತ್ವೇಪಿ ತಸ್ಯಸ್ವರೂಪಂ ವಕ್ತವ್ಯಂ-ಇತಿ. ||**

---

**ಭಾಷ್ಯವು.** ಅರ್ಜುನನು ಪ್ರಶ್ನಿಸುತ್ತಾನೆ.—**ತ್ಯಾಗಸನ್ನ್ಯಾಸೌ**-ತ್ಯಾಗ ಮತ್ತು ಸನ್ನ್ಯಾಸ ಶಬ್ದಗಳು, **ಮೋಕ್ಷಸಾಧನತಯಾ**-ಮೋಕ್ಷಸಾಧನ ಭಾವವುಳ್ಳವೆಂದು, **ವಿಹಿತೌ ಹಿ**-ಶಾಸ್ತ್ರದಲ್ಲಿ ಹೇಳಲ್ಪಟ್ಟಿವೆಯಷ್ಟೇ, ಎಲ್ಲಿ ಎಂದರೆ ತೈತ್ತರೀಯ ಪ್ರಮಾಣವನ್ನು ಉದಾಹರಿಸುತ್ತಾರೆ.—(೧) **ಯತ್ ಅಮೃತತ್ವಂ**-ಯಾವ ಮೋಕ್ಷಾವಸ್ಥೆಯನ್ನು, **ಯತಯಃ ಆನಶುಃ**-ಯತಿಗಳು ಹೊಂದುತ್ತಾರೋ, **ಯಚ್ಚ ಅಮೃತತ್ವಂ**-ಮತ್ತು ಯಾವ ಮೋಕ್ಷಾವಸ್ಥೆಯಾದರೋ, **ಪರೇಣ ನಾಕಂ**-ಸ್ವರ್ಗಲೋಕಕ್ಕೂ ಮೇಲೆ ಇರುವ ದಿವ್ಯ ವೈಕುಂಠ ಲೋಕವು, **ಗುಹಾಯಾಂ**-ಇಲ್ಲಿನವರಿಗೆ ವೇದ್ಯವಾಗದ ಸ್ಥಳದಲ್ಲಿ, **ನಿಹಿತಂ**-ಇರುವದಾಗಿ, **ವಿಭ್ರಾಜತೇ**-ಸ್ವಯಂಪ್ರಕಾಶವಾಗಿ ಶದ್ಧಸತ್ವಮಯವಾಗಿ, ಕಾಲಕ್ಕೆ ವಶವಾಗದೇ ಪ್ರಕಾಶಿಸುತ್ತದೋ, **ತತ್** ಎಂದು ಇಟ್ಟುಕೊಳ್ಳಬೇಕು, ಆ ಅಮೃತತ್ವವು, **ನ ಕರ್ಮಣಾ ನ ಪ್ರಜಯಾ ನ ಧನೇನ**-ಕೇವಲ ಕರ್ಮಯೋಗಾನುಷ್ಠಾನದಿಂದಾಗಲಿ, ಪಿತೃ ಋಣಮೋಚನೆಗಾಗಿ ಮಾಡುವ ಪ್ರಜಾವೃದ್ಧಿಯಿಂದಲಾಗಲಿ, ಕೇವಲ ಧನವನ್ನು ದಾನಮಾಡುವದರಿಂದಲಾಗಲಿ, ಇಷ್ಟು ಹೇಳಿದುದು **ನ ತಪಸಾ** ಎಂಬುದಕ್ಕೂ ಉಪಲಕ್ಷಣವು; ಕೇವಲ ತಪಸ್ಸಿನಿಂದಾಗಲಿ ಹೊಂದಲು ಸಾಧ್ಯವಿಲ್ಲವು. ಕೇವಲ ಕರ್ಮಯೋಗ ಮಾತ್ರದಿಂದಲೇ ಲಭ್ಯವಲ್ಲವೆಂದು ಹೇಳಲ್ಪಟ್ಟಿತು. ಹಾಗಾದರೆ ಇನ್ನು ಯಾವುದರಿಂದ ಲಭ್ಯವೆಂದರೆ **ತ್ಯಾಗೇನೈಕೇ**-ಕೆಲವು ಮಹಾನುಭಾವರು ತ್ಯಾಗದಿಂದಲೇ ಲಭ್ಯವು ಎಂದು ಹೇಳುವರು; ಶಾಸ್ತ್ರಾರ್ಥವನ್ನು ತಿಳಿದ ಪ್ರಾಜ್ಞರು ಹೇಳುವರು. ತ್ಯಾಗಶಬ್ದಾರ್ಥವೇನೆಂದರೆ "**ಸನ್ಯಾಸಸ್ತ್ಯಾಗ ಇತ್ಯುಕ್ತಶ್ಶರಣಾಗತಿರಿತ್ಯಪಿ**" ಎಂಬಲ್ಲಿ ಹೇಳಿರುವ ಹಾಗೆ ಭಗವಚ್ಚರಣಾರವಿಂದದಲ್ಲಿ ಶರಣವರಣ ಲಕ್ಷಣವುಳ್ಳದ್ದಾಗಿ ಸರ್ವವನ್ನೂ ಸ್ವಾಮಿಯಲ್ಲಿ ಸಮರ್ಪಿಸುವದು. ಇಲ್ಲಿ ಸನ್ಯಾಸ, ತ್ಯಾಗ ಮತ್ತು ಶರಣಾಗತಿ ಶಬ್ದಗಳು ಪರ್ಯಾಯ ಪದಗಳಾಗಿ ಭಾವನೆಯು. ಹೀಗೆ ಕೆಲವರು ಅಮೃತತ್ವವನ್ನು ಹೊಂದಿದರೆಂಬರ್ಥವು. ಈ ಅಭಿಪ್ರಾಯವು ಹಿಂದೆಯೇ ೧೧ನೆಯ ಅಧ್ಯಾಯದಲ್ಲಿ "**ನಾಹಂ ವೇದೈರ್ನತಪಸಾ ನದಾನೇನ ನಚೇಜ್ಯಯಾ । ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ**" ಎಂದು ಹೇಳಿ, ಇನ್ನು ಏತರಿಂದ ಎಂದರೆ "**ಭಕ್ತ್ಯಾತ್ವ ನನ್ಯಯಾಶಕ್ಯಃ**" ಎಂದು ಭಕ್ತಿಯೋಗದಿಂದ ಎಂದು ಹೇಳಲ್ಪಟ್ಟಿದೆ. ಅಲ್ಲಿ ಉಪಾಸನಾರೂಪವಾದ ಉಪಾಯವು ಹೇಳಲ್ಪಟ್ಟಿತು. ಇಲ್ಲಿ ತೈತ್ತರೀಯದಲ್ಲಿ ಎರಡು ವಿಧ ಉಪಾಯಗಳಿಗೂ ಬೇಕಾದ ಭರನ್ಯಾಸವು ಹೇಳಲ್ಪಟ್ಟಿತು. ಇಷ್ಟೇ ವ್ಯತ್ಯಾಸವು. ಇದರ ಅಭಿಪ್ರಾಯವೇನೆಂದರೆ ಈ ಯತಿಗಳಿಗೆ ಮೋಕ್ಷವು ಪರಮಪುರುಷನ ಚರಣಾರವಿಂದದಲ್ಲಿ ಮಾಡುವ ಶರಣಾಗತಿಯಿಲ್ಲದೆ ಉಂಟಾಗುವದಿಲ್ಲವೆಂದು ಹೇಳಲ್ಪಟ್ಟಿತು. ಶರಣಾಗತಿಯು ಗುರು ಲಘು ಎರಡು ಉಪಾಯಗಳಿಗೂ ಆವಶ್ಯಕವು. ಭಕ್ತಿಯೋಗಕ್ಕೆ ಅಂಗವಾಗಿಯೂ ಭರನ್ಯಾಸಕ್ಕೆ ಸಾಕ್ಷಾತ್ತಾಗಿಯೂ

---

(೧) **ತೈ. ನಾರಾ. ೨೦. ೨೧.**

ಆವಶ್ಯಕವು. ಆದುದರಿಂದಲೇ ಶ್ರೀ ಯತಿವರ್ಯರು ಶ್ರೀಭಾಷ್ಯದಲ್ಲಿ ವಶೀಕರಣೋಪಾಯದ ಸಂದರ್ಭದಲ್ಲಿ **"ತಸ್ಯಚ ವಶೀಕರಣಂ ತಚ್ಛರಣಾಗತಿರೇವ"** ಎಂದು ಹೇಳಿದರು. ಈ ಅಭಿಪ್ರಾಯದಿಂದಲೇ ಶ್ರೀ ಕೃಷ್ಣಭಗವಾನರವರಿಂದ **"ಸರ್ವಧರ್ಮಾನ್"** ಎಂಬ ಚರಮ ಶ್ಲೋಕವು ಪ್ರಯುಕ್ತವು. **ಯತಯಃ**-ಸನ್ಯಾಸಿಗಳು, ಯಮಾದಿಗಳಿಂದ ಯುಕ್ತರಾದವರು, **ಸನ್ನ್ಯಾಸಯೋಗಾತ್**-ಹಿಂದೆ ಉದಾಹರಿಸಿದ ಪ್ರಮಾಣಾನುಸಾರವಾಗಿ ಶರಣಾಗತಿಯನ್ನನುಷ್ಠಿಸುವದರಿಂದ, ಸನ್ನ್ಯಾಸವೆಂದರೆ ಸಮ್ಯಕ್‌ನ್ಯಾಸ ಭರನ್ಯಾಸವೆಂದು ಈ ತೈತ್ತರೀಯದಲ್ಲೇ ಮುಂದೆ **"ತಸ್ಮಾನ್ನ್ಯಾಸ ಮೇಷಾಂ ತಪಸಾ ಮತಿರಿಕ್ತಮಾಹುಃ"** ಎಂದು (ತೈ. ನಾರಾ. ೪-೫೦) ಹೇಳಿ, **ಆ ನ್ಯಾಸವೆಂಬುದು** ಯಾವುದು ಎಂದರೆ ಮುಂದಿನ ಅನುವಾಕದಲ್ಲಿ **'ಮಸುರಣ್ಯೋ ವಿಭೂರಸಿ"** ಎಂದಾರಂಭಿಸಿ **"ಓಮಿತ್ಯಾತ್ಮಾನಂ ಯುಂಜೀತ, ಏತದ್ವೈ ಮಹೋಪನಿಷದಂ ದೇವಾನಾಂ ಗುಹ್ಯಮ್, ಯ ಏವಂ ವೇದ ಬ್ರಹ್ಮಣೋ ಮಹಿಮಾನ ಮಾಪ್ನೋತಿ"** **ಓಂ** ಎಂದು ತ್ರಿಮಾತ್ರೆಯಿಂದ ಉಚ್ಚರಿಸಿ ಆತ್ಮಾವನ್ನು ಪರಮಪುರುಷನ ಪಾದಾರವಿಂದದಲ್ಲಿ ಸಮರ್ಪಿಸುವದೇ **ಸನ್ನ್ಯಾಸ**ವೆಂದು ವಿವರಿಸಿ, ಅದರಿಂದ ಅಮೃತತ್ವ ಪ್ರಾಪ್ತಿ ಎಂದು ಹೇಳಲ್ಪಟ್ಟಿರುತ್ತದೆ; ಈ ಯತಿಗಳು **ವೇದಾನ್ತ ವಿಜ್ಞಾನ ಸುನಿಶ್ಚಿತಾರ್ಥಾಃ**-ಉಪನಿಷತ್ತುಗಳ ಯಥಾರ್ಥವಾದ ಜ್ಞಾನದಿಂದ ಸಿದ್ಧಾನ್ತಿಸಲ್ಪಟ್ಟ ಅಭಿಪ್ರಾಯವುಳ್ಳವರಾಗಿ, ಎಂದರೆ ಅಲ್ಲಿ ಹೇಳಿರುವ ತತ್ವಹಿತ ಪುರುಷಾರ್ಥಗಳ ಸರಿಯಾದ ಅಭಿಪ್ರಾಯವುಳ್ಳವರಾಗಿ, **ಶುದ್ಧಸತ್ವಾಃ**-ಭಕ್ತಿಯೋಗಕ್ಕೆ ವಿರೋಧವಾದ ಪಾಪಗಳನ್ನೆಲ್ಲಾ ಕಳೆದುಕೊಂಡು ನಿರ್ಮಲಾಂತಃಕರಣರಾಗಿ ಉಪಾಯಾನುಷ್ಠಾನವನ್ನು ಮಾಡಿ ಆ ಕಾರಣದಿಂದ ಶುದ್ಧ ಸತ್ವವಾದ ದಿವ್ಯ ವೈಕುಂಠವನ್ನು ಹೋಗಿ ಸೇರಲು ಅರ್ಹರಾಗಿ ಎಂಬ ಭಾವವು ಸೂಚಿತವು; **ಪರಾನ್ತಕಾಲೇ**-ಶರೀರ ವಿಯೋಗವಾದ ಕಾಲದಲ್ಲಿ, **ಬ್ರಹ್ಮಲೋಕೇ**-ಭಗವಂತನ ಲೋಕವಾದ ದಿವ್ಯ ವೈಕುಂಠದಲ್ಲಿ, **ಪರಾಮೃತಾತ್**-ಸಂಸಾರಾವಸ್ಥೆಯನ್ನು ಕಳೆದುಕೊಂಡು, ಉತ್ಕೃಷ್ಟ ಪರಮಾತ್ಮ ಸಾಯುಜ್ಯವನ್ನು ಹೊಂದಿ, **ಸರ್ವೇ ಪರಿಮುಚ್ಯನ್ತೇ**-ಸಮಸ್ತರು ಬಂಧದಿಂದ ಮುಕ್ತರಾಗುವರು. ಇಲ್ಲಿ **ಯತಯಃ** ಎಂದು ಹೇಳಿದುದರಿಂದ ಸನ್ನ್ಯಾಸಾಶ್ರಮಿಗಳಿಗೆ ಮಾತ್ರವೇ ಮೋಕ್ಷವೆಂದು ಭಾವಿಸತಕ್ಕದ್ದಲ್ಲವು. **ಸನ್ನ್ಯಾಸಿ** ಎಂದರೆ ಚನ್ನಾಗಿ ಶರಣಾಗತಿಯನ್ನು ಅನುಷ್ಠಿಸಿದವನೆಂಬ ಅರ್ಥವಾಗಿ, ಸ್ತ್ರೀ, ಶೂದ್ರ, ಚಂಡಾಲಾದಿಗಳಿಗೂ ಉಪಾಸನದಲ್ಲಿ ಅಧಿಕಾರವಿಲ್ಲದಿದ್ದರೂ ಶರಣಾಗತಿಯಲ್ಲಿ ಅಧಿಕಾರವುಂಟು ಎಂದು ಕೊನೆಯ ಚರಮಶ್ಲೋಕದಲ್ಲಿ ಹೇಳಲ್ಪಡುವ ಅಭಿಪ್ರಾಯವೇ ಇಲ್ಲಿಯೂ ಬೋಧಿತವು. ಈ ಉಪನಿಷತ್ತಿನ ವಾಕ್ಯದಲ್ಲಿ, ತ್ಯಾಗಸನ್ನ್ಯಾಸ ಶಬ್ದಗಳು ಸಮಾನಾರ್ಥಕಗಳಾಗಿ ಪ್ರಯೋಗಿಸಲ್ಪಟ್ಟಿವೆ. ಆದುದರಿಂದಲೇ ಶ್ರೀ ಯತಿವರ್ಯರು ಉದಾಹರಿಸಿದರು. ಎಲ್ಲಾ ಆಶ್ರಮಿಗಳಿಗೂ ಇದು ಅನ್ವಯಿಸುತ್ತದೆಂಬುದನ್ನು **"ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ"** ಎಂಬ ಮತ್ತೂ **"ಮೌನವದಿತರೇಷಾ ಮಪ್ಯುಪದೇಶಾತ್"** ಎಂಬ (೩. ೪. ೪೭-೪೮) ವ್ಯಾಸ ಸೂತ್ರಗಳಲ್ಲಿ ಕಾಣಬಹುದು.

**ಇತ್ಯಾದಿಷು.** ಇವೇ ಮೊದಲಾದ ಪ್ರಮಾಣಗಳಲ್ಲಿ ಹೇಳಿರುವದನ್ನು ಕಾಣಬಹುದು. ಕರ್ಮಗಳನ್ನೇನೋ ಅನುಷ್ಠಿಸಬೇಕೆಂದು ಹೇಳಲ್ಪಟ್ಟಿತು. ಆ ಕರ್ಮಗಳು ಸ್ವರ್ಗಾದಿ ಫಲಾಕಾಂಕ್ಷೆಯಿಂದ ಮಾಡಿದರೆ ಸ್ವರ್ಗಾದಿ ಫಲದಾಯಿಕಗಳೆಂದೂ, ಫಲಾಪೇಕ್ಷೆಯಿಲ್ಲದೆ ಮಾಡಿದರೆ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪಗಳನ್ನು ಹೋಗಲಾಡಿಸಿ ಕ್ರಮೇಣ ಅಪವರ್ಗಪ್ರಾಪ್ತಿ ಸಾಧನವೆಂದೂ ಉಪದೇಶಿಸಲ್ಪಟ್ಟಿತು. ಶಾಸ್ತ್ರಗಳಲ್ಲಿ ಅವುಗಳ ತ್ಯಾಗಸನ್ನ್ಯಾಸಗಳು ಮೋಕ್ಷಕ್ಕೆ ಸಾಧನವೆಂದು ಹೇಳಲ್ಪಟ್ಟಿದೆಯಲ್ಲಾ. ತ್ಯಾಗವೆಂದರೇನು? ಸನ್ನ್ಯಾಸವೆಂದರೇನು? ಎರಡು ಒಂದೆಯೇ ಬೇರೆಯೇ? ಎಂದು ಕೇಳುತ್ತಾನೆ.—**ಸನ್ನ್ಯಾಸಸ್ಯ**-ಈ ಸನ್ನ್ಯಾಸ ಶಬ್ದದ, **ತ್ಯಾಗಸ್ಯಚ**-ಮತ್ತು ತ್ಯಾಗಶಬ್ದದ, **ತತ್ತ್ವಂ** ಎಂದರೆ **ಯಾಥಾತ್ಮ್ಯಂ**-ಯಥಾರ್ಥವಾದ ಅಭಿಪ್ರಾಯವನ್ನು, **ಪೃಥಕ್**-ಬೇರೆಯಾಗಿ, ಎಂದರೆ ಅದರ ಅರ್ಥವೇನು?

**ಭಾ. ಅವ. ಅಥಾನಯೋರೇಕಮೇವ ಸ್ವರೂಪಂ, ತಚ್ಚೇದೃಶಮಿತಿ ನಿರ್ಣೇತುಂ ವಾದಿ ವಿಪ್ರತಿಪತ್ತಿಂ ದರ್ಶಯನ್ ಶ್ರೀ ಭಗವಾನುವಾಚ—**

---

ಇದರ ಅರ್ಥವೇನು? ಹೀಗೆ **ವೇದಿತುಮಿಚ್ಛಾಮಿ**-ತಿಳಿಯಲಪೇಕ್ಷಿಸುತ್ತೇನೆ. **ಪೃಥಕ್** ಎಂಬ ಶಬ್ದದಿಂದ ಅರ್ಜುನನಿಗೆ ಬೇರೆ ಬೇರೆ ಅರ್ಥವುಳ್ಳವೆಂದೇ ನಿಶ್ಚಯಿಸಿ ಪ್ರಶ್ನಿಸಿದನೆಂದು ಅರ್ಥ ಮಾಡುವದು ಸರಿಯಲ್ಲವು. ಆದುದರಿಂದ ಶ್ರೀ ಯತಿವರ್ಯರು ಅರ್ಜುನಪ್ರಶ್ನೆಯ ಅಭಿಪ್ರಾಯ ವೇನೆಂಬುದನ್ನು **ಅಯಮಭಿಪ್ರಾಯಃ**-ಇದೀಗ ಅಭಿಪ್ರಾಯವೆಂದಾರಂಭಿಸಿ ಹೇಳುತ್ತಾರೆ— **ಕಿಮೇತೌ ಸನ್ನ್ಯಾಸತ್ಯಾಗಶಬ್ದೌ**-ಈ ಸನ್ನ್ಯಾಸ ಮತ್ತು ತ್ಯಾಗಶಬ್ದಗಳೇನು, **ಪೃಥಗರ್ಥೌ**-ಬೇರೆ ಬೇರೆ ಅರ್ಥಗಳುಳ್ಳವೇ? **ಉತ**-ಇಲ್ಲವೇ, **ಏಕಾರ್ಥಾವೇವ**-ಒಂದೇ ಅರ್ಥವನ್ನುಳ್ಳವೇ? **ಯದಾ ಪೃಥಗರ್ಥೌ**-ಯಾವಾಗ ಬೇರೆ ಅರ್ಥಗಳುಳ್ಳವಾದರೆ, **ತದಾ**-ಆಗ, **ಪೃಥಕ್ತ್ವೇನ ಸ್ವರೂಪಂ ವೇದಿತು ಮಿಚ್ಛಾಮಿ**-ಬೇರೆ ಬೇರೆಯಾಗಿ ಆ ಶಬ್ದಗಳ ಅರ್ಥಗಳನ್ನು ತಿಳಿಯಲು ಅಪೇಕ್ಷಿಸುತ್ತೇನೆ. ಇದೀಗ ಅರ್ಜುನಪ್ರಶ್ನೆಯಲ್ಲಿ ಪೃಥಕ್‌ಶಬ್ದಾರ್ಥವು. ಇದರಿಂದ ಅರ್ಥವಾಗಿ ಸೂಚಿತವಾದ ಅರ್ಥವನ್ನೂ ತಿಳಿಸುತ್ತಾರೆ—**ಏಕತ್ವೇಪಿ**-ಒಂದುವೇಳೆ ಒಂದೇಯಾಗಿದ್ದರೂ, **ತಸ್ಯ ಸ್ವರೂಪಂ**-ಅದರ ಯಥಾರ್ಥಾರ್ಥವನ್ನೂ, **ವಕ್ತವ್ಯಂ**-ದಯಮಾಡಿ ಹೇಳತಕ್ಕದ್ದು; **ಇತಿ**-ಎಂಬದಾಗಿ ಅಭಿಪ್ರಾಯವು. ಪೃಥಕ್ ಶಬ್ದದಿಂದ ಪೃಥಕ್ಕಾಗಿದೆ ಎಂದು ಅರ್ಜುನನೇ ನಿರ್ಧರಿಸಿಕೊಂಡು, ಹೇಗೆ ಪೃಥಕ್ಕೆಂದು ತಿಳಿಯಲು ಇಚ್ಛಿಸುತ್ತೇನೆಂದು ಅರ್ಥ ಮಾಡುವದು ಸರಿಯಲ್ಲವು. ಹಾಗಾದರೆ ಪೃಥಕ್ ಶಬ್ದವನ್ನು ಏಕೆ ಪ್ರಯೋಗಿಸಲ್ಪಟ್ಟಿತು? ಎಂದು ಕೇಳಿದರೆ, ಪೃಥಕ್ತ್ವವೇನಾದರೂ ಇದ್ದ ಪಕ್ಷದಲ್ಲಿ ಅದನ್ನು ತಿಳಿಯಲಪೇಕ್ಷಿಸುತ್ತೇನೆ ಎಂದು ಅರ್ಜುನನು ಪ್ರಶ್ನಿಸಿದನು ಎಂಬದಾಗಿ ಅರ್ಥವು.

**ಭಾಷ್ಯಾವತಾರಿಕೆಯ ಅರ್ಥವು—ಅಥ**-ಅನಂತರದಲ್ಲಿ, ಅರ್ಜುನಪ್ರಶ್ನಾನಂತರದಲ್ಲಿ, **ಅನಯೋಃ**-ಈ ಸನ್ನ್ಯಾಸತ್ಯಾಗವೆಂಬೆರಡು ವ್ಯವಹಾರಗಳಿಗೂ, **ಏಕಮೇವಸ್ವರೂಪಂ**-ಒಂದೇ ಅಭಿಪ್ರಾಯವುಳ್ಳ ಸ್ವರೂಪವನ್ನು ಹೊಂದಿದವು ಎಂದೂ, ಎಂದರೆ ಎರಡು ಪದಗಳೂ ಒಂದೇ ಅಭಿಪ್ರಾಯವುಳ್ಳವೆಂದೂ, **ತಚ್ಚ**-ಅವುಗಳಿಗಿರುವ ಲಕ್ಷಣವು, **ಈದೃಶಮಿತಿ ನಿರ್ಣೇತುಂ**-ಇಂತಹದ್ದೆಂದು ನಿರ್ಣಯಿಸುವದಕ್ಕಾಗಿ, **ವಾದಿ ವಿಪ್ರತಿಪತ್ತಿಂ**-ಬೇರೆ ಬೇರೆ ಎಂದು ವಾದಿಸುವದರಲ್ಲುಂಟಾಗುವ ಅಸಾಮಂಜಸ್ಯವನ್ನು, **ದರ್ಶಯನ್**-ತೋರಿಸುವವರಾಗಿ **ಶ್ರೀ ಭಗವಾನುವಾಚ**-ಶ್ರೀ ಕೃಷ್ಣಭಗವಾನರವರು ಹೇಳುತ್ತಾರೆ. ಇದರಿಂದ ಈ ಸನ್ನ್ಯಾಸ ತ್ಯಾಗ ಶಬ್ದಗಳು ಮೋಕ್ಷಾರ್ಥಿಯು ಅನುಷ್ಠಿಸುವ ಕರ್ಮಗಳ ವಿಷಯದಲ್ಲಿ ಯಾವ ವ್ಯವಹಾರವುಳ್ಳವೆಂದು ನಿರ್ಧರಿಸುವ ಸಂದರ್ಭದಲ್ಲಿ ಇತರರು ಹೇಳುವ ಅಭಿಪ್ರಾಯಗಳನ್ನು ಮೊದಲು ೨, ೩ನೆಯ ಶ್ಲೋಕಗಳಿಂದ ತಿಳಿಸಿ, ಅನಂತರ ನಾಲ್ಕನೆಯ ಶ್ಲೋಕದಲ್ಲಿ ತಮ್ಮ ಸಿದ್ಧಾಂತಾಭಿಪ್ರಾಯವನ್ನು, ಅನುವದಿಸಿ, ಇತರರು ಹೇಳುವ ತ್ಯಾಗ ಶಬ್ದಾರ್ಥವನ್ನು ೫ನೆಯ ಶ್ಲೋಕದಲ್ಲಿ ಖಂಡಿಸಿ, ಆರನೆಯ ಶ್ಲೋಕದಲ್ಲಿ ತ್ಯಾಗ ಶಬ್ದಾರ್ಥವನ್ನು ಉಪಪಾದಿಸಿ, ೭ನೆಯ ಶ್ಲೋಕದಲ್ಲಿ ಇತರರು ಹೇಳುವ ಕರ್ಮಸನ್ನ್ಯಾಸ ಶಬ್ದಾರ್ಥವನ್ನು ಖಂಡಿಸಿ, ಅದರ ಅರ್ಥವೂ ತ್ಯಾಗ ಶಬ್ದಾರ್ಥವೂ ಎರಡೂ ಒಂದೇ ಎಂಬ ಭಾವವನ್ನು ೯ ಮತ್ತು ೧೧ನೆಯ ಶ್ಲೋಕಗಳಲ್ಲಿ ಸೂಚಿಸಿರುತ್ತಾರೆ. ಈ ೨ನೆಯ ಶ್ಲೋಕದಲ್ಲಾದರೋ, ಕೆಲವು ಪಂಡಿತರೂ, ಪ್ರಾಜ್ಞರೂ ಸನ್ನ್ಯಾಸ ಶಬ್ದಕ್ಕೂ ತ್ಯಾಗ ಶಬ್ದಕ್ಕೂ ಬೇರೆ ಬೇರೆ ಅರ್ಥವನ್ನು ಹೇಳುವರು. ಆದರೆ ಅವು ಭಿನ್ನಾರ್ಥಗಳಲ್ಲದಿದ್ದರೂ, ಕಾಮ್ಯಕರ್ಮಗಳನ್ನು ಸ್ವರೂಪತಃ ಪರಿತ್ಯಾಗವೂ ಶ್ರೀ ಕೃಷ್ಣಭಗವಾನರವರಿಗೆ ಇಷ್ಟವಾದುದರಿಂದ ಕೆಲವು ತಿಳಿದವರೂ ಕೂಡ ಹಾಗೆ ಹೇಳಿದರೆಂದು ಹೇಳುತ್ತಾರೆ. ತ್ಯಾಗ ಶಬ್ದಕ್ಕೆ ಮಾತ್ರ ಕೆಲವರು ಸರಿಯಾದ ಅರ್ಥವನ್ನು ಹೇಳಿದುದರಿಂದ ಅವರನ್ನು ವಿಚಕ್ಷಣರೆಂದು ಎಂದರೆ ವಿಶೇಷ ಪ್ರಾಜ್ಞರೆಂದು ಹೇಳಿರುತ್ತಾರೆ.

**ಮೂ. ಶ್ರೀ ಭಗವಾನುವಾಚ—**

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ನ್ಯಾಸಂ ಕವಯೋ ವಿದುಃ |**
**ಸರ್ವಕರ್ಮ ಫಲತ್ಯಾಗಂ ಪ್ರಾಹು ಸ್ತ್ಯಾಗಂ ವಿಚಕ್ಷಣಾಃ ||೨||**

---

**ಮೂಲಕ್ಕೆ ಅರ್ಥವು**—ಲಕ್ಷ್ಮೀಯುಕ್ತನಾಗಿ ಹೇಯ ಪ್ರತ್ಯನೀಕನಾಗಿ ಕಲ್ಯಾಣ ಗುಣಾಕರನಾದ ಶ್ರೀ ಕೃಷ್ಣಭಗವಾನವರು ಉತ್ತರವನ್ನು ಹೇಳುತ್ತಾರೆ.—**ಕಾಮ್ಯಾನಾಂ ಕರ್ಮಣಾಂ**-ಕೋರಿದ ಐಹಿಕ ಸ್ವರ್ಗಾದಿ ಫಲಗಳನ್ನು ಕೊಡುವ, ಫಲಾಪೇಕ್ಷೆಯಿಂದ ಮಾಡುವ ಕಾಮ್ಯಕರ್ಮಗಳ, **ನ್ಯಾಸಂ**-ಸ್ವರೂಪತಃ ಪರಿತ್ಯಾಗವನ್ನು ಅವುಗಳು ಬಂಧಕಗಳಾದುದರಿಂದ ಎಂಬ ಭಾವವು, **ಕವಯಃ**-ಪ್ರಾಜ್ಞರು, **ಸನ್ನ್ಯಾಸಂ**-ಕರ್ಮಸನ್ನ್ಯಾಸವೆಂಬದಾಗಿ, **ವಿದುಃ**-ತಿಳಿಯುತ್ತಾರೆ. **ಸರ್ವಕರ್ಮ ಫಲತ್ಯಾಗಃ**-ನಿತ್ಯ ನೈಮಿತ್ತಿಕ ಕಾಮ್ಯ ಮೊದಲಾದವುಗಳ ಫಲಗಳ ತ್ಯಾಗವನ್ನು, **ವಿಚಕ್ಷಣಾಃ**-ಮೇಲಿನವರಿಗಿಂತ ಸ್ವಲ್ಪ ಹೆಚ್ಚಾದ ವಿಶೇಷ ಪ್ರಾಜ್ಞರಾದವರು, **ತ್ಯಾಗಂ**-ತ್ಯಾಗವೆಂದು, **ಪ್ರಾಹುಃ**-ಹೇಳುತ್ತಾರೆ. ಈ ಶಬ್ದಾರ್ಥಗಳು ಸರಿಯಲ್ಲವಾದರೂ, ಕಾಮ್ಯಕರ್ಮ ಸ್ವರೂಪತಃ ತ್ಯಾಗವೇ ಸನ್ನ್ಯಾಸವೆಂದು ಕೆಲವರೂ, ಕೆಲವರೂ ಸಮಸ್ತ ಕರ್ಮಗಳ ಫಲತ್ಯಾಗವೇ ತ್ಯಾಗವೆನಿಸುತ್ತದೆ ಎಂಬ ಅಭಿಪ್ರಾಯಗಳು ಗ್ರಾಹ್ಯವಾದುದರಿಂದ ಕವಿಗಳೆಂದೂ ವಿಚಕ್ಷಣರೆಂದೂ ಹೇಳಲ್ಪಟ್ಟರು. ಕಾಮ್ಯಕರ್ಮಗಳನ್ನು ಫಲಾಭಿಸಂಧಿಯುಕ್ತವಾಗಿ ಮಾಡಕೂಡದೆಂದು ಹೇಳುವವನು ಪ್ರಾಜ್ಞನೇ ಸರಿ. ಆದರೆ ಕಾಮ್ಯಕರ್ಮವನ್ನು ಫಲಾಭಿಸಂಧಿಯಿಲ್ಲದೆ ಮಾಡಿದರೆ ಪ್ರತ್ಯವಾಯವೇನಾದರು ಉಂಟೇ ಎಂಬುದನ್ನು ಇವರು ಯೋಚಿಸಲಿಲ್ಲವು. ಲಕ್ಷ್ಮಿಯ ಆರಾಧನೆಯನ್ನು ಕಾಮ್ಯಕರ್ಮವಾಗಿ ಧನಪ್ರಾಪ್ತಿಗಾಗಿ ಒಬ್ಬನು ಮಾಡುವನು; ಇದನ್ನು ಪ್ರಪನ್ನನು ಅನುಷ್ಠಿಸತಕ್ಕದ್ದಲ್ಲವು. ಆದರೆ ಉಪಾಯೋಪೇಯಕ್ಕೆ ಸಂಬಂಧಿಸಿದವಳಾಗಿ ಪುರುಷೋತ್ತಮನ ಪ್ರಿಯವಲ್ಲಭೆ ಎಂದು ಫಲಾಭಿಸಂಧಿ ರಹಿತನಾಗಿ ಲಕ್ಷ್ಮಿಯನ್ನು ಆರಾಧಿಸಿದರೆ ಹೇಗೆ ನಿಂದ್ಯವು? ಈ ಭಾವವನ್ನು ಆ ಕವಿಗಳು ಯೋಚಿಸಲಿಲ್ಲವೆಂಬ ಭಾವವು ಇಲ್ಲಿ ತೋರಿಬರುತ್ತದೆ. ಆದುದರಿಂದ ಈ ಎರಡನ್ನೂ ಇಲ್ಲಿ ಹೇಳಿದುದರಿಂದ ವಾದಕ್ಕೆ ಕಾರಣ ಉಂಟಾಯಿತು. ಕೆಲವರು ಕಾಮ್ಯಕರ್ಮಗಳನ್ನು ಅನುಷ್ಠಿಸಲೇಕೂಡದೆಂದು ಹೇಳುತ್ತಾರೆ; ಇನ್ನು ಕೆಲವರು ಅವುಗಳನ್ನು ಮಾಡಬಹುದು, ಫಲತ್ಯಾಗಮಾಡಿ ಮಾಡಬಹುದೆಂದರು; ಹೀಗೆ ವಿವಾದಾಸ್ಪದವಾದ ವಿಷಯವು ಎಂದು ಈ ಶ್ಲೋಕದ ಮೂಲಕ ತಿಳಿಸಿದರು. ಅರ್ಜುನನೇ ತನ್ನ ಪ್ರಶ್ನೆಯಲ್ಲಿ **ಪೃಥಕ್** ಶಬ್ದವನ್ನು ಉಪಯೋಗಿಸಿರುವದರಿಂದ, ಸನ್ನ್ಯಾಸ ತ್ಯಾಗ ಶಬ್ದಗಳಿಗೆ ಪಂಡಿತರೇ ಭಿನ್ನಾರ್ಥಗಳನ್ನು ಹೇಳಿರುವದನ್ನು ತಿಳಿದೇ, ಯುದ್ಧವೂ ಕಾಮ್ಯವಾಗಿ ಆದುದರಿಂದ ಪರಿತ್ಯಾಗವೆಂಬಭಿಪ್ರಾಯವಾದರೆ ತನ್ನ ಇಷ್ಟವು ಕೈಗೂಡಿತು ಎಂಬ ಭಾವದಿಂದ ಪ್ರಶ್ನಿಸಿದನಾದುದರಿಂದ, ಆತನ ಇಂಗಿತವನ್ನು ತಿಳಿದ ಮಹಾನುಭಾವನು, ನೀನು ಈ ವಿಷಯದಲ್ಲಿ ಮೋಹಿಸಿ ಪ್ರಶ್ನಿಸಿದುದೇನೂ ದೋಷವಲ್ಲವು. ತಿಳಿದವರೇ ಸನ್ನ್ಯಾಸ ಶಬ್ದಕ್ಕೂ ತ್ಯಾಗ ಶಬ್ದಕ್ಕೂ ಪೃಥಕ್ತ್ವವನ್ನು ಕಲ್ಪಿಸಿರುವಾಗ ನೀನೂ ಹಾಗೆಯೇ ಪೃಥಕ್ಕೆಂಬ ಶಬ್ದವನ್ನು ಪ್ರಶ್ನೆಯಲ್ಲಿ ಉಪಯೋಗಿಸಿರುವದೇನೂ ಅನುಚಿತವಾದುದಲ್ಲವೆಂದು ಇದರಿಂದ ಹೇಳಿದಂತಾಯಿತು. ಪೂರ್ವಾರ್ಧದಲ್ಲಿ ಹೇಳಿದವರನ್ನು ಕವಿಗಳೆಂದೂ, ಉತ್ತರಾರ್ಧದಲ್ಲಿ ವಿಚಕ್ಷಣರೆಂದೂ, ಹೀಗೆ ಸ್ವಲ್ಪ ತಾರತಮ್ಯಕ್ಕೆ ಅವಕಾಶವಿರುವದರಿಂದ ಹಾಗೆ ಪ್ರಯೋಗವು. ವೈಲಕ್ಷಣ್ಯ ಹೇಗೆ? ಎಂದರೆ **ಸರ್ವ** ಶಬ್ದದಲ್ಲಿ ನಿತ್ಯನೈಮಿತ್ತಿಕಗಳೂ ಸೇರಿದವಾದುದರಿಂದ, ಅವುಗಳು ಕೆಲವು ಅಪಸಿದ್ಧಾಂತಿಗಳ ಹಾಗೆ ಸ್ವರೂಪತಃ ತ್ಯಾಗವೆಂದು ಅಭಿಪ್ರಾಯ ಪಡದೆ, ಅವುಗಳ ಫಲತ್ಯಾಗಮಾಡಿದುದರಿಂದ ಹೆಚ್ಚು ಪ್ರಾಜ್ಞತೆ ಎಂಬ ಭಾವವು. ಆದರೆ ಇವರ ಅಭಿಪ್ರಾಯವು ಕಾಮ್ಯಕರ್ಮಗಳನ್ನು ಕೂಡ ಫಲಾಭಿಸಂಧಿಯಿಲ್ಲದೆ ಅನುಷ್ಠಿಸಬಹುದೆಂಬುದು ತಾತ್ಪರ್ಯವು. ಕೆಲವರು ಇಲ್ಲಿ ಸನ್ನ್ಯಾಸ ಶಬ್ದದಿಂದ ಸನ್ನ್ಯಾಸಾಶ್ರಮಿಗಳಿಗೆ ಕರ್ಮಫಲದ ಸಂಬಂಧ ಕೂಡದೆಂದು ಹೇಳಲ್ಪಟ್ಟಿತೆಂದು ಭಾವಿ

**ಭಾ. ಕೇಚನ ವಿದ್ವಾಂಸಃ ಕಾಮ್ಯಾನಾಂ ಕರ್ಮಣಾಂ ನ್ಯಾಸಂ-ಸ್ವರೂಪತ್ಯಾಗಂ, ಸನ್ನ್ಯಾಸಂ ವಿದುಃ. ಕೇಚಿತ್ತು ವಿಚಕ್ಷಣಾಃ ನಿತ್ಯಾನಾಂ ನೈಮಿತ್ತಿಕಾನಾಂ ಕಾಮ್ಯಾನಾಂಚ ಸರ್ವೇಷಾಂ ಕರ್ಮಣಾಂ ಫಲತ್ಯಾಗ ಏವ ಮೋಕ್ಷಶಾಸ್ತ್ರೇಷು ತ್ಯಾಗಶಬ್ದಾರ್ಥ ಇತಿ ಪ್ರಾಹುಃ. ತತ್ರ ಶಾಸ್ತ್ರೀಯ ತ್ಯಾಗಃ ಕಾಮ್ಯ ಕರ್ಮ ಸ್ವರೂಪ ವಿಷಯಃ, ಸರ್ವಕರ್ಮಫಲ ವಿಷಯ ಇತಿ ವಿವಾದಂ ಪ್ರದರ್ಶಯನ್ ಏಕತ್ರ ಸನ್ನ್ಯಾಸಶಬ್ದ ಮಿತರತ್ರ ತ್ಯಾಗಶಬ್ದಂ ಪ್ರಯುಕ್ತವಾನ್. ಅತಸ್ತ್ಯಾಗ ಸನ್ನ್ಯಾಸ ಶಬ್ದಯೋ ರೇಕಾರ್ಥತ್ವ ಮಙ್ಗೀಕೃತ ಮಿತಿ ಜ್ಞಾಯತೇ.**

---

ಸುವರು. ಈ ಅಭಿಪ್ರಾಯಕ್ಕೆ ಪ್ರಕರಣ ಸಙ್ಗತಿಗಳು ಯಾವುವೂ ಇಲ್ಲವಾದುದರಿಂದ ಅದು ನಿರಸ್ತವು.

**ಭಾಷ್ಯಾರ್ಥವು**—ನಾಲ್ಕನೆಯ ಶ್ಲೋಕದಲ್ಲಿ **ನಿಶ್ಚಯಂ ಶೃಣು** ಎಂದು ಹೇಳುವದರಿಂದ, ಈಗ ಪೂರ್ವಪಕ್ಷರೂಪವಾದ ಮತ್ತೂ ಪರಸ್ಪರ ವಿರೋಧಾಭಿಪ್ರಾಯವುಳ್ಳ ಅಭಿಪ್ರಾಯಗಳನ್ನು ಉಪನ್ಯಸಿಸಿ, ಅನಂತರ ಸಿದ್ಧಾನ್ತಾರ್ಥವನ್ನು ಹೇಳುವದು ಯುಕ್ತವೆಂದು ಭಾವಿಸಿ, ಇತರರುಗಳ ಅಭಿಪ್ರಾಯವು, ಸನ್ನ್ಯಾಸತ್ಯಾಗಶಬ್ದಗಳು ಭಿನ್ನಾರ್ಥ ಉಳ್ಳವುಗಳೆಂದು ಭಾವಿಸಿ ಸನ್ನ್ಯಾಸವೆಂಬುದು ಕಾಮ್ಯ ಕರ್ಮದ ಸ್ವರೂಪತ್ಯಾಗವೆಂದೂ ತ್ಯಾಗ ಶಬ್ದಕ್ಕೆ ಕರ್ಮಫಲ ತ್ಯಾಗವೆಂದೂ ಕೆಲವರು ಅಭಿಪ್ರಾಯ ಪಡುವರೆಂದು ಹೇಳುತ್ತಾರೆ; ಆದರೆ ತಮ್ಮ ಅಭಿಪ್ರಾಯವುಎರಡೂ ಒಂದೇ ಎಂಬದಾಗಿ ಸಿದ್ಧಾನ್ತಿಸಿ ಮುಂದೆ ಉಪದೇಶಿಸುತ್ತಾರೆ. **ಕೇಚನ ವಿದ್ವಾಂಸಃ**-ಕೆಲವು ಪಂಡಿತರು, **ಕಾಮ್ಯಾನಾಂ ಕರ್ಮಣಾಂ**-ಕಾಮ್ಯಕರ್ಮಗಳ, **ನ್ಯಾಸಂ** ಎಂದರೆ **ಸ್ವರೂಪತ್ಯಾಗಂ**-ಸಂಪೂರ್ಣವಾಗಿ ಅಂತಹ ಕರ್ಮಗಳನ್ನು ತ್ಯಜಿಸೋಣವನ್ನೇ, **ಸನ್ನ್ಯಾಸಂ ವಿದುಃ**-ಸನ್ನ್ಯಾಸವೆಂದು ತಿಳಿಯುತ್ತಾರೆ. **ಕೇಚಿತ್ತು ವಿಚಕ್ಷಣಾಃ**-ಇನ್ನು ಕೆಲವರು ವಿಶೇಷಪಂಡಿತರು, **ನಿತ್ಯಾನಾಂ ನೈಮಿತ್ತಿಕಾನಾಂ ಕಾಮ್ಯಾನಾಂಚ ಸರ್ವೇಷಾಂ ಕರ್ಮಣಾಂ**-ನಿತ್ಯನೈಮಿತ್ತಿಕ ಕಾಮ್ಯಗಳಾದ ಸಮಸ್ತ ಕರ್ಮಗಳ, **ಫಲತ್ಯಾಗ ಏವ**-ಫಲವನ್ನು ಬಿಡೋಣವನ್ನೇ, **ಮೋಕ್ಷಶಾಸ್ತ್ರಗಳಲ್ಲಿ, ತ್ಯಾಗಶಬ್ದಾರ್ಥ ಇತಿ**-ತ್ಯಾಗಶಬ್ದದ ಅರ್ಥವೆಂದು, **ಪ್ರಾಹುಃ**-ಹೇಳುತ್ತಾರೆ. ಈ ವಿವಾದಾಸ್ಪದ ಅಭಿಪ್ರಾಯಗಳು ಮಾತ್ರ ಸ್ವಲ್ಪಮಟ್ಟಿಗೆ ಉಪಾದೇಯವಾದುದರಿಂದ ಇಲ್ಲಿ **ಕವಯಃ ವಿಚಕ್ಷಣಾಃ** ಎಂಬ ಪ್ರಯೋಗಗಳು. ಮುಂದಿನ ಶ್ಲೋಕದಲ್ಲೂ ಅಷ್ಟುಮಾನ್ಯವಲ್ಲವಾದರೂ ಸುಮ್ಮನೆ **ಕೇಚನ, ಕೇಚಿತ್** ಎಂಬ ಪ್ರಯೋಗಗಳಿದ್ದರೂ, ಅವರು **ಮನೀಷಿಣಃ** ಎಂದೇ ಹೇಳಲ್ಪಟ್ಟಿರುತ್ತಾರೆ.—

**ತತ್ರ**-ಆ ಸಂದರ್ಭದಲ್ಲಿ, **ಶಾಸ್ತ್ರೀಯ ತ್ಯಾಗಃ**-ಮೋಕ್ಷಶಾಸ್ತ್ರದಲ್ಲಿ ಹೇಳಿರುವ ತ್ಯಾಗವು **ಕಾಮ್ಯಕರ್ಮ ಸ್ವರೂಪ** ವಿಷಯವಾದುದೂ, ಸರ್ವಕರ್ಮಫಲತ್ಯಾಗ ವಿಷಯವಾದುದೆಂದೂ, **ವಿವಾದಂ ಪ್ರದರ್ಶಯನ್**-ವಿವಾದವನ್ನು ಪ್ರದರ್ಶಿಸುವವರಾಗಿ, **ಏಕತ್ರ**-ಒಂದು ಸಂದರ್ಭದಲ್ಲಿ ಎಂದರೆ ಕಾಮ್ಯಕರ್ಮಗಳನ್ನು ಸ್ವರೂಪತಃ ಬಿಡತಕ್ಕವೆಂಬುವ ಸಂದರ್ಭದಲ್ಲಿ, **ಸನ್ನ್ಯಾಸಶಬ್ದಂ**-ಸನ್ನ್ಯಾಸಶಬ್ದವನ್ನೂ **ಇತರತ್ರ**-ಇನ್ನೊಂದಾದ ಸರ್ವಕರ್ಮಗಳ ಫಲತ್ಯಾಗದ ಸಂದರ್ಭದಲ್ಲಿ **ತ್ಯಾಗ** ಶಬ್ದವನ್ನೂ, **ಪ್ರಯುಕ್ತವಾನ್**-ಪ್ರಯೋಗಿಸಿರುತ್ತಾರೆ. **ಕಾಮ್ಯಾನಾಂ ಕರ್ಮಣಾಂ ನ್ಯಾಸಂ** ಎಂದು ಹೇಳುವರು ಕವಿಗಳು ಹೇಗೆ? ಎಂದರೆ, ಮಿಕ್ಕ ಕರ್ಮಗಳಾದ ನಿತ್ಯನೈಮಿತ್ತಿಕಗಳ ಸ್ವರೂಪತ್ಯಾಗವು ಸರಿಯಲ್ಲವೆಂದು ತೋರುವದರಿಂದ ಅವರು ಕವಿಗಳೇ, ಪ್ರಾಜ್ಞರೇ ಎಂಬ ಭಾವವು; ಈ ಪ್ರಾಜ್ಞರ ಅಭಿಪ್ರಾಯವಾದರೋ, ನಿತ್ಯನೈಮಿತ್ತಿಕ ಕರ್ಮಗಳನ್ನು ತ್ಯಜಿಸಿದರೆ ಹೇಗೆ ಪ್ರತ್ಯವಾಯವೋ, ಕಾಮ್ಯಕರ್ಮಗಳ ಸ್ವರೂಪತ್ಯಾಗದಲ್ಲಿ ಅಂತಹ ದೋಷವಿಲ್ಲವೆಂಬುದಾಗಲಿ, ಮೋಕ್ಷಾರ್ಥಿಗೆ ಕಾಮ್ಯಕರ್ಮಗಳಿಂದಾಗತಕ್ಕದ್ದೇನೂ ಇಲ್ಲವೆಂಬ ಆಶಯ

**ಭಾ. ತಥಾ (1) " ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತ ಸತ್ತಮ " ಇತಿ ತ್ಯಾಗ ಶಬ್ದೇನೈವ ನಿರ್ಣಯ ವಚನಾತ್ ", (2) " ನಿಯತಸ್ಯತು ಸನ್ನ್ಯಾಸಃ**

ವನ್ನು ತೋರಿಸಿದುದರಿಂದಾಗಲಿ, ಉಪಾಸನರೂಪ ಬ್ರಹ್ಮವಿದ್ಯೆಯಲ್ಲಿ ಸಕ್ತನಾಗಿರುವವನಿಗೆ ಅದೂ ನಿತ್ಯನೈಮಿತ್ತಿಕಗಳ ಹಾಗೆ ವಿದ್ಯಾಙ್ಗವೂ ಅಲ್ಲವೆಂದೂ ತಿಳಿಸುವದರ ಮೂಲಕವಾಗಿಯಾಗಲಿ, ಅವರು **ಕವಯಃ** ಎಂದು ಪರಮೌದಾರ್ಯ ಭಾವದಿಂದ ಶ್ರೀ ಕೃಷ್ಣಭಗವಾನರವರು ಪ್ರಯೋಗಿಸಿರುತ್ತಾರೆ. ನಿತ್ಯನೈಮಿತ್ತಿಕಗಳು ವಿದ್ಯಾಙ್ಗಗಳೆಂದು **" ಸರ್ವಾಪೇಕ್ಷಾ ಯಜ್ಞಾದಿಶ್ರುತೇ ರಶ್ವವತ್ "** (ಶಾರೀ. ೩. ೪. ೨೬) ಎಂಬ ಸೂತ್ರದಲ್ಲಿ ಸ್ಥಾಪಿತವು. **ಸರ್ವಕರ್ಮಫಲ** ತ್ಯಾಗವನ್ನು ಬೋಧಿಸುವ ವಿಚಕ್ಷಣರ ಅಭಿಪ್ರಾಯವೇನೆಂದರೆ—ಫಲಾಭಿಸಂಧಿ ಇದ್ದರಲ್ಲವೇ ಕಾಮ್ಯಕರ್ಮವು ದೋಷಾವಹವು. ಆದುದರಿಂದ ಫಲವನ್ನೇ ತ್ಯಾಗವಮಾಡಿದುದಾದರೆ, ದೋಷವೇನು ? ಅಂತಹ ಕಾಮ್ಯಕರ್ಮಾನುಷ್ಠಾನದಿಂದಲೂ ಭಗವಂತನು ಪ್ರೀತನಾಗುವದಿಲ್ಲವೇ ? ಬೃಹದಾರಣ್ಯಕದ **" ಯೋವಾ ಏತದಕ್ಷರಂ ಗಾರ್ಗ್ಯವಿದಿತ್ವಾ ಸ್ಮಿನ್ ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ ಬಹೂನಿ ವರ್ಷ ಸಹಸ್ರಾಣ್ಯ ನ್ತವದೇವಾಸ್ಯ ತದ್ಭವತಿ.... ಯ ಏತದಕ್ಷರಂ ಗಾರ್ಗಿ ವಿದಿತ್ವಾಽಸ್ಮಾಲ್ಲೋಕಾತ್ಪ್ರೈತಿ ಸ ಬ್ರಾಹ್ಮಣಃ "** (ಬೃ. ೫. ೮. ೧೦) ಎಂಬ ವಾಕ್ಯಾನುಸಾರ ಪರಬ್ರಹ್ಮನನ್ನು ತಿಳಿಯದೆ ಎಂದರೆ ಉಪಾಸಿಸದೆ, ಬಹುಕಾಲ ಅಗ್ನಿಹೋತ್ರ ಯಜ್ಞ ತಪಸ್ಸುಗಳನ್ನು ಅನುಷ್ಠಿಸಿದರೂ ಅಲ್ಪಾಸ್ಥಿರ ಫಲವೆಂದೂ, ಅದನ್ನೇ ಪರಬ್ರಹ್ಮೋಪಾಸನೆಯೊಂದಿಗೆ ಮಾಡಿದುದಾದರೆ ಆತನು ಬ್ರಾಹ್ಮಣನಾಗುತ್ತಾನೆ ಎಂದರೆ ಬ್ರಹ್ಮವಿತ್ತಾದುದರಿಂದ ಪರಬ್ರಹ್ಮನನ್ನು ಅನುಭವಿಸುವ ಮುಕ್ತನಾಗುವನೆಂದೂ ಹೇಳಲ್ಪಟ್ಟಿರುತ್ತದೆ. ಆದುದರಿಂದ ಇವರುಗಳ ಅಭಿಪ್ರಾಯವು, ನಿತ್ಯವಾಗಲಿ ನೈಮಿತ್ತಿಕವಾಗಲಿ ಕಾಮ್ಯವಾಗಲಿ ಸ್ವರೂಪತ್ಯಾಗವು ಸರಿಯಲ್ಲವು, ಫಲತ್ಯಾಗವೇ ತ್ಯಾಗವು ಎಂದಾದುದರಿಂದ ಮೇಲಿನ ಕವಿಗಳಿಗಿಂತ ಇವರು ಉತ್ತಮವೆಂಬ ಭಾವದಿಂದ ವಿಚಕ್ಷಣರೆಂಬ ಪ್ರಯೋಗವು. ಹೀಗೆ ಇವರುಗಳು ಭಿನ್ನಾಭಿಪ್ರಾಯಗಳುಳ್ಳವರಾಗಿರುವದರಿಂದ **ಸನ್ನ್ಯಾಸ ತ್ಯಾಗ** ಶಬ್ದಗಳು ಬೇರೆ ಬೇರೆ ಅರ್ಥಗಳುಳ್ಳವೆಂಬ ವಿವಾದವನ್ನುಂಟುಮಾಡಿರುತ್ತಾರೆಂಬ ಭಾವವು.

ಶ್ರೀ ಕೃಷ್ಣಭಗವಾನರವರ ಅಭಿಪ್ರಾಯದ ಪ್ರಕಾರ ಸನ್ನ್ಯಾಸ ಮತ್ತು ತ್ಯಾಗ ಶಬ್ದಗಳೆರಡೂ ಏಕಾರ್ಥವುಳ್ಳವು ಎಂದು ಮುಂದೆ ಹೇಳಲ್ಪಡುತ್ತದೆಂದು ಸಪ್ರಮಾಣವಾಗಿ ತೋರಿಸಿ ಉಪಪಾದಿಸುತ್ತಾರೆ. **ಅತಃ**-ಆ ಕಾರಣದಿಂದ, **ತ್ಯಾಗ ಸನ್ನ್ಯಾಸ ಶಬ್ದಯೋಃ**-ತ್ಯಾಗ ಸನ್ನ್ಯಾಸವೆಂಬ ಎರಡು ಶಬ್ದಗಳಿಗೂ, **ಏಕಾರ್ಥತ್ವಂ**-ಒಂದೇ ಅರ್ಥವಿರುವ ಭಾವವನ್ನು **ಅಙ್ಗೀಕೃತಂ**-ಶ್ರೀ ಕೃಷ್ಣಭಗವಾನರವರಿಂದ ಅಙ್ಗೀಕರಿಸಲ್ಪಟ್ಟಿತು, **ಇತಿ ಜ್ಞಾಯತೇ**-ಎಂಬದಾಗಿ ತೋರಿಬರುತ್ತದೆ

**ಭಾಷ್ಯಾರ್ಥವು. ತಥಾ**-ಹಾಗೆಯೇ ಶ್ರೀ ಕೃಷ್ಣಾಭಿಪ್ರಾಯವು ಎಂದು ಮುಂದಿನ ಕೆಲವು ಶ್ಲೋಕಗಳನ್ನು ಉದಾಹರಿಸುತ್ತಾರೆ. (1) **" ಹೇಭರತ ಸತ್ತಮ**-ಓ ಭರತಕುಲಶ್ರೇಷ್ಠನಾದ ಅರ್ಜುನನೇ **ಮೇ**-ನನ್ನ ಮೂಲಕವಾಗಿ, **ತತ್ರ**-ಆ ಸಂದರ್ಭದಲ್ಲಿ, **ತ್ಯಾಗೇ**-ತ್ಯಾಗದ ವಿಷಯದಲ್ಲಿ, **ನಿಶ್ಚಯಂ**-ಯಥಾರ್ಥವಾದ ಅಭಿಪ್ರಾಯವನ್ನು, **ಶೃಣು**-ಹೇಳುತ್ತೇನೆ ಕೇಳು, **ಇತಿ**-ಎಂಬದಾಗಿ, **ತ್ಯಾಗ ಶಬ್ದೇನೈವ ನಿರ್ಣಯ ವಚನಾತ್**-ತ್ಯಾಗಶಬ್ದ ಒಂದನ್ನೇ ಹೇಳಿ ಸಿದ್ಧಾನ್ತಾರ್ಥವನ್ನು ಉಪದೇಶಿಸಿದುದರಿಂದ, ಮುಂದೆ ಆ ಶ್ಲೋಕದ ಉತ್ತರಾರ್ಧದಿಂದ, ತ್ಯಾಗಶಬ್ದಕ್ಕೆ ಮೂರು ವಿಧವಾದ ತ್ಯಾಗವೀಗ ತ್ಯಾಗವೆನಿಸುತ್ತದೆ, ಅವುಗಳು ಯಾವುವೆಂದರೆ (೧) ಕರ್ಮಫಲ ತ್ಯಾಗವು, (೨) ತಾನು ಮಾಡಿದ ಕರ್ಮವೆಂಬ ಮಮತಾ ತ್ಯಾಗವು, (೩) ಪರಮೇಶ್ವರನೇ ಮಾಡಿದನೆಂದು ಕರ್ತೃತ್ವ ತ್ಯಾಗವು; ಹೀಗೆ ಮೂರರ ತ್ಯಾಗವೀಗತ್ಯಾಗವು

(೧) ಗೀ. ೧೮. ೪. (೨) ಗೀ. ೧೮. ೭. (೩) ಗೀ. ೧೮. ೧೨.

**ಕರ್ಮಣೋ ನೋಪಪದ್ಯತೇ । ಮೋಹಾತ್ತಸ್ಯ ಪರಿತ್ಯಾಗಃ ತಾಮಸಃ ಪರಿಕೀರ್ತಿತಃ", (3) "ಅನಿಷ್ಟಮಿಷ್ಟಂ ಮಿಶ್ರಂಚ ತ್ರಿವಿಧಂ ಕರ್ಮಣಃ ಫಲಮ್ । ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸನ್ನ್ಯಾಸಿನಾಂ ಕ್ವಚಿತ್" ಇತಿ ಪರಸ್ಪರ ಪರ್ಯಾಯತಾ ದರ್ಶನಾಚ್ಚ ತಯೋ ರೇಕಾರ್ಥತ್ವಂ ಪ್ರತೀಯತ ಇತಿ ನಿಶ್ಚೀಯತೇ.**

---

ಎಂಬ ಭಾವವು; ಸನ್ನ್ಯಾಸದ ವಿಷಯವನ್ನೂ ಕುರಿತು ಹೇಳಬೇಕಾಗಿರುವಾಗ ತ್ಯಾಗ ಒಂದನ್ನೇ ಹೇಳಿರುವದರಿಂದ, ಸನ್ನ್ಯಾಸ ಶಬ್ದಕ್ಕೂ ಇವು ಮೂರರ ತ್ಯಾಗವೇ ಸನ್ನ್ಯಾಸವು ಎಂದು ಹೇಳಿದಂತಾಯಿತು ಎಂಬ ಭಾವವು." (೨) "**ನಿಯತಸ್ಯತು ಕರ್ಮಣಃ**"-ವರ್ಣಾಶ್ರಮಗಳಿಗೆ ವಿಧಿ ವಿಹಿತಗಳಾಗಿ ನಿಯತಗಳಾದಕರ್ಮಗಳ, **ಸನ್ನ್ಯಾಸಃ**-ತ್ಯಾಗ ಮಾಡೋಣವು, **ನೋಪಪದ್ಯತೇ**-ಸಾಧ್ಯವೇ ಇಲ್ಲವು, **ಮೋಹಾತ್ತಸ್ಯ ಪರಿತ್ಯಾಗಃ**-ಶಾಸ್ತ್ರಪಙ್ಕ್ತಿಯ ಅಭಿಪ್ರಾಯವನ್ನು ಗ್ರಹಿಸದೆ ಬುದ್ಧಿ ಭ್ರಾಮಕದಿಂದ ಅಂತಹ ಕರ್ಮಗಳ ತ್ಯಾಗವು **ತಾಮಸಃ ಪರಿಕೀರ್ತಿತಃ**-ತಾಮಸವೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಇಲ್ಲಿ ಸನ್ನ್ಯಾಸ ತ್ಯಾಗ ಶಬ್ದಗಳು ಸಮಾನಾರ್ಥಕಗಳಾಗಿ ಪ್ರಯೋಗಿಸಲ್ಪಟ್ಟಿವೆ." (೩) "**ಅನಿಷ್ಟ ಮಿಷ್ಟಂ ಮಿಶ್ರಂಚ**-ಅನಿಷ್ಟವು ದುಃಖರೂಪವಾದುದು, ಇಷ್ಟಂ ಸುಖರೂಪವಾದುದು, **ಮಿಶ್ರಂ**-ಸುಖದುಃಖ ಮಿಶ್ರವಾದುದು, ಹೀಗೆ **ಕರ್ಮಣಃ ಫಲಮ್**-ಕರ್ಮಗಳಿಗೆ ಫಲವು, **ತ್ರಿವಿಧಂ**-ಮೂರು ವಿಧವುಳ್ಳುದು; ಹೀಗೆ ಈ ಮೂರು ಫಲಗಳೂ ಯಾರಿಗೆ ಎಂದರೆ **ಅತ್ಯಾಗಿನಾಂ ಪ್ರೇತ್ಯ ಭವತಿ**-ತ್ಯಾಗ ಮಾಡದವರಿಗೆ ದೇಹ ವಿಯೋಗವಾದನಂತರ ಉಂಟಾಗುತ್ತದೆ, ನರಕವೋ, ಸ್ವರ್ಗವೋ, ಇಹಲೋಕ ಪ್ರಾಪ್ತಿಯೋ ಉಂಟಾಗುತ್ತದೆ, ಅಂತೂ ಸಂಸಾರವು ಅವರಿಗೆ ತಪ್ಪಿದ್ದಲ್ಲವು; **ಅತ್ಯಾಗಿಗಳು ಯಾರೆಂದರೆ**-ಕರ್ಮ ಫಲವನ್ನೂ, ಕರ್ಮದಲ್ಲಿ ಮಮತೆಯನ್ನೂ, ಕರ್ಮ ಕರ್ತೃತ್ವವನ್ನೂ ಬಿಡದವರು; ಇಂತವರಿಗೀಗ ಈ ಅಸ್ಥಿರವಾದ ಫಲಗಳು; ಆದರೆ, **ಸನ್ನ್ಯಾಸಿನಾಂತು**-ಹೀಗೆ ಮೂರನ್ನು ಬಿಟ್ಟವರಿಗಾದರೋ, **ನಕ್ವಚಿತ್**-ಇಂತಹ ಅನಿಷ್ಟ, ಇಷ್ಟ, ಮಿಶ್ರ ಫಲಗಳು ಸ್ವಲ್ಪವಾಗಲಿ ಇಲ್ಲವು; ಅಂತವರಿಗೆ ಮುಕ್ತಿಯು ಲಭಿಸುತ್ತದೆ ಎಂಬ ತಾತ್ಪರ್ಯವು. ಇಲ್ಲಿ **ಅತ್ಯಾಗಿನಾಂ**-ಎಂದು ಹೇಳಿ, ಅನಂತರ **ತ್ಯಾಗಿನಾಂ**-ಎಂದು ಹೇಳುವ ಸಂದರ್ಭದಲ್ಲಿ, **ಸನ್ನ್ಯಾಸಿನಾಂ**-ಎಂದು ಹೇಳಿರುವದರಿಂದ **ತ್ಯಾಗ ಸನ್ನ್ಯಾಸ** ಶಬ್ದಗಳು ಸಮಾನಾರ್ಥಕಗಳೆಂಬುದು ವ್ಯಕ್ತವು ಎಂಬ ಭಾವವು." **ಇತಿ**-ಎಂಬದಾಗಿ, **ಪರಸ್ಪರ ಪರ್ಯಾಯತಾ ದರ್ಶನಾಚ್ಚ**-ಪರಸ್ಪರ ಸಮವಾದ ಪರ್ಯಾಯ ಪದಗಳಾಗಿ ತೋರಿ ಬರುವದರಿಂದ, **ತಯೋರೇಕಾರ್ಥತ್ವಂ**-ಆ ಸನ್ನ್ಯಾಸ ತ್ಯಾಗವೆರಡು ಶಬ್ದಗಳು ಒಂದೇ ಅರ್ಥವುಳ್ಳವೆಂಬುವದು, **ಪ್ರತೀಯತೇತಿ**-ತೋರಿಬರುತ್ತದೆಂದು **ನಿಶ್ಚೀಯತೇ**-ನಿಶ್ಚಯಿಸಲ್ಪಟ್ಟಿರುತ್ತದೆ. ಯಾರಿಂದ ನಿಶ್ಚಯಿಸಲ್ಪಟ್ಟಿರುತ್ತದೆ? ಎಂದರೆ "**ಭಗವತಾ ಶ್ರೀ ಕೃಷ್ಣೇನ**" ಎಂದು ಇಟ್ಟುಕೊಳ್ಳತಕ್ಕದ್ದು. ಆದುದರಿಂದ ಶ್ರೀ ಕೃಷ್ಣ ಭಗವಾನರವರ ಸಿದ್ಧಾನ್ತಾಭಿಪ್ರಾಯವು ಸನ್ನ್ಯಾಸ ತ್ಯಾಗ ಶಬ್ದಗಳು ಭಿನ್ನಾರ್ಥವುಳ್ಳವುಗಳಲ್ಲವು, ಒಂದೇ ಅರ್ಥವುಳ್ಳವು; ಇವುಗಳ ಅರ್ಥವೇನೆಂದರೆ ಕರ್ಮಾನುಷ್ಠಾನದಲ್ಲಿ, **ಫಲವನ್ನೂ**, ನಾನು ಮಾಡಿದೆನೆಂಬ **ಮಮತೆಯನ್ನೂ** ಪರಮಪುರುಷನು ತಾನೇ ಮಾಡಿದನೇ ವಿನಾ ತನಗೆ ಕರ್ತೃತ್ವವಿಲ್ಲವೆಂದೂ ಭಾವಿಸಿ ಈ ಮೂರನ್ನೂ ತ್ಯಾಗಮಾಡುವದು ಎಂಬ ತಾತ್ಪರ್ಯವು. ಆದುದರಿಂದ ಕಾಮ್ಯಕರ್ಮಗಳ ಸ್ವರೂಪತಃ ಸನ್ನ್ಯಾಸವೂ ಸನ್ನ್ಯಾಸವಲ್ಲವು; ಸರ್ವಕರ್ಮಫಲ ತ್ಯಾಗ ಮಾತ್ರವೂ **ತ್ಯಾಗ** ಶಬ್ದಾರ್ಥವಲ್ಲವು. ಇವರುಗಳು ಸನ್ನ್ಯಾಸ, ತ್ಯಾಗ ಶಬ್ದಾರ್ಥಗಳನ್ನು ಸರಿಯಾಗಿ ಗ್ರಹಿಸದಿದ್ದರೂ ಅವರುಗಳ ಅಭಿಪ್ರಾಯಗಳು ಮಾನನೀಯವಾದುದರಿಂದ ಅವರುಗಳನ್ನು ಕವಿಗಳು, ವಿಚಕ್ಷಣರು ಎಂದು ಹೇಳಿದರು. ಇದರಿಂದ ಲೋಕಗರ್ಹಿತಾರ್ಥಗಳನ್ನು ಹೇಳುವವರು ನಿಂದ್ಯರೇ ವಿನಾ, ಸರಿಯಾದ ಅಭಿಪ್ರಾಯವನ್ನು ಗ್ರಹಿಸದಿದ್ದರೂ

**ಮೂ. ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹು ರ್ಮನೀಷಿಣಃ ।**
**ಯಜ್ಞ ದಾನ ತಪಃ ಕರ್ಮ ನ ತ್ಯಾಜ್ಯ ಮಿತಿ ಚಾಪರೇ ॥೩॥**

ಲೋಕಗರ್ಹಿತವಲ್ಲದ ಅಭಿಪ್ರಾಯವನ್ನು ಹೇಳುವವರು ಮಹನೀಯರಾಗಿ ಮಾನ್ಯರೇ ಎಂದು ಹೇಳಿರುವದರಿಂದ ಸರ್ವೇಶ್ವರನು ತನ್ನ ಉದಾರ ಭಾವವನ್ನು ತೋರ್ಪಡಿಸಿರುವದರಿಂದ, ಹೀಗೆಯೇ ಭಿನ್ನಾಭಿಪ್ರಾಯವುಳ್ಳವರೂ ಉದಾರಭಾವದಿಂದ ಇರಬೇಕೆಂದೂ ಪರಸ್ಪರ ದ್ವೇಷಾಸೂಯೆಗಳು ಕೂಡದೆಂದೂ ಲೋಕಕ್ಕೆ ಉಪದೇಶಿಸಿರುತ್ತಾರೆ. ಮುಕ್ತದೆಶೆಯಲ್ಲಿ ಪರಮಾತ್ಮನೊಂದಿಗೆ ಸಾಮ್ಯವು ದೊರೆಯುತ್ತದೆಂದು ಶ್ರುತಿ ಹೇಳಿದರೆ, ಒಬ್ಬರು ಆತನೊಂದಿಗೆ ಸಾಯುಜ್ಯವು, ಇನ್ನೊಬ್ಬರು ಸ್ವರೂಪೈಕ್ಯವು, ಇನ್ನೊಬ್ಬರು ಆನಂದದಲ್ಲಿ ತಾರತಮ್ಯವು, ಲಭಿಸುತ್ತದೆಂದು ಅರ್ಥಮಾಡಿದರೆ, ದೇಹ ವಿಯೋಗವಾದನಂತರ ಯಾವುದು ಸರಿ ಎಂಬುದು ಸ್ವತಃ ವೇದ್ಯವಾಗುವದರಿಂದ ಈ ಅಭಿಪ್ರಾಯಗಳಿಗಾಗಿ ಪರಸ್ಪರ ದ್ವೇಷಾಸೂಯೆಗಳು ಕೂಡದೆಂಬಂಶವು ಇಲ್ಲಿ ಶಿಕ್ಷಿತವು. ಅಂತವರನ್ನು ಪರಸ್ಪರವಿಚಕ್ಷಣರೆಂದೇ ಭಾವಿಸತಕ್ಕದ್ದು. ಮುಂದಿನ ಶ್ಲೋಕದಲ್ಲಿ ಕರ್ಮಸ್ವರೂಪ ತ್ಯಾಗವನ್ನು ಬೋಧಿಸುವದು ಸರಿಯಲ್ಲವೆಂದು ಹೇಳುವ ಪ್ರಕರಣದಲ್ಲೂ, ಅವರನ್ನೂ **ಮನೀಷಿಣಃ** ಎಂದೇ ಶ್ರೀ ಕೃಷ್ಣಭಗವಾನ್‌ರವರೇ ಹೇಳಿರುವಾಗ, ಅಂತಹ ಅಭಿಪ್ರಾಯವುಳ್ಳವರನ್ನು ನಾವು ನಿಂದಿಸಬಹುದೋ? ಶ್ರೀ ಕೃಷ್ಣಭಗವಾನ್‌ರವರು ಹೇಳಿರುವ ಹಾಗೆ ಅಭಿಪ್ರಾಯವು ಸರಿಯಾಗುವದಿಲ್ಲವೆಂದು ಇಷ್ಟು ಮಾತ್ರ ಹೇಳಬಹುದೇ ವಿನಾ, ನಿಂದಿಸಲು ಸ್ವಾಮಿಯ ಅನುಮತಿಯಿಲ್ಲವು, ಅಂತವರೂ ಮಾನ್ಯರೇ ಸರಿ. ಸ್ವಾಮಿ ದೇಶಿಕರವರೂ "**ಆಪಾತ ಶಾನ್ತಿ ಮಧುರಾಃ ಪುನರಸ್ಮದೀಯಾಃ ಅನ್ಯೋನ್ಯ ವೈರ ಜನನೀ ವಿಜಹಾತ್ವ ಸೂಯಾ**" ಎಂದು ಪರಸ್ಪರ ಅಸೂಯೆಯಿಂದ, ಭಿನ್ನಾರ್ಥವಾದಿಗಳನ್ನು ನಿಂದಿಸ ಕೂಡದೆಂದು ಉಪದೇಶಿಸಿರುತ್ತಾರೆ.

**ಮೂಲಕ್ಕೆ ಅರ್ಥವು.** ಹಿಂದಿನ ಶ್ಲೋಕದಲ್ಲಿ ವಿವಾದವು, ಕಾಮ್ಯ ಕರ್ಮಗಳ ಸ್ವರೂಪ ತ್ಯಾಗ, ಮತ್ತು ಎಲ್ಲಾ ಕರ್ಮಗಳ ಫಲತ್ಯಾಗಗಳಲ್ಲಿ ಎಂದು ಹೇಳಲ್ಪಟ್ಟವು. ಈ ಶ್ಲೋಕದಲ್ಲಿ ಕರ್ಮಗಳು ದೋಷಯುಕ್ತವಾಗಿ ಬಂಧಕವಾಗಿ ಅವು ತ್ಯಾಗವೆಂದೂ, ದೋಷಯುಕ್ತವಲ್ಲವು ಆದುದರಿಂದ ತ್ಯಾಜ್ಯವಲ್ಲವೆಂಬ ವಾದಗಳು ಉಪಪಾದಿಸಲ್ಪಡುತ್ತವೆ. ಹೀಗೆ ಇನ್ನೂ ಕೆಲವು ಪ್ರಾಜ್ಞರುಗಳ ಯಥಾರ್ಥವಲ್ಲದ ಭಿನ್ನಾಭಿಪ್ರಾಯಗಳನ್ನು ಉಪಪಾದಿಸುತ್ತಾರೆ. **ಏಕೇ ಮನೀಷಿಣಃ**-ಕೆಲವು ಬುದ್ಧಿಯುಕ್ತರೂ ಸಹ, **ಕರ್ಮ**-ಯಜ್ಞ ದಾನ ತಪಸ್ಸು ಮೊದಲಾದವೆಲ್ಲಾ, **ದೋಷವತ್**-ಪ್ರವೃತ್ತಿ ಧರ್ಮಗಳಾಗಿ ಬಂಧಕಗಳಾದುದರಿಂದ ದೋಷಯುಕ್ತವಾದವುಗಳ ಹಾಗೆ, **ತ್ಯಾಜ್ಯಂ**-ಸ್ವರೂಪತಃ ಬಿಡತಕ್ಕವು ಎಂದು, **ಪ್ರಾಹುಃ**-ಹೇಳುತ್ತಾರೆ. ಮುಂದೆ ಯಜ್ಞ ದಾನ ತಪಸ್ಸುಗಳನ್ನು ಸ್ವರೂಪತಃ ಎಂದಿಗೂ ಬಿಡತಕ್ಕವಲ್ಲವೆಂದೂ ಹೇಳುತ್ತಾರೆ. ತಮ್ಮ ಸಿದ್ಧಾನ್ತವನ್ನು ಮುಂದೆ ೫ನೆಯ ಶ್ಲೋಕದಲ್ಲಿ ಉಪದೇಶಿಸುತ್ತಾರೆ. ಇಂತವರನ್ನು **ಮನೀಷಿಣಃ**-ಜ್ಞಾನವುಳ್ಳವರೆಂದು ಹೇಳಿದುದು ಹೇಗೆ? ಎಂಬುದು ನ್ಯಾಯವಾದ ಪ್ರಶ್ನೆಯು. ಹೇಗೆ ಮನೀಷಿಣಃ ಎಂದರೆ ಅವರುಗಳು ಹೇಳಿರುವದು ಸ್ವಲ್ಪಮಟ್ಟಿಗೆ ನ್ಯಾಯವೇ. ಕರ್ಮಗಳಿಗೆ ಫಲವುಂಟು, ಆದುದರಿಂದಲೇ ಅವುಗಳೆಲ್ಲಾ ಪ್ರವೃತ್ತಿ ಧರ್ಮಗಳಾಗಿ ಬಂಧಕಗಳಾಗುವದರಲ್ಲಿ ಸಂದೇಹವಿಲ್ಲವು; ಆದುದರಿಂದಲೇ ಮೋಕ್ಷಧರ್ಮದಲ್ಲಿ "**ಪ್ರವೃತ್ತಿಃಪುನರಾವೃತ್ತಿ ರ್ನಿವೃತ್ತಿಃ ಪರಮಾಗತಿಃ**" ಎಂದು ಹೇಳಿರುವದರಿಂದ, ಅಷ್ಟುಮಟ್ಟಿಗೆ ಮಾತ್ರ ಅವರು ಮನೀಷಿಗಳು. ಇನ್ನು ಕೆಲವರು ವೈದಿಕ ಕರ್ಮಗಳನ್ನು ಸ್ವರೂಪತಃ ಎಂದಿಗೂ ಬಿಡತಕ್ಕದ್ದಲ್ಲವೆಂದು ಹೇಳುವವರೂ ಪ್ರಾಜ್ಞರೇ. ಏಕೆಂದರೆ ನಿತ್ಯ ನೈಮಿತ್ತಿಕ ಕರ್ಮಗಳು ವಿಹಿತ ಕರ್ಮಗಳಾಗಿ ಬಿಡತಕ್ಕದ್ದಲ್ಲವೆಂಬುದು ನ್ಯಾಯವೇ ಸರಿ. ಆದರೆ ಸನ್ಯಾಸ ತ್ಯಾಗ ಶಬ್ದಗಳ ಅರ್ಥವು ಇವರುಗಳಿಗೆ ತಿಳಿಯದು; ಆದುದರಿಂದ ಅವುಗಳ ಅರ್ಥವನ್ನು ಮುಂದೆ ಹೇಳುತ್ತಾರೆ. ಆದರೆ ಧರ್ಮಗಳು ಬಂಧ

**ಭಾ. ಏಕೇ ಮನೀಷಿಣಃ-ಕಾಪಿಲಾ ವೈದಿಕಾಶ್ಚ ತನ್ಮತಾನುಸಾರಿಣೋ ರಾಗಾದಿ ದೋಷವತ್ಬಂಧಕತ್ವಾತ್ ಸರ್ವಂ ಯಜ್ಞಾದಿಕಂ ಕರ್ಮ ಮುಮುಕ್ಷುಣಾಂ ತ್ಯಾಜ್ಯ ಮಿತಿ ಪ್ರಾಹುಃ. ಅಪರೇ ಪಣ್ಡಿತಾ ಯಜ್ಞಾದಿಕಂ ಕರ್ಮ ನತ್ಯಾಜ್ಯ ಮಿತಿ ಪ್ರಾಹುಃ ।**

---

ಕವಾಗದೆ "**ನಕರ್ಮ ಲಿಪ್ಯತೇ ನರೇ**" ಎಂಬಲ್ಲಿ ಹೇಳಿರುವ ಹಾಗೆ, ಕರ್ಮಲೇಪ ಉಂಟುಮಾಡಿಕೊಳ್ಳದಿರುವುದು ಹೇಗೆ ಎಂಬುದನ್ನು ತಿಳಿಯದೆ ಹೇಳಿದ ಅಭಿಪ್ರಾಯವಾದುದರಿಂದ ಅಪಸಿದ್ಧಾನ್ತವು. ಆದುದರಿಂದಲೇ ಮುಂದಿನ ಶ್ಲೋಕದಲ್ಲಿ ಇವು ಯಾವುವೂ ಸರಿಯಾದ ಅಭಿಪ್ರಾಯಗಳಲ್ಲವೆಂದು ಹೇಳಿ "**ನಿಶ್ಚಯಂ ಶೃಣುಮೇ**" ಎಂದಾರಂಭಿಸಿ ಯಥಾರ್ಥವಾದ ಸಿದ್ಧಾನ್ತವನ್ನು ತಿಳಿಸುತ್ತಾರೆ. ಇದರಿಂದ ವಾಕ್ಯಜನ್ಯಜ್ಞಾನ ಉಂಟಾದ ನಂತರ ವರ್ಣಾಶ್ರಮ ಧರ್ಮಗಳು ಬೇಕಿಲ್ಲವೆಂಬವಾದವು ಪೂರ್ವಪಕ್ಷ ರೀತಿಯಲ್ಲಿ ನಿರಾಕರಿಸಲ್ಪಟ್ಟಿತು. ಕೆಲವರ ಅಭಿಪ್ರಾಯವು ಕರ್ಮಾನುಷ್ಠಾನವು ಕೆಸರಲ್ಲಿ ಕಾಲಿಟ್ಟ ಹಾಗೆ; ಕೆಸರಲ್ಲಿ ಕಾಲಿಡುವದು ಏಕೆ? ಅನಂತರ ಅದನ್ನು ತೊಳೆದುಕೊಳ್ಳುವದು ಏಕೆ? ಎಂದು ಕೇಳುವರು. "**ಪ್ರಕ್ಷಾಳನಾದ್ಧಿ ಪಙ್ಕಸ್ಯ ದೂರಾದಸ್ಪರ್ಶನಂ ವರಮ್**" ಎಂಬುದು ಅವರುಗಳ ಅಭಿಪ್ರಾಯವು. ಇದಕ್ಕೆ ಸಮಾಧಾನವು ವಿಹಿತ ಕರ್ಮಾನುಷ್ಠಾನವು ಕೆಸರು ಮುಟ್ಟಿದಹಾಗಲ್ಲವು. ಅಂತಹ ವಿಹಿತ ಕರ್ಮಗಳನ್ನು ಫಲಾದ್ಯಭಿಸಂಧಿಯಿಲ್ಲದೆ ಅನುಷ್ಠಿಸಿದರೆ, ಪಾವನರೂಪವಾಗಿ, ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪಗಳ ನಿವೃತ್ತಿಯುಂಟಾಗುತ್ತದೆಂದು ಆತ್ಮಸ್ವರೂಪಜ್ಞಾನವೂ ಉಂಟಾಗುತ್ತದೆಂದೂ ಹೇಳಲ್ಪಟ್ಟಿರುತ್ತದೆ. ಉತ್ತರಾರ್ಧದಿಂದ ಅದಕ್ಕೆ ಪ್ರತಿದ್ವಂದ್ವಿಯಾಗಿ ಇನ್ನು ಕೆಲವರ ಅಭಿಪ್ರಾಯವನ್ನು ತಿಳಿಸುತ್ತಾರೆ. **ಅಪರೇ**-ಪೂರ್ವಾರ್ಧದಲ್ಲಿ **ಏಕೇ ಮನಿಷಿಣಃ** ಎಂದಿರುವದರಿಂದ, **ಅಪರೇ** ಎಂದರೆ **ಅಪರೇ ಮನಿಷಿಣಃ**-ಇತರ ಪಂಡಿತರು, **ಯಜ್ಞದಾನ ತಪಸ್ಸುಗಳಾದ** ವೈದಿಕ ಕರ್ಮಗಳು, ದೋಷವತ್ತಾದವು, ಬಂಧಕಗಳೆಂಬ ಭಾವದಿಂದ, **ನತ್ಯಾಜ್ಯಮಿತಿ**-ಸ್ವರೂಪತಃ ಬಿಡತಕ್ಕವುಗಳಲ್ಲವೆಂದು, **ಪ್ರಾಹುಃ**-ಹೇಳುತ್ತಾರೆ. ಇವರುಗಳೂ ಈ ವಿವಾದಾಸ್ಪದವಾದ ವಿಷಯದಲ್ಲಿ ಎಷ್ಟುಮಾತ್ರ ಹೇಳಿದರೋ ಅಷ್ಟುಮಾತ್ರ ಯುಕ್ತವಾದುದೇ. ಆದರೆ ಅದು ಹೇಗೆ ದೋಷವತ್ತಾದುದಲ್ಲವೆಂಬುದನ್ನು ತಿಳಿಸಲಿಲ್ಲವು. ಹೀಗೆ ಮೇಲೆ ವಿವಾದಾಸ್ಪದವಾಗಿ ಹೇಳಿದ ನಾಲ್ಕು ವಿಧಗಳಾದ ಅಭಿಪ್ರಾಯಗಳೂ ಸರಿಯಲ್ಲವೆಂದು ಹೇಳಿ ತಮ್ಮ ಸಿದ್ಧಾನ್ತಾಭಿಪ್ರಾಯವು ಯಾವುದೆಂಬುದನ್ನು ಳಸೆಯ ಶ್ಲೋಕವನ್ನಾರಂಭಿಸಿ ಉಪಪಾದನೆಯನ್ನು ಮಾಡಿ ಹೇಳುತ್ತಾರೆ. ಅಥವಾ ಈ ನಾಲ್ಕು ವಿಧ ಅಭಿಪ್ರಾಯಗಳಲ್ಲಿ ಈ ನಾಲ್ಕನೆಯ ಅಭಿಪ್ರಾಯವೇ ತಮ್ಮ ಅಭಿಪ್ರಾಯವಾಗಿ ಕೊನೆಯಲ್ಲಿ ಉಪಪಾದಿಸಿದರೆಂದೂ ಅರ್ಥ ಮಾಡಬಹುದೆಂದು ಶ್ರೀ ನಿಗಮಾನ್ತ ದೇಶಿಕರವರು ಉಪಪಾದಿಸಿರುತ್ತಾರೆ. ॥೩॥

**ಭಾಷ್ಯಾರ್ಥವು.** ಹಿಂದಿನ ಶ್ಲೋಕದಲ್ಲಿ ಕೆಲವರು ಸ್ವರೂಪ ತ್ಯಾಗವೆಂದೂ, ಇನ್ನು ಕೆಲವರು ಸ್ವರೂಪತ್ಯಾಗ ಕೂಡದು ; ಶಾಸ್ತ್ರದಲ್ಲಿ ಹೇಳಿರುವದು ಫಲತ್ಯಾಗವೆಂದೂ ವಿವಾದವು; ಈ ಶ್ಲೋಕದಲ್ಲಿ ಕರ್ಮಗಳು ಪ್ರವೃತ್ತಿ ಧರ್ಮಗಳಾಗಿ ದೋಷಯುಕ್ತವೆಂದೂ ಇನ್ನು ಕೆಲವರು ದೋಷಯುಕ್ತವಲ್ಲವೆಂದೂ, ವಿವಾದ ತೋರ್ಪಡಿಸುತ್ತಾರೆ. **ಏಕೇ ಮನೀಷಿಣಃ** ಒಂದು ಪಂಗಡದ ಪಂಡಿತರು, ಅವರು ಯಾರೆಂದರೆ **ಕಾಪಿಲಾ ವೈದಿಕಾಶ್ಚ**-ವೇದಬಾಹ್ಯರಾದ ಕಾಪಿಲ ಮತ್ತು ವೇದಪ್ರಾಮಾಣ್ಯವನ್ನು ಒಪ್ಪಿಕೊಳ್ಳುವ ಕೆಲವು ವೈದಿಕ ಸಿದ್ಧಾಂತಿಗಳೂ ಸಹ, ಎಂದರೆ ನಿರೀಶ್ವರ ಸಾಂಖ್ಯರೂ ಸೇಶ್ವರಸಾಂಖ್ಯರೂ ಎಂಬ ಭಾವವು. **ತನ್ಮತಾನುಸಾರಿಣಃ**-ಆ ಮತಗಳನ್ನು ಅನುಸರಿಸಿರುವ ಇತರರೂ ಸಹ, **ರಾಗಾದಿ ದೋಷವತ್**-ಸಙ್ಗವೂ ಅದರಲ್ಲೇ ಮಮತೆ 'ಇತ್ಯಾದಿ ದೋಷಗಳಹಾಗೆ, ಅಥವಾ ಅಂತಹ ಕರ್ಮಗಳೇ ದೋಷಯುಕ್ತವೆಂದು ಭಾವಿಸಿ ಎಂದೂ, ಮೂಲದ **ದೋಷವತ್** ಎಂಬುದಕ್ಕೆ ಅರ್ಥ ಮಾಡ

ಬಹುದೆಂದು ವ್ಯಾಖ್ಯಾನ ಮಾಡಲ್ಪಟ್ಟಿದೆ. **ಬಂಧಕತ್ವಾತ್**-ಪುನಃ ಪುನಃ ಬಂಧಕ ಲಕ್ಷಣ ವುಳ್ಳವುಗಳಾದುದರಿಂದ **ಸರ್ವಂ ಯಜ್ಞಾದಿಕಂ ಕರ್ಮ**-ಸಮಸ್ತವಾದ ಯಜ್ಞವೇ ಮೊದ ಲಾದ ಕರ್ಮವು, **ಮುಮುಕ್ಷುಣಾ**-ಮೋಕ್ಷಾರ್ಥಿಯಿಂದ, **ತ್ಯಾಜ್ಯಮಿತಿ**-ಬಿಡಲು ಯೋಗ್ಯ ವೆಂದು, **ಪ್ರಾಹುಃ**-ಹೇಳುತ್ತಾರೆ.—

ಕಾಪಿಲ ಸಿದ್ಧಾಂತಪ್ರಕಾರ ಯಜ್ಞದ ಪಶುಹಿಂಸೆಯು ನಿಷಿದ್ಧವು; ಆದುದರಿಂದ ಅಂತಹ ಸಿದ್ಧಾಂತಾನುಸಾರ ಯಜ್ಞಾದಿಗಳು ಬಂಧಕಗಳು. ಇನ್ನು ಕೆಲವರು ವಾಕ್ಯಜನ್ಯಜ್ಞಾನ ಉಂ ಟಾಗಿ ಉಪಾಸನದಲ್ಲಿ ಪ್ರವರ್ತಿಸಿರುವನಿಗೆ ಕರ್ಮಗಳು ಬಂಧಕಗಳಾಗುವದರಿಂದ ಯಜ್ಞಾದಿಗಳು ಕೂಡದೆಂದು ಹೇಳುವರು. ಇನ್ನೂ ಕೆಲವರು ಪ್ರಪನ್ನನಿಗೆ ಸಂಧ್ಯಾವಂದನಾದಿಗಳೂ ಪಂಚ ಮಹಾ ಯಜ್ಞಗಳೂ, ಯಾವುವೂ ಆವಶ್ಯಕವಿಲ್ಲವೆಂದೂ ಅಭಿಪ್ರಾಯ ಪಡುವರು. **ಮನೀ ಷಿಣಃ** ಎಂದು ಶ್ಲಾಘಿಸಿರುವಾಗ ವೇದಬಾಹ್ಯರೆಂದು ಅರ್ಥಮಾಡಬಹುದೋ ಎಂದರೆ ವೇದ ಪ್ರಾಮಾಣ್ಯವನ್ನು ಒಪ್ಪಿಕೊಂಡೂ ಈಶಾವಾಸ್ಯಾದಿ ಉಪನಿಷತ್ತುಗಳೂ, ಶ್ರೀ ವಿಷ್ಣುಪುರಾ ಣಾದಿ ಸ್ಮೃತಿಗಳೂ, ಬ್ರಹ್ಮಸೂತ್ರವೂ ಎಲ್ಲವೂ, ಹಾಗೆಯೇ ಈ ಗ್ರಂಥದಲ್ಲೆ ಮುಂದಿನ ಆನೆಯ ಶ್ಲೋಕವನ್ನಾರಂಭಿಸಿ ಹೇಳುವ ಭಗವದ್ವಾಕ್ಯಗಳೂ ಹೀಗೆ ಎಲ್ಲಕ್ಕೂ ವಿರೋಧವಾದ ಕರ್ಮ ಸ್ವರೂಪ ಸನ್ಯಾಸವನ್ನು ಹೇಳುತ್ತಿರುವಾಗ ಕಾಪೀರನ್ನು ಏಕೆ ಅದೇ ಗುಂಪಿನಲ್ಲೇ ಸೇರಿಸ ಕೂಡದು ಎಂದು ಭಾವಿಸಿ ಹೇಳಿದ ಮಾತಾಗಿರುತ್ತದೆ ಆದುದರಿಂದ ಮೊದಲು ವೇದಬಾಹ್ಯ ರಾದ ಕಾಪಿಲರನ್ನೂ, ಅನಂತರ ವೈದಿಕಾಕ್ಷ, ವೇದಪ್ರಮಾಣವನ್ನೂ ಒಪ್ಪಿಕೊಂಡೂ ವೇದ ವಿಧಿಗಳಿಗೆ ವಿರೋಧವಾಗಿ ಅರ್ಥಮಾಡುವ ವೈದಿಕರೆಂದೂ ಪ್ರಯೋಗವು. ಆದರೆ ಅವರು ಗಳು ಪಂಡಿತರು ಹೇಗೆ ಎಂದರೆ **ರಾಗಾದಿ ದೋಷದ ಹಾಗೆ ಬಂಧಕ**ಗಳು ಎಂದು ಹೇಳಿದುದ ರಿಂದ. ಆದರೆ ಶಾಸ್ತ್ರಗಳಲ್ಲಿ ಕರ್ಮಸ್ವರೂಪ ತ್ಯಾಗವು ಕೂಡದು ಎಂದು ವಿಧಿಸಿರುತ್ತದಲ್ಲಾ, ಬಂಧಕಗಳಲ್ಲದ ಹಾಗೆ ಹೇಗೆ ಅನುಷ್ಠಿಸತಕ್ಕದ್ದು?, ಅವುಗಳ ಅನುಷ್ಠಾನ ವಿಧಿಯು ಮೋಕ್ಷಾ ರ್ಥಿಗೆ ಹೇಗೆ ಎಂದು ಪರಿಗಣಿಸಿದ ಸಿದ್ಧಾಂತವಾದುದರಿಂದ ಅಪಸಿದ್ಧಾಂತವೆಂಬ ಭಾವವು. ಅಥವಾ ಕರ್ಮವು ಪ್ರಕೃತಿಯ ವಿಜೃಂಭಣೆಯು; ಪ್ರಕೃತಿಯ ಸಂಬಂಧವಿರುವದರಿಂದಲೇ ಬಂಧಕವೆಂಬ ಭಾವವಾದರೂ ಆಗಬಹುದು. ಆದರೆ ಬುಭುಕ್ಷುವಿನ ಕರ್ಮವೂ ಪರಮ ಭಾಗ ವತನಾಗಿ ವಿರಕ್ತಿ ಭಾವದಲ್ಲಿರುವ ಮುಮುಕ್ಷುವಿನ ಕರ್ಮವೂ ಎರಡೂ ಎಂದಿಗಾದರೂ ಒಂದೇ ಆದೀತೇ? ಎಂಬುದನ್ನು ಅವರು ಪರ್ಯಾಲೋಚಿಸಲಿಲ್ಲವು ಪೂರ್ವಾರ್ಧದಲ್ಲಿ ಸುಮ್ಮನೆ ಕರ್ಮ ವೆಂದಿರುತ್ತದೆ, ಎಂತಹ ಕರ್ಮವೆಂದು ಹೇಳಲಿಲ್ಲವು. ಪ್ರಕರಣಾತ್ ಮೋಕ್ಷಾರ್ಥಿಯ ಸರ್ವ ಕರ್ಮವು ಎಂದೇ ಅರ್ಥ ಮಾಡಬೇಕಾಗಿರುವದರಿಂದ, **ಸರ್ವಂ ಯಜ್ಞಾದಿಕಂ ಕರ್ಮ** ಎಂದು ವ್ಯಾಖ್ಯಾನವು; ಹಾಗೆಯೇ **ಮುಮುಕ್ಷುಣಾ** ಎಂಬ ಪ್ರಯೋಗವೂ ಸಹ. ಹಾಗಲ್ಲದೆ ಸರ್ವ ಕರ್ಮಗಳೂ ತ್ಯಜಿಸತಕ್ಕವು ಎಂದು ಅರ್ಥ ಮಾಡಿದರೆ, ವೇದಸಮ್ಮತವಾದ ಮತ್ತು ಲೋಕ ಸಮ್ಮತವಾದ ಉಪದೇಶವಾಗುವದಿಲ್ಲವಾದುದರಿಂದ ಅಂತಹ ಉಪದೇಶಕರನ್ನು **ಮನೀಷಿಣಃ** ಎಂದು ಹೇಳಲು ಸಾಧ್ಯವಿಲ್ಲವು. ಮುಂದೆ ಉತ್ತರಾರ್ಧಕ್ಕೆ ವ್ಯಾಖ್ಯಾನವನ್ನು ದಯಪಾಲಿ ಸುತ್ತಾರೆ—**ಅಪರೇ ಪಂಡಿತಾಃ**-ಬೇರೆ ಇನ್ನೊಂದು ಪಂಗಡದ ಪಂಡಿತರು, **ಯಜ್ಞಾದಿಕಂ**-ಯಜ್ಞ ದಾನ ತಪಸ್ಸುಗಳಾದ, **ಕರ್ಮ**-ಕರ್ಮವು, **ನತ್ಯಾಜ್ಯ ಮಿತಿಪ್ರಾಹುಃ**-ಬಿಡತಕ್ಕದ್ದಲ್ಲ ವೆಂದು ಹೇಳುತ್ತಾರೆ. ಅಷ್ಟು ಮಾತ್ರ ಸರಿಯಾದ ಅಭಿಪ್ರಾಯವಾದುದರಿಂದ **ಅಪರೇ** ಎಂದರೆ **ಅಪರೇ ಪಂಡಿತಾಃ** ಎಂಬ ವ್ಯಾಖ್ಯಾನವು. ಇವರೂ ಹೇಗೆ ಅನುಷ್ಠಿಸತಕ್ಕದ್ದೆಂದು ಹೇಳಲಿಲ್ಲವಾದುದರಿಂದ ಸಮಂಜಸವಾದ ಅಭಿಪ್ರಾಯವಲ್ಲವು. ಆದುದರಿಂದಲೇ ಪೂರ್ವಾಭಿ ಪ್ರಾಯವನ್ನು ಮುಂದಿನ ಶ್ಲೋಕದಿಂದಾರಂಭಿಸಿ ಹೇಳುತ್ತಾರೆ

**ಮೂ. ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷ ವ್ಯಾಘ್ರ ತ್ರಿವಿಧ ಸ್ಸಂಪ್ರಕೀರ್ತಿತಃ ॥೪॥**

---

**ಮೂಲಕ್ಕೆ ಅರ್ಥವು.** ತ್ಯಾಗ ಸನ್ನ್ಯಾಸ ಶಬ್ದಗಳು ಸಮಾನಾರ್ಥಕಗಳು ಎಂದು ಉಪಪಾದಿಸುವರಾಗಿ, ಮೊದಲು ಶಾಸ್ತ್ರಗಳಿಂದ ತೋರಿಬರುವ **ತ್ಯಾಗ** ಶಬ್ದದ ನಿಶ್ಚಯಾರ್ಥವನ್ನು ತಿಳಿಸುತ್ತಾರೆ.—**ಹೇ ಭರತ ಸತ್ತಮ**-ಓ ಭರತವಂಶಶ್ರೇಷ್ಠನಾದ ಅರ್ಜುನನೇ, ಅದು ಜ್ಞಾನಿಗಳ ವಂಶವಾದುದರಿಂದ ತಾವು ಈಗ ಪರಮ ಕೃಪಯಾ ಮಾಡುವ ಉಪದೇಶವನ್ನು ಈ ವಿಷಯದಲ್ಲಿ ಗ್ರಹಿಸಲು ನಿನಗೆ ಅರ್ಹತೆಯುಂಟೆಂಬ ಭಾವವು ಸೂಚಿತವು, **ತತ್ರ**-ಈ ಸನ್ನ್ಯಾಸ ತ್ಯಾಗ ವಿಷಯಕವಾದ ವಿವಾದ ಸಂದರ್ಭದಲ್ಲಿ, **ತ್ಯಾಗೇ**-ತ್ಯಾಗದ ವಿಷಯದಲ್ಲಿ, **ಮೇ**-ನನ್ನ ಮೂಲಕವಾಗಿ **ನಿಶ್ಚಯಂ**-ಶಾಸ್ತ್ರ ಸಮ್ಮತವಾಗಿ ಆ ಕಾರಣದಿಂದ ಯಥಾರ್ಥವಾದ ಸಿದ್ಧಾನ್ತಾಭಿಪ್ರಾಯವನ್ನು, **ಶೃಣು**-ಕೇಳು ; **ಹೇ ಪುರುಷ ವ್ಯಾಘ್ರ**-ಓ ಪುರುಷಶ್ರೇಷ್ಠನಾದ ಅರ್ಜುನನೇ, **ತ್ಯಾಗೋಹಿ**-ತ್ಯಾಗವಾದರೋ, **ತ್ರಿವಿಧಃ**-ಮೂರು ವಿಧವನ್ನು ಒಳಗೊಂಡಿರುವದೆಂದು, ಹಿಂದೆಯೇ ೩. ೩೦ನೆಯ ಶ್ಲೋಕದಲ್ಲೂ ಮತ್ತು ಇನ್ನೂ ಇತರ ಸಂದರ್ಭಗಳಲ್ಲೂ, **ಸಂಪ್ರಕೀರ್ತಿತಃ**-ನಿನಗೆ ಮನಸ್ಸಿಗೆ ಚನ್ನಾಗಿ ಹಿಡಿಯುವ ಹಾಗೆ ಉಪಪಾದಿಸಲ್ಪಟ್ಟಿತು. ಅವುಗಳನ್ನು ನೀನು ಸ್ಮರಿಸಿಕೊಳ್ಳತಕ್ಕದ್ದೆಂದು ಹೇಳಿ, ಅದನ್ನು ಜ್ಞಾಪಕಕ್ಕೆ ಕೊಡುವ ಹಾಗೆ ಮುಂದೆ ೬ನೆಯ ಶ್ಲೋಕದಲ್ಲಿ ಅನುವಾದ ಮಾಡಿ ಹೇಳುತ್ತಾರೆ. ಇಲ್ಲಿ **ಮೇ ಶೃಣು** ಎಂದು ಹೇಳುವದಕ್ಕೆ ಕಾರಣವೇನೆಂದರೆ-ಸರ್ವಜ್ಞನಾದುದರಿಂದ ಸರಿಯಾದ ಅರ್ಥವನ್ನು ನಾನು ಹೇಳಬಲ್ಲೆನಾದುದರಿಂದ ನನ್ನ ಮೂಲಕವಾಗಿ ಕೇಳು ; ಇತರಪಂಡಿತರೂ ಹೇಳಿದುದಾದರೆ ಯಥಾರ್ಥವಾಗಿ ಹೇಳುತ್ತಾರೋ ಇಲ್ಲವೋ ಎಂಬ ಸಂಶಯಕ್ಕೆ ಆಸ್ಪದ ಉಂಟು; ನನ್ನ ವಿಷಯದಲ್ಲಿ ಅಂತಹ ಸಂಶಯಕ್ಕೆ ಕಾರಣವೇ ಇರುವದಿಲ್ಲವೆಂದು **ಮೇ ಶೃಣು**-ನನ್ನಿಂದಲೇ ಕೇಳು ಎಂಬ ಪ್ರಯೋಗವು. ತಾನೇ ಉಪದೇಶಿಸುತ್ತಿದ್ದಾನೆ ; ಅರ್ಜುನನು ಕೇಳುತ್ತಲಿದ್ದಾನೆ ; ಹೀಗಿರುವ ಸಂದರ್ಭದಲ್ಲಿ **ಮೇ ಶೃಣು** ಎಂದು ಹೇಳಲು, ಮೇಲಿನ ಅಭಿಪ್ರಾಯವೇ ಕಾರಣವು ಎಂದು ಭಾವಿಸತಕ್ಕದ್ದು. ವಿವಾದಾಸ್ಪದವಾದ ವಿಷಯದಲ್ಲಿ ಭಗವದ್ವಾಕ್ಯವೇ ವೇದವಾಕ್ಯವೇ ಯಥಾರ್ಥಾಭಿಪ್ರಾಯವೆಂಬ ಭಾವವು. ನೀನು ಚನ್ನಾಗಿ ಜ್ಞಾಪಕದಲ್ಲಿಟ್ಟಿದ್ದ ಪಕ್ಷದಲ್ಲಿ ಈ ಸನ್ನ್ಯಾಸ, ತ್ಯಾಗ ಶಬ್ದಗಳು ಬೇರೆ ಅರ್ಥಗಳುಳ್ಳವೆಂಬ ಸಂದೇಹ ಬರುತ್ತಿರಲಿಲ್ಲವೆಂಬ ಭಾವವು. ಆತನ ಪ್ರಶ್ನೆಯು ಸನ್ನ್ಯಾಸ ತ್ಯಾಗ ಶಬ್ದಗಳ ವಿಷಯವಾಗಿದ್ದರೂ, ತ್ಯಾಗ ಶಬ್ದವನ್ನು ಮಾತ್ರ ಇಲ್ಲಿ ಹೇಳಿರುವದರಿಂದ, ಸನ್ನ್ಯಾಸ ಶಬ್ದಕ್ಕೂ ಹಿಂದೆ ಉಪಯೋಗಿಸಿರುವ ಹಾಗೆ ತ್ಯಾಗ ಶಬ್ದಾರ್ಥವೇ ಎಂಬ ಭಾವವು. ಹಿಂದೆ ೬ನೆಯ ಅಧ್ಯಾಯದ ಪ್ರಥಮ ಶ್ಲೋಕದಲ್ಲಿ **"ಅನಾಶ್ರಿತ ಕರ್ಮಫಲಂ ಕಾರ್ಯಂ ಕರ್ಮ ಕರೋತಿಯಃ । ಸಸನ್ನ್ಯಾಸಿ"** ಎಂದು ಹೇಳಲ್ಪಟ್ಟಿರುವದರಿಂದ ಸನ್ನ್ಯಾಸ ತ್ಯಾಗ ಶಬ್ದಗಳು ಏಕಾರ್ಥವುಳ್ಳವೆಂಬುದು ವ್ಯಕ್ತಪಡುತ್ತದೆ. ಮುಂದೆ ೯ನೆಯ ಶ್ಲೋಕದಲ್ಲೂ ಸನ್ನ್ಯಾಸ ತ್ಯಾಗ ಶಬ್ದಗಳು ಸಮಾನಾರ್ಥದಲ್ಲೇ ಪ್ರಯೋಗಿಸಲ್ಪಟ್ಟಿರುತ್ತದೆ. ತ್ಯಾಗವು ಯಾವ ಮೂರನ್ನು ಒಳಗೊಂಡಿದೆ ಎಂದರೆ **"ಮಾ ಕರ್ಮ ಫಲ ಹೇತು ರ್ಭೂಃ"** (ಗೀ. ೨. ೪೭) ಎಂದು ಹಿಂದೆ ಉಪದೇಶಿಸಿರುವ ಹಾಗೆ ಕರ್ಮಕ್ಕೂ ಫಲಕ್ಕೂ ತಾನು ಹೇತುವಲ್ಲವೆಂಬ ಜ್ಞಾನವೂ, ಹಾಗಾದರೆ ಇನ್ನು ಯಾರು ಹೇತುವೆಂಬ ಜ್ಞಾನವಿರಬೇಕೆಂದರೆ— **"ಬ್ರಹ್ಮಾರ್ಪಣಂ ಬ್ರಹ್ಮ ಹವಿಃ"** ಎಂಬ ಶ್ಲೋಕದಲ್ಲಿ ಹೇಳಿರುವ ಹಾಗೆ ಪರಮ ಪುರುಷನೇ ಸರ್ವಕ್ಕೂ ಕಾರಣನೆಂದು ಭಾವಿಸಿ, ಆತನ ಪ್ರೀತ್ಯರ್ಥವಾಗಿ ಆತನಲ್ಲೇ ಸಮರ್ಪಿಸತಕ್ಕದ್ದು. ಈ ಉಪದೇಶವು **"ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯ"** (ಗೀ. ೩. ೩೦) ಎಂಬ ಶ್ಲೋಕದಲ್ಲಿ ಸುವ್ಯಕ್ತವು ; ಆದುದರಿಂದಲೇ **ಸಂಪ್ರಕೀರ್ತಿತಃ, ಸಮ್ಯಕ್ ಪ್ರಕರ್ಷೇಣ ಕೀರ್ತಿತಃ** ಎಂಬ ಭಾವವು. ಈ ಎರಡು ಉಪಸರ್ಗಗಳ ಮೂಲಕ ತಾವು ಚನ್ನಾಗಿ ವಿಶೇಷಿಸಿ ಹೇಳಿರುವದರಿಂದ ಅದನ್ನು ನೀನು ಜ್ಞಾಪಕಕ್ಕೆ ತಂದುಕೊಳ್ಳದೆ ಪ್ರಶ್ನಿಸಿರುತ್ತೀಯೆ ಎಂಬ ಭಾವವು

**ಭಾ. ತತ್ರ—ಏವಂ ನಾದಿ ವಿಪ್ರತಿಪನ್ನೇ, ತ್ಯಾಗೇ, ತ್ಯಾಗ ವಿಷಯ ನಿಶ್ಚಯಂ ಮತ್ತ ಶೃಣು.—ತ್ಯಾಗಃ ಕ್ರಿಯಮಾಣೇಷ್ವೇವ ವೈದಿಕೇಷು ಕರ್ಮಸು ಫಲ**

---

ಸೂಚಿಸಿದ ಹಾಗೆ ತೋರಿ ಬರುತ್ತದೆ. **ಮಯಿ ಸರ್ವಾಣಿಕರ್ಮಾಣಿ ಸನ್ನ್ಯಸ್ಯ** ಎಂಬ ಶ್ಲೋಕ ದಿಂದಲೇ, ಸನ್ನ್ಯಾಸ ಶಬ್ದಕ್ಕೆ ಕರ್ಮದ ಸಂಪೂರ್ಣ ಪರಿತ್ಯಾಗವೆಂದು ಅರ್ಥಮಾಡಲು ಸಾಧ್ಯ ವಾಗುವದಿಲ್ಲವು; ತನ್ನಲ್ಲಿ ಕರ್ಮಗಳನ್ನು ಇಟ್ಟು ಎಂದು ಅರ್ಥವಾಗುವದರಿಂದ, ಕರ್ಮಗಳನ್ನೇನೋ ಮಾಡತಕ್ಕದ್ದು ಅವುಗಳನ್ನು ಪರಮ ಪುರುಷನಲ್ಲಿ ಆತನ ಆರಾಧನಾರೂಪವೆಂದು ಸಮರ್ಪಿಸ ತಕ್ಕದೆಂದು ಅರ್ಥವಾಗುವದರಿಂದಲೇ ಸನ್ನ್ಯಾಸ ಮತ್ತು ತ್ಯಾಗ ಶಬ್ದಾರ್ಥಗಳು **ಒಂದೇ** ಎಂಬುದು ವ್ಯಕ್ತವು. ಅವು ಮೂರು ಯಾವುವೆಂದರೆ, (1) ಕರ್ಮವನ್ನು ತಾನು ಮಾಡಿ ಸಾಧಿ ಸಿದೆ ಎಂಬ ಮಮತೆಯ ತ್ಯಾಗವು, (2) ತನಗೆ ಫಲವು ಬೇಕಾಗಿಲ್ಲವೆಂದು ಫಲತ್ಯಾಗವು, (3) ಸರ್ವೇಶ್ವರನೇ ಮಾಡಿಸಿದನು ಎಂದು ಕರ್ತೃತ್ವತ್ಯಾಗವು; ಹೀಗೆ ತ್ಯಾಗವು ಈ ಮೂರನ್ನೂ ಒಳಗೊಂಡಿರಬೇಕು. ಅದೇ ಸನ್ನ್ಯಾಸವು ಎಂಬ ಭಾವವು. ಇದೀಗ ತ್ಯಾಗ ಶಬ್ದದ ಶಾಸ್ತ್ರ ಸಮ್ಮತವಾಗಿ ನಿಶ್ಚಯವಾದ ಅರ್ಥವು. ಈ ವಿಷಯದಲ್ಲಿ ನಿನಗೆ ಈಷದಪಿ ವಿಪ್ರತಿಪತ್ತಿಯು ಬೇಕಿಲ್ಲವು, ಏಕೆಂದರೆ ಪರಮ ಪುರುಷನಾದ ನನ್ನಿಂದ ಸಾಕ್ಷಾತ್ತಾಗಿಯೇ ನೀನು ಕೇಳಿ ತಿಳಿ ಯುವದರಿಂದ ಎಂಬಭಿಪ್ರಾಯವನ್ನು ಸೂಚಿಸುವದಕ್ಕಾಗಿಯೇ **ಮೇ ಶೃಣು** ಎಂಬ ಪ್ರಯೋ ಗವು. ಅಥವಾ ತಾನು ಪರಮ ಪುರುಷನೆಂಬ ಭಾವನೆಯನ್ನು ಹರಡಿ ಈ ಲೋಕದಲ್ಲೇ ಶಾಸ್ತ್ರಜನ್ಯ ಜ್ಞಾನ ವಿವೇಕಜನ್ಯಜ್ಞಾನಗಳಿಂದ ಶೋಭಿಸುವ **ಮೇ, ನಿಶ್ಚಯಂ**-ನನ್ನ ಯಥಾರ್ಥಾಭಿಪ್ರಾಯ ವನ್ನು, **ತತ್ರ**-ಆ ಸಂದರ್ಭದಲ್ಲಿ **ಶೃಣು**-ಕೇಳು. ಹೀಗೆ ಅರ್ಥ ಮಾಡಿದರೆ ಸ್ವಾರಸ್ಯವು ಸ್ವಲ್ಪ ಕಮ್ಮಿಯು. ಇಷ್ಟೆಲ್ಲಾ ಚನ್ನಾಗಿ ಮನಸ್ಸು ಹಿಡಿಯುವ ಹಾಗೆ ಉಪದೇಶಿಸಿದ್ದರೂ **ಮಯಿ ಸರ್ವಾಣಿ ಸನ್ನ್ಯಸ್ಯ** ಎಂದು ಹೇಳಿರುವದರಿಂದಲೇ ಕರ್ಮಸ್ವರೂಪ ತ್ಯಾಗವೂ ಸರ್ವಾತ್ಮನಾ ಸರಿಯುಲ್ಲವೆಂದು ಅನೇಕಸಾರಿ ಹೇಳಿ, **ಯುಧ್ಯಸ್ವ ವಿಗತ ಜ್ವರಃ** ಎಂದು ಉಪದೇಶಿಸಿದ್ದರೂ, ಭ್ರಮೆಯ ಮೂಲಕವಾಗಿ ಈ ಯುದ್ಧವನ್ನು ತ್ಯಾಗ ಮಾಡಲು ಶಾಸ್ತ್ರಾನುಮತಿಯುಂಟೇ ಎಂದು ಸಂಶಯಾವಿಷ್ಟನಾಗಿ ಸನ್ನ್ಯಾಸ ತ್ಯಾಗ ಶಬ್ದಗಳು **ಪೃಥಕ್ಕೇ**-ಭಿನ್ನಾರ್ಥ ಉಳ್ಳವು ಗಳೇ ಎಂದು ಪ್ರಶ್ನಿಸಿದರೂ ಮನಸ್ಸಿಗೆ ಆಯಾಸ ತಂದುಕೊಳ್ಳದೆ ಪರಮ ದಯಾಳುವಾದ ಶ್ರೀ ಕೃಷ್ಣನು ತುಂಬಾ ಭಕ್ತಾಭಿಮಾನದಿಂದ ಪ್ರೇರಿತನಾಗಿ **ಹೇ ಪುರುಷವ್ಯಾಘ್ರ** ಎಂದು ಸಂಬೋಧಿಸಿರುವದರಿಂದ, ಆತನ ದಯಾ, ವಾತ್ಸಲ್ಯ, ಔದಾರ್ಯಾದಿ ಕಲ್ಯಾಣ ಗುಣಗಳ ಮಾಹಾತ್ಮ್ಯೆಯನ್ನು ಪ್ರಕಟೀಕರಿಸಿರುತ್ತಾರೆ. ಇಲ್ಲಿ **ತ್ರಿವಿಧಃ** ಎಂಬುದಕ್ಕೆ ಕೆಲ ವರು ತಾಮಸಾದಿ ಪ್ರಕಾರಗಳಿಂದ ತ್ಯಾಗವೆಂದು ಅರ್ಥ ಮಾಡಿರುತ್ತಾರೆ. ಹಾಗಾದರೆ ಸಾತ್ವಿಕಕರ್ಮವೂ ತ್ಯಾಗವೇ ? ಮುಂದೆ ೫-೬ನೆಯ ಶ್ಲೋಕಗಳಿಗನುಗುಣವಾಗಿಯಲ್ಲವೇ ಅರ್ಥ ಮಾಡತಕ್ಕದ್ದು ? ನಮಗಾದರೋ **ಸಾತ್ವಿಕಕರ್ಮವು ತ್ಯಾಗ**ವಲ್ಲವು; ಆದರೆ **ಸಾತ್ವಿಕ ತ್ಯಾಗ ವನ್ನೇನೋ** ಹೇಳುವದು ಆವಶ್ಯಕವು. ಅದನ್ನು ಗೀ. ೩-೩೦ನೆಯ ಶ್ಲೋಕದ ಉಪಪಾದನೆಯಲ್ಲಿ ಕಾಣಬಹುದು. **ನಿಶ್ಚಯಂ ಶೃಣು** ಎಂದಾರಂಭಿಸಿ ಹೇಳಿರುವದರಿಂದ ಹಿಂದೆ ಎರಡು ಶ್ಲೋಕ ಗಳಿಂದಲೂ ಉಪಪಾದಿಸಲ್ಪಟ್ಟ ಅಭಿಪ್ರಾಯಗಳು ನಿಶ್ಚಯವಾದವುಗಳಲ್ಲವೆಂಬ ಭಾವವು. **ತ್ಯಾಗೋಹಿ** ಎಂಬಲ್ಲಿ **ಹಿ** ಶಬ್ದದಿಂದ ತೋರುವಾಭಿಪ್ರಾಯವೇನೆಂದರೆ, ತ್ಯಾಗ ಶಬ್ದಕ್ಕೆ ಅರ್ಥ ವನ್ನು ಹಿಂದೆಯೇ ಹೇಳಲ್ಪಟ್ಟಿತ್ತು, ನೀನು ಗಮನಿಸಲಿಲ್ಲವೆಂಬ ಭಾವವು ಸೂಚಿತವು. ನೀನು ಈಗ ಅದರ ಅರ್ಥವನ್ನು ಕೇಳಬೇಕೇ ? ಹಿಂದೆಯೇ ಮೂರು ವಿಧವೆಂದು ತಿಳಿಸಿದ್ದೆವಲ್ಲವೇ ಎಂಬ ಭಾವವು.

**ಭಾಷ್ಯಾರ್ಥವು.** ಹೀಗೆ ವೈದಿಕ ಕರ್ಮಗಳಲ್ಲೇ ಶಾಸ್ತ್ರಪಙ್ತಿಗಳನ್ನು ತಿಳಿದವರೇ **ಪೂರ್ವಪಕ್ಷವಾದಗಳನ್ನು ಮಾಡುತ್ತಾ ಭಿನ್ನಾಭಿಪ್ರಾಯಗಳನ್ನು ಹೊಂದಿರುವಾಗ ಅಂತಹ ಸಂದ**

**ವಿಷಯತಯಾ, ಕರ್ತೃತ್ವ ವಿಷಯತಯಾ ಚ, ಪೂರ್ವಮೇವ ಹಿ ಮಯಾ, ತ್ರಿವಿಧ ಸ್ಸಂಪ್ರಕೀರ್ತಿತಃ—(1) ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮ ಚೇತಸಾ । ನಿರಾಶೀ ರ್ನಿರ್ಮಮೋ ಭೂತ್ವಾ ಯುದ್ಧ ಸ್ವ ವಿಗತಜ್ವರಃ " ಇತಿ;**

---

ರ್ಭದಲ್ಲಿ ಸರ್ವೇಶ್ವರನಾಗಿ ಲೋಕಗುರುವಾಗಿರುವ ನಾನು ಯಥಾರ್ಥವಾದ ಸಿದ್ಧಾನ್ತಾಭಿಪ್ರಾಯವನ್ನು ಭರತಸತ್ತಮನಾಗಿರುವ ನಿನಗೆ ತಿಳಿಸುವದು ನನ್ನ ಇತಿ ಕರ್ತವ್ಯತೆಯಾದುದರಿಂದ ಅದನ್ನು ಹೇಳುವೆನು ಕೇಳು ಎಂದು ತಿಳಿಸುತ್ತಾರೆ.—**ತತ್ರ** ಎಂದರೆ ಆ ಸಂದರ್ಭದಲ್ಲಿ, ಯಾವ ಸಂದರ್ಭದಲ್ಲಿ ಎಂದರೆ **ಏವಂ ವಾದಿ ವಿಪ್ರತಿಪನ್ನೇ**-ಹೀಗೆ ಪೂರ್ವಪಕ್ಷಗಳಿಗೆ ನಿಶ್ಚಯಾರ್ಥವು ತಿಳಿಯದೇ ವಿಪ್ರತಿಪತ್ತಿ ಉಂಟಾಗಿ ಇರುವ, **ತ್ಯಾಗೇ**-ತ್ಯಾಗ ಶಬ್ದಾರ್ಥದಲ್ಲಿ **ತ್ಯಾಗವಿಷಯ ನಿಶ್ಚಯಂ**-ತ್ಯಾಗ ವಿಷಯವಾದ ನಿಶ್ಚಯಾಭಿಪ್ರಾಯವನ್ನು, **ಮತ್ತಃ**-ಲೋಕಗುರುವಾಗಿ ಸರ್ವಜ್ಞನಾಗಿರುವದರಿಂದ ಭ್ರಮ ವಿಪ್ರಲಂಭಾದಿಗಳು ಯಾವುವೂ ಇಲ್ಲದ ನನ್ನ ಮೂಲಕವಾಗಿ ಸ್ವಲ್ಪವೂ ಆ ಕಾರಣದಿಂದ ವಿಪ್ರತಿಪತ್ತಿಗೆ ಕಾರಣವಿಲ್ಲದ ಹಾಗೆ, **ಶೃಣು**-ಕೇಳು; ಅದೇನೆಂದರೆ ಹೇಳುತ್ತಾರೆ.—**ತ್ಯಾಗಃ**-ಬಿಡತಕ್ಕದ್ದೆಂಬುದು, **ಕ್ರಿಯಮಾಣೇಷ್ವೇವ**-ಮಾಡಬೇಕಾಗಿಯೇ ಇರುವ, **ವೈದಿಕೇಷು ಕರ್ಮಸು**-ವೈದಿಕ ಕರ್ಮಗಳಲ್ಲಿ, **ಫಲ ವಿಷಯತಯಾ**-ಫಲ ವಿಷಯ ದಿಂದಲೂ, **ಕರ್ಮ ವಿಷಯತಯಾ**-ಕರ್ಮ ವಿಷಯದಿಂದಲೂ, **ಕರ್ತೃತ್ವ ವಿಷಯತಯಾ ಚ**-ಕರ್ತೃತ್ವ ವಿಷಯದಿಂದಲೂ ಸಹ, **ಪೂರ್ವ ಮೇವ ಹಿ**-ಹಿಂದೆಯೇನೇ, **ತ್ರಿವಿಧಃ**-ಮೂರು ವಿಧವುಳ್ಳದ್ದೆಂದೂ, **ಸಂಪ್ರಕೀರ್ತಿತಃ**-ಚನ್ನಾಗಿ ವಿಶೇಷಿಸಿ ಉಪಪಾದಿಸಲ್ಪಟ್ಟಿತು. ನೀನು ಅದನ್ನು ಜ್ಞಾಪಕಕ್ಕೆ ತಂದುಕೊಳ್ಳದೆ ಪ್ರಶ್ನಿಸಿರುತ್ತೀಯೇ. ವೈದಿಕ ಕರ್ಮಗಳ ವಿಷಯದಲ್ಲಿ **ತ್ಯಾಗ**ವೆಂದರೆ, ವೈದಿಕವಾಗಿ ಮಾಡಬೇಕಾದ ಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸತಕ್ಕದ್ದೆಂಬರ್ಥವು ಎಂದಿಗೂ ಅಲ್ಲವು. ಬಿಡತಕ್ಕದ್ದು ಯಾವುದು ಎಂದರೆ (೧) ಆ ಕರ್ಮದಿಂದುಂಟಾಗುವ ಫಲವನ್ನು ಬಿಡತಕ್ಕದ್ದು; ಅವುಗಳಿಂದುಂಟಾಗುವ ಫಲಗಳು ಅಲ್ಪಾಸ್ಥಿರಗಳಾದವು; ಯದ್ಯಪಿ ಐಹಿಕ ಸ್ವರ್ಗಾದಿ ಸುಖಗಳನ್ನು ಸಾಧಿಸಿ ಕೊಡುವದಾಗಿದ್ದರೂ ಮುಮುಕ್ಷುವಿಗೆ ಬೇಕಾದವಲ್ಲವು, ಆದುದರಿಂದ **ಫಲತ್ಯಾಗ** ಮಾಡತಕ್ಕದ್ದು; (೨) **ಕರ್ಮವಿಷಯವಾದ ತ್ಯಾಗ** ಎಂದರ ನಾನುಮಾಡಿದೆ ಎಂಬ ಮಮತಾತ್ಯಾಗ ಮಾಡತಕ್ಕದ್ದು; (೩) **ಕರ್ತೃತ್ವತ್ಯಾಗವು**, ಪರಮ ಪುರುಷನ ಸಙ್ಕಲ್ಪವಿಲ್ಲದೆ ಯಾವ ಕೆಲಸವು ನಡೆಯುವದಿಲ್ಲವಾದುದರಿಂದ, ತನಗೆ ಕರ್ತೃತ್ವವಿದ್ದರೂ, ಪರಮ ಪುರುಷನೇ ನಡೆಸಿದನೆಂಬ ಕರ್ತೃತ್ವತ್ಯಾಗ ವಿರತಕ್ಕದ್ದು. ಹೀಗೆ (೧) ಕರ್ತೃತ್ವ (೨) ಮಮತಾ (೩) ಫಲ ಇವು ಮೂರನ್ನೂ ತ್ಯಾಗಮಾಡುವದೇ ತ್ಯಾಗವು ಎಂದು ಹಿಂದೆಯೇ ಉಪದೇಶಿಸಿದ್ದರು. ಅದನ್ನು **ಸಂಪ್ರಕೀರ್ತಿತಃ** ಎಂಬುದರಿಂದ ಹಿಂದೆಯೇ ವಿಶದವಾಗಿ ಉಪದೇಶಿಸಿದ್ದನ್ನು ಜ್ಞಾಪಕಕ್ಕೆ ಕೊಡುತ್ತಾರೆ; ಕರ್ಮಯೋಗದ ಮಹಿಮೆಯನ್ನು ತಿಳಿಸುವ ಸಂದರ್ಭದಲ್ಲಿ ಸಾಮಾನ್ಯವಾಗಿಯಲ್ಲದೆ, ಚನ್ನಾಗಿ ತಿಳಿಯುವ ಹಾಗೆ ಉಪದೇಶಿಸಿದ್ದೆನೆಂಬ ಭಾವವು. ಎಲ್ಲಿ ಎಂದರೆ ಪ್ರಮಾಣಶ್ಲೋಕವನ್ನು ಉದಾಹರಿಸಿ, ಅದರ ಅಭಿಪ್ರಾಯವನ್ನು ತಿಳಿಸುತ್ತಾರೆ—**"ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮ ಚೇತಸಾ । ನಿರಾಶೀ ರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ** " ಎಂಬಲ್ಲಿ ನಿನಗೆ ಉಪದೇಶಿಸಿರುವೆವು ಗೀ. ೩. ೩೦ನೆಯ ಶ್ಲೋಕಾರ್ಥವನ್ನು ಪರಾಂಬರಿಸಿ; ಸಙ್ಗ್ರಹವಾಗಿ ಶ್ಲೋಕಾರ್ಥವೇನೆಂದರೆ—ಓ ಅರ್ಜುನನೇ, ಸರ್ವೇಶ್ವರನಾಗಿ ಸರ್ವಾತ್ಮಕನಾಗಿ, ಸರ್ವ ನಿಯಾಮಕನಾಗಿರುವ ಪರಮಾತ್ಮನಿಗೆ ಜೀವಾತ್ಮನು ಶರೀರವು; ಇಂತಹ ಅಂತರ್ಯಾಮಿಯ ಪ್ರೇರಣಾನುಗುಣವಾಗಿ ತಾನು ಮಾಡತಕ್ಕ ವೈದಿಕವೇ ಮೊದಲಾದ ಸಮಸ್ತ ಕರ್ಮಗಳೂ ನಡೆಯುತ್ತವೆಂದು ತಿಳಿದು, ಎಂದರೆ ಕರ್ತೃತ್ವವನ್ನು ತ್ಯಾಗಮಾಡಿ ,ಪರಮ ಪುರುಷನ ಆರಾಧನೆಯೆಂದು ಭಾವಿಸಿ, ಕರ್ಮಗಳ ಫಲಗಳನ್ನು ತ್ಯಾಗಮಾಡಿ, ಕರ್ಮವನ್ನು ನಾನು ಮಾಡುತ್ತಲಿದ್ದೇನೆಂಬ ಮಮಕಾರವನ್ನು ತೊರೆದು,

**ಕರ್ಮಜನ್ಯಂ ಸ್ವರ್ಗಾದಿಕಂ ಫಲಂ ಮಮನಸ್ಯಾದಿತಿ ಫಲತ್ಯಾಗಃ; ಮದೀಯ ಫಲ ಸಾಧನತಯಾ ಮದೀಯ ಮಿದಂ ಕರ್ಮೇತಿ ಕರ್ಮಣಿ ಮಮತಾಯಾಃ ಪರಿತ್ಯಾಗಃ ಕರ್ಮವಿಷಯ ತ್ಯಾಗಃ; ಸರ್ವೇಶ್ವರೇ ಕರ್ತೃತ್ವಾನುಸಂಧಾನೇ ನಾತ್ಮನಃ ಕರ್ತೃತಾ ತ್ಯಾಗಃ ಕರ್ತೃತ್ವ ವಿಷಯಸ್ತ್ಯಾಗಃ. ||೪||**

ಕ್ಷತ್ರಿಯನಾದ ನಿನ್ನ ಇತಿಕರ್ತವ್ಯತಾ ರೂಪವಾದ ಯುದ್ಧವನ್ನು ಸರ್ವವಿಧ ವ್ಯಾಕುಲತೆಯನ್ನು ಬಿಟ್ಟು ಮಾಡು ಎಂದು ಉಪದೇಶವು. ಇದರ ತಾತ್ಪರ್ಯವನ್ನು ಯತಿವರ್ಯರೇ ವ್ಯಕ್ತಪಡಿಸುತ್ತಾರೆ. **ಮಯಿಕರ್ಮಾಣಿ ಸನ್ನ್ಯಸ್ಯ** ಎಂಬಲ್ಲಿ **ಸನ್ನ್ಯಸ್ಯ** ಎಂಬುದರಿಂದ ಕರ್ಮವನ್ನು ಸಂಪೂರ್ಣತ್ಯಾಗವೆಂಬರ್ಥಮಾಡಲು ಸಾಧ್ಯವೇ ಇಲ್ಲದುದರಿಂದ, **ಸನ್ನ್ಯಾಸ ತ್ಯಾಗ** ಶಬ್ದಗಳೆರಡೂ ಒಂದೇ ಅರ್ಥವುಳ್ಳವುಗಳಾದುದರಿಂದ ಆ ಶಬ್ದಗಳಿಂದ ಕರ್ಮದ ಫಲದ ತ್ಯಾಗವೂ, ಮಮತಾ ತ್ಯಾಗವೂ, ಕರ್ತೃತ್ವ ತ್ಯಾಗವೂ ಬೋಧಿಸಲ್ಪಟ್ಟವು. ಮುಮುಕ್ಷುವಿಗೆ ವಿಹಿತ ವೈದಿಕ ಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸಲು ಸಾಧ್ಯವಿಲ್ಲವು. ಆದುದರಿಂದ ಆ ಕರ್ಮಗಳನ್ನು ಯಥಾವಿಧಿ ನಡೆಸಿ ಮೂರನ್ನು ತ್ಯಾಗಮಾಡಬೇಕು; ಯಾವುವೆಂದರೆ—(೧) **ಕರ್ಮಜನ್ಯಂ ಸ್ವರ್ಗಾದಿಕಂಫಲಂ ಮಮನಸ್ಯಾದಿತಿ ಫಲತ್ಯಾಗಂ**-ಕರ್ಮದಿಂದುಂಟಾಗುವ ಸ್ವರ್ಗವೇ ಮೊದಲಾದ, ಈ ಆದಿಶಬ್ದದಲ್ಲಿ ಐಹಿಕಗಳೂ ಸೇರಿದವು, ಫಲಗಳು ನನಗೆ ಉಂಟಾಗದಿರಲಿ ಎಂದು ಫಲವನ್ನು ಸಾತ್ವಿಕತ್ಯಾಗವನ್ನು ಹೇಳಿ ಬಿಡೋಣವೂ, (೨) **ಮದೀಯ ಫಲಸಾಧನತಯಾ**-ನನ್ನ ಸಂಬಂಧವಾದ ಫಲವನ್ನು ಸಾಧಿಕೊಡುವದರ ಮೂಲಕ, **ಮದೀಯ ಮಿದಂ ಕರ್ಮೇತಿ**_ನನ್ನ ಸಂಬಂಧವಾದುದೇ ಈ ಕರ್ಮವು ಎಂದು, **ಕರ್ಮಣಿ ಮಮತಾಯಾಃ ಪರಿತ್ಯಾಗಃ**-ಕರ್ಮದಲ್ಲಿ ಮಮತೆಯನ್ನು ಸಂಪೂರ್ಣವಾಗಿ ತ್ಯಾಗಮಾಡುವದು, ಇದು **ಕರ್ಮ ವಿಷಯಸ್ತ್ಯಾಗಃ**-ಇದು ಕರ್ಮವಿಷಯವಾದ ತ್ಯಾಗವು; (೩) **ಸರ್ವೇಶ್ವರೇ ಕರ್ತೃತ್ವಾನುಸಂಧಾನೇನ**_ಸರ್ವೇಶ್ವರನಲ್ಲೇ ಕರ್ತೃತ್ವವು ಎಂಬ ಅನುಸಂಧಾನದಿಂದ, **ಆತ್ಮನಃ ಕರ್ತೃತಾ ತ್ಯಾಗಃ**-ತನಿಗಿರುವ ಕರ್ತೃತ್ವವನ್ನು ಬಿಡೋಣವು ಇದು **ಕರ್ತೃತ್ವವಿಷಯವಾದ ತ್ಯಾಗವು. ತ್ಯಾಗಃ ಕ್ರಿಯಮಾಣೇಷ್ವೇವ** ಎಂದಾರಂಭಿಸಿ ಹೇಳಿರುವ ವಾಕ್ಯದ ತಾತ್ಪರ್ಯವೇನೆಂದರೆ, ಮುಮುಕ್ಷುವಿಗೆ ವಿಹಿತ ಕರ್ಮಗಳನ್ನು ಬಿಟ್ಟುಬಿಡುವದು ಸರ್ವಾತ್ಮನಾ ಸರಿಯಲ್ಲವೆಂದು ತಿಳಿಸುವದಕ್ಕಾಗಿಯೇ **ಕ್ರಿಯಮಾಣೇಷು ಕರ್ಮಸು** ಎಂಬ ಪ್ರಯೋಗವು. ಹಾಗಾದರೆ ತ್ಯಾಗವು ಯಾವ ವಿಷಯದಲ್ಲಿ ಎಂದರೆ ಫಲ, ಕರ್ಮಮಮತಾ ಕರ್ತೃತ್ವಾಭಿ ಸಂಧಿಗಳಲ್ಲೀಗ ತ್ಯಾಗವಿಂತಕ್ಕದ್ದೆಂದು ಉಪದೇಶಿಸಿ ಹಿಂದೆ **ಮಯಿಕರ್ಮಾಣಿ ಸನ್ನ್ಯಸ್ಯ** (೧೮. ೩. ೩೦) ಎಂಬ ಶ್ಲೋಕವನ್ನು ಉದಾಹರಿಸಿದರು. ಇದರಿಂದ ಜ್ಞಾನಿಯು ವಿಹಿತಕರ್ಮಗಳನ್ನೂ ತ್ಯಾಗಮಾಡಬಹುದೆಂಬ ಅಭಿಪ್ರಾಯವು ಸರಿಯಲ್ಲವೆಂಬುದು ಸೂಚಿಸಲ್ಪಟ್ಟಿತು. ಅನೇಕರು ಪ್ರಪನ್ನನಿಗೆ ವಿಹಿತಕರ್ಮಗಳು ಆವಶ್ಯಕತೆಯಿಲ್ಲವೆಂಬ ಅಭಿಪ್ರಾಯದಿಂದ ಅಜ್ಞಾನದ ವಿಜೃಂಭಣೆಯನ್ನು ಪ್ರಕಟಿಸುತ್ತಾರೆ. ಇದು ಶ್ರುತಿ ಮತ್ತು ಗೀತಾ ಇತರ ಸ್ಮೃತಿ ಪುರಾಣೇತಿಹಾಸ ಸಕಲ ಉಕ್ತಿಗಳಿಗೂ ಪರಮ ವಿರುದ್ಧವು. ಈಈ ಕರ್ಮಗಳಿಗೆ ಈಈ ಫಲವೆಂಬುದು ವ್ಯಕ್ತವು. ಆದುದರಿಂದ ಯಜ್ಞ ದಾನ ತಪಸ್ಸುಗಳಿಗೆ ಫಲಗಳುಂಟು. ಆದುದರಿಂದಲೇ **ಕರ್ಮಜನ್ಯಂ ಸ್ವರ್ಗಾದಿಕಂ ಫಲಂ ಮಮನಸ್ಯಾದಿತಿ ಫಲತ್ಯಾಗಃ** ಎಂಬ ವ್ಯಾಖ್ಯಾನವು. ಆದರೆ ಅಂತಹ ಅಲ್ಪಾಸ್ಥಿರ ಫಲಗಳು ನನಗೆ ಬೇಡವೆಂದು ಭಕ್ತನು ಅಪೇಕ್ಷಿಸಿದರೆ ಭಕ್ತವತ್ಸಲನಾದ ಪರಮ ಪುರುಷನು ಪ್ರೀತನಾಗಿ ಅಂತಹ ಫಲಗಳನ್ನು ಕೊಡದೆ ನಿರತಿಶಯ ಫಲವನ್ನು ಕೊಡಲು ಉದ್ಯುಕ್ತನಾಗುವನು. ಹಾಗಾದರೆ ಫಲ ಬೇಕಿಲ್ಲದ ಅಂತಹ ಕರ್ಮಗಳನ್ನು ಏಕೆ ಶ್ರಮೆಯನ್ನು ತೆಗೆದುಕೊಂಡು ಮಾಡುವದು? ಎಂದರೆ ಶಾಸ್ತ್ರವು ವರ್ಣಾಶ್ರಮೋಚಿತ ಕರ್ಮಗಳನ್ನು ವಿಧಿಸಿರುವದರಿಂದ ಅವುಗಳನ್ನು ಮಾಡಲೇಬೇಕು. ರಾಜಸೇವಕರು ರಾಜನಿಗೆ ಮಾಡುವ ಸಮಸ್ತ ಉಪಚಾರ ರೂಪಕರ್ಮಗಳೆಲ್ಲಾ ರಾಜನ ಅಥವಾ

**ಮೂ. ಯಜ್ಞ ದಾನ ತಪಃ ಕರ್ಮ ನತ್ಯಾಜ್ಯಂ ಕಾರ್ಯಮೇವ ತತ್** ||೪||

---

ಸಚಿವನ ಆಜ್ಞಾನುಸಾರ ಹೇಗೆ ನಡೆಸತಕ್ಕದ್ದೋ ಹಾಗೆಯೇ ನಡೆಸತಕ್ಕದ್ದು. ಅವುಗಳನ್ನು ತ್ಯಜಿಸಿದರೆ ಹೇಗೆ ಪ್ರತ್ಯವಾಯವೋ, ಹಾಗೆಯೇ ವಿಹಿತಕರ್ಮಗಳನ್ನೇ ಮುಮುಕ್ಷುವು ಬಿಟ್ಟರೂ ಪ್ರತ್ಯವಾಯವೆಂಬ ಭಾವವು. ಅದೂ ಅಲ್ಲದೆ ಉಪಾಸನಕ್ಕೆ ಈ ಕರ್ಮಗಳು ಅಙ್ಗವಾಗಿ ಅದನ್ನು ಸಾಧಿಸಿಕೊಡುತ್ತವೆ. ಆದುದರಿಂದಲೂ ಅನುಷ್ಠೇಯಗಳು. **"ವಿಹಿತತ್ವಾಚ್ಚಾಶ್ರಮ ಕರ್ಮಾಪಿ"** ಎಂಬಲ್ಲೂ ಮತ್ತು **"ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇ ರಶ್ವವತ್"** ಎಂಬ ಸೂತ್ರದಲ್ಲೂ ಮೋಕ್ಷಾರ್ಥಿಯಾಗಿ ಬ್ರಹ್ಮವಿದ್ಯಾ ನಿಷ್ಠನಿಗೆ ವಿಹಿತಕರ್ಮಗಳಾದ ಯಜ್ಞಾದಿಗಳು ಆವಶ್ಯಕವೆಂದು ಹೇಳಲ್ಪಟ್ಟಿರುತ್ತದೆ. ಕರ್ಮದಲ್ಲಿ ತಾನು ಮಾಡಿರುತ್ತೇನೆಂಬ ಮಮತೆ ಕೂಡದು ಎಂಬುದರ ಅಭಿಪ್ರಾಯವೇನಾಯಿತು ಎಂದರೆ ತನ್ನ ಪ್ರೀತಿಗಾಗಿ ಕರ್ಮಾಚರಣೆಯೆಂದು ಭಾವಿಸತಕ್ಕದ್ದಲ್ಲವು ಪರಮಾತ್ಮನ ಪ್ರೀತಿಗಾಗಿ ಎಂಬ ಭಾವನೆಯಿರತಕ್ಕದ್ದು. ಇದೀಗ ಮಮತಾತ್ಯಾಗವೆಂದು ಹೇಳಲ್ಪಟ್ಟಿತು. ಕರ್ತೃತ್ವ ತ್ಯಾಗಾನುಸಂಧಾನವೆಂತಾದ್ದೆಂದರೆ, ತನಗೆ ಯದ್ಯಪಿ ಸ್ವಾಮಿದತ್ತ ಕರ್ತೃತ್ವವಿದ್ದರೂ ಅದು ಪರಮಪುರುಷಾಯತ್ತವಾಗಿ ಆತನ ಸಙ್ಕಲ್ಪವಿಲ್ಲದೆ ನಡೆಯುವುದಿಲ್ಲವೆಂದು ಮುಂದೆ ೧೪ನೆಯ ಶ್ಲೋಕದಲ್ಲಿ ಹೇಳುವದರಿಂದ, **ಪರಾತ್ತು ತಚ್ಛ್ರುತೇಃ** ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿತವಾದ ಹಾಗೆ, ಪರಮ ಪುರುಷನಲ್ಲಿ ಕರ್ತೃತ್ವಾನುಸಂಧಾನವು ಉಂಟಾಗುವದರಿಂದ, ತನ್ನ ಕರ್ತೃತ್ವದ ತ್ಯಾಗವೆಂಬ ಭಾವವು. ಇಂದ್ರಿಯಗಳಿಂದ ಕೂಡಿದ ತನ್ನ ಶರೀರ ತಾನು, ಮತ್ತು ಪರಮಾತ್ಮ ಹೀಗೆ ಮೂರಕ್ಕೆ ಅಧೀನವಾಗಿ ಕರ್ತೃತ್ವವಿರುವಾಗ ತನಗೆ ಮಾತ್ರವೇ ಕರ್ತೃತ್ವ ಉಂಟೆಂಬುವನು ತಿಳಿದವನಲ್ಲವು. ಆದುದರಿಂದ ಪರಮ ಪುರುಷಾಯತ್ತವಾದುದರಿಂದ ಸ್ವಕರ್ತೃತ್ವ ತ್ಯಾಗವೆಂದು ಭಾವಿಸತಕ್ಕದ್ದು. ||೪||

**ಮೂಲಕ್ಕೆ ಅರ್ಥವು-** ಮುಮುಕ್ಷುವಿಗೆ ಈ ಯಜ್ಞ ದಾನ ತಪಸ್ಸುಗಳಾದ ಕರ್ಮಯೋಗಕ್ಕೆ ಸೇರಿದ ಕರ್ಮಗಳು ಯಾವ ಸಂದರ್ಭದಲ್ಲಾದರೂ ಬಿಟ್ಟುಬಿಡಬಹುದೋ ಎಂದು ಕೇಳಿ ತಿಳಿಯಬೇಕೆಂಬ ಕುತೂಹಲದಿಂದ ಇದ್ದ ಅರ್ಜುನನಿಗೆ ಪ್ರತ್ಯುತ್ತರವಾಗಿ ಆತನ ಆಶಯಕ್ಕೆ ವಿರುದ್ಧವಾಗಿ ಸಿದ್ಧಾನ್ತಿಸಿ ಹೇಳುತ್ತಾರೆ.—

**ಯಜ್ಞ ದಾನ ತಪಃ ಕರ್ಮ**-ಮೋಕ್ಷಾರ್ಥಿಯು, ಮೋಕ್ಷೋಪಾಯವಾದ ಭಕ್ತಿಯೋಗಕ್ಕೆ ಅಙ್ಗವಾದ ಈ ಯಜ್ಞ ದಾನ ತಪೋರೂಪವಾದ ಮತ್ತು ನಿತ್ಯನೈಮಿತ್ತಿಕ ಕರ್ಮಯೋಗದ ಕರ್ಮವನ್ನು, **ನತ್ಯಾಜ್ಯಂ**-ಬಿಡತಕ್ಕದ್ದಲ್ಲವು, **ತತ್**-ಆ ಕರ್ಮವು, **ಕಾರ್ಯಮೇವ**-ಆವಶ್ಯಕವಾಗಿ ಅನುಷ್ಠಿಸತಕ್ಕವು. ಈ ಪೂರ್ವಾರ್ಧದಲ್ಲಿ ಪ್ರತಿಜ್ಞಾರೂಪದಲ್ಲಿ ಮಾಡಲೇಬೇಕೆಂದು ವಿಧಿಸಿ, ಅದಕ್ಕೆ ಕಾರಣವನ್ನು ಉತ್ತರಾರ್ಧದಿಂದ ಉಪದೇಶಿಸುತ್ತಾರೆ. ಇಂತಹ ಕರ್ಮಗಳ ಸಂಪೂರ್ಣಸ್ವರೂಪತ್ಯಾಗವು ಎಂದಿಗೂ ಕೂಡದೆಂದು ಇಲ್ಲಿ ನಿರೋಧಿಸಿದ್ದರೂ, ಇಂತಹ ಕರ್ಮಗಳು ಜ್ಞಾನ ಉಂಟಾದ ಪ್ರಪನ್ನನಿಗೆ ಅನಾವಶ್ಯಕವೆಂಬ ಕೆಲವರ ಅಭಿಮತವು ಹೇಗೋ ತಿಳಿಯದು. ಹಿಂದೆ ಹೇಳಿದ ನಾಲ್ಕು ವಿಧ ಅಭಿಪ್ರಾಯಗಳಲ್ಲಿ ಮೊದಲಿನ ಅಭಿಪ್ರಾಯವಾದ **ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ನ್ಯಾಸಂ ಕವಯೋ ವಿದುಃ** ಎಂಬ ಪಕ್ಷವೂ ಮತ್ತು **ದೋಷವತ್ ತ್ಯಾಜ್ಯಂ** ಎಂಬ ಪಕ್ಷವೂ ಸಹ ನಿರಸ್ತವು. ಅಥವಾ **ತತ್ ಇತಿ ಹೇತೌ** ಎಂಬುದನ್ನನುಸರಿಸಿ. **ತತ್**-ಆ ಕಾರಣದಿಂದ **ಕಾರ್ಯಮೇವ**-ಯಾವಜ್ಜೀವವೂ ಉಪಾಸನದದೊಂದಿಗೆ ಮೋಕ್ಷಾರ್ಥಿಯಿಂದ ಮಾಡಲ್ಪಡತಕ್ಕದ್ದು; ಈ ಅರ್ಥವೇ ಶ್ರೀ ಯತಿವರ್ಯರಿಗೆ ಇಷ್ಟವಾದುದರಿಂದ **ಕುತಃ** ಎಂದು ಅವತಾರಿಕೆಯನ್ನು ಉತ್ತರಾರ್ಧಕ್ಕೆ ಕೊಟ್ಟಿರುತ್ತಾರೆ. **ತತ್** ಎಂಬ ಪದವು **ಯತ್** ಎಂಬುದನ್ನು ಅಪೇಕ್ಷಿಸುತ್ತದೆ; ಅನ್ವಯವು ಹೇಗೆಂದರೆ, ಈ ಯಜ್ಞ, ದಾನ, ತಪಸ್ಸುಗಳು **ಯತ್** ಯಾವ ಕಾರಣದಿಂದ, **ಪಾವನಾನಿ ಮನೀಷಿಣಾಂ**-ಮೋಕ್ಷಾರ್ಥಿಗಳಿಗೆ

ಅನಾದಿಕಾಲದಿಂದ ಬಂದಿರುವ, ಉಪಾಸನಕ್ಕೆ ಪ್ರತಿಬಂಧಕಗಳಾದ ಪ್ರಾಚೀನ ಕರ್ಮಗಳನ್ನೆಲ್ಲಾ ನಾಶಮಾಡುವದರ ಮೂಲಕ ಪವಿತ್ರೀಕರಿಸುವಗಳೋ, **ತತ್**-ಆ ಕಾರಣದಿಂದ, ಅವು **ಕಾರ್ಯಮೇವ**-ಆವಶ್ಯಕವಾಗಿ ಅನುಷ್ಠಿಸತಕ್ಕವುಗಳೇ ವಿನಾ ಬಿಡತಕ್ಕವುಗಳಲ್ಲವು ಎಂಬರ್ಥವು.

**ಭಾಷ್ಯಾರ್ಥವು.** ಯಾವಾಗಲಾದರೂ ವಿಹಿತಕರ್ಮಗಳನ್ನು ಮೋಕ್ಷಾರ್ಥಿಯು ಬಿಡಲು ಸಾಧ್ಯ ಉಂಟೋ ಎಂಬ ಶಙ್ಕೆ ಬಾಧಿಸುತ್ತಿದ್ದ ಅರ್ಜುನನಿಗೆ ಎಂದಿಗೂ ಬಿಟ್ಟಿದ್ದಲ್ಲವು, ಯಾವಜ್ಜೀವವೂ ಅವುಗಳನ್ನು ಅನುಷ್ಠಿಸತಕ್ಕದ್ದೆಂದು ವಿಧಿಸುತ್ತಾರೆ-**ಯಜ್ಞ ದಾನ ತಪಸ್ಸೇ ಪ್ರಭೃತಿ**-ಮೊದಲಾದ, **ವೈದಿಕಂ ಕರ್ಮ**-ಶಾಸ್ತ್ರದಲ್ಲಿ ವಿಹಿತವಾದ ಕರ್ಮವು, **ಮುಮುಕ್ಷುಣಾ**-ಮೋಕ್ಷಾರ್ಥಿಯಿಂದ, **ನ ಕದಾಚಿದಪಿ ತ್ಯಾಜ್ಯಮ್**-ಎಂದಿಗೂ ಬಿಡತಕ್ಕದ್ದಲ್ಲವು. **ಅಪಿತು**-ಮತ್ತೇನು ಎಂದರೆ, **ಆ ಪ್ರಯಾಣಾತ್**-ದೇಹ ವಿಯೋಗದವರೆಗೂ, **ಅಹರಹಃ**-ಪ್ರತಿದಿನದಲ್ಲೂ, **ಕಾರ್ಯಮೇವ**-ಮಾಡತಕ್ಕದ್ದೇ. **ಪ್ರಭೃತಿ ಶಬ್ದ ಪ್ರಯೋಗವು** ನಿತ್ಯದಲ್ಲೂ ಮಾಡಬೇಕಾದ ಸಂಧ್ಯಾವಂದನಾದಿ ಕರ್ಮಗಳನ್ನು ಬೋಧಿಸುತ್ತದೆ. **ವೈದಿಕಂ ಕರ್ಮ**-ವೇದದಲ್ಲಿ ಹೇಳಿರುವ ಎಲ್ಲಾ ಕರ್ಮಗಳೂ ಇಲ್ಲಿ ಉದ್ದೇಶ್ಯವಲ್ಲವು; ಮುಮುಕ್ಷುವಿಗೆ ವಿಧಿಸಿರುವ ವರ್ಣಾಶ್ರಮೋಚಿತ ಕರ್ಮಗಳು ಹೇಳಲ್ಪಟ್ಟವು. ಬಿಡಲು ಮಾರ್ಗವೇ ಇಲ್ಲವೆಂದು ನಿಸ್ಸಂಶಯವಾಗಿ ತಿಳಿಯಲಿ, ಮೋಹಬುದ್ಧಿಯಿಂದ ಬಿಡಬಹುದೋ ಎಂಬ ಸಂದೇಹವನ್ನು ಇಲ್ಲಿ ಬಿಟ್ಟುಬಿಡಲಿ ಎಂದೇ **ನತ್ಯಾಜ್ಯಂ** ಎಂಬ ಪ್ರಯೋಗವು. ಇದನ್ನು ಮನಸ್ಸಿನಲ್ಲಿಟ್ಟೇ, ಮುಂದೆ **ನಷ್ಟೋ ಮೋಹಃ** ಎಂದೂ, **ಕರಿಷ್ಯೇ ವಚನಂ ತವ** ಎಂದೂ ಹೇಳಿ, ಯುದ್ಧಮಾಡಲು ಒಪ್ಪಿದನು. " **ನಕದಾಚಿದಪಿತ್ಯಾಜ್ಯಂ** " ಎಂಬ ವ್ಯಾಖ್ಯಾನದ ಅಭಿಪ್ರಾಯವೇನೆಂದರೆ-ಮೊದಲು ಬುಭುಕ್ಷುವಾಗಿರುವಾಗ ಬಿಡತಕ್ಕದ್ದಲ್ಲವು, ಮಾಡತಕ್ಕದ್ದೇ. ಮುಮುಕ್ಷುವಾದಾಗ ಅವುಗಳು ಪ್ರಯೋಜನವಿಲ್ಲವೆಂಬ ಕೆಲವರ ಮತವನ್ನು ನಿರಸನಮಾಡುವದಕ್ಕಾಗಿ ಹಾಗೆ ವ್ಯಾಖ್ಯಾನವು. **ನತ್ಯಾಜ್ಯಂ** ಎಂಬುದರಿಂದ, ಸರಿಯಾದ ಜ್ಞಾನಾದಿಗಳು ಉಂಟಾದನಂತರವಾಗಲಿ ಬಿಡಬಹುದೋ ಎಂಬ ಶಙ್ಕೆ ಬಾರದಿರುವದಕ್ಕಾಗಿ, **ನಕದಾಚಿದಪಿತ್ಯಾಜ್ಯಂ**-ಎಂದಿಗೂ ಬಿಡತಕ್ಕದ್ದಲ್ಲವೆಂದು ಭಾಷ್ಯವು. ಇನ್ನೂ ನಿಸ್ಸಂಶಯವಾಗುವದಕ್ಕಾಗಿ, **ಅಪಿತು** ಎಂದಾರಂಭಿಸಿ ಹೇಳುತ್ತಾರೆ. **ಆಪ್ರಯಾಣಾತ್** ದೇಹ ವಿಯೋಗದವರೆಗೂ ಅನುಷ್ಠಿಸತಕ್ಕದ್ದು. " **ಆ ಪ್ರಯಾಣಾತ್ತತ್ರಾಪಿ ಹಿ ದೃಷ್ಟಮ್** " (ಶಾರೀ. ೪. ೧. ೧೨) ಎಂಬ ವ್ಯಾಸಸೂತ್ರವನ್ನು ಅನುಸರಿಸಿದ ವ್ಯಾಖ್ಯಾನವೆಂದು, ಈ **ಆಪ್ರಯಾಣಾತ್** ಎಂಬ ಪ್ರಯೋಗವು ಸೂಚಿಸುತ್ತದೆ. ಈ ಸೂತ್ರವು " **ಸಖಲ್ವೇವಂ ವರ್ತಯನ್ ಯಾವದಾಯುಷಂ** " ಎಂಬ (ಛಾಂ. ೮.೧೫ ೧೦) ಶ್ರುತಿ ವಾಕ್ಯವನ್ನು ಅನುಸರಿಸಿದುದಾಗಿರುತ್ತದೆ. ಇವುಗಳು ಭಕ್ತಿಯೋಗವೆಂದರೆ ಉಪಾಸನೆಯನ್ನು ಎಲ್ಲಿವರೆಗೂ ಮಾಡಬೇಕೆಂಬ ವಿಚಾರದಲ್ಲಿ **ಯಾವದಾಯುಷಂ** ಆಯುಸ್ಸಿರುವವರೆಗೂ ಮಾಡತಕ್ಕದ್ದೆಂದು ವಿ ಧಿ ಸ ಲ್ಪ ಟ್ಟಿ ತು. ಶಾರೀರಕ ಸೂತ್ರ(೩. ೪. ೨೬)ವಾದ " **ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್** " ಎಂಬಲ್ಲಿ ಆ ಭಕ್ತಿಯೋಗಕ್ಕೆ ಸರ್ವಾಶ್ರಮ ಕರ್ಮಗಳ ಅಪೇಕ್ಷೆಯುಂಟೆಂದು ವ್ಯಕ್ತಪಡುತ್ತದೆ. ಆದರೆ ಬ್ರಹ್ಮವಿದ್ಯಾನಿಷ್ಠನು ಉಪಾಸನೆಯಿಂದ ನಿಷ್ಪನ್ನವಾದ ಪರಮಾತ್ಮ ಸಾಕ್ಷಾತ್ಕಾರರೂಪಜ್ಞಾನದಿಂದ ಮೋಕ್ಷವನ್ನು ಹೊಂದುವಾಗ ಈ ಯಜ್ಞ ದಾನ ತಪಸ್ಸುಗಳ ಆವಶ್ಯಕತೆಗೆ ಕಾರಣವೇನಿರುತ್ತದೆ? ಉಪಕಾರಕವಾಗಿ ಬೇಕು ಎಂದರೆ **ಜ್ಞಾನಾನ್ಮೋಕ್ಷಃ** ಎಂದು ಹೇಳುವವರಿಗೆ ಕರ್ಮವು ಹೇಗೆ ಸಹಕಾರಿಯು? ತತ್ವಜ್ಞಾನಾರ್ಥವಾಗಿ ಅವು ಬೇಕು ಎಂದು ಹೇಳಲು ಸಾಧ್ಯವಿಲ್ಲವು. ಏಕೆಂದರೆ, ಮೋಕ್ಷಾರ್ಥಿಗೆ ಆ ತತ್ವಜ್ಞಾನವು ಬೇರೆ ಪ್ರಮಾಣಗಳಿಂದ ಸಿದ್ಧಿಸುವದರಿಂದ; ಹೀಗೆ ಮೋಕ್ಷಾರ್ಥಿಗೆ ಬೇಕಾದ ಯಾವ ಪ್ರಯೋಜನವೂ ಈ ಕರ್ಮಾನುಷ್ಠಾನಗಳಿಂದ ತೋರಿಬರುವದಿಲ್ಲವು; " **ಪ್ರಯೋಜನಮನುದ್ದಿಶ್ಯ ನ ಮನ್ದೋಽಪಿ ಪ್ರವರ್ತತೇ** " ಎಂದು ಇರುವದರಿಂದ ಪ್ರಯೋಜನವಿಲ್ಲದ ಕಾರ್ಯದಲ್ಲಿ ಪ್ರವೃತ್ತಿಯಲ್ಲಿ ಯಾವ ಮಂದಬುದ್ಧಿಯುಳ್ಳವನೂ ಕೂಡ ಪ್ರವರ್ತಿಸುವದಿಲ್ಲವು.

**ಭಾ. ಅವ. ಕುತಃ ?**

**ಮೂ. ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ ||೫||**

**ಭಾ. ಯಜ್ಞ ದಾನ ತಪಃ ಪ್ರಭೃತಿ ವೈದಿಕಂ ಕರ್ಮ ಮುಮುಕ್ಷೂಣಾ ನ ಕದಾಚಿ**

---

ಹಾಗಾದರೆ ಅಂತಹ ಯಜ್ಞ ದಾನ ತಪಸ್ಸುಗಳನ್ನು ಏಕೆ ಮಾಡತಕ್ಕದ್ದೆಂಬುದು ನ್ಯಾಯವಾದ ಆಕ್ಷೇಪವು. ಆದುದರಿಂದ ಉತ್ತರಾರ್ಧದಿಂದ ಕಾರಣವನ್ನು ಹೇಳುತ್ತಾರೆ.—

**ಭಾಷ್ಯಾವತಾರಿಕೆಯ ಅರ್ಥವು.** ಮೇಲೆ ಹೇಳಿದ ರೀತಿಯಲ್ಲಿ ಅನೇಕ ವಿಧ ಪೂರ್ವಪಕ್ಷಗಳ ಸಮಾಧಾನವನ್ನು ಹೇಳುತ್ತಾರಾದುದರಿಂದ, **ಕಥಮ್?**-ಹಾಗೆ ಸತ್ಯಾಜ್ಯ ವಾಗಿ ದೇಹಾವಸಾನದವರೆಗೂ **ಕಾರ್ಯಮೇವ** ಎಂದು ವಿಧಿಸಿದಿರಲ್ಲವೇ, ಅದಕ್ಕೆ ಕಾರಣ ವೇನೆಂದು ಅರ್ಜುನನು ಕೇಳಬಹುದೆಂದು ಭಾವಿಸಿ ತಾವೇ ಉತ್ತರವನ್ನು ದಯಪಾಲಿಸುತ್ತಾ ರೆಂಬ ಭಾವ ಪ್ರದರ್ಶನಕ್ಕಾಗಿ **ಕುತಃ** ಎಂಬ ಅವತಾರಿಕೆಯು ; **ಕುತಃ**-ಯಾವ ಕಾರಣದಿಂದ ?

**ಮೂಲಕ್ಕೆ ಅರ್ಥವು—ಯಜ್ಞಃ**-ಯಜ್ಞವೂ, **ದಾನಂ**-ದಾನವೂ, **ತಪಶ್ಚೈವ**-ತಪಸ್ಸೇ ಮೊದಲಾದವುಗಳೆಲ್ಲಾ, **ಮನೀಷಿಣಾಂ**-ಪ್ರಾಜ್ಞರಿಗೆ, ಮನ ಅವಬೋಧನೇ ಎಂಬ ಧಾತ್ವರ್ಥದ ಪ್ರಕಾರ ಸರ್ವೇಶ್ವರನನ್ನು ಹೊಂದಲು ಉಪಾಯವು ಯಾವದು ಎಂಬ ಅವ ಬೋಧವನ್ನುಳ್ಳವರು ಎಂದರೆ ಪರಮಾತ್ಮೋಪಾಸನೆಯಲ್ಲಿ ಮನಸ್ಸುಳ್ಳವರು, ಅಥವಾ ಈಷಾ **ಲಾಂಗಲದಂಡವು,** ನೇಗಲಿನ ದಂಡವು, ಅದರ ಹಾಗೆ ಮನಸ್ಸಿನ ಸಂಬಂಧವುಳ್ಳದು ಬುದ್ಧಿಯು ಅದನ್ನುಳ್ಳವರು, ಪರಮಾತ್ಮೋಪಾಸನೆಯೇ ಉಪಾಯವೆಂಬ ಬುದ್ಧಿಯುಳ್ಳವರು, ಅವರುಗಳಿಗೆ **ಪಾವನಾನಿ**-ಉಪಾಯಾನುಷ್ಠಾನಕ್ಕೂ ತನ್ನಿಷ್ಪತ್ತಿಗೂ, ಪ್ರತಿಬಂಧಕಗಳಾದ ದುರಿತಗಳನ್ನೆಲ್ಲಾ ಹೋಗಲಾಡಿಸತಕ್ಕವು. ಆದುದರಿಂದ ಅವಶ್ಯಾನುಷ್ಠೇಯಗಳು ಎಂಬ ಉಪದೇಶವು. ಪೂರ್ವಾರ್ಧದಲ್ಲಿ **ಯಜ್ಞ ದಾನ ತಪಃ ಕರ್ಮ** ಎಂದಿರುವಾಗ ಉತ್ತರಾರ್ಧದಲ್ಲೂ **ಯಜ್ಞೋ ದಾನಂ ತಪಶ್ಚೈವ** ಎಂದು ಪುನರುಕ್ತಿಯಾಗುವದಿಲ್ಲವೇ ? **ಏತಾನಿ** ಅಥವಾ **ತಾನಿ** ಎಂದು ಹೇಳಿ **ಪಾವನಾನಿ** ಎಂದು ಹೇಳಿದ್ದರೆ ಸಾಕಾಗುತ್ತಲ್ಲವೇ ಎಂದರೆ, ಪೂರ್ವಾರ್ಧವು ಒಂದೇ ಸಮಾಸಪದವಾಗಿ, ಉತ್ತರಾರ್ಧದಲ್ಲಿ ಹಾಗಲ್ಲದೆ ಬೇರೇ ಪದಗಳಾಗಿ ಉಪಯೋಗಿಸಿರುವದ ರಿಂದ ಹಿಂದೆ ಹೇಳಿದ ಕರ್ಮಯೋಗ ಪ್ರಬೇಧಗಳಲ್ಲಿ ಇವು ಐಚ್ಛಿಕ ಭಾಗವು. ಇವುಗಳಲ್ಲಿ ಯಾವುದಾದರೂ ಒಂದನ್ನು ಅವಲಂಬಿಸಬಹುದೆಂಬುದನ್ನು ಅನುವಾದರೂಪ ಹೇಳುವದಕ್ಕಾಗಿ ಹಾಗೆ ಪ್ರಯೋಗವೆಂದು ಭಾವಿಸತಕ್ಕದ್ದು. ಬೃಹದಾರಣ್ಯಕ ಶ್ರುತಿವಾಕ್ಯವಾದ (೧) “ **ತಮೇತಂ ವೇದಾನು ವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾಽನಾಶಕೇನ**” ಎಂದು ಹಾಗೆಯೇ ಇದೆ ಎಂಬ ಭಾವವನ್ನೂ ಈ ಉತ್ತರಾರ್ಧವು ಸೂಚಿಸುತ್ತದೆ ಸಮುಚ್ಚಯವು ಬೇಕಾಗಿಲ್ಲವೆಂಬ ಭಾವವು. “ **ಏತಮೇವ ವಿದಿತ್ವಾ ಮುನಿರ್ಭವತಿ** ” ಎಂದಿರುವದನ್ನು ಮನಸ್ಸಿನಲ್ಲಿಟ್ಟು ಶ್ರೀ ಯತಿರಾಜರು, **ಮನೀಷಿಣಾಂ** ಎಂದರೆ **ಮನನಶೀಲಾನಾಂ** ಎಂಬ ಭಾಷ್ಯದಿಂದ **ಮುನಿರ್ಭವತಿ** ಎಂಬರ್ಥವನ್ನು ಪ್ರಕಟಿಸಿರುತ್ತಾರೆ. ಉಪಾಸಕರೇ ಮನನಶೀಲರು ; **ವಿದಿತ್ವಾ** ಎಂಬ ಪದವು ಉಪಾಸನವನ್ನು ಬೋಧಿಸುತ್ತದೆ. ಹಿಂದೆ **“ ತ್ಯಾಜ್ಯಂ ದೋಷವದಿತ್ಯೇಕೇ ಕರ್ಮಪ್ರಾಹು ರ್ಮನೀಷಿಣಃ ” ಎಂಬ ಪಕ್ಷವು ದೋಷವನ್ನಾರೋಪಿಸಿ ತ್ಯಾಜ್ಯವೆಂದು ಹೇಳಿದ ಅಭಿಪ್ರಾಯಕ್ಕೆ ಬದಲಾಗಿ ಪಾವನಾನಿ ಮನೀಷಿಣಾಂ ಎಂದು ಹೇಳಿದುದರಿಂದ ಆ ಅಭಿಪ್ರಾಯವು ನಿರಸ್ತವು.**

**ಭಾಷ್ಯಾರ್ಥವು.** ಈ ಯಜ್ಞ ದಾನ ತಪಸ್ಸೇ ಮೊದಲಾದ ವಿಹಿತ ವೈದಿಕ ಕರ್ಮಗಳನ್ನು ಪರಿತ್ಯಾಗ ಮಾಡಲು ಸಾಧ್ಯವಿಲ್ಲವು, ಮಾಡಿಯೇತೀರಬೇಕು ಎಂದಿಷ್ಟುಮಾತ್ರ ಹೇಳಿ

---

(೧) ಬೃ. ೬.೪.೨೨.

**ದಪಿ ತ್ಯಾಜ್ಯವತ್; ಅಪಿತ್ವಾಪ್ರಯಾಣಾದ ಹರಹಃ ಕಾರ್ಯ್ಯಮೇವ.** ||

**ಭಾ. ಯಜ್ಞ ದಾನ ತಪಃ ಪ್ರಭೃತೀನಿ ವರ್ಣಾಶ್ರಮ ಸಂಬಂಧೀನಿ ಕರ್ಮಾಣಿ ಮನೀಷಿಣಾಂ-ಮನನ ಶೀಲಾನಾಂ, ಪಾವನಾನಿ; ಮನನಂ-ಉಪಾಸನಂ, ಮುಮುಕ್ಷೂಣಾಂ ಯಾವಜ್ಜೀವ ಮುಪಾಸನಂ ಕುರ್ವತಾ-ಮುಪಾಸನ ನಿಷ್ಪತ್ತಿ ವಿರೋಧಿ ಪ್ರಾಚೀನ ಕರ್ಮ ವಿನಾಶನಾನೀತ್ಯರ್ಥಃ** ||೫||

---

ದರೆ ಸಾಲದು; ಸಹೇತುಕವಾಗಿ ಹೇಳಬೇಕೆಂದು ಶಾಸ್ತ್ರಪಙ್ಕ್ತಿಗಳನ್ನನುಸರಿಸಿ ಕಾರಣವನ್ನು ತಿಳಿಸುತ್ತಾರೆ. ಹಾಗೆ ತಿಳಿಸುವಾಗ (1) **"ಧರ್ಮೇಣ ಪಾಪಮಪನುದತಿ"** **"ಕಷಾಯೇ ಕರ್ಮಭಿಃಪಕ್ವೇ ತತೋಜ್ಞಾನಂ ಪ್ರವರ್ತತೇ" "ಕಷಾಯ ಪಕ್ತಿಃ ಕರ್ಮಾಣಿ ಜ್ಞಾನಂತು ಪರಮಾಗತಿಃ", "ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ",** ಇತ್ಯಾದಿ ಶಾಸ್ತ್ರೋಪದೇಶಗಳನ್ನು ಮನಸ್ಸಿನಲ್ಲಿಟ್ಟು ಅವು **ಪಾವನಾನಿ**-ಉಪಾಸನ ನಿಷ್ಪತ್ತಿಗೆ ಪ್ರತಿಬಂಧಕಗಳಾದ ಸಮಸ್ತ ಪ್ರಾಚೀನ ಕರ್ಮಗಳನ್ನು ಹೋಗಲಾಡಿಸಿ, ಮೋಕ್ಷಾರ್ಥಿಗಳನ್ನು ಪವಿತ್ರೀಕರಿಸುತ್ತವೆಂದು ಉಪದೇಶಿಸುತ್ತಾರೆ.—

**ಯಜ್ಞ ದಾನ ತಪಃ ಪ್ರಭೃತೀನಿ**-ಮೂಲದಲ್ಲಿ ಚಕಾರಕ್ಕೆ ಪ್ರಭೃತೀನಿ ಎಂದು ಅರ್ಥ ಮಾಡಿದರು, ಯಜ್ಞವೂ ದಾನವೂ ತಪಸ್ಸೂ ಇವೇ ಮೊದಲಾದವುಗಳೂ ಸಹ. ಇವು **ವರ್ಣಾಶ್ರಮ ಸಂಬಂಧೀನಿ ಕರ್ಮಾಣಿ**-ಮೋಕ್ಷಾರ್ಥಿಗಳ ವರ್ಣಾಶ್ರಮ ಸಂಬಂಧಿಗಳಾಗಿರುವ ಕರ್ಮಗಳಾದ ಪ್ರಯುಕ್ತ, **ಮನೀಷಿಣಾಂ** ಎಂದರೆ **ಮನನ ಶೀಲಾನಾಂ**-ಪರಮಾತ್ಮನನ್ನು ನಿರಂತರವಾಗಿ ತೈಲಧಾರಾವಚ್ಛಿನ್ನ ಸಂತತಿ ರೂಪದಲ್ಲಿ ಉಪಾಸನೆಯ ಮೂಲಕ ಮನನ ಮಾಡುವ ಶೀಲವುಳ್ಳವರಿಗೆ, **ಪಾವನಾನಿ**-ಈ ಮನನ ಮೂಲಕ ಉಪಾಸನ ನಿಷ್ಪತ್ತಿಗೆ ಪ್ರತಿಬಂಧಕ ಪಾಪಗಳನ್ನು ಹೋಗಲಾಡಿಸಿ ಪವಿತ್ರೀಕರಿಸುವಂತವುಗಳು; ಇಲ್ಲಿ **ಮನನವು-ಉಪಾಸನೆಯು; ಮುಮುಕ್ಷೂಣಾಂ**-ಮೋಕ್ಷಾರ್ಥಿಗಳಾಗಿ, **ಯಾವಜ್ಜೀವ ಮುಪಾಸನ ಕುರ್ವತಾಂ**-ಯಾಜ್ಜೀವವೂ ಉಪಾಸನೆಯನ್ನು ಮಾಡತಕ್ಕದ್ದೆಂಬ ವಿಧಿಗನುಗುಣವಾಗಿ ಉಪಾಸನೆಯನ್ನು ಕೈಕೊಂಡಿರುವವರಿಗೆ, **ಉಪಾಸನ ನಿಷ್ಪತ್ತಿ ವಿರೋಧಿ ಪ್ರಾಚೀನ ಕರ್ಮವಿನಾಶನೀನೀತ್ಯರ್ಥಃ**-ಪಾವನಾನಿ ಎಂಬುದರ ತಾತ್ಪರ್ಯವೇನೆಂದರೆ—ಉಪಾಸನವು ಕೈಗೂಡಲು ವಿರೋಧಿಗಳಾದ ಪ್ರಾಚೀನ ಕರ್ಮಗಳನ್ನೆಲ್ಲಾ ನಾಶಮಾಡುವುವು ಎಂಬ ಭಾವವು. ಇಲ್ಲಿ ಮನನವೆಂದರೆ ಉಪಾಸನವೆಂಬ ಭಾಷ್ಯದ ಆಶಯವೇನು ಎಂದರೆ ಶ್ರವಣಾನಂತರ ಹೇಳುವ ಮನನ ಶಬ್ದದಿಂದ ಮೇಲೆ ಉದಾಹರಿಸಿರುವ ಬೃಹದಾರಣ್ಯಕ ವಾಕ್ಯವಾದ **ಏತಮೇವ ವಿದಿತ್ವಾ ಮುನಿರ್ಭವತಿ** ಎಂಬ ವಾಕ್ಯಾನುಸಾರ ಉಪಾಸನವು ಹೇಳಲ್ಪಟ್ಟಿತೆಂಬ ತಾತ್ಪರ್ಯವು. ಆ ಸಂದರ್ಭದಲ್ಲಿ **"ಏತಮೇವ ವಿದಿತ್ವಾ ಮುನಿರ್ಭವತಿ"** ಎಂಬುದಕ್ಕೆ ಶ್ರೀರಙ್ಗ ರಾಮಾನುಜರ ಭಾಷ್ಯವೇನೆಂದರೆ **ಏತಮೇವಾತ್ಮಾನಂ ವಿದಿತ್ವಾ ಮುನಿಃ— ಮನನಶೀಲಃ, ಯೋಗೀ ಭವತಿ, ನಾನ್ಯಮಿತ್ಯರ್ಥಃ.** ಪರಮಾತ್ಮನನ್ನು ಹೊಂದಬೇಕೆಂದಿರುವ ಮೋಕ್ಷಾರ್ಥಿಯು ಪರಮಾತ್ಮೋಪಾಸನೆಯನ್ನೇ ಮಾಡತಕ್ಕದ್ದು, ಅನ್ಯ ದೇವತೆಯನ್ನು ಉಪಾಸಿಸತಕ್ಕದ್ದಲ್ಲವು. ಹೇಗೆಂದರೆ ಗಂಗಾಮೂಲವನ್ನು ಹೊಂದಬೇಕೆಂದಿರುವವನು ಗಂಗೆಯನ್ನೇ ನೋಡುತ್ತಾ ಪಶ್ಚಿಮಕ್ಕೆ ತೆರಳಬೇಕೇ ವಿನಾ ಗಂಗೆಯ ಉತ್ತರ, ದಕ್ಷಿಣ ದಿಕ್ಕನ್ನು ನೋಡುತ್ತಾ ಹೋದರೆ, ಹೇಗೆ ದೊರೆಯುವುದಿಲ್ಲವೋ ಹಾಗೆ ಎಂಬ ಭಾವವು. ಆದುದರಿಂದಲೇ **ಮನೀಷಿಣಾಂ** ಎಂದರೆ **ಮನನಶೀಲಾನಾಂ** ಎಂದು ಈ ಶ್ರುತಿವಾಕ್ಯವನ್ನು ಮನಸ್ಸಿನಲ್ಲಿಟ್ಟು ವ್ಯಾಖ್ಯಾನ ಮಾಡಿ **ಮನನವೆಂದರೆ** ಪರಮಾತ್ಮೋಪಾಸನೆ ಎಂದು ಅರ್ಥಮಾಡಿ, ಪರಮಾತ್ಮೋಪಾಸಕರಿಗೆ ಎಂದು ಮನೀಷಿಣಾಂ ಎಂಬ ಪದಕ್ಕೆ ಭಾಷ್ಯವೆಂದು ಭಾವಿಸತಕ್ಕದ್ದು.

ಯಾವಜ್ಜೀವವೂ ಪರಮಾತ್ಮೋಪಾಸನವನ್ನು ಮಾಡತಕ್ಕದ್ದೆಂದು (೧) **"ಪ್ರಾಯಣಾನ್ತ ಮೋಙ್ಕಾರ ಮಭಿಧ್ಯಾಯೀತ"** ಎಂದಾರಂಭಿಸಿ, **"ಯಃ ಪುನರೇತಂ ತ್ರಿಮಾತ್ರೇಣೋ ಮಿತ್ಯನೇ ನೈವಾಕ್ಷರೇಣ ಪರಮಪುರುಷ ಮಭಿಧ್ಯಾಯೀತ"** ಎಂದು ಪ್ರಶ್ನೋಪನಿಷತ್ತಿನಲ್ಲಿ ಹೇಳಲ್ಪಟ್ಟಿರುತ್ತದೆ. ಸೂತ್ರಕಾರರು (೨) **"ಆಪ್ರಯಾಣಾತ್ತತ್ರಾಪಿ ಹಿ ದೃಷ್ಟಮ್"** ಎಂಬ ಸೂತ್ರದಲ್ಲೂ ವ್ಯಕ್ತಪಡಿಸಿರುತ್ತಾರೆ. ಶ್ರೀ ವಿದುರರೂ **"ಯಾವಜ್ಜೀವಂತು ತತ್ಕುರ್ಯಾತ್ ಯೇನ ಪ್ರೇತ್ಯ ಸುಖಂ ವಸೇತ್"** ಎಂದೂ ಹೇಳಿರುತ್ತಾರೆ. ಯಾವಾಗ ಉಪಾಸನವು ಯಾವಜ್ಜೀವವೂ ಅನುಷ್ಠಿಸತಕ್ಕದ್ದೆಂದಾಯಿತೋ, ಅದರ ಅಙ್ಗವೂ ಸಹ ಯಾವಜ್ಜೀವವೂ ಅನುಷ್ಠಿಸತಕ್ಕದ್ದೆಂದು ಏರ್ಪಟ್ಟಿತು. ಈ ಅಭಿಪ್ರಾಯವೇ (೩) **"ಸಖಲ್ವೇವಂ ವರ್ತಯನ್ಯಾವದಾಯುಷಂ"** ಇತ್ಯಾದಿ ಶ್ರುತಿವಾಕ್ಯದಲ್ಲಿ ಉಪಪಾದಿತವು. **ಪಾವನಾನಿ** ಎಂಬುದಕ್ಕೆ ಉಪಾಸನಕ್ಕೆ ವಿರೋಧಿಯಾಗಿರುವ ಪ್ರಾಚೀನಕರ್ಮಗಳಾದ ಪುಣ್ಯಪಾಪಗಳನ್ನು ನಾಶಮಾಡುವುವು ಎಂಬ ವ್ಯಾಖ್ಯಾನದಿಂದ ಪ್ರಾಚೀನ ಕರ್ಮಗಳೆಲ್ಲಾ ನಾಶವಾಗಬಹುದೇ ವಿನಾ ಬುದ್ಧಿ ಪೂರ್ವಕವಾಗಿ ಮಾಡಿದ ಉತ್ತರಾಘಗಳು ನಾಶವಾಗುವದಿಲ್ಲವೆಂಬ ಭಾವವು ಸೂಚಿತವು. ಈ ಅಭಿಪ್ರಾಯವು (೪) **"ತದಧಿಗಮ ಉತ್ತರ ಪೂರ್ವಾಘಯೋರಶ್ಲೇಷ ವಿನಾಶೌ ತದ್ವ್ಯಪದೇಶಾತ್"** ಎಂಬ ಶಾರೀರಕ ಸೂತ್ರದಲ್ಲಿ ಉಪಪಾದಿತವು. ಭಕ್ತಿಯೋಗದ ಉಪಾಸನವು ಆರಂಭಿಸಲ್ಪಟ್ಟರೆ, ಆ ಉಪಾಸನೆಯ ಮಹಿಮೆಯಿಂದ, ಹಿಂದೆ ಮಾಡಿದ ಪುಣ್ಯಪಾಪಗಳು ನಾಶವಾಗುತ್ತವೆ; ಪ್ರಾಮಾದಿಕವಾಗಿ, ಬುದ್ಧಿಪೂರ್ವಕಗಳಲ್ಲದ ಉಪಾಸನಾರಂಭವಾದ ಮೇಲೆ ಮಾಡಲ್ಪಟ್ಟ ಪುಣ್ಯಪಾಪಗಳೂ ಅಂಟುವದಿಲ್ಲವೆಂದು ಸೂತ್ರವು ಹೇಳುತ್ತದೆ. ಏಕೆಂದರೆ (೫) **"ಏವಂ ಸರ್ವೇ ಪಾಪ್ಮಾನಃ ಪ್ರದೂಯನ್ತೇ"** ಎಂಬ (೬) **ಏವಮೇವಂ ವಿದಿ ಪಾಪಂ ಕರ್ಮನಶ್ಲಿಷ್ಯತೇ"** ಎಂಬ ಶ್ರುತಿ ಪ್ರಮಾಣಗಳುಂಟು.

ಅಪ್ರಸ್ತುತವಾದರೂ ಈ ಸಂದರ್ಭದಲ್ಲಿ ವಿಚಾರ ಮಾಡತಕ್ಕ ಒಂದು ವಿಷಯ ಉಂಟು; ಏನೆಂದರೆ ಶ್ರೀ ರಾಮಾವತಾರಿಯಾಗಿ ಸರ್ವೇಶ್ವರನು ಭರನ್ಯಾಸವೇ ತನ್ನನ್ನು ಹೊಂದಲು ಪರಮೋಪಾಯವನ್ನಾಗಿ ಉಪದೇಶಿಸಿದನು; ಕೃಷ್ಣಾವತಾರಿಯಾಗಿ ಪಾರ್ಥಸಾರಥಿಯಾಗಿ ಉಪಾಸನವು ತನ್ನ ಪ್ರಾಪ್ತಿಗೆ ಉಪಾಯವನ್ನಾಗಿ ಉಪದೇಶಿಸಿದನು; ಆದುದರಿಂದ ಪ್ರಪದನ ಭಕ್ತಿಯೋಗಗಳೆರಡೂ ಉಪಾಯಗಳು ಎಂದು ಏರ್ಪಟ್ಟವು. ಉಪಾಸನಕ್ಕೆ ಕರ್ಮಯೋಗವು ಅಙ್ಗವೆಂದೂ ಅದು ಯಾವಜ್ಜೀವವೂ ಅಙ್ಗಿಯೊಂದಿಗೆ ಅನುಷ್ಠಿಸತಕ್ಕದ್ದೆಂದೂ ಇಲ್ಲಿ ಸ್ಥಾಪಿಸಲ್ಪಟ್ಟಿತು; ಇದರಿಂದ ನಿತ್ಯ ನೈಮಿತ್ತಿಕಗಳು ವಿದ್ಯಾಙ್ಗಗಳಾಗಿ ಯಾವಜ್ಜೀವವೂ ಅನುಷ್ಠಿಸಲ್ಪಡತಕ್ಕವೆಂದಾಯಿತು. ಭರನ್ಯಾಸಕ್ಕಾದರೋ ಅಙ್ಗಗಳು ಬೇರೆಯಾಗಿ ಅದು ಸಕೃದನುಷ್ಠೇಯವಾಗಿರುವಾಗ ಈ ನಿತ್ಯನೈಮಿತ್ತಿಕಗಳನ್ನು ಪ್ರಪನ್ನನಾದ ಕೃತಕೃತ್ಯನು ಅನುಷ್ಠಿಸತಕ್ಕದ್ದೇ ಬಿಡತಕ್ಕದ್ದೇ ಎಂಬ ಚರ್ಚೆಯಲ್ಲಿ, ನಮ್ಮಲ್ಲೇ ಕೆಲವರಿಗೆ ಅನಾವಶ್ಯಕವೆಂಬ ಅಭಿಪ್ರಾಯವಿರುತ್ತದೆ. ಆಜ್ಞಾ ಕೈಙ್ಕರ್ಯಗಳಾದುದರಿಂದ ಅವುಗಳನ್ನು ಪರಿತ್ಯಾಗಮಾಡಿದರೆ ಆಜ್ಞಾಭೇದಿಯಾಗಿ ಭಗವನ್ನಿಗ್ರಹಕ್ಕೆ ಪಾತ್ರನಾಗುವದರಿಂದ ಪ್ರಪನ್ನನಾದ ಕೃತಕೃತ್ಯನೂ ತನ್ನ ವರ್ಣಾಶ್ರಮಕ್ಕೆ ಉಚಿತವಾದ ನಿತ್ಯನೈಮಿತ್ತಿಕಗಳನ್ನು ಭಗವದಾರಾಧನೆ ರೂಪದಲ್ಲಿ ಭಗವತ್ಪ್ರೀತ್ಯರ್ಥವಾಗಿ ಮಾಡಿಯೇ ತೀರಬೇಕು ಎಂದು ಶ್ರೀ ನಿಗಮಾನ್ತ ದೇಶಿಕರವರು ಶ್ರೀಮದ್ರಹಸ್ಯತ್ರಯಸಾರದಲ್ಲಿ ಅನೇಕ ಪೂರ್ವಪಕ್ಷಗಳಿಗೆಲ್ಲಾ ಸಮಾಧಾನವನ್ನು ಹೇಳಿ, ಅನೇಕ ಶಾಸ್ತ್ರ ಪ್ರಮಾಣಗಳಿಂದ ಸ್ಥಾಪಿಸಿರುತ್ತಾರೆ. ೨೬೪೧ ರಿಂದ ೨೬೭೬ ಪುಟಗಳನ್ನು ನೋಡಿ, ಇಲ್ಲಿ ಯಜ್ಞ ದಾನ ತಪಸ್ಸುಗಳು ಹೇಳಲ್ಪಟ್ಟವು. ನಿತ್ಯನೈಮಿತ್ತಿಕಗಳ ಮಾತು ಏತಕ್ಕೆ? ಎಂದರೆ ಇವುಗಳಿಗೂನಿತ್ಯನೈಮಿತ್ತಿಕಗಳು ಅಙ್ಗಗಳು, ಅದೂ ಅಲ್ಲದೆ ಯಜ್ಞ ಶಬ್ದದಲ್ಲೇ ಇವುಗಳೂ ಅಂತರ್ಗತಗಳು. ವೈಶ್ವದೇವವು ಪಂಚಮಹಾ ಯಜ್ಞವೆಂದು ಹೇಳಲ್ಪಡುತ್ತದೆ.

---

(೧) ಪ್ರಶ್ನ ೫. ೫. (೨) ಶಾರೀ. ೪. ೧. ೧೨. (೩) ಛಾಂ. ೮.೧೫.೧. (೪) ಶಾರೀ. ೪.೧.೧೩ (೫) ೫.೨೪.೩. (೬) ೪.೧೪.೩.

**ಮೂ. ಏತಾನ್ಯಪಿ ತು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥೬॥**

---

**ಮೂಲಕ್ಕೆ ಅರ್ಥವು.** ಈ ಯಜ್ಞ ದಾನ ತಪಸ್ಸುಗಳಾದ ಕರ್ಮಗಳು ಅವಶ್ಯ ಮಾಡತಕ್ಕವು; ಬಿಡತಕ್ಕದ್ದಲ್ಲವು ಎಂದು ಹೇಳಿ, ಅದಕ್ಕೆ ಕಾರಣವೇನೆಂದರೆ, ಅವುಗಳು ಈ ಮುಮುಕ್ಷುವಿಗೆ ಉಪಾಸನಕ್ಕೆ ಪ್ರತಿಬಂಧಕಗಳಾದ ಪ್ರಾಚೀನಕರ್ಮಗಳನ್ನೆಲ್ಲಾ ಹೋಗಲಾಡಿಸುತ್ತವೆ ಎಂದು ಹೇಳಿದರು. ಹಿಂದೆ **ಮಯಿ ಸರ್ವಾಣಿ ಕರ್ಮಾಣಿ** ಎಂಬ ತೃತೀಯಾಧ್ಯಾಯದ ೩೦ನೆಯ **ಶ್ಲೋಕದಲ್ಲಿ** ಹೇಳಿದುದನ್ನು ಇನ್ನೊಂದುಸಲ ಹೇಳುವವರಾಗಿ, ಸನ್ನ್ಯಾಸ ತ್ಯಾಗ ಶಬ್ದಗಳಿಗೆ ಕರ್ಮದಲ್ಲಿ ಸಙ್ಗ, ಫಲ, ಕರ್ತೃತ್ವಗಳನ್ನು ತ್ಯಾಗಮಾಡುವದೇ ಸಿದ್ಧಾನ್ತಾರ್ಥವೆಂದು ಹಿಂದೆ ಹೇಳಿದುದನ್ನೇ ಅನುವಾದಮಾಡಿ ಹೇಳುತ್ತಾರೆ.

**ಏತಾನ್ಯಪಿ ತು ಕರ್ಮಾಣಿ**—ಈ ಮೇಲೆ ಹೇಳಿದ ಯಜ್ಞ ದಾನ ತಪಸ್ಸುಗಳಾದ ಈ ಎಲ್ಲಾ ವಿಹಿತ ಕರ್ಮಗಳನ್ನೂ ಕೂಡ, ಇವುಗಳನ್ನೂ ಕೂಡ ಎಂದು **ಅಪಿ** ಶಬ್ದವಿರುವದರಿಂದ ಮೋಕ್ಷಾರ್ಥಿಯು ಇನ್ನು ಯಾವುದನ್ನೋ ಮಾಡುತ್ತಿರುವದು ಸೂಚಿತವಾಗುವದರಿಂದ ಈತನು ನಿತ್ಯವೂ ಮಾಡುವ ಉಪಾಸನದೊಂದಿಗೆ ಇವುಗಳೂ ಮಾಡಲ್ಪಡತಕ್ಕದ್ದೆಂದು ಹೇಳಲ್ಪಟ್ಟಿತು; **ತು** ಪ್ರತ್ಯಯವು ಏತಕ್ಕೆ ಎಂದರೆ, ಉಪಾಸನವು ಜ್ಞಾನರೂಪವಾಗಿರುವದರಿಂದ ಅದಕ್ಕೂ ಇವುಗಳಿಗೂ ಇರುವ ವ್ಯತ್ಯಾಸವನ್ನು ತೋರಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು; ಆದುದರಿಂದ **ಏತಾನ್ಯಪಿ ತು ಕರ್ಮಾಣಿ**-ಜ್ಞಾನರೂಪ ಉಪಾಸನವು ಹೇಗೆ ದೇಹಾವಸಾನದವರೆಗೂ ಅನುಷ್ಠಿಸತಕ್ಕದ್ದೋ, ಹಾಗೆಯೇ ಉಪಾಸನಕ್ಕೆ ಪ್ರತಿಬಂಧಕ ಪುಣ್ಯಪಾಪಗಳನ್ನು ಹೋಗಲಾಡಿಸಿ ಉಪಾಸನ ನಿಷ್ಪತ್ತಿಯನ್ನುಂಟುಮಾಡುವದೆಂದು **ಪಾವನಾನಿ ಮನೀಷಿಣಾಂ** ಎಂದು ಹೇಳಲ್ಪಟ್ಟ ಈ ಕರ್ಮಗಳೂ ಕೂಡ, **ಸಙ್ಗಂ**-ನಾನು ನಡೆಸಿದೆನು ಎಂಬ ಕರ್ತೃತ್ವ ಮತ್ತು ಅಹಂಭಾವ ಮಮತೆಗಳನ್ನೂ, ಮತ್ತು **ಫಲಾನಿ**-ಅವುಗಳಿಂದುಂಟಾಗುವ ಫಲಗಳನ್ನೂ, **ತ್ಯಕ್ತ್ವಾ** ಬಿಟ್ಟು, ಅಥವಾ ಇವೆರಡುಗಳನ್ನು ಹೇಳಿದುದರಿಂದ, ಮೂರನೆಯದಾದ ಕರ್ತೃತ್ವವನ್ನೂ ಸಹ ತ್ಯಾಗಮಾಡಿ, **ಕರ್ತವ್ಯಾನೀತಿ**-ಮೋಕ್ಷಾರ್ಥಿಗೆ ಶಾಸ್ತ್ರವಿಹಿತವಾದವುಗಳು, ಪ್ರತಿಬಂಧಕ ಪಾಪಗಳ ನಿವಾರಣೆಗಾಗಿಯೂ, ಉಪಾಸನವು ವೃದ್ಧಿಯನ್ನು ಹೊಂದುವದಕ್ಕಾಗಿಯೂ ಮಾಡತಕ್ಕದ್ದೆಂದು ಶಾಸ್ತ್ರದಲ್ಲಿ ವಿಹಿತವಾದುವುಗಳೆಂಬುದು, **ಹೇ ಪಾರ್ಥ**-ಓ ಪೃಥುಪುತ್ರನಾದ ಅರ್ಜುನನೇ, **ಮೇ**-ಸರ್ವೇಶ್ವರನಾದ ನನ್ನ, **ಉತ್ತಮಮ್ ಮತಂ**-ಸರ್ವೋತ್ಕೃಷ್ಟ ಅಭಿಪ್ರಾಯವು, ಇದರಿಂದ ಇತರರು ಹೇಳುವ ಅಭಿಪ್ರಾಯಗಳೆಲ್ಲಾ ಉತ್ತಮಮತವಲ್ಲವೆಂದು ಹೇಳಿದಂತಾಯಿತು. ಕರ್ಮಸ್ವರೂಪ ತ್ಯಾಗವನ್ನು ಹೇಳುವ ಮತವೂ, ಇಂತಹ ಕರ್ಮಗಳನ್ನು ಮಾಡುವದು ದೋಷಯುಕ್ತವೆಂದು ಹೇಳುವ ಮತವೂ, ಉತ್ತಮವಾದುವಲ್ಲವೆಂದು ಹೇಳಿದಂತಾಯಿತು. **ನಿಶ್ಚಿತಂ**-ನಿಸ್ಸಂದೇಹವಾದ ಸಿದ್ಧಾನ್ತವು. ಹಿಂದೆ ನಾಲ್ಕನೆಯ ಶ್ಲೋಕದಲ್ಲಿ **ತ್ರಿವಿಧಸ್ಸಂಪ್ರಕೀರ್ತಿತಃ** ಎಂಬುದರಿಂದ ಸಙ್ಗ, ಫಲ, ಕರ್ತೃತ್ವತ್ಯಾಗಗಳು ಮೂರೂ ಹೇಳಲ್ಪಟ್ಟಿರುವದರಿಂದ, **ಸಙ್ಗಂ ತ್ಯಕ್ತ್ವಾ ಫಲಾನಿ ಚ** ಎಂದು ಎರಡೇ ಹೇಳಲ್ಪಟ್ಟಿದ್ದರೂ, **ಚ** ಶಬ್ದ ಸ್ವಾರಸ್ಯದಿಂದ ಮೂರನೆಯದಾದ ಕರ್ತೃತ್ವತ್ಯಾಗವು ಹೇಳಲ್ಪಟ್ಟಿತೆಂದೇ ಭಾವಿಸತಕ್ಕದ್ದು. ಈ ಕರ್ಮಗಳಲ್ಲಿ ಕರ್ತೃತ್ವವು ತನಗಿಲ್ಲವು, ಪರಮಪುರುಷನ ಸಙ್ಕಲ್ಪಮೂಲಕ ತನಗೆ ಪ್ರಾಪ್ತವಾಗಿರುವ ಶರೀರದ ಮೂಲಕ ಆತನೇ ಮಾಡಿಸುವನಾದುದರಿಂದ ಆತನಲ್ಲೇ ಪ್ರೀತ್ಯರ್ಥವಾಗಿ, ಆತನ ಆರಾಧನಾರೂಪಗಳಾದುದರಿಂದ ಸಮರ್ಪಿಸುವುದರ ಮೂಲಕ ಕರ್ತೃತ್ವತ್ಯಾಗವೂ ಸಹ ಇವುಗಳಲ್ಲೇ ಸೇರಿತೆಂದು ಗ್ರಹಿಸತಕ್ಕದ್ದು. ಹೀಗೆ ಕರ್ಮಗಳ ಸಙ್ಗ, ಫಲ, ಕರ್ತೃತ್ವಗಳನ್ನು ಬಿಟ್ಟು ಅವುಗಳನ್ನು ಪರಮಪುರುಷಾರಾಧನವಾಗಿ ಮಾಡತಕ್ಕದ್ದೆಂದು ನಿಸ್ಸಂಶಯವಾಗಿ **ಅನೇಕ ಕಡೆ**ಗಳಲ್ಲಿ **ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ । ಮಾ ಕರ್ಮಫಲಹೇತು**

**ಭಾ. ಯಸ್ಮಾನ್ಮನೀಷಿಣಾಂ ಯಜ್ಞ ದಾನ ತಪಃ ಪ್ರಭೃತೀನಿ ಪಾವನಾನಿ, ತಸ್ಮಾದುಪಾಸನವದೇ ತಾನ್ಯಪಿ ಯಜ್ಞಾದಿ ಕರ್ಮಾಣಿ ಮದಾರಾಧನ ರೂಪಾಣಿ,**

---

**ಭೂರ್ಗಃ ಮಾತೇ ಸಙ್ಗೋಽಸ್ತ್ವ ಕರ್ಮಣಿ**" || (೨-೪೭) ಎಂಬ "**ಮಯಿ ಸರ್ವಾಣಿ ಕರ್ಮಾಣಿ**" ಎಂಬಿವೇ ಮೊದಲಾದ ಸ್ಥಳಗಳಲ್ಲಿ ಹೇಳಿರುವಾಗ, ಇಲ್ಲಿ ಪುನಃ ಹೇಳತಕ್ಕ ಪ್ರಮೇಯವೇನು? ಎಂದರೆ, ಯಾವದಾಯುಷಂ ಉಪಾಸನ ನಿಷ್ಪತ್ತಿಗಾಗಿ ಉಪಾಸನದೊಂದಿಗೆ ಮಾಡತಕ್ಕದ್ದೆಂಬ ಭಾವವನ್ನು ಇಲ್ಲಿ ಅರ್ಜುನನಿಗೆ ಮುಖ್ಯವಾಗಿ ತಿಳಿಸಬೇಕಾಗಿರುವುದರಿಂದ ಪುನರುಕ್ತಿ ದೋಷಕ್ಕೆ ಅವಕಾಶವಿಲ್ಲವು. ಹೀಗೆ ಸಿದ್ಧಾನ್ತಾರ್ಥವೆಂದು ಕಂಠೋಕ್ತವಾಗಿ ಶ್ರೀಕೃಷ್ಣಭಗವಾನ್ದರು ಹೇಳಿದ್ದರೂ, ವಾಕ್ಯಜನ್ಯಜ್ಞಾನವುಂಟಾಗಿರುವ ಉಪಾಸಕನಿಗೆ ಇವುಗಳು ಅನಾವಶ್ಯಕವೆಂದೂ, ಅಂತವರು ಜೀವನ್ಮುಕ್ತಿಯನ್ನು ಹೊಂದಿದವರೆಂದೂ ಹೇಳುವ ಅಭಿಪ್ರಾಯವು ಹೇಗೆ ಸಮಂಜಸವೋ ತಿಳಿಯದು. **ಸಖಲ್ವೇವಂ ವರ್ತಯನ್ ಯಾವದಾಯುಷಂ** ಎಂಬ ಶ್ರುತ್ಯರ್ಥವನ್ನು ಚನ್ನಾಗಿ ಪರಿಶೀಲನಮಾಡಿದುದಾದರೆ ಮುಕ್ತಿಯು ಅರ್ಚಿರಾದಿಗತಿ ಮುಂತಾದ್ದೆಲ್ಲಾ ಪ್ರಾಪ್ತವಾದನಂತರವೆಂದು ತೋರಿಬರುತ್ತದೆ. ಕರ್ಮಗಳ ಸ್ತುತ್ಯರ್ಥವಾಗಿ ಹೇಳಿದ ವಿಷಯವೇ ಏನಾ ಜ್ಞಾನೇಗ್ರೇಸರನಾದ ಪ್ರಸನ್ನನಿಗೆ ಕರ್ಮಗಳಿಂದ ಆಗತಕ್ಕದ್ದೇನೂ ಇಲ್ಲವೆಂಬ ಶಾಂಕರವಾದವು, ಈ ಭಗವದುಕ್ತಿಗಳಿಗೂ ಉಪನಿಷದ್ವಾಕ್ಯಗಳಿಗೂ ಪ್ರತ್ಯುತ ವಿರುದ್ಧವು. "**ಕುರ್ವನ್ನೇ ವೇಹಕರ್ಮಾಣಿ ಜಿಜೀವಷೇಚ್ಛತಗಂ ಸಮಾಃ**" (ಈಶಾ. ೨) ಎಂಬುದು ಅನುಸಂಧೇಯವು ಉಪಾಸಕನಾದ ಜ್ಞಾನಿಗೆ ಕರ್ಮ ಬೇಕಾಗಿಲ್ಲವೆಂದು ವಾದಮಾಡುವವರನ್ನು ಉಪಾಸನವೆಂತಾದದ್ದೆಂದು ಕೇಳಬೇಕಾಗುತ್ತದೆ ಅದೂ ಕರ್ಮವಲ್ಲವೇ? ಮನಸ್ಸಿನ ವ್ಯಾಪಾರವಲ್ಲವೇ? ಆದುದರಿಂದ ಕರ್ಮವನ್ನು ಬಿಟ್ಟಿರಲು ಸಾಧ್ಯವೇ ಇಲ್ಲವು. ಆದುದರಿಂದಲೇ "**ನಹಿಕಶ್ಚಿತ್ ಕ್ಷಣಮಪಿ ಜಾತುತಿಷ್ಠತ್ಯ ಕರ್ಮಕೃತ್**" ಎಂದು ಹೇಳಲ್ಪಡಲಿಲ್ಲವೇ?

**ಭಾಷ್ಯಾರ್ಥವು.** ಹಿಂದೆ **ಪಾವನಾನಿ ಮನೀಷಿಣಾಂ** ಎಂದು ಹೇಳಿದುದರಿಂದಲೇ ಈ ಕರ್ಮಗಳೆಲ್ಲಾ ಆವಶ್ಯಕವಾಗಿ **ಕರ್ತವ್ಯಾನಿ** ಎಂದು ಹಿಂದಿನ ಶ್ಲೋಕಕ್ಕೂ ಈ ಶ್ಲೋಕಕ್ಕೂ ಹೇತು ಸಾಧ್ಯಭಾವವೆಂದು ಸಙ್ಗತಿಯನ್ನು ಪ್ರದರ್ಶಿಸುವದಕ್ಕಾಗಿ **ಯಸ್ಮಾತ್, ತಸ್ಮಾತ್** ಎಂಬ ಪ್ರಯೋಗಗಳು. ಹಿಂದೆ ಳನೆಯ ಶ್ಲೋಕದಲ್ಲಿ ಹೇಳಲ್ಪಟ್ಟ ಅಭಿಪ್ರಾಯವನ್ನೇ ಸಮರ್ಥನಮಾಡಿ ಹೇಳಿದುದರಿಂದ, ಅದನ್ನೇ ದೃಢೀಕರಿಸಿ ನಿಗಮನದಲ್ಲಿ ಆ ಶ್ಲೋಕಾಭಿಪ್ರಾಯವೇ ಇಲ್ಲಿಯೂ ಹೇಳಲ್ಪಡುತ್ತದೆ.—**ಯಸ್ಮಾತ್**-ಯಾವ ಕಾರಣದಿಂದ, **ಮನೀಷಿಣಾಂ**-ಮನನಶೀಲರಿಗೆ ಎಂದರೆ ಉಪಾಸಕರಿಗೆ, **ಯಜ್ಞ ದಾನ ತಪಸ್ಸೇ ಮೊದಲಾದ ಕರ್ಮಗಳು, ಪಾವನಾನಿ**-ಉಪಾಸನಕ್ಕೆ ವಿರೋಧಿಗಳಾದ ಪ್ರಾಚೀನ ಪುಣ್ಯಪಾಪಗಳನ್ನು ಹೋಗಲಾಡಿಸುವಗಳೋ, **ತಸ್ಮಾತ್**-ಆ ಕಾರಣದಿಂದ, **ಉಪಾಸನವದ್ಯೇತಾನ್ಯಪಿ**-ಉಪಾಸನದ ಹಾಗೆ ಈ ಕರ್ಮಗಳೂ ಕೂಡ, ಮೂಲದಲ್ಲಿಲ್ಲದ **ಉಪಾಸನವತ್** ಎಂಬ ಭಾಷ್ಯವು ಹೇಗೆ? ಎಂದರೆ **ಅಪಿ** ಶಬ್ದದಿಂದ ತೋರುವ ಅರ್ಥವು; ಭಕ್ತಿಯೋಗವೆಂದರೆ ಉಪಾಸನಪ್ರಕರಣವಾದುದರಿಂದ, **ಉಪಾಸನವತ್** ಎಂಬ ಭಾಷ್ಯವು; ಅವು ಯಾವುವೆಂದರೆ **ಮದಾರಾಧನರೂಪಾಣಿ**-ನನ್ನ ಆರಾಧನರೂಪಗಳಾದ **ಯಜ್ಞಾದಿ ಕರ್ಮಾಣಿ**-ಯಜ್ಞವೇ ಮೊದಲಾದ ಕರ್ಮಗಳನ್ನು **ಸಙ್ಗಂ** ಎಂದರೆ **ಕರ್ಮಣಿ ಮಮತಾಂ**- ಕರ್ಮದಲ್ಲಿ ಮಮತೆಯನ್ನೂ, **ಫಲಾನಿಚ**-ಫಲಗಳನ್ನೂ ಸಹ, **ತ್ಯಕ್ತ್ವಾ**-ಪರಿತ್ಯಾಗಮಾಡಿ, **ಅಹರಹಃ**-ಪ್ರತಿ ದಿನದಲ್ಲೂ, **ಆಪ್ರಯಾಣಾತ್**-ದೇಹಾವಸಾನಾನಂತರ ಅರ್ಚಿರಾದಿ ಮಾರ್ಗದಲ್ಲಿ ಹೋಗುವವರೆಗೂ ಎಂದರೆ ಯಾವಜ್ಜೀವವೂ, **ಉಪಾಸನ ನಿರ್ವೃತ್ತಯೇ**-ಉಪಾಸನವು ವೃದ್ಧಿಹೊಂದುವದಕ್ಕಾಗಿ, **ಮುಮುಕ್ಷುಣಾ**-ಮೋಕ್ಷಾರ್ಥಿಯಿಂದ **ಕರ್ತವ್ಯಾನೀತಿ**-ಅನುಷ್ಠಿಸತಕ್ಕವುಗಳೆಂಬುದು, **ಮಮ**-ಸರ್ವಜ್ಞನಾಗಿ ಸರ್ವೇಶ್ವರನಾದ ನನ್ನ

**ಸಙ್ಗಂ-ಕರ್ಮಣಿ ಮಮತಾಂ ಫಲಾನಿಚ, ತ್ಯಕ್ತ್ವಾ ಅಹರಹರಾ ಪ್ರಯಾಣಾ ದುಪಾಸನ ನಿರ್ವೃತ್ತಯೇ ಮುಮುಕ್ಷುಣಾ ಕರ್ತ್ತವ್ಯಾನೀತಿ ಮಮ ನಿಶ್ಚಿತ ಮುತ್ತಮಂ ಮತಮ್** ||೬||

---

**ನಿಶ್ಚಿತಂ**-ನಿಸ್ಸಂದೇಹವಾಗಿ ಸಿದ್ಧಾನ್ತರೂಪವಾದ, **ಉತ್ತಮಂ ಮತಮ್**-ಶ್ರೇಷ್ಠವಾದ ಅಭಿಪ್ರಾಯವು.. ಯಾವಾಗ ಇದು ಶ್ರೇಷ್ಠವಾದ ಅಭಿಪ್ರಾಯವೆಂದಾಯಿತೋ, ಆಗ ಇವು ಹೇಗೆ ಸ್ತುತ್ಯರ್ಥವೆಂದು ಹೇಳಲು ಸಾಧ್ಯವು ? ಮುಕ್ಕವುಗಳಾದ ಈ ವಿಹಿತ ಕರ್ಮಗಳನ್ನು ಸಂಪೂರ್ಣವಾಗಿ ಬಿಡಬಹುದೆಂಬಿವೇ ಮೊದಲಾದವುಗಳೆಲ್ಲಾ ಉತ್ತಮಾಭಿಪ್ರಾಯಗಳಲ್ಲವೆಂದು ಹೇಳಿದಂತಾಯಿತು. ಇದರಿಂದ ಹಿಂದೆ ೩ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ “ **ತ್ಯಾಜ್ಯಂ ದೋಷವದಿತ್ಯೇಕೇ** ” ಎಂದು ಹೇಳುವ ಪಕ್ಷವು ನಿರಾಕರಿಸಲ್ಪಟ್ಟಿತು. ಇದೇ **ಉತ್ತಮಮತವೆಂದು** ಶ್ರೀ ಕೃಷ್ಣಭಗವಾನ್ ಹೇಳಿದನಂತರ ಮಿಕ್ಕ ಹಿಂದೆ ಉಪಪಾದಿಸಿದ ಮತಗಳೆಲ್ಲಾ ಇದಕ್ಕೆ ವಿರುದ್ಧವಾಗಿ ಉತ್ತಮವಲ್ಲವೆಂಬುವದೂ ಸಿದ್ಧವು. ಆದುದರಿಂದ ಅವು ಅನಾದರಣೀಯವೆಂದು ಹೇಳಿದಂತಾಯಿತು. **ನಿಶ್ಚಿತಂ ಮತಮ್** ಎಂಬುದರಿಂದ ಯಾವಾಗ ಸಿದ್ಧಾನ್ತವಾಯಿತೋ ಆಗ ವಿಧಿವಾಕ್ಯವೇ ಎಂದು ಭಾವಿಸತಕ್ಕದ್ದು. ಈ ವಿಷಯದಲ್ಲಿ ಸಂಶಯವು ಬೇಡವೆಂಬ ಭಾವವು. ಅನ್ಯಥಾ ಪ್ರವೃತ್ತಿಸಿದರೆ ಆಜ್ಞಾಭೇದಿಯಾಗುವನು ; ಅದರಿಂದ ಭಗವನ್ನಿಗ್ರಹಕ್ಕೆ ಪಾತ್ರನಾಗುವನೆಂಬುದೂ ಸೂಚಿತವು. ಉಪಾಸನನಿಷ್ಪತ್ತಿಯು ಕೊನೆಗೆ ಉಂಟಾಗುವದರಿಂದ ಅಙ್ಗನಿಷ್ಪತ್ತಿಯವರೆಗೂ ಅಙ್ಗವು ಅನುಸರಿಸಿರಬೇಕೆಂಬುದು ಶ್ರೀ ನಿಗಮಾನ್ತ ದೇಶಿಕರವರ ಅಭಿಪ್ರಾಯವು. ಫಲಪ್ರಾಪ್ತಿಗೆ ಅಂಗಾಂಗಿಗಳ ಸಮುಚ್ಚಯವು ಆವಶ್ಯಕವು. ನಾಂದೀ ಪ್ರತಿಸರಗಳು ಉಪನಯನಕ್ಕೂ ವಿವಾಹಕ್ಕೂ ಆವಶ್ಯಕವೆಂದು ವಿಧಿಪ್ರೋಕ್ತವಾಗಿದ್ದರೆ, ಉಪನಯನಕಾಲದಲ್ಲಿ ನಡೆದಿವೆ ಎಂದು ವಿವಾಹಕಾಲದಲ್ಲಿ ಪರಿತ್ಯಾಗಮಾಡಲು ಸಾಧ್ಯವಿಲ್ಲವು. ಏಕೆಂದರೆ ಅಂಗಾಂಗಿಗಳ ಸಮುಚ್ಚಯವು ಬೇಕು. ಹಾಗೆಯೇ ಕರ್ಮಯೋಗವು ಹಿಂದಿನ ಜನ್ಮದಲ್ಲಿ ನಡೆದಿರಬಹುದೆಂದು ಭಾವಿಸಿ ಈಗ ಮುಮುಕ್ಷುವು ಅದನ್ನು ಪರಿತ್ಯಾಗಮಾಡಲೂ ಸಾಧ್ಯವಿಲ್ಲವು. ಏಕೆಂದರೆ ಹಿಂದೆ ಕರ್ಮಯೋಗವು ನಡೆದಿತ್ತು ಎಂಬ ಪೂರ್ವಜನ್ಮಜ್ಞಾನವು ಸಾಧಾರಣವಾಗಿ ಯಾರಿಗೂ ಇಲ್ಲವು. ಉಪಾಸನವು, **ಸಖಲ್ವೇವಂ ವರ್ತಯನ್ ಯಾವದಾಯುಷಂ** ಎಂಬಿವೇ ಮೊದಲಾದ ಶ್ರುತಿವಾಕ್ಯಾನುಸಾರ ಯಾವಜ್ಜೀವವೂ ನಡೆಸತಕ್ಕದ್ದಾದರೂ, ಅದುವರೆಗೂ ಈ ವಿಹಿತಕರ್ಮ ಸ್ವರೂಪವಾದ ಅಙ್ಗವೂ ಅದರೊಂದಿಗೇನೇ ಇರತಕ್ಕದ್ದೆಂದು ಏರ್ಪಟ್ಟಿತು. ಇಲ್ಲಿ ಮೂಲದಲ್ಲಿರುವ **ಏತಾನಿ** ಎಂಬುದಕ್ಕೆ **ಯಜ್ಞಾದಿಕರ್ಮಾಣಿ ಮದಾರಾಧನರೂಪಾಣಿ** ಎಂಬ ಭಾಷ್ಯವು ಹೇಗೆ ? ಎಂದರೆ—ಹಿಂದೆಯೇ ೩-೧೦ರಲ್ಲಿ ಮದಾರಾಧನಭೂತಗಳೆಂದು ಹೇಳಿರುವದೂ ಅಲ್ಲದೆ ಹಿಂದಿನ ಶ್ಲೋಕದಲ್ಲೇ **ಪಾವನಾನಿ ಮನೀಷಿಣಾಂ** ಎಂದು ಹೇಳಿರುವದರಿಂದಲೇ ಪಾವನತ್ವವು ಭಗವಂತನ ಅನುಗ್ರಹವಿಲ್ಲದೆ ಉಂಟಾಗುವದಿಲ್ಲವು ; ಆ ಅನುಗ್ರಹ ಉಂಟಾಗಬೇಕಾದರೆ, ಅವು ಆತನ ಆರಾಧನಾರೂಪವಾಗಿ ಆತನಲ್ಲಿಯೇ ಸಮರ್ಪಿಸದಲ್ಲದೆ ಅನುಗ್ರಹವು ಸಿದ್ಧಿಸದು. ಆದುದರಿಂದ **ಮದಾರಾಧನರೂಪಾಣಿ** ಎಂಬ ವ್ಯಾಖ್ಯಾನವು.

ಈ ಯಜ್ಞದಾನತಪಸ್ಸುಗಳು **ಕರ್ತ್ತವ್ಯಾನೀತಿ ಮೇ ನಿಶ್ಚಿತಮತಮುತ್ತಮಂ** ಎಂದು ಹೇಳುವಾಗ “**ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾ‌ನಾಶಕೇನೇತಿ ಚ** ” (ಬೃ. ೬.೪ ೨೨) ಎಂಬ ಶ್ರುತಿವಾಕ್ಯಾನುಸಾರವಾಗಿ ಮಾಡಿದ ಉಪದೇಶವಾಗಿರುತ್ತದೆ. ಈ ವಾಕ್ಯದ ಅರ್ಥವೇನೆಂದರೆ—**ತಮೇತಂ**-ಇಂತಹ “**ಸರ್ವಸ್ಯವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ** ” ಸಮಸ್ತಕ್ಕೂ ಆಧಾರನಾಗಿ ನಿಯಾಮಕನಾಗಿ ಶೇಷಿ

**ಮೂ. ನಿಯತಸ್ಯ ತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗ ಸ್ತಾಮಸಃ ಪರಿಕೀರ್ತಿತಃ ॥೭॥**

ಯೂಗಿರುವ ಪರಮಾತ್ಮನನ್ನು, **ವೇದಾನುವಚನೇನ**-ವೇದಾಧ್ಯಯನ ಅರ್ಥಗ್ರಹಣ ದಿಂದಲೂ, **ಯಜ್ಞೇನ**-ವೈಶ್ವದೇವಾದಿ ಪಂಚ ಮಹಾಯಜ್ಞದಿಂದಲೂ, ಅಥವಾ **ಯಾವ ಜ್ಜೀವಮಗ್ನಿಹೋತ್ರಂಜುಹೋತಿ** ಎಂದು ಹೇಳಿರುವ ಹಾಗೆ ವಿಹಿತವಾದ ಆಶ್ರಮಕರ್ಮ ದಿಂದಲೂ, **ದಾನೇನ**-ಅನ್ನದಾನ ದ್ರವ್ಯದಾನಾದಿಗಳಿಂದಲೂ, **ತಪಸಾ**-ಮನ್ತ್ರ ಜಪಾದಿರೂಪ ತಪಸ್ಸಿನಿಂದಲೂ, **ಅನಾಶಕೇನೇತಿಚ**-ಉಪವಾಸದಿಂದಲೂ **ಬ್ರಾಹ್ಮಣಾಃ**-ಪರಬ್ರಹ್ಮವನ್ನು ಹೊಂದಬೇಕೆಂಬ ಮುಮುಕ್ಷುಗಳೂ, **ವಿವಿದಿಷನ್ತಿ**-ಉಪಾಸನಮೂಲಕ ತಿಳಿಯಲಪೇಕ್ಷಿಸು ತ್ತಾರೆ” ಎಂಬರ್ಥವು. ಈ ಯಜ್ಞ ದಾನ ತಪೋರೂಪ ವಿಹಿತ ವರ್ಣಾಶ್ರಮ ಧರ್ಮಗಳನ್ನು ಎಲ್ಲಿವರೆಗೆ ಮಾಡತಕ್ಕದ್ದು ಎಂಬ ಪ್ರಶಂಸೆಯಲ್ಲಿ “**ಆಪ್ರಯಾಣಾತ್**” ಎಂದು ಶ್ರೀ ಯತಿ ವರ್ಯರು ಹೇಳಿರುವದನ್ನು ಶ್ರೀ ದೇಶಿಕರವರು ವ್ಯಾಖ್ಯಾನದಲ್ಲಿ “**ಉಪಾಸನಂ ಯಾವಜ್ಜೀವ ಮನುಷ್ಠೇಯ ಮಿತಿ ಗಮ್ಯತೇ । ಅತಸ್ತದಙ್ಗಮಪಿ ಯಾವಜ್ಜೀವ ಮನುಷ್ಠೇಯಂ**” ಎಂದು ವಿಹಿತ ವರ್ಣಾಶ್ರಮ ಕರ್ಮಗಳನ್ನೂ ಯಾವಜ್ಜೀವವೂ ಮಾಡತಕ್ಕದ್ದೆಂದು ಹೇಳಿರುತ್ತಾರೆ. ಈ ವರ್ಣಾಶ್ರಮ ಧರ್ಮಗಳು “**ಪಾವನಾನಿ**” ಅನಾದಿಯಾಗಿ ಸಂಚಿತವಾದ ಪುಣ್ಯಪಾಪಗಳನ್ನು ತೊಲಗಿಸಿ ಪಾವನತ್ವವನ್ನುಂಟುಮಾಡಿ ಉಪಾಸನ ವೃದ್ಧಿಯನ್ನು ಹೊಂದಿಸುವದರಿಂದ ಯಾವ ಜ್ಜೀವವೂ ಅವುಗಳನ್ನು ಅನುಷ್ಠಿಸತಕ್ಕದ್ದು. ಈ ಅಭಿಪ್ರಾಯವು “**ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್**” ಎಂಬ (ಶಾರೀ. ೩. ೪. ೨೬) ಸೂತ್ರದಲ್ಲಿ ಉಪಪಾದಿತವು. ಇದರ ಭಾಷ್ಯದಲ್ಲಿ ಶ್ರೀ ಯತಿವರ್ಯರು “**ಏವಂ ರೂಪಂಚ ಧ್ಯಾನ ಮಹರಹರನುಷ್ಠೀಯ ಮಾನೈ ರ್ನಿತ್ಯನೈಮಿತ್ತಿಕ ಕರ್ಮಭಿಃ ಪರಮ ಪುರುಷಾರಾಧನ ರೂಪೈಃ ಪರಮ ಪುರುಷ ಪ್ರಾತೇಣ ಜಾಯತ ಇತಿ ಯಜ್ಞಾದಿನಾ “ವಿವಿದಿಷನ್ತೀತಿ” ಶಾಸ್ತ್ರೇಣ ಪ್ರತಿಪಾದ್ಯತೇ**” ಎಂದು “**ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಶಕೇನ**” ಎಂಬ ಶ್ರುತಿವಾಕ್ಯಕ್ಕೆ ಅರ್ಥವನ್ನು ಬರೆದಿರುತ್ತಾರೆ. ಇದರಿಂದ ಅವರು **ಯಜ್ಞೇನ ದಾನೇನ ತಪಸಾ** ಇತ್ಯಾದಿಗಳಿಗೆ ಪ್ರತಿದಿನದಲ್ಲೂ ಅನುಷ್ಠಿಸುವ ನಿತ್ಯನೈಮಿತ್ತಿಕ ವರ್ಣಾಶ್ರಮ ಧರ್ಮ ಗಳೆಂದೇ ಅರ್ಥಮಾಡಿ, ಅವುಗಳನ್ನು ಯಾವಜ್ಜೀವವೂ ಅನುಷ್ಠಿಸತಕ್ಕದ್ದೆಂದು ಅರ್ಥಮಾಡಿರು ತ್ತಾರೆ. ಈ ಸಂದರ್ಭದಲ್ಲಿ ಶಾಂಕರನ-ತಾವಲಂಬಿಗಳಿಗೂ ನಮಗೂ ಅನುಷ್ಠಾನದಲ್ಲಿ ವ್ಯತ್ಯಾಸ ಉಂಟು. ಪರಮಾತ್ಮಜ್ಞಾನವುಂಟಾದ ಉಪಾಸಕನಿಗೆ ನಿತ್ಯನೈಮಿತ್ತಿಕ ಕರ್ಮಗಳ ಆವಶ್ಯಕತೆಯಿಲ್ಲವೆಂದು ಅವರ ಅಭಿಪ್ರಾಯವು, ನಮ್ಮ ಅಭಿಪ್ರಾಯವಾದರೋ ಯಾವಜ್ಜೀವವೂ ಉಪಾಸನವೂ ಅದಕ್ಕೆ ಅಙ್ಗವಾದ ನಿತ್ಯನೈಮಿತ್ತಿಗಳೂ ಆವಶ್ಯಕವೆಂದು ಶ್ರೀ ಕೃಷ್ಣಭಗವಾ ರವರ ಉಪದೇಶವನ್ನನುಸರಿಸಿರುವದಾಗಿರುತ್ತದೆ. ॥೬॥

**ಮೂಲಕ್ಕೆ ಅರ್ಥವು.** ಈ ವಿಹಿತ ಕರ್ಮಗಳನ್ನು ಮಮತಾಫಲ ಕರ್ತೃತ್ವಗಳನ್ನು ತ್ಯಾಗಮಾಡಿ, ಪರಮಪುರುಷಾರಾಧನ ರೂಪದಲ್ಲಿ ನಡೆಸಿ ಆತನಲ್ಲಿ ಯಾವದಾಯುಷಂ ಅನು ಷ್ಠಿಸಿ, **ಅಹರಹಃ** ಆತನಲ್ಲೇ ಸಮರ್ಪಿಸತಕ್ಕದ್ದೆಂಬುದನ್ನು ವಿಧಿಸಿ, ಇದೇ ಉತ್ತಮಮತ ವೆಂದುಪದೇಶಿಸಿದರು. ಅದಕ್ಕೆ ವಿರುದ್ಧವಾದ ಪ್ರವೃತ್ತಿಯು ಸರ್ವಾತ್ಮನಾ ಕೂಡದು ಎಂದು, ಅಂತಹ ಈ ನಿಯತಕರ್ಮಗಳ ಬಿಡೋಣವು ಅಧಮಾಭಿಪ್ರಾಯವೆಂದೂ, ಅದು ತಾಮಸ ವೆಂದೆನಿಸಿ, ಉಪಾಸನ ಫಲವು ಎಂದಿಗೂ ಸಿದ್ಧಿಸುವದಿಲ್ಲವೆಂದೂ, ಅಷ್ಟುಮಾತ್ರವೂ ಅಲ್ಲದೆ ಭಗವನ್ನಿಗಹವೂ ವಿಹಿತಕರ್ಮಗಳ ತ್ಯಾಗ ಮೂಲಕ ಉಂಟಾಗುವದರಿಂದ, ನಿಕೃಷ್ಟಫಲವೂ ಪ್ರಾಪ್ತವಾಗುತ್ತದೆಂದೂ, ತಿಳಿಸುತ್ತಾರೆ.--**ನಿಯತಸ್ಯತು ಕರ್ಮಣಃ ಸನ್ನ್ಯಾಸಃ**-ವರ್ಣಾಶ್ರಮ ಧರ್ಮಗಳಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಸಂಪೂರ್ಣವಾಗಿ ಬಿಡೋಣವಾದರೋ, **ನೋಪ**

**ಭಾ. ನಿಯತಸ್ಯ-ನಿತ್ಯನೈಮಿತ್ತಿಕಸ್ಯ ಮಹಾಯಜ್ಞಾದೇಃ, ಕರ್ಮಣಃ ಸನ್ನ್ಯಾಸಃ-ತ್ಯಾಗೋ ನೋಪಪದ್ಯತೇ,** (1) **"ಶರೀರಯಾತ್ರಾಪಿ ಚ ತೇ ನಪ್ರಸಿದ್ಧ್ಯೇದ**

**ಪದ್ಯತೇ**-ಎಂದಿಗೂ ಸಾಧ್ಯವಿಲ್ಲವು ; ಅದು ಶಾಸ್ತ್ರವಿರುದ್ಧಮತವೆಂಬ ಭಾವವು. **ತು** ಶಬ್ದವು ವಿಹಿತ ಕರ್ಮಗಳನ್ನು ಸಹ ಜ್ಞಾನಪ್ರಾಪ್ತಿ ಕಾಲಾನಂತರ ತ್ಯಜಿಸಬಹುದೆಂಬ ಪಕ್ಷವನ್ನು ವ್ಯಾವರ್ತಿಸಿ **ತಿಳಿಸುವದಕ್ಕಾಗಿ** ಎಂದು ಭಾವಿಸತಕ್ಕದ್ದು ; ವಿಹಿತಗಳಲ್ಲದ ಕರ್ಮಗಳನ್ನು ಬೇಕಾದರೆ ತ್ಯಾಗ ಮಾಡಬಹುದೇ ವಿನಾ ನಿಯತವಾದ ಕರ್ಮಗಳನ್ನು ಪರಿತ್ಯಾಗಮಾಡಲು ಸಾಧ್ಯವೇ ಇಲ್ಲವೆಂಬ ಭಾವವು. ಅನಾವಶ್ಯಕಬಂಧಕ ಕಾಮ್ಯಕರ್ಮಗಳನ್ನು ಬಿಡಬಹುದೇ ವಿನಾ, ಮೋಕ್ಷಾರ್ಥಿಯು ಉಪಾಸನಾರೂಪ ಬ್ರಹ್ಮವಿದ್ಯೆಗೆ ಅಙ್ಗವಾದ ನಿತ್ಯನೈಮಿತ್ತಿಕಗಳನ್ನು ಯಾವಜ್ಜೀವವೂ ಅನುಷ್ಠಿಸಲೇ ಬೇಕೆಂಬುದು ಸಿದ್ಧಾನ್ತವು. ಆದುದರಿಂದ ಅಂತಹ ಕರ್ಮಗಳ ಪರಿತ್ಯಾಗವು ವಿಪರೀತ ಜ್ಞಾನದ ವಿಜೃಂಭಣೆಯಾದುದರಿಂದ ಅದು ತಾಮಸವೆಂದು ಹೇಳುತ್ತಾರೆ.—**ತಸ್ಯ**-ಅಂತಹ ನಿತ್ಯನೈಮಿತ್ತಿಕ ಕರ್ಮದ, **ಮೋಹಾತ್**-ಅವುಗಳೂ ಬಂಧಕಗಳೆಂಬ ಅಜ್ಞಾನದಿಂದ, **ಪರಿತ್ಯಾಗಃ**-ಸಂಪೂರ್ಣವಾಗಿ ಸ್ವರೂಪತಃ ತ್ಯಾಗಮಾಡೋಣವು, **ತಾಮಸಃ ಪರಿಕೀರ್ತಿತಃ**-ತಾಮಸವೆಂದು ಹೇಳಿಸಿಕೊಳ್ಳುತ್ತದೆ; ತಾಮಸವಾದುದರಿಂದ ಆಸುರವ್ಯಾಪಾರವಾಗಿ, ಅಧೋಗತಿಯನ್ನುಂಟುಮಾಡುವದಾಗುತ್ತದೆಂಬ ಭಾವವು. ಇದು ಏತಕ್ಕೆಂಬುದನ್ನು ಸುಲಭವಾಗಿ ಗ್ರಹಿಸಬಹುದು. ಈ ನಿತ್ಯನೈಮಿತ್ತಿಕಗಳು **ಪಾವನಾನಿ ಮನೀಷಿಣಾಂ** ಎಂಬಲ್ಲಿ ಹೇಳಿರುವ ಹಾಗೆ ವಿರೋಧಿಗಳಾದ ಅನಾದಿಯಾಗಿ ಬಂದಿರುವ ಪ್ರಾಚೀನ ಕರ್ಮಗಳ ನಾಶವು ಇಲ್ಲವಾದುದರಿಂದ ತಮೋವೃದ್ಧಿಯುಂಟಾಗಿ ಆಸುರಸ್ವಭಾವವುಳ್ಳವನಾಗುವದರಿಂದ ಅಧೋಗತಿಯು ; ಸತ್ವವೃದ್ಧಿಯು ಆ ನಿತ್ಯನೈಮಿತ್ತಿಕಗಳ ಅನುಷ್ಠಾನದಿಂದ ಉಂಟಾಗುತ್ತಿತ್ತು. ಅದು ತಪ್ಪಿ, ತಮೋವೃದ್ಧಿಗೆ ಹೇತುವಾಯಿತು. ಅಜ್ಞಾನದಿಂದ ತಮೋರೂಪ ಪ್ರವೃತ್ತಿಯೇನು, ಮತ್ತು ಭಗವದಾಜ್ಞೋಲ್ಲಂಘನರೂಪ ನಿತ್ಯನೈಮಿತ್ತಿಕಗಳ ತ್ಯಾಗದಿಂದ ಭಗವನ್ನಿಗ್ರಹವೇನು, ಇವೆರಡರಿಂದಲೂ ಆತ್ಮನಾಶಕ್ಕೆ ಕಾರಣವೆಂಬ ಭಾವವು. ಈ ಶ್ಲೋಕದಿಂದ, ಕ್ಷತ್ರಿಯನಾದ ಅರ್ಜುನನಿಗೆ ಶಿಷ್ಟಪರಿಪಾಲನ, ಅದಕ್ಕಾಗಿ ದುಷ್ಟನಿಗ್ರಹವು ನಿಯತಕರ್ಮಗಳು, ಅವುಗಳನ್ನು ಓ ಅರ್ಜುನನೇ ಮೋಹಾತ್ ಪರಿತ್ಯಾಗಮಾಡುವದು ತಾಮಸವೆಂದು ವ್ಯಕ್ತವಾಗಿ ಹೇಳಲ್ಪಟ್ಟಿತು.

**ಭಾಷ್ಯಾರ್ಥವು.** ಹಿಂದಿನ ಶ್ಲೋಕದಲ್ಲಿ ಶ್ರೀ ಕೃಷ್ಣಭಗವಾನರವರು, **ನಿಶ್ಚಿತಂ ಮತಮುತ್ತಮಮ್** ಎಂದು ಹೇಳಿರುವದರಿಂದ, ಈ ಶ್ಲೋಕದಲ್ಲಿ ಇತರಾಭಿಪ್ರಾಯಗಳು ಉತ್ತಮವಾದುವಲ್ಲವು, ತಾವು ಉಪದೇಶಿಸಿದ್ದೇ ಉತ್ತಮ ಮತವು, ಎಂದೂ ಹೇಳಿ, ಅಂತಹ ಅಭಿಪ್ರಾಯಾನುಗುಣವಾಗಿ ವಿಹಿತಕರ್ಮಗಳಾದ ನಿತ್ಯನೈಮಿತ್ತಿಕಗಳನ್ನು ಮಾಡದಿರುವದು ಅನಿಷ್ಟ ಫಲ ಪ್ರಾಪ್ತಿಗೆ ಕಾರಣವಾಗುತ್ತದೆಂದು ಹೇಳುತ್ತಾರೆ.—**ನಿಯತಸ್ಯ**-ವರ್ಣಾಶ್ರಮಿಗಳಿಗೆ ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿರುವ ಎಂದರೆ **ನಿತ್ಯ ನೈಮಿತ್ತಿಕಸ್ಯ**-ನಿತ್ಯನೈಮಿತ್ತಿಕ ಕರ್ಮವಾದ, **ಮಹಾ ಯಜ್ಞಾದೇಃ**-ವೈಶ್ವದೇವವೇ ಮೊದಲಾದ ಪಂಚಮಹಾ ಯಜ್ಞಗಳಾದ, ಇಲ್ಲಿ ಆದಿಶಬ್ದದಿಂದ ಸಂಧ್ಯಾವಂದನಾದಿ ಕರ್ಮಗಳೂ ಹೇಳಲ್ಪಟ್ಟವು, **ಕರ್ಮಣಃ**-ಕರ್ಮದ **ಸನ್ನ್ಯಾಸಃ** ಎಂದರೆ **ತ್ಯಾಗಃ**-ಮಾಡದೆ ಬಿಟ್ಟುಬಿಡೋಣವು, ಇಲ್ಲಿ ಸನ್ನ್ಯಾಸ ಮತ್ತು ತ್ಯಾಗ ಶಬ್ದಗಳು ಏಕಾರ್ಥವುಳ್ಳವೆಂಬುದು ಶ್ರೀ ಕೃಷ್ಣಭಗವಾನರವರ ಅಭಿಪ್ರಾಯವಾದುದರಿಂದ ಸನ್ನ್ಯಾಸಃ ಎಂದರೆ ತ್ಯಾಗವೆಂದು ಭಾಷ್ಯವು. ಕರ್ಮಸನ್ನ್ಯಾಸಕ್ಕೆ ಸನ್ನ್ಯಾಸಾಶ್ರಮವು ಬೇಕಿಲ್ಲವು. **ನೋಪಪದ್ಯತೇ**-ಶಾಸ್ತ್ರರೀತ್ಯಾ ಸಾಧ್ಯವಿಲ್ಲವು; ಮೋಕ್ಷಾರ್ಥಿಯ ಉಪಾಸನಕ್ಕೆ ಈ ನಿಯತಗಳಾದ ನಿತ್ಯನೈಮಿತ್ತಿಕಗಳ ಅನುಷ್ಠಾನವು ಅಙ್ಗವಾಗಿ ಹೇಳಲ್ಪಟ್ಟು, ಉಪಾಸನವು ಯಾವಜ್ಜೀವವೂ **"ಸಖಲ್ವೇವಂ ವರ್ತಯನ್ ಯಾವದಾಯುಷಂ"** ಎಂಬ ಶ್ರುತಿವಾಕ್ಯಾನುಸಾರ ನಡೆಸಬೇಕಾ

(1) ಗೀ. ೩. ೮.

**ಕರ್ಮಣಃ" ಇತಿ ಶರೀರ ಯಾತ್ರಾಯಾ ಏವಾ ಸಿದ್ಧೇಃ; ಶರೀರ ಯಾತ್ರಾಹಿ ಯಜ್ಞಶಿಷ್ಟಾಶನೇನ ನಿರ್ವರ್ತ್ಯಮಾನಾ ಸಮ್ಯಕ್ ಜ್ಞಾನಾಯ ಪ್ರಭವತಿ;**

ದುದರಿಂದ ತನ್ನಿಷ್ಪತ್ತಿಗೆ ಬೇಕಾದ ಈ ನಿತ್ಯನೈಮಿತ್ತಿಕಗಳ ಅನುಷ್ಠಾನರೂಪ ಅಙ್ಗವೂ ಯಾವ ಜ್ಞೇವವೂ ಉಪಾಸನ ನಿಷ್ಪತ್ತಿಗೆ ಉಪಕಾರಕವಾಗಿ 'ಇರತಕ್ಕದೆಂಬ ಭಾವವು. ಮೂಲದಲ್ಲಿ **ತು** ಶಬ್ದದಿಂದ ಯಾವುದು ವ್ಯಾವರ್ತಿಸಲ್ಪಟ್ಟು ಹೇಳಲ್ಪಟ್ಟಿತೆಂದರೆ, **"ತ್ಯಾಜ್ಯಂ ದೋಷ ವತ್"** ಎಂದು ಹಿಂದೆ ೩ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷವಾದವು ನಿರಾಕರಿಸ ಲ್ಪಟ್ಟಿತು; **ನೋಪಪದ್ಯತೇ** ಎಂಬುದರಿಂದ ಶಾಸ್ತ್ರಾನುಗುಣವಾಗಿ ನಡೆಯುವ ಶಿಷ್ಟನಾದ ಮುಮುಕ್ಷುವಿಗೆ ಸಾಧ್ಯವಿಲ್ಲವೆಂದು ಹೇಳಲ್ಪಟ್ಟಿದುದರಿಂದ ಅದು ಹೇಗೆ? ಎಂಬ ಪ್ರಶ್ನೆಗೆ ಸಮಾಧಾನಾರ್ಥವಾಗಿ, ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿರುವ ನಿತ್ಯನೈಮಿತ್ತಿಕಗಳಾದ ಆಜ್ಞಾ ಕೈಙ್ಕರ್ಯ ಗಳನ್ನು ಬಿಟ್ಟುಬಿಡೋಣವು ಹೇಗೆ ಅನರ್ಥಗಳಿಗೆ ಕಾರಣವೆಂಬುದನ್ನು ಉಪಪಾದಿಸಿ ಹೇಳು ತ್ತಾರೆ. ಹಿಂದೆ ೩ನೆಯ ಅಧ್ಯಾಯದಲ್ಲಿ ಉಪದೇಶಿಸಿರುವದನ್ನು ಜ್ಞಾಪಕಕ್ಕೆ ತರುತ್ತಾರೆ. (1) **"ಶರೀರ ಯಾತ್ರಾಪಿ ಚ ತೇ ನಪ್ರಸಿದ್ಧ್ಯೇದ ಕರ್ಮಣಃ"** ಕರ್ಮಯೋಗವನ್ನು ತ್ಯಾಗ ಮಾಡಿದುದಾದರೆ ನಿನಗೆ ಶರೀರಯಾತ್ರೆಯೂ ಕೂಡ ಸಿದ್ಧಿಸುವದಿಲ್ಲವು, ಇತಿ-ಎಂದು ಹೇಳಿರುವ ಹಾಗೆ, **ಶರೀರ ಯಾತ್ರಾಯಾ ಏವ ಅಸಿದ್ಧೇಃ**-ಶರೀರಯಾತ್ರೆಯೇ ಸಿದ್ಧಿಸುವದಿಲ್ಲವಾದುದ ರಿಂದ; **ಶರೀರ ಯಾತ್ರಾಹಿ**-ಶರೀರಯಾತ್ರೆಯಾದರೋ, **ಯಜ್ಞ ಶಿಷ್ಟಾಶನೇನ**-ನಿತ್ಯ ನೈಮಿತ್ತಿಕಗಳಾದ ಪಂಚಮಹಾ ಯಜ್ಞಾದಿಗಳನ್ನು (ವೈಶ್ವದೇವ) ಅನುಷ್ಠಿಸಿ, ಅಂತಹ ಯಜ್ಞಶೇಷವಾದ ಅನ್ನವನ್ನು ಸೇವಿಸುವದರಿಂದ, **ನಿರ್ವರ್ತ್ಯಮಾನಾ**-ಪ್ರಾಪ್ತವಾದುದಾದರೆ, **ಸಮ್ಯಗ್ಜ್ಞಾನಾಯ ಪ್ರಭವತಿ**-ಸತ್ವರೂಪವಾದ ಒಳ್ಳೇ ಜ್ಞಾನವನ್ನುಂಟುಮಾಡಲು ಸಮರ್ಥ ವಾದುದಾಗುತ್ತದೆ; ಇಲ್ಲಿ ಒಳ್ಳೇಜ್ಞಾನವು ಯಾವುದು ಎಂದರೆ ಐಹಿಕಗಳೆಲ್ಲಾ ಅಲ್ಪಾಸ್ಥಿರ ಗಳೆಂದು ಅವುಗಳಲ್ಲಿ ವೈರಾಗ್ಯವನ್ನು ಹೊಂದಿ, ಆತ್ಮ ಯಾಥಾತ್ಮ್ಯಜ್ಞಾನ, ಮತ್ತು ಪರಮಾತ್ಮ ಯಾಥಾತ್ಮ್ಯಜ್ಞಾನವೇ; ಅಥವಾ ಇಂತಹ ಜ್ಞಾನಗಳ ಮೂಲಕ ಪರಮಾತ್ಮಜ್ಞಾನವೇ. **ಸಮ್ಯಕ್ ಜ್ಞಾನಾಯ** ಎಂಬಲ್ಲಿ ಹೇಳಿರುವ ಜ್ಞಾನವು ಎಂತಾದ್ದೆಂದು ಶ್ರೀ ಪರಾಶರರು ಹೇಳಿರುತ್ತಾರೆ. (2) **"ಸಂಜ್ಞಾಯತೇ ಯೇನ ತದಸ್ತದೋಷಂ ಶುದ್ಧಂ ಪರಂ ನಿರ್ಮಲ ಮೇಕರೂಪಮ್। ಸಂದೃಶ್ಯತೇವಾಪ್ಯವಗಮ್ಯತೇವಾ ತದ್‌ಜ್ಞಾನಮಜ್ಞಾನ ಮತೋನ್ಯ ದುಕ್ತಮ್"** ಮೇಲೆ ಹೇಳಲ್ಪಟ್ಟ ಪರಮಪುರುಷನು, ಇನ್ನೂ ಎಂತವನೆಂದರೆ **ತದಸ್ತ ದೋಷಂ**-ವಿಕಾರದ್ರವ್ಯವಾದ ಅಚಿತ್ತಿನೊಂದಿಗೆ ಇದ್ದರೂ ಅದಕ್ಕೂ ವಿಲಕ್ಷಣನಾಗಿ ನಿರ್ವಿಕಾರ ವಾಗಿರುವವನು, **ಶುದ್ಧಂ**-ಬದ್ಧ ಜೀವನೊಂದಿಗೆ ಇದ್ದರೂ ಆತನ ಹಾಗೆ ಕರ್ಮದಿಂದ ತಿರೋಹಿತ ಜ್ಞಾನವಿಲ್ಲದೆ ಪರಿಶುದ್ಧನಾಗಿರುವವನು, **ಪರಂ ನಿರ್ಮಲಂ**-ಮುಕ್ತನ ಹಾಗೆ ಒಂದುಕಾಲದಲ್ಲೂ ಮಾಲಿನ್ಯವಿಲ್ಲದೆ ಆತನಿಗಿಂತಲೂ ವಿಲಕ್ಷಣನಾಗಿ ನಿರ್ಮಲನಾಗಿರುವವನು, **ಏಕರೂಪಂ**-ನಿತ್ಯರಿ ಗಿಂತಲೂ ವಿಲಕ್ಷಣನಾಗಿ ಸದಾ ಏಕರೂಪನಾಗಿರುವವನು, ಇಂತಹ ಪರಮಾತ್ಮನು ಯಾವ ಶಾಸ್ತ್ರಜನ್ಯಜ್ಞಾನ ವಿವೇಕಜನ್ಯಜ್ಞಾನದಿಂದ ತಿಳಿಯಲ್ಪಡುವನೋ, ಮತ್ತು ದರ್ಶನ ಸಮಾ ನಾಕಾರದಿಂದ ಭಕ್ತಿರೂಪವನ್ನು ಹೊಂದಿದ ಜ್ಞಾನದಿಂದ ಸಾಕ್ಷಾತ್ಕರಿಸಲ್ಪಡುವನೋ, ಅದೇ ಒಳ್ಳೇಜ್ಞಾನವು; ಮಿಕ್ಕ ಜ್ಞಾನವೆಲ್ಲಾ ಅಜ್ಞಾನರೂಪವಾದುದೇ ಎಂಬುದು ಈ ಶ್ಲೋಕ ತಾತ್ಪರ್ಯವು. ಇದನ್ನೇ ಮನಸ್ಸಿನಲ್ಲಿಟ್ಟು **ಸಮ್ಯಕ್ ಜ್ಞಾನಾಯ ಪ್ರಭವತಿ** ಎಂಬ ಪ್ರಯೋಗವು.

ಸಂಪೂರ್ಣವಾಗಿ ವಿಹಿತಕರ್ಮಗಳ ತ್ಯಾಗವು ಎಂದಿಗೂ ಮೋಕ್ಷಾರ್ಥಿಗೆ ಸಾಧ್ಯವೇ ಇಲ್ಲವೆಂದು ಹೇಳಿದರು. ಇದಕ್ಕೆ ಕಾರಣವೇನೆಂದರೆ ಹಿಂದೆ ಉಪಪಾದಿಸಿದ ಶರೀರಯಾತ್ರೆಯೂ ಕೂಡ ಸಿದ್ಧಿಸುವುದಿಲ್ಲವೆಂದೂ, ಹಾಗೆ ಶರೀರಯಾತ್ರೆಯು ಸಿದ್ಧಿಸಬೇಕಾದರೆ ಯಜ್ಞಶಿಷ್ಟಾಶನ

**ಅನ್ಯಥಾ** (2) **" ತೇ ತ್ವಘಂ ಭುಂಜತೇ ಪಾಪಾಃ "** ಇತ್ಯ ಯಜ್ಞಶಿಷ್ಟಾಘರೂಪಾಶನಾಪ್ಯಾಯನಂ ಮನಸೋ ವಿಪರೀತಜ್ಞಾನಾಯ ಭವತಿ. (3) **"ಅನ್ನಮಯಂ ಹಿ ಸೋಮ್ಯಮನಃ"** ಇತ್ಯನ್ನೇನ ಹಿ ಮನ ಆಪ್ಯಾಯತೇ; (4) **"ಆಹಾರ**

ವಾಗಿ ಪವಿತ್ರವಾದ ಆಹಾರದಿಂದಲೇ ಎಂದೂ ಹೇಳಿ, ಉಪಾಯಾನುಷ್ಠಾನಕ್ಕೆ ಬೇಕಾದ ಜ್ಞಾನವೇ ಉಂಟಾಗುವದಿಲ್ಲವೆಂಬುದನ್ನು ಸ್ಮರಣೆಗೆ ತರುತ್ತಾರೆ. **ಶರೀರ ಯಾತ್ರಾಪಿಚ**-ಶರೀರಯಾತ್ರೆಯೂ ಕೂಡ, **ಅಕರ್ಮಣಃ**-ನಿಯತಕರ್ಮಗಳನ್ನು ತ್ಯಾಗಮಾಡಿ ಜ್ಞಾನಯೋಗವನ್ನವಲಂಬಿಸುತ್ತೇನೆಂಬ **ತೇ**-ನಿನಗೆ (ಅರ್ಜುನನಿಗೆ), **ನಪ್ರಸಿದ್ಧ್ಯೇತ್**-ಸಿದ್ಧಿಸುವದಿಲ್ಲವು. **ಇತಿ**-ಎಂದು ಹಿಂದೆ ನಾನು ಉಪದೇಶಿಸಿದ ಹಾಗೆ, **ಶರೀರ ಯಾತ್ರಾಯಾಪಿವಾ ಸಿದ್ಧೇಃ** ಪ್ರಥಮತಃ ಶರೀರಯಾತ್ರೆಯೇ ಸಿದ್ಧಿಸುವದಿಲ್ಲವಾದುದರಿಂದ ನಿಯತಕರ್ಮಗಳನ್ನು ತ್ಯಾಗಮಾಡಲು ಸಾಧ್ಯವಿಲ್ಲವು; -**ಶರೀರ ಯಾತ್ರಾಹಿ**-ಶರೀರಯಾತ್ರೆಯಾದರೋ, **ಯಜ್ಞಶಿಷ್ಟಾಶನೇನ**-ಪಂಚ ಮಹಾ ಯಜ್ಞರೂಪವಾದ ವೈಶ್ವದೇವಾದಿಗಳನ್ನು ಅನುಷ್ಠಿಸಿ ಶೇಷವಾದ ಅನ್ನದಿಂದ, **ನಿರ್ವರ್ತ್ಯಮಾನಾ**-ನಿರ್ವಹಿಸಲ್ಪಟ್ಟಿದುದಾದರೆ, **ಸಮ್ಯಕ್ ಜ್ಞಾನಾಯ**-ಪರಮಾತ್ಮನನ್ನು ಸಾಕ್ಷಾತ್ಕರಿಸಲು ಬೇಕಾದ ಒಳ್ಳೇ ಜ್ಞಾನವನ್ನುಂಟುಮಾಡಲು, **ಪ್ರಭವತಿ**-ಯೋಗ್ಯವಾದುದಾಗುತ್ತದೆ; **ಅನ್ಯಥಾ**-ಹಾಗಲ್ಲದೆ ಹೋದರೆ, **"ತೇತ್ವಘಂ ಭುಂಜತೇ ಪಾಪಾಃ"**-ಯಜ್ಞಶಿಷ್ಟಾಶನದ ಸೇವನೆಯಿಲ್ಲದವರು, ಪಾಪಿಷ್ಠರಾಗಿ ಪಾಪಕ್ಕೆ ಕಾರಣವಾಗಿ ಪಾಪರೂಪವಾಗಿರುವ ಅನ್ನವನ್ನೇ ತಿನ್ನುತ್ತಾರೆ'' **ಇತಿ**-ಎಂದು ಹಿಂದೆ ಉಪದೇಶಿಸಲ್ಪಟ್ಟ ಮೇರೆಗೆ, **ಅಯಜ್ಞಶಿಷ್ಟಾಘ ರೂಪಾಶನಾಪ್ಯಾಯನಂ**-ಪಂಚ ಮಹಾ ಯಜ್ಞಾನುಷ್ಠಾನ ಮಾಡಿ ಶೇಷವಾದುದಲ್ಲದೆ ಪಾಪರೂಪವಾದ ಅನ್ನದಿಂದ ದೇಹ ಪೋಷಣವು, **ಮನಸಃ**-ಮನಸ್ಸಿಗೆ, **ವಿಪರೀತಜ್ಞಾನಾಯ ಭವತಿ**-ವಿಪರೀತ ಜ್ಞಾನವನ್ನುಂಟುಮಾಡುವದಕ್ಕಾಗಿ ಆಗುವದು; ಮನಸ್ಸು ಜಡವು; ಅದಕ್ಕೆ ಜ್ಞಾನವನ್ನುಂಟುಮಾಡುತ್ತದೆ ಎಂದರೇನೆಂದು ಕೇಳಬಹುದು. ಮನಸ್ಸಿಗೂ ಆತ್ಮಾವಿನ ಧರ್ಮಭೂತ ಜ್ಞಾನಕ್ಕೂ ಸಂಬಂಧವಿರುವದರಿಂದ ಮನಸ್ಸಿನ ಮೂಲಕವಾಗಿಯೇ ಜ್ಞಾನಪ್ರಾಪ್ತಿ ಎಂದು ತಿಳಿಯತಕ್ಕದ್ದು. ಮನಸ್ಸು ಪರಿಶುದ್ಧವಾಗಿ ಸತ್ವಪ್ರಾಚುರ್ಯವುಳ್ಳದಾದರೆ ಯಥಾರ್ಥಜ್ಞಾನಕ್ಕೆ ಹೇತುವಾಗುತ್ತದೆ ಹಾಗಲ್ಲದೆ ರಾಜಸ ತಾಮಸ ಪ್ರಾಚುರ್ಯವುಳ್ಳದಾದರೆ ಭ್ರಮಜ್ಞಾನಗಳಿಗೆ ಹೇತುವಾಗುತ್ತದೆಂಬುದು ತಾತ್ಪರ್ಯವು. ಹಾಗೆ ಮನಸ್ಸು ಪರಿಶುದ್ಧವಾದುದಾಗಬೇಕಾದರೆ, ಆಹಾರವು ಪರಿಶುದ್ಧವಾದುದಾಗಿರಬೇಕೆಂದು ಮುಂದೆ ಉಪಪಾದಿಸುವದಕ್ಕಾಗಿ ಶ್ರುತಿಪ್ರಮಾಣವನ್ನು ಉದಾಹರಿಸುತ್ತಾರೆ.—(೩) **"ಅನ್ನಮಯಂ ಹಿ ಸೋಮ್ಯಮನಃ"** ಜಾಠರಾಗ್ನಿಯಿಂದ ಅನ್ನವು ಪಕ್ವವಾಗಿ ಮೂರು ಭಾಗವಾಗಿ ಒಂದು ಭಾಗವು ಪುರೀಷವಾಗಿ, ಇನ್ನೊಂದು ಭಾಗ ಮಾಂಸಾದಿಗಳಾಗಿ, ಮೂರನೆಯ ಭಾಗ ಮನಸ್ಸಿಗೆ ಸತ್ತೆಯನ್ನು ಕೊಡುತ್ತದೆಂದು ಶ್ರುತಿಯು ಹೇಳುತ್ತದೆ, ಆದುದರಿಂದ **ಮನಃ**-ಮನಸ್ಸು, ಹೇಸೋಮ್ಯ, **ಅನ್ನಮಯಂ ಹಿ**-ಅನ್ನರೂಪವಾದುದು ಸಿದ್ಧವು; ಅನ್ನವು ಪರಿಶುದ್ಧವಾದುದಾಗಿದ್ದರೆ ಮನಸ್ಸೂ ಪರಿಶುದ್ಧವಾದುದಾಗುತ್ತದೆಂಬ ಭಾವವು, ಮುಂದಕ್ಕೆ ಶ್ರುತಿಯು **" ಆಪೋಮಯಃಪ್ರಾಣಃ, ತೇಜೋಮಯೀವಾಕ್ "** ಎಂದು ಹೇಳುತ್ತದೆ. **ಇತಿ**-ಎಂಬದಾಗಿ, **ಅನ್ನೇನಹಿ**-ಅನ್ನದಿಂದಲ್ಲವೇ, **ಮನಃ ಆಪ್ಯಾಯತೇ**-ಮನಸ್ಸು ಸತ್ತೆಯನ್ನು ಹೊಂದುತ್ತದೆ; ಎಂದರೆ ಅನ್ನವು ವೈಶ್ವದೇವ ಮೊದಲಾದವುಗಳಿಂದ ಯಜ್ಞಶಿಷ್ಟವಾಗಿ ಪರಿಶುದ್ಧವಾಗಿ ಸಾತ್ವಿಕವಾಗಿದ್ದರೆ, ತದನುಗುಣವಾದ ಜ್ಞಾನೋತ್ಪತ್ತಿ ಪ್ರವೃತ್ತಿ ಮೊದಲಾದವುಗಳಿಗೆ ಹೇತುವಾಗುತ್ತದೆ; ಹಾಗಲ್ಲದೆ ಅನ್ನವು ಯಜ್ಞಶಿಷ್ಟವಲ್ಲದೆ ಅಪವಿತ್ರವಾಗಿ ರಾಜಸ ತಾಮಸವಾದರೆ ಆಗ ಮನಸ್ಸು ವಿಪರೀತಜ್ಞಾನಕ್ಕೆ ಹೇತುವಾಗಿ ಬಂಧಕಗಳಾದ

(2) ಗೀ. ೩. ೧೩. (3) ಛಾಂ. ೬. ೫. ४. (4) ಛಾಂ. ೭. ೨೬. ೨.

**ಶುದ್ಧೌ ಸತ್ವಶುದ್ಧಿ ಸ್ಸತ್ವಶುದ್ಧೌ ಧ್ರುವಾಸ್ಮೃತಿಃ, ಸ್ಮೃತಿಲಮ್ಭೇ ಸರ್ವ ಗ್ರಂಥೀನಾಂ ವಿಪ್ರಮೋಕ್ಷ," ಇತಿ ಬ್ರಹ್ಮಸಾಕ್ಷಾತ್ಕಾರರೂಪಜ್ಞಾನಂಪಮಾಹಾರ ಶುದ್ಧ್ಯಾಯತ್ತಂ ಶ್ರೂಯತೇ. ತಸ್ಮಾನ್ಮಹಾಯಜ್ಞಾದಿ ನಿತ್ಯ ನೈಮಿತ್ತಿಕಂ ಕರ್ಮ ಆಪ್ರಯಾಣಾತ್ ಬ್ರಹ್ಮಜ್ಞಾನಾಯೈವೋ ಪಾದೇಯಮಿತಿ, ತಸ್ಯತ್ಯಾಗೋ**

---

ಪ್ರವೃತ್ತಿಗಳುಳ್ಳದ್ದಾಗುತ್ತದೆ. "**ಮನೋಹಿ ಹೇತು ಸ್ಸರ್ವೇಷಾಂ ಇಂದ್ರಿಯಾಣಾಂ ಪ್ರವರ್ತನೇ**" (ರಾಮಾ. ಸುಂದರ ) ಎಂಬ ಶ್ಲೋಕವು ಅನುಸಂಧೇಯವು. ಮನಸ್ಸು ಪರಿಶುದ್ಧಾಸ್ನದಿಂದ ಸತ್ತ್ವೆಯನ್ನು ಹೊಂದಿದ್ದರೇನೇ, ನಿರ್ವಿಷಯವಾಗಿ ಪರಮಾತ್ಮ ಸಾಕ್ಷಾತ್ಕಾರರೂಪ ಜ್ಞಾನವು ಲಭಿಸುತ್ತದೇ ವಿನಾ, ಅಪರಿಶುದ್ಧಾಸ್ನದಿಂದ ವೃದ್ಧಿಯನ್ನು ಹೊಂದಿದ್ದರೆ ಬಂಧಾಯ ವಿಷಯಾಸಂಗೀ ಎಂದು ಹೇಳಿರುವ ಹಾಗೆ, ವಿಪರೀತ ಜ್ಞಾನಕ್ಕೆ ಹೇತುವಾಗಿ ಬಂಧಕವಾಗುತ್ತದೆಂದು ಹೇಳಿದುದನ್ನೇ ಬೇರೆ ಶ್ರುತಿವಾಕ್ಯದಿಂದಲೂ ಸಮರ್ಥಿಸುತ್ತಾರೆ. —"**ಆಹಾರ ಶುದ್ಧೌ ಸತ್ವ ಶುದ್ಧಿಃ**"-ಹಿಂದೆ ಮೋಕ್ಷಾವಸ್ಥೆಯಲ್ಲಿ ಈತನಿಗೆ ಉಂಟಾಗುವ ನಿರತಿಶಯ ಸುಖವು ವರ್ಣಿಸಲ್ಪಟ್ಟು "**ಸರ್ವಗ್‌ಂಹಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶಃ**" ಎಂದು ಹೇಳಿ, "**ಸ ಏಕಧಾ ಭವತಿ**" ಇತ್ಯಾದಿ ವಾಕ್ಯಗಳಿಂದ ಮುಕ್ತನಿಗೆ ಅಪಹತ ಪಾಪ್ಮತ್ವಾದಿ ಗುಣಾಷ್ಟಕಗಳ ಪ್ರಾಪ್ತಿಯೂ ಅಲ್ಲದೆ, ಸಙ್ಕಲ್ಪಮಾತ್ರದಿಂದಲೇ ಅನೇಕವಿಧ ಶರೀರಗಳನ್ನು ಹೊಂದಲು ಯೋಗ್ಯನಾಗುವನೆಂದು ಹೇಳಿ, ಇಂತಹ ಮುಕ್ತಸ್ಥಿತಿಯು ಉಂಟಾಗುವದಕ್ಕೆ ಪರಮಪುರುಷನ ಉಪಾಸನೆಯು ಆವಶ್ಯಕವೆಂದು ಉಪಪಾದಿಸಿ, ಅಂತಹ ಉಪಾಸನ ನಿಷ್ಪತ್ತಿಗೆ ಮನಸ್ಸಿನ ಪಾರಿಶುದ್ಧ್ಯವು ಅವಶ್ಯಕವೆಂದೂ ಅದು ಪರಿಶುದ್ಧವಾದ ಸಾತ್ವಿಕಾಹಾರ ದಿಂದ ಸಾಧ್ಯವೇ ವಿನಾ ರಾಜಸ ತಾಮಸಾಹಾರಗಳ ಸೇವನೆಯಿಂದ ಪರಮಾತ್ಮನಾ ಲಭಿಸುವದಿಲ್ಲವೆಂದು ಹೇಳುವ ಪ್ರಕರಣವು. **ಆಹಾರ ಶುದ್ಧೌ**-ಆಹಾರವು ಯಜ್ಞಶೇಷವಾಗಿ ಸಾತ್ವಿಕಾಹಾರವುಂಟಾಗಲಾಗಿ, **ಸತ್ವ ಶುದ್ಧಿಃ**-ಮನಸ್ಸಿನ ನೈರ್ಮಲ್ಯವುಂಟಾಗುತ್ತದೆ. **ಸತ್ವಶುದ್ಧೌ ಧ್ರುವಾ ಸ್ಮೃತಿಃ**-ಮನಸ್ಸು ಪರಿಶುದ್ಧವಾಗಲಾಗಿ, ಅವಿಚ್ಛಿನ್ನಸ್ಮೃತಿ ಸಂತಾನರೂಪ ಪರಮಾತ್ಮಧ್ಯಾನವು ಸಿದ್ಧಿಸುತ್ತದೆ; **ಸ್ಮೃತಿಲಮ್ಭೇ ಸರ್ವ ಗ್ರನ್ಥೀನಾಂ ವಿಪ್ರಮೋಕ್ಷಃ**-ಹಾಗೆ ಆತ್ಮಧ್ಯಾನವು ಸಿದ್ಧಿಸಿದರೆ, ಸಮಸ್ತಗಳಾಗಿ ಬಂಧಕಗಳಾದ ಗಂಟುಗಳೆಲ್ಲಾ ಬಿಚ್ಚಿಹೋಗುತ್ತವೆ ಎಂದರೆ ಅಜ್ಞಾನ ವಿಷಯಾದಿ ರಾಗಗಳೆಲ್ಲಾ ಬಿಟ್ಟುಹೋಗುತ್ತವೆ ಎಂಬ ಭಾವವು; ಹೀಗೆ ನಾರದರಿಗೆ ಮೋಕ್ಷೋಪಾಯವನ್ನು ಸನತ್ಕುಮಾರರು ಉಪದೇಶಿಸಿರುತ್ತಾರೆ. ಹಾಗೆಯೇ (ಮುಂ ೨. ೨ ೮ರಲ್ಲಿ) "**ಭಿಧ್ಯತೇ ಹೃದಯಗ್ರನ್ಥಿ ಶ್ಛಿಧ್ಯನ್ತೇ ಸರ್ವಸಂಶಯಾಃ । ಕ್ಷೀಯನ್ತೇ ಚಾಸ್ಯಕರ್ಮಾಣಿ ತಸ್ಮಿನ್ದೃಷ್ಟೇ ಪರಾವರೇ॥**" ಎಂಬಲ್ಲೂ ಪರಮಾತ್ಮಜ್ಞಾನ ಫಲವು ಹೇಳಲ್ಪಟ್ಟಿರುತ್ತದೆ. ಇಲ್ಲಿರುವ "**ತಸ್ಮಿನ್ದೃಷ್ಟೇ ಪರಾವರೇ**" ಎಂಬ ಶ್ರುತಿವಾಕ್ಯವನ್ನು ಮನಸ್ಸಿನಲ್ಲಿಟ್ಟೇ **ಬ್ರಹ್ಮಸಾಕ್ಷಾತ್ಕಾರರೂಪಂ ಜ್ಞಾನಂ** ಎಂದು ಶ್ರೀ ಯತಿವರ್ಯರು ಇಲ್ಲಿ ಹೇಳಿರುತ್ತಾರೆ. ಇತಿ-ಎಂಬದಾಗಿ, **ಬ್ರಹ್ಮ ಸಾಕ್ಷಾತ್ಕಾರರೂಪಂ ಜ್ಞಾನಂ**-ಪರಬ್ರಹ್ಮ ಸಾಕ್ಷಾತ್ಕಾರರೂಪವಾದ ಜ್ಞಾನವು **ಆಹಾರ ಶುದ್ಧ್ಯಾಯತ್ತಂ**-ಆಹಾರ ಶುದ್ಧಿಗೆ ಅಧೀನವಾದುದೆಂದು, **ಶ್ರೂಯತೇ**-ಮೇಲಿನ ಛಾಂದೋಗ್ಯ ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. ಈ ನಿತ್ಯನೈಮಿತ್ತಿಕಾನುಷ್ಠಾನವು ಸಕೃದನುಷ್ಠೇಯವೇ ಅಥವಾ ಪ್ರತಿನಿತ್ಯವೂ ಅನುಷ್ಠಿಸತಕ್ಕದ್ದೇ ಎಂಬ ಸಂದೇಹದಲ್ಲಿ "**ಆವೃತ್ತಿ ರಸಕೃದುಪದೇಶಾತ್**" ಎಂಬ ಬ್ರಹ್ಮಸೂತ್ರದಲ್ಲಿ ಉಪಾಸನೆಯು ಪ್ರತಿನಿತ್ಯವೂ ಅನುಷ್ಠೇಯವೆಂದು ಹೇಳಿರುವ ಹಾಗೆಯೇ **ಅಹರಹಸ್ಸಂಧ್ಯಾಮುಪಾಸೀತ** ಎಂಬಲ್ಲಿ ತೋರಿಬರುವ ಹಾಗೆ ಪ್ರತಿನಿತ್ಯವೂ ನಿತ್ಯನೈಮಿತ್ತಿಕಗಳನ್ನು ಅನುಷ್ಠಿಸತಕ್ಕದ್ದೆಂದು ಮುಂದೆ ಹೇಳುತ್ತಾರೆ—**ತಸ್ಮಾತ್**-ಆ ಕಾರಣದ ದೆಸೆಯಿಂದ, **ಮಹಾ ಯಜ್ಞಾದಿ**

**ಭಾ. ನೋಪಪದ್ಯತೇ; ಏವಂ ಜ್ಞಾನೋತ್ಪಾದಿನಃ ಕರ್ಮಣೋ ಬಂಧಕತ್ವ ಮೋಹಾತ್ಪರಿತ್ಯಾಗ ಸ್ತಾಮಸಃ ಪರಿಕೀರ್ತಿತಃ; ತಮೋ ಮೂಲಸ್ತ್ಯಾಗಸ್ತಾಮಸಃ, ತಮಃ ಕಾರ್ಯಾಜ್ಞಾನ ಮೂಲತ್ವೇನ ತ್ಯಾಗಸ್ಯ ತಮೋ ಮೂಲ**

---

**ಗಳಾದ ನಿತ್ಯನೈಮಿತ್ತಿಕ ಕರ್ಮವು, ಆಪ್ರಯಾಣಾತ್**-ದೇಹ ತ್ಯಾಗ ಮಾಡುವವರೆಗೂ, **ಬ್ರಹ್ಮಜ್ಞಾನಾಯೈವ**-ಪರಮಾತ್ಮ ಸಾಕ್ಷಾತ್ಕಾರಕ್ಕಾಗಿಯೇ, **ಉಪಾದೇಯಮಿತಿ**-ಅಙ್ಗೀಕರಿಸತಕ್ಕದ್ದು ಎಂದರೆ ಅನುಷ್ಠಿಸತಕ್ಕದ್ದೆಂದಾದಸಂತರ, **ತಸ್ಯತ್ಯಾಗಃ**-ಅಂತಹ ಕರ್ಮಗಳನ್ನು ತ್ಯಜಿಸೋಣವು, **ನೋಪಪದ್ಯತೇ**-ಸಾಧ್ಯವಿಲ್ಲವು. ನಿಯತಕರ್ಮಗಳನ್ನು ಬಿಡೋಣವು ಸಾಧ್ಯವಿಲ್ಲವು ಎಂದು ಮೂಲದಲ್ಲಿರುವದನ್ನು ಶ್ರುತಿ ಪ್ರಮಾಣಗಳ ಮೂಲಕ ಸಮರ್ಥನೆಯನ್ನು ಮಾಡಿ ಹೇಳಿರುತ್ತಾರೆ. ಆಹಾರವು ಸಾತ್ವಿಕವಾಗಿ ಯಜ್ಞಶಿಷ್ಟಾಶನವಾಗಿ ಪರಿಶುದ್ಧವಾಗಿದ್ದರೆ ಮನಸ್ಸು ನಿರ್ಮಲವಾಗಿ ಪರಮಾತ್ಮೋಪಾಸನಕ್ಕೆ ಯೋಗ್ಯವಾದ ಜ್ಞಾನಕ್ಕೆ ಹೇತುವಾಗುತ್ತದೆ, ಕೊನೆಗೆ ಮೋಕ್ಷಪ್ರಾಪ್ತಿಯೂ ಲಭಿಸುತ್ತದೆ. ಹಾಗಿಲ್ಲದೆ ರಾಜಸ ತಾಮಸಗಳಾಗಿದ್ದರೆ ಮನೋ ನೈರ್ಮಲ್ಯ ಉಂಟಾಗದೆ ಅಜ್ಞಾನ, ಅನ್ಯಥಾಜ್ಞಾನ ವಿಪರೀತಜ್ಞಾನಗಳಿಗೆ ಹೇತುವಾಗುತ್ತದೆ. ನಿತ್ಯನೈಮಿತ್ತಿಕರೂಪ ಪಂಚಮಹಾಯಜ್ಞಗಳು ಮೋಕ್ಷಾರ್ಥಿಗಳಿಗೆ **ಪಾವನಾನಿ** ಎಂದರೆ ಅನಾದಿಕಾಲದಿಂದಲೂ ಅನುಸರಿಸಿ ಬಂದ ಪುಣ್ಯಪಾಪಗಳನ್ನು ಹೋಗಲಾಡಿಸಿ, ಉಪಾಸನಕ್ಕೆ ಪ್ರತಿಬಂಧಕಗಳಾಗಿದ್ದವುಗಳನ್ನೆಲ್ಲಾ ನಾಶಮಾಡುವವು. ಅವುಗಳು ಆವಶ್ಯಕವಾಗಿ ಯಾವಜ್ಜೀವವೂ ಅನುಷ್ಠೇಯಗಳೆಂದು ಸ್ಥಾಪಿಸುತ್ತಾರೆ.—**ತಸ್ಮಾತ್**-ಆ ಕಾರಣದಿಂದ, **ಪಂಚಮಹಾಯಜ್ಞಾದಿ ನಿತ್ಯನೈಮಿತ್ತಿಕ ಕರ್ಮವು, ಆಪ್ರಯಾಣಾತ್**-ದೇಹಾವಸಾನದವರೆಗೂ, **ಬ್ರಹ್ಮಜ್ಞಾನಾಯ**-ಪರಮಾತ್ಮ ಸಾಕ್ಷಾತ್ಕಾರರೂಪ ಉಪಾಸನೆಗಾಗಿ, **ಉಪಾದೇಯಮಿತಿ**-ಅಙ್ಗೀಕರಿಸತಕ್ಕದ್ದು ಎಂದರೆ ಅನುಷ್ಠಿಸತಕ್ಕದ್ದೆಂದಾದುದರಿಂದ, **ತಸ್ಯತ್ಯಾಗೋ ನೋಪಪದ್ಯತೇ**-ಅಂತಹ ನಿತ್ಯನೈಮಿತ್ತಿಕಗಳನ್ನು ಬಿಡೋಣವು ಸಾಧ್ಯವಿಲ್ಲವು. ಶಾಸ್ತ್ರವಿರುದ್ಧವೂ ಮತ್ತು ಮೋಕ್ಷಫಲವು ಲಭಿಸದೆಯೂ ಆಗುವದರಿಂದ, ಸಾಧ್ಯವಿಲ್ಲವು ಎಂಬ ತಾತ್ಪರ್ಯವು; ಮುಂದೆ ಉತ್ತರಾರ್ಧಕ್ಕೆ ವ್ಯಾಖ್ಯಾನವನ್ನು ದಯಪಾಲಿಸುತ್ತಾರೆ. **ಏವಂ**-ಈಗ ಮೇಲಿನ ವ್ಯಾಖ್ಯಾನದಲ್ಲಿ ಉಪಪಾದಿಸಿರುವ ಹಾಗೆ, **ಜ್ಞಾನೋತ್ಪಾದಿನಃ ಕರ್ಮಣಃ**-ಪ್ರತಿಬಂಧಕ ನಿವೃತ್ತಿಮೂಲಕ ಜ್ಞಾನವನ್ನು ಕೊಟ್ಟು ಜ್ಞಾನರೂಪವಾದ ಉಪಾಸನವನ್ನುಂಟುಮಾಡುವ, **ಕರ್ಮಣಃ**-ನಿತ್ಯನೈಮಿತ್ತಿಕಗಳಾದ ನಿಯತ ಕರ್ಮಗಳ, **ಬಂಧಕತ್ವ ಮೋಹಾತ್ ಪರಿತ್ಯಾಗಃ**-ಬಂಧಕಗಳೆಂಬ ಅನ್ಯಥಾಜ್ಞಾನದಿಂದ ಪರಿತ್ಯಾಗವು, ಎಂದರೆ ಅವುಗಳನ್ನನುಷ್ಠಿಸದಿರುವುದು, **ತಾಮಸಃ ಪರಿಕೀರ್ತಿತಃ**-ತಾಮಸವೆಂದು ಹೇಳಲ್ಪಟ್ಟಿರುತ್ತದೆ. ಶಾಸ್ತ್ರವಿಧಿಗಳು ಹಾಗಿರಲಿ; ವಿಶೇಷ ಫಲವಾದ ಜ್ಞಾನವನ್ನುಂಟುಮಾಡುವುವುಗಳನ್ನು ಪ್ರಾಜ್ಞನಾದವನು ತ್ಯಾಗಮಾಡಬಹುದೋ? ಎಂಬ ಭಾವವು. **ತಮೋ ಮೂಲಸ್ತ್ಯಾಗಃ ತಾಮಸಃ**-ಬಿಡೋಣವು ತಾಮಸವೆಂದರೇನು? ಎಂದು ಕೇಳಬಹುದಾದ ಪ್ರಯುಕ್ತ, ಅಜ್ಞಾನಮೂಲವಾಗಿ ಬಿಡೋಣವು ಯಾವುದೋ ಅದು ತಾಮಸತ್ಯಾಗವೆನಿಸುತ್ತದೆ ಎಂಬ ಭಾವವು. ಇಲ್ಲಿ **ತಮಸಿ ಭವಃ**-ತಾಮಸಃ ಎಂಬ ವ್ಯುತ್ಪತ್ತಿಯನ್ನು ಮನಸ್ಸಿನಲ್ಲಿಟ್ಟು, **ತಾಮಸಃ** ಎಂದರೆ **ತಮೋ ಮೂಲಃ** ಎಂದು ಇಲ್ಲಿ ವ್ಯಾಖ್ಯಾನವು. ಅದನ್ನೇ ವಿಶದೀಕರಿಸಿ ಹೇಳುತ್ತಾರೆ.—**ತಮಃಕಾರ್ಯಾ ಜ್ಞಾನಮೂಲತ್ವೇನ ತ್ಯಾಗಸ್ಯ ತಮೋ ಮೂಲತ್ವಂ**-ಬಿಡೋಣವು ತಮೋಮೂಲವಾಗಿ ತಾಮಸವೆಂದು ಹೇಳುವುದು ಏತಕ್ಕೆಂದರೆ ತಮಸ್ಸಿನ ಕಾರ್ಯವು ಯಾವುದು ಎಂದರೆ ಅಜ್ಞಾನವು, ಅಂತಹ ಅಜ್ಞಾನಮೂಲಕವಾಗಿ ಈ ಕರ್ಮಗಳ ತ್ಯಾಗವಾದುದರಿಂದ ತಾಮಸತ್ಯಾಗವೆಂದು ಹೇಳಲ್ಪಡುವದು ಎಂಬ ತಾತ್ಪರ್ಯವು. ತಮೋಗುಣದಿಂದಲೇ ಪ್ರವೃತ್ತಿಯುಂಟಾಗುವದಲ್ಲವು; ಪ್ರವೃತ್ತಿಯು ಜ್ಞಾನಮೂಲಕ ಮನಸ್ಸಿನ ದ್ವಾರಾಯಾದುದರಿಂದ,

**ತ್ವಮ್; ತಮೋಹ್ಯಜ್ಞಾನಸ್ಯ ಮೂಲಂ—(೮) "ಪ್ರಮಾದ ಮೋಹೌ ತಮಸೋ ಭವತೋಽಜ್ಞಾನ ಮೇವಚ" ಇತ್ಯತ್ರೋಕ್ತತ್ವಮ್; ಅಜ್ಞಾನಂತು ಜ್ಞಾನವಿರೋಧಿ ವಿಪರೀತಜ್ಞಾನಂ; ತಥಾಚ ವಕ್ಷ್ಯತೇ—(೯) "ಅಧರ್ಮಂ ಧರ್ಮ**

---

ತಮಃ ಕಾರ್ಯವಾದ ಅಜ್ಞಾನಮೂಲಕವಾದ ತ್ಯಾಗವು ತಾಮಸತ್ಯಾಗವೆಂದು ವ್ಯಾಖ್ಯಾನ ಮಾಡಲ್ಪಟ್ಟಿತು ಹಾಗಾದರೆ, ತಮೋಗುಣವು ಅಜ್ಞಾನಕ್ಕೆ ಮೂಲಕಾರಣವೆಂದು ಎಲ್ಲಿ ಹೇಳಿದೆ? ಎಂದರೆ ಹಿಂದೆ ಹೇಳಿದುದನ್ನು ಜ್ಞಾಪಿಸುತ್ತಾರೆ.—**ತಮೋಹ್ಯಜ್ಞಾನಸ್ಯ ಮೂಲತ್ವಮ್**-ತಮೋಗುಣವು ಅಜ್ಞಾನಕ್ಕೆ ಮೂಲವೆಂಬುದು ಸಿದ್ಧವು; (6) "**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವಚ**" **ಇತ್ಯತ್ರೋಕ್ತತ್ವಮ್**-ಪ್ರಮಾದ, ಮೋಹ, ಅಜ್ಞಾನ ಇವೆಲ್ಲಾ ತಮೋಗುಣದಿಂದುಂಟಾಗುವುವೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಮುಂದೆಯೂ ಇದೇ ಗೀತೆಯಲ್ಲೇ ಹಾಗೆಯೇ ಹೇಳಲ್ಪಡುತ್ತದೆಂದು ಪ್ರಮಾಣವನ್ನು ಪ್ರದರ್ಶಿಸಿರುತ್ತಾರೆ.—**ಅಜ್ಞಾನಂತು**-ಅಜ್ಞಾನವಾದರೋ ಎಂತಾದ್ದೆಂದರೆ **ಜ್ಞಾನವಿರೋಧಿ ವಿಪರೀತಜ್ಞಾನಂ**-ಒಂದನ್ನು ಯಥಾರ್ಥವಾಗಿ ತಿಳಿಯದೇ ವ್ಯತ್ಯಸ್ತವಾಗಿ ತಿಳಿಯುವುದು; **ತಥಾಚ ವಕ್ಷ್ಯತೇ**-ಹಾಗೆಯೇ ಮುಂದೆ ಹೇಳಲ್ಪಡುತ್ತದೆ. "**ಅಧರ್ಮಂ ಧರ್ಮಮಿತಿಯಾ ಮನ್ಯತೇ ತಮಸಾವೃತಾ। ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಸ್ಸಾ ಪಾರ್ಥ ತಾಮಸೀ**" ಇತಿ-ಎಂಬದಾಗಿ; ಬುದ್ಧಿಯೂ ಸಾತ್ವಿಕ ರಾಜಸ ತಾಮಸವಾಗಿ ಮೂರು ವಿಧವಾದುದು ಎಂದು ಹೇಳುವ ಸಂದರ್ಭದಲ್ಲಿ ತಾಮಸ ಬುದ್ಧಿಯು ಎಂತಾದ್ದೆಂದರೆ ತಮೋಗುಣದಿಂದ ಆವೃತವಾಗಿ ಯಾವ ಬುದ್ಧಿಯು ಹಿಂದೆ ಹೇಳಿದ ಸದುಪದೇಶವನ್ನೆಲ್ಲಾ ವ್ಯತ್ಯಸ್ತವಾಗಿ ತಿಳಿಯುತ್ತದೋ, ಎಂದರೆ ಅಧರ್ಮವನ್ನು ಧರ್ಮವೆಂಬದಾಗಿ ಹಾಗೆಯೇ ಧರ್ಮವನ್ನು ಅಧರ್ಮವೆಂಬದಾಗಿ, ಇಲ್ಲದಿರುವದನ್ನು ಇರುವದೆಂದೂ, ತುಂಬಾ ಉತ್ಕೃಷ್ಟವಸ್ತುವನ್ನು ನಿಕೃಷ್ಟವೆಂದೂ, ನಿಕೃಷ್ಟವಾದುದನ್ನು ಸರ್ವೋತ್ಕೃಷ್ಟವೆಂದೂ ಹೀಗೆಲ್ಲಾ ತಿಳಿಯುತ್ತದೋ, ಅಂತಹ ಬುದ್ಧಿಯು ತಾಮಸವೆಂದು ಹೇಳಿಸಿಕೊಳ್ಳುತ್ತದೆಂಬುದು ಈ ಶ್ಲೋಕ ತಾತ್ಪರ್ಯವು. ಆದರೆ ಅಜ್ಞಾನ ಶಬ್ದಕ್ಕೆ ಜ್ಞಾನಶೂನ್ಯತೆ ಎಂದಲ್ಲವೇ ಅರ್ಥ ಹೇಳತಕ್ಕದ್ದು. ಇಲ್ಲಿ ಅಜ್ಞಾನಂತು ವಿಪರೀತ ಜ್ಞಾನವೆಂಬ ಭಾಷ್ಯವು ಹೇಗೆ? ಅಜ್ಞಾನ. ಅನ್ಯಥಾಜ್ಞಾನ, ವಿಪರೀತಜ್ಞಾನವೆಂಬದಾಗಿ ಅವಿದ್ಯೆಯು ಮೂರುವಿಧವೆಂದು ಹೇಳಲ್ಪಟ್ಟಿರುತ್ತದೆ; ಅದೂ ಅಲ್ಲದೆ ಶ್ರೀ ಯತಿವರ್ಯರು ಉದಾಹರಿಸಿರುವ "**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವಚ**" ಎಂಬಲ್ಲಿ **ಮೋಹ**ಶಬ್ದಕ್ಕೆ **ವಿಪರೀತಜ್ಞಾನ**ವೆಂದೇ, ಮತ್ತು **ಅಜ್ಞಾನ**ಶಬ್ದಕ್ಕೆ **ಜ್ಞಾನಾಭಾವ**ವೆಂದೇ ಅರ್ಥಮಾಡಿ, ಇಲ್ಲಿ ಮಾತ್ರ ಅಜ್ಞಾನಶಬ್ದಕ್ಕೆ ವಿಪರೀತಜ್ಞಾನವೆಂಬರ್ಥ ಹೇಗೆ? ಎಂದರೆ ಇಲ್ಲಿ ತ್ಯಾಗಮಾಡಕೂಡದೆಂದಿರುವದನ್ನು ದೋಷಯುಕ್ತವಾಗಿ ತಿಳಿದು ತ್ಯಾಗ ಮಾಡುವದು ಪ್ರಕರಣವಾದುದರಿಂದ ಅದು ವಿಪರೀತಜ್ಞಾನವೇ; ಆದುದರಿಂದ ಹಾಗೆ ವ್ಯಾಖ್ಯಾನವು. ಅಥವಾ ಅಜ್ಞಾನ, ಅನ್ಯಥಾಜ್ಞಾನ, ವಿಪರೀತಜ್ಞಾನಗಳೆಲ್ಲಾ ಸಾಧಾರಣವಾಗಿ ಸಹೋದರರೂಪದಲ್ಲಿ ಒಟ್ಟಿಗೇ ಯಾವಾಗಲೂ ಇರುವ ಮೋಹಶಬ್ದದಿಂದ ಹೇಳಲ್ಪಡುವದರಿಂದ ಹಾಗೆ ವ್ಯಾಖ್ಯಾನವು. ಅಜ್ಞಾನಮೂಲಕವಾಗಿ ಪ್ರವೃತ್ತಿಯುಂಟಾದರೆ, ಅದು ವಿಪರೀತಜ್ಞಾನವೇ ಆಗುತ್ತದೆ. ಜ್ಞಾನಪ್ರಾಪ್ತಿಯಾದನಂತರ ಕರ್ಮದ ಆವಶ್ಯಕವಿಲ್ಲವೆಂದು ಕೆಲವರು ಹೇಳುವದು ಮೋಹಜ್ಞಾನದಿಂದ ಎಂದು **ಮೋಹಾತ್ ತಸ್ಯ ಪರಿತ್ಯಾಗಃ** ಎಂದು ಮೂಲದಲ್ಲಿ ಹೇಳಲ್ಪಟ್ಟಿತು. ಮೋಹಜ್ಞಾನವು ಹೇಗೆ ಎಂಬುದನ್ನು ಜ್ಞಾನೋತ್ಪಾದಕಗಳಾದ ನಿತ್ಯನೈಮಿತ್ತಿಕ ಕರ್ಮಗಳು **ಬಂಧಕತ್ವ ಮೋಹಾತ್ ಪರಿತ್ಯಾಗಃ** ಎಂಬ ವ್ಯಾಖ್ಯಾನ ಮೂಲಕ, **ಮೋಹ** ಹೇಗೆ ಎಂಬುದನ್ನು ವ್ಯಕ್ತಪಡಿಸಿರುತ್ತಾರೆ. ಶ್ರುತಿಯು **ನಕರ್ಮ ಲಿಪ್ಯತೇ ನರೇ** ಎಂಬಲ್ಲಿ ಮೋಕ್ಷಾರ್ಥಿಗೆ ನಿತ್ಯನೈಮಿತ್ತಿಕ

---

(೬) ಗೀ. (೭) ಗೀ. ೧೮. ೩೨ (೮) ಗೀ. ೧೪. ೧೭ (೯) ಗೀ.

**ಮಿತಿಯಾ ಮನ್ಯತೇ ತಮಸಾವೃತಾ | ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಸ್ಸಾ ಪಾರ್ಥ ತಾಮಸೀ" ಇತಿ; ಅತೋ ನಿತ್ಯ ನೈಮಿತ್ತಿಕಾದೇಃ ಕರ್ಮಣ ಸ್ತ್ಯಾಗೋ ವಿಪರೀತ ಜ್ಞಾನಮೂಲ ಏವೇತ್ಯರ್ಥಃ.** ||೭||

---

ಗಳು ಫಲ ಕರ್ತೃತ್ವ ಮಮತೆಗಳ ತ್ಯಾಗಮೂಲಕ ಪರಮಪುರುಷಾರಾಧನೆಯ ರೂಪದಲ್ಲಿ ಅನುಷ್ಠಿಸುವದರಿಂದ, ಅವುಗಳು ಬಂಧಕಗಳಾಗುವದಿಲ್ಲವೆಂಬುದು ವ್ಯಕ್ತವಾಗಿದ್ದರೂ, ಜ್ಞಾನಿಗೆ ಆವಶ್ಯಕವಿಲ್ಲ, ಬಂಧಕವೆನ್ನುವದು ವಿಪರೀತಜ್ಞಾನದ ವಿಜೃಂಭಣೆಯೆಂದು ಭಾವಿಸಿ ತಾಮಸವೆಂದು ಹೇಳಲ್ಪಟ್ಟಿತು. ಹೀಗೆ ಹೇಳಿದುದರಿಂದ, **ತ್ಯಾಗವೂ** ಸಹ **ತಾಮಸ ರಾಜಸ ಸಾತ್ವಿಕ**ವೆಂದು ಹೇಳಲುಪಕ್ರಮಿಸಿ, ಈ ಶ್ಲೋಕದಿಂದ ತಾಮಸತ್ಯಾಗವೆಂಬುದು ಬಂಧಕವೆಂಬ ಮೋಹಜ್ಞಾನದಿಂದ ಬಿಟ್ಟುಬಿಡೋಣವೆಂದು ಉಪದೇಶಿಸಲ್ಪಟ್ಟಿತು. ಬಂಧಕಕ್ಕೆ ಕಾರಣವಾಗುತ್ತದೆಂದು ನಿಯತಕರ್ಮಗಳಾದ ನಿತ್ಯನೈಮಿತ್ತಿಕಗಳ ತ್ಯಾಗವು ವಿಪರೀತ ಜ್ಞಾನಮೂಲವೆಂದು ಮುಂದಿನ ವಾಕ್ಯದಿಂದ ನಿಗಮನಮಾಡಿ ಹೇಳುತ್ತಾರೆ.—**ಅತಃ**-ಆ ಕಾರಣದಿಂದ, **ನಿತ್ಯನೈಮಿತ್ತಿಕಾದೇಃ**-ನಿತ್ಯನೈಮಿತ್ತಿಕಾದಿಗಳಾದ, **ಕರ್ಮಣಃ**-ಕರ್ಮದ **ತ್ಯಾಗಃ**-ಬಂಧಕವೆಂದು ಬಿಟ್ಟುಬಿಡೋಣವು, **ವಿಪರೀತ ಜ್ಞಾನಮೂಲಮೇವೇತ್ಯರ್ಥಃ**-ವಿಪರೀತ ಜ್ಞಾನಮೂಲಕವಾದುದೇ ಎಂಬುದು ತಾತ್ಪರ್ಯವು. ಇಲ್ಲಿ ಆದಿಶಬ್ದದಿಂದ ಕಾಮ್ಯಕರ್ಮಗಳೂ ಹೇಳಲ್ಪಟ್ಟವು. ಕರ್ತೃತ್ವ, ಮಮತಾಫಲತ್ಯಾಗಮೂಲಕ ಭಗವದಾರಾಧನ ರೂಪದಲ್ಲಿ ನಿತ್ಯನೈಮಿತ್ತಿಕಗಳು ಮಾಡಲ್ಪಟ್ಟರೆ ಹೇಗೆ ಬಂಧಕವಲ್ಲವೋ, ಹಾಗೆಯೇ ಕಾಮ್ಯಗಳನ್ನೂ ಅದೇ ರೀತಿಯಲ್ಲೇ ಅನುಷ್ಠಿಸಿದರೂ ದೋಷವಿಲ್ಲವಾದುದರಿಂದ, ಅಂತಹ ಕರ್ಮಗಳ ತ್ಯಾಗವೂ ಸಹ, ಮೋಹಜ್ಞಾನಮೂಲಕವಾದುದೇ ಎಂಬ ಭಾವವು. ವರಲಕ್ಷ್ಮೀವ್ರತದಲ್ಲಿ ಲಕ್ಷ್ಮಿಯ ಆರಾಧನೆಯನ್ನು ಐಹಿಕಾದಿ ಫಲಗಳಿಗಾಗಿ ಮುಮುಕ್ಷುವು ಆರಾಧಿಸುವದು ನಿಂದ್ಯವು. ಆದರೆ ಸತ್ಸಂಪ್ರದಾಯ ರೀತ್ಯಾ ಹಿರಿಯರು ಆಚರಿಸಿದ ವ್ರತವೆಂದು ಲಕ್ಷ್ಮೀನಾರಾಯಣ ಪ್ರೀತ್ಯರ್ಥವಾಗಿ ಆರಾಧಿಸಿ, ಅದರಲ್ಲಿ ಕರ್ತೃತ್ವ, ಮಮತಾ, ಫಲತ್ಯಾಗವನ್ನು ಮಾಡಿದರೆ, ಮುಮುಕ್ಷುವಿಗೆ ಎಂದಿಗೂ ವಿರುದ್ಧವಲ್ಲವು. ಮೋಹದಿಂದ ಹಿರಿಯರನುಷ್ಠಿಸಿದುದನ್ನು ಕಾಮ್ಯವೆಂದು ತ್ಯಾಗಮಾಡುವದೂ ವಿಪರೀತಜ್ಞಾನದ ವಿಜೃಂಭಣೆಯೇ ಎಂಬ ತಾತ್ಪರ್ಯವು. ಶ್ರೀಮದ್ರಾಮಾಯಣ ಪಾರಾಯಣವನ್ನೂ ಹಿರಿಯರು ಅನುಷ್ಠಿಸಿ ಸಂಪ್ರದಾಯ ರೀತ್ಯಾ ಬಂದುದೆಂದು ಅನುಷ್ಠಿಸಿ, ಸಾತ್ವಿಕ ತ್ಯಾಗದೊಂದಿಗೆ ಭಗವಂತನಲ್ಲಿ ಸಮರ್ಪಿಸುವದು ಮೋಕ್ಷಾರ್ಥಿಗೂ ವಿಹಿತವೇ; ಕಾಮ್ಯವೆಂದು ಅದರ ಪರಿತ್ಯಾಗವು ವಿಪರೀತಜ್ಞಾನಮೂಲಕವಾದುದು ಎಂಬುದು **ಆದಿಶಬ್ದಾಭಿ**ಪ್ರಾಯವು. ಹಾಗೆಯೇ **ಪುತ್ರ**ನ ಮತ್ತು **ಪುತ್ರಿ**ಯ ಮೊದಲಾದವರುಗಳ ವಿಷಯದಲ್ಲೂ, ತನಗೆ ಸಂಬಂಧಪಟ್ಟ ಜನರ ವಿಷಯದಲ್ಲೂ, ದೇಶೀಯ ಜನರ ವಿಷಯದಲ್ಲೂ, ಅನುಕೂಲ್ಯಗಳನ್ನು ಕಲ್ಪಿಸುವ ಸರ್ವ ಪ್ರಯತ್ನಗಳನ್ನೂ ಪರಮಪುರುಷಾರಾಧನ ರೂಪದಲ್ಲಿ ಮೋಕ್ಷಾರ್ಥಿಯು ನಡೆಸುವದೂ ನಿಂದ್ಯವಲ್ಲವು; ಅವುಗಳ ತ್ಯಾಗವೂ ಸಹ ವಿಪರೀತಜ್ಞಾನ ವಿಜೃಂಭಣೆಯು. ಹಾಗೆಯೇ ಮೋಕ್ಷಾರ್ಥಿಯು ಭಗವದ್ಭಾಗವತರ ಆರಾಧನಕ್ಕಾಗಿ ಮಾಡುವ ಪ್ರಯತ್ನಗಳ ತ್ಯಾಗವೂ ಮೋಹಜ್ಞಾನಮೂಲಕವಾದುದು. ಹಿಂದೆಯೇ **ಮುಕ್ತಸಙ್ಗಸ್ಸಮಾಚರ**ವೆಂದು ಅನುಜ್ಞೆಯು ದಯಪಾಲಿಸಲ್ಪಟ್ಟಿರುತ್ತದೆ. ಇಲ್ಲಿ **ಮೋಹಾತ್ ತಸ್ಯಪರಿತ್ಯಾಗಃ** ಎಂದು ಇಲ್ಲಿ ಹೇಳಿರುವದು ಮುಂದಿನ ಎರಡು ಶ್ಲೋಕದಿಂದ ಹೇಳಲ್ಪಡುವ ರಾಜಸತ್ಯಾಗಕ್ಕಿಂತ ಇದು ತುಂಬಾ ದೋಷಾವಹವೆಂದು ಹೇಳಿದಂತಾಯಿತು. ರಾಜಸದಲ್ಲಿ ಮಾಡುವದು ದುಃಖವೆಂದು ಇವು ತ್ಯಾಗಮಾಡಲ್ಪಡುವದರಿಂದ ಇದರಷ್ಟು ದೋಷಾವಹವಲ್ಲವೆಂಬುದೂ ಸೂಚಿತವು; ಏಕೆಂದರೆ ಕೆಲವು ದಿನಗಳಾದರೂ ನಡೆಸಿ ಮಧ್ಯೆ ಮಧ್ಯೆ ದುಃಖಕರವಾಗಿ ಬಿಡುವದರಿಂದ ಅಷ್ಟುದೋಷಾವಹವಲ್ಲವು. ಅದೂ ಅಲ್ಲದೆ ಮಾಡತಕ್ಕದ್ದೆಂದು ನಿಯತವೆಂದು ಒಪ್ಪಿಕೊಂಡು,

**ಮೂ. ದುಃಖ ಮಿತ್ಯೇವ ಯತ್ಕರ್ಮ ಕಾಯಕ್ಲೇಶ ಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗ ಫಲಂ ಲಭೇತ್ ॥೮॥**

ದುಃಖಕರವು ಕಾಯಕ್ಲೇಶವು ಎಂದು ತ್ಯಾಗಮಾಡುತ್ತಾನೆಯಾದುದರಿಂದ ತಾಮಸವಲ್ಲದೆ ರಾಜಸವು.

**ಮೂಲಕ್ಕೆ ಅರ್ಥವು.** ಹಿಂದಿನ ಶ್ಲೋಕದಲ್ಲಿ ತಾಮಸತ್ಯಾಗವು, **ದೋಷವತ್** ಎಂದರೆ ಬಂಧಕವೆಂಬ ಭಾವದಿಂದ ವಿಪರೀತತ್ಯಾಗವು; ಜ್ಞಾನಯೋಗದಲ್ಲೇ ಸಾಕ್ಷಾತ್ತಾಗಿ ಪ್ರವರ್ತಿಸುವವನು, ಈ ಬಂಧಕಗಳಾದ ನಿತ್ಯನೈಮಿತ್ತಿಕಗಳನ್ನು ಅನುಷ್ಠಿಸದೆ, ತನಗೆ ಬೇಕಾದ ಮೋಕ್ಷಫಲವನ್ನು ಪಡೆಯದೆ ಬಂಧಕ್ಕೇ ಒಳಗಾಗುವನೆಂದು ಹೇಳಿ, ಅಂತಹ ಅನುಷ್ಠಾನವು ತಾಮಸತ್ಯಾಗವೆಂದು ಹೇಳಲ್ಪಟ್ಟಿತು. ಆದುದರಿಂದ ಪ್ರಾಸಙ್ಗಿಕವಾಗಿ ಈ ಶ್ಲೋಕದಲ್ಲಿ ರಾಜಸ ತ್ಯಾಗವೆಂದರೇನೆಂಬುದು ಹೇಳಲ್ಪಡುತ್ತದೆ. ಕಾಯಕ್ಲೇಶಭಯದಿಂದ ವಿಹಿತಕರ್ಮಗಳನ್ನು ಮಾಡುವದು ಅನೇಕ ಕಷ್ಟವಾದ ಪ್ರವೃತ್ತಿಗಳನ್ನೊಳಗೊಂಡಿರುವದು ಎಂದು ಅವುಗಳನ್ನು ತ್ಯಾಗ ಮಾಡುವದು ರಾಜಸತ್ಯಾಗವೆಂದು ಹೇಳುತ್ತಾರೆ.

ಉತ್ತರಾರ್ಧದಲ್ಲಿ **ಸಃ** ಎಂದು ಇರುವದರಿಂದ, ಪೂರ್ವಾರ್ಧದಲ್ಲಿ **ಯಃ** ಎಂಬ ಕರ್ತೃ ಪದವನ್ನು ಇಟ್ಟುಕೊಳ್ಳತಕ್ಕದ್ದು. **ಯಃ**-ಯಾವ ಮುಮುಕ್ಷುವು, **ಯತ್ಕರ್ಮ**-ಯಾವ ಶಾಸ್ತ್ರವಿಹಿತಗಳಾದ ನಿತ್ಯನೈಮಿತ್ತಿಕ ಕರ್ಮಗಳನ್ನು, **ದುಃಖಮಿತ್ಯೇವ**-ಧನಾರ್ಜನಾದಿ ಅನೇಕ ದುಃಖಗಳೇನು, ಅನುಷ್ಠಾನರೂಪ ಪ್ರಯಾಸಗಳೇನು, ಇಂತಹ ದುಃಖಗಳನ್ನು ಒಳಗೊಂಡಿವೆ ಎಂದು, ಭಾವಿಸಿ, **ಕಾಯ ಕ್ಲೇಶಭಯಾತ್**-ಶರೀರಾಯಾಸದ ಭಯದಿಂದ, ಶರೀರಾಯಾಸ ಉಂಟಾಗುತ್ತದೆಂಬ ಭಯದಿಂದ, **ತ್ಯಜೇತ್**-ಅನುಷ್ಠಿಸದೇ ಬಿಟ್ಟುಬಿಡುತ್ತಾನೋ, **ಸಃ**-ಅವನು, **ರಾಜಸಂ ತ್ಯಾಗಂ**-ರಾಜಸತ್ಯಾಗವನ್ನು, **ಕೃತ್ವಾ**-ಮಾಡಿ, ಆ ಕಾರಣದಿಂದ ಅದರ ಫಲವಾಗಿ **ನೈವತ್ಯಾಗ ಫಲಂ ಲಭೇತ್**-ತ್ಯಾಗಫಲವಾದ ಭಕ್ತಿಯೋಗಕ್ಕೆ ಅರ್ಹತೆಯನ್ನು ಹೊಂದುವದಿಲ್ಲವು. (೧) ಪಾವನತ್ವವೆಂದರೆ ಭಕ್ತಿಯೋಗಾರಂಭಕ್ಕೆ ಪ್ರತಿಬಂಧಕ ಪಾಪ ನಿವೃತ್ತಿಯು, (೨) ಆತ್ಮಾವಲೋಕನ ಸಿದ್ಧಿಯು, (೩) ಹೀಗೆ ಭಕ್ತಿಯೋಗಕ್ಕೆ ಯೋಗ್ಯತೆಯು ಇವುಗಳೇ ತ್ಯಾಗಫಲಗಳು. ಈ ರಾಜಸತ್ಯಾಗಿಯ ಅಭಿಪ್ರಾಯವೇನೆಂದರೆ ನಿತ್ಯನೈಮಿತ್ತಿಕ ಕರ್ಮಗಳೇನೋ ಶಾಸ್ತ್ರವಿಹಿತಗಳಾದುವು, ಆದರೂ ಅವುಗಳನ್ನು ಅನುಷ್ಠಿಸುವದು ತುಂಬಾ ಕಷ್ಟವು, ದ್ರವ್ಯಾರ್ಜನಾದಿ ದುಃಖಕರಗಳಾದ ವ್ಯಾಪಾರಗಳನ್ನು ಒಳಗೊಂಡಿರುವದು. ಅದೂ ಅಲ್ಲದೆ ಅವುಗಳನ್ನು ಅನುಷ್ಠಿಸುವದೆಂದರೆ ತುಂಬಾ ಕಾಯಕ್ಲೇಶಗಳನ್ನು ಸಹಿಸಿಕೊಳ್ಳ ಬೇಕಾಗುತ್ತದೆ; ಮಧ್ಯಾಹ್ನದ ೧೨ ಘಂಟೆಯವರೆಗೂ ಏನನ್ನೂ ತಿನ್ನಲು ಪಾನಮಾಡಲು ಅನುಕೂಲವಿಲ್ಲವು ಹೀಗೆ ಆಹ್ನಿಕ ಮೊದಲಾದವುಗಳಲ್ಲೇ ಕಾಲವನ್ನು ಕಳೆದರೆ ಮಿಕ್ಕ ಕೆಲಸ ಗಳನ್ನು ನಡೆಸಲು ಕಾಲವೆಲ್ಲಿರುತ್ತದೆ? ಇತ್ಯಾದಿ ಭಯಗಳಿಂದ ಅಂತಹ ವಿಹಿತಕರ್ಮಗಳನ್ನು ತ್ಯಾಗಮಾಡಿ ಮೋಕ್ಷಕ್ಕೆ ಬೇಕಾದುದು ಆತ್ಮ ಸಾಕ್ಷಾತ್ಕಾರದಿಂದ ಸಾಧ್ಯವಾದ ಪರಮಾತ್ಮೋಪಾಸನೆಯು; ಇದನ್ನು ಹೇಗಾದರೂ ಸಾಧಿಸಬಲ್ಲೆನು; ಇದಕ್ಕೆ ಕರ್ಮಗಳು ಏಕೆ? ಎಂದು ತ್ಯಾಗಮಾಡಿದರೆ ಆತ್ಮ ಸಾಕ್ಷಾತ್ಕಾರವೂ ಇಲ್ಲವು; ಆದುದರಿಂದ ಉಪಾಸನಾರಂಭಕ್ಕೆ ಪ್ರತಿಬಂಧಕ ಪ್ರಾಚೀನ ಕರ್ಮ ನಿವೃತ್ತಿಯೂ ಇಲ್ಲದುದರಿಂದ **ನೈವತ್ಯಾಗ ಫಲಂಲಭೇತ್** ಎಂದು ಹೇಳಲ್ಪಟ್ಟಿತು. ಹಿಂದೆ ಮೂರನೆಯ ಅಧ್ಯಾಯದಲ್ಲಿ, ಅಂತವನು ಮಿಥ್ಯಾಚಾರ ನಾಗುವನೆಂದು ೬ನೆಯ ಶ್ಲೋಕದಲ್ಲೂ, ಶರೀರಯಾತ್ರೆಯ ಸಿದ್ಧಿ ಇಲ್ಲವೆಂದು ೧೩ನೆಯ ಶ್ಲೋಕದಲ್ಲೂ, ಇಂದ್ರಿಯಾರಾಮನಾಗುವನೆಂದು ೧೬ನೆಯ ಶ್ಲೋಕದಲ್ಲೂ, ವರ್ಣಸಾಂಕರ್ಯ ವನ್ನುಂಟುಮಾಡುವನೆಂದು ೨೪ನೆಯ ಶ್ಲೋಕದಲ್ಲೂ, ಭಗವನ್ನಿಗ್ರಹವನ್ನು ಹೊಂದುವನೆಂದು ೩೫ನೆಯ ಶ್ಲೋಕದಲ್ಲೂ, ರಾಗದ್ವೇಷಗಳಿಗೆ ಒಳಗಾಗುವನೆಂದು ೩೬ನೆಯ ಶ್ಲೋಕದಲ್ಲೂ,

**ಭಾ.** **ಯದ್ಯಪಿ ಪರಂಪರಯಾ ಮೋಕ್ಷ ಸಾಧನ ಭೂತಂ ಕರ್ಮ; ತಥಾಪಿ ದುಃಖಾತ್ಮಕ ದ್ರವ್ಯಾರ್ಜನ ಸಾಧ್ಯತ್ವಾತ್ ಬಹ್ವಾಯಾಸರೂಪತಯಾ ಕಾಯ**

---

ಹೇಳಲ್ಪಟ್ಟಿರುತ್ತದೆ. ಇದನ್ನೆಲ್ಲಾ ಮನಸ್ಸಿನಲ್ಲಿಟ್ಟೇ **ನೈವತ್ಯಾಗ ಫಲಂ ಲಭೇತ್** ಎಂದು ತಾಮಸತ್ಯಾಗದ ಹಾಗೆಯೇ, ರಾಜಸತ್ಯಾಗವೂ ಬಂಧಕ್ಕೆ ಮೂಲವೆಂದು ಭಾವಿಸತಕ್ಕದ್ದು. ಹಾಗಾದರೆ ತಾಮಸತ್ಯಾಗಕ್ಕೂ ಇದಕ್ಕೂ ಏನು ವ್ಯತ್ಯಾಸವೆಂದು ಕೇಳಬಹುದು. ರಾಜಸ ತ್ಯಾಗವು ತಾಮಸತ್ಯಾಗದಷ್ಟು ನಿಕೃಷ್ಟವಾದುದಲ್ಲವು. **"ಪಾವನಾನಿ ಮನೀಷಿಣಾಂ"** ಎಂದು ಹೇಳಿರುವ ಹಾಗೆ ಪಾಪ ನಿವಾರಣೆಯ ಮೂಲಕ ಪಾವನತ್ವವನ್ನುಂಟುಮಾಡಿ ಭಗವದನು ಗ್ರಹವನ್ನು ಸಂಪಾದಿಸಿಕೊಡುವ ಭಕ್ತಿಯೋಗ ಸಿದ್ಧಿಯನ್ನುಂಟುಮಾಡುವ ನಿತ್ಯನೈಮಿತ್ತಿಕಗಳು ದೋಷಯುಕ್ತವಾದುವೆಂದು ದೋಷವನ್ನಾರೋಪಿಸಿದುದರಿಂದ ತಾಮಸ ತ್ಯಾಗವೆನಿಸಿತು. ಇದಾದರೋ ಅಷ್ಟು ದೋಷಕ್ಕೆ ಕಾರಣವಾಗದೆ, ಅನುಷ್ಠಿಸುವದು ತುಂಬಾ ಕಷ್ಟವು. ದೇಹಾಯಾಸವನ್ನುಂಟುಮಾಡುವದು ಎಂದು ಇಷ್ಟುಮಾತ್ರ ಭಾವನೆಯಿಂದ ತ್ಯಾಗಮಾಡಿ ದುದರಿಂದ ಹಿಂದಿನಷ್ಟು ಭಗವನ್ನಿಗ್ರಹಕ್ಕೆ ಈ ಸಂದರ್ಭದಲ್ಲಿ ಕಾರಣವಿಲ್ಲದುದರಿಂದ ರಾಜಸ ತ್ಯಾಗವೆಂದು ಹೇಳಲ್ಪಟ್ಟಿತು. ಹೇಗೇ ಆಗಲಿ, ಅಂತೂ ಇಂತು ಕುನ್ತೀಮಕ್ಕಳಿಗೆ ರಾಜ್ಯ ವಿಲ್ಲವೆಂಬ ಲೋಕವಾರ್ತೆಯ ಪ್ರಕಾರ ಈ ಎರಡು ವಿಧ ಕರ್ಮತ್ಯಾಗಮಾಡಿದವರಿಗೂ ಮೋಕ್ಷ ಫಲಕ್ಕೆ ಬೇಕಾದ ಉಪಾಯಸಿದ್ಧಿಯೇ ಇಲ್ಲವೆಂದು ತಿಳಿಯತಕ್ಕದ್ದು. ಈ ಅಭಿಪ್ರಾಯವೇ **"ನೈವತ್ಯಾಗ ಫಲಂ ಲಭೇತ್"** ಎಂಬುದರಿಂದ ಸೂಚಿತವು. ತ್ಯಾಗಫಲವು ಯಾವು ದೆಂದರೆ ಮುಂದಿನ ಶ್ಲೋಕದಲ್ಲಿ ಹೇಳುವ ಸಾತ್ವಿಕವಾದ ತ್ಯಾಗ ಫಲವು; ಅದರಿಂದುಂಟಾಗು ವದು ಯಾವುದೆಂದರೆ, ಉಪಾಸನಕ್ಕೆ ಪ್ರತಿಬಂಧಕಗಳಾದ ಪುಣ್ಯಾಪಾಪಗಳ ನಾಶಕ್ಕೆ ಕಾರಣ ವಾದ ಭಗವದನುಗ್ರಹವೇ; ಪರಮಾತ್ಮನು ಪ್ರಸನ್ನನಾಗಬೇಕು; ಅದು ಆತನಿಗೆ ಮಾಡುವ ಕೈಙ್ಕರ್ಯರೂಪಗಳಾದ ವಿಹಿತಕರ್ಮಗಳಿಂದ ಸಾಧ್ಯವೇ ವಿನಾ, ಅನ್ಯಥಾ ಆಗುವದಿಲ್ಲವು; ಇದು ಲೋಕಸಿದ್ಧವಾದ ವಿಷಯವು. ರಾಜನಿಂದ ಆಜ್ಞಾಪಿಸಲ್ಪಟ್ಟ ಕೆಲವು ಕರ್ಮಗಳಿದ್ದರೆ, ಆತನ ಭೃತ್ಯನು ಅವುಗಳನ್ನು ನಡೆಸದೆ ಆತನ ಪ್ರಸನ್ನತೆಯನ್ನು ಪ್ರಾರ್ಥಿಸಿ, ರಾಜನನ್ನೇ ಧ್ಯಾನಿಸು ತ್ತಿದ್ದರೆ ಲಭಿಸುತ್ತದೆಯೇ? ಅದು ಹೇಗೆ ಇಲ್ಲವೋ, ಹಾಗೆಯೇ ಸರ್ವಜ್ಞನಾದ ರಾಜಾಧಿ ರಾಜನೂ ಸಹ ತನ್ನಿಂದ ಆಜ್ಞಾಪಿಸಲ್ಪಟ್ಟ ಕರ್ಮಗಳನ್ನು ಯಾವಾಗ ಪರಿತ್ಯಾಗಮಾಡಿದನೋ, ಆಗ ಆತನ ಅನುಗ್ರಹಕ್ಕೆ ಎಂದಿಗೂ ಪಾತ್ರನಾಗನು ಎಂಬುದು ಈ ೭ನೆಯ ಮತ್ತು ೮ನೆಯ ಶ್ಲೋಕಗಳ ಸಾರ ಭೂತಾರ್ಥವು. ||೮||

**ಭಾಷ್ಯಾರ್ಥವು.** ಹಿಂದಿನ ಶ್ಲೋಕದಲ್ಲಾದರೋ, ನಿತ್ಯನೈಮಿತ್ತಿಕ ಧರ್ಮಗಳಿಗೆ ವಿಧಿ ವಿಹಿತತ್ವ ರೂಪ ಸ್ವರೂಪವನ್ನೇ ತೆಗೆದುಹಾಕಿ, ಅದಕ್ಕೆ ಇಲ್ಲದಿರುವ ಬಂಧಕರೂಪ ದೋಷ ವನ್ನು ಆರೋಪಿಸಿ, ತ್ಯಾಗಮಾಡಿದುದರಿಂದ ತಾಮಸತ್ಯಾಗವೆಂದು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಾದರೋ ಆ ಶಾಸ್ತ್ರ ವಿಹಿತತ್ವಸ್ವರೂಪವನ್ನು ತೆಗದುಹಾಕದೆ, ಅದನ್ನು ಒಪ್ಪಿ ಕೊಂಡು ಅದರ ನಿರೂಪಿತಸ್ವರೂಪ ವಿಶೇಷಣವಾದ ಪಾವನತ್ವ ರೂಪ ಧರ್ಮವನ್ನು ನಿತ್ಯ ನೈಮಿತ್ತಿಕಗಳಿಗೆ ಅಙ್ಗೀಕರಿಸದೆ, ಅವುಗಳನ್ನು ಅನುಷ್ಠಿಸುವದು ತುಂಬಾ ಕಷ್ಟವೆಂದು ಭಾವಿಸಿ ಅವುಗಳನ್ನು ತ್ಯಾಗಮಾಡುವದು ರಾಜಸತ್ಯಾಗವೆಂದೆನಿಸುತ್ತದೆಂದು ಹೇಳಲ್ಪಡುತ್ತದೆ.—ಆ ತಾಮಸತ್ಯಾಗಕ್ಕಿಂತ ರಾಜಸತ್ಯಾಗಕ್ಕೆ ಇರುವ ವೈಲಕ್ಷಣ್ಯವನ್ನು ಮೊದಲು **ಯದ್ಯಪಿ** ಎಂಬ ವಾಕ್ಯದ ಮೂಲಕ ಪ್ರದರ್ಶಿಸುತ್ತಾರೆ. ಇದರಿಂದ ರಾಜಸತ್ಯಾಗಮಾಡುವನು ಒಪ್ಪಿಕೊಳ್ಳುವ ವಿಷಯವನ್ನು ಹೇಳುತ್ತಾರೆ. **ಯದ್ಯಪಿ ಕರ್ಮ**-ವಿಹಿತಗಳಾದ ನಿತ್ಯನೈಮಿತ್ತಿಕಗಳಾದ ಕರ್ಮ ವೇನೋ, **ಪರಂಪರಯಾ**-ಜ್ಞಾನಯೋಗ ಭಕ್ತಿಯೋಗಗಳ ಮೂಲಕವಾಗಿ, ಅಥವಾ ಜ್ಞಾನಯೋಗಕ್ಕೆ ಶಕ್ತಿಯಿಲ್ಲದ ಪಕ್ಷದಲ್ಲಿ ಭಕ್ತಿಯೋಗದ ಮೂಲಕವಾಗಿ, ಅಂತೂ ಆತ್ಮ

**ಕ್ಲೇಶಕರತ್ವಾಚ್ಚ ಮನಸೋಽವಸಾದಕರ ಮಿತಿ ತದ್ಭೀತ್ಯಾ ಯೋಗ ನಿಷ್ಪತ್ತಯೇ ಜ್ಞಾನಾಭ್ಯಾಸ ಏವ ಯತನೀಯ ಇತಿ, ಯೋ ಮಹಾಯಜ್ಞಾದ್ಯಾಶ್ರಮಕರ್ಮ ಪರಿತ್ಯಜೇತ್, ಸ ರಾಜಸಂ-ರಜೋಮೂಲತ್ಯಾಗಂ ಕೃತ್ವಾ ತದ ಯಥಾವಸ್ಥಿತ ಶಾಸ್ತ್ರಾರ್ಥ ರೂಪಮಿತಿ ಜ್ಞಾನೋತ್ಪತ್ತಿರೂಪಂ ತ್ಯಾಗ**

---

ಯಾಥಾತ್ಮ್ಯಜ್ಞಾನ, ಪರಮಾತ್ಮೋಪಾಸನ ರೂಪ ಜ್ಞಾನಗಳ ಮೂಲಕವಾಗಿಯೇ, **ಮೋಕ್ಷ ಸಾಧನ ಭೂತ**ವಾದುದು ; ಇದನ್ನು ರಾಜಸತ್ಯಾಗ ಮಾಡುವವನು ಅಙ್ಗೀಕರಿಸಿರುವನೆಂದು ಭಾವವು, **ತಥಾಪಿ**-ಹಾಗಾದರೂ, ಎಂದರೆ ಅವುಗಳು ವಿಹಿತಕರ್ಮಗಳಾದರೂ. **ದುಃಖಾತ್ಮಕ ದ್ರವ್ಯಾರ್ಜನಸಾಧ್ಯತ್ವಾತ್**-ಆ ಮಹಾ ಯಜ್ಞಾದಿ ಕರ್ಮಗಳನ್ನು ನಡೆಸಬೇಕಾದರೆ ದ್ರವ್ಯವು ಬೇಕು, ಹೀಗೆ ದುಃಖರೂಪವಾದ ದ್ರವ್ಯಾರ್ಜನೆಯಿಂದ ಸಾಧ್ಯವಾದುದರಿಂದ, **ಬಹ್ವಾಯಾಸರೂಪತಯಾ**-ತುಂಬಾ ಆಯಾಸದಿಂದ ಸಾಧ್ಯವಾದುದರಿಂದ, **ಕಾಯಕ್ಲೇಶ ಕರತ್ವಾಚ್ಚ**-ದೇಹಕ್ಕೆ ತುಂಬಾ ತೊಂದರೆಯನ್ನುಂಟುಮಾಡುವದರಿಂದಲೂ, **ಮನಸಃ ಅವಸಾದ ಕರಂ ಮಿತಿ**-ಮನಸ್ಸಿಗೆ ದೈನ್ಯವನ್ನುಂಟುಮಾಡಿ ಅದರ ಭಾಸ್ವರತ್ವವನ್ನು ಹೋಗಲಾಡಿಸುವ ದೆಂದು ಭಾವಿಸಿ, **ತದ್ಭೀತ್ಯಾ**-ಅಂತಹ ಭೀತಿಯಿಂದ, **ಯೋಗ ನಿಷ್ಪತ್ತಯೇ**-ಉಪಾಸನ ನಿಷ್ಪತ್ತಿಗಾಗಿ, **ಜ್ಞಾನಾಭ್ಯಾಸ ಏವ ಯತನೀಯ ಇತಿ**-ಜೀವಾತ್ಮನ ಯಾಥಾತ್ಮ್ಯಸ್ವರೂಪ ಚಿನ್ತನವನ್ನೇ ಪ್ರಯತ್ನಿಸುವದು ಯೋಗ್ಯವಾದುದೆಂದು, ಎಂದರೆ ಯಾವಾಗ ಮನಸ್ಸಿನ ಭಾಸ್ವರತ್ವವು ಹೋಗಿ, ದೈನ್ಯವುಂಟಾಯಿತೋ, ಆಗ ಆತ್ಮ ಯಾಥಾತ್ಮ್ಯ ಜ್ಞಾನಸಿದ್ಧಿಯೂ ಪರಮಾತ್ಮೋಪಾಸನವೂ ಎರಡೂ ಲಭಿಸುವದಿಲ್ಲವು, ಆದುದರಿಂದ ಉಪಾಸನಕ್ಕೆ ಆವಶ್ಯಕ ವಾದ ಆತ್ಮ ಯಾಥಾತ್ಮ್ಯಸ್ವರೂಪ ಚಿನ್ತನವನ್ನೇ ಮಾಡತಕ್ಕದ್ದೆಂದು ಭಾವಿಸಿದವನಾಗಿ, **ಯಃ**-ಯಾವ ಮೋಕ್ಷಾರ್ಥಿಯು, **ಮಹಾಯಜ್ಞಾದ್ಯಾಶ್ರಮ ಕರ್ಮ**-ಇದು ಮೂಲದ ಕರ್ಮ ಶಬ್ದದ ಉಪಪಾದನೆಯು, ಮಹಾ ಯಜ್ಞವೇ ಮೊದಲಾದ ಆಶ್ರಮ ಕರ್ಮವನ್ನು, ವಿಹಿತ ಗಳಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಎಂಬ ತಾತ್ಪರ್ಯವು, **ಪರಿತ್ಯಜೇತ್**-ಅನುಷ್ಠಿಸಿದೇ ಸಂಪೂರ್ಣವಾಗಿ ಬಿಟ್ಟುಬಿಡುವನೋ, **ಸಃ**-ಅಂತವನು, **ರಾಜಸಂ ರಜೋಮೂಲತ್ಯಾಗಂ**-ರಜೋಗುಣವೇ ಮೂಲಕಾರಣವಾಗಿವುಳ್ಳ ತ್ಯಾಗವನ್ನು, **ಕೃತ್ವಾ**-ಮಾಡಿ, **ತತ್**-ಅದು. **ಅಯಥಾವಸ್ಥಿತ ಶಾಸ್ತ್ರಾರ್ಥ ರೂಪಮಿತಿ**-ಶಾಸ್ತ್ರದ ಯಥಾರ್ಥಾಭಿಪ್ರಾಯಕ್ಕೆ ವಿರುದ್ಧ ವಾದುದಾಗಿ, **ಜ್ಞಾನೋತ್ಪತ್ತಿರೂಪಂ ತ್ಯಾಗ ಫಲಂ**-ಉಪಾಸನ ಮೂಲಕ ಪರಮಾತ್ಮ ಜ್ಞಾನ ಉಂಟಾಗುವ ಸಾತ್ವಿಕತ್ಯಾಗದ ಫಲವನ್ನು, **"ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ"** ಎಂಬಲ್ಲಿ ಹೇಳಿರುವ ಜ್ಞಾನವೇ, ಇಲ್ಲಿರುವ ಜ್ಞಾನಶಬ್ದಾರ್ಥವು. ಅದು ಉಪಾಸನವೂ, ಪರಮಾತ್ಮನನ್ನು ಸಾಕ್ಷಾತ್ಕರಿಸುವ ಜ್ಞಾನವೂ, ಸಹ ಎಂದು ತಿಳಿಯ ತಕ್ಕದ್ದು. **ನ ಲಭೇತ**-ಹೊಂದುವದಿಲ್ಲವು. ಮುಂದಿನ ಶ್ಲೋಕದಲ್ಲಿ ಹೇಳಿರುವ ಸಾತ್ವಿಕ ತ್ಯಾಗ ಫಲವು ಯಾವುದೆಂದರೆ ಅನಾದಿಕಾಲದಿಂದಲೂ ಅನುಸರಿಸಿ ಬಂದು ಉಪಾಸನಕ್ಕೆ ಪ್ರತಿ ಬಂಧಕಗಳಾದ ಪಾಪಗಳು ತೊಲಗಿ ಪಾವನತ್ವ ಪ್ರಾಪ್ತಿ, ಆತ್ಮ ಯಥಾತ್ಮಜ್ಞಾನ, ಉಪಾಸನ ನಿಷ್ಪತ್ತಿಯು ಇವು ಯಾವುವೂ ರಾಜಸತ್ಯಾಗಿಗೆ ಇಲ್ಲವು. ಆದುದರಿಂದ ಕೈಮುತಿಕನ್ಯಾಯ ಸಿದ್ಧವಾಗಿ ತಾಮಸಿಗೆ ಇಲ್ಲೇ ಇಲ್ಲವೆಂಬುದು ಸಿದ್ಧವು. ಈ ರಾಜಸತ್ಯಾಗಿಯ ಭಾವನೆಯು ಹೇಗೆ? ಎಂದರೆ ವಿಹಿತ ನಿತ್ಯನೈಮಿತ್ತಿಕಾದಿಗಳ ಅನುಷ್ಠಾನವು ದುಃಖಕರವಾದುದು, ಕಾಯ ಕ್ಲೇಶಗಳಿಂದುಂಟಾಗತಕ್ಕದ್ದು ; ಮುಖ್ಯವಾಗಿ ದ್ರವ್ಯಾರ್ಜನೆಯಿಲ್ಲದೆ ಯಾವ ಮಹಾಯಜ್ಞಾದಿ ಗಳನ್ನು ನಡೆಸಲು ಸಾಧ್ಯವಿಲ್ಲವು. ಆ ದ್ರವ್ಯಾರ್ಜನೆಯು ಮಹಾ ಕಷ್ಟಸಾಧ್ಯವಾದುದೆಂ ಬುದು ಲೋಕಸಿದ್ಧ ವಿಷಯವು. **"ಅರ್ಥಾನಾ ಮಾರ್ಜನೇ ದುಃಖ ಮಾರ್ಜಿತಾನಾಂಚ ರಕ್ಷಣೇ । ನಾಶೇ ದುಃಖಂ ವ್ಯಯೇ ದುಃಖಂ ಘ್ನಂತಿಚೈವಾರ್ಥಕಾರಣಾತ್"** (ಭಾರ.

**ಫಲಂ ನ ಲಭೇತ ; (1) "ಅಯಥಾವತ್ಪ್ರಜಾನಾತಿ ಬುದ್ಧಿಸ್ಸಾ ಪಾರ್ಥ ತಾಮಸೀ" ಇತಿ ಹಿ ವಕ್ಷ್ಯತೇ, ನ ಹಿ ಕರ್ಮ ದೃಷ್ಟದ್ವಾರೇಣ ಮನಃಪ್ರಸಾದ ಹೇತುಃ ; ಅಪಿ ತು ಭಗವತ್ಪ್ರಸಾದ ದ್ವಾರೇಣ.** ||೮||

---

ವನ. ೨. ೪೯) "ದ್ರವ್ಯವನ್ನು ಸಂಪಾದಿಸುವದರಲ್ಲೂ ದುಃಖವು, ಸಂಪಾದಿಸಿದ ದ್ರವ್ಯವನ್ನು ಕಾಪಾಡುವದರಲ್ಲಿಯೂ ದುಃಖವು, ಅದು ನಾಶವಾದರೆ ದುಃಖವು, ಖರ್ಚಾದರೆ ದುಃಖವು, ಹೀಗೆ ನಾನಾ ವಿಧವಾಗಿ ದುಃಖವೂ ಅಲ್ಲದೆ ಆ ದ್ರವ್ಯಮೂಲಕವಾಗಿ ತಾನೂ ನಾಶಹೊಂದ ಬಹುದು. ಹೀಗೆ "**ಅನರ್ಥಮರ್ಥಾಖ್ಯಂ**" (ಭಾಗ. ೧೧. ೨೩. ೧೯) ಎಂದು ಹೇಳಿ ರುವ ಹಾಗೆ ಅರ್ಥವು ಸರ್ವಾನರ್ಥಗಳಿಗೂ ಹೇತುವು. ಆದುದರಿಂದ **ದುಃಖಮಿತ್ಯೇವ**ವೆಂಬು ದಕ್ಕೆ **ದುಃಖಾತ್ಮಕ ದ್ರವ್ಯಾರ್ಜನ ಸಾಧ್ಯತ್ವಾತ್** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಯಾವಾಗ ನಿತ್ಯನೈಮಿತ್ತಿಕಾದಿಗಳು ದೇಹಾಯಾಸಾದಿಗಳಿಂದುಂಟಾಗತಕ್ಕದ್ದಾಯಿತೋ ಆಗ ಮನಸ್ಸಿಗೂ ಅವಸಾದವೆಂದರೆ ಮನಸ್ಸಿನ ನೆಮ್ಮದಿಯನ್ನು ಹಾಳುಮಾಡಿ ದೈನ್ಯವನ್ನುಂಟು ಮಾಡುವದಾಯಿತು ; ಮೋಕ್ಷಪ್ರಾಪ್ತಿಗೆ ಹೇತುವಾದ ಉಪಾಸನವು ಸಾಧನ ಸಪ್ತಕಗಳಿಂದ ಲಭಿಸತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ; ಆ ಸಪ್ತಕಗಳಲ್ಲಿ ಮನಸ್ಸಿನ **ಅನವಸಾದವೂ** ಹೇತು ವೆಂದು ಹೇಳಲ್ಪಟ್ಟಿರುವದರಿಂದ, ಅವಸಾದವು ಎಂದರೆ ಮನಸ್ಸಿನ ಕ್ಲೇಶವು ಉಪಾಸನಕ್ಕೆ ಪ್ರತಿಬಂಧಕವು, ಆದುದರಿಂದ ನಿತ್ಯನೈಮಿತ್ತಿಕಗಳನ್ನು ತ್ಯಾಗಮಾಡಿ ಆತ್ಮಜ್ಞಾನ ಉಪಾಸನ ಗಳಲ್ಲಿ ಪ್ರವರ್ತಿಸುವದೇ ಸರಿ ಎಂಬುದು, ಈ ರಾಜಸತ್ಯಾಗಿಯ ಅಭಿಪ್ರಾಯವು. ಇಂತಹ ಅಯಥಾರ್ಥವಾದ ಅಭಿಪ್ರಾಯಕ್ಕೆ ಕಾರಣವೇನೆಂದರೆ ಅಂತವರಿಗೆ ಪ್ರಾಪ್ತವಾಗಿರುವ ರಾಜಸ ಬುದ್ಧಿಯು ; ಅದು ಎಂತಾದ್ದೆಂಬುದು ಮುಂದೆಯೇ ೩೧ನೆಯ ಶ್ಲೋಕದಲ್ಲೇ ಹೇಳಲ್ಪಡುತ್ತ ದೆಂದು ಅದರ ಉತ್ತರಾರ್ಧವನ್ನು ಮಾತ್ರ ಉದಾಹರಿಸುತ್ತಾರೆ. "**ಅಯಥಾವತ್ಪ್ರಜಾ ನಾತಿ**-ಪ್ರವೃತ್ತಿ ನಿವೃತ್ತಿ ಧರ್ಮಗಳ ಸ್ವರೂಪವು ಹೇಗೆ ಯಥಾರ್ಥವಾಗಿವೆಯೋ ಹಾಗೆ ತಿಳಿಯದೆ ವಿಪರೀತವಾಗಿ ತಿಳಿಯುವದು ಯಾವದೋ, ಅಂತಹ **ಬುದ್ಧಿಃ**-ಬುದ್ಧಿಯು, **ಹೇ ಪಾರ್ಥ**-ಓ ಅರ್ಜುನನೇ, **ರಾಜಸೀ**-ರಾಜಸೀ ಎಂದು ಹೇಳಿಸಿಕೊಳ್ಳುತ್ತದೆ" **ಇತಿಹಿವಕ್ಷ್ಯತೇ**-ಹೀಗಲ್ಲವೇ ಮುಂದೆ ಹೇಳಲ್ಪಡುತ್ತದೆ. ಹೀಗೆ ಅಯಥಾವತ್ತಾಗಿ ತಿಳಿಯುವ ರಾಜಸತ್ಯಾಗಿಯ ಶಙ್ಕಾನಿವಾರಣಾರ್ಥವಾಗಿ ನಿಗಮನವಾಕ್ಯವನ್ನು ದಯಪಾಲಿಸುತ್ತಾರೆ.—ಕರ್ಮಾನುಷ್ಠಾನ ದಿಂದ ಮನದ ನೆಮ್ಮದಿಯು ತೊಲಗಿ ಅವಸಾದ ಉಂಟಾಗುತ್ತದೆಂಬ ವಾದದ ಅಸಾಮಂಜಸ್ಯ ವನ್ನು ಬೋಧಿಸುತ್ತಾರೆ. **ದೃಷ್ಟದ್ವಾರೇಣ**-ಹೊರಗೆ ಕಾಣುವ ಕಾರಣಗಳ ಮೂಲಕ, ಕರ್ಮ-ಕರ್ಮವು, **ನಹಿಮನಃ ಪ್ರಸಾದಹೇತುಃ**-ಮನಸ್ಸಿನ ನೆಮ್ಮದಿಗೆ ಕಾರಣವಲ್ಲವು, **ಅಪಿತು**-ಮತ್ತೇನೆಂದರೋ, **ಭಗವತ್ಪ್ರಸಾದ ದ್ವಾರೇಣ**-ನಾವು ಮಾಡುವ ಕೈಙ್ಕರ್ಯರೂಪಗಳಾದ ನಿತ್ಯನೈಮಿತ್ತಿಕಾನುಷ್ಠಾನಗಳಿಂದ ಪ್ರೀತನಾದ ಭಗವಂತನ ಪ್ರಸನ್ನತೆಯ ಮೂಲಕ, ಮನಸ್ಸಿನ ನೆಮ್ಮದಿಯು ದೊರೆಯುತ್ತದೆಂಬ ತಾತ್ಪರ್ಯವು. ನಾವು ಮಾಡುವ ಕರ್ಮಗಳು ಭಗವತ್ಪ್ರೀತಿ ಸಂಪಾದಕಗಳಾದರೆ, ಆತನ ಕೃಪೆಯಿಂದ ಮನಸ್ಸಿನ ಅವಸಾದವು ತೊಲಗಿ ಅನವಸಾದವು ದೊರೆಯುತ್ತದೆಂಬ ತಾತ್ಪರ್ಯವು. ಈ ಶ್ಲೋಕದಲ್ಲಿ ಕೆಲವರು ಹೇಳುವದೇನೆಂದರೆ—ಅಂತಹ ಕರ್ಮಗಳ ಅನುಷ್ಠಾನವು ಬಹ್ವಾಯಾಸಕರವಾಗಿ, ದೇಹಶ್ರಮ, ಮನಸ್ಸಿಗೆ ಕ್ಲೇಶ ಉಂಟಾಗು ತ್ತದೆ ಎಂಬ ಭಾವನೆಯಿಂದ ಕರ್ಮಗಳನ್ನು ಬಿಡುವದು ರಾಜಸವೇನೋ ಸರಿಯೇ; ಆದರೆ ಜ್ಞಾನಿಯು ಅನಾವಶ್ಯಕವೆಂದು ಬಿಡುವದು ಯುಕ್ತವೆಂದು ಕೆಲವರು ಅರ್ಥಮಾಡಿರುತ್ತಾರೆ. ಅದು ಹಾಗೆ ಎಲ್ಲಿ ಹೇಳಲ್ಪಟ್ಟಿದೆಯೋ ತಿಳಿಯದು. ಇಂತಹ ಅರ್ಥಮಾಡಲು ಸಾಧ್ಯವೇ ಇಲ್ಲ ದಿದ್ದರೂ, ಈ ಎರಡು ಶ್ಲೋಕಗಳಿಂದ ಹಾಗೆ ಮಾಡಿರುವದು ತುಂಬಾ ಆಶ್ಚರ್ಯವೇ ಸರಿ.

**ಮೂ. ಕಾರ್ಯ ಮಿತ್ಯೇವ ಯತ್ಕರ್ಮ ನಿಯತಂ ಕುರುತೇಽರ್ಜುನ ।**
**ಸಙ್ಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗ ಸ್ಸಾತ್ವಿಕೋ ಮತಃ ॥೯॥**

೧ಲನೆಯ ಅಧ್ಯಾಯವು ಹಿಂದಿನ ಉಪದೇಶಗಳ ಅನುವಾದವಾದುದರಿಂದ, ಹಿಂದೆ ಜ್ಞಾನಯೋಗ ಮಾಡಲೇ ಕರ್ಮಯೋಗ ಮಾಡಲೇ ಎಂಬ ಪ್ರಶ್ನೆಗೆ ಕರ್ಮಯೋಗವನ್ನು ಬಿಡಲು ಸಾಧ್ಯವಿಲ್ಲವು, ಜ್ಞಾನಯೋಗಕ್ಕೂ ಕೂಡ ಅದು ಅಙ್ಗವು ಎಂದು ಹೇಳಿದ್ದರು. (ಗೀ. ೩.೪) ಅದನ್ನೇ ಇಲ್ಲಿಯೂ ಅನುವಾದಮಾಡಿ ಕರ್ಮಯೋಗವು ಕ್ಲೇಶಕರವೆಂದು ಬಿಡಲು ಸಾಧ್ಯವಿಲ್ಲವೆಂದು ಹಿಂದಿನ ಶ್ಲೋಕದಲ್ಲಿ ಹೇಳಿ, ಇಲ್ಲಿ ಹಾಗೆ ಬಿಡುವದು ರಾಜಸತ್ಯಾಗವೆಂದು ಹೊಸ ಅಭಿಪ್ರಾಯವನ್ನು ತಿಳಿಸಿದರು. ಕರ್ಮಯೋಗವಿಲ್ಲದೆ ಜ್ಞಾನಯೋಗವೂ ಲಭಿಸುವದಿಲ್ಲವು; ಭಕ್ತಿಯೋಗವೂ ಇಲ್ಲವು. ಇದೆಲ್ಲಾ ಹಿಂದೆಯೇ ಉಪಪಾದಿತವು; ಇದರ ಜ್ಞಾನವೆಲ್ಲಾ ಇದ್ದರೂ, ದುಃಖ ಮತ್ತು ದೇಹಾಯಾಸವನ್ನು ಳ್ಳದು. ಕರ್ಮ, ಎಂಬುದು ರಾಜಸತ್ಯಾಗಿಯ ಅಭಿಪ್ರಾಯವು. ಆದುದರಿಂದಲೇ "**ಯದ್ಯಪಿ ಪರಂಪರಯಾ ಮೋಕ್ಷಸಾಧನ ಭೂತಂ ಕರ್ಮ**" ಎಂದು ಭಾಷ್ಯವು.

**ಮೂಲಕ್ಕೆ ಅರ್ಥವು.** ತಾಮಸತ್ಯಾಗ ರಾಜಸತ್ಯಾಗಗಳಲ್ಲಿ ದೋಷವೆಂಬ ಬುದ್ಧಿಯಿಂದಲಾಗಲಿ ಕಷ್ಟವೆಂದಾಗಲಿ ಅಭಿಪ್ರಾಯದಿಂದ ನಿಯತಕರ್ಮಗಳ ಪರಿತ್ಯಾಗ ಉಂಟೆಂದು ಹೇಳಿ, ಅನಂತರ ಈ ಸಾತ್ವಿಕತ್ಯಾಗದಲ್ಲಾದರೋ ನಿಯತ ಕರ್ಮಗಳು ಎಂದಿಗೂ ಶಾಸ್ತ್ರೋಪದೇಶಕ್ಕೆ ವಿರುದ್ಧವಾಗಿ ಪರಿತ್ಯಾಗ ಮಾಡತಕ್ಕದ್ದಲ್ಲವು; ವರ್ಣಾಶ್ರಮೋಚಿತ ಕರ್ಮಗಳಾದುದರಿಂದ ಶ್ರದ್ಧೆಯಿಂದಲೂ ಯಥಾವಿಧಿ ಮಾಡತಕ್ಕವುಗಳೆಂದೂ ಹೇಳಿ, ಹಾಗಾದರೆ ತ್ಯಾಗ ಶಬ್ದಾರ್ಥವೇನು ಎಂದರೆ ಸಙ್ಗಫಲಗಳ ತ್ಯಾಗವೆಂದು ಉಪದೇಶಿಸುತ್ತಾರೆ. ಸಙ್ಗಶಬ್ದದಿಂದ ಕರ್ತೃತ್ವ ಮಮತಾ ತ್ಯಾಗವೂ, ಮತ್ತು ಫಲತ್ಯಾಗವೂ ಬೋಧಿಸಲ್ಪಟ್ಟಿರುತ್ತವೆ.

**ಹೇ ಅರ್ಜುನ**-ಓ ಅರ್ಜುನನೇ, **ನಿಯತಂ ಯತ್ಕರ್ಮ**-ಬ್ರಾಹ್ಮಣಾದಿ ವರ್ಣಗಳಿಗೂ ಬ್ರಹ್ಮಚರ್ಯಾದಿ ಆಶ್ರಮಗಳಿಗೂ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿರುವ ಯಾವ ನಿತ್ಯನೈಮಿತ್ತಿಕಾದಿ ಕರ್ಮಗಳೋ, ಅವುಗಳನ್ನು, **ಕಾರ್ಯಮಿತ್ಯೇವ**-ಭಗವದಾಜ್ಞಾರೂಪವಾಗಿ ಶಾಸ್ತ್ರದಲ್ಲಿ ಆವಶ್ಯಕವಾಗಿ ಕರ್ತವ್ಯವೇ ಎಂದು ಭಾವಿಸಲ್ಪಟ್ಟೇ **ಕುರುತೇ**-ಹೇಗೆ ಅನುಷ್ಠಿಸಬೇಕೋ ಹಾಗೆ ಮಾಡಲ್ಪಡುತ್ತದೆಯೋ, ಮುಮುಕ್ಷುವು ಉಪಾಯಕ್ಕೆ ಅಙ್ಗವಾಗಿ ಹೇಗೆ ಅನುಷ್ಠಿಸಬೇಕೋ ಹಾಗೆ; ಅದನ್ನು ಮುಂದೆ ಹೇಳುತ್ತಾರೆ, **ಸಙ್ಗಂ**-ಮಮತಾ ಮತ್ತು ಕರ್ತೃತ್ವರೂಪ ಸಙ್ಗವನ್ನು ಮತ್ತು **ಫಲಂಚೈವ**-ಅದರ ಫಲವನ್ನೂ ಸಹ, **ತ್ಯಕ್ತ್ವಾ**-ಬಿಟ್ಟು; ಇವುಗಳನ್ನೆಲ್ಲಾ ತ್ಯಜಿಸಿದರೆ, ಯಾರಿಗೇಯಾಗಲಿ ಆ ಕರ್ಮದಲ್ಲಿ ಶ್ರದ್ಧೆಯುಂಟಾಗುತ್ತದೆಯೇ? ಎಂದರೆ, ಭಗವತ್ಪ್ರೀತಿ ಸಂಪಾದಕವೆಂದು ಭಾವಿಸಿದರೆ ಶ್ರದ್ಧೆಯು ತಾನೇ ಉಂಟಾಗುತ್ತದೆ, ಆದುದರಿಂದ ಪರಮಪುರುಷಾರಾಧನಾರೂಪವಾದುದರಿಂದ ಸ್ವಯಂಪ್ರಯೋಜನವೆಂದು ಭಾವಿಸಿ, ಯಾವ ವಿಹಿತ ಕರ್ಮವು ಅನುಷ್ಠಿಸಲ್ಪಡುತ್ತದೋ, **ಸತ್ಯಾಗಃ**-ಅಂತಹ ವಿಹಿತಕರ್ಮಗಳನ್ನು ಅನುಷ್ಠಿಸಿಬಿಟ್ಟು, ಕರ್ತೃತ್ವ ಮಮತಾಫಲತ್ಯಾಗವು, **ಸಾತ್ವಿಕೋ ಮತಃ**-ಸಾತ್ವಿಕತ್ಯಾಗವೆಂಬುದು ನನ್ನ ಅಭಿಪ್ರಾಯವೂ ಮತ್ತು ಪರಮ ಭಾಗವತರಾಗಿ ನನ್ನ ಸಿದ್ಧಾನ್ತವನ್ನು ಯಥಾರ್ಥವಾಗಿ ತಿಳಿದ ಮಹನೀಯರ ಅಭಿಪ್ರಾಯವೂ ಎಂಬ ಭಾವವು. ಹಿಂದೆ ೫ನೆಯ ಶ್ಲೋಕದಲ್ಲಿ ಪ್ರತಿಜ್ಞಾವಾಕ್ಯರೂಪದಲ್ಲಿ ಹೇಳಿದುದನ್ನೇ ಸಮರ್ಥನೆ ಮಾಡಿ ಇಲ್ಲಿಯೂ ಉಪದೇಶಿಸಿರುತ್ತಾರೆ. ಆದುದರಿಂದ ಜ್ಞಾನಿಗೆ ನಿಯತಕರ್ಮಗಳು ಬೇಕಾಗಿಲ್ಲವೆಂಬ ಸಿದ್ಧಾನ್ತವು ನಿರಸ್ತವು. ಸ್ವಾಮಿಯು ಪರಮ ಕೃಪೆಯಾವಿಹಿತ ಕರ್ಮಗಳನ್ನು ತನಗೆ ಕೈಙ್ಕರ್ಯವಾಗಿ ಮಾಡಲೆಂದು ಕೊಟ್ಟ ಕರಣ ಕಳೇಬರಗಳಿಗೆ ನೈರರ್ಥಕ್ಯವನ್ನು ಕಲ್ಪಿಸುವದು ಶ್ರೀ ಕೃಷ್ಣಭಗವಾನ್ನರವರಿಗೆ ಇಷ್ಟವಿಲ್ಲವೆಂಬುದು ದ್ಯೋತಿತವು. ಎಷ್ಟು ಜ್ಞಾನಿಯಾಗಿದ್ದರೂ ಮಾಡತಕ್ಕದ್ದೆಂದು ನಾನಾವಿಧ ಕಾರಣಗಳಿಂದ

**ಭಾ.** **ನಿತ್ಯನೈಮಿತ್ತಿಕ ಮಹಾ ಯಜ್ಞಾದಿ ವರ್ಣಾಶ್ರಮ ವಿಹಿತಂ ಕರ್ಮ, ಮದಾರಾಧನ ರೂಪತಯಾ, ಕಾರ್ಯಂ; ಸ್ವಯಂಪ್ರಯೋಜನ ಮಿತಿ ಮತ್ವಾ ಸಙ್ಗಂ-ಕರ್ಮಣಿ ಮಮತಾಂ, ಫಲಂಚ ತ್ಯಕ್ತ್ವಾ, ಯತ್ಕ್ರಿಯತೇ, ಸತ್ಯಾಗಃ ಸಾತ್ವಿ**

---

ಮೂರನೆಯ ಅಧ್ಯಾಯದಲ್ಲಿ ಹೇಳಿದುದನ್ನೇ ಇಲ್ಲಿ ಸ್ಥಿರೀಕರಣಮಾಡಿ ಹೇಳುತ್ತಾರೆಂದು ಭಾವಿಸತಕ್ಕದ್ದು.

ಇಲ್ಲಿ ಈತನಿಗೆ ಜನ್ಮ ಮೂಲಕವಾಗಿಯೂ, ಸಂಸ್ಕಾರ ಮೂಲಕವಾಗಿಯೂ, ಪ್ರಾಪ್ತವಾಗಿ ಶಾಸ್ತ್ರಗಳಲ್ಲಿ ವಿಧಿಸಿರುವ ಕರ್ಮಗಳೇ ನಿಯತ ಕರ್ಮಗಳು. ಅವುಗಳು ಯಾವುವೆಂದರೆ— ಈತನ ಬ್ರಾಹ್ಮಣಾದಿ ವರ್ಣಕ್ಕೂ ಸಂಸ್ಕಾರ ಮೂಲಕ ಪ್ರಾಪ್ತವಾದ ಆಶ್ರಮಕ್ಕೂ ವಿಹಿತವಾದುವೆಂದು ಶಾಸ್ತ್ರದಲ್ಲಿ ವಿಧಿಸಿರುವ ಕರ್ಮಗಳು. ಇವುಗಳನ್ನು ಪರಿತ್ಯಾಗಮಾಡಿದರೆ ಶಾಸ್ತ್ರೋಲ್ಲಂಘನೆಯನ್ನು ಮಾಡಿದ ದೋಷಕ್ಕೆ ಗುರಿಯಾಗುವನಾದುದರಿಂದ, ಅವುಗಳನ್ನು ಆವಶ್ಯಕವಾಗಿ ಮಾಡಿಯೇ ತೀರಬೇಕು. ಆ ಕರ್ಮಗಳೇ ಮುಂದೆ ಉಕ್ತರೀತಿಯಲ್ಲಿ ಅನುಷ್ಠಿತವಾಗಲ್ಪಡದಿದ್ದರೆ ಮೋಕ್ಷಕ್ಕೆ ಹೇತುವಾಗದೆ ಬಂಧಕಗಳಾಗುತ್ತವೆ. ಆದರೆ ಮೋಕ್ಷಾರ್ಥಿಯು ಹೇಗೆ ಅನುಷ್ಠಿಸಬೇಕೆಂದರೆ ಆ ಕರ್ಮದಲ್ಲಿ ಮೂರನ್ನೂ ತ್ಯಾಗಮಾಡಬೇಕು ಎಂದು ಹೇಳಿದರು; **ಸಙ್ಗಂ ತ್ಯಕ್ತ್ವಾ** ಎಂಬುದರಿಂದ ಸಙ್ಗವನ್ನು ಬಿಡತಕ್ಕದ್ದು ಎಂದರೆ ಕರ್ತೃತ್ವತ್ಯಾಗವೂ ಮಮತಾತ್ಯಾಗವೂ ಇರಬೇಕೆಂದು ತಿಳಿಸಿದರು; **ಫಲಂಚ ತ್ಯಕ್ತ್ವಾ**-ಫಲದ ತ್ಯಾಗವೂ ಇರಬೇಕೆಂದು ಹೇಳಿದರು. ಪ್ರಯೋಜನವಿಲ್ಲದೆ ಕರ್ಮವನ್ನು ಮಾಡುವದು ಹೇಗೆ? ಎಂದರೆ ಪರಮಪುರುಷಾರಾಧನರೂಪವಾಗಿ ಆತನ ಅನುಗ್ರಹ ಸಂಪಾದಕರೂಪ ಪ್ರಯೋಜನವು ಇದ್ದೇ ಇರುವದರಿಂದ ಆಕ್ಷೇಪಕ್ಕೆ ಕಾರಣವಿಲ್ಲವು. ||೯||

**ಭಾಷ್ಯಾರ್ಥವು**—ಸಾತ್ವಿಕತ್ಯಾಗವಾಗಬೇಕಾದರೆ, ಶಾಸ್ತ್ರದಲ್ಲಿ ಯಥಾವಸ್ಥಿತವಾಗಿ ಉಪಪಾದಿತಪ್ರಕಾರವಾದ ಅಭಿಪ್ರಾಯವಾಗಿರಬೇಕು. ಅದು ಯಾವುದೆಂದರೆ, ಹಿಂದೆ "**ಯಜ್ಞದಾನತಪಃ ಕರ್ಮ ನತ್ಯಾಜ್ಯಂ ಕಾರ್ಯಮೇವತತ್**" ಎಂದು ಪ್ರತಿಜ್ಞಾ ವಾಕ್ಯದಲ್ಲಿ ವಿಧಿಸಲ್ಪಟ್ಟಿದುದನ್ನೇ ಸಮರ್ಥಿಸಿ ಹೇಳುತ್ತಾರೆ—**ಯತ್ಕರ್ಮನಿಯತಂ** ಎಂಬುದಕ್ಕೆ ವ್ಯಾಖ್ಯಾನ ಮಾಡುತ್ತಾರೆ.—ಹಿಂದೆ **ನಿಯತಂ ಕುರುಕರ್ಮತ್ವಂ** ಎಂದು ಯಾವುದು ಉಪದೇಶಿಸಲ್ಪಟ್ಟಿತೋ, ಅದೇ ನಿಯತ ಕರ್ಮವು, ಅದು ಯಾವುದೆಂದರೆ—**ನಿತ್ಯನೈಮಿತ್ತಿಕ ಮಹಾಯಜ್ಞಾದಿ ವರ್ಣಾಶ್ರಮ ವಿಹಿತಂ ಕರ್ಮ**-ಆಜ್ಞಾ ಕೈಙ್ಕರ್ಯಗಳಾದ ನಿತ್ಯನೈಮಿತ್ತಿಕಗಳಾದ ಮಹಾಯಜ್ಞವೇ ಮೊದಲಾದ (ಸಂಧ್ಯಾವಂದನೆಯ ಮೊದಲುಗೊಂಡು ಗೃಹಸ್ಥನಿಗೆ ಹೇಳಿರುವ ವೈಶ್ವದೇವಾದಿ, ಬ್ರಾಹ್ಮಣಾದಿ ವರ್ಣಕ್ಕೂ, ಬ್ರಹ್ಮಚರ್ಯಾದಿ ಆಶ್ರಮಗಳಿಗೂ, ಶಾಸ್ತ್ರಗಳಲ್ಲಿ ವಿಧಿಸಿರುವ ಕರ್ಮವು, **ಮದಾರಾಧನರೂಪತಯಾ**-ಅವು ನನ್ನ ಆರಾಧನಾ ರೂಪವೆಂಬ ಭಾವದಿಂದ, **ಕಾರ್ಯಂ**-ಅವಶ್ಯಕವಾಗಿ ಮಾಡತಕ್ಕದ್ದು ಎಂದೂ, **ಸ್ವಯಂ ಪ್ರಯೋಜನಂ**-ಯಾವಾಗ ಭಗವದನುಗ್ರಹವನ್ನುಂಟುಮಾಡುವದಾಯಿತೋ, ಆಗ ಬೇರೇ ಯಾವ ಪ್ರಯೋಜನವೂ ಇಲ್ಲದುದರಿಂದ, **ಸ್ವಯಂಪ್ರಯೋಜನಂ**-ಅಂತಹ ಕರ್ಮಗಳನ್ನನುಷ್ಠಿಸುವದೇ ಪ್ರಯೋಜನವು, **ಇತಿಮತ್ವಾ**-ಎಂದು ತಿಳಿದವನಾಗಿ, **ಸಙ್ಗಂ** ಎಂದರೆ **ಕರ್ಮಣಿ ಮಮತಾಂ**-ಕರ್ಮವನ್ನು ನಾನು ಮಾಡಿದೆನೆಂಬ ಮಮತೆಯನ್ನೂ, ಇದರಲ್ಲೇ ಕರ್ತೃತ್ವವೂ ಸೇರಿತು, **ಫಲಂಚ ತ್ಯಕ್ತ್ವಾ**-ಭಗವದನುಗ್ರಹವಲ್ಲದೆ ಇನ್ನು ಯಾವ ಪ್ರಯೋಜನವು ತನಗೆ ಬೇಕಿಲ್ಲವಾದುದರಿಂದ ಫಲವನ್ನೂ ತ್ಯಾಗಮಾಡಿ, **ಯತ್ಕ್ರಿಯತೇ**-ಯಾವ ಇಂತಹ ಕರ್ಮವು ಅನುಷ್ಠಿಸಲ್ಪಡುತ್ತದೋ, **ಸತ್ಯಾಗಃ**-ಅಂತಹ ಕರ್ಮಾನುಷ್ಠಾನದಲ್ಲಿರುವ ತ್ಯಾಗವು, **ಸಾತ್ವಿಕೋ ಮತಃ**-ಸಾತ್ವಿಕವೆಂಬುದು ನನ್ನ ಅಭಿಪ್ರಾಯವು; ಆದುದರಿಂದ ಅದೇ ಸಿದ್ಧಾಂತವು; . ಇಲ್ಲಿ

ಲಗ

**ಕೋ ಮತಃ-ಸಸತ್ತ್ವಮೂಲಃ-ಯಥಾವಸ್ಥಿತ ಶಾಸ್ತ್ರಾರ್ಥ ಜ್ಞಾನಮೂಲ ಇತ್ಯರ್ಥಃ; ಸತ್ತ್ವಂಹಿ ಯಥಾವಸ್ಥಿತ ವಸ್ತುಜ್ಞಾನ ಮುತ್ಪಾದಯತೀತ್ಯುಕ್ತಮ್.--(೧) " ಸತ್ತ್ವಾತ್ಸಞ್ಜಾಯತೇ ಜ್ಞಾನಮ್ " ಇತಿ; ವಕ್ಷ್ಯತೇಚ " ಪ್ರವೃತ್ತಿಂಚ ನಿವೃತ್ತಿಂಚ ಕಾರ್ಯಾ ಕಾರ್ಯೇ ಭಯಾ ಭಯೇ । ಬನ್ಧಂ ಮೋಕ್ಷಂಚ ಯಾವೇತ್ತಿ ಬುದ್ಧಿಸ್ಸಾ ಪಾರ್ಥ ಸಾತ್ತ್ವಕೀ " ಇತಿ** ||೯||

---

**ನಿಯತ** ಶಬ್ದವಿರುವದು, ಹಿಂದೆ " **ನಿಯತಸ್ಯಚ ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ** " ಎಂದು ೭ನೆಯ ಶ್ಲೋಕದಲ್ಲಿ ಹೇಳಿದುದು ಸ್ಮಾರಿತವು. ಆದುದರಿಂದಲೇ ' **ನಿತ್ಯನೈಮಿತ್ತಿಕ ಮಹಾಯಜ್ಞಾದಿ** " ಎಂಬ ಭಾಷ್ಯವು. **ಸಾತ್ತ್ವಿಕ**ವೆಂಬುದರ ಅರ್ಥವನ್ನು ಮುಂದೆ ವ್ಯಕ್ತಪಡಿಸುತ್ತಾರೆ;—**ಸಃ**-ಆ ಸಾತ್ತ್ವಿಕತ್ಯಾಗವು, **ಸತ್ತ್ವಮೂಲಃ**-ಸತ್ತ್ವಗುಣವನ್ನೇ ಕಾರಣವಾಗಿ ಉಳ್ಳದು; ಇದರ ಅರ್ಥವೇನೆಂದರೆ—**ಯಥಾವಸ್ಥಿತ ಶಾಸ್ತ್ರಾರ್ಥ ಜ್ಞಾನ ಮೂಲಃ**-ಶಾಸ್ತ್ರದಲ್ಲಿ ಯಥಾವತ್ತಾಗಿ ಏನು ಹೇಳಲ್ಪಟ್ಟಿದೆಯೋ ಅಂತಹ ಶಾಸ್ತ್ರಜನ್ಯಜ್ಞಾನವನ್ನೇ ಮೂಲವಾಗಿ ಹೇಳಿದುದು. ಹೀಗೆ ವ್ಯಾಖ್ಯಾನಮಾಡಲು ಕಾರಣವನ್ನು ತಿಳಿಸುತ್ತಾರೆ. **ಸತ್ತ್ವಂ ಹಿ**-ಸತ್ತ್ವವೆಂಬುದಾದರೋ, **ಯಥಾವಸ್ಥಿತ ವಸ್ತು ಜ್ಞಾನ ಮುತ್ಪಾದಯತೀತ್ಯುಕ್ತಮ್**-ಹೇಗಿದೆಯೋ ಅಂತಹ ಯಥಾರ್ಥಜ್ಞಾನವನ್ನುಂಟುಮಾಡತಕ್ಕದ್ದೆಂದು ಹಿಂದೆಯೇ ಉಪದೇಶಿಸಲ್ಪಟ್ಟಿದೆಯಷ್ಟೇ. ಎಲ್ಲಿ? ಎಂದರೆ ಪ್ರಮಾಣವನ್ನು ಉದಾಹರಿಸುತ್ತಾರೆ—" **ಸತ್ತ್ವಾತ್ಸಞ್ಜಾಯತೇ ಜ್ಞಾನಮ್** " ಇತಿ-ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಇಷ್ಟೇ ಅಲ್ಲವು ಮುಂದೆಯೂ ಕೂಡ ಈ ಅಭಿಪ್ರಾಯವೇ ಉಪಪಾದಿತವಾಗಿದೆ ಎಂದು ಪ್ರಮಾಣವನ್ನು ಉದಾಹರಿಸುತ್ತಾರೆ—" **ಪ್ರವೃತ್ತಿಂಚ ನಿವೃತ್ತಿಂಚ** " ಎಂದಾರಂಭಿಸಿದ ಶ್ಲೋಕದಲ್ಲಿ ಸಾತ್ತ್ವಿಕ ಬುದ್ಧಿಯ ಲಕ್ಷಣವನ್ನು ಹೇಳುವ ಪ್ರಕರಣದಲ್ಲಿ ಉಪಪಾದಿತವು. ಈ ಶ್ಲೋಕಾಭಿಪ್ರಾಯವನ್ನು ಮುಂದೆ ಪರಾಂಬರಿಸಬಹುದು. ಸಙ್ಗ್ರಹವಾಗಿ ಇದರ ತಾತ್ಪರ್ಯವೇನೆಂದರೆ-ಯಾವುದು ಅಲ್ಪಾಸ್ಥಿರಗಳಾದ ಶ್ರೇಯಸ್ಸನ್ನು ಸಾಧಿಸಿಕೊಡುವ ಧರ್ಮವು, ಯಾವುದು ಮೋಕ್ಷಕ್ಕೆ ಸಾಧನವು, ಇವೆರಡನ್ನೂ ಯಥಾವತ್ತಾಗಿ ಯಾವ ಬುದ್ಧಿಯು ತಿಳಿಯುತ್ತದೋ, ಮತ್ತು ಇದು ಮಾಡತಕ್ಕದ್ದು, ಇದು ಮಾಡತಕ್ಕದ್ದಲ್ಲವು, ಇದು ಶಾಸ್ತ್ರವಿಹಿತವಾದುದು, ಇದು ಶಾಸ್ತ್ರ ವಿರುದ್ಧಮಾರ್ಗವು, ಬಂಧವೆಂಬುದು ಯಾವುದು, ಬಂಧದಿಂದ ಬಿಡುಗಡೆ ಎಂತಾದ್ದು ಇದನ್ನೆಲ್ಲಾ ವಿವೇಕಿಸಿ ತಿಳಿಯುವ ಬುದ್ಧಿಯೇ ಸಾತ್ತ್ವಿಕ ಬದ್ಧಿ ಎಂದು ಹೇಳಿಸಿಕೊಳ್ಳುತ್ತದೆ ಎಂಬುದು.

ಮೂಲದಲ್ಲಿಲ್ಲದ ಎರಡು ಪ್ರಯೋಗಗಳು ಭಾಷ್ಯದಲ್ಲಿ ಹೇಳಲ್ಪಟ್ಟಿವೆ; ಅವು ಯಾವುವೆಂದರೆ (೧) **ಮದಾರಾಧನತಯಾ ಕಾರ್ಯಂ** ಎಂಬುದೂ ಮತ್ತು (೨) **ಸ್ವಯಂ ಪ್ರಯೋಜನ ಮಿತಿಮತ್ವಾ** ಎಂಬುದೂ. ಮೊದಲನೆಯ ಪ್ರಯೋಗಕ್ಕೆ ಕಾರಣವೇನೆಂದರೆ ತನ್ನ ಪ್ರಯೋಜನಕ್ಕೆ ಅಲ್ಲವೆಂದು ಫಲಸಙ್ಗವನ್ನು ತ್ಯಾಗಮಾಡಿದರೆ ಇನ್ನು ಯಾರ ಪ್ರಯೋಜನಕ್ಕಾಗಿ ಎಂಬ ಪ್ರಶ್ನೆ ಯುಂಟಾಗುವದರಿಂದ, ಪರಮಪುರುಷನಿಗಾಗಿ ಆತನ ಆರಾಧನರೂಪವೆಂಬುದು ತೋರಿಬರುತ್ತದೆ. ಹಿಂದೆ ೩. ೩೦ನೆಯ ಶ್ಲೋಕವಾದ **ಮಯಿಸರ್ವಾಣಿಕರ್ಮಾಣಿ ಸನ್ನ್ಯಸ್ಯಾ ಧ್ಯಾತ್ಮಚೇತಸಾ** ಎಂದು ಹೇಳಿದುದೂ ಇಲ್ಲಿ ಸ್ಮಾರಿತವೆಂದು ಭಾವಿಸತಕ್ಕದ್ದು. ಗೀತೆಯ ಸಾರಭೂತವಾದ " **ಮತ್ಕರ್ಮಕೃತ್** " (೧೧-೫೫) ಎಂಬ ಶ್ಲೋಕದಲ್ಲಿ **ಮದ್ಯಾಜೀ** ಎಂಬುದರಿಂದಲೂ ಸ್ಮಾರಿತವು. ಯಾವಾಗ ಭಗವದಾರಾಧನ ರೂಪವಾಗಿ ಆತನಿಗೆ ಮಾಡುವ ಕೈಂಕರ್ಯವು ಎಂದಾಯಿತೋ, ಆಗ ಕರ್ಮಮಾಡುವದೇ **ಸ್ವಯಂಪ್ರಯೋಜನವೇ** ವಿನಾ

---

(೧) ಗೀ. ೧೪, ೧೭. (೨) ೧೮, ೩೦.

**ಮೂ. ನದ್ವೇಷ್ಟ್ಯ ಕುಶಲಂ ಕರ್ಮ ಕುಶಲೇ ನಾನುಷಜ್ಜತೇ |
ತ್ಯಾಗೀ ಸತ್ತ್ವ ಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ||೧೦||**

ತನಗೆ ಇನ್ನು ಯಾವ ವಿಧವಾದ ಪ್ರಯೋಜನಕ್ಕಾಗಿ ಅಲ್ಲವೆಂಬುದು ಸಿದ್ಧವು. ಆಜ್ಞಾ ಕೈಂಕರ್ಯಗಳಾದ ನಿತ್ಯನೈಮಿತ್ತಿಕ ಮಹಾ ಯಜ್ಞಾದಿ ಕರ್ಮಗಳನ್ನು ಭಗವದಾರಾಧನಾ ರೂಪ ದಲ್ಲೇ, ಹೀಗೆ ನಿಯತಕರ್ಮವನ್ನು ಮಾಡಬೇಕೆಂದು ಯಾವಾಗ ಹೇಳಲ್ಪಟ್ಟಿತೋ, ಆಗ ಶಾಸ್ತ್ರಾನುಮತಿಯಿಲ್ಲದ ಕರ್ಮವು ಭಗವದಾರಾಧನಾ ರೂಪವನ್ನು ಹೊಂದುವದಿಲ್ಲವಾದುದ ರಿಂದ ಅಂತಹ ಕರ್ಮಗಳನ್ನು ಮೋಕ್ಷಾರ್ಥಿಯು ಎಂದಿಗೂ ಮಾಡಬಾರದೆಂಬುದು ಸೂಚಿತವು. ಮಹಾ ಪವಿತ್ರವಾದ ಗಂಗಾನದಿಯಲ್ಲಿ ಮಿಂದು ಪವಿತ್ರತೆಯನ್ನು ಹೊಂದಬೇಕೆಂದಿರುವವನು, ಸೂಕರ, ಮಹಿಷೀ, ಗಜಗಳ ಹಾಗೆ ಕೆಸರುಗುಂಡಿಗಳಲ್ಲಿ ಮುಳುಗಲು ಪ್ರಯತ್ನಿಸುವನೋ ? ಎಂದಿಗೂ ಇಲ್ಲವು. ಆದುದರಿಂದ ಇಂತಹ ಪರಮ ಪವಿತ್ರತೆಯನ್ನುಂಟುಮಾಡುವ ನಿತ್ಯನೈಮಿತ್ತಿಕಾದಿ ಕರ್ಮಗಳನ್ನೇ ಕರ್ತೃತ್ವ ಮಮತಾಫಲಗಳ ತ್ಯಾಗದೊಂದಿಗೆ ಭಗವತ್ಪ್ರೀ ತ್ಯರ್ಥವಾಗಿ ಭಗವದಾರಾಧನಾರೂಪದಲ್ಲಿ ಅನುಷ್ಠಿಸತಕ್ಕದ್ದೇ ವಿನಾ, ಎಂದಿಗೂ ಬಿಡತಕ್ಕ ದ್ದಲ್ಲವು. ಆದುದರಿಂದ ಪ್ರಾಜ್ಞರು ಈ ನಿತ್ಯನೈಮಿತ್ತಿಕಾದಿ ಕರ್ಮಾರಂಭದಲ್ಲೂ ಕರ್ಮವು ಮುಗಿದ ನಂತರವೂ ಸಾತ್ವಿಕತ್ಯಾಗ ಭಾವನೆಯನ್ನು ಮನಸಾ ಇದ್ದರೂ ವಾಚಾ ಹೇಳುತ್ತಾರೆ. ಹೇಗೆಂದರೆ—ಗೀ. ಅ. ೩೦ನೆಯ ಶ್ಲೋಕದ ಭಾಷ್ಯವನ್ನು ನೋಡಿ. (೩೪೯ನೆಯ ಪುಟ)

**ಮೂಲಕ್ಕೆ ಅರ್ಥವು**—ಮೇಲೆ ಹೇಳಿದ ಸಾತ್ವಿಕತ್ಯಾಗದೊಂದಿಗೆ ಕರ್ಮಾನುಷ್ಠಾನ ವನ್ನು ಮಾಡುವವನ ಲಕ್ಷಣವೇನು ? ಅಂತಹ ಮೋಕ್ಷಾರ್ಥಿಯನ್ನು ಊಹಿಸುವ ಬಗೆ ಹೇಗೆ ? ಭಗವದಾರಾಧನಾರೂಪದಲ್ಲಿ ನಡೆಸುವ ಕರ್ಮಗಳು ಎರಡು ವಿಧಗಳು-ಪ್ರವೃತ್ತಿ ಧರ್ಮ ನಿವೃತ್ತಿ ಧರ್ಮಗಳು. ಪ್ರವೃತ್ತಿ ಧರ್ಮಗಳು ಫಲಾಕಾಂಕ್ಷೆಯಿಂದ ಮಾಡಲ್ಪಡುವದರಿಂದ ಬಂಧಕಗಳು ; ನಿತ್ಯನೈಮಿತ್ತಿಕ ಧರ್ಮಗಳು ಕರ್ತೃತ್ವ ಮಮತಾಫಲ ತ್ಯಾಗಗಳಿಂದ ನಡೆಸಲ್ಪಡುವದರಿಂದ ನಿವೃತ್ತಿಧರ್ಮಗಳಾಗುವದರಿಂದ ಬಂಧಕಗಳಲ್ಲವು. ಅವು **ಕುಶಲ** ಕರ್ಮಗಳು. ಯಾವುವು ಬಂಧಕಗಳೋ, ಅವುಗಳು ಐಹಿಕ ಸ್ವರ್ಗಾದಿ ಫಲದಾಯಿಕಗಳು ; ಇವುಗಳು **ಅಕುಶಲ** ಕರ್ಮ ಗಳು ಹಾಗೆ ಬಂಧಕಗಳಲ್ಲದ ನಿವೃತ್ತಿ ಧರ್ಮಗಳು ಮೋಕ್ಷದಾಯಕಗಳು. ಇವುಗಳಲ್ಲಿ ಹಿಂದೆ ಹೇಳಿದ ಸಾತ್ವಿಕತ್ಯಾಗಿಯು ಹೇಗೆ ಇರುವನೆಂಬುದನ್ನು ತಿಳಿಸಿ, ಅಂತಹ ಅಕುಶಲ ಕರ್ಮಗಳನ್ನು ಅನುಷ್ಠಿಸಿದರೂ ಅವುಗಳನ್ನು ಫಲವೇ ಮೊದಲಾದವುಗಳ ತ್ಯಾಗಪೂರ್ವಕವಾಗಿ ನಡೆಸುವದ ರಿಂದ, ಅವುಗಳನ್ನು ದ್ವೇಷಿಸುವುದಿಲ್ಲವು, ಮೋಕ್ಷದಾಯಿಕವಾದ ಈ ನಿತ್ಯನೈಮಿತ್ತಿಕಾದಿ ಕರ್ಮಗಳಲ್ಲೂ ಉಪಾಸನೆಯಲ್ಲೂ, ತಾನು ಅನುಷ್ಠಿಸುತ್ತೇನೆಂಬ ಮಮತೆಯೂ ತೋರುವದಿಲ್ಲ ವೆಂದು ಹೇಳಿ, ಅಂತಹ ತ್ಯಾಗಿಯನ್ನು **ಸತ್ವಸಮಾವಿಷ್ಟ**ನೆಂದೂ, **ಮೇಧಾವೀ** ಎಂದೂ, **ಛಿನ್ನಸಂಶಯ**ನೆಂದೂ ಕೊಂಡಾಡುತ್ತಾರೆ.

ಮೇಲೆ ಹೇಳಿದ **ತ್ಯಾಗೀ**-ಸಾತ್ವಿಕತ್ಯಾಗಿಯು, ಎಂದರೆ ಮೋಕ್ಷಾರ್ಥಿಯಾದುದರಿಂದ, ಕರ್ತೃತ್ವ, ಮಮತೆ, ಫಲ ಈ ಮೂರುಗಳನ್ನು ತ್ಯಾಗಮಾಡಿದವನು. **ಅಕುಶಲಂ ಕರ್ಮ**-ಬಾಧಕಗಳಾದ ಪ್ರವೃತ್ತಿ ಧರ್ಮಗಳನ್ನು ಅನುಷ್ಠಿಸಬೇಕೆಂಬ ನಿರ್ಬಂಧವೇನೂ ಇಲ್ಲವು. ಬಾದು ಮೇಳ ಕರ್ಮಯೋಗಕ್ಕಾಗಿಯೋ, ರಾಷ್ಟ್ರ ಕ್ಷೇಮಕ್ಕಾಗಿಯೋ, ಅಥವಾ ಹಿರಿಯರು ಮಾಡು ತ್ತಿದ್ದ ಕಾಮ್ಯಕರ್ಮವಾಗಿಯೋ ಆದರೆ ಅಂತಹ ಬಂಧಕ ಕರ್ಮವನ್ನೂ, **ನದ್ವೇಷ್ಟಿ**-ಅನಿಷ್ಟಫಲದಾ ಯಕವೆಂಬ ಭೀತಿಯಿಂದ ದ್ವೇಷಿಸುವದಿಲ್ಲವು ; ಏಕೆಂದರೆ ಆತನು ಕರ್ತೃತ್ವ ಮಮತಾಫಲ ತ್ಯಾಗ ದಿಂದ ಮಾಡುತ್ತಾನಾದುದರಿಂದ ಆತನಿಗೆ ಬಂಧಕವೆಂಬ ಭೀತಿಯಿಲ್ಲವು ; **ಕುಶಲೇ**-ಮೋಕ್ಷ ದಾಯಕವಾದ ನಿವೃತ್ತಿ ಧರ್ಮದಲ್ಲೂ, **ನಾನುಷಜ್ಜತೇ**-ಸಜ್ಜವನ್ನಿಡುವದಿಲ್ಲವು ; **ಮೋಕ್ಷ** ದಾಯಿಕವೇ ಎಂದು ಅದರಲ್ಲಿ ಕರ್ತೃತ್ವ ಮಮತಾರೂಪ ಸಂಬಂಧವು ಆತನಿಗಿಲ್ಲವು ; ಅಂತಹ

ನೀಗ, ನಾನು ಮೇಲೆ ನಿನಗೆ ಉಪದೇಶಿಸಿದ ಸರಿಯಾದ **ತ್ಯಾಗೀ**-ತ್ಯಾಗಿಯು; ಹೀಗೆ ಅಕುಶಲ ಕರ್ಮಾನುಷ್ಠಾನದಲ್ಲಿ ದ್ವೇಷವೂ, ಕುಶಲಕರ್ಮದಲ್ಲಿ ಸಙ್ಗವೂ ಇಲ್ಲದಿರಲು ಕಾರಣವೇನು? ಎನ್ನು ತ್ತೀಯೋ? ಹೇಳುವೆನು ಕೇಳು. ಆ ತ್ಯಾಗಿಯು, **ಸತ್ತ್ವಸಮಾವಿಷ್ಟಃ**-ಸತ್ತ್ವಗುಣಾಧಿಕ್ಯವುಳ್ಳ ಮನಸ್ಸು, ಬುದ್ಧಿ ಇವುಗಳಿಂದ ಯುಕ್ತನು; ಆತನು ಹೇಗೆ ಅನುಷ್ಠಿಸಿದರೆ ಬಂಧಕವು, ಹೇಗೆ ಅನುಷ್ಠಿಸಿದರೆ ಬಂಧಕವಲ್ಲದೆ ಮೋಕ್ಷಪ್ರದವೆಂಬುದನ್ನು ಅರಿತವನು; ಅದುದರಿಂದಲೇ ಆತನು **ಮೇಧಾವೀ**-ಪ್ರಾಜ್ಞನು; ಶಾಸ್ತ್ರದಲ್ಲಿ ಹೇಳಿರುವ ಯಥಾರ್ಥವಾದ ಜ್ಞಾನವುಳ್ಳವನು, ಶಾಸ್ತ್ರ ಜನ್ಯಜ್ಞಾನಮಾತ್ರವೇ ಅಲ್ಲದೆ ವಿವೇಕಜನ್ಯಜ್ಞಾನವನ್ನು ಹೊಂದಿರುವದರಿಂದ **ಛಿನ್ನಸಂಶಯಃ**-ಇದು ಏನಾದರೂ ಬಂಧಕವೋ ಎಂಬ ಕತ್ತರಿಸಲ್ಪಟ್ಟ ಸಂಶಯವನ್ನುಳ್ಳವನು, ಎಂದರೆ **ಈಷ ದಪಿ** ಸಂದೇಹರಹಿತನು. ಹೀಗೆ ಅಕುಶಲಕರ್ಮಗಳಾದ ಪ್ರವೃತ್ತಿ ಧರ್ಮಗಳಿಗೆ ಸಂಭವ ಉಂಟಾದಗೂ, ಅವುಗಳನ್ನು ದ್ವೇಷಿಸದೆಯೂ, ನಿವೃತ್ತಿ ಧರ್ಮಾನುಷ್ಠಾನಗಳಲ್ಲೂ ಸಙ್ಗವಿಲ್ಲ ದೆಯೂ, ಯಾವ ಮೋಕ್ಷಾರ್ಥಿಯು ಕರ್ತೃತ್ವ ಮಮತಾಫಲತ್ಯಾಗಗಳೊಂದಿಗೆ ಭಗತ್ಪ್ರೀತ್ಯರ್ಥವಾಗಿ ಭಗವದಾರಾಧನಾರೂಪದಲ್ಲಿ ಶಾಸ್ತ್ರಸಿದ್ಧವಾದ ಕರ್ಮಾನುಷ್ಠಾನ ಮಾಡುವನೋ, ಅಂತವನೇ ಸಾತ್ವಿಕತ್ಯಾಗಿಯು, ಆತನೇ ಪ್ರಾಜ್ಞನು, ಆತನೇ ನಿಸ್ಸಂಶಯಾತ್ಮಕನು ಎಂಬ ತಾತ್ಪರ್ಯವು. **ಅಕುಶಲಂ ಕರ್ಮ ನ ದ್ವೇಷ್ಟಿ** ಎಂಬಲ್ಲಿ ಐಚ್ಛಿಕ ಕರ್ಮವಾದುದರಿಂದ ಬೇಕಾದರೆ ಮಾಡಬಹುದು, ಬೇಡದಿದ್ದರೆ ಬಿಡಬಹುದು ಎಂಬ ಭಾವವು **ದ್ವೇಷ್ಟಿ** ಎಂಬ ಕ್ರಿಯೆಯಿಂದ ತೋರಬರುತ್ತದೆ. **ಕುಶಲೇ ನಾನುಷಜ್ಜತೇ** ಎಂದಿರುವದರಿಂದ ಈ ಕುಶಲಕರ್ಮವನ್ನು ಮೋಕ್ಷಾರ್ಥಿಯು ಬಿಡಲು ಮಾರ್ಗವಿಲ್ಲವೆಂಬ ಭಾವವೂ, ಹಾಗೆ ಮಾಡಬೇಕಾಗಿ ಅದರಲ್ಲಿ ಅನ್ವಯವಿದ್ದರೂ ಅದರಲ್ಲಿ ಸಙ್ಗ ಕೂಡದೆಂಬ ಭಾವವೂ, ಎರಡೂ, **ನಾನುಷಜ್ಜತೇ** ಎಂಬುದರಿಂದ ಸೂಚಿತವು. ಅದುದರಿಂದ ಈಗ ವಿಹಿತಕರ್ಮಗಳ ತ್ಯಾಗಶಬ್ದಕ್ಕೆ ಸರಿಯಾದ ಅರ್ಥವೇನಾಯಿತು? ಎಂದರೆ ಅಂತಹ ಕರ್ಮಗಳನ್ನೇ ಮೋಕ್ಷಾರ್ಥಿಯು ಬಿಡತಕ್ಕದ್ದು ಎಂಬ ಅರ್ಥವಲ್ಲವು; ಅವುಗಳ ನ್ನನುಷ್ಠಿಸುವಾಗ ಕರ್ತೃತ್ವ ಮಮತಾಫಲತ್ಯಾಗಗಳೊಂದಿಗೆ ಪರಮಪುರುಷಾರಾಧನಾರೂಪ ದಲ್ಲಿ ಅನುಷ್ಠಿಸೋಣವು; ಅಂತವನು ಶಾಸ್ತ್ರದಲ್ಲಿ ಹೇಳಿರುವ ಪ್ರವೃತ್ತಿಧರ್ಮವೇ ಆಗಲಿ, ನಿವೃತ್ತಿ ಧರ್ಮವೇ ಆಗಲಿ, ಅದನ್ನು ಅನುಷ್ಠಿಸಲು ಭಯಪಡುವದಿಲ್ಲವು; ಏಕೆಂದರೆ ಎಲ್ಲವನ್ನೂ ಭಗವದಾ ರಾಧನರೂಪದಲ್ಲಿ ನಡೆಸಿ ಭಗವತ್ಪ್ರೀತಿಯನ್ನು ಸಂಪಾದಿಸಿಕೊಳ್ಳುವ ಪ್ರಾಜ್ಞತೆಯೂ ಧೈರ್ಯವೂ ಆತನಿಗುಂಟೆಂಬ ತಾತ್ಪರ್ಯವು. ಇದನ್ನೇ ವಿಶದೀಕರಿಸಿ, ಶ್ರೀ ಯತಿವರ್ಯ್ಯರು ಹಿಂದಿನ ಶ್ಲೋಕ ದಲ್ಲಿ ಉದಾಹರಿಸಿರುವ "ಪ್ರವೃತ್ತಿಂಚ ನಿವೃತ್ತಿಂಚ" ಎಂಬ (ಗೀ. ೧೮. ೩೦) ಶ್ಲೋಕದಲ್ಲಿ ವಿಸ್ತರವಾಗಿ ಉಪಪಾದಿಸಿದರು. ಮೋಕ್ಷಾರ್ಥಿಗೆ ಪ್ರವೃತ್ತಿ ನಿವೃತ್ತಿ ಧರ್ಮಗಳೆರಡೂ ಪರಮ ಪುರುಷಾರಾಧನಾರೂಪವೆಂಬುದಕ್ಕೆ "**ಪ್ರವೃತ್ತಿಂಚ ನಿವೃತ್ತಿಂಚ ದ್ವಿವಿಧಂ ಕರ್ಮವೈದಿಕಮ್ । ತಾಭ್ಯಾ ಮುಭಾಭ್ಯಾಂ ಪುರುಷೈ ಸ್ಸರ್ವಮೂರ್ತಿ ಸ್ಸ ಇಜ್ಯತೇ**" ಎಂಬ (ವಿ. ಪು ೬ ೪ ೪೧) ಪ್ರಮಾಣವು ಅನುಸಂಧೇಯವು. ಆದರೆ ಪ್ರವೃತ್ತಿ ಮಾರ್ಗಗಳು ಮೋಕ್ಷಾರ್ಥಿಗೆ ಬೇಕಿಲ್ಲವು ಮತ್ತು ಇಷ್ಟವಿಲ್ಲವು. ಆದರೂ ಅವು ಆತನಿಗೆ ಬಾಧಕವೆಂಬ ಭಯವಿಲ್ಲವಾದುದರಿಂದ **ನದ್ವೇಷ್ಟಿ** ಎಂದು ಹೇಳಲ್ಪಟ್ಟಿತು.

ಅಥವಾ **ಅಕುಶಲಂ** ಎಂದರೆ ಪಾಪಕರ್ಮವನ್ನು. **ನದ್ವೇಷ್ಟಿ**-ದ್ವೇಷಿಸುವದಿಲ್ಲವು ಎಂದರೆ ಪ್ರಮಾದದಿಂದ ನಡೆದುಹೋಯಿತು ಎಂದು ಭಾವಿಸಿ ದುಃಖಪಡುವದಿಲ್ಲವು; **ಕುಶಲೇ ಕರ್ಮಣಿ**-ಐಹಿಕಸ್ವರ್ಗಾದಿ ಪುರುಷಾರ್ಥಗಳನ್ನು ಕೊಡುವ ಕರ್ಮಗಳಲ್ಲೂ ಅವು ಯಾವುದೆಂದರೆ ಭಗವದಾರಾಧನಾದಿ ಮಙ್ಗಳಕರವಾದ ಕರ್ಮಗಳು, ಅವುಗಳಲ್ಲಿ, **ನಾನುಷಜ್ಜತೇ**-ಸಙ್ಗವನ್ನಿಡು ವದಿಲ್ಲವು ಎಂದೂ ಅರ್ಥಮಾಡಬಹುದು. ಇದು ಶ್ರೀ ಯತಿವರರಿಗೆ ಅಭಿಮತವಾದ ಅರ್ಥವು.

**ಭಾಷ್ಯಾರ್ಥವು**—ಈ ಮೇಲೆ ಹೇಳಿದ ತ್ಯಾಗಿಯ ಲಕ್ಷಣವೆಂತಾದೆಂಬುದನ್ನು ತಿಳಿಸುವ ರಾಗಿ ಹಿಂದೆ "**ಉದಾಸೀನವದಾಸೀನಃ**" ಎಂದು ಗೀತಾ ೧೪-೨೩ರಲ್ಲಿ ಹೇಳಿರುವ ಹಾಗೆ

**ಭಾ. ಏವಂ ಸತ್ವಸಮಾವಿಷ್ಟೋ ಮೇಧಾವೀ-ಯಥಾವಸ್ಥಿತ ತತ್ವಜ್ಞಾನ ಸ್ತತ ಏವ ಛಿನ್ನಸಂಶಯಃ, ಕರ್ಮಣಿ ಸಙ್ಗ ಫಲ ಕರ್ತೃತ್ವ ತ್ಯಾಗೀ ನದ್ವೇಷ್ಟ್ಯ ಕುಶಲಂ ಕರ್ಮ, ಕುಶಲೇ ಚ ಕರ್ಮಣಿ ನಾನುಷಜ್ಜತೇ; ಅಕುಶಲಂ ಕರ್ಮಾನಿಷ್ಟಫಲಂ, ಕುಶಲಂಚ ಕರ್ಮೇ ಷ್ಟರೂಪಸ್ವರ್ಗ ಪುತ್ರ ಪಶ್ವನ್ನಾದ್ಯಾದಿ ಫಲಮ್; ಸರ್ವಸ್ಮಿನ್ ಕರ್ಮಣಿ ಮಮತಾ ರಹಿತತ್ವಾತ್, ತ್ಯಕ್ತ ಬ್ರಹ್ಮವ್ಯತಿರಿಕ್ತ ಸರ್ವ ಫಲತ್ವಾತ್ ತ್ಯಕ್ತ ಕರ್ತೃತ್ವಾಚ್ಚ, ತಯೋಃ ಕ್ರಿಯಮಾಣಯೋಃ ಪ್ರೀತಿದ್ವೇಷೌ ನಕರೋತಿ;**

---

ಇರುತ್ತಾನೆಂದು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆಂದು ಶ್ರೀ ನಿಗಮಾಂತ ದೇಶಿಕರವರು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಇದರಿಂದ ಹಿಂದೆ ಹೇಳಿದ ತ್ಯಾಗವು ಸಾತ್ವಿಕವಾದುದೆಂಬುದು ಸಮರ್ಥಿಸಲ್ಪಡುತ್ತದೆ. **ಏವಂ**-ಹಿಂದೆ ಹೇಳಿದ ಪ್ರಕಾರ, **ಸತ್ವಸಮಾವಿಷ್ಟಃ**-ಸತ್ವಗುಣಾಭಿವೃದ್ಧಿಯುಕ್ತನು, ಆದುದರಿಂದಲೇ **ಮೇಧಾವಿ** ಎಂದರೆ **ಯಥಾವಸ್ಥಿತ ತತ್ವಜ್ಞಾನಃ**-ಯಥಾರ್ಥವಾದ ತತ್ವಜ್ಞಾನವುಳ್ಳವನು. ಆಚಾರ್ಯರು ಉಪದೇಶಿಸಿದ ಯಥಾರ್ಥ ಜ್ಞಾನವನ್ನು ಜ್ಞಾಪಕದಲ್ಲಿ ಧರಿಸಿರುವವನು, ಮುಖ್ಯವಾಗಿ ಜೀವಾತ್ಮ ಪರಮಾತ್ಮ ಸ್ವರೂಪಗಳ ಯಥಾರ್ಥಜ್ಞಾನವುಳ್ಳವನು, **ತತ ಏವ**-ಆ ಕಾರಣದಿಂದಲೇ, **ಛಿನ್ನಸಂಶಯಃ**-ಕತ್ತರಿಸಿ ಹೋದ ಸರ್ವ ಸಂಶಯವುಳ್ಳವನು, ಭ್ರಾಂತಿಗಳೊಂದೂ ಇಲ್ಲದವನು, ದೇಹಾತ್ಮಭ್ರಮೆ, ಸ್ವತಂತ್ರಾತ್ಮಭ್ರಮೆ, ಜೀವಾತ್ಮ ಪರಮಾತ್ಮೈಕ್ಯ ಭ್ರಮಾದಿಗಳಿಲ್ಲದವನು, **ಕರ್ಮಣಿ ಸಙ್ಗಫಲ ಕರ್ತೃತ್ವತ್ಯಾಗೀ**-ಇದು ಮೂಲದ ತ್ಯಾಗೀ ಎಂಬ ಶಬ್ದದಲ್ಲಿ ಅಡಗಿರುವ ಅರ್ಥವು, ಕರ್ಮದಲ್ಲಿ ಸಙ್ಗವನ್ನೂ ಎಂದರೆ ಮಮತೆಯನ್ನೂ, ಕರ್ತೃತ್ವವನ್ನೂ ಫಲವನ್ನೂ ಹೀಗೆ ಮೂರನ್ನೂ ತ್ಯಾಗಮಾಡಿದವನು, ತನಗೆ ವಿಹಿತವಾದ ಕರ್ಮವನ್ನು ಪರಮಪುರುಷಾರಾಧನ ರೂಪವೆಂದು ಆತನಲ್ಲಿ ಸಮರ್ಪಿಸಿದ ಮೋಕ್ಷಾರ್ಥಿಯು, **ನದ್ವೇಷ್ಟ್ಯ ಕುಶಲಂ ಕರ್ಮ**-ಅಕುಶಲವಾದ ಕರ್ಮವನ್ನು ದ್ವೇಷಿಸುವುದಿಲ್ಲವು. **ಕುಶಲೇಚಕರ್ಮಣಿ**-ಕುಶಲವಾದ ಕರ್ಮದಲ್ಲಿ, **ನಾನುಷಜ್ಜತೇ**-ಸಂಬಂಧವನ್ನು ಎಂದರೆ ಮಮತೆಯನ್ನು ಇಡುವುದಿಲ್ಲವು. ಇದರಿಂದ ಶ್ಲೋಕಾನ್ವಯಕ್ರಮವನ್ನು ಉಪದೇಶಿಸಿದರು. ಮುಂದೆ ಅಕುಶಲಕರ್ಮವು ಯಾವುದು? ಕುಶಲಕರ್ಮವು ಯಾವುದು? ಎಂದು ವಿಚಾರ ಮಾಡುತ್ತಾರೆ—**ಅಕುಶಲಂ ಕರ್ಮ** ಯಾವುದೆಂದರೆ, **ಅನಿಷ್ಟಫಲಂ**-ಅನಿಷ್ಟ ಫಲವುಳ್ಳದು; **ಕುಶಲಂಚ ಕರ್ಮ**-ಕುಶಲವಾದ ಕರ್ಮವಾದರೋ, **ಇಷ್ಟರೂಪ ಸ್ವರ್ಗಪುತ್ರ ಪಶ್ವನ್ನಾದ್ಯಾದಿ ಫಲಂ**-ಇಷ್ಟವಾಗಿರುವ ಸ್ವರ್ಗ, ಮಗ, ಪಶು, ಅನ್ನ, ಭೋಗ್ಯವಸ್ತು ಮೊದಲಾದವುಗಳನ್ನು ಕೊಡುವ ಫಲವುಳ್ಳದು, ಐಹಿಕವೇನು ಸ್ವರ್ಗಾದಿ ಆಮುಷ್ಮಿಕ ಸುಖಗಳೇನು ಇವುಗಳನ್ನು ಕೊಡುವಂತಾದ್ದೆಂಬ ಭಾವವು; ಇಂತಹ ಎರಡು ವಿಧ ಕರ್ಮಗಳಲ್ಲೂ ಈ ತ್ಯಾಗಿಯು ಹೇಗಿರುವನು ಎಂಬುದು ಮುಂದೆ ಹೇಳಲ್ಪಡುತ್ತದೆ—**ಸರ್ವಸ್ಮಿನ್ ಕರ್ಮಣಿ**-ಸಮಸ್ತ ಕರ್ಮದಲ್ಲೂ **ಮಮತಾರಹಿತತ್ವಾತ್**-ಮಮತೆಯು ಆ ತ್ಯಾಗಿಗೆ ಇಲ್ಲದಿರುವದರಿಂದಲೂ, **ತ್ಯಕ್ತಬ್ರಹ್ಮ ವ್ಯತಿರಿಕ್ತ ಸರ್ವಫಲತ್ವಾತ್**-ಬಿಡಲ್ಪಟ್ಟ ಪರಬ್ರಹ್ಮಪ್ರಾಪ್ತಿಯಲ್ಲದೆ ಮಿಕ್ಕ ಸಮಸ್ತ ಫಲಗಳನ್ನೂ ಹೊಂದಿರುವದರಿಂದಲೂ, **ತ್ಯಕ್ತಕರ್ತೃತ್ವಾಚ್ಚ**-ಕರ್ತೃತ್ವವನ್ನೂ ತ್ಯಾಗಮಾಡಿರುವದರಿಂದ (ಇವೆಲ್ಲಾ ಹಿಂದೆ ೯ನೆಯ ಶ್ಲೋಕದಲ್ಲಿ ಹೇಳಲ್ಪಟ್ಟವು) **ತಯೋಃ**-ಈ ಎರಡು ವಿಧವಾದ ಅಕುಶಲ ಕುಶಲ ಕರ್ಮಗಳು, **ಕ್ರಿಯಮಾಣಯೋಃ**-ಮಾಡಲ್ಪಟ್ಟರೂ ಕೂಡ, **ಪ್ರೀತಿದ್ವೇಷೌ ನಕರೋತಿ**-ಅವುಗಳಲ್ಲಿ ದ್ವೇಷವನ್ನೂ ಪ್ರೀತಿಯನ್ನೂ ಮಾಡುವದಿಲ್ಲವು. ಕರ್ಮವು ಮಾಡಲ್ಪಟ್ಟರೇನೇ ಉದ್ವೇಗ ಸಂತೋಷಗಳಿಗೆ ಕಾರಣವಾಗಿ ದ್ವೇಷಸಙ್ಗ ಬುದ್ಧಿಗಳನ್ನುಂಟುಮಾಡಬೇಕಾದ ಪ್ರಯುಕ್ತ, **ತಯೋಃ ಕ್ರಿಯಮಾಣಯೋಃ** ಎಂಬ ವ್ಯಾಖ್ಯಾನವು.

**ಅನಿಷ್ಟಫಲಂ ಪಾಪಂ ಕರ್ಮಾತ್ರ ಪ್ರಾಮಾದಿಕ ಮಭಿಪ್ರೇತಮ್-(೧) ನಾವಿರತೋ ದುಶ್ಚರಿತಾನ್ನಾಶಾನ್ತೋ ನಾ ಸಮಾಹಿತಃ। ನಾಶಾನ್ತ ಮಾನಸೋ ವಾಪಿ ಪ್ರಜ್ಞಾನೇ ನೈವಮಾಪ್ನುಯಾತ್" ಇತಿ ದುಶ್ಚರಿತಾ ವಿರತೇಃಜ್ಞಾನೋತ್ಪತ್ತಿ ವಿರೋಧಿತ್ವ ಶ್ರವಣಾತ್; ಅತಃ ಕರ್ಮಣಿ ಕರ್ತೃತ್ವ ಸಙ್ಗ ಫಲಾನಾಂ ತ್ಯಾಗ ಶ್ಶಾಸ್ತ್ರೀಯತ್ಯಾಗಃ, ನಕರ್ಮಸ್ವರೂಪತ್ಯಾಗಃ. ||೧೦||**

---

ಇದರ ತಾತ್ಪರ್ಯವನ್ನೇ ವ್ಯಕ್ತಪಡಿಸುತ್ತಾರೆ—**ಅನಿಷ್ಟಫಲಂಪಾಪಂ ಕರ್ಮಾತ್ರಪ್ರಾಮಾದಿಕ ಮಭಿ ಪ್ರೇತಮ್**-ಅಕುಶಲ ಶಬ್ದದಿಂದ ಹೇಳಲ್ಪಟ್ಟ ಅನಿಷ್ಟಫಲವುಳ್ಳದು ಯಾವುದು ಎಂದರೆ ಈ ಸಂದರ್ಭದಲ್ಲಿ ಮೋಕ್ಷಾರ್ಥಿಯಾದುದರಿಂದ ಮನಃಪೂರ್ವಕವಾಗಿ ಆತನು ಪಾಪಕರ್ಮವನ್ನು ಮಾಡಲಾರನಾದುದರಿಂದ, ಪ್ರಾಮಾದಿಕವಾಗಿ ಎಂದರೆ ಬುದ್ಧಿಪೂರ್ವಕವಲ್ಲದೆ ಪ್ರಾಪ್ತವಾಗುವ ಪಾಪಕರ್ಮವೆಂಬುದು ಅಭಿಪ್ರಾಯವು. ಪ್ರಾಮಾದಿಕವಾಗಿ ಪ್ರಾಪ್ತವಾಗುವ ಅನಿಷ್ಟಫಲವುಳ್ಳ ಕರ್ಮವು ತನ್ನ ಅಧೀನವಲ್ಲದೆ ಇತರರು ಯಾರೋ ಮಾಡಿದ ಹಾಗೆ ಭಾವಿಸಿ, ದುಃಖಿಸದೆ ಉದಾಸೀನನಾಗಿರುವನು ಎಂಬ ಭಾವನೆಯಿಂದ **ನದ್ವೇಷ್ಟಿ ಕುಶಲಂ ಕರ್ಮ** ಎಂದು ಹೇಳಲ್ಪಟ್ಟಿತೆಂಬ ಭಾವವು. ಮೋಕ್ಷಾರ್ಥಿಯು ಎಂದಿಗೂ ನರಕಾದಿ ಫಲಗಳನ್ನು ಕೊಡುವ ಕರ್ಮಗಳನ್ನು ದ್ವೇಷಿಸದೇ ಇರಲಾರನಾದುದರಿಂದ ಹಾಗೆ ವ್ಯಾಖ್ಯಾನವು. ಆಗಲಿ, ವಿಶೇಷಾಧಿಕಾರಿಯು ಈತನು ಏಕೆಂದರೆ ಮೋಕ್ಷಾರ್ಥಿಯು; ಆ ಕಾರಣದಿಂದ ಬುದ್ಧಿಪೂರ್ವಕವಾಗಿ ಮಾಡಲ್ಪಟ್ಟ ಪಾಪಗಳು ಲೇಪಿಸದೇ ಏಕೆ ಇರಕೂಡದು? ಹಾಗೆ ಭಾವನೆಯು ಅಪಸಿದ್ಧಾಂತವೆಂದು ಕಠಶ್ರುತಿಯನ್ನು ಉದಾಹರಿಸಿರುತ್ತಾರೆ. (೧) "**ದುಶ್ಚರಿತಾತ್**-ಪರದಾರಗ್ರಹಣ ಪರದ್ರವ್ಯಾಪಹಾರವೇ ಮೊದಲಾದ ಅಕೃತ್ಯಕರಣರೂಪ ದುರ್ವ್ಯಾಪಾರಗಳಿಂದ, **ಅವಿರತಃ**-ನಿವೃತ್ತನಾಗದವನೂ, **ಏನಂ ನಾಪ್ನುಯಾತ್**-ಈ ಪರಮಾತ್ಮನನ್ನು ಉಪಾಸನೆಯ ಮೂಲಕ ಹೊಂದುವದಿಲ್ಲವು; ಆ ಕಾರಣದಿಂದಲೇ **ನ ಅಶಾಂತಃ**-ಇಂದ್ರಿಯ ಔಲ್ಬಣ್ಯವನ್ನು ಶಮನ ಮಾಡದವನೂ ಹೊಂದುವದಿಲ್ಲವು; **ನಾ ಸಮಾಹಿತಃ**-ಸಿಕ್ಕಿದ ಕಡೆಗೆಲ್ಲಾ ಮನಸ್ಸೂ ಬುದ್ಧಿಯೂ ಚಲಿಸುತ್ತಲಿರುವವನೂ ಹೊಂದುವದಿಲ್ಲವು; ಹಾಗೆಯೇ **ನಾಶಾಂತ ಮಾನಸೋ ವಾಪಿ**-ಮನಶ್ಶಾನ್ತಿಯನ್ನು ಹೊಂದದವನೂ ಕೂಡ ಹೊಂದುವದಿಲ್ಲವು. ಹಾಗಾದರೆ ಪರಬ್ರಹ್ಮೋಪಾಸಕನು ಆತನನ್ನು ಹೊಂದುವ ಬಗೆ ಹೇಗೆ? ಎಂದರೆ **ಪ್ರಜ್ಞಾನೇನ**-ಶಾಸ್ತ್ರಜ್ಞಾನ ಮೂಲಕವಾಗಿಯೂ ಆಚಾರೋಪದೇಶಮೂಲಕವಾಗಿಯೂ ಹೊಂದಿದ ಪ್ರಾಜ್ಞತೆ ಮಾತ್ರದಿಂದಲೇ, ಎಂದರೆ ದುರ್ವ್ಯಾಪಾರಗಳಲ್ಲಿ ಪ್ರವರ್ತಿಸದ ಹಾಗೆ ಇಂದ್ರಿಯ ಮನಸ್ಸು ಬುದ್ಧಿಗಳನ್ನು ನಿಗ್ರಹಿಸಿ ವಶದಲ್ಲಿಟ್ಟುಕೊಂಡು, ಪರಮಾತ್ಮವ್ಯತಿರಿಕ್ತ ವಿಷಯಗಳಲ್ಲಿ ವೈರಾಗ್ಯವನ್ನು ಹೊಂದಿ ಇವುಗಳನ್ನು ಅಙ್ಗವಾಗಿಟ್ಟುಕೊಂಡು, ಉಪಾಸನಾನುಷ್ಠಾನಮಾತ್ರದಿಂದಲೇ **ಏನಂ ಪ್ರಾಪ್ನುಯಾತ್**-ಈ ಪರಮಾತ್ಮನನ್ನು ಬ್ರಹ್ಮವಿದ್ಯಾನಿಷ್ಠನು ಹೊಂದುವನು" ಎಂಬುದು ಶ್ರುತ್ಯರ್ಥವು. ಮುಂದೆ ಶ್ಲೋಕಾಭಿಪ್ರಾಯವನ್ನು ಮನಸ್ಸಿನಲ್ಲಿಟ್ಟು ತ್ಯಾಗಶಬ್ದಾರ್ಥವನ್ನು ನಿಗಮನಮಾಡಿ ಹೇಳುತ್ತಾರೆ.—**ಅತಃ** ಆ ಕಾರಣದಿಂದ, **ಕರ್ಮಣಿ ಕರ್ತೃತ್ವಸಙ್ಗ ಫಲಾನಾಂ**-ಕರ್ಮದಲ್ಲಿ ಕರ್ತೃತ್ವ ಮಮತಾಫಲಗಳ, **ತ್ಯಾಗಃ**-ಪರಿತ್ಯಾಗವೇ, **ಶಾಸ್ತ್ರೀಯತ್ಯಾಗಃ**-ಶಾಸ್ತ್ರದಲ್ಲಿ ಹೇಳಿರುವ ತ್ಯಾಗಶಬ್ದಾರ್ಥವು; **ನಕರ್ಮ ಸ್ವರೂಪತ್ಯಾಗಃ**-ಕರ್ಮಗಳನ್ನೇ ಸಂಪೂರ್ಣವಾಗಿ ಅನುಷ್ಠಿಸದೇ ಬಿಟ್ಟುಬಿಡುವದೆಂಬುದು ಶಾಸ್ತ್ರೀಯಾರ್ಥವಲ್ಲವೆಂಬ ಭಾವವು. ಆದುದರಿಂದ ಹಿಂದೆ ಹೇಳಲ್ಪಟ್ಟ ವಾದಗಳೆಲ್ಲಾ ಶಾಸ್ತ್ರಸಮ್ಮತಿ ಇಲ್ಲದೆ ಇರುವುವು ಎಂಬ ಭಾವವು. **ಕುಶಲೇ ನಾನುಷಜ್ಯತೇ** ಎಂಬಲ್ಲಿ ಕುಶಲಕರ್ಮವು ಪುರುಷಾರ್ಥದಾಯಕ

---

(೧) ಕಠ. ೧, ೨, ೨.

**ಭಾ. ಅವ. ತದಾಹ—**

**ಮೂ. ನ ಹಿ ದೇಹ ಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯ ಶೇಷತಃ ।**
**ಯಸ್ತು ಕರ್ಮ ಫಲತ್ಯಾಗೀ ಸತ್ಯಾಗೀತ್ಯಭಿಧೀಯತೇ ॥೧೧॥**

ವಾಗಿ ಕಾಮ್ಯಕರ್ಮವೆಂದರ್ಥಮಾಡಿ **ಸ್ವರ್ಗಪುತ್ರ ಪಶ್ವನ್ನಾದಿಗಳೆಂದು** ಅರ್ಥಮಾಡಿ ಅವುಗಳಲ್ಲಿ ತ್ಯಾಗಿಗೆ ಸಙ್ಗವಿಲ್ಲವೆಂದು ಹೇಳುವದೇನೋ ನ್ಯಾಯವು ಒಪ್ಪತಕ್ಕದ್ದೇ; ಆದರೆ ಅಕುಶಲವು ಪ್ರಾಮಾದಿಕ ಪಾಪಕರ್ಮವೆಂದರ್ಥಮಾಡಿ, ಅವುಗಳನ್ನು **ನದ್ವೇಷ್ಟಿ** ಎಂಬುದು ಹೇಗೆ ಸಮಂಜಸವು? ಅವುಗಳಲ್ಲಿ ಫಲಸಙ್ಗವಿಲ್ಲದಿದ್ದರೂ, ಅದು ವಿರುದ್ಧ ಫಲವನ್ನು ಕೊಡದೇ ಇರಲಾರದು; **ಪಾಪಕೃತ್ಪಾಪಮುಶ್ನುತೇ** ಎಂಬ ಮಹರ್ಷಿಯ ವಾಕ್ಯವೂ ಉಂಟು. ಹಾಗೆ ಪಾಪಫಲವಿಲ್ಲದಿದ್ದರೆ ಪಾಪವನ್ನು ಮಾಡದೇ ಇರುವದಕ್ಕೆ ಯಾವ ತಡೆಯೂ ಇರುವದಿಲ್ಲವು; ನರಕಾದಿ ಫಲಗಳನ್ನು ಕೊಡುವ ಪಾಪಕರ್ಮವನ್ನೂ ದ್ವೇಷಿಸುವದಿಲ್ಲವೆಂದು ಹೇಳುವದು ಹೇಗೆ ಸಮಞ್ಜಸವು? ಇಂತಹ ಆಕ್ಷೇಪಗಳಿಗೆ ಅವಕಾಶವಿಲ್ಲದೇ ಇರುವದಕ್ಕಾಗಿ **ಪ್ರಾಮಾದಿಕ ಮಭಿಪ್ರೇತಮ್** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಕೆಲವರ ಅಭಿಪ್ರಾಯದ ಪ್ರಕಾರ ಪ್ರಪನ್ನನಿಗೆ ಬುದ್ಧಿಪೂರ್ವಾಘದ ಲೇಪವೂ ಇರುವದಿಲ್ಲವು. ಹೀಗಿರುವಾಗ ಪ್ರಾಮಾದಿಕ ಮಾತ್ರವೇ ಎಂದು ಹೇಗೆ ಅರ್ಥಮಾಡುತ್ತೀರಿ ಎಂಬ ಆಕ್ಷೇಪದ ಸಮಾಧಾನಕ್ಕಾಗಿ "**ನಾವಿರತೋದುಶ್ಚರಿತಾತ್**" ಎಂಬ ಶ್ರುತಿವಾಕ್ಯವು ಉಪಾತ್ತವು. ಹೀಗೆ ತ್ಯಾಗಿಗೆ ಕರ್ಮಗಳನ್ನು ಮಾಡಲು ತೊಂದರೆ ಇಲ್ಲದೆಯೂ ಭಯವಿಲ್ಲದೆಯೂ ಇರುವದರಿಂದ, ಆತನು ಸರ್ವ ಕರ್ಮಗಳನ್ನೂ ಕರ್ತೃತ್ವ ಮಮತಾಫಲ ತ್ಯಾಗಗಳೊಂದಿಗೆ ನಡೆಸುವದರಿಂದ ಸಂಪೂರ್ಣವಾಗಿ ಕರ್ಮವನ್ನು ತ್ಯಜಿಸಲು ಕಾರಣವೇ ಇಲ್ಲದುದರಿಂದ ಕರ್ಮತ್ಯಾಗವೆಂದರೆ, ಕರ್ಮಗಳನ್ನು ಶ್ರದ್ಧೆಯಾ ಅನುಷ್ಠಿಸಿಬಿಟ್ಟು, ಮೇಲೆ ಹೇಳಿದ ಮೂರರ ತ್ಯಾಗವನ್ನು ಮಾಡಿ, ಪರಮಪುರುಷಾರಾಧನೆಯೆಂದು ಭಾವಿಸಿ, ಆತನಲ್ಲೇ ಆ ಮಾಡಿದ ಕರ್ಮಗಳನ್ನೆಲ್ಲಾ ಸಮರ್ಪಿಸತಕ್ಕದ್ದೆಂದು ನಿಗಮನಮಾಡಿ ಹೇಳಿದರು. ॥೧೦॥

**ಭಾಷ್ಯಾವತಾರಿಕೆಯ ಅರ್ಥವು**—ಈ ಮುಂದಿನ ಶ್ಲೋಕದಲ್ಲಿ ಹೇಳಿರುವುದನ್ನೇ ಮನಸ್ಸಿನಲ್ಲಿಟ್ಟು ಶ್ರೀ ಯತಿವರ್ಯರು ಹಿಂದಿನ ಶ್ಲೋಕದ ಭಾಷ್ಯಾಂತ್ಯದಲ್ಲಿ ನಿಗಮನಮಾಡಿ ಹೇಳಿದರು. ಆ ಅಭಿಪ್ರಾಯವೇ ಈ ಶ್ಲೋಕದಲ್ಲಿ ಸಿದ್ಧಾನ್ತರೂಪದಲ್ಲಿ ಹೇಳಲ್ಪಡುವದರಿಂದ, **ತದಾಹ** ಎಂಬ ಅವತಾರಿಕೆಯು; **ತದಾಹ**-ಆ ಅಭಿಪ್ರಾಯವನ್ನೇ ಎಂದರೆ ಹಿಂದೆ "**ಯಜ್ಞ ದಾನ ತಪಃ ಕರ್ಮ ನತ್ಯಾಜ್ಯಂ ಕಾರ್ಯಮೇವತತ್**" ಎಂದು ಹೇಳಿದುದನ್ನೇ ನಿಗಮನ ರೂಪದಲ್ಲಿ ಹೇಳುತ್ತಾರೆ. ದೇಹವನ್ನು ಧರಿಸಿದವನಿಗೆ ದೇಹಯಾತ್ರೆ ಮೊದಲಾದ ಪ್ರವೃತ್ತಿ ಧರ್ಮಗಳು ಬಿಟ್ಟಿದ್ದಲ್ಲವಲ್ಲಾ, ಅದೇ ಬಂಧಕವಾಗಿ ಬಿಡತಕ್ಕದ್ದಲ್ಲವೋ? ಎಂದರೆ, ಅಂತಹ ಕರ್ಮಗಳನ್ನೂ ದ್ವೇಷಿಸಿ ಬಿಡತಕ್ಕದ್ದಲ್ಲವು. ಮಾಡಿದರೆ ಕರ್ತೃತ್ವ, ಮಮತೆ, ಫಲಗಳನ್ನು ತ್ಯಾಗಮಾಡುವದರಿಂದ, ಪ್ರವೃತ್ತಿಧರ್ಮದಲ್ಲೂ ಪ್ರತ್ಯವಾಯವಿಲ್ಲವು. ನಿವೃತ್ತಿಧರ್ಮದಲ್ಲಂತೂ ಪ್ರತ್ಯವಾಯವಿಲ್ಲವೆಂಬುದು ಸಿದ್ಧವು. ಹೀಗೆ ಎರಡುವಿಧ ಕರ್ಮಗಳನ್ನೂ ಕರ್ತೃತ್ವ ಮಮತಾ ಫಲಗಳನ್ನು ತ್ಯಾಗಮಾಡಿಯೇ ಮಾಡತಕ್ಕದ್ದೆಂಬುದೇ ತ್ಯಾಗಶಬ್ದಾರ್ಥವೆಂದು ಸಿದ್ಧಾನ್ತಿಸುತ್ತಾರೆ—ಈ ಸಂದರ್ಭದಲ್ಲಿ "**ಕುರ್ವನ್ನೇ ವೇಹ ಕರ್ಮಾಣಿ ಜಿಜೀವಿಷೇತ್ ಶತಗ್ಂ ಸಮಾಃ । ಏವಂ ತ್ವಯಿ ನಾನ್ಯಥೇತೋಽಸ್ತಿ ನಕರ್ಮ ಲಿಪ್ಯತೇ ನರೇ**" ಇಲ್ಲಿ ನರ ಶಬ್ದವು **ನರಮತೀತಿ ನರಃ** ಎಂಬ ವ್ಯುತ್ಪತ್ತಿಯಿಂದ ಐಹಿಕದಲ್ಲಿ ರಮಿಸದೇ ಇರುವ ವಿರಕ್ತಶಿಖಾಮಣಿಯಾದ ಮೋಕ್ಷಾರ್ಥಿಯನ್ನು ಬೋಧಿಸುತ್ತದೆ.

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕದಲ್ಲಿ ಗೂಢವಾಗಿ "**ನದ್ವೇಷ್ಟ್ಯ ಕುಶಲಂ ಕರ್ಮ ಕುಶಲೇ ನಾನುಷಜ್ಯತೇ**" ಎಂಬಲ್ಲಿ ಹೇಳಿದ **ಕುಶಲಮ ಕುಶಲಂ ಕರ್ಮ** ಎಂದು

ಪ್ರಯೋಗಿಸಿರುವದನ್ನು ಎಲ್ಲರೂ ತಿಳಿಯಲಾರರೆಂದು ಭಾವಿಸಿ ಅಕುಶಲಕರ್ಮವು ಯಾವುದೆಂಬು ದನ್ನು ಇಲ್ಲಿ ವ್ಯಕ್ತಪಡಿಸುತ್ತಾರೆ. ಶ್ರೀ ವ್ಯಾಸೋಕ್ತಿಯಲ್ಲಿ ಇದೊಂದು ವೈಲಕ್ಷಣ್ಯವು. ಅಕುಶಲಕರ್ಮವನ್ನು ದ್ವೇಷಿಸುವದಿಲ್ಲವೆಂದರೆ ಅವುಗಳನ್ನು ಮಾಡುವನು ಎಂಬರ್ಥವು. ಇದು **ದೇಹಭೃತಾ,** ಶರೀರವನ್ನು ಹೊಂದಿರುವವನಿಂದ ಅನುಷ್ಠಿಸತಕ್ಕ ವ್ಯಾಪಾರಗಳು. ಗೃಹ ನಿರ್ಮಾಣ, ಧನಾರ್ಜನೆ, ಆಹಾರಸಾಮಗ್ರಿಗಳ ಸಂಪಾದನೆಗಳು. ಇವು ಬಂಧಕವಾದುದರಿಂದ ಅಕುಶಲ ಕರ್ಮಗಳು ಇವುಗಳೇ ಪ್ರವೃತ್ತಿ ಧರ್ಮಗಳು; ಇವು "**ಪ್ರವೃತ್ತಿಃ ಪುನರಾವೃತ್ತಿಃ ನಿವೃತ್ತಿಃ ಪರಮಾಗತಿಃ**" ಎಂದು ಮೋಕ್ಷಧರ್ಮದಲ್ಲಿ ಹೇಳಿರುವ ಹಾಗೆ ಬಂಧಕ ಗಳು. ಇವುಗಳನ್ನು ಬಿಡಲು ಸಾಧ್ಯವಿಲ್ಲವು. ಆದುದರಿಂದ ಕರ್ತೃತ್ವ, ಮಮತಾ, ಫಲ ಇವುಗಳನ್ನು ತ್ಯಾಗಮಾಡಿ ಅನುಷ್ಠಿಸಿದರೆ ಬಂಧಕಗಳಾಗುವದಿಲ್ಲವೆಂದು ಹೇಳುತ್ತಾರೆ — **ದೇಹಭೃತಾ**-ದೇಹವನ್ನು ಧರಿಸಿರುವ ಮನುಷ್ಯನಿಂದ, **ಕರ್ಮಾಣಿ**-ವಿಹಿತ ಕರ್ಮಗಳನ್ನು **ಅಶೇಷತಃ**-ಸಂಪೂರ್ಣವಾಗಿ ಎಂದರೆ ಸ್ವರೂಪತಃ, **ತ್ಯಕ್ತುಂ**-ತ್ಯಜಿಸಲು, **ನಹಿಶಕ್ಯಂ**-ಸಾಧ್ಯವಿಲ್ಲ ವಷ್ಟೇ. ಇಲ್ಲಿ **ಹಿ**-ಶಬ್ದವು ನಿಸ್ಸಂದೇಹಭಾವವನ್ನು ಸೂಚಿಸುತ್ತದೆ. ಯಾವಾಗ ಶರೀರವನ್ನು ಧರಿಸಿದ್ದಾನೋ, ಆಗ ದೇಹಧಾರಣೆಗೆ ಬೇಕಾದ ಕರ್ಮಗಳನ್ನು ಮಾಡದೇ ಇರಲು ಸಾಧ್ಯವೇ ಇಲ್ಲವಷ್ಟೇ ಎಂಬ ಭಾವವು. ಇದು ಎಲ್ಲರಿಗೂ ವ್ಯಕ್ತವಾದ ವಿಷಯವೆಂಬುದನ್ನು **ಹಿ** ಶಬ್ದವು ತಿಳಿಸುತ್ತದೆ. ಇದು ನಿನಗೂ ಕೂಡ ತಿಳಿದ ವಿಷಯವಷ್ಟೇ ಎಂಬ ಭಾವವು. ಸಂಪೂರ್ಣ ತ್ಯಜಿಸಿಬಿಟ್ಟರೆ, ಭಗವದಾಜ್ಞೋಲ್ಲಂಘನವನ್ನು ಉಲ್ಲಂಘಿಸಿ ನಡೆದುದಾಗುವದರಿಂದ ಭಗವನ್ನಿಗ್ರಹಕ್ಕೆ ಪಾತ್ರನಾಗುವನೆಂಬ ಭಾವದಿಂದ **ನಶಕ್ಯಂ**-ಸಾಧ್ಯವಿಲ್ಲವೆಂದು ಹೇಳಲ್ಪಟ್ಟಿತು. ಮತ್ತು ದೇಹ ಯಾತ್ರೆ ಮೊದಲಾದವು ಕೂಡ ಅಂತವನಿಗೆ ನಡೆಯುವದಿಲ್ಲವೆಂದು ಹಿಂದೆ "**ಶರೀರ ಯಾತ್ರಾಪಿ ಚ ತೇ ನಪ್ರಸಿದ್ಧ್ಯೇದ ಕರ್ಮಣಃ**" (ಗೀ. ೩ ೮) ಎಂಬಲ್ಲಿ ಹೇಳಿದುದನ್ನೇ ಅನುವಾದಮಾಡಿ ಹೇಳುತ್ತಾರೆಂದೂ ಹೇಳುವದಕ್ಕಾಗಿ "**ದೇಹಭೃತಾ**" ಎಂಬ ಪ್ರಯೋಗವೆಂದು ಭಾವಿಸ ಬಹುದು. ಶಾಸ್ತ್ರಬೇಡವೆಂದು ಹೇಳಿ ವಿಹಿತಕರ್ಮಗಳನ್ನು ಬಿಡಲು ಆಗುವದಿಲ್ಲವೇ ? ಆಗಿಯೇ ಆಗುತ್ತದೆ. ಈಗ ಲೋಕದಲ್ಲಿ ನಡೆಯುವದೆಲ್ಲಾ ಮುಕ್ಕಾಲುಮೂರುಪೀಸಪಾಲು ವಿಹಿತಕರ್ಮ ಗಳನ್ನು ಬಿಟ್ಟವರೇ. ಆದುದರಿಂದ ಹಾಗಲ್ಲದೆ ಭಗವದನುಗ್ರಹವನ್ನು ಅಪೇಕ್ಷಿಸುವ ಮೋಕ್ಷಾ ರ್ಥಿಯು ಮುಖ್ಯವಾಗಿ ಬಿಡಲು ಸಾಧ್ಯವಿಲ್ಲನೆಂದು ಹೇಳಲ್ಪಟ್ಟಿತು. ಬಿಟ್ಟರೆ ಇಷ್ಟಫಲವೂ ಇಲ್ಲವು, ಅನಿಷ್ಟಫಲವೂ ಪ್ರಾಪ್ತವಾಗುತ್ತದೆ ಎಂಬ ಭಾವದಿಂದಲೇ **ತ್ಯಕ್ತುಂ ನಶಕ್ಯಂ** ಎಂದು ಹೇಳಲ್ಪಟ್ಟಿತು. ಆದ ದರಿಂದ ಅರ್ಜುನನ ಪ್ರಶ್ನೆಗೆ ಸಿದ್ಧಾಂತಾಭಿಪ್ರಾಯವನ್ನು ತಿಳಿಸಿ, **ತ್ಯಾಗೀ** ಎಂಬುವನು ಎಂತಹ ಅಧಿಕಾರಿ ಎಂಬುದನ್ನು ತಿಳಿಸುತ್ತಾರೆ; **ಯಸ್ತು**-ಯಾವ ಅಧಿಕಾರಿ ಯಾದರೋ, **ಕರ್ಮಫಲತ್ಯಾಗೀ**-ಕರ್ಮವನ್ನು ಪರಮಪುರುಷಾರಾಧನ ರೂಪದಲ್ಲಿ ಅನುಷ್ಠಿಸಿ ಫಲವನ್ನು ತ್ಯಾಗಮಾಡುವನೋ, ಇಲ್ಲಿ ಫಲಮಾತ್ರ ಹೇಳಿದುದು ಮಿಕ್ಕ ಎರಡಕ್ಕೂ ಉಪ ಲಕ್ಷಣವಾದುದರಿಂದ, ಕರ್ತೃತ್ವ ಮಮತಾ ಫಲಗಳಾದ ಮೂರನ್ನೂ ತ್ಯಾಗಮಾಡುವನೋ, **ಸಃ**-ಅವನೀಗ, **ತ್ಯಾಗೀತ್ಯಭಿಧೀಯತೇ**-ಸರಿಯಾದ ಶಾಸ್ತ್ರದಲ್ಲಿ ಹೇಳಿರುವ **ತ್ಯಾಗೀ** ಎಂಬ ದಾಗಿ ಹೇಳಲ್ಪಡುತ್ತಾನೆ. ಇಲ್ಲಿ **ಮುಮುಕ್ಷುಣಾ** ಎಂದು ಹೇಳುವದು ಪ್ರಕರಣಕ್ಕೆ ಅನು ಗುಣವಾಗಿಯೂ, ಹಾಗೆಯೇ ಕರ್ಮಶಬ್ದಕ್ಕೆ **ವಿಹಿತ ಕರ್ಮಾಣಿ** ಎಂದು ಹೇಳುವದೂ ಸಹ ಸಮಂಜಸವಾಗಿದ್ದರೂ ಹಾಗೆ ಹೇಳದೆ **ದೇಹಭೃತಾ** ಎಂದೂ ಸುಮ್ಮನೆ **ಕರ್ಮ** ಎಂದೂ ಸಾಮಾನ್ಯವಾಗಿ ಹೇಳಿರುವದು, ಹಿಂದೆ ಹೇಳಿದ '**ನಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್**" ಎಂಬ ಶ್ಲೋಕಾಭಿಪ್ರಾಯವನ್ನು ಸೂಚಿಸಿ ಹಾಗೆ ಕರ್ಮ ಮಾಡುವ ಸ್ವಭಾವವೇ ಇರುವದರಿಂದ ದೇಹಧಾರಣೆಗೆ ಯೋಗ್ಯಗಳಾದ ಅನ್ನಪಾನಾದಿ ಸೇವನೆಗಳು, ಅದಕ್ಕಾಗಿ ಧನಾರ್ಜನೆ ಮೊದಲಾದವುಗಳು, ಇನ್ನೂ ಇತರ ಐಹಿಕೋಪ ಭೋಗಗಳು, ಇವುಗಳಲ್ಲಿ, ಯಾವುದಾದರೂ ಕರ್ಮವನ್ನು ಮಾಡುತ್ತಿರುವದಕ್ಕೆ ಬದಲಾಗಿ, ವಿಹಿತಕರ್ಮಗಳನ್ನು

**ಭಾ. ನಹಿ ದೇಹಭೃತಾ-ಧ್ರಿಯಮಾಣ ಶರೀರೇಣ ಕರ್ಮಾಣ್ಯ ಶೇಷತ ಸ್ತ್ಯಕ್ತುಂ**

---

ಮಾಡತಕ್ಕದ್ದು ಯುಕ್ತವಲ್ಲವೋ ಎಂಬ ಭಾವವು ತೋರಿಬರುವದಕ್ಕಾಗಿಯೂ **ದೇಹಭೃತಾ** ಎಂದೂ, **ಕರ್ಮಾಣಿ** ಎಂದೂ, ಸಾಮಾನ್ಯತಃ ಪ್ರಯೋಗವು. **ಕರ್ಮತ್ಯಾಗಕ್ಕೆ ಈ ಅರ್ಥ** ವಾದರೆ, ಅರ್ಜುನನು ಕರ್ಮಸನ್ನ್ಯಾಸವೆಂಬುದೇನು ಬೇರೆಯೇ ಎಂದು ಪ್ರಥಮಶ್ಲೋಕದಲ್ಲಿ ಪ್ರಶ್ನಿಸಿದುದಕ್ಕೆ ಉತ್ತರವು ಎರಡನೆಯ ಶ್ಲೋಕದಲ್ಲಿ ದೊರೆಯುತ್ತದೆ. ಅಲ್ಲಿ ತ್ಯಾಗಸನ್ನ್ಯಾಸ ಶಬ್ದಗಳು ಪೂರ್ವಾರ್ಧ ಉತ್ತರಾರ್ಧಗಳಲ್ಲಿ ಸಮಾನಾರ್ಥಕಗಳಾಗಿ ಪ್ರಯೋಗಿಸಲ್ಪಟ್ಟಿರುವದರಿಂದ ಎರಡೂ ಒಂದೇ ವಿನಾ ಬೇರೆಯಲ್ಲವು ಎಂಬ ಭಾವವು. ಹಿಂದೆಯೂ ಕೂಡ '**ನಿಯತಸ್ಯತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ । ಮೋಹಾತ್ತಸ್ಯ ಪರಿತ್ಯಾಗ ಸ್ತಾಮಸಃ ಪರಿಕೀರ್ತಿತಃ**'' ಎಂಬ ಶ್ಲೋಕದಲ್ಲೂ ತ್ಯಾಗ ಸನ್ನ್ಯಾಸ ಶಬ್ದಗಳು ಏಕಾರ್ಥದಲ್ಲೇ ಉಪಯೋಗಿಸಲ್ಪಟ್ಟಿವೆ. ಆದರೆ ಬೇರೆಯಾದ ಒಂದೇ ಅರ್ಥವು. ಹೀಗೆ ವಿಹಿತ ಕರ್ಮಗಳ ಅನುಷ್ಠಾನವು ಆವಶ್ಯಕವೆಂದು ಗೀತೆಯಲ್ಲಿ ಪದೇ ಪದೇ ಬೋಧಿಸಲ್ಪಟ್ಟಿದ್ದರೂ ಇದಕ್ಕೆ ವಿರುದ್ಧವಾಗಿ ಜ್ಞಾನಿಗೆ ಆವಶ್ಯಕವಿಲ್ಲವೆಂಬ ವಾದಕ್ಕೆ ಹೇಗೆ ಅವಕಾಶವೋ ತಿಳಿಯದು. ಗೀತೆಯಲ್ಲಿ ಕರ್ಮವನ್ನು **ಅಶೇಷತಃ** ತ್ಯಾಗ ಮಾಡಬಹುದೆಂಬ ಅನುಮತಿ ದೊರೆಯುವ ಶ್ಲೋಕವನ್ನು ದೀಪವನ್ನು ಹಿಡಿದು ಹುಡುಕಿದರೂ ಸಿಕ್ಕುವದಿಲ್ಲವು. '' **ಯಸ್ತ್ವಾತ್ಮರತಿರೇವಸ್ಯಾತ್, ತಸ್ಯಕಾರ್ಯಂ ನವಿದ್ಯತೇ** '' ಎಂಬ ಶ್ಲೋಕವು ಮೋಕ್ಷದೆಶೆಯನ್ನು ಹೇಳಿತೇ ವಿನಾ, ಅನ್ಯಥಾ ಅಲ್ಲವು ; ಆ ಶ್ಲೋಕವೂ ಕೂಡ ಈ ಅಭಿಪ್ರಾಯವನ್ನೇ ಸಮರ್ಥಿಸುತ್ತದೆ. ಶಾಸ್ತ್ರಚೋದಿತ ಕರ್ಮಗಳನ್ನು ಯಾವಾಗ ಸಂಪೂರ್ಣವಾಗಿ ಬಿಡಬಹುದು ಎಂದರೆ ಮುಕ್ತದೆಶೆಯಲ್ಲಿ ಶಾಸ್ತ್ರವಶ್ಯತೆಯು ಇಲ್ಲದುದರಿಂದ, ಆಗೀಗ ಕರ್ಮವನ್ನು ಅಶೇಷತಃ ಬಿಡಬಹುದೇ ವಿನಾ, ಅದು ಉಂಟಾಗುವವರೆಗೂ ಯಾವಜ್ಜೀವವೂ ಮಾಡಿಯೇತೀರಬೇಕೆಂಬುದು ಸ್ಥಾಪಿಸಲ್ಪಟ್ಟಿತು. ಹಾಗಲ್ಲದೆ ಆತ್ಮರತಿಯುಳ್ಳ ಇಲ್ಲಿನ ಜ್ಞಾನಿಗೇನೇ ಕರ್ಮವು ಆವಶ್ಯಕವಿಲ್ಲವೆಂದೇ ಅರ್ಥಮಾಡತಕ್ಕದ್ದೆಂದು ಬಲಾತ್ಕರಿಸಿದರೆ, ಶ್ರೀ ಕೃಷ್ಣಭಗವಾನವರೂ, ಶ್ರೀ ವ್ಯಾಸಮಹರ್ಷಿಯೂ ಪರಸ್ಪರ ವಿರುದ್ಧಾಭಿಪ್ರಾಯವನ್ನು ಹೇಳಿದರೆಂದು ದೋಷವನ್ನು ಆರೋಪಿಸಬೇಕಾಗುತ್ತದೆ. ಅದೂ ಅಲ್ಲದೆ ಶ್ರುತಿ ಸಮ್ಮತವಲ್ಲದ ಅಭಿಪ್ರಾಯವನ್ನೂ ಉಪದೇಶಿಸಿದರೆಂದಾಗುತ್ತದೆ. ಶ್ರೀ ವಿದುರರ ವಾಕ್ಯವಾದ '' **ಯಾವಜ್ಜೀವಂತು ತತ್ಕುರ್ಯಾತ್ ಯೇನ ಪ್ರೇತ್ಯ ಸುಖಂ ವಸೇತ್** '' ಎಂಬುದು ಅನುಸಂಧೇಯವು. **ತತ್** ಎಂಬ ಪದದಿಂದ ಜ್ಞಾನರೂಪವಾದ ಉಪಾಸನವು ಹೇಳಲ್ಪಟ್ಟಿತೆಂದು ಸಮಾಧಾನ ತಂದರೆ, **ಕುರ್ಯಾತ್** ಎಂಬ ಕ್ರಿಯಾಪದದಿಂದ, ಉಪಾಸನೆಯೂ ಒಂದು ಕರ್ಮವೆಂದೂ ಅದಕ್ಕೆ ಅಂಗಗಳಾದ ನಿಯತಕರ್ಮಗಳೂ ಮಾಡತಕ್ಕವುಗಳೆಂದೂ ಹೇಳಿದಂತಾಯಿತು. **ಯಸ್ತು** ಎಂಬಲ್ಲಿ **ತು** ಶಬ್ದವು, ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ಕರ್ಮವನ್ನು, **ಅಶೇಷತಃ-ತ್ಯಾಗ** ಮಾಡಬಹುದೆಂದು ಹೇಳುವ ಅಧಿಕಾರಿಯನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ ಎಂದು **ಭಾವಿಸ** ತಕ್ಕದ್ದು. ||೧೧||

ಭಾಷ್ಯಾರ್ಥವು—ಹಿಂದೆ '' **ನಿಯತಸ್ಯತು ಸನ್ನ್ಯಾಸೋ ಕರ್ಮಣೋ ನೋಪಪದ್ಯತೇ** '' (ಗೀ. ೧೮. ೭) ಎಂಬಲ್ಲಿ ಪ್ರತಿಪಾದಿತವಾದ ಕರ್ಮವನ್ನನುಷ್ಠಿಸಿ ಕರ್ತೃತ್ವಮಮತಾ ಫಲ ತ್ಯಾಗದೊಂದಿಗೆ ಮಾಡುವ ಸಾತ್ತ್ವಿಕತ್ಯಾಗವೇ, ತ್ಯಾಗಶಬ್ದಕ್ಕೆ ಸಮಂಜಸವಾದ **ಶಾಸ್ತ್ರಾ** ರ್ಥವೆಂದು ಹೇಳಿದುದೇ, ಸಿದ್ಧಾನ್ತವೆನಿಸಿ ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ. **ದೇಹಭೃತಾ** ಎಂದರೆ **ಧ್ರಿಯಮಾಣ ಶರೀರೇಣ**-ಧರಿಸಲ್ಪಟ್ಟ ಶರೀರವುಳ್ಳವನಿಂದ, ಇಲ್ಲಿ **ದೇಹಭೃತಾ** ಎಂಬುದರಿಂದ ಸರ್ವ ಪ್ರಾಣಿವರ್ಗವು ಹೇಳಲ್ಪಡಲಿಲ್ಲವು. ಸಾಮಾನ್ಯವಾಗಿ **ತಿರ್ಯಗಾದಿಗಳೂ** ಬೋಧಿತವಾದರೂ ಪ್ರಕರಣವು ಶ್ರೇಯಃಪ್ರಾಪ್ತಿಗಾಗಿ ಯತ್ನಿಸಲು ಯೋಗ್ಯತೆ ಇರುವ ಮನುಷ್ಯರೂ ದೇವತಾದಿಗಳೂ ಅಧಿಕಾರಿಗಳಾಗಿ, ಅದರಲ್ಲೂ ಇಲ್ಲಿ ಮೋಕ್ಷಾರ್ಥಿಯಾಗಿರುವ

**ಶಕ್ಯಂ; ದೇಹಧಾರಣಾರ್ಥಾನಾಮಶನ ಪಾನಾದೀನಾಂ ತದನುಬಂಧಿನಾಂಚ ಕರ್ಮಣಾ ಮವರ್ಜನೀಯತ್ವಾತ್; ತದರ್ಥಂ ಚ ಮಹಾ ಯಜ್ಞಾದ್ಯನುಷ್ಠಾನ ಮವರ್ಜನೀಯಮ್. ಯಸ್ತು ತೇಷು ಮಹಾಯಜ್ಞಾದಿಕರ್ಮಸು ಫಲತ್ಯಾಗೀ ಸ ಏವ (೧) "ತ್ಯಾಗೇ ನೈಕೇ ಅಮೃತತ್ವ ಮಾನಶುಃ" ಇತ್ಯಾದಿ**

---

ಮನುಷ್ಯನ ವಿಷಯವಾಗಿರುವುದರಿಂದ, **ದೇಹಭೃತಾ** ಶಬ್ದದಿಂದ ಅಂತಹ ಅಧಿಕಾರಿಯೇ ಹೇಳಲ್ಪಟ್ಟನೆಂದು ಭಾವಿಸತಕ್ಕದ್ದು. ಹೀಗೆ ಶರೀರವನ್ನು ಧರಿಸಿರುವವನಿಂದ, **ಕರ್ಮಾಣಿ**-ಕರ್ಮಗಳನ್ನು, **ಅಶೇಷತಃ**-ಸ್ವರೂಪತಃ ಸಂಪೂರ್ಣವಾಗಿ, **ತ್ಯಕ್ತುಂ**-ಬಿಡಲು, **ನಹಿಂಶಕ್ಯಂ**-ಸಾಧ್ಯವಿಲ್ಲವಷ್ಟೇ. ದೇಹಸಂಬಂಧವು ಯಾವಾಗ ಉಂಟಾಯಿತೋ ಆಗ ಒಡನೆ ದೇಹಸಂಬಂಧ ವ್ಯಾಪಾರಗಳೂ, ಅದಕ್ಕಾಗಿ ದ್ರವ್ಯಾರ್ಜನಾದಿಗಳೂ, ಇವೆಲ್ಲವೂ ತಪ್ಪಿದ್ದಲ್ಲವೆಂಬ ಭಾವವನ್ನು ಸೂಚಿಸುವದಕ್ಕಾಗಿಯೇ **ದೇಹಭೃತಾ** ಎಂಬ ಪ್ರಯೋಗವು. ಇಲ್ಲಿ ಸಂಸಾರಿಯಾದ ಚೇತನನಿಗೆ ಆವಶ್ಯಕವಾದ ಪ್ರವೃತ್ತಿ ಧರ್ಮಗಳು ಮೋಕ್ಷಕ್ಕೆ ಹೇತುವಲ್ಲವಾದುದರಿಂದ ಹಿಂದಿನ ಶ್ಲೋಕದಲ್ಲಿ **ಅಕುಶಲಂ ಕರ್ಮ**ವೆಂದು ಹೇಳಿ ಅಂತಹ ಬಂಧಕಗಳಾದ ಪ್ರವೃತ್ತಿ ಧರ್ಮಗಳನ್ನು ಅನುಷ್ಠಿಸಿದರೂ ಅವುಗಳಲ್ಲಿ ಲಿಪ್ತನಾಗದೆ ಅವುಗಳನ್ನು ದ್ವೇಷಿಸದೆ ಫಲ ಮಮತೆ ಕರ್ತೃತ್ವಗಳನ್ನು ತ್ಯಾಗ ಮಾಡುವನು. ಆದುದರಿಂದಲೇ **ನದ್ವೇಷ್ಟಿ** ಎಂದು ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಇಲ್ಲಿ "**ಯತ್ಕರೋಷಿಯದಶ್ನಾಸಿ**" ಎಂಬ ಶ್ಲೋಕವು ಅನುಸಂಧೇಯವು. ಅವುಗಳನ್ನು "**ಮದರ್ಪಣಂ**" ವಾಗಿ ಅನುಷ್ಠಿಸುವನು ಎಂಬ ಭಾವವು. ಇದನ್ನೇ ಮುಂದಿನ ವಾಕ್ಯದಿಂದ ಉಪಪಾದಿಸಿ ಹೇಳುತ್ತಾರೆ—ಏಕೆಂದರೆ **ದೇಹ ಧಾರಣಾರ್ಥಾನಾಂ**-ದೇಹಧಾರಣೆಗೆ ಉಪಯುಕ್ತಗಳಾದ, **ಅಶನ ಪಾನಾದೀನಾಂ**-ಅನ್ನಪಾನವೇ ಮೊದಲಾದವುಗಳಾದ ಎಂದರೆ ಅವುಗಳಿಗಾಗಿ ಪಚನ ಮೊದಲಾದ ವ್ಯಾಪಾರಗಳಾದ, ಅವುಗಳ ಸೇವನೆ ರೂಪವಾದ ಮತ್ತು **ತದನುಬಂಧಿನಾಂಚ**-ಅವುಗಳಿಗೆ ಬೇಕಾದ ಸಾಮಗ್ರಿಗಳ ಸಜ್ಜ್ರಹಾದಿಗಳೂ, ಅವುಗಳಿಗೆ ಸಂಬಂಧಿಸಿದ ದ್ರವ್ಯಾರ್ಜನೆ ಮೊದಲಾದ, **ಕರ್ಮಣಾಂ**-ವ್ಯಾಪಾರಗಳ, **ಅವರ್ಜನೀಯತ್ವಾಚ್ಚ**-ಬಿಡೋಣವು ಸಾಧ್ಯವಿಲ್ಲವಾದುದರಿಂದ, **ತ್ಯಕ್ತುಂ ನಶಕ್ಯಂ**-ಬಿಡಲು ಸಾಧ್ಯವೇ ಇಲ್ಲವು ಎಂಬದಾಗಿ ಅನ್ವಯವು. ಆಗಲಿ, ಲೌಕಿಕ ಕರ್ಮಗಳನ್ನೇನೋ ಬಿಡಲು ಸಾಧ್ಯವಿಲ್ಲವೆಂಬ ಭಾಗವನ್ನೇನೋ ಒಪ್ಪುವೆವು. ಆದರೆ ಶಾಸ್ತ್ರೀಯ ಕರ್ಮಗಳ ವಿಷಯಗಳಿಂದೇನು? ಎಂದರೆ, **ತದರ್ಥಂ**-ಅದಕ್ಕಾಗಿಯೇ, **ಮಹಾ ಯಜ್ಞಾದ್ಯನುಷ್ಠಾನ ಮವರ್ಜನೀಯಮ್**-ಶಾಸ್ತ್ರವಿಹಿತಗಳಾದ ಪಂಚಮಹಾಯಜ್ಞಾದಿ ಕರ್ಮಗಳ ಅನುಷ್ಠಾನವು, ವರ್ಣಾಶ್ರಮಾದಿಗಳಿಗೆ ವಿಹಿತಗಳಾದ ಕರ್ಮಗಳನ್ನು ಅನುಷ್ಠಿಸದೇ ಇದ್ದರೆ, ಶರೀರ ಯಾತ್ರೆಯೇ ಸಿದ್ಧಿಸುವುದಿಲ್ಲವೆಂದು "**ಶರೀರಯಾತ್ರಾಪಿ ಚ ತೇ ನಪ್ರಸಿದ್ಧ್ಯೇದ ಕರ್ಮಣಃ**" ಎಂಬಲ್ಲಿ ಉಪದೇಶಿಸಿದ ಅರ್ಥವನ್ನು ಜ್ಞಾಪಿಸಿರುತ್ತಾರೆ. (ಗೀ. ೩. ೮) ಮುಂದೆ ಉತ್ತರಾರ್ಧಕ್ಕೆ ಭಾಷ್ಯವನ್ನು ಬರೆಯುತ್ತಾರೆ—**ಅಶೇಷತಃ** ಎಂದರೆ ಸ್ವರೂಪತಃ ತ್ಯಾಗವೆಂಬುದು ಸರಿಯಲ್ಲವೆಂದೂ ಶಾಸ್ತ್ರಸಮ್ಮತವಲ್ಲವೆಂದೂ, ಹೇಳುವದಕ್ಕಾಗಿ ಹೊರಟು, ಅಂತಹ ಶಙ್ಕೆಗೆ ಈಷದಪಿ ಕಾರಣವೇ ಇಲ್ಲವೆಂದು ತೋರಿಸುವದಕ್ಕಾಗಿ ಶ್ರುತಿ ಪ್ರಮಾಣವನ್ನು ಉದಾಹರಿಸಿ ಶಾಸ್ತ್ರ ಸಮ್ಮತವಾದ ತ್ಯಾಗಿಯು ಯಾರು ಎಂಬುದನ್ನು ನಿರ್ಧರಿಸುತ್ತಾರೆ.—**ಯಸ್ತು**-ಯಾವ ಅಧಿಕಾರಿಯಾದರೋ, **ತೇಷು ಮಹಾಯಜ್ಞಾದಿಕರ್ಮಸು ಫಲತ್ಯಾಗೀ**-ಇದು ಕರ್ಮಫಲತ್ಯಾಗೀ ಎಂಬುದರ ವ್ಯಾಖ್ಯಾನವು, ಇಲ್ಲಿ ಕರ್ಮವೆಂದರೆ ವರ್ಣಾಶ್ರಮೋಚಿತ ವಿಹಿತ ಕರ್ಮಗಳಾದ ಯಜ್ಞಾದಿ ವ್ಯಾಪಾರಗಳಲ್ಲಿ, ಫಲವನ್ನು ತ್ಯಾಗಮಾಡುವನೋ, **ಸ ಏವ**-ಅಂತವನೇ,

---

(೧) ತೈ. ನಾರಾ ೪. ೨೧.

**ಶಾಸ್ತ್ರೇಷು ತ್ಯಾಗೀತ್ಯಭಿಧೀಯತೇ; ಫಲತ್ಯಾಗೀತಿ ಪ್ರದರ್ಶನಾರ್ಥಃ, ಫಲ ಕರ್ತೃತ್ವ ಕರ್ಮ ಸಙ್ಗಾನಾಂ ತ್ಯಾಗೀತಿ, (೨) "ತ್ರಿವಿಧ ಸ್ಸಂಪ್ರಕೀರ್ತಿತಃ" ಇತಿ ಪ್ರಕ್ರಮಾತ್.** ||೧೧||

**ಭಾ. ಅವ. ನನು ಕರ್ಮಾಣ್ಯಗ್ನಿಹೋತ್ರ ದರ್ಶ ಪೂರ್ಣಮಾಸ ಜ್ಯೋತಿಷ್ಟೋ**

---

"**ತ್ಯಾಗೈನೈಕೇ ಅಮೃತತ್ವಮಾನಶುಃ**" ಇತ್ಯಾದಿ **ಶಾಸ್ತ್ರೇಷು**-ಎಂಬಿವೇ ಮೊದಲಾದ ಶ್ರುತಿವಾಕ್ಯಗಳಲ್ಲಿ **ತ್ಯಾಗೀತ್ಯಭಿಧೀಯತೇ**-ಸರಿಯಾದ ಪ್ರಾಜ್ಞನಾದ ತ್ಯಾಗೀ ಎಂಬದಾಗಿ ಹೇಳಲ್ಪಟ್ಟಿರುತ್ತದೆ. **ತ್ಯಾಗೇನೈಕೇ ಅಮೃತತ್ವಮಾನಶುಃ**-ಈ ಪೂರಾ ಋಕ್ ಯಾವು ದೆಂದರೆ "**ನಕರ್ಮಣಾ ನಪ್ರಜಯಾ ಧನೇನ ತ್ಯಾಗೇನೈಕೇಅಮೃತತ್ವ ಮಾನಶುಃ | ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜತೇ ಯದ್ಯತಯೋ ವಿಶಂತಿ**" ಎಂಬುದು. **ಯತ್ ಅಮೃತತ್ವಂ ಯತಯೋ ವಿಶಂತಿ**-ಯಾವ ಪರಮಪದವನ್ನು ಯತಿಗಳು ಪ್ರವೇಶಿಸುವರೋ, **ಯತ್**-ಯಾವ ಪರಮಪದವು, **ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜತೇ**-ಸ್ವರ್ಗಲೋಕಕ್ಕೂ ಮೇಲೆ ಇರುವದಾಗಿ ನಿರತಿಶಯವಾಗಿ ವಿರಾಜಿಸು ತ್ತದೋ, **ತತ್ ಅಮೃತತ್ವಂ**-ಅಂತಹ ಪರಮಪದಪ್ರಾಪ್ತಿಯನ್ನು **ನಕರ್ಮಣಾ ನಪ್ರಜಯಾ ನಧನೇನ ಆನಶುಃ**-ಯಜ್ಞ ದಾನಾದಿ ಕರ್ಮಗಳಿಂದ ಹೊಂದುವದಿಲ್ಲವು. ಪಿತೃ ಋಣ ಮೋಚಕವಾದ ಪ್ರಜೆಯಿಂದಲಾಗಲಿ ಧನದಿಂದಲಾಗಲಿ ಹೊಂದುವದಿಲ್ಲವು; ಇನ್ನು ಯಾವದರಿಂದ ಎಂದರೆ "**ಸನ್ನ್ಯಾಸಸ್ತ್ಯಾಗ ಇತ್ಯುಕ್ತಶ್ಶರಣಾಗತಿರಿತ್ಯಪಿ**" ಎಂದು ಹೇಳಿರುವ ಹಾಗೆ ಭಗವ ಚ್ಛರಣಾರವಿಂದವನ್ನೇ ಉಪಾಯವನ್ನಾಗಿ ನಂಬುವ ಲಕ್ಷಣವುಳ್ಳ ಸರ್ವ ವಿಹಿತ ಕರ್ಮಗಳ ಕರ್ತೃತ್ವ ಮಮತಾಫಲ ತ್ಯಾಗದಿಂದ ಕೂಡಿದ ಉಪಾಸನದಿಂದಲೇ ಕೆಲವರು ಆ ಪರಮಪದ ಪ್ರಾಪ್ತಿಯನ್ನು ಹೊಂದುತ್ತಾರೆ" ಎಂದು ಮುಂದೆ ಹೇಳಲ್ಪಡುತ್ತದೆ—**ಫಲತ್ಯಾಗೀತಿ ಪ್ರದರ್ಶನಾರ್ಥಃ**-ಫಲತ್ಯಾಗೀ ಎಂಬ ಶಬ್ದ ಪ್ರಯೋಗವು ಪ್ರದರ್ಶನಾರ್ಥವುಳ್ಳದು ಎಂದರೆ ಉಪ ಲಕ್ಷಣಾರ್ಥವುಳ್ಳದು; ಹಾಗಾದರೆ ಇನ್ನು ಯಾವುದನ್ನು ಬೋಧಿಸುತ್ತದೆಂದರೆ? ಹಿಂದೆ ಹೇಳಿರುವದನ್ನು ಉದಾಹರಿಸಿ ಜ್ಞಾಪಕವನ್ನು ಕೊಡುತ್ತಾರೆ.—**ಫಲಕರ್ತೃತ್ವ ಕರ್ಮಸಙ್ಗಾನಾಂ**-ಫಲಕರ್ತೃತ್ವ ಮತ್ತು ಕರ್ಮದಲ್ಲಿ ಮಮತೆ ಇವುಗಳ, **ತ್ಯಾಗೀತಿ**-ತ್ಯಾಗಮಾಡಿದವ ನೆಂಬರ್ಥವು. ಹೀಗೆ ಅರ್ಥವನ್ನು ಮಾಡಲು ನಿಮಗೆ ಸಾಧನವೇನು? ಎಂದರೆ "**ತ್ರಿವಿಧ ಸ್ಸಂಪ್ರಕೀರ್ತಿತಃ**"-ಕರ್ಮತ್ಯಾಗವು ಈ ಮೇಲೆ ಹೇಳಿದ ಮೂರನ್ನೂ ಒಳಗೊಂಡಿರುವದೆಂದು ಹಿಂದೆಯೇ ಚನ್ನಾಗಿ ಉಪದೇಶಿಸಲ್ಪಟ್ಟಿರುತ್ತದೆ; **ಇತಿ ಪ್ರಕ್ರಮಾತ್**-ಎಂದು ಆರಂಭದಲ್ಲಿ ಹೇಳಲ್ಪಟ್ಟಿರುವದರಿಂದ, **ಫಲತ್ಯಾಗೀ** ಎಂಬುದು ಮೂರನ್ನೂ ತ್ಯಾಗಮಾಡಿದವನನ್ನೇ **ಬೋಧಿಸುತ್ತದೆಂಬ** ತಾತ್ಪರ್ಯವು. ಎಲ್ಲಿ ಆರಂಭದಲ್ಲಿ ಹೇಳಲ್ಪಟ್ಟಿದೆ? ಎಂದರೆ ಹಿಂದೆ ಆರಂಭದಲ್ಲೇ ೪ನೆಯ ಶ್ಲೋಕದಲ್ಲೇ ಹೇಳಲ್ಪಟ್ಟಿರುತ್ತದೆ. ಮತ್ತು ಇನ್ನೂ ಹಿಂದೆಯೂ (ಗೀ. ೩. ೩೦) "**ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮ ಚೇತಸಾ | ನಿರಾಶೀ ರ್ನಿರ್ಮಮೋ ಭೂತ್ವಾ ಯುದ್ಧ್ಯಸ್ವ ವಿಗತಜ್ವರಃ**" ಎಂಬಲ್ಲೂ, "**ಮಾಸಂಗ ಫಲಹೇತುರ್ಭೂಃ**" ಇತ್ಯಾದ್ಯನೇಕ ಸ್ಥಳಗಳಲ್ಲೂ ಹೇಳಲ್ಪಟ್ಟಿವೆ.

**ಭಾಷ್ಯಾವತಾರಿಕೆಯ ಅರ್ಥವು**—ಹಿಂದಿನ ಶ್ಲೋಕಗಳಲ್ಲಿ ವಿಹಿತಕರ್ಮಗಳನ್ನು ಅನು ಷ್ಠಿಸಿ, ಅವುಗಳನ್ನು ಪರಮಪುರುಷಾರಾಧನೆ ಎಂದು ಭಾವಿಸಿ ಕರ್ತೃತ್ವಮಮತಾಫಲ ತ್ಯಾಗವೇ ಶಾಸ್ತ್ರವಿಹಿತ ತ್ಯಾಗವೆಂದು ಹೇಳಿ, ಅವುಗಳನ್ನು ಅನುಷ್ಠಿಸಲೇಬೇಕೆಂದೂ, ಬಿಟ್ಟರೆ ಪ್ರತ್ಯವಾಯ ವೆಂದೂ, ಸಿದ್ಧಾಂತಿಸಲ್ಪಟ್ಟಿತು. ಹೀಗಾದ ಪಕ್ಷದಲ್ಲಿ ಒಂದು ಪೂರ್ವಪಕ್ಷವು ಉದಯಿಸಬಹುದು. ಹೇಗೆಂದರೆ? ಕರ್ಮವು ಬೀಜದೋಷಾದಿಯಲ್ಲಿ ನಿಯತ ಫಲದಾಯಕವು. ಬೇವಿನ ಬೀಜವನ್ನು

---

(೨) ಗೀ. ೧೮. ೭

**ಮಾದೀನಿ ಚ ಸ್ವರ್ಗಾದಿ ಫಲ ಸಮ್ಬನ್ಧಿತಯಾ ಶಾಸ್ತ್ರೈರ್ವಿಧೀಯನ್ತೇ; ನಿತ್ಯ ನೈಮಿತ್ತಿಕಾನಾಮಪಿ (೧) "ಪ್ರಾಜಾಪತ್ಯಂ ಗೃಹಸ್ಥಾನಾಂ" ಇತ್ಯಾದಿ ಫಲ ಸಮ್ಬನ್ಧಿತಯೈವ ಹಿ ಚೋದನಾ; ಅತಸ್ತತ್ಫಲಸಾಧನ ಸ್ವಭಾವತಯಾಽವ**

---

ಹಾಕಿದರೆ ಮಾವಿನಗಿಡ ಹುಟ್ಟುವದಿಲ್ಲ. ಗೋವಿನ ಹೊಟ್ಟೆಯಲ್ಲಿ ಗೋವೇ ಜನಿಸುತ್ತದೆ; ಈಗ ನಿತ್ಯನೈಮಿತ್ತಿಕ ಮೊದಲಾದ ಕರ್ಮಗಳೆಲ್ಲಾ ಮೋಕ್ಷೇತರ ಫಲದಾಯಕಗಳು; ಅಂತವುಗಳೆಲ್ಲಾ ಬಂಧಕಗಳೇ. ಹೀಗಿರುವಾಗ ಮುಮುಕ್ಷುವಿಗೆ ಹೇಗೆ ಬಂಧಕವಲ್ಲವು. ಲೋಕಮರ್ಯಾದೆಯಲ್ಲೂ ನಮಗೆ ಪ್ರತ್ಯಕ್ಷ ಸಿದ್ಧವಾಗಿ ಇಂತಹ ಕರ್ಮಕ್ಕೆ ಇಂತಹ ನಿಯತವಾದ ಫಲವೆಂದಿರುತ್ತದೆ. ವೈದಿಕ ಕರ್ಮದಲ್ಲೂ ಹಾಗೆಯೇ ಇರಬೇಕಷ್ಟೆ?—ಈ ಪೂರ್ವ ಪಕ್ಷಕ್ಕೆ ಸಮಾಧಾನವು ಹೇಳಲ್ಪಡುತ್ತದೆ ಎಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. **ಯದ್ಯಪಿ** ಅಂತಹ ಕರ್ಮಗಳ ಫಲಗಳು ಬಂಧಕಗಳೇ. ಯಾವಾಗ ಭಗವತ್ಪ್ರೀತಿಗಾಗಿ ಆತನ ಆರಾಧನಾರೂಪದಲ್ಲಿ ಫಲಕರ್ತೃತ್ವಾದಿಗಳನ್ನು ತ್ಯಾಗಮಾಡಿ ಸಮರ್ಪಿಸಲ್ಪಟ್ಟವೋ, ಆಗ ಭಗವತ್ಸಙ್ಕಲ್ಪಾನುಸಾರ ಬಂಧಕಗಳಾಗುವದಿಲ್ಲವೆಂದು ಹೇಳುತ್ತಾರೆಂದು ಅವತಾರಿಕೆಯು; ಹೇಗೆಂದರೆ ಬೀಜವು ಅದಕ್ಕೆ ಯೋಗ್ಯವಾದ ಪ್ರದೇಶ, ನೀರು, ಗೊಬ್ಬರ ಮೊದಲಾದವುಗಳ ಸಹಾಯದಿಂದ ಅದರ ನೈಜ ಫಲವನ್ನು ಕೊಡುತ್ತದೆ. ಆ ಬೀಜವೇ ಕಲ್ಲಿನ ಪ್ರದೇಶದಲ್ಲಿ ಯಾಗಲಿ, ಹುರಿಯಲ್ಪಟ್ಟರಾಗಲಿ ಹೇಗೆ ಅದು ತನ್ನ ನೈಜ ಫಲವನ್ನು ಕೊಡಲಾರದೋ, ಹಾಗೆಯೇ ಈ ಕರ್ಮಗಳೂ ಸಹ ತ್ಯಾಗಸಂಸ್ಕಾರದಿಂದ ಪ್ರಾಪ್ತವಾದ ಭಗವದನುಗ್ರಹದಿಂದ ನೈಜಫಲಗಳನ್ನು ಕೊಡಲಾರವು. ಹಾಗಾದರೆ ಅವುಗಳ ನೈಜಫಲಗಳು ಯಾರಿಗೆ ಎಂದರೆ ಅತ್ಯಾಗಿಗೆ ಎಂದು ಹೇಳುತ್ತಾರೆ ಎಂಬ ಭಾವದಿಂದ ಅವತಾರಿಕೆಯನ್ನು ದಯಪಾಲಿಸುತ್ತಾರೆ.

**ನನು**-ಆಗಲಿ, ಇದು **ಪೂರ್ವಪಕ್ಷ**ವಾದವನ್ನು ಸೂಚಿಸುವ ಶಬ್ದವು, **ಕರ್ಮಾಣಿ**-ವರ್ಣಾಶ್ರಮೋಚಿತ ನಿತ್ಯನೈಮಿತ್ತಿಕ ಕರ್ಮಗಳೂ ಮತ್ತು **ಅಗ್ನಿಹೋತ್ರ ದರ್ಶ ಪೂರ್ಣಮಾಸ ಜ್ಯೋತಿಷ್ಟೋಮ**ವೇ ಮೊದಲಾದ ಕರ್ಮಗಳೂ ಸಹ, **ಸ್ವರ್ಗಾದಿಫಲ ಸಮ್ಬನ್ಧಿತಯಾ**-ಸ್ವರ್ಗಸುಖ, ಆದಿಶಬ್ದದಿಂದ ಐಹಿಕಸುಖಗಳೇ ಮೊದಲಾದ ಫಲಗಳ ಸಂಬಂಧವಿರುವ ಹಾಗೆ, **ಶಾಸ್ತ್ರೈಃ ವಿಧೀಯನ್ತೇ**-ಶಾಸ್ತ್ರಗಳಿಂದ ವಿಧಿಸಲ್ಪಟ್ಟಿವೆ. ಹಾಗಾದರೆ ನಿತ್ಯನೈಮಿತ್ತಿಕಗಳಿಗೂ ಇಂತಹ ಫಲವೇ ಎಂಬ ಶಙ್ಕಾ ನಿವೃತ್ತಿಗಾಗಿ ಅವುಗಳ ವಿಷಯದಲ್ಲಿ ಪ್ರತ್ಯೇಕವಾಗಿ ಬೋಧಿಸುತ್ತಾರೆ—**ನಿತ್ಯನೈಮಿತ್ತಿಕಾನಾಮಪಿ**-ಅವುಗಳಿಗೂ ಕೂಡ, (೧) **"ಪ್ರಾಜಾಪತ್ಯಂ ಗೃಹಸ್ಥಾನಾಂ" ಇತ್ಯಾದಿ ಫಲಸಮ್ಬನ್ಧಿ ತಯೈವಹಿ**-"**ಪ್ರಾಜಾಪತ್ಯಂ**" ಎಂಬವೇ ಮೊದಲಾದ ಪ್ರಮಾಣಗಳಲ್ಲಿ ಹೇಳಿರುವ ಫಲಗಳ ಸಂಬಂಧವಿರುವಹಾಗೆಯಲ್ಲವೇ, **ಚೋದನಾ**-ಶಾಸ್ತ್ರದಲ್ಲಿ ವಿಧಿಸಿರುವದು. ಈ ಪೂರಾ ಶ್ಲೋಕವು ಯಾವುದೆಂದರೆ **ಸಪ್ತರ್ಷೀಣಾಂಚಯತ್ ಸ್ಥಾನಂ ಸ್ಮೃತಂ ತದ್ವೈವನೌಕಸಾಂ । ಪ್ರಾಜಾಪತ್ಯಂ ಗೃಹಸ್ಥಾನಾಂ ನ್ಯಾಸಿನಾಂ ಬ್ರಹ್ಮಸಂಜ್ಞಿತಮ್** ಎಂಬುದು; ಯಾರು ಯಾರಿಗೆ ದೇಹಾವಸಾನಾನಂತರ ಯಾವ ಯಾವ ಸ್ಥಾನ ಪ್ರಾಪ್ತಿ ಎಂದು ಹೇಳುವ ಸಂದರ್ಭದಲ್ಲಿ ಶ್ರೀ ಪರಾಶರರು "**ಪ್ರಾಜಾಪತ್ಯಂ ಗೃಹಸ್ಥಾನಾಂ ಸ್ಮೃತಂಸ್ಥಾನಂಕ್ರಿಯಾವತಾಂ**" ಎಂದೂ ಹೇಳಿರುತ್ತಾರೆ. ಇದರ ವ್ಯಾಖ್ಯಾನದಲ್ಲಿ ವಿಷ್ಣುಚಿತ್ತೀಯರು **ಪ್ರಾಜಾಪತ್ಯಂ** ಎಂದರೆ "**ಭೃಗಾದಿಲೋಕಃ**" ಎಂದೂ ಶ್ರೀಧರೀಯರು **ಪಿತೃಲೋಕ**ವೆಂದೂ ಅರ್ಥಮಾಡಿರುತ್ತಾರೆ. ಯಾವುದಾದರೇನು? ಅಂತೂ ಮೋಕ್ಷೇತರ ಲೋಕವೇ ಅತ್ಯಾಗಿಗೆ ಎಂಬುದು ಸಿದ್ಧವು. **ಕ್ರಿಯಾವತಾಂ ಬ್ರಾಹ್ಮಣಾನಾಂ**-ಅಥವಾ **ಗೃಹಸ್ಥಾನಾಂ**-ವರ್ಣಾಶ್ರಮಾನುಗುಣ ನಿತ್ಯನೈಮಿತ್ತಿಕಗಳನ್ನೂ, ಅಗ್ನಿಹೋತ್ರ ಮಹಾ

---

(೧) ವಿ. ಪು. ೧. ೬. ೩೭

**ಗತಾನಾಂ ಕರ್ಮಣಾ ಮನುಷ್ಠಾನೇ, ಬೀಜಾವಾಪಾದೀನಾಮಿವಾ ನಭಿಸಂಹಿತ ಫಲಸ್ಯಾಪೀ ಇಷ್ಟಾನಿಷ್ಟರೂಪಫಲಸಂಬಂಧೋಽ ವರ್ಜನೀಯಃ ; ಅತೋ ಮೋಕ್ಷ ವಿರೋಧಿ ಫಲತ್ವೇನ ಮುಮುಕ್ಷುಣಾ ನ ಕರ್ಮಾನುಷ್ಠೇಯ ಮಿತ್ಯತ ಉತ್ತರ ಮಾಹ—**

**ಮೂ. ಅನಿಷ್ಟ ಮಿಷ್ಟಂ ಮಿಶ್ರಂಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯ ತ್ಯಾಗಿನಾಂ ಪ್ರೇತ್ಯ ನ ತು ಸನ್ನ್ಯಾಸಿನಾಂ ಕ್ವಚಿತ್ ॥೧೨॥**

---

ಯಜ್ಞಾದಿಗಳನ್ನನುಷ್ಠಿಸುವವರಾಗಿ ತ್ಯಾಗದ ಅಭಿಸಂಧಿಯಿಲ್ಲದವರಿಗೆ ಸ್ವರ್ಗಾದಿಲೋಕವೆಂದು ಹೇಳಲ್ಪಟ್ಟಿರುತ್ತದೆ. ನ್ಯಾಸಿಗಳಿಗೆ ಎಂದರೆ ಸಂನ್ಯಾಸಿಗಳಿಗೆ **ಬ್ರಹ್ಮಸಂಜ್ಞಿತಸ್ಥಾನವೆಂದರೆ** ಸತ್ಯಲೋಕ ಪ್ರಾಪ್ತಿಯು ಎಂದು ಹೇಳಲ್ಪಟ್ಟಿತು. ಮುಂದೆ ಯೋಗಿಗಳಿಗೆಲ್ಲಾ ದಿವ್ಯ ವೈಕುಂಠ ವೆಂದು ಹೇಳಿ, ಆ ಯೋಗಿಗಳೆಂದರೆ ಯಾರೆಂಬುದನ್ನು ತಿಳಿಸುತ್ತಾರೆ **ಅತಃ**-ಆ ಕಾರಣ ದಿಂದ, **ತತ್ಫಲಸಾಧನ ಸ್ವಭಾವತಯಾ**-ಆಯಾ ಫಲಗಳನ್ನು ಸಾಧಿಸುವ ಸ್ವಭಾವವಿರುವ ದೆಂದು, **ಅವಗತಾನಾಂ ಕರ್ಮಣಾಂ ಅನುಷ್ಠಾನೇ**-ತೋರಿಬಂದಿರುವ ಕರ್ಮಗಳ ಅನುಷ್ಠಾನದಲ್ಲಿ, **ಬೀಜಾವಾಪಾದೀನಾಮಿವ**-ಬೀಜವನ್ನು ಕ್ಷೇತ್ರದಲ್ಲಿ ಬಿತ್ತುವ ಹಾಗೆ, **ಅನಭಿಸಂಹಿತ ಫಲ ಸ್ಯಾಪಿ**-ಫಲಕ್ಕಾಗಿ ಅನುಷ್ಠಿಸಲ್ಪಡದೇ ಇದ್ದರೂ ಕೂಡ, **ಇಷ್ಟಾನಿಷ್ಟರೂಪ ಫಲಸಂಬಂ ಧಃ**-ಇಷ್ಟವಾದ ಮತ್ತು ಇಷ್ಟವಿಲ್ಲದ, ಬಂಧಕವಾಗಿರುವ ಫಲದ ಸಂಬಂಧವು, **ಅವರ್ಜನೀ ಯಃ**-ತಪ್ಪಿದ್ದಲ್ಲವು; **ಅತಃ**-ಆ ಕಾರಣದಿಂದ, **ಮೋಕ್ಷವಿರೋಧಿ ಫಲತ್ವೇನ**-ಮೋಕ್ಷಕ್ಕೆ ವಿರುದ್ಧವಾದ ಫಲವನ್ನು ಕೊಡುವುದರಿಂದ, **ಮುಮುಕ್ಷುಣಾ**-ಮೋಕ್ಷಾರ್ಥಿಯಿಂದ, **ನಕರ್ಮಾನು ಷ್ಠೇಯಂ**-ಈ ನಿತ್ಯನೈಮಿತ್ತಿಕಗಳು ಶಾಸ್ತ್ರವಿಹಿತಕರ್ಮಗಳಾದರೂ, ನಾನುಷ್ಠೇಯಂ-ಅನುಷ್ಠಿಸ ತಕ್ಕದ್ದಲ್ಲವು ; ಇತಿ-ಹೀಗೆ ಪೂರ್ವಪಕ್ಷ ಪ್ರಾಪ್ತವಾದರೆ, ಅತಃ-ಅದಕ್ಕಾಗಿ, **ಉತ್ತರ ಮಾಹ**-ಸಮಾಧಾನ ರೂಪದಲ್ಲಿ ಉತ್ತರವನ್ನು ಶ್ರೀ ಕೃಷ್ಣಭಗವಾನರವರು ಹೇಳುತ್ತಾರೆ— ಅಗ್ನಿಹೋತ್ರ, ಯಜ್ಞ, ದಾನ, ತಪಸ್ಸೇ ಮೊದಲಾದವುಗಳಿಗೂ ಹಾಗೆಯೇ ಸಂಧ್ಯಾವಂದ ನಾದಿಗಳಿಗೂ ಶಾಸ್ತ್ರಗಳಲ್ಲಿ ಫಲಗಳು ಹೇಳಲ್ಪಟ್ಟಿವೆ ಮೋಕ್ಷಾರ್ಥಿಯು ಇಂತಹ ಕರ್ಮಗಳನ್ನು ಮಾಡಿಬಿಟ್ಟು, ನನಗೆ ಇದರ ಫಲಗಳು ಬೇಡವೆಂದರೆ, ಅವುಗಳು ಉಂಟಾಗದೇ ಇರುವದು ಹೇಗೆ ಸಾಧ್ಯವು ? ಯಾವ ಬೀಜವನ್ನು ಹಾಕುತ್ತೇವೋ, ತದನುಗುಣವಾಗಿ ಗಿಡ ಮರ ಫಲಗಳು ಉಂಟಾಗುತ್ತವೆಯಷ್ಟೇ. ಆದುದರಿಂದ ಇಂತಹ ಕರ್ಮಾನುಷ್ಠಾನದಿಂದ ಫಲವು ಅವರ್ಜ ನೀಯವಾದುದರಿಂದಲೂ, ಆ ಫಲಗಳು ಬಂಧಕಗಳಾದುದರಿಂದಲೂ, ಮೋಕ್ಷಾರ್ಥಿಯು ಅಂತಹ ಕರ್ಮಗಳನ್ನು ಅನುಷ್ಠಿಸತಕ್ಕದ್ದಲ್ಲವು ಎಂದು ಪೂರ್ವಪಕ್ಷ ಬಂದರೆ ಅದಕ್ಕೆ ಮುಂದಿನ ಶ್ಲೋಕವು ಸಮಾಧಾನವನ್ನು ಹೇಳುತ್ತದೆಂಬ ಭಾವವು.

**ಮೂಲಕ್ಕೆ ಅರ್ಥವು**—ಬೀಜಾವಾಪದಲ್ಲಿ ಬೀಜಕ್ಕೆ ಸಂಸ್ಕಾರವಿದ್ದರೆ ಅದರ ಸರಿಯಾದ ಫಲವನ್ನು ಕೊಡುತ್ತದೆ ಎಂಬುದರಲ್ಲಿ ಸಂದೇಹವಿಲ್ಲವು. ಬೀಜವನ್ನು ಹುರಿದುಬಿಟ್ಟರೆ, ಅಥವಾ ಕಲ್ಲುಭೂಮಿಯಲ್ಲಿ ಬಿದ್ದರೆ, ಆ ಸಂಸ್ಕಾರದಿಂದತನ್ನ ಫಲವನ್ನು ಕೊಡುವ ಶಕ್ತಿಯು ಹೇಗೆ ಕಳೆದುಹೋಗುತ್ತದೋ, ಹಾಗೆಯೇ ಯಜ್ಞದಾನತಪಸ್ಸುಗಳೂ ಸಂಧ್ಯಾವಂದನಾದಿ ಮಹಾ ಯಜ್ಞಗಳೂ ಅವುಗಳ ಫಲವನ್ನು ಕೊಡುವಶಕ್ತಿಯನ್ನು ನೀಗಿಕೊಳ್ಳುವುವು. ಅವುಗಳು ಪರಮಪುರುಷಾರಾಧನೆಯೆಂದು ಭಾವಿಸಿ, ಆತನ ಪ್ರೀತ್ಯರ್ಥವಾಗಿ ಕರ್ತೃತ್ವ, ಮಮತಾ, ಫಲ ತ್ಯಾಗದೊಂದಿಗೆ ಆತನಲ್ಲಿ ಆ ಕರ್ಮಗಳನ್ನು ಸಮರ್ಪಿಸಿಬಿಟ್ಟರೆ, ಹುರಿದ ಬೀಜದ ಹಾಗೆ ಅವು ಬಂಧಕ ಫಲಗಳನ್ನು ಕೊಡುವದಿಲ್ಲವು. ಇದುಸತ್ಯಸಙ್ಕಲ್ಪನ ನಿಯಮನವು ಎಂದು ಹೇಳಿ, ಅತ್ಯಾಗಿಗೂ ತ್ಯಾಗಿಗೂ ಇರುವ ವ್ಯತ್ಯಾಸವನ್ನು ವ್ಯಕ್ತಪಡಿಸುತ್ತಾರೆ. ಅತ್ಯಾಗಿಗೆ ಅನಿಷ್ಟ

ಇಷ್ಟ, ಮಿಶ್ರವೆಂಬ ಮೂರುವಿಧ ಫಲಗಳುಂಟಾಗುತ್ತವೆ. ತ್ಯಾಗಿಯಾದ ಮೋಕ್ಷಾರ್ಥಿಗಾದರೋ, ಇವು ಯಾವುವೂ ಇಲ್ಲದೆ ಮೋಕ್ಷಕ್ಕೆ ಸಾಧನವಾಗುತ ದೆಂದು ಹೇಳುತ್ತಾರೆ.— **ಹೇ ಪಾರ್ಥ**-ಓ ಅರ್ಜುನನೇ, **ಅತ್ಯಾಗಿನಾಂ**-ಕರ್ತೃತ್ವಮಮತಾಫಲಗಳನ್ನು ತ್ಯಾಗ ಮಾಡದೆ ಕರ್ಮಾನುಷ್ಠಾನ ಮಾಡುವವನಿಗೆ, ಎಂದರೆ ಅಮುಮುಕ್ಷುವಿಗೆ, ಬುಭುಕ್ಷುವಿಗೆ, **ಪ್ರೇತ್ಯ**-ದೇಹಾವಸಾನವಾದ ಮೇಲೆ, **ಕರ್ಮಣಃ ಫಲಮ್**-ಕರ್ಮಗಳ ಫಲವು, **ಅನಿಷ್ಟಂ**-ಪ್ರತಿಕೂಲವಾಗಿ ದುಃಖರೂಪವಾದುದಾಗಿಯೂ, **ಇಷ್ಟಂ**-ಅನುಕೂಲವಾಗಿ ಸುಖರೂಪವಾದುದಾಗಿಯೂ, **ಮಿಶ್ರಂ**-ಸುಖ ದುಃಖ ದ್ವಂದ್ವಯುತವಾಗಿಯೂ ಮೂರು ವಿಧವಾದುದು; **ಭವತಿ**-ಆಗುತ್ತದೆ. ಆದರೆ **ಸನ್ನ್ಯಾಸಿನಾಂತು**-ಕರ್ಮಗಳನ್ನನುಷ್ಠಿಸಿ ಕರ್ತೃತ್ವ ಮಮತಾ ಫಲಗಳನ್ನು ತ್ಯಾಗಮಾಡಿದವರಿಗಾದರೋ, ಈತನು ಸ್ವಾಭಾವಿಕವಾಗಿ ಅನಿಷ್ಟವಾದುದನ್ನು ಮಾಡುವದೇ ಇಲ್ಲವಾದುದರಿಂದ, **ಪ್ರೇತ್ಯ**-ದೇಹಾವಸಾನಾನಂತರದಲ್ಲಿ, **ನಕ್ವಚಿತ್ ಭವತಿ**-ಇಂತಹ ಫಲಗಳು ಎಲ್ಲಿಯೂ ಉಂಟಾಗುವದಿಲ್ಲವು; ಪಾಪಗಳೆಲ್ಲಾ ನಶಿಸಿಹೋಗುವದರಿಂದ ಇಲ್ಲಿಯೂ ಅಂತಹ ಫಲಗಳಿಲ್ಲವು; ಅಂತವನು ಉಪಾಯಾನುಷ್ಠಾನವನ್ನು ಮಾಡಿ ಮೋಕ್ಷವನ್ನು ಪೊಂದುವದರಿಂದ ಅವುಗಳ ಫಲವು ದಿವ್ಯ ವೈಕುಂಠದಲ್ಲೂ ಉಂಟಾಗುವದಿಲ್ಲವು. ಅತ್ಯಾಗಿಗಾದರೋ ಪೂರಾ ದುಃಖವೇ ಉಂಟಾಗಬಹುದು, ನರಕಪ್ರಾಪ್ತಿಯಲ್ಲಿ; ಪೂರಾ ಸುಖವೇ ಆಗಬಹುದು ಸ್ವರ್ಗದಲ್ಲಿ; ಅಥವಾ ಸುಖದುಃಖಗಳ ದ್ವಂದ್ವವು, **ಸುಖಸ್ಯಾನನ್ತರಂ ದುಃಖಂ ದುಃಖಸ್ಯಾನನ್ತರಂ ಸುಖಂ** ಎಂದು ಹೇಳಿರುವ ಹಾಗೆ ಎರಡರ ಅನುಭವವು ಈ ಲೋಕದಲ್ಲೇ ಪುನಃ ಪುನಃ ಪ್ರಾಪ್ತವಾಗಬಹುದು. **ಪ್ರೇತ್ಯ** ಎಂದು ಹೇಳಿರುವದರ ಅಭಿಪ್ರಾಯವೇನೆಂದರೆ, ಈಗ ಮಾಡುವ ಕರ್ಮಗಳಿಗೆ ಅನುಗುಣವಾದ ಫಲವು ಮುಂದಿನ ಜನ್ಮದಲ್ಲೇ ಎಂಬ ಭಾವದಿಂದ ಹಾಗೆ ಪ್ರಯೋಗವು. ಈಗ ಈ ಲೋಕದಲ್ಲಿ ಪ್ರಾಪ್ತವಾಗಿರುವ ಫಲಗಳು ಪೂರ್ವ ಜನ್ಮಗಳಲ್ಲಿ ಮಾಡಲ್ಪಟ್ಟ ಪ್ರಾರಬ್ಧಕರ್ಮಕ್ಕೆ ಸಂಬಂಧಿಸಿದವು. ಆದರೆ ಅತ್ಯುತ್ಕಟವಾದ ಪುಣ್ಯಪಾಪಗಳನ್ನು ಮಾಡಿದರೆ ಇಹದಲ್ಲೇ ಅವುಗಳ ಫಲವುಂಟೆಂದು ಪ್ರಮಾಣವಿರುತ್ತದೆ. ತ್ಯಾಗಿಯಾಗಿ ಮೋಕ್ಷಾರ್ಥಿಯಾದರೋ, **ಪ್ರೇತ್ಯ**-ದೇಹಾವಸಾನಾನಂತರ ಮೋಕ್ಷಪ್ರಾಪ್ತಿಯುಂಟಾಗುವದರಿಂದ ಇವು ಯಾವ ಫಲವೂ ಎಲ್ಲಿಯೂ ಉಂಟಾಗುವದಿಲ್ಲವು. ಆದುದರಿಂದ **ಅತ್ಯಾಗಿನಾಂ** ಎಂದು ಹೇಳಿರುವವರು ಯಾರು ಎಂದರೆ ಮೋಕ್ಷಾರ್ಥಿಗಳಲ್ಲದವರು.

ಇಲ್ಲಿ ಮುಖ್ಯವಾಗಿ ತ್ಯಾಗಿಯು ಪ್ರಪನ್ನನೆಂದು ಭಾವಿಸಿ, ಮೇಲೆ ಹಾಗೆ ಅರ್ಥಮಾಡಲ್ಪಟ್ಟಿತು. ಆದರೆ ಉಪಾಯಾನುಷ್ಠಾನವನ್ನು ಮಾಡುವವರು ಮೂರು ವಿಧವು (೧) ಆರ್ತನೂ ಮತ್ತು ಅರ್ಥಾರ್ಥಿಯೂ (೨) ಜಿಜ್ಞಾಸುವೂ (೩) ಜ್ಞಾನಿಯೂ ಎಂಬದಾಗಿ; ಹಿಂದೆಯೇ ಹೇಳಲ್ಪಟ್ಟಿರುತ್ತದೆಯಷ್ಟೇ. ಇವರೆಲ್ಲರೂ ಹೀಗೆಯೇ ಕರ್ತೃತ್ವ, ಮಮತಾ, ಫಲ ತ್ಯಾಗಗಳೊಂದಿಗೇನೆ ಕರ್ಮಯೋಗವನ್ನು ಅನುಷ್ಠಿಸತಕ್ಕದ್ದೆಂದು ಹಿಂದೆ ಮೂರನೆಯ ಅಧ್ಯಾಯದಲ್ಲೇ ಹೇಳಲ್ಪಟ್ಟಿತು. ಆದುದರಿಂದ ಇವರೆಲ್ಲರೂ ತ್ಯಾಗಿಗಳೇ, ಏಕೆಂದರೆ ಇವರೆಲ್ಲರೂ ಕರ್ಮಯೋಗವನ್ನು ಫಲಸಂಗ ಕರ್ತೃತ್ವಗಳನ್ನು ತ್ಯಾಗಮಾಡಿಯೇ ಅನುಷ್ಠಿಸತಕ್ಕದ್ದಾಗಿರುತ್ತದೆ. ಆದರೆ ಭಕ್ತಿಯೋಗದಲ್ಲಿ ಮಾತ್ರ ಬೇರೆ ಬೇರೆ ಫಲಾಕಾಂಕ್ಷಿಗಳು; ತನ್ನ ಕೋರಿಕೆ ಏನು ಎಂಬುದನ್ನು ತಿಳಿಸಿ ಉಪಾಸನೆಯನ್ನು ಮಾಡಿದರೆ ಆ ಕರ್ಮಯೋಗದ ಫಲಗಳು ಪ್ರಾಪ್ತವಾಗದೆ ತನ್ನ ಇಷ್ಟ ಮಾತ್ರ ಸಿದ್ಧಿಸುತ್ತದೆ. ಐಶ್ವರ್ಯ ಕೈವಲ್ಯ ಮೋಕ್ಷ ಇವುಗಳಲ್ಲಿ-ತ್ಯಾಗಿಗೆ ಯಾವುದು ಇಷ್ಟವೋ ಅದೇ ಲಭಿಸುತ್ತದೆ. ತನ್ನ ಉಪಾಸಕನು ಏನನ್ನು ಪ್ರಾರ್ಥಿಸುವನೋ, ಅದು ಅಲ್ಪಾಸ್ಥಿರವಾದುದಾದರೂ ಅದನ್ನೇ ತನಗೆ ತುಂಬಾ ಅಲ್ಪಾಸ್ಥಿರವಾದುದನ್ನು ಬೇಡಿದನೇ ಎಂದು ಇಷ್ಟವಿಲ್ಲದಿದ್ದರೂ ಪರಮಪುರುಷನುಕೊಡಬೇಕಷ್ಟೆ. ಆದರೆ ಆತನು ಮೋಕ್ಷಾರ್ಥಿಯಾಗಿ ಮೋಕ್ಷವನ್ನು ಬೇಡಿದರೆ, ಆತನನ್ನು ತುಂಬಾ ಪ್ರಿಯನನ್ನಾಗಿ ಭಾವಿಸಿ ತುಂಬಾ ಸಂತೋಷದಿಂದ ಅದನ್ನೇ ಕೊಡುವನು ಎಂದು ಪ್ರಾಸಙ್ಗಿಕವಾಗಿ ತಿಳಿಸಿರುವೆವು. ಆಗಲಿ, ಇಲ್ಲಿ ಪ್ರಾಸಙ್ಗಿಕ

ವಾಗಿ ಹೇಳಿದುದು ಈ ಶ್ಲೋಕಾಭಿಪ್ರಾಯಕ್ಕೆ ವಿರುದ್ಧವಲ್ಲವೋ ? ಎಂದರೆ, ವಿರೋಧವೇನೂ ಇಲ್ಲವು. ತ್ಯಾಗಿಯಾಗಿ ಕರ್ಮಯೋಗವನ್ನು ಅನುಷ್ಠಿಸಿದರೆ ಕರುಣಾಳುವು ಮೋಕ್ಷವನ್ನು ಕೊಡಲು ಸಿದ್ಧವು. ಅದನ್ನು ಬಿಟ್ಟು ಈತನು ಐಹಿಕಗಳನ್ನಾಗಲಿ, ಸ್ವರ್ಗ, ಕೈವಲ್ಯಗಳನ್ನಾಗಲಿ, ಪ್ರಾರ್ಥಿಸಿದರೆ, ಅದು ಯಾರತಪ್ಪು ? ಪ್ರಾರಬ್ಧಮೂಲಕವಾಗಿ ಹಾಗೆ ಕೇಳುವನು. ಕೇಳಿದುದನ್ನು ಕೊಡಬೇಕಷ್ಟೇ. ರಾಜನು ಒಬ್ಬನಿಗೆ ಆತನು ಮಾಡಿದ ಸುಕೃತಕ್ಕಾಗಿ ಒಂದು ಜಹಗೀರನ್ನೇ ಕೊಡಬಹುದಾಗಿರುವಾಗ ಒಂದು ಗೃಹದಾನಬೇಕೆಂದು ಪ್ರಾರ್ಥಿಸದರೆ ಅದನ್ನೇ ಕೊಡುವನು. ಮುಕ್ತಿದಾಯಕನಾದ ಮುಕುಂದನು ಎದುರಿಗೆ ಒಂದು ನಿಂತಾಗ ಅದಿತಿಯು ಹೇಳುತ್ತಾಳೇನೆಂದರೆ—ಓ ಪರಮಪುರುಷನಾದ ಶ್ರೀ ಕೃಷ್ಣನೇ ! ಹಿಂದೆ ನಿನ್ನನ್ನು ಕುರಿತು ತಪಸ್ಸನ್ನು ಮಾಡಿದೆನು. ಅದಕ್ಕೆ ನೀನು ಪ್ರೀತನಾಗಿ ಎದುರಿಗೆ ಬಂದು ನಿಂತು ನಿನಗೇನು ಬೇಕು, ಕೇಳಿಕೋ ; ಎಂದರೆ, ಮೋಕ್ಷವನ್ನು ಕೊಡು ಎಂದು ಬೇಡದೆ, ನೀನು ನನಗೆ **ಪುತ್ರ** ನಾಗಿ ಜನಿಸಬೇಕು ಎಂದು ಮಂದಮತಿಯಾಗಿ ಕೇಳಿಕೊಂಡೆನು. **"ಕೌಪೀನಾಚ್ಛಾದನ ಪ್ರಾಯ ವಾಂಛಾಕಲ್ಪ ದ್ರುಮಾದಪಿ । ಜಾಯತೇ ಯದಪುಣ್ಯಾನಾಂ ಸೋಽಪರಾಧ ಸ್ಸ್ವದೋಷಜಃ"** ಕಲ್ಪವೃಕ್ಷವು ಎದುರಿಗೆ ಬಂದು ನಿಂತರೂ ಕೌಪೀನಕ್ಕಾಗಿ ಸ್ವಲ್ಪ ಬಟ್ಟೆಯನ್ನು ಪ್ರಾರ್ಥಿಸೋಣವು ತನ್ನ ಪ್ರಾರಬ್ಧದೋಷವೇ ಸರಿ ಎಂದು ಪರಿತಾಪದಿಂದ ಹೇಳುತ್ತಾಳೆ. ಇದು ಶ್ರೀ ಕೃಷ್ಣನು ಆಕೆಗೆ ಕುಂಡಲಗಳನ್ನು ತಂದುಕೊಟ್ಟ ಪ್ರಕರಣವು.

ಈ ಶ್ಲೋಕದಲ್ಲಿ **ಭವತ್ಯತ್ಯಾಗಿನಾಂ** ಎಂದು ಹೇಳಿ, **ತು** ಶಬ್ದದಿಂದ ಹಿಂದೆ ಹೇಳಿದ ಅತ್ಯಾಗಿಗಳಿಗೆ ಪ್ರತಿದ್ವಂದ್ವಿಯಾಗಿ **ತ್ಯಾಗಿನಾಂ** ಎಂಬುದಕ್ಕೆ ಬದಲಾಗಿ **ಸನ್ನ್ಯಾಸಿನಾಂ** ಎಂದರೆ ತ್ಯಾಗಿಗಳಿಗೆ ಎಂಬರ್ಥವು ಬಹು ಸ್ಫುಟವಾಗಿ ತೋರಿದರೂ, **ಸನ್ನ್ಯಾಸಿನಾಂ** ಎಂಬುದಕ್ಕೆ **"ಪರಮಹಂಸ ಪರಿವ್ರಾಜಕಾನಾಂ"** ಎಂದು ಕೆಲವರು ಅರ್ಥ ಮಾಡಿರುವುದು ತುಂಬಾ ಆಶ್ಚರ್ಯವು. **ತ್ಯಾಗೀ** ಎಂಬ ಶಬ್ದಕ್ಕೆ, ಇತರರು ಮಾಡಿರುವ ಹಾಗೆ ಬೇರೇ ಅರ್ಥಮಾಡಲು ಬಿಡದೆ, **ಯಸ್ತು ಕರ್ಮ ಫಲತ್ಯಾಗೀ ಸತ್ಯಾಗೀ** ಎಂದು ಶ್ರೀ ಕೃಷ್ಣಭಗವಾನರವರೇ ಅರ್ಥ ಹೇಳಿದ್ದರೂ, ಅದಕ್ಕೆ ವಿರುದ್ಧವಾಗಿ ಅರ್ಥಮಾಡಿರುವದು ಸರಿಯಲ್ಲವು. ಶ್ರೀ ವ್ಯಾಸಮಹರ್ಷಿಗೆ ಉಪನಿಷತ್ತುಗಳೆಲ್ಲಾ ಕರತಲಾಮಲಕವಾದುದರಿಂದ ಉಪನಿಷತ್ತುಗಳಲ್ಲಿ ಪರ್ಯಾಯ ಪದಗಳಿಗ ಇಂತಹ ಪ್ರಯೋಗವನ್ನು ಕಾಣಬಹುದು. ಇದಕ್ಕೊಂದು ಉದಾಹರಣೆಯು.— ಶ್ವೇತಾಶ್ವತರದ ಪ್ರಥಮಾಧ್ಯಾಯದ ೯ನೆಯ ಶ್ಲೋಕದಲ್ಲಿ **ಜ್ಞಾಜ್ಞೌದ್ವಾವಜಾವೀಶ ನೀಶೌ ಅಜಾಹ್ಯೇಕಾ ಭೋಕ್ತೃ ಭೋಗಾರ್ಥಯುಕ್ತಾ । ಅನಂತಶ್ಚಾತ್ಮಾ ವಿಶ್ವರೂಪೋಹ್ಯಕರ್ತಾ ಯದಾತ್ರಯಂ ವಿಂದತೇ ಬ್ರಹ್ಮಮೇತತ್"** ಹೀಗೆ ತತ್ತ್ವತ್ರಯ ಜ್ಞಾನವು ಪರಬ್ರಹ್ಮಪ್ರಾಪ್ತಿಗೆ ಹೇತುವೆಂದು ಹೇಳಿ, ಆ ಮೂರು ತತ್ವಗಳು ಯಾವುವು ಎಂಬುದನ್ನು ಮುಂದಿನ ಶ್ಲೋಕದಲ್ಲಿ ಹೇಳಲ್ಪಡುತ್ತದೆ-**ಕ್ಷರಂ ಪ್ರಧಾನಂ, ಅಮೃತಾಕ್ಷರಂ ಹರಃ, ಕ್ಷರಾತ್ಮಾನೌ ಈಶತೇ ದೇವ ಏಕಃ**-ಹಿಂದೆ ಅಜಾ ಎಂದು ಹೇಳಲ್ಪಟ್ಟಿದುದು ಸತತ ವಿಕ್ರಿಯವಾದ ಪ್ರಧಾನ ಶಬ್ದದಿಂದ ಹೇಳಲ್ಪಡುವ ಪ್ರಕೃತಿಯು. ಇದರ ಹಾಗೆ ಸ್ವರೂಪ ವಿಕಾರವಿಲ್ಲದಿರುವ ಆ ಪ್ರಧಾನ ಭೋಗ್ಯವಾದುದೆಂದು **ಹರತೀತಿ ಹರಃ** ಎಂಬ ವ್ಯುತ್ಪತ್ತಿಯಿಂದ ಅಪಹರಿಸುವನು ಚೇತನನು. ಈ ಪ್ರಧಾನವನ್ನೂ ಈ ಆತ್ಮನನ್ನೂ ಪರಮಾತ್ಮನೊಬ್ಬನೇ ನಿಯಮಿಸುವಂತಾವನು. ಇಲ್ಲಿ **ಕ್ಷರಾಕ್ಷರ್ ಈಶತೇ** ಎಂದು ಹೇಳುವದಕ್ಕೆ ಬದಲಾಗಿ **ಕ್ಷರಾತ್ಮಾನೌ** ಎಂದು ಹೇಳಿರುವದರಿಂದ ಅಕ್ಷರ ಮತ್ತು ಆತ್ಮಾ ಶಬ್ದಗಳು ಪರ್ಯಾಯಪದಗಳು. ಹಾಗೆಯೇ ಇಲ್ಲಿ **ತ್ಯಾಗಿನಾಂ** ಎಂಬುದಕ್ಕೆ ಬದಲಾಗಿ **ಸನ್ನ್ಯಾಸಿನಾಂ** ಎಂದು ಉಪಯೋಗಿಸಿರುವದರಿಂದ ಅವು ಪರ್ಯಾಯ ಪದಗಳು.

**ಭಾ. ಅನಿಷ್ಟಂ-ನರಕಾದಿಫಲವತ್, ಇಷ್ಟಂ-ಸ್ವರ್ಗಾದಿ, ಮಿಶ್ರಂ-ಅನಿಷ್ಟಸಂಭಿನ್ನಂ ಪುತ್ರ ಪಶ್ವನ್ನಾದಿ, ಏತತ್ತ್ರಿವಿಧಂ ಕರ್ಮಣಃ ಫಲಂ, ಅತ್ಯಾಗಿನಾಂ-ಕರ್ತೃತ್ವ ಮಮತಾ ಫಲತ್ಯಾಗ ರಹಿತಾನಾಂ, ಪ್ರೇತ್ಯಭವತಿ; ಪ್ರೇತ್ಯ-ಕರ್ಮಾನುಷ್ಠಾ ನೋತ್ತರ ಕಾಲ ಮಿತ್ಯರ್ಥಃ; ನತು ಸನ್ನ್ಯಾಸಿನಾಂ ಕ್ವಚಿತ್-ನತು ಕರ್ತೃ ತ್ವಾದಿ ಪರಿತ್ಯಾಗಿನಾಂ ಕ್ವಚಿದಪಿ ಮೋಕ್ಷವಿರೋಧಿ ಫಲಂ ಭವತಿ; ಏತದುಕ್ತಂ ಭವತಿ ಯದ್ಯಪ್ಯ ಗ್ನಿಹೋತ್ರಮಹಾಯಜ್ಞಾದೀನಿ ನಿತ್ಯಾನ್ಯೇವ; ತಥಾಪಿ ಜೀವನಾಧಿಕಾರ ಕಾಮಾಧಿಕಾರಯೋರಿವ ಮೋಕ್ಷಾಧಿಕಾರೇಚ, ವಿನಿಯೋಗ**

---

**ಭಾಷ್ಯಾರ್ಥವು**—ಒಂದೇವಿಧ ಲೌಕಿಕ ಕರ್ಮಗಳಿಗೆ ಹೇಗೆ ನಿಯತ ಫಲಗಳು ಭಿನ್ನವೋ, ಹಾಗೆಯೇ ವೈದಿಕ ಕರ್ಮಗಳಿಗೂ ಇರಬೇಕಲ್ಲವೇ? ಲೌಕಿಕ ಕರ್ಮಗಳಲ್ಲಿ ಫಲೇಚ್ಛಾ ಇರಲಿ, ಇಲ್ಲದೇ ಇರಲಿ, ಹೇಗೆ ಒಂದೇ ವಿಧವಾದ ಫಲಗಳೋ, ಹಾಗಲ್ಲವೇ ವೈದಿಕಕರ್ಮಗಳಲ್ಲೂ ಇರ ತಕ್ಕದ್ದು ಎಂದು ಶಙ್ಕಿಸಿ, ಆ ಶಙ್ಕೆಗೆ ಈ ಸಂದರ್ಭದಲ್ಲಿ ಹಾಗಲ್ಲವೆಂದು ಸಮಾಧಾನವು ಹೇಳಲ್ಪಡುತ್ತದೆ. **ಅನಿಷ್ಟಂ**-ಇಷ್ಟವಲ್ಲದುದು, ಅದು ದುಃಖರೂಪವಾಗಿರುವದು, ಆದುದ ರಿಂದ **ನರಕಾದಿಫಲಂ**-ಎಂದು ವ್ಯಾಖ್ಯಾನವು. **ಇಷ್ಟಂ**-ಹಿತವಾದುದು ಸುಖವು, ಆದುದ ರಿಂದ **ಸ್ವರ್ಗಾದಿ** ಎಂಬ ವ್ಯಾಖ್ಯಾನವು, ಆದಿಶಬ್ದದಿಂದ ಅಂತಹ ಇತರ ಸತ್ಯಾದಿ **ಲೋಕ** ಗಳು ಹೇಳಲ್ಪಟ್ಟವು, **ಮಿಶ್ರಂ**-ಇವೆರಡೂ ಸೇರಿದುದು, ಆದುದರಿಂದ **ಅನಿಷ್ಟ ಸಂಭಿನ್ನಂ** ಎಂಬ ವ್ಯಾಖ್ಯಾನವು, ಅನಿಷ್ಟರೂಪವಾದ ದುಃಖದಿಂದ ಸೇರಿರುವ, **ಪುತ್ರ ಪಶು ಅನ್ನವೇ** ಮೊದಲಾದುವು, ಇವುಗಳಿಂದ ಕೂಡಿದುದು, **ಏತತ್ತ್ರಿವಿಧಂ ಕರ್ಮಣಃ ಫಲಂ**-ಈ ಮೂರು ವಿಧವಾಗಿರುವ ಕರ್ಮಗಳ ಫಲವು, **ಅತ್ಯಾಗಿನಾಂ** ಎಂದರೆ ಕರ್ತೃತ್ವ ಮಮತಾ ಫಲ ತ್ಯಾಗ ಗಳನ್ನು ಮಾಡದಿರುವವರಿಗೆ, **ಪ್ರೇತ್ಯಭವತಿ**-ಆದುದರಿಂದ ಮೋಕ್ಷಾರ್ಥಿಗಳಲ್ಲದವರಿಗೆ ದೇಹಾವ ಸಾನಾನಂತರ ಉಂಟಾಗುತ್ತದೆ. ಇಲ್ಲಿ **ಪ್ರೇತ್ಯ** ಎಂಬುದರಿಂದ **ಕರ್ಮಾನುಷ್ಠಾನೋತ್ತರ ಕಾಲ ಮಿತ್ಯರ್ಥಃ**-ಕರ್ಮವನ್ನನುಷ್ಠಿಸಿದ ಮುಂದಿನಕಾಲದಲ್ಲಿ ಎಂಬ ತಾತ್ಪರ್ಯವು. ಕರ್ಮದ ಫಲವು ಭಗವದನುಗ್ರಹ ನಿಗ್ರಹರೂಪದಲ್ಲಿ ಪ್ರಾಪ್ತವಾಗುವದರಿಂದ ಕರ್ಮಾನುಷ್ಠಾನೋತ್ತರ ಕಾಲವೆಂಬ ವ್ಯಾಖ್ಯಾನವು. **ಪ್ರೇತ್ಯ** ಎಂದರೆ ದೇಹಾವಸಾನಾನಂತರ ಎಂದರ್ಥವಾಗುವಾಗ, ಉತ್ತರಕಾಲಿಕವೆಂದು ಲಾಕ್ಷಣಿಕಾರ್ಥವು ಹೇಗೆ? ಎಂದರೆ ಕೆಲವು ಅತ್ಯುತ್ಕಟ ಪುಣ್ಯಾಪಾಪಗಳಿಗೆ ಈ ಜನ್ಮದಲ್ಲೇ ದೇಹಾವಸಾನ ಪೂರ್ವಭಾವಿಯಾಗಿಯೇ ಲಭಿಸುವದರಿಂದ ಹಾಗೆ ವ್ಯಾಖ್ಯಾನ ವೆಂದೂ ಭಾವಿಸತಕ್ಕದ್ದು. **ನತು ಸನ್ನ್ಯಾಸಿನಾಂ ಕ್ವಚಿತ್** ಎಂದರೆ **ನತು ಕರ್ತೃತ್ವಾದಿ ಪರಿತ್ಯಾಗಿನಾಂ ಕ್ವಚಿದಪಿ ಮೋಕ್ಷವಿರೋಧಿಫಲಂ ಭವತಿ**-ಕರ್ತೃತ್ವಾದಿಗಳನ್ನು ಬಿಟ್ಟು ಇಲ್ಲಿ ಆದಿಪದದಿಂದ ಮಮತಾಫಲಗಳೂ ಹೇಳಲ್ಪಟ್ಟವು, ಹೀಗೆ ಮೂರನ್ನು ಬಿಟ್ಟವನಿಗೆ ಯಾದರೋ ಎಲ್ಲಿಯೂ ಮೋಕ್ಷವಿರೋಧಿಯು ಫಲಗಳು ಪ್ರಾಪ್ತವಾಗುವದಿಲ್ಲವು; ಅತ್ಯಾಗಿಗೆ ಪ್ರಾಪ್ತವಾಗುವ ಮೋಕ್ಷ ವಿರೋಧಿಯಾಗಿರುವ **ಅನಿಷ್ಟಂ ಇಷ್ಟಂ ಮಿಶ್ರಂ** ಎಂದು **ಮೇಲೆ** ಹೇಳಿದ ಮೂರು ವಿಧ ಫಲಗಳೂ ಉಂಟಾಗುವದಿಲ್ಲವೆಂಬ ಭಾವವು. **ಏತದುಕ್ತಂ ಭವತಿ**- ಈ ಶ್ಲೋಕ ತಾತ್ಪರ್ಯವು ಇಷ್ಟೇ-**ಯದ್ಯಪಿ, ಯಜ್ಞಾದ್ಯಗ್ನಿಹೋತ್ರ ಮಹಾ ಯಜ್ಞಾದೀನಿ ನಿತ್ಯಾನ್ಯೇವ**-ಯಜ್ಞವೇ ಮೊದಲಾದ ಅಗ್ನಿಹೋತ್ರ ವೈಶ್ವದೇವಾದಿಗಳು ನಿತ್ಯಗಳಾದ ಕರ್ಮ ಗಳೇ, ಪ್ರತಿದಿನದಲ್ಲೂ ಮಾಡತಕ್ಕ ಆಜ್ಞಾ ಕೈಙ್ಕರ್ಯಗಳೇ ಎಂಬ ಭಾವವು **ತಥಾಪಿ**-ಹಾಗಾ ದರೂ, **ಜೀವನಾಧಿಕಾರ ಕಾಮಾಧಿಕಾರಯೋ ರಿವ**-ದೇಹಯಾತ್ರೆಯು ಉದ್ದಿಶ್ಯವಾದ ಅಧಿ ಕಾರ ಮತ್ತು ಭೋಗೋದ್ದಿಶ್ಯವಾದ ಅಧಿಕಾರ ಇವುಗಳೆರಡರಲ್ಲೂ ಇರುವ ವ್ಯತ್ಯಾಸದ ಹಾಗೆ **ಮೋಕ್ಷಾಧಿಕಾರೇಚ**-ಮೋಕ್ಷೋದ್ದೇಶ್ಯವಾದ ಅಧಿಕಾರದಲ್ಲೂ, **ವಿನಿಯೋಗ ಪೃಥಕ್ತ್ವೇನ**-

**ಪೃಥಕ್ತ್ವೇನ ಪರಿಹ್ರಿಯತೇ. ಮೋಕ್ಷವಿನಿಯೋಗಶ್ಚ** (೧) **"ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾ**

ಆ ನಿತ್ಯನೈಮಿತ್ತಿಕ ಕರ್ಮಗಳನ್ನು ಪ್ರಯೋಗಿಸುವ ರೀತಿಯ ವ್ಯತ್ಯಾಸದಿಂದ, ಅವುಗಳಿಂದುಂಟಾಗುವ ಫಲದಲ್ಲೂ ವ್ಯತ್ಯಾಸವೆಂಬದಾಗಿ, **ಪರಿಹ್ರಿಯತೇ**-ಒಂದೇವಿಧ ಕರ್ಮಾನುಷ್ಠಾನವು ಭಿನ್ನ ಫಲಗಳನ್ನು ಹೇಗೆ ಕೊಟ್ಟೀತೆಂಬ ಶಙ್ಕಾ, ಪರಿಹರಿಸಲ್ಪಡುತ್ತದೆ. ಒಂದೇ ಕರ್ಮವು ಐಹಿಕ ಜೀವನೋದ್ದೇಶ್ಯದಿಂದ ಮಾಡಿದರೆ ಆ ಫಲವನ್ನೂ, ಅಥವಾ ಅನ್ಯಕಾಮನಾಭಿಲಾಷೆಯಿಂದ ಮಾಡಿದರೆ ಅಂತಹ ಫಲವನ್ನೂ, ಹೇಗೆ ಬೇರೆ ಬೇರೆಯಾಗಿ ಕೊಡುತ್ತದೋ, ಹಾಗೆಯೇ ಮೋಕ್ಷಾಧಿಕಾರಿಗೂ ಕೂಡ ತ್ಯಾಗಸಂಸ್ಕಾರ ಮೂಲಕವಾಗಿ ಮೋಕ್ಷಕ್ಕೆ ಹೇತುವಾಗಿ ವ್ಯತ್ಯಸ್ತಫಲವನ್ನು ಕೊಡುವದರಲ್ಲೇನೂ ಸಂದೇಹವಿಲ್ಲವು. ವಿನಿಯೋಗವ್ಯತ್ಯಾಸದಿಂದ ಫಲದಲ್ಲಿ ವ್ಯತ್ಯಾಸವುಂಟಾಗುವದರಲ್ಲೇನೂ ಸಂದೇಹವಿಲ್ಲವೆಂಬ ಭಾವವು. ಕರ್ತೃತ್ವಾದಿ ತ್ಯಾಗಗಳಿಲ್ಲದೇ ಇರುವ ಅಸಂಸ್ಕಾರದಿಂದ **ಅನಿಷ್ಟ ಮಿಷ್ಟಂ ಮಿಶ್ರಂ** ಹೀಗೆ ಮೂರು ವಿಧ ಫಲಗಳೂ, ಕರ್ತೃತ್ವಾದಿ ತ್ಯಾಗಪೂರ್ವಕ ಪೃಥಗ್ವಿನಿಯೋಗ ರೂಪ ಸಂಸ್ಕಾರದಿಂದ ಮೋಕ್ಷಫಲಕ್ಕೆ ಸಾಧನವಾಗುವದೂ, ಸಮಂಜಸವಾದುದೇ ಎಂಬ ಭಾವವು; ಹಾಗೆ ನಿತ್ಯಾದಿ ಕರ್ಮಾನುಷ್ಠಾನವು ಮೋಕ್ಷರೂಪ ವಿನಿಯೋಗಕ್ಕೆ ಸಾಧನವೆಂದು ಹೇಗೆ ಹೇಳುತ್ತೀರಿ? ಎಂದರೆ ಅದಕ್ಕಾಗಿ ಶ್ರುತಿಪ್ರಮಾಣವನ್ನು ದಯಪಾಲಿಸುತ್ತಾರೆ.—**ಮೋಕ್ಷವಿನಿಯೋಗಶ್ಚ**-ಮೋಕ್ಷಕ್ಕೆ ಉಪಕಾರಕವೆಂಬುದಾದರೋ, "**ತಮೇತಂ ವೇದಾನುವಚನೇನ**" **ಇತ್ಯಾದಿಭಿಃ** ಎಂಬ ಬೃಹದಾರಣ್ಯಕವೇ ಮೊದಲಾದ ವಾಕ್ಯಗಳಿಂದ ವ್ಯಕ್ತಪಡುತ್ತವೆ. **ಇತಿ**-ಇದೀಗ ಶ್ಲೋಕಾಭಿಪ್ರಾಯವು. ಈ ಶ್ರುತಿವಾಕ್ಯಾಭಿಪ್ರಾಯಕ್ಕೆ ಹಿಂದೆ ೧೮-೭ನೆಯ ಶ್ಲೋಕವನ್ನು ಪರಾಂಬರಿಸಿ, ನಿತ್ಯನೈಮಿತ್ತಿಕಗಳು ಉಪಾಸನೆಗೆ ಅಙ್ಗವಾಗಿ, ಉಪಾಸನೆಗೆ ಪ್ರತಿಬಂಧಕ ಪಾಪಗಳನ್ನು ಹೋಗಲಾಡಿಸಿ ಆತ್ಮಾವಲೋಕನವನ್ನುಂಟುಮಾಡಿ, ಮೋಕ್ಷಕ್ಕೆ ಸಾಧನವೆಂದು ಹೇಳಲ್ಪಟ್ಟಿರುತ್ತದೆ. ಅವುಗಳನ್ನಾದರೆ ಫಲ ಸಙ್ಗಾದಿ ರಹಿತವಾಗಿ ಅನುಷ್ಠಿಸಿದರೆ ಮೋಕ್ಷಕ್ಕೆ ಸಹಕಾರಿಯು ಎಂಬ ತಾತ್ಪರ್ಯವು. ಆದರೆ "**ತಮೇವಂ ವಿದ್ವಾನಮೃತ ಇಹ ಭವತಿ, ನಾನ್ಯಃಪನ್ಥಾ ವಿದ್ಯತೇ ಅಯನಾಯ**" ಎಂದು (ಪುರುಷಸೂಕ್ತ) ನಿಯಮನವು ಇರುವದರಿಂದ ಉಪಾಸನವು ಮೋಕ್ಷಕ್ಕೆ ಸಾಧನವು, ಉಪಾಯವು; ಅದಲ್ಲದೆ ಇನ್ನು ಯಾವ ಉಪಾಯವೂ ಇಲ್ಲವು, ಎಂದು ವ್ಯಕ್ತವಾಗಿ ಹೇಳಿರುವದರಿಂದ, ಕರ್ಮವು ವ್ಯಾವರ್ತಿಸಲ್ಪಟ್ಟಿರುವಾಗ, ಅದರ ಅವಶ್ಯಕತೆ ಏನು? ಅದು ಬಂಧಕವಲ್ಲವು, ವಿನಿಯೋಗ ಭೇದದಿಂದ ಮೋಕ್ಷಕ್ಕೆ ಸಹಕಾರಿಯು ಎಂದು ಹೇಳುವದು ಹೇಗೆ ನ್ಯಾಯವು? ಎಂಬಾಕ್ಷೇಪದ ನಿರಸನಕ್ಕಾಗಿಯೇ "**ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ**" ಎಂಬ ಶ್ರುತಿವಾಕ್ಯವನ್ನು ಇಲ್ಲಿ ಉದಾಹರಿಸಿರುವದೆಂದು ಭಾವಿಸತಕ್ಕದ್ದು. ಆದುದರಿಂದ **ನಾನ್ಯಃ ಪನ್ಥಾಃ** ಎಂದು ಹೇಳಿರುವದರಭಿಪ್ರಾಯವೇನೆಂದರೆ ಈ ಯಜ್ಞದಾನತಪಸ್ಸುಗಳ ಸರಿಯಾದ ಅನುಷ್ಠಾನದ "**ದ್ವಾರೇಣ ಪರಂಪರಯಾ ಸಾಧನತ್ವಾನ್ಮೋಕ್ಷ ವಿನಿಯೋಗಃ**" ಎಂದು ಶ್ರೀ ದೇಶಿಕರವರು ಅಪ್ಪಣೆ ಕೊಡಿಸಿರುತ್ತಾರೆ. ಹಾಗಾದರೆ "ನಾನ್ಯಃ ಪನ್ಥಾಃ" ಎಂದು ಶ್ರುತಿಪ್ರಯೋಗದ ಅರ್ಥವೇನು ಎಂದರೆ —**ಅವ್ಯವಹಿತಸಾಧನ**ವನ್ನು ತಿಳಿಸುವ ಭಾವನೆಯಿಂದ, ಹಾಗೆ ಹೇಳಲ್ಪಟ್ಟಿತೆಂದು ಉಪದೇಶಿಸಿರುತ್ತಾರೆ. ಅರ್ಜುನನು ಅಧ್ಯಾಯಾದಿಯಲ್ಲಿ ಸನ್ನ್ಯಾಸತ್ಯಾಗ ಶಬ್ದಗಳು ಭಿನ್ನಾರ್ಥಗಳೇ ಅಥವಾ ಏಕಾರ್ಥವುಳ್ಳ ಪರ್ಯಾಯಪದಗಳೇ ಎಂಬ ಪ್ರಶ್ನೆಗೆ, ಹಿಂದೆ ಎರಡೂ ಒಂದೇ ಎಂದು ಹೇಳಿದಂಶವು **ಪುನಃ**ಇಲ್ಲಿ ಅನುವದಿಸಲ್ಪಡುತ್ತದೆಂಬ ಭಾವವು, ಈ ಶ್ಲೋಕದಲ್ಲಿ ವ್ಯಕ್ತಪಡುತ್ತದೆಂದು ಈ ಶ್ಲೋಕಭಾಷ್ಯವನ್ನು ನಿಗಮನಮಾಡಿ ಹೇಳುತ್ತಾರೆ.—**ತತ್**-ಆ ಕಾರಣದಿಂದ,

(೧) ಬೃಹ. ೬. ೪. ೨೨.

**ನಾಶಕೇನ" ಇತ್ಯಾದಿಭಿಃ-ಇತಿ. ತದೇವಂ ಕ್ರಿಯಮಾಣೇಷ್ವೇವ ಕರ್ಮಸು ಕರ್ತೃತ್ವಾದಿ ಪರಿತ್ಯಾಗ ಶ್ಶಾಸ್ತ್ರಸಿದ್ಧಸ್ಸನ್ನ್ಯಾಸಃ; ಸ ಏವ ಚ ತ್ಯಾಗ ಇತ್ಯುಕ್ತಃ.** ||೧೨||

ಯಾವ ಕಾರಣದಿಂದ ಎಂದರೆ, ಕರ್ಮಗಳನ್ನು ಸಂಪೂರ್ಣವಾಗಿ ಸ್ವರೂಪತ್ಯಾಗಮಾಡುವದು ವಿರುದ್ಧವಾದುದರಿಂದಲೂ, ಅನುಷ್ಠಿಸುವ ಪ್ರಕ್ರಿಯೆಯ ಪ್ರಕಾರ ಫಲಭೇದವಿರುವದರಿಂದಲೂ, ಕರ್ತೃತ್ವ ಮಮತಾಫಲ ತ್ಯಾಗಗಳ ಪೂರ್ವಕ ಅನುಷ್ಠಿಸದಿದ್ದರೆ ತಾಮಸಾನುಷ್ಠಾನವಾಗಿ ಬಂಧಕಗಳಾಗುವದರಿಂದಲೂ, **ಏವಂ ಕ್ರಿಯಮಾಣೇಷ್ವೇವ ಕರ್ಮಸು**-ಹೀಗೆ ನಿತ್ಯಾದಿ ಕರ್ಮಗಳನ್ನು ಅನುಷ್ಠಿಸಲೇಬೇಕೆಂಬುದು ಸ್ಥಾಪಿತವಾಗಿ ಅನುಷ್ಠಿಸಲ್ಪಡುವ ಕರ್ಮಗಳಲ್ಲಿ, **ಕರ್ತೃತ್ವಾದಿ ಪರಿತ್ಯಾಗಃ**-ಕರ್ತೃತ್ವ ಆದಿಶಬ್ದದಿಂದ ಸಙ್ಗಫಲಗಳು ಈ ಮೂರರ ಪರಿತ್ಯಾಗವು, **ಶಾಸ್ತ್ರಸಿದ್ಧ ಸನ್ನ್ಯಾಸಃ**-ಶಾಸ್ತ್ರದಲ್ಲಿ ವಿಹಿತವಾದ ಸನ್ನ್ಯಾಸವು; **ಸ ಏವ ತ್ಯಾಗ ಇತ್ಯುಕ್ತಃ**-ಅದೇ ತ್ಯಾಗವೆಂದೂ ಹೇಳಲ್ಪಟ್ಟಿರುತ್ತದೆ. ಇದರಿಂದ ವಿಹಿತಕರ್ಮಗಳ ಸ್ವರೂಪತಃ ಪರಿತ್ಯಾಗವು ಅವೈದಿಕವೆಂದು, ಎಂದರೆ ಶಾಸ್ತ್ರಸಮ್ಮತವಲ್ಲದ ವಿಷಯವೆಂದು ಹೇಳದಂತಾಯಿತು. **ಭವತ್ಯ ತ್ಯಾಗಿನಾಂ ಪ್ರೇತ್ಯ** ಎಂದು ಮೂಲದಲ್ಲಿ ಹೇಳಿ, ಮುಂದೆ ತ್ಯಾಗಿಗಳ ವಿಷಯವನ್ನು ಹೇಳುವದಕ್ಕೆ ಹೊರಟು, **ತ್ಯಾಗಿನಾಂ** ಎಂದು ಹೇಳದೆ, **ನತು ಸನ್ನ್ಯಾಸಿನಾಂ ಕ್ವಚಿತ್** ಎಂದು **ತ್ಯಾಗಿನಾಂ** ಎಂಬುದಕ್ಕೆ ಬದಲಾಗಿ **ಸನ್ನ್ಯಾಸಿನಾಂ** ಎಂಬ ಪ್ರಯೋಗವಿರುವದರಿಂದ ಎರಡೂ ಸಮಾನಾರ್ಥಕಗಳು ಎಂಬುದು ಸಿದ್ಧವೆಂಬ ಭಾವವು ; ಆದದರಿಂದ **ಸ ಏವ ತ್ಯಾಗಃ**-ಸನ್ನ್ಯಾಸವೇ ತ್ಯಾಗವೆಂದು ಮುಗಿಸಿರುತ್ತಾರೆ. ಈ ಶ್ಲೋಕದಿಂದ ಒಂದು ಪೂರ್ವಪಕ್ಷವು ಉಂಟಾಗುತ್ತದೇನೆಂದರೆ—ಅಮುಮುಕ್ಷುವಿಗೆ ಕರ್ಮಗಳು ಅನಿಷ್ಟ, ಇಷ್ಟ, ಮಿಶ್ರಫಲಗಳನ್ನು ಕೊಡುತ್ತವೆಂದೂ, ಮುಮುಕ್ಷುವು ತ್ಯಾಗಿಯಾದುದರಿಂದ ಅಂತಹ ಫಲವು ಉಂಟಾಗುವದಿಲ್ಲವೆಂದೂ, ಹೇಳಿದರೆ, ಮುಮುಕ್ಷುವು ಸಂಗದಿಂದ ಅನಿಷ್ಟಫಲವನ್ನು ಕೊಡುವ ಕರ್ಮವನ್ನು ಮಾಡಬಹುದೇ ? ಹಾಗೆ ಅನಿಷ್ಟಫಲವನ್ನು ಕೊಡುವ ಕರ್ಮವನ್ನು ಫಲ ಮಮತಾದಿಗಳನ್ನು ತೊರೆದು ಮಾಡಬಹುದೇ ಎಂಬ ಸಂದೇಹವು ಉಂಟಾಗಬಹುದು. ಇದಕ್ಕೆ ಸಮಾಧಾನ ಹೇಗೆಂದರೆ ಪೂರ್ವಾರ್ಧದಲ್ಲಿ ಅಮುಮುಕ್ಷುವಿನ ವಿಷಯ ಹೇಳಬೇಕಾಗಿ ಬಂದುದರಿಂದ ಮೂರನ್ನೂ ಹೇಳಿದರು. ಉತ್ತರಾರ್ಧದಲ್ಲಿ ಮುಮುಕ್ಷುವಾದವನಿಗೆ ಅನಿಷ್ಟದಲ್ಲಿ ಪ್ರವೃತ್ತಿಯೇ ಇಲ್ಲವು. ಐಹಿಕಗಳಾದ ಇಷ್ಟಮಿಶ್ರಗಳಲ್ಲಿ ವೈರಾಗ್ಯವಿರುವದರಿಂದ, ಈ ಮೂರರ ವಿಭಾಗವೇ ಆತನಲ್ಲಿಲ್ಲವೆಂಬ ಭಾವವನ್ನು ಮುಖ್ಯವಾಗಿ ಗ್ರಹಿಸತಕ್ಕದ್ದಾಗಿರುತ್ತದೆ. ಹಾಗಲ್ಲದೆ ಮೋಕ್ಷಾರ್ಥಿಯಾದ ಪ್ರಪನ್ನನೂ ಅನಿಷ್ಟಾದಿಗಳನ್ನು ಕೊಡುವ ಕರ್ಮಗಳನ್ನು ಮಾಡಿದರೂ, ತ್ಯಾಗದಿಂದ ಅವು ಲೇಪಿಸುವದಿಲ್ಲವೆಂಬ ಅಶಾಸ್ತ್ರೀಯವಾದ ಅಭಿಪ್ರಾಯಕ್ಕೆ ಹೇತುವಾಗುತ್ತದೆ. ಆದುದರಿಂದ ಮೋಕ್ಷಾರ್ಥಿಯು ವಿಹಿತಕರ್ಮಗಳನ್ನು ಮಾತ್ರವೇ ಅನುಷ್ಠಿಸುವ ತ್ಯಾಗಿಯೆಂದು ತಿಳಿಯತಕ್ಕದ್ದು.

**ಭಾಷ್ಯಾವತಾರಿಕೆಯ ಅರ್ಥವು**—ಪರಮಪುರುಷನಿಗೇನೇ ಪ್ರಧಾನ ಕರ್ತೃತ್ವವೂ, ಆತನೇ ಸರ್ವಶೇಷಿಯಾಗಿ, ಲೀಲಾವಿಭೂತಿಯು ಆತನಿಗೆ ಭೋಗ್ಯವಾಗಿ, ತಾನೇ ಪ್ರಧಾನ ಫಲಿಯಾಗಿ, ಇರುವುದರಿಂದ ಕರ್ತೃತ್ವ ಮಮತಾಫಲ ತ್ಯಾಗವು ವಿಧಿಸಲ್ಪಟ್ಟಿರುತ್ತದೆ ಎಂದು ಮುಂದಿನ ಮೂರು ಶ್ಲೋಕಗಳಿಗೂ ಹಿಂದಿನ ಶ್ಲೋಕಗಳಿಗೂ ಸಙ್ಗತಿಯನ್ನು ತೋರಿಸುವದಕ್ಕಾಗಿ ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಹಿಂದೆ ಹೇಳಿದುದು ಏನೆಂದರೆ—ಅರ್ಜುನನು ತ್ಯಾಗ ಸನ್ನ್ಯಾಸ ಶಬ್ದಗಳು ಭಿನ್ನಾರ್ಥಕಗಳೇ ಎಂದು ಕೇಳಿದುದಕ್ಕೆ ಅವುಗಳು ಸಮಾನಾರ್ಥಕಗಳು ಎಂದು ಹೇಳಿ ಅವೆರಡರ ಅರ್ಥವೂ ಒಂದೇಯಾಗಿ ಕರ್ತೃತ್ವ ಫಲ ತ್ಯಾಗ ಪೂರ್ವಕಗಳೆಂದು ಹೇಳಿ, ಆ ಮೂಲಕವಾಗಿ ಆ ಕರ್ಮದಲ್ಲಿ ತಾನು ಮಾಡಿದೆನೆಂಬ

**ಭಾ. ಅವ.** ಇದಾನೀಂ ಭಗವತಿ ಪುರುಷೋತ್ತಮೇ ಅನ್ತರ್ಯಾಮಿಣಿ ಕರ್ತೃತ್ವಾನುಸಂಧಾನೇನ ಆತ್ಮನ್ಯ ಕರ್ತೃತ್ವಾನುಸಂಧಾನ ಪ್ರಕಾರವಮಾಹ; ತತ ಏವ ಫಲಕರ್ಮಣೋರಪಿ ಮಮತಾ ಪರಿತ್ಯಾಗೋ ಭವತೀತಿ;—ಪರಮಪುರುಷೋಹಿ ಸ್ವಕೀಯೇನ ಜೀವಾತ್ಮನಾ ಸ್ವಕೀಯೈಶ್ಚ ಕರಣಕಲೇಬರಪ್ರಾಣೈಃ ಸ್ವಲೀಲಾ

---

ಮಮತಾ ಕಳೆಯುತ್ತದೆಂದೂ, ಹೀಗೆ ಈ ಮೂರನ್ನೂ ಮುಮುಕ್ಷುವು ತ್ಯಾಗಮಾಡುವದೇ ಕರ್ಮಸನ್ನ್ಯಾಸ, ಕರ್ಮತ್ಯಾಗ ಶಬ್ದಗಳಿಂದ ಹೇಳಲ್ಪಟ್ಟಿತೆಂದು ಉಪದೇಶಿಸುತ್ತಾರೆ.--**ಇದಾನೀಂ**-ಈಗಲಾದರೋ ಎಂದರೆ ಮುಂದಿನ ಮೂರು ಶ್ಲೋಕಗಳ ಮೂಲಕವಾಗಿ, **ಭಗವತಿ**-ಹೇಯ ಪ್ರತ್ಯನೀಕನಾಗಿ ಕಲ್ಯಾಣಗುಣಾಕರನಾಗಿ, **ಅನ್ತರ್ಯಾಮಿಣಿ**-ನಮಗೆ ಪ್ರೇರಕನಾಗಿ ಅಂತರ್ಯಾಮಿಯಾಗಿ ಹೃದಯಗುಹೆಯಲ್ಲಿರುವ, **ಪುರುಷೋತ್ತಮನಲ್ಲಿ, ಕರ್ತೃತ್ವ ಅನುಸಂಧಾನೇನ**-ವಾಸ್ತವವಾಗಿಯೂ ಕರ್ತೃತ್ವ ಉಂಟೆಂಬ ಅನುಸಂಧಾನದಿಂದ, **ಆತ್ಮನಿ**-ಜೀವಾತ್ಮನಲ್ಲಿ, **ಅಕರ್ತೃತ್ವಾನುಸಂಧಾನಪ್ರಕಾರಂ**-ಪೂರಾ ಕರ್ತೃತ್ವವಿಲ್ಲವೆಂಬ ಅನುಸಂಧಾನ ಮಾಡುವ ರೀತಿಯನ್ನು **ಆಹ**-ಹೇಳುತ್ತಾರೆ. ಇಲ್ಲಿ **ಇದಾನೀಂ**-ಈಗಲಾದರೋ ಎಂಬುದರಿಂದ ಹಿಂದೆಯಾದರೋ, ಅರ್ಜುನನ ಪ್ರಶ್ನೆಗೆ ತ್ಯಾಗ ಸನ್ನ್ಯಾಸ ಎರಡೂ ಸಮಾನಾರ್ಥಕಗಳಾಗಿ ಎರಡರಿಂದಲೂ ಕರ್ತೃತ್ವ ಮಮತಾಫಲಗಳ ತ್ಯಾಗವೆಂದು ಸಮಾಧಾನವನ್ನು ಹೇಳಿದನಂತರ ಈಗಲಾದರೋ, ಎಂಬರ್ಥವು. **ತತ ಏವ**-ಆ ಕಾರಣದಿಂದಲೇ ಎಂದರೆ ಯಾವಾಗ ಕರ್ತೃತ್ವವಿಲ್ಲವೋ, ಆ ಕಾರಣದಿಂದಲೇ **ಫಲಕರ್ಮಣೋರಪಿ**-ಫಲ ಮತ್ತು ಕರ್ಮಗಳೆರಡರಲ್ಲೂ ಕೂಡ, **ಮಮತಾ ಪರಿತ್ಯಾಗೋ ಭವತೀತಿ**-ಮಮತಾಪರಿತ್ಯಾಗವು ಸ್ವತ ಏವ ಉಂಟಾಗುತ್ತದೆಂದೂ **ಆಹ**-ಹೇಳುತ್ತಾರೆ. ಇಲ್ಲಿ **ಇತಿ** ಎಂಬ ಪದವು ಹೇತ್ವರ್ಥದಲ್ಲಿ ಉಪಯೋಗಿಸಲ್ಪಟ್ಟಿರುತ್ತದೆ. ಈ ಮೂರರಲ್ಲೂ ಒಂದೊಂದರ ತ್ಯಾಗಪ್ರಕಾರವನ್ನೂ ಮುಂದೆ ಹೇಳುತ್ತಾರೆಂಬುದೇ ಸಂಗತಿಯು. ಈ ಮುಂದಿನ ಶ್ಲೋಕದಲ್ಲಾದರೋ, ಕರ್ತೃತ್ವತ್ಯಾಗಪ್ರಕಾರವು ಹೇಳಲ್ಪಡುತ್ತದೆ. ಅದು ಹೇಗೆ ಎಂಬುದನ್ನು ಮುಂದಿನ ವಾಕ್ಯದಿಂದ ವ್ಯಕ್ತಪಡಿಸುತ್ತಾರೆ. ಯಜ್ಞಾದಿಗಳಲ್ಲಿ ಋತ್ವಿಕ್ಕೇ ಮೊದಲಾದವರಿಗೂ ಕರ್ತೃತ್ವವಿದ್ದರೂ, ಫಲಕ್ಕೆ ಮಾತ್ರ ಯಜಮಾನನೇ ಆಗಿರುವದನ್ನು ಕಂಡಿರುವೆವು. ಹಾಗೆಯೇ ಈ ಜೀವಾತ್ಮನಿಗೇ ಫಲವಲ್ಲದೆ ಪರಮಪುರುಷನಿಗೆ ಫಲ ಹೇಗೆ? ಎಂದರೆ ಅದಕ್ಕೆ ಮುಂದಿನ ವಾಕ್ಯದಿಂದ ಸಮಾಧಾನವನ್ನು ಹೇಳುತ್ತಾರೆ ಯಜಮಾನಸ್ಥಾನದಲ್ಲಿ ಪರಮಪುರುಷನೇ, ಋತ್ವಿಗಾದಿಸ್ಥಾನಗಳಲ್ಲಿ ಜೀವಾತ್ಮರೆಂದು ಭಾವಿಸಿದರೆ ಪರಮಪುರುಷ ಕರ್ತೃತ್ವವು ವ್ಯಕ್ತಪಡುತ್ತದೆ. **ಪರಮಪುರುಷೋಹಿ**-ಪರಮಪುರುಷನಾದರೋ, **ಸ್ವಕೀಯೇನ ಜೀವಾತ್ಮನಾ**-ತನ್ನವನಾದ ಎಂದರೆ ತನಗೆ ಶೇಷಭೂತನಾದ ಜೀವಾತ್ಮನಿಂದ, **ಸ್ವಕೀಯೈಶ್ಚ**-ತನಗೆ ಶೇಷಭೂತನಾದ, **ಕರಣಕಲೇಬರಪ್ರಾಣೈಃ**-ಇಂದ್ರಿಯ ಶರೀರಪ್ರಾಣಗಳಿಂದ, **ಸ್ವಲೀಲಾಪ್ರಯೋಜನಾಯ**-ತನ್ನ ಲೀಲಾ ಪ್ರಯೋಜನಕ್ಕಾಗಿಯೇ, **ಕರ್ಮಾಣಿ**-ಕರ್ಮಗಳನ್ನು, **ಆರಭತೇ**-ಆರಂಭಿಸುತ್ತಾನೆ. ಇಲ್ಲಿ **ಹಿ** ಶಬ್ದವು, ಈ ಜಗತ್ತು ಪರಮಪುರುಷನಿಗೆ ಲೀಲಾವಿಭೂತಿ ಎಂಬುದರ ಪ್ರಮಾಣಪ್ರಸಿದ್ಧಿಯನ್ನು ಸೂಚಿಸುತ್ತದೆ. **“ಸ್ವಕೀಯೈಃ ಕರಣಕಲೇಬರಪ್ರಾಣೈಃ”** ಎಂಬ ಪ್ರಯೋಗವು **“ಕರಣಾಧಿಪೋಧಿಪಃ”** (　　) ಎಂಬ ಶ್ರುತ್ಯನುಸಾರವಾಗಿ ಮಾಡಿದುದಾಗಿರುತ್ತದೆ. **ಕರಣಾಧಿಪನು** ಇಂದ್ರಿಯಗಳಿಗೆ ಅಧಿಪನಾದ ಜೀವಾತ್ಮನು, ಆ ಜೀವಾತ್ಮನಿಗೂ ಅಧಿಪನು ಪರಮಾತ್ಮನು ಎಂಬರ್ಥವು. ಪರಮಪುರುಷನಿಗೆ ಜೀವಾತ್ಮನೂ ಸ್ವತ್ತು; ಆ ಜೀವಾತ್ಮನಿಗೆ ಸಂಬಂಧಪಟ್ಟ ಶರೀರೇಂದ್ರಿಯಾದಿಗಳೂ ಸಹ ಆತನ ಸ್ವತ್ತೇ. ಹೀಗೆ ಅವುಗಳ ಮೂಲಕ ಜೀವಾತ್ಮರುಗಳ ಪೂರ್ವ ಕರ್ಮಾನುಸಾರ, ಅವರುಗಳಿಗೆ ಸರ್ವೇಶ್ವರನೇ ತನ್ನ ಲೀಲಾರಸಾನುಭವಕ್ಕಾಗಿ ಕರಣಕಳೇಬರಗಳನ್ನು ಕೊಟ್ಟು ಕೆಲಸಮಾಡಿಸುತ್ತಾನೆಂಬ ಭಾವವು. ಆದರೆ ಇಲ್ಲಿ ಒಂದು ಶಂಕೆ ಉಂಟಾಗ

**ಪ್ರಯೋಜನಾಯ ಕರ್ಮಾಣ್ಯಾರಭತೇ ; ಅತೋ ಜೀವಾತ್ಮಗತಂ ಕ್ಷುನ್ನಿವೃತ್ತ್ಯಾದಿಕಮಪಿ ಫಲಂ, ತತ್ಸಾಧನ ಭೂತಂಚ ಕರ್ಮ, ಪರಮಪುರುಷಸ್ಯೈವ—**

---

ಬಹುದು ಏನೆಂದರೆ—ಶಾಸ್ತ್ರೀಯ ಕರ್ಮಗಳೆಲ್ಲಾ ಪರಮಪುರುಷಾರಾಧನರೂಪವಾದುವೆಂದು ಶಾಸ್ತ್ರಗಳಲ್ಲಿ ಹೇಳಿರುವದರಿಂದ, ಅಂತಹ ಕರ್ಮಗಳಲ್ಲಿ ಕರ್ತೃತ್ವವೂ ಫಲವೂ ಪರಮಪುರುಷನದೇ ಎಂಬ ಅನುಸಂಧಾನವೇನೋ ಯುಕ್ತವು. ಲೌಕಿಕ ಕರ್ಮಗಳಲ್ಲಾದರೋ ಹಾಗೆ ತೋರುವದಿಲ್ಲ ವಲ್ಲಾ ; ಏಕೆಂದರೆ ಊಟಮಾಡಿದರೆ, ಅದನ್ನು ಮಾಡುವನೂ ತನ್ನ ಶರೀರ ಮೂಲಕವಾಗಿ ಜೀವಾತ್ಮನೇ, ಅದರಿಂದ ತೃಪ್ತಿಹೊಂದುವನೂ ಜೀವಾತ್ಮನೇ ; ಹೀಗಿರುವಾಗ ಲೌಕಿಕ ಕರ್ಮಗಳೂ ತತ್ಫಲಗಳೂ ಪರಮಾತ್ಮನಿಗೆ ಸಂಬಂಧಿಸಿದುವು ಹೇಗೆ? ಎಂಬ ಶಙ್ಕಾ ಸಮಾಧಾನವಾಗಿ ಮುಂದಿನ ವಾಕ್ಯವನ್ನು **ಅತಃ** ಎಂದಾರಂಭಿಸಿ ಹೇಳುತ್ತಾರೆ:—**ಅತಃ**-ಆ ಕಾರಣದಿಂದ, **ಜೀವಾತ್ಮಗತಂ**-ಜೀವಾತ್ಮನನ್ನು ಹೊಂದಿದ, **ಕ್ಷುನ್ನಿವೃತ್ತ್ಯಾದಿಕಮಪಿಫಲಂ**-ಹಸಿವು ಮೊದಲಾದವುಗಳ ನಿವೃತ್ತಿರೂಪವಾಗಿರುವ ಫಲವೂ ಕೂಡ, **ತತ್ಸಾಧನಂಚಕರ್ಮ**-ಅಂತವುಗಳನ್ನೆಲ್ಲಾ ಸಾಧಿಸಿಕೊಡುವ ಕರ್ಮವೂ ಸಹ, **ಪರಮಪುರುಷಸ್ಯೈವ**-ಪರಮಪುರುಷನದೇ, ಎಂದರೆ ಪರಮಪುರುಷನಿಗೆ ಚೇತನನ ಸರ್ವಕರ್ಮಗಳೂ ಲೀಲಾರಸವನ್ನುಂಟುಮಾಡುವವುಗಳಾಗಿ ತನ್ಮೂಲಕ ಆತನು ಆನಂದಿಸುವನು ಎಂಬ ಭಾವವು. ಪುತ್ರನನ್ನು ನಿಯಮಿಸಿ ಒಳ್ಳೇ ಕೆಲಸಗಳನ್ನು ಮಾಡುವ ಹಾಗೆ ಮಾಡಿ, ಸಕಾಲದಲ್ಲಿ ಮೃಷ್ಟಾನ್ನ ಮೊದಲಾದವುಗಳನ್ನು ಭುಜಿಸುವ ಹಾಗೆ ಮಾಡಿ, ತಂದೆಯು ಹೇಗೆ ಆನಂದಿಸುವನೋ, ಹಾಗೆಯೇ ಎಂಬ ತಾತ್ಪರ್ಯವು. **ಜೀವಾತ್ಮಗತಂ** ಎಂಬುದರಿಂದ ಜೀವಾತ್ಮನು **"ಸ್ವತ್ವಮಾತ್ಮನಿಸಂಜಾತಂ ಸ್ವಾಮಿತ್ವಂ ಬ್ರಹ್ಮಣಿಸ್ಥಿತಂ"** ಎಂಬ ಪ್ರಮಾಣಾನುಸಾರವಾಗಿ, ಪರಮಾತ್ಮನ ಸ್ವತ್ತಾಗಿ, ಪುತ್ರ, ದಾಸ ಇತ್ಯಾದಿ ರೂಪದಲ್ಲಿರುವದರಿಂದ, ಜೀವಾತ್ಮನನ್ನು ಹೊಂದಿದ ತನಗೆ ಇಷ್ಟವಾದ ವ್ಯಾಪಾರಗಳಿಂದ ಆನಂದಿಸುವನು ಎಂಬ ಭಾವದಿಂದ **ಜೀವಾತ್ಮ ಗತಂ ಫಲಂ, ತತ್ಸಾಧನಭೂತಂಚ ಕರ್ಮ, ಪರಮಪುರುಷಸ್ಯೇವ** ಎಂಬ ವ್ಯಾಖ್ಯಾನವು. ರಾಜನಿಗೆ ಶುಕವು, ಒಳ್ಳೇ ರಸಬಾಳೇ ಹಣ್ಣು ಹಾಲು ಮುಂತಾದ್ದನ್ನು ತಿಂದರೆ ಹೇಗೆ ಆನಂದವೋ ಹಾಗೆ ಎಂಬ ಭಾವವು. ಆದರೆ ಕರ್ಮಗಳು ಧರ್ಮದಲ್ಲೇ ಪ್ರತಿಷ್ಠಿತಗಳಾಗಿದ್ದರೆ ಆನಂದಿಸುವನು. ಅಧರ್ಮಗಳಾಗಿದ್ದರೆ ಪರಿತಾಪ ಪಡುವನು. ಸರ್ವೇಶ್ವರನು ಲೀಲಾರಸವನ್ನನುಭವಿಸಿ ಆನಂದಿಸುವನೆಂಬುದಕ್ಕೆ **"ಭೋಗ್ಯಂ ಮುಕುನ್ದ ಗುಣಭೇದ ಮಚೇತನೇಷು । ಭೋಕ್ತೃತ್ವಮಾತ್ಮನಿ ನಿವೇಶ್ಯ ನಿಜೇಚ್ಛಯೈವ । ಪಾಂಚಾಲಿಕಾ ಶುಕ ವಿಭೂಷಣ ಭೋಗದಾಯೀ । ಸಮ್ರಾಡಿವಾ ತ್ಮಸಮಯಾ ಸಹ ಮೋದಸೇ ತ್ವಮ್"** (ಶರಣಾಗತಿ ದೀಪಿಕಾ. ೧೧) ಎಂಬ ಶ್ಲೋಕವು ಅನುಸನ್ಧೇಯವು. ಮುಕ್ತಿದಾಯಕನಾದ ಮುಕುಂದನು ನಾನಾವಿಧ ಭೋಗ್ಯಭಾವವನ್ನೂ ತನ್ನ ಸಙ್ಕಲ್ಪಮಾತ್ರದಿಂದ ಅಚೇತನದ್ರವ್ಯದಲ್ಲಿಟ್ಟು, ಭೋಕ್ತೃತ್ವವನ್ನು ಹಾಗೆಯೇ ತನಗೆ ಶೇಷಭೂತನಾದ ಆತ್ಮನಲ್ಲಿಟ್ಟು, ತಾನು ಪರಿಪೂರ್ಣ ಕಾಮನಾದುದರಿಂದ, ಸಕಲ ಕೋರಿಕೆಯನ್ನೂ ಹೊಂದಿದ ರಾಜನು ಹೇಗೆ ಒಂದು ಸುಂದರವಾದ ಬೊಂಬೆಗೆ ನಾನಾವಿಧ ಆಭರಣಗಳನ್ನಿಟ್ಟು, ಮತ್ತು ಸುಂದರವಾದ ಗಿಳಿಗೆ ತುಂಬಾ ಇಷ್ಟವಾದ ಹಣ್ಣುಹಂಪಲು ಹಾಲು ಮೊದಲಾದವುಗಳನ್ನು ಕೊಟ್ಟು, ತಾನು ಹೇಗೆ ಆನಂದ ಪಡುವನೋ, ಹಾಗೆಯೇ ಲಕ್ಷ್ಮೀಸಮೇತನಾಗಿ ಇದನ್ನೆಲ್ಲಾ ನೋಡಿ, **ಲೋಕವತ್ತು ಲೀಲಾ ಕೈವಲ್ಯಂ** ಎಂಬ ಶಾರೀರಕ ಸೂತ್ರದಲ್ಲಿ ಹೇಳಿರುವ ಹಾಗೆ, ಸರ್ವೇಶ್ವರನು ಆನಂದಿಸುವನು. ಈ ಜಗತ್ತೆಲ್ಲಾ ಆತನಿಗೆ ಲೀಲಾವಿಭೂತಿಯಾಗಿ ಇದರಲ್ಲಿ ಆತನಿಗೆ ಲೀಲೆಯೇ ಪ್ರಯೋಜನವೆಂಬುದಕ್ಕೆ ಗೀತಾವತಾರಿಕೆಯ ೧೭ನೆಯ ಪುಟದಲ್ಲಿನ ಪ್ರಮಾಣಗಳನ್ನು ಪರಾಂಬರಿಸಿ. ಈ ಚೇತನನ ಪ್ರವೃತ್ತಿಗಳು ಸದ್ವ್ಯಾಪಾರಗಳಾಗಿದ್ದರೆ, ಪುತ್ರನ ಸುಚರಿತಗಳಿಂದ ಪಿತಾ ಸಂತೋಷಿಸುವ ಹಾಗೆ ಆನಂದ ಪಡುವನು ; ಪುತ್ರನ

**ಮೂ. ಪಞ್ಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾನ್ತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥೧೩॥**

ದುರ್ವೃತ್ತಗಳಿಂದ ಪರಿತಾಪ ಪಡುವ ಹಾಗೆ ಪರಿತಾಪ ಪಡುವನು. ಮಹರ್ಷಿಯು ಈ ಅಭಿಪ್ರಾಯವನ್ನೇ, " **ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ । ಉತ್ಸವೇಷು ಚ ಸರ್ವೇಷು ಪಿತೇವ ಪರಿತುಷ್ಯತಿ** " (ರಾಮಾ. ಅಯೋಧ್ಯಾ. ೨. ೪೦) ಎಂಬಲ್ಲಿ ವ್ಯಕ್ತಪಡಿಸಿರುತ್ತಾರೆ. ಹೀಗೆ ಜೀವಾತ್ಮನೂ ಜೀವಾತ್ಮನ ಶರೀರೇಂದ್ರಿಯಗಳೂ ಎಲ್ಲಾ ಪರಮಾತ್ಮನ ಶರೀರವೇ; ಆದುದರಿಂದ " **ಸ್ವಕೀಯೇನ ಜೀವಾತ್ಮನಾ ಸ್ವಕೀಯೈಶ್ಚ ಕರಣಕಲೇಬರಪ್ರಾಣೈಃ** " ಎಂಬ ಪ್ರಯೋಗವು. ಈ ಅಭಿಪ್ರಾಯವು ಹಿಂದೆ ಗೀತೆಯಲ್ಲೇ " **ಅಹಙ್ಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ । ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇಪರಾಮ್ । ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್** " ಎಂದು ಉಪಪಾದಿತವಾಗಿರುವದರಿಂದ **ಸ್ವಕೀಯೇನ ಜೀವಾತ್ಮನಾ ಸ್ವಕೀಯೈಶ್ಚ ಕರಣಕಲೇಬರಪ್ರಾಣೈಃ** ಎಂದು ಪ್ರಯೋಗವು. ಹಾಗೆಯೇ ಭಾರತದ ಸಭಾಪರ್ವದಲ್ಲಿ (೪೧-೨೩) "**ಕೃಷ್ಣ ಏವ ಹಿ ಲೋಕಾನಾ ಮುತ್ಪತ್ತಿ ರಪಿ ಚಾಪ್ಯಯಃ । ಕೃಷ್ಣಸ್ಯ ಹಿ ಕೃತೇ ಭೂತ ಮಿದಂ ವಿಶ್ವಂ ಚರಾಚರಮ್** " ಸಮಸ್ತ ವಿಶ್ವವೂ ಶ್ರೀ ಕೃಷ್ಣನದೇ, ಆದುದರಿಂದ ಆತನೇ ಸರ್ವಶೇಷಿಯು, ಪ್ರಧಾನಫಲಿಯೂ ಎಂಬುದು ವ್ಯಕ್ತವು. **ಭಗವತಿ ಪುರುಷೋತ್ತಮೇ** ಎಂದು ಹೇಳಿರುವದು ಹೀಗೆ ಚಿದಚಿತ್ತುಗಳೊಂದಿಗೆ ಸೇರಿ, ವ್ಯಾಪಿಸಿ, ಚಿತ್ತಿಗೆ ಅಂತರ್ಯಾಮಿಯಾಗಿ ಆತನ ವ್ಯಾಪಾರಗಳಿಗೆಲ್ಲಾ ಪ್ರೇರಕನಾಗಿದ್ದರೂ, ತತ್ಸಂಬಂಧದಿಂದ ಪುರುಷೋತ್ತಮನಿಗೆ ಹೇಯ ಗಂಧವು ಸ್ವಲ್ಪವೂ ಇಲ್ಲವೆಂದು ಹೇಳಿ, ತಮ್ಮ ಸಿದ್ಧಾಂತಕ್ಕೆ ಅವಿದ್ಯಾದಿ ಗೃಹೀತ ದೋಷವೇನೂ ಇಲ್ಲವೆಂದು ತೋರ್ಪಡಿಸುವದಕ್ಕಾಗಿ ಹಾಗೆ ಪ್ರಯೋಗವು. ಆತ್ಮನ ಅಕರ್ತೃತ್ವಾನು ಸಂಧಾನವು ಮೂರನೆಯ ಅಧ್ಯಾಯದಲ್ಲೇ ಹೇಳಲ್ಪಟ್ಟಿದ್ದರೂ, ಇಲ್ಲಿ **ಆತ್ಮನ್ಯ ಕರ್ತೃತ್ವಾನುಸಂಧಾನ ಪ್ರಕಾರ ಮಾಹ** ಎಂದು ಹೇಳಿರುವದರ ಆಶಯವೇನೆಂದರೆ—ಅಲ್ಲಿ ಹೇಳಿದುದು ತನಗೆ ಅಕರ್ತೃತ್ವಾನುಸಂಧಾನವಿರಬೇಕು ಎಂದೂ, ಆ ಕರ್ಮಗಳನ್ನೆಲ್ಲಾ ಪರಮಪುರುಷನಲ್ಲಿ ಸಮರ್ಪಿಸತಕ್ಕದ್ದು ಎಂದು ಇಷ್ಟುಮಾತ್ರವೇ ಹೇಳಲ್ಪಟ್ಟಿತು. (೩೦) ಆದರೆ ಹಾಗೆ ಅನುಸಂಧಾನಕ್ಕೆ ಕಾರಣವೇನು ? ಯಥಾವತ್ತಾದ ಅನುಸಂಧಾನವೇ ? ಇಲ್ಲವೇ ಸುಮ್ಮನೆ ಹಾಗೆ ಭಾವಿಸತಕ್ಕದ್ದೇ ? ಎಂಬ ಶಙ್ಕೆಗಳಿಗೆ ಉತ್ತರವಾಗಿ, ಅಂತಹ ಅನುಸಂಧಾನವು ಸಹೇತುವಾಗಿ, ಯಥಾವತ್ತಾಗಿ ಇರುವ ವಿಷಯದ ಅನುಸಂಧಾನವೇ ಎಂದು ತಿಳಿಸುವದಕ್ಕಾಗಿಯೇ, **ಅನುಸಂಧಾನ ಪ್ರಕಾರಮಾಹ** ಎಂಬ ಪ್ರಯೋಗವು. ಈಗ ಕರ್ಮಾನುಷ್ಠಾನಗಳಲ್ಲಿ ಮೂರರ ತ್ಯಾಗಗಳಲ್ಲಿ ಮುಖ್ಯವಾದುದು ಕರ್ತೃತ್ವತ್ಯಾಗವು, ಇದರ ಶೋಧನವು ಹೇಗೆ ಎಂಬುದೇ ಈ ಮುಂದಿನ ಶ್ಲೋಕಗಳಿಗೆ ಸಙ್ಗತಿಯು. ಇಂತಹ ಸಾತ್ವಿಕತ್ಯಾಗದ ಅನುಸಂಧಾನವು ಯಾವಾಗ ಸ್ಥಾಪಿತವೋ, ಅದರೊಂದಿಗೇನೇ ಮಮತಾಫಲಗಳ ತ್ಯಾಗವೂ ಪ್ರಾಪ್ತವಾದುದೇ ಎಂಬ ಭಾವದಿಂದ, **ತತ ಏವ** ಎಂಬ ಪ್ರಯೋಗವು. **ಸ್ವಲೀಲಾ ಪ್ರಯೋಜನಾಯ** ಎಂಬುದಕ್ಕೆ **ಸ್ವಲೀಲಾದಿ ಪ್ರಯೋಜನಾಯ** ಎಂಬ ಪಾಠಾಂತರವು ಉಂಟೆಂದೂ, ಆದಿಶಬ್ದದಿಂದ ಕಾರುಣ್ಯಾದಿಗಳೇ ಮೂಲಕಾರಣವಾಗಿವುಳ್ಳ ಭಕ್ತರಕ್ಷಣಾದಿಗಳು ಸಙ್ಗ್ರಹಿಸಲ್ಪಟ್ಟವೆಂದೂ ಶ್ರೀ ದೇಶಿಕರವರು ಅಪ್ಪಣೆ ಕೊಡಿಸಿರುತ್ತಾರೆ.

**ಮೂಲಕ್ಕೆ ಅರ್ಥವು**—ವಿಹಿತ ಕರ್ಮಗಳನ್ನು ಬಿಡಲು ಮಾರ್ಗವೇ ಇಲ್ಲವು ; ಅವುಗಳನ್ನು ಅನುಷ್ಠಿಸಲೇಬೇಕೆಂದು ಹೇಳಿ, ಅವುಗಳ ಕರ್ತೃತ್ವ ಮಮತಾ ಫಲಗಳನ್ನು ತ್ಯಾಗ ಮಾಡಿದ ಅನುಸಂಧಾನವಿದ್ದರೆ, ಬಂಧಕಗಳಾಗಿ ಅನಿಷ್ಟ, ಇಷ್ಟ, ಮಿಶ್ರಫಲಗಳನ್ನು ಕೊಡುವದಿಲ್ಲವು ; ಪರಮಪುರುಷಾರಾಧನಾರೂಪವಾಗಿರುವದರಿಂದ ಭಗವತ್ಪ್ರೀತಿಯನ್ನುಂಟುಮಾಡು

ವುವುಗಳಾಗಿ ಮೋಕ್ಷಕ್ಕೆ ಸಾಧನವಾಗುವುವೆಂದು ಹೇಳಲ್ಪಟ್ಟಿತು. ಇಂತಹ ತ್ಯಾಗದ ಅನುಸಂಧಾನವೇನು ಯಥಾರ್ಥವಾದ ವಿಷಯದ ಅನುಸಂಧಾನವೇ, ಅಲ್ಲವೇ ಹಾಗೆ ಶಾಸ್ತ್ರಬೋಧನಾ ಮಾತ್ರವೇ ಎಂಬ ಸಂದೇಹದಲ್ಲಿ ಯಥಾರ್ಥವಾದುದರ ಅನುಸಂಧಾನವೇ ಎಂದು ಹೇಳಲು ಹೊರಟು, ಸಾಧಾರಣವಾಗಿ ಎಲ್ಲಾ ಕರ್ಮಗಳೂ ಶಾಸ್ತ್ರಚೋದಿತವಾದವೇ ಆಗಲಿ ಲೌಕಿಕವೇ ಆಗಲಿ, ಜೀವಾತ್ಮನೊಬ್ಬನಿಂದಲೇ ಆಗತಕ್ಕದ್ದಲ್ಲವೆಂದೂ, ಐದು ಹೇತುಗಳಿಂದ ಪ್ರತಿಯೊಂದು ಕರ್ಮವೂ ನಡೆಯುತ್ತದೆಂದೂ, ಅದರಲ್ಲಿ ಪ್ರಧಾನಕಾರಣವು ಪರಮಾತ್ಮ ಸಙ್ಕಲ್ಪವೆಂದೂ, ವಾಸ್ತವವಾಗಿ ಕರ್ತೃತ್ವವು ಜೀವಾತ್ಮನಿಗೆ ಮಾತ್ರವೇ ಅಲ್ಲವಾದುದರಿಂದ, ಅದನ್ನು ಪರಮಾತ್ಮನಲ್ಲಿ ಸಮರ್ಪಿಸುವುದೇ ಯಥಾರ್ಥವಾದ ವಿಷಯವೆಂದೂ ಉಪದೇಶಿಸುತ್ತಾರೆ.—

**ಹೇ ಮಹಾಬಾಹೋ**-ಮಹತ್ತಾದ ಬಾಹುಪರಾಕ್ರಮಗಳನ್ನುಳ್ಳ ಓ ಅರ್ಜುನನೇ, **ಸರ್ವಕರ್ಮಣಾಂ ಸಿದ್ಧಯೇ**-ಸಮಸ್ತ ಕರ್ಮಗಳನ್ನು ಸಿದ್ಧಿಸಲು, **ಪಞ್ಚೈತಾನಿ**-ಮುಂದಿನ ಶ್ಲೋಕದಲ್ಲಿ ಹೇಳಲ್ಪಡುವ ಈ ಐದು ಕಾರಣಗಳನ್ನು, ಮೇ-ಸರ್ವಜ್ಞನಾದ ನನ್ನಿಂದ, **ನಿಬೋಧ**-ಚನ್ನಾಗಿ ತಿಳಿ. ಈ ವಿಷಯದಲ್ಲಿ ನಿನಗೆ ಸಂದೇಹ ಬೇಕಿಲ್ಲವು; ನೀನು ಇದರಲ್ಲಿ **ಸಂಪೂರ್ಣ** ನಂಬಿಕೆಯನ್ನಿಡಬಹುದು; ಏಕೆಂದರೆ ಈ ಐದು ಕಾರಣಗಳೆಂದೂ, **ಸಾಂಖ್ಯೇಕೃತಾನ್ತೇ**-ಯಥಾವತ್ತಾದುದನ್ನೇ ತಿಳಿಸುವ ವೈದಿಕ ಸಿದ್ಧಾನ್ತದಲ್ಲಿ, **ಪ್ರೋಕ್ತಾನಿ**-ವ್ಯಕ್ತವಾಗಿ ಹೇಳಲ್ಪಟ್ಟಿರುವುವು. ಈ ಮುಂದೆ ಹೇಳುವ ಐದು ಕಾರಣಗಳಲ್ಲಿ ಯಾವುದೊಂದು ಇಲ್ಲದಿದ್ದರೂ ಯಾವ ಕರ್ಮವೂ ನಡೆಯುವುದಿಲ್ಲವು. ನಿನಗೆ ಕರ್ತೃತ್ವವೇನೋ ಉಂಟು, ಇಲ್ಲವೆಂದು ಹೇಳಲಿಲ್ಲವು. ನಿನ್ನ ಸಙ್ಕಲ್ಪವೂ ಆವಶ್ಯಕವು. ಆದರೆ ಅದು ಐದರಲ್ಲೊಂದು. ಹೀಗಿರುವಾಗ ನೀನೇ ಕರ್ತಾ ಎಂಬುದು ಹೇಗೆ ಯಥಾರ್ಥವು? ಇಂತಹ ನಿನ್ನ ಪ್ರವೃತ್ತಿಗೆ ಇನ್ನು ನಾಲ್ಕರ ಸಹಾಯಬೇಕು. ಅವುಗಳಲ್ಲಿ ಪರಮಾತ್ಮಸಙ್ಕಲ್ಪವು ಮಿಕ್ಕೆಲ್ಲಕ್ಕೂ ಹೇತುವಾದುದರಿಂದ ಪ್ರಧಾನವಾದ ಹೇತುವು. ಹೀಗಿರುವಾಗ ಪರಮಾತ್ಮನೇ ಕರ್ತಾ ಎಂಬ ಅನುಸಂಧಾನವು ಯಥಾರ್ಥವಾದುದಷ್ಟೇ. ನಿನ್ನ ಸಙ್ಕಲ್ಪ, ಪ್ರಯತ್ನ, ಪ್ರವೃತ್ತಿಗಳಿಗೆ ಸಹಾಯಕವಾಗಿ ಪರಮಾತ್ಮ ಸಙ್ಕಲ್ಪವೂ ಮತ್ತು ಆತನಿಂದ ದಯಪಾಲಿಸಲ್ಪಟ್ಟ ಪರಿಕರಗಳೂ ಆವಶ್ಯಕವೆಂದಾದ ನಂತರ, ಭಗವಂತನಿಗೇ ಈ ಜೀವನ ಪಾರವಶ್ಯತೆಯು ಏರ್ಪಟ್ಟಿತು. ಹಾಗಿರುವ ಸಂದರ್ಭದಲ್ಲಿ ಶ್ರೀ ಕೃಷ್ಣಭಗವಾನ್ತರವರ **ಹೇ ಮಹಾಬಾಹೋ** ಎಂಬ ಸಂಬೋಧನೆಯು ಲಜ್ಜೆಯನ್ನುಂಟುಮಾಡಬೇಕಲ್ಲವೇ. ಸ್ವಾಮಿ ಸಙ್ಕಲ್ಪವಿಲ್ಲದೆ ಮಹಾಬಾಹುತ್ವವು ಅರ್ಜುನನಿಗೆ ಲಭಿಸಿತೇ? ಅದಕ್ಕೂ ಪ್ರಧಾನಕಾರಣನು ನಾನೇ ಎಂದು ಭಗವಂತನೇ ಹೇಳಿದಂತಾಯಿತು.

**ಸಿದ್ಧಯೇ** ಎಂದು ಹೇಳಿದುದರಿಂದ, ಮನುಷ್ಯನಾದವನು ಚನ್ನಾಗಿ ಸಙ್ಕಲ್ಪಿಸಿ, ಪ್ರಯತ್ನಿಸಿ, ಪ್ರವೃತ್ತಿಸಿದರೂ ಕಾರ್ಯಸಿದ್ಧಿಯು ಅನೇಕ ಸಂದರ್ಭದಲ್ಲಿ ಉಂಟಾಗುವುದಿಲ್ಲವು. ಮಾಡಬೇಕಾದ ಸಮಸ್ತವೂ ನಡೆದಿದ್ದರೂ ಫಲವಿಲ್ಲದೇ ಹೋಗಬಹುದು. ಇದರಿಂದ ನಾವು ಊಹಿಸಬೇಕಾದುದೇನೆಂದರೆ ಸ್ವಾಮಿ ಸಙ್ಕಲ್ಪವಿಲ್ಲದುದರಿಂದ ಕಾರ್ಯಸಿದ್ಧಿಯಿಲ್ಲವೆಂಬುದು.

**ಸಾಂಖ್ಯೇಕೃತಾನ್ತೇ** ಎಂಬುದರಿಂದ ವೇದಬಾಹ್ಯರಾಗಿ ಈಶ್ವರನನ್ನು ಒಪ್ಪದ ಸಾಂಖ್ಯಕಾಪಿಲರ ಸಿದ್ಧಾನ್ತ ಪ್ರಕ್ರಿಯೆಯು ಇಲ್ಲಿ ಹೇಳಲ್ಪಡಲಿಲ್ಲವು. ಈ ವಿಷಯವು ಮುಂದೆ ಭಾಷ್ಯದಲ್ಲಿ ಉಪಪಾದಿತವು. ವೇದಶಾಸ್ತ್ರ ತದುಪಬೃಹ್ಮಣಗಳಲ್ಲಿ ಹೇಳಲ್ಪಟ್ಟಿವೆ ಎಂಬ ಭಾವವು. ಶ್ರೀಮದ್ಭಾಗವತದಲ್ಲಿ ಹೇಳಿರುವ ಕಾಪಿಲ ಸಿದ್ಧಾನ್ತವು ನಮಗೆ ಉಪಾದೇಯವಾದುದು.

ಸುಮ್ಮನೆ **ನಿಬೋಧ**ವೆಂದು ಹೇಳದೆ **ನಿಬೋಧಮೇ** ಎಂಬುದರಿಂದ ಸರ್ವೇಶ್ವರನಾದ ತನಗಿಂತ ಸರ್ವವೂ ತಿಳಿದು ಯಥಾರ್ಥವಾದುದಾಗಿಯೂ, ಸಹಸ್ರ ಮಾತಾ ಪಿತಾ ಒಟ್ಟಿಗೆ ಸೇರಿ ಬೋಧಿಸುವ ಹಿತಕ್ಕಿಂತಲೂ ಮೇಲಾದ ಪರಮಹಿತವನ್ನು ತಾನು ಬೋಧಿಸುವನೆಂಬ ಭಾವವು ತೋರಿಬರುತ್ತದೆ.

**ಭಾ.** **ಸಂಖ್ಯಾ**-ಬುದ್ಧಿಃ, **ಸಾಂಖ್ಯೇ ಕೃತಾನ್ತೇ**-ಯಥಾವಸ್ಥಿತ ತತ್ತ್ವವಿಷಯಯಾ ವೈದಿಕ್ಯಾ ಬುದ್ಧ್ಯಾ ಅನುಸಂಹಿತೇ ನಿರ್ಣಯೇ, **ಸರ್ವಕರ್ಮಣಾಂ, ಸಿದ್ಧಯೇ**-ಉತ್ಪತ್ತಯೇ, **ಪ್ರೋಕ್ತಾನಿ ಪಞ್ಚೈತಾನಿ** ಕಾರಣಾನಿ, **ನಿಬೋಧ ಮೇ**-ಮಮ ಸಕಾಶಾದನುಸಂಧತ್ಸ್ವ; ವೈದಿಕೀಹಿ ಬುದ್ಧಿಃ, ಶರೀರೇನ್ದ್ರಿಯ ಪ್ರಾಣ ಜೀವಾತ್ಮೋಪಕರಣಂ ಪರಮಾತ್ಮಾನ ಮೇವ ಕರ್ತಾರಮವಧಾರಯತಿ-(೧) "ಯ ಆತ್ಮನಿ ತಿಷ್ಠನ್ನಾತ್ಮನೋಽನ್ತರೋ, ಯ ಮಾತ್ಮಾ ನ ವೇದ, ಯಸ್ಯಾತ್ಮಾಶರೀರಂ, ಯ ಆತ್ಮಾನ ಮನ್ತರೋ ಯಮಯತಿ, ಸ ತ ಆತ್ಮಾನ್ತರ್ಯಾಮ್ಯ ಮೃತಃ" (೨) "ಅನ್ತಃ ಪ್ರವಿಷ್ಟಃ ಶಾಸ್ತಾ ಜನಾನಾಂ ಸರ್ವಾತ್ಮಾ" ಇತ್ಯಾದಿಷು ||೧೩||

---

**ಭಾವಾರ್ಥವು**—ಸಂಖ್ಯಾ ಎಂದರೆ ಬುದ್ಧಿ ಎಂದು. ಹಿಂದೆಯೂ ೩-೩ನೆಯ ಶ್ಲೋಕದಲ್ಲಿ "**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ**" ಎಂಬಲ್ಲೂ ಸಂಖ್ಯಾ ಎಂದರೆ ಹೇಗೆ ಬುದ್ಧಿ ಎಂಬರ್ಥವೋ ಹಾಗೆಯೇ ಇಲ್ಲಿಯೂ ಸಹ, ಆದುದರಿಂದ **ಸಾಂಖ್ಯೇ ಕೃತಾನ್ತೇ** ಎಂದರೆ **ಯಥಾವಸ್ಥಿತ ತತ್ತ್ವ ವಿಷಯಯಾ ವೈದಿಕ್ಯಾ ಬುದ್ಧ್ಯಾ ಅನುಸಂಹಿತೇ ನಿರ್ಣಯೇ**-ಯಥಾವತ್ತಾಗಿರುವ ತತ್ತ್ವ ವಿಷಯವಾದ ವೇದಾರ್ಥವನ್ನು ಗ್ರಹಿಸುವ ಬುದ್ಧಿಯಿಂದ ಊಹಿಸಲ್ಪಟ್ಟ ನಿರ್ಣಯದಲ್ಲಿ, ಸಾಂಖ್ಯಕೃತಾಂತವು, ಅದುದಂದ ಯಾವುದು? ಎಂದರೆ ವೇದಶಾಸ್ತ್ರವು; ಯಥಾರ್ಥವಾದ ತತ್ವನಿರೂಪಣವಾಡಿ ಯಥಾರ್ಥವಾದುದನ್ನು ನಿರ್ಣಯಮಾಡಿ ಹೇಳುವುದರಲ್ಲಿ **ಸರ್ವಕರ್ಮಣಾಂ**-ಸಮಸ್ತ ಕರ್ಮಗಳ, **ಸಿದ್ಧಯೇ** ಎಂದರೆ **ಉತ್ಪತ್ತಯೇ**-ಉತ್ಪತ್ತಿಯಲ್ಲಿ, **ಪ್ರೋಕ್ತಾನಿ**-ಹೇಳಲ್ಪಟ್ಟ, **ಪಞ್ಚೈತಾನಿ ಕಾರಣಾನಿ**-ಈ ಮುಂದೆ ಹೇಳುವ ಐದು ಕಾರಣಗಳನ್ನು, **ನಿಬೋಧ ಮೇ** ಎಂದರೆ **ಮಮಸಕಾಶಾದನು ಸಂಧತ್ಸ್ವ**-ನನ್ನ ಮೂಲಕ ಅನುಸಂಧಾನಮಾಡು ಎಂದರೆ ಹೇಳುವೆನು ಕೇಳು ಎಂಬ ಭಾವವು. **ವೈದಿಕೀಹಿ ಬುದ್ಧಿಃ**-ವೇದಸಂಬಂಧವಾದ ಜ್ಞಾನವು, **ಶರೀರ, ಇಂದ್ರಿಯ, ಪ್ರಾಣ, ಜೀವಾತ್ಮರುಗಳನ್ನೇ ಉಪಕರಣಂ** ಎಂದರೆ ಈ ಕಾರ್ಯಕ್ಕೆ ಬೇಕಾಗಿರುವ ಪರಿಕರವಾಗಿವುಳ್ಳ ಎಂದರೆ ಸಹಕಾರಿಯಾಗಿವುಳ್ಳ, **ಪರಮಾತ್ಮಾನಮೇವ**-ಪರಮಾತ್ಮನನ್ನೇ, **ಕರ್ತಾರಂ**-ಕಾರ್ಯಗಳ ಕರ್ತಾವೆಂದು, **ಅವಧಾರಯತಿ**-ತಿಳಿಸುತ್ತದೆ; ಎಂದರೆ ವೇದಪ್ರಮಾಣವು ಹೀಗೆ ತಿಳಿಸುತ್ತದೆ ಎಂದರೆ ಶರೀರೇಂದ್ರಿಯ ಪ್ರಾಣ ಜೀವಾತ್ಮರುಗಳ ಮೂಲಕ ಪರಮಾತ್ಮನೇ ಕರ್ತೃವಾಗಿ ಎಲ್ಲಾ ಕಾರ್ಯಗಳನ್ನೂ ನಡೆಸುತ್ತಾನೆಂದು ಹೇಳುತ್ತದೆ ಎಂಬದಾಗಿ. ಎಲ್ಲಿ ಹೇಳಿರುತ್ತದೆ? ಎಂದರೆ ಬೃಹದಾರಣ್ಯಕ ವಾಕ್ಯವನ್ನು ಉದಾಹರಿಸುತ್ತಾರೆ—"**ಯಃ**-ಯಾವ ಪರಮಾತ್ಮನು, **ಆತ್ಮನಿತಿಷ್ಠನ್**-ಜೀವಾತ್ಮನನ್ನು ಅನುಪ್ರವೇಶಮಾಡಿ, ಆತನಲ್ಲಿರುವವನಾಗಿ, **ಆತ್ಮನೋನ್ತರಃ**-ಜೀವಾತ್ಮನಿಗಿಂತ ಬೇರೆಯಾಗಿ, **ಯಮಾತ್ಮಾನವೇದ**-ಇಂತಹ ಯಾವ ಪರಮಾತ್ಮನನ್ನು ಈ ಜೀವಾತ್ಮನು ತಿಳಿಯಲಾರನೋ, **ಯಸ್ಯಾತ್ಮಾಶರೀರಂ**-ಯಾವ ಪರಮಾತ್ಮನಿಗೆ ಜೀವಾತ್ಮನೇ ಶರೀರವೋ, **ಯ ಆತ್ಮಾನ ಮನ್ತರೋ ಯಮಯತಿ**-ಯಾವ ಪರಮಾತ್ಮನು ಈ ಜೀವಾತ್ಮನಲ್ಲಿರುವವನಾಗಿ ಆತನಿಗೆ ನಿಯಾಮಕನೋ, **ಸಃ**-ಅಂತಹ ಪರಮಾತ್ಮನೇ, **ತೇ**-ಓ ಉದ್ದಾಲಕನೇ ನಿನಗೂ ಸಹ **ಆತ್ಮನು, ಅಂತರ್ಯಾಮಿಯು, ಅಮೃತಃ**-ಮೋಕ್ಷದಾಯಕನಾ ಆನಂದಸ್ವರೂಪನು" (೨) '**ಅನ್ತಃಪ್ರವಿಷ್ಟಃ**-ಸರ್ವವನ್ನೂ ಅನುಪ್ರವೇಶಮಾಡಿರುವವನಾಗಿ, **ಜನಾನಾಂ**-ಎಲ್ಲಾ ಪ್ರಾಣಿಗಳಿಗೂ, **ಶಾಸ್ತಾ**-ನಿಯಾಮಕನು, **ಸರ್ವಾತ್ಮಾ**-ಸಮಸ್ತ ಚಿದಚಿತ್ತುಗಳಿಗೆ ಆತ್ಮಾ, ಅವುಗಳೆಲ್ಲಾ ತನಗೆ ಶರೀರವು, ತಾನು ಅವುಗಳಿಗೆ ಪ್ರೇರಕನಾಗಿ ಆತ್ಮಾ" ಇತ್ಯಾದಿಷು. **ಇವೇ ಮೊದಲಾದ ಪ್ರಮಾಣಗಳಲ್ಲಿ ಹೇಳಲ್ಪಟ್ಟಿವೆ.** ಇಲ್ಲಿ ಆದಿಪದದಿಂದ "**ದ್ವಾಸುಪರ್ಣಾಸಯುಜಾ**

---

(೧) ಬೃ. ೫. ೭. ೨೨. (೨)

**ಸಖಾಯಾ ಸಮಾನವೃಕ್ಷಂ ಪರಿಷಸ್ವಜಾತೇ, ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ, ಅನಶ್ನನ್ನನ್ಯೋಽಭಿಚಾಕಶೀತಿ** " (ಮುಂ. ೩. ೧. ೧) " **ಋತಂ ಪಿಬನ್ತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ । ಛಾಯಾತಪೌ ಬ್ರಹ್ಮವಿದೋ ವದನ್ತಿ ಪಞ್ಚಾಗ್ನಯೋ ಯೇ ಚ ತ್ರಿಣಾಚಿಕೇತಾಃ** " (ಕಠ. ೩. ೧) ಇತ್ಯಾದಿ ಶ್ರುತಿಗಳು ಹೇಳಲ್ಪಟ್ಟವು. ಬೃಹದಾರಣ್ಯವಾಕ್ಯದ ಅರ್ಥವು ಸ್ಪಷ್ಟವು ; ಕಠಶ್ರುತಿವಾಕ್ಯದ ತಾತ್ಪರ್ಯವೇನೆಂದರೆ?—ಕರ್ಮಫಲ ಲೀಲಾರಸಗಳನ್ನು ಅನುಭವಿಸುತ್ತಿರುವ ಸುಕೃತಸಾಧ್ಯವಾದ ಈ ಲೋಕದಲ್ಲಿ ಶರೀರದ ಹೃದಯ ಕುಹರದಲ್ಲಿ ಇರುವವರಾಗಿರುವ, ಛಾಯಾತಪವೆಂದರೆ ಕತ್ತಲೆ ಬಿಸಿಲಿನ ರೂಪದಲ್ಲಿರುವ ಎಂದರೆ ಪ್ರಕೃತಿಯಿಂದ ಜ್ಞಾನತಿರೋಹಿತೆಯನ್ನು ಹೊಂದಿ, **ಜ್ಞಾಜ್ಞೌ** ಎಂದು ಹೇಳಲ್ಪಟ್ಟಿರುವ ಹಾಗೆ, ಅಜ್ಞನಾದ ಮತ್ತು ಸರ್ವಜ್ಞನಾದ ಜೀವಾತ್ಮ ಪರಮಾತ್ಮರೂ ಇಬ್ಬರೂ ಇದ್ದಾರೆಂಬುದು ಮುಖ್ಯಾಭಿಪ್ರಾಯವು. ಈ ಶ್ಲೋಕದ **ಸಾಂಖ್ಯೇಕೃತಾನ್ತೇ** ಎಂಬುದಕ್ಕೆ ಸಾಂಖ್ಯರ ಸಿದ್ಧಾನ್ತದಲ್ಲಿ ಎಂಬ ಅರ್ಥವಾಗುವದಿಲ್ಲವು, ಏಕೆಂದರೆ ಅವರು ಪರಮೇಶ್ವರನು ಉಂಟೆಂದು ಅಙ್ಗೀಕರಿಸುವದಿಲ್ಲವು ; ಅದೂ ಅಲ್ಲದೆ ಅವರು ಕರಣಗಳಿಗಿಂತ ಬೇರೆಯಾಗಿ ಒಬ್ಬ ಕರ್ತಾವಿನ ವ್ಯಾಪಾರವೆಂದೂ ಹೇಳುವದಿಲ್ಲವು ; ಹೀಗೆ ಅವರ ಅಭಿಪ್ರಾಯವು. ಇನ್ನೂ ಇತರ ಅನನ್ವಯಗಳಿಗೆ ಕಾರಣವಾಗುವದರಿಂದ **ಸಾಂಖ್ಯೇಕೃತಾನ್ತೇ** ಎಂದರೆ ರೂಢಿಯಲ್ಲಿ ಸಾಂಖ್ಯರ ಸಿದ್ಧಾಂತವೆಂದರ್ಥವಾದರೂ, ಅಸಾಮಂಜಸ್ಯದಿಂದ ಆ ಅರ್ಥವನ್ನು ತ್ಯಾಗಮಾಡಿ, ಯೋಗರೀತ್ಯಾ ಸಾಂಖ್ಯವೆಂದರೆ ಬುದ್ಧಿ ಎಂದರ್ಥಮಾಡಿ, **ಸಾಂಖ್ಯೇಕೃತಾನ್ತೇ** ಎಂಬುದಕ್ಕೆ ಯಥಾವಸ್ಥಿತವಾದ ವೇದಜ್ಞಾನದಿಂದುಂಟಾದ ನಿರ್ಣಯದಲ್ಲಿ ಎಂದು ಭಾಷ್ಯವನ್ನು ಬರೆದಿರುತ್ತಾರೆ. ಹೀಗೆ ಅರ್ಥಮಾಡಲು, ಹಿಂದೆ ಸಾಂಖ್ಯಶಬ್ದಕ್ಕೆ ಹಾಗೆ ಅರ್ಥಮಾಡಿರುವ ಪ್ರಯೋಗವನ್ನು **ಜ್ಞಾನಯೋಗೇನ ಸಾಂಖ್ಯಾನಾಂ** ಎಂಬಲ್ಲಿ ಕಾಣಬಹುದು. ಶ್ರೀಮಚ್ಛಂಕರಾಚಾರ್ಯರವರು **ಸಾಂಖ್ಯೇ** ಎಂಬುದಕ್ಕೆ ವ್ಯುತ್ಪತ್ತಿಮೂಲಕ ನಾವು ಅರ್ಥಮಾಡಿರುವ ಹಾಗೆ **ವೇದಾಂತ**ವೆಂದೇ ಅರ್ಥಮಾಡಿದರು ; ಆದರೆ **ಕೃತಾನ್ತ** ಶಬ್ದಕ್ಕೆ ನಾವು ಹೇಳುವ ಹಾಗೆ ಸಿದ್ಧಾನ್ತವೆಂದು ಅರ್ಥಮಾಡದೆ, **ಕೃತಮಿತಿ ಕರ್ಮ ಉಚ್ಯತೇ, ತಸ್ಯ ಅನ್ತಃ-ಪರಿಸಮಾಪ್ತಿಃ ಯತ್ರ ಸಃ ಕೃತಾನ್ತಃ, ಕರ್ಮಾಂತಃ** " ಎಂದರೆ ಯಾವಾಗ ಜ್ಞಾನಸಪ್ರಾಪ್ತಿಯಾಯಿತೋ ಆಗ ಕರ್ಮಗಳಿಗೆ ಅಂತಃ, ಕರ್ಮಮಾಡುವ ಆವಶ್ಯಕವಿಲ್ಲವೆಂಬ ಭಾವವನ್ನೂ ತೋರ್ಪಡಿಸಿರುತ್ತಾರೆ. ಈ ಅಭಿಪ್ರಾಯವು ಸರಿಯಲ್ಲವಾಗಿ ತೋರುತ್ತದೆ.—ಏಕೆಂದರೆ (೧) ಈ ಗ್ರಂಥದಲ್ಲೇ ಹಿಂದೆಯೇ **" ಯಜ್ಞದಾನತಪಃಕರ್ಮ ನತ್ಯಾಜ್ಯಂ ಕಾರ್ಯಮೇವತತ್** '' ; ಅವುಗಳ ತ್ಯಾಗವೆಂದರೆ ಸ್ವರೂಪತ್ಯಾಗನಲ್ಲವು, ಅವುಗಳಲ್ಲಿ ಕರ್ತೃತ್ವ, ಮಮತಾ, ಫಲತ್ಯಾಗಗಳೆಂದು **ನಿಶ್ಚಯಂ ಶ್ರುಣುಮೇ** ಎಂದು ಸ್ಪಷ್ಟವಾಗಿ ಹೇಳಿರುವಾಗ ಕರ್ಮವನ್ನು ಬಿಡಬಹುದೆಂಬ ಅಭಿಪ್ರಾಯಕ್ಕೆ ಅವಕಾಶವೇ ಇಲ್ಲವು. (೨) ಉಪನಿಷತ್ತುಗಳೂ ಸೂತ್ರವೂ ಸಹ ಕರ್ಮಗಳನ್ನು ಮಾಡಿಯೇ ತೀರಬೇಕೆಂದು **" ಕುರ್ವನ್ನೇ ವೇಹಕರ್ಮಾಣಿ** '' ಇತ್ಯಾದಿ ಪ್ರಮಾಣಗಳಲ್ಲಿ ಸುಸ್ಪಷ್ಟವಾಗಿ ಹೇಳಲ್ಪಟ್ಟಿರುತ್ತದೆ. ಇನ್ನು ಕೆಲವರು ಈ **ಸಾಂಖ್ಯೇಕೃತಾನ್ತೇ** ಎಂಬುದಕ್ಕೆ ಕಪಿಲಾವತಾರಿಯಾಗಿ ತನ್ನ ತಾಯಿಗೆ ಉಪದೇಶಿಸಿದ ಸಿದ್ಧಾನ್ತವೆರಿದು ಅರ್ಥಮಾಡಿರುತ್ತಾರೆ. ಇದು ಭಾಗವತ ತೃತೀಯಾಧ್ಯಾಯದಲ್ಲಿ ಹೇಳಲ್ಪಟ್ಟಿರುತ್ತದೆ. ಇದೂ ವೇದಾಂತಾರ್ಥವೇ ಆದುದರಿಂದ ಈ ಅರ್ಥವೂ ನಮಗೂ ಇಷ್ಟವೇ. ಯೌಗಿಕವಾಗಿ ವೇದಾನ್ತದಲ್ಲಿ ನಿರ್ಣಯಿಸಲ್ಪಟ್ಟ ಸಿದ್ಧಾನ್ತದಲ್ಲಿ ಎಂದರ್ಥಮಾಡುವುದೇ ಸರಿಯಾಗಿ ತೋರುತ್ತದೆ. ಇಲ್ಲಿ **ಸರ್ವಕರ್ಮಣಾಂ ಸಿದ್ಧಯೇ** ಎಂಬುದಕ್ಕೆ ಸಮಸ್ತ ಕರ್ಮಗಳ ಉತ್ಪತ್ತಿಯಲ್ಲಿ ಎಂದು ಅರ್ಥಮಾಡಿರುವದು, ಯಾವಾಗ ಉತ್ಪತ್ತಿಯಾಯಿತೋ ಅದು ಸಮಾಪ್ತಿಯಾಗಿ ಫಲದಾಯಿಕಾವಸ್ಥೆಯವರೆಗೂ ಉತ್ಪತ್ತಿ ಶಬ್ದದಿಂದ ವಿವಕ್ಷಿತವೆಂದು ಭಾವಿಸತಕ್ಕದ್ದು. ಆದರೆ ಉತ್ಪತ್ತಿಶಬ್ದ ಪ್ರಯೋಗವು ಏತಕ್ಕೆ ಎಂದರೆ ಮುಂದೆ ೧೫ನೆಯ ಶ್ಲೋಕದಲ್ಲಿ ಇರುವ **ಪ್ರಾರಭತೇ ನರಃ** ಎಂಬ ಪ್ರಯೋಗವನ್ನನುಸರಿಸಿ ಹಾಗೆ

**ಭಾ. ಅವ. ತದಿದಮಾಹ:-**

**ಮೂ. ಅಧಿಷ್ಠಾನಂ ತಥಾ ಕರ್ತಾ ಕರಣಂಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂಚೈವಾತ್ರ ಪಞ್ಚಮಮ್ ॥೧೪॥**
**ಶರೀರ ವಾಙ್ಮನೋಭಿ ರ್ಯ ತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂವಾ ವಿಪರೀತಂವಾ ಪಞ್ಚೈತೇ ತಸ್ಯ ಹೇತವಃ ॥೧೫॥**

---

ಪ್ರಯೋಗವು. (ಶ್ರೀ ಆನಂದತೀರ್ಥೀಯರೂ ಶ್ರೀ ಜಯತೀರ್ಥಮುನಿಗಳೂ ಸಹ ಜ್ಞಾನ ಸಿದ್ಧಾಂತವೆಂದರ್ಥಮಾಡಿ ಉಪನಿಷತ್ತಿನ ನಿರ್ಣಯವೆಂದೇ ಅರ್ಥಮಾಡಿರುತ್ತಾರೆ.) ಆದುದ ರಿಂದ ಜೀವಾತ್ಮನ ಮೂಲಕ ನಡೆಯುವ ಸರ್ವ ಕರ್ಮಗಳೂ ಐದು ಕಾರಣಗಳುಳ್ಳವೆಂದು ಹೇಳ ಲ್ಪಟ್ಟಿತು. ಅವು ಯಾವುವೆಂಬುದನ್ನು ಮುಂದಿನ ಶ್ಲೋಕದಲ್ಲಿ ಉಪಪಾದಿಸುತ್ತಾರೆ.

**ಭಾಷ್ಯಾವತಾರಿಕೆಯ ಅರ್ಥವು—ತತ್**-ಆ ಶ್ರುತಿಸಿದ್ಧವಾದ ಐದು ಕಾರಣವು ಯಾವುವೆಂದರೆ, ಸಮುಚ್ಚಯಭಾವದಿಂದ ಏಕವಚನವು, **ಇದಮಾಹ**-ಈ ಮುಂದಿನ ಎರಡು ಶ್ಲೋಕಗಳಲ್ಲಿ ಹೇಳಲ್ಪಡುವ ಕಾರಣವೆಂದು ಹೇಳುತ್ತಾರೆ—"**ಯನ್ಮನಸಾಧ್ಯಾಯತೇ, ತದ್ವಾಚಾವದತಿ, ತತ್ಕರ್ಮಣಾಕರೋತಿ**" ಎಂಬಲ್ಲಿ ಹೇಳಿರುವಹಾಗೆ ಕರ್ಮಗಳು ಮೂರು ವಿಧವು; (೧) ಮಾನಸಿಕ (೨) ವಾಚಿಕ (೩) ಶಾರೀರಕವೆಂಬ ದಾಗಿ; ಇದಲ್ಲದೆ ಕರ್ಮಗಳಲ್ಲಿ ಕೆಲವು (೧) ಶಾಸ್ತ್ರಸಮ್ಮತಗಳಾಗಿ ಧರ್ಮವೆಂದು ಹೇಳಲ್ಪಡುತ್ತವೆ; ಇನ್ನು ಕೆಲವು (೨) ಶಾಸ್ತ್ರ ಸಮ್ಮತಗಳಲ್ಲದೆ ಅಧರ್ಮವೆನಿಸುತ್ತವೆ; ಹೀಗೆ ಈ ಸರ್ವಕರ್ಮಗಳಿಗೂ ಕಾರಣವು ಈ ಐದೂ ಎಂದು ಉಪದೇಶಿಸಲ್ಪಡುತ್ತದೆಂಬುದು ತಾತ್ಪರ್ಯವು.

**ಮೂಲಕ್ಕೆ ಅರ್ಥವು**—ಜೀವಾತ್ಮನ ಮೂಲಕ ನಡೆಯುವ ಕೆಲಸಗಳಿಗೆ ಜೀವಾತ್ಮ ನಲ್ಲದೆ ಇನ್ನು ನಾಲ್ಕು ಪರಿಕರಗಳು, ಒಟ್ಟು ಐದು ಕಾರಣಗಳು ಎಂದು **ಉಪದೇಶಿಸು ತ್ತಾರೆ—ನರಃ**-ಮನುಷ್ಯನು, **ಶರೀರ ವಾಙ್ಮನೋಭಿಃ**-ಶರೀರದಿಂದಲೂ ವಾಕ್ಕಿನಿಂದಲೂ ಮನಸ್ಸಿನಿಂದಲೂ, **ಯತ್ಕರ್ಮ**-ಯಾವ ಕೆಲಸವನ್ನು, **ಪ್ರಾರಭತೇ**-ಪ್ರಾರಂಭಿಸುತ್ತಾನೋ ಅದು, **ನ್ಯಾಯ್ಯಂವಾ**-ನ್ಯಾಯವನ್ನು ಬಿಡದೇ ಇರುವ ಎಂದರೆ ಶಾಸ್ತ್ರಾನುಮತಿ ಮತ್ತು ಲೋಕಾನುಮತಿಯುಳ್ಳದ್ದೇಯಾಗಲಿ, **ವಿಪರೀತಂವಾ**-ಅದಕ್ಕೆ ವಿರುದ್ಧವಾದುದೇಯಾಗಲಿ, **ತಸ್ಯ**-ಅದಕ್ಕೆ, **ಪಞ್ಚೈತೇ ಹೇತವಃ**-ಇವು ಐದೂ ಕಾರಣಗಳು, ಅವು ಯಾವುವೆಂದರೆ (1) **ಅಧಿಷ್ಠಾನಂ**-ಶರೀರವು, ಶರೀರವಿಲ್ಲದೆ ಕೆಲಸವಿಲ್ಲವು; ಬರೀ ಶರೀರವು ಅಚೇತನವಾಗಿರು ವದರಿಂದ ಅದರಲ್ಲಿರುವ ಅದಕ್ಕೆ ನಿಯಾಮಕನಾಗಿ ಚೇತನನೂ ಆವಶ್ಯಕವು, ಆದುದರಿಂದ (2) **ತಥಾ**-ಹಾಗೆಯೇ **ಕರ್ತಾ**-ಕರ್ತೃವಾದ ಜೀವಾತ್ಮನೂ ಇರಬೇಕು, (3) ಶರೀರ ಜೀವಾತ್ಮ ಇಬ್ಬರೇ ಇದ್ದರೂ ಸಾಲದು, ಇನ್ನೂ ಇರತಕ್ಕವು ಯಾವುವು ಎಂದರೆ **ಕರಣಂಚ ಪೃಥಗ್ವಿಧಂ**-ಬೇರೆಬೇರೆ ವಿಧಗಳಾದ ೧೧ ಇಂದ್ರಿಯಗಳೂ ಆವಶ್ಯಕವು; ಕಣ್ಣು ಕಿವಿ ಮೊದಲಾದ ಐದು ಜ್ಞಾನೇಂದ್ರಿಯಗಳೂ, ಕೈಕಾಲು ಮೊದಲಾದ ಐದು ಕರ್ಮೇಂದ್ರಿಯಗಳೂ ಪ್ರಾಣ ಮನಸ್ಸೂ ಎಲ್ಲಾ ಬೇಕು; ಇವುಗಳು ಇಲ್ಲದಿದ್ದರೂ ಕೆಲಸವಾಗದು, (4) **ವಿವಿಧಾಶ್ಚ ಪೃಥಗ್ಚೇಷ್ಟಾ**-ಇವೆಲ್ಲಾ ಇದ್ದೂ ಸುಮ್ಮನೆ ಇದ್ದರೆ, ಗಾಢನಿದ್ರೆ ಬಂದಿರುವಾಗ ಹೇಗೆ ಏನೊಂದೂ ಕೆಲಸವು ನಡೆಯುವುದಿಲ್ಲವೋ, ಹಾಗೆಯೇ ಸಙ್ಕಲ್ಪ ಪ್ರಯತನಾದಿಗಳು ಇಲ್ಲದಿರುವಾಗ ಯಾವ ಕೆಲಸವೂ ನಡೆಯುವದಿಲ್ಲವು, ಆದುದರಿಂದ, ನಾನಾ ವಿಧವಾದ ಜ್ಞಾನ, ಚಿಕೀರ್ಷ, ಸಙ್ಕಲ್ಪ ಪ್ರಯತನಾರೂಪದಲ್ಲಿ ಚೇಷ್ಟೆಯೂ ಆವಶ್ಯಕವು; ಇಂತಹ ವ್ಯಾಪಾರಗಳು ಪ್ರಾಣಾಪಾನಾದಿ ಪಂಚ ವಾಯುಗಳಿಂದ ಶರೀರದಲ್ಲಿ ನಡೆಯುತ್ತಿರುವ ಉಸರಾಡುವದೇ ಮೊದಲಾದ ನಾನಾವಿಧ ವ್ಯಾಪಾರವು; ಈ ಅಭಿಪ್ರಾಯವು ಬೃಹದಾರಣ್ಯಕ ವಾಕ್ಯವನ್ನನುಸರಿಸಿದ ಪ್ರಮಾಣಬದ್ಧ ಅರ್ಥವು. (5) ಇವೆಲ್ಲಾ ಇರಬಹುದು, ದೈವಸಙ್ಕಲ್ಪವಿಲ್ಲದೆ ಯಾವ ಕೆಲಸವೂ ನಡೆಯುವುದಿಲ್ಲವಾದುದ

ರಿಂದ, **ದೈವಂ ಚೈವಾತ್ರಪಂಚಮಂ**-ಅತ್ರ ಈ ಸಂದರ್ಭದಲ್ಲಿ ಎಂದರೆ ಕೆಲಸ ನಡೆಯುವ ಸಂದರ್ಭದಲ್ಲಿ ಈತನ ಪ್ರಾರಬ್ಧಾನುಗುಣವಾದ ದೈವ ಸಙ್ಕಲ್ಪವು **ಐದನೆಯ** ಎಂಬುದರಿಂದ ಮುಖ್ಯ ಕಾರಣವಾಗಿ **ಪಂಚಮಂ**-ಐದನೆಯ ಕಾರಣವು. ಹೀಗೆ ಇವು ಐದೂ ಸೇರಿದರೇನೇ ಒಂದು ಕೆಲಸದ ಆರಂಭವು ಉಂಟಾಗುತ್ತದೆ ಒಂದು ಕೆಲಸವು ನಡೆಯಬೇಕಾದರೆ (1) ಜೀವಾತ್ಮನು ಬೇಕು, (2)ಆತನು ಅಣುವಾಗಿರುವದರಿಂದ ಸ್ವತಃ ಈ ಲೋಕದಲ್ಲಿ ಏನನ್ನೂ ಮಾಡಲು ಅನರ್ಹನು. ಇದುಹಿಂದೆ ೫-೧೪ರಲ್ಲಿ "**ನಕರ್ತೃತ್ವಂ ನಕರ್ಮಾಣಿ ಲೋಕಸ್ಯ ಸೃಜತಿಪ್ರಭುಃ**" ಎಂಬಲ್ಲಿ ಪ್ರಭುಶ್ಶಬ್ದವನ್ನು ಪಯೋಗಿಸಿ ಅಪಹಾಸ್ಯರೂಪದಲ್ಲಿ ಹೇಳಲ್ಪಟ್ಟಿತು. ಆದುದರಿಂದ ಶರೀರ ಬೇಕೆಂದು ಹೇಳಲ್ಪಟ್ಟಿತು; (3) ಬರೀ ಶರೀರಮಾತ್ರವೇ ಇದ್ದು ಕಣ್ಣು, ಕಿವಿ, ಕೈಕಾಲುಗಳು ಯಾವುದೂ ಇಲ್ಲದಿದ್ದರೂ ಕೆಲಸವು ಉಂಟಾಗುವದಿಲ್ಲವು. ಅವುಗಳೂ ಆವಶ್ಯಕವು; ಶರೀರೇನ್ದ್ರಿಯಗಳೆಲ್ಲಾ ಸರಿಯಾಗಿಯೇ ಇವೆ, ಮಣ್ಣುಮುದ್ದೆಯ ಹಾಗೆ ಸುಮ್ಮನೆ ಇದ್ದರೂ ಕೆಲಸವು ಜರಗುವದಿಲ್ಲವು, (4) ಆದುದರಿಂದ **ವಿವಿಧಾಶ್ಚ ಪೃಥಕ್ಚೇಷ್ಟಾ**-ಪ್ರಾಣವಾಯುಗಳ ಮೂಲಕ ಜೀವಾತ್ಮನ ಸಙ್ಕಲ್ಪಾದಿಗಳೂ ಆವಶ್ಯಕವು. (5) ಇವೆಲ್ಲಾ ಇದ್ದು ಪರಮಾತ್ಮ ಸಙ್ಕಲ್ಪವಿಲ್ಲದಿದ್ದರೂ ನಡೆಯುವುದಿಲ್ಲವು, ಆದುದರಿಂದ **ದೈವಂಚೈವಾತ್ರಪಂಚಮಂ** ಎಂದು ಹೇಳಲ್ಪಟ್ಟಿತು. ದಶರಥನು ಪುರಜನರ ಅನುಮತಿಯಿಂದಲೂ ವಸಿಷ್ಠಾದಿ ಗುರುಗಳ ಆಜ್ಞೆಯಿಂದಲೂ ಪುರವನ್ನೆಲ್ಲಾ ಅಲಂಕರಿಸಿ ತನ್ನ ಮಗನಾದ ಶ್ರೀರಾಮಚಂದ್ರ ಪ್ರಭುವನ್ನು ಯೌವರಾಜ್ಯ ಪಟ್ಟಾಭಿಷಿಕ್ತನನ್ನಾಗಿ ಮಾಡಬೇಕೆಂದು ಸರ್ವ ಪ್ರಯತ್ನವನ್ನು ಮಾಡಿದ್ದರೂ, ದೈವ ಸಙ್ಕಲ್ಪವು ಅನ್ಯಥಾವಾಗಿ ಶ್ರೀರಾಮನು ದಂಡಕಾರಣ್ಯಕ್ಕೆ ಹೋಗಿ ಋಷಿಕಂಟಕರನ್ನು ಕೊಂದು ಲೋಕವನ್ನು ಅರಾಕ್ಷಸವಾಗಿ ಮಾಡಬೇಕೆಂದು ಉದ್ದೇಶಿಸಿದುದರಿಂದ ನಡೆಯಲಿಲ್ಲವು. ಈ ಸಂದರ್ಭದಲ್ಲಿ ಲಕ್ಷ್ಮಣನು ಶ್ರೀರಾಮನಿಗೆ ಇಂತಹ ದೆಶೆಯು ಪ್ರಾಪ್ತವಾಯಿತೇ ಎಂದು ವಿಶೇಷ ಪರಿತಪ್ತನಾಗಿರುವಾಗ ಶ್ರೀರಾಮಚಂದ್ರನೇ ಲೋಕವಿಡಂಬನಾರ್ಥವಾಗಿ ಹೇಳುತ್ತಾರೇನೆಂದರೆ—"**ಅಸಙ್ಕಲ್ಪಿತಮೇವೇಹ ಯದಕಸ್ಮಾತ್ಪ್ರವರ್ತತೇ । ನಿವರ್ತ್ಯಾರಂಭಮಾರಬ್ಧಂ ನನು ದೈವಸ್ಯಕರ್ಮತತ್**" (ರಾಮಾ. ಅಯೋಧ್ಯಾ. ೨೦-೨೪) ಸಙ್ಕಲ್ಪಿಸಿರುವದಕ್ಕೆ ವಿರುದ್ಧವಾಗಿ ಎಷ್ಟು ಪ್ರಯತ್ನ ಪಟ್ಟರೂ ಆರಂಭಿಸಿದುದು ನಡೆಯದೆ ಅಕಸ್ಮಾತ್ತಾಗಿ ಬೇರೆ ವಿಧವಾಗಿ ಪರಿಣಮಿಸಿದರೆ, ಆದು ದೈವಕರ್ಮವು, ನಾವು ಸಙ್ಕಲ್ಪಿಸಿದುದಕ್ಕೆ ಅನುಗುಣವಾಗಿ ಪರಮಾತ್ಮ ಸಙ್ಕಲ್ಪವಿಲ್ಲವು ಎಂದು ಭಾವಿಸತಕ್ಕದ್ದು. ಆದುದರಿಂದ ದೇಹೇಂದ್ರಿಯಾದಿಗಳ ಸಹಾಯವೂ ಅಲ್ಲದೆ, ಜೀವಾತ್ಮನ ಸಙ್ಕಲ್ಪಕ್ಕನುಗುಣವಾಗಿ ಪರಮಾತ್ಮ ಸಙ್ಕಲ್ಪವೂ ಸೇರಿದರೆ ಕಾರ್ಯ್ಯಾರಂಭವಾಗಿ ಫಲಕಾರಿಯಾಗುತ್ತದೆ. ಪ್ರಾರಬ್ಧ ಕರ್ಮವು ಕ್ರೂರವಾಗಿರುವುದರಿಂದ ಪರಮಾತ್ಮನ ಸಂಕಲ್ಪವಿಲ್ಲದೇಹೋದರೆ ಶಾಸ್ತ್ರಾನುಮತಿಯಿರುವ ಕಾರ್ಯವಾದರೂ ಪ್ರಾರಂಭವೊದಲು ಪೂರ್ತಿಯಾಗುವದರಲ್ಲಿ ಯಾವ ಪರ್ವದಲ್ಲಾಗಲಿ ವಿಘ್ನ ಉಂಟಾಗಿ ಕಾರ್ಯವು ಪೂರೈಸುವದಿಲ್ಲವು; ಆ ಕಾರಣದಿಂದ ಫಲಕಾರಿಯೂ ಆಗುವದಿಲ್ಲವು; ಆದುದರಿಂದಲೇ **ನ್ಯಾಯ್ಯಂವಾ ವಿಪರೀತಂ ವಾ** ಎಂಬ ಪ್ರಯೋಗವು. ಇಂತಹ ಅನುಭವವು ಅನೇಕರಿಗೆ ಪ್ರತ್ಯಕ್ಷದಲ್ಲೂ ಸಿದ್ಧವು. ಹೀಗೆ ಹೇಳಿರುವದರಿಂದ ಇದನ್ನು ವಿವೇಚನೆಯನ್ನು ಮಾಡಿ ತಿಳಿಯಲು ಶಕ್ತಿಯಿಲ್ಲದಿರುವವರಿಗೆ ಕೆಲವು ಶಙ್ಕೆಗಳು ಉಂಟಾಗಬಹುದು, ಹೇಗೆಂದರೆ?

(೧) ಹೀಗೆ ಕರ್ಮವು ಪರಮಾತ್ಮನ ಸಙ್ಕಲ್ಪಾಧೀನವಾಗಿದ್ದರೆ, ಶಾಸ್ತ್ರಗಳಲ್ಲಿ ಹೀಗೆ ಮಾಡು ಹೀಗೆ ಮಾಡಬೇಡ ಎಂಬ ವಿಧಿ ನಿಷೇಧ ವಾಕ್ಯಗಳು ನಿರರ್ಥಕವಲ್ಲವೋ? ಎಂದರೆ, ತಾನು ಮಾಡುವ ಕರ್ಮವು ನ್ಯಾಯವೇ ಅಥವಾ ವಿಪರೀತವೇ ಎಂದು ವಿತರ್ಕಿಸಿ ತಿಳಿಯಲು ಸರ್ವೇಶ್ವರನು ಈ ಜೀವಾತ್ಮನಿಗೆ ಜ್ಞಾನ ವಿವೇಕಾದಿಗಳನ್ನು ಶಾಸ್ತ್ರವನ್ನೂ ಕೊಟ್ಟಿರುವದರಿಂದ, ಶಾಸ್ತ್ರಾನುಮತಿ ಇರುವದೇ ಧರ್ಮವು, ಅದನ್ನೇ ಆಚರಿಸತಕ್ಕದ್ದು; ಅನ್ಯಥಾ ಕೂಡದೆಂದು, ಜ್ಞಾನ ವಿವೇಕಗಳಲ್ಲಿ ಪ್ರತಿಯೊಂದು ಕಾರ್ಯದ ಪ್ರಥಮ ಸಙ್ಕಲ್ಪದಲ್ಲಿ ಈತನಿಗೆ ಸ್ವಾತಂತ್ರ್ಯವನ್ನು

ಕೊಟ್ಟಿರುತ್ತಾನೆ. ಅದನ್ನು ಪ್ರಾರಂಭಿಸಿದನಂತರ ಅದಕ್ಕನುಗುಣವಾಗಿಯೇ ಪ್ರೇರಿಸಿ ಜೀವಾತ್ಮನ ಪೂರ್ವ ಕರ್ಮಾನುಗುಣವಾಗಿ ನ್ಯಾಯವಾದ ಕಾರ್ಯವನ್ನಾಗಲಿ ತದ್ವಿಪರೀತ ಕಾರ್ಯವನ್ನಾಗಲಿ ಮಾಡುವ ಹಾಗೆ ಮಾಡುತ್ತಾನೆ. ಹೀಗೆಯೇ ನಡೆಯುತ್ತವೆಂದು ಶ್ರೀ ವ್ಯಾಸರವರು **ಕರ್ತಾ ಶಾಸ್ತ್ರಾರ್ಥವತ್ತ್ವಾತ್** (ಶಾ. ೨. ೩. ೩೩) ಎಂದು ಜೀವನಿಗೆ ಕರ್ತೃತ್ವವು ಶಾಸ್ತ್ರದಲ್ಲಿ ಹೇಳಲ್ಪಟ್ಟಿತೆಂದು ಉಪದೇಶಿಸಿ, ಅನಂತರ **ಪರಾತ್ತು ತಚ್ಛ್ರುತೇಃ** (೨. ೩. ೪೦) ಆ ಕರ್ತೃತ್ವವು ಪರಮಾತ್ಮ ಸಙ್ಕಲ್ಪಕ್ಕೆ ಅಧೀನವೆಂದು ಇಲ್ಲಿ ಹೇಳಿರುವದನ್ನೇ ಹೇಳಿ, ಮೇಲೆ ಹೇಳಲ್ಪಟ್ಟ ಶಙ್ಕಾಸಮಾಧಾನಾರ್ಥವಾಗಿ "**ಕೃತಪ್ರಯತ್ನಾಪೇಕ್ಷಸ್ತು**" ಎಂಬ ಮುಂದಿನ ಸೂತ್ರದಲ್ಲಿ (ಶಾ. ಸೂ. ೨. ೩ ೪೧) ಜೀವಾತ್ಮನ ಕಾರ್ಯಾರಂಭದ ಪ್ರಥಮ ಸಙ್ಕಲ್ಪದಲ್ಲಿ ಪರಮಾತ್ಮನು ತನ್ನ ಅಧೀನವಾಗಿ ಮಾಡಿಕೊಳ್ಳದೆ, ಆತನನ್ನು ಸ್ವತಂತ್ರಿಸಿ ಬಿಟ್ಟಿರುತ್ತಾನೆ, ಎಂದು ಹೇಳಿರುವದರಿಂದ ಮೇಲಿನ ಶಙ್ಕೆಗೆ ಸಮಾಧಾನವು ದೊರೆಯುತ್ತದೆ.

(೨) **ನ್ಯಾಯ್ಯಂವಾ**-ನ್ಯಾಯವಾದ ಕಾರ್ಯಾರಂಭವನ್ನು ಸಙ್ಕಲ್ಪಿಸಿ ಜೀವಾತ್ಮನು ನಡೆಸಿದರೆ ಸರ್ವೇಶ್ವರನು ಪ್ರೇರಕನಾಗಿ, ಅದನ್ನು ನಡೆಸಿಕೊಡುವದು ನ್ಯಾಯವು. ಹಾಗಲ್ಲದೆ **ವಿಪರೀತ**ವಾದುದಾದರೆ ಅದನ್ನೂ ಪ್ರೇರಿಸಿ ನಡೆಸುವದು ಸರ್ವೇಶ್ವರನಿಗೆ ಹೇಗೆ ಉಚಿತವಾದುದು? ಒಬ್ಬನನ್ನು ಕದಿಯುವಹಾಗೆ, ಇನ್ನೊಬ್ಬನ ತಲೆಯನ್ನು ಹೊಡೆಯುವಹಾಗೂ ಮಾಡುವದು ಸರ್ವೇಶ್ವರನಿಗೆ ಯೋಗ್ಯವಾದುದೇ? ಎಂಬ ಶಙ್ಕೆ ಕೆಲವರನ್ನು ಬಾಧಿಸಬಹುದು. ಹಿಂದಿನ ಪ್ರಾರಬ್ಧಕರ್ಮಗಳು ಬಹು ಕ್ರೂರವಾಗಿರುವದರಿಂದ, ಆತನಿಗೆ ಶಿಕ್ಷಾರ್ಥವಾಗಿ ಇಲ್ಲಿ ದುಃಖಾನುಭವವನ್ನುಂಟುಮಾಡಿ, ಅಭ್ಯುಪಗತ ಪ್ರಾರಬ್ಧಶೇಷವಿರುವದರಿಂದ ತದನುಗುಣವಾಗಿ ಆತನ ಕೈಯ್ಯಲ್ಲಿ ದುಷ್ಕರ್ಮಗಳನ್ನೇ ಮಾಡಿಸಬೇಕಾಗಿರುವದರಿಂದ ಸರ್ವೇಶ್ವರನು ಹಾಗೆಯೇ ಪ್ರೇರಿಸುವನೆಂಬುದರಿಂದ, ಯಾವ ವಿಧವಾದ ಔಚಿತ್ಯ ಹಾನಿಯೂ ಇಲ್ಲವು. ಶಿಕ್ಷೆಯೂ ಕೂಡ ಆತನನ್ನು ಪಾಪಕೃತ್ಯದಿಂದ ಹಿಂತಿರುಗಿಸಿ, ಪಶ್ಚಾತ್ತಾಪೋಪರತಿಗಳನ್ನುಂಟುಮಾಡುತ್ತದಾದುದರಿಂದ ಅನುಗ್ರಹವೆಂದೇ ಭಾವಿಸತಕ್ಕದ್ದು. ಆದರೆ ಹೀಗೆ ಪಾಪಕೃತ್ಯ, ಅದಕ್ಕಾಗಿ ಶಿಕ್ಷೆಯೂ, ಪಾಪವಾಸನೆಯಿಂದ ಪುನಃ ಪಾಪಕೃತ್ಯವೂ, ಹೀಗೆಯೇ ಅಧೋಗತಿಯುಂಟಾಗಿ ಜೀವಾತ್ಮನು ಕೆಟ್ಟೇಹೋಗುವನಲ್ಲವೇ? ಇಂತಹ ವಿಪರ್ಯಾಡಿಗೆ ಸರ್ವೇಶ್ವರನು ಕಾರಣನಾಗಬಹುದೋ? ಎಂದರೆ ಜ್ಞಾನ ವಿವೇಕಾದಿಗಳನ್ನು ಕೊಟ್ಟು ಕಾರ್ಯಾರಂಭದಲ್ಲಿ ಸ್ವತಂತ್ರನಾಗಿ ಬಿಟ್ಟಿರುವದರಿಂದ, ಯಾವಾಗಲಾದರೂ ಒಂದು ಸಮಯದಲ್ಲಿ ಸುಕೃತವನ್ನು ಮಾಡಿ, ತನ್ಮೂಲಕ ಪರಮಾತ್ಮನ ಅನುಗ್ರಹಕ್ಕೆ ಒಳಪಟ್ಟವನಾಗಿ ಸಾಧುಜನಗಳ ಸಂಭಾಷಣೆಯು ದೊರೆತು, ಸದ್ಗುರು ಪ್ರಾಪ್ತಿಯುಂಟಾಗಿ, ಆ ಗುರುವಿನ ಮೂಲಕ ಉಪಾಯಾನುಷ್ಠಾನವನ್ನು ಮಾಡಿ ಮೋಕ್ಷವನ್ನು ಹೊಂದಲು ಯಾವ ಸಂದೇಹವೂ ಇರುವದಿಲ್ಲವು:—"**ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ । ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್**" ಎಂಬ ಪ್ರಮಾಣವಿರುತ್ತದೆ. ಪಾಪಿಷ್ಠನಾಗಿ ನೀಚ ಕ್ಷತ್ರಿಯನಾದುದರಿಂದ ಕ್ಷತ್ರಬಂಧುವೆಂಬ ಅನ್ವರ್ಥನಾಮವನ್ನು ಹೊಂದಿದವನೂ ಮುಕ್ತಿಯನ್ನು ಹೊಂದಿದನೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದಲೇ ಮೂಲದಲ್ಲಿ **ನ್ಯಾಯ್ಯಂವಾ ವಿಪರೀತಂವಾ** ಎಂಬ ಪ್ರಯೋಗವು. ಈ ಶಙ್ಕೆಗಳನ್ನೆಲ್ಲಾ ಶ್ರೀ ಯತಿವರ್ಯರು ಮುಂದಿನ ಶ್ಲೋಕಭಾಷ್ಯದಲ್ಲಿ ನಿಪುಣತರವಾಗಿ ಉಪಪಾದಿಸಿ ಪರಿಹಾರವನ್ನೂ ದಯಪಾಲಿಸಿರುತ್ತಾರೆ.

(೩) ಜೀವಾತ್ಮನಿಂದುಂಟಾಗುವ ವ್ಯಾಪಾರಗಳಿಗೆ ಈ ಮೇಲೆ ಹೇಳಿದ ಐದೂ ಹೇತುವೆಂದೂ, ಅವುಗಳಲ್ಲಿ ಯಾವುದಾದರೂ ಒಂದು ಇಲ್ಲದಿದ್ದರೂ ವ್ಯಾಪಾರದ ಉತ್ಪತ್ತಿ ಇಲ್ಲವೆಂದೂ **ಹೇಳಿದುದನ್ನೇನೋ ಒಪ್ಪೋಣ.** ವಾಕ್ಕೂ, ಮನಸ್ಸೂ, ಶರೀರವೂ ಸಹ ಈ ಪಂಚ ಹೇತುಗಳಲ್ಲೇ ಸೇರಿರುವಾಗ ಪ್ರತ್ಯೇಕಿಸಿ **ಶರೀರವಾಙ್ಮನೋಭಿಃ ಯತ್ಕರ್ಮ ಪ್ರಾರಂಭತೇ ನರಃ** ಎಂದು ಹೇಳಲು ಕಾರಣವೇನು? ಎಂಬುದೂ ಸಹ ನ್ಯಾಯವಾದ ಪ್ರಶ್ನೆಯೇ. ಹೀಗೆ

ಭಾ. ನ್ಯಾಯ್ಯೇ-ಶಾಸ್ತ್ರಸಿದ್ಧೇ, ವಿಪರೀತೇ-ಪ್ರತಿಷಿದ್ಧೇವಾ, ಸರ್ವಸ್ಮಿನ್ ಕರ್ಮಣಿ

ಹೇಳಲು ಕಾರಣವೇನೆಂದರೆ ವ್ಯಾಪಾರಗಳು ಉಂಟಾಗಬೇಕಾದರೆ ಪ್ರಥಮತಃ ಆತ್ಮನ ಸಙ್ಕಲ್ಪ ಚಿಕೀರ್ಷಾದಿಗಳು ಆವಶ್ಯಕವು ; ಇದನ್ನು ಜೀವಾತ್ಮನು ತನ್ನ ಧರ್ಮಭೂತಜ್ಞಾನದ್ವಾರಾ ಮನಸ್ಸಿನ ಮೂಲಕ ಪ್ರಯತನವೂ, ಅದನ್ನೇ ವಾಕ್ಕಿನ ದ್ವಾರಾ ವ್ಯಕ್ತಪಡಿಸಿ, ಶರೀರದ ಕಾಲು ಕೈ ಮೊದಲಾದವುಗಳಿಂದ ಪ್ರವೃತ್ತಿಯುಂಟುಮಾಡುವನು ; ಪ್ರವೃತ್ತಿಯುಂಟಾಗುವ ಕ್ರಮವು ಹೀಗೆ. ಇದನ್ನೇ "**ಯನ್ಮನಸಾಧ್ಯಾಯತೇ, ತದ್ವಾಚಾವದತಿ, ತತ್ಕರ್ಮಣಾಕರೋತಿ**" ಎಂಬ ಪ್ರಮಾಣವು ಸಮರ್ಥಿಸುತ್ತದೆ. ಇಲ್ಲಿ ಕರ್ಮಣಾ ಎಂದರೆ ಕರ್ಮೇಂದ್ರಿಯಗಳಿಂದ ಕೂಡಿದ ಶರೀರ ಮೂಲಕವಾಗಿ ಎಂಬ ಭಾವವು. ಆದುದರಿಂದಲೇ **ಶರೀರೇ ವಾಙ್ಮನೋಭಿಃ** ಎಂಬ ಪ್ರಯೋಗವು.

(೪) ಇಲ್ಲಿ ಜೀವಾತ್ಮನನ್ನು ಕರ್ತಾ ಎಂದು ಹೇಳಿರುವದರಿಂದ ಜೀವಾತ್ಮನು ನಡೆಸುವ ಕೆಲಸಗಳಿಗೆ ತಾನೂ ಅಲ್ಲದೆ ಇನ್ನು ನಾಲ್ಕು ಕಾರಣಗಳಾಗಿ ಒಟ್ಟು ಐದು ಕಾರಣವೆಂದು ಹೇಳಿದುದರಿಂದ ಜಗತ್ತಿನ ಸರ್ವ ವ್ಯಾಪಾರಗಳಿಗೂ ಇವೈದೂ ಕಾರಣವೆಂಬ ಭ್ರಮೆಯು ಕೂಡದು. ಸರ್ವೇಶ್ವರನು ತಾನೇ ಸ್ವತಂತ್ರಿಸಿ ನಡೆಸುವ ಜಗತ್ತಿನ ಸೃಷ್ಟ್ಯಾದಿ ಕಾರಣಗಳಿಗೆ ಇವೈದೂ ಹೇತುಗಳಲ್ಲವು. ಇದನ್ನು ಶ್ರೀ ವ್ಯಾಸಮಹರ್ಷಿಯು **ಜಗದ್ವ್ಯಾಪಾರವರ್ಜಂ** ಎಂದು ಜೀವನಿಗೆ ಮುಕ್ತದೆಶೆಯಲ್ಲೂ ಇಲ್ಲವೆಂದು ಹೇಳಿದನಂತರ, ಬದ್ಧದೆಶೆಯಲ್ಲೂ ಇಲ್ಲವೆಂಬುದು ಕೈಮುತಿಕನ್ಯಾಯ ಸಿದ್ಧವು. ಸರ್ವೇಶ್ವರನೂ ತನ್ನ ಸಙ್ಕಲ್ಪಮಾತ್ರದಿಂದಲೇ ಸಿರ್ವಹಿಸಬಲ್ಲನೆಂಬುದು "**ತದೈಕ್ಷತ ಬಹುಸ್ಯಾಂ**" "**ಸೋಕಾಮಯತ ಪ್ರಜಾಸ್ಸೃಜೇಯೇತಿ**" ಇತ್ಯಾದಿ ಶ್ರುತಿವಾಕ್ಯಗಳಿಂದ ವ್ಯಕ್ತವು.

(೫) ಭಗವಂತನು ಪ್ರಬಲನಾದ ಪ್ರಧಾನಕಾರಣನಾದರೆ, ಈ ಜೀವಾತ್ಮನನ್ನು **ಕರ್ತಾ** ಎಂದು ವ್ಯವಹರಿಸಿದುದು ಹೇಗೆ? ಎಂದಾಕ್ಷೇಪಿಸಿದರೆ, ಭಗವಂತನು ಈತನ ಪ್ರವೃತ್ತಿಗೆ ಬೇಕಾದ ಶರೀರ, ಇಂದ್ರಿಯ, ಜ್ಞಾನ ಶಕ್ತಿ ಮೊದಲಾದವುಗಳನ್ನು ಕೊಟ್ಟು, ಮಾಡು ಎಂದು ಸ್ವಾತಂತ್ರ್ಯವನ್ನು ಕೊಟ್ಟು ಮಾಡಿಸಿದರೆ, ಕರ್ತೃತ್ವಕ್ಕೆ ಭಂಗವೆಲ್ಲಿಯದು ? ಆದುದರಿಂದ ಆಕ್ಷೇಪಕ್ಕೆ ಕಾರಣವಿಲ್ಲವು.

(೬) ಆಗಲಿ ಪರಮಾತ್ಮನು ಹೀಗೆ ಮಾಡಿಸಿದರೆ ಪರಮಾತ್ಮನು ಒಂದನ್ನು ಸುಕೃತವೆಂದು ಭಾವಿಸಿ ಅನುಗ್ರಹವೂ ಇನ್ನೊಂದನ್ನು ದುಷ್ಕೃತವೆಂದು ಭಾವಿಸಿ ಶಿಕ್ಷೆಯೂ, ನ್ಯಾಯವೋ ? ತಾನೇ ಮಾಡಿಸಿ ತಾನೇ ಶಿಕ್ಷಿಸಬಹುದೋ ? ಎಂದರೆ, ಸರ್ವೇಶ್ವರನು ಈ ಜೀವಾತ್ಮನಿಗೆ ಜ್ಞಾನ ಶಕ್ತಿ ವಿವೇಕಾದಿಗಳನ್ನು ಕೊಟ್ಟು, ಸಚ್ಛಾಸ್ತ್ರವನ್ನೂ ದಯಪಾಲಿಸಿ ತದುಪದೇಶಿಕರನ್ನೂ ಒದಗಿಸಿಕೊಟ್ಟು, ಶಾಸ್ತ್ರಾನುಮತಿರೀತ್ಯಾ ನಡೆಯಲು ಸ್ವಾತಂತ್ರ್ಯವನ್ನು ಕೊಟ್ಟಿದ್ದರೂ, ವಿಧಿಬಲದಿಂದ ಸುಕೃತದ ಸಹಾಯವಿಲ್ಲದೆ, ಅನ್ಯಥಾ ನಡೆದರೆ ಈದುರ್ವೃತ್ತಿಯಿಂದ ತಪ್ಪಿಸಬೇಕೆಂದಿರುವ ಲೋಕಾಪಿತಾವಿನ ಶಿಕ್ಷೆಯೂ ಹಿತಕರವಾದುದಾಗಿ ನ್ಯಾಯವಾದುದೇ .

**ಭಾಷ್ಯಾರ್ಥವು**—ಹಿಂದೆ, ಮೋಕ್ಷಾರ್ಥಿಯು ವಿಹಿತಕರ್ಮಗಳನ್ನು ಭಕ್ತಿಯೋಗಕ್ಕಾಗಿ ಆಚರಿಸಲೇಬೇಕು, ಬಿಡತಕ್ಕದ್ದಲ್ಲವೆಂದು ಹೇಳಿ, ಕರ್ತೃತ್ವ ಮಮತಾಫಲಗಳನ್ನು ತ್ಯಾಗಮಾಡಬೇಕೆಂದೂ ಹೇಳಿದರು. ಈ ಉಪದೇಶವು ಚನ್ನಾಗಿ ಮನಸ್ಸಿಗೆ ಹಿಡಿಯುವದಕ್ಕಾಗಿ ನಿಶ್ಚಯವಾಗಿಯೂ ಕರ್ತೃತ್ವಾದಿಗಳು ತನ್ನ ಅಧೀನವಲ್ಲವು ; ಪರಮಪುರುಷಾಧೀನವೆಂದು ಹೇಳುವ ಸಂದರ್ಭದಲ್ಲಿ, ಕೆಲಸಗಳು ನಡೆಯಬೇಕಾದರೆ ಐದು ಹೇತುಗಳಿರಬೇಕೆಂದು ಹಿಂದೆ ಹೇಳಿದುದನ್ನು ಮುಂದಿನ ಎರಡು ಶ್ಲೋಕಗಳಿಂದ ಉಪಪಾದಿಸುತ್ತಾರೆ—**ನ್ಯಾಯ್ಯೇ**-ನ್ಯಾಯವನ್ನು ಬಿಡದೇ ಇರುವ ಎಂದರೆ **ಶಾಸ್ತ್ರಸಿದ್ಧೇ**-ಶಾಸ್ತ್ರಾನುಮತಿ ಇರುವದೇಯಾಗಲಿ, ಅಥವಾ ಶಾಸ್ತ್ರಾನುಮತಿಯಿಲ್ಲದೆ, **ವಿಪರೀತಂವಾ** ಎಂದರೆ **ಪ್ರತಿಷಿದ್ಧೇವಾ**-ಶಾಸ್ತ್ರವಿರುದ್ಧವಾದುದೇ

**ಶಾರೀರೇವಾಚಿಕೇ ಮಾನಸೇಚ ಪಞ್ಚೈತೇ ಹೇತವಃ; ಅಧಿಷ್ಠಾನಂ-ಶರೀರವ್, ಅಧಿಷ್ಠೀಯತೇ ಜೀವಾತ್ಮನೇತಿ ಮಹಾ ಭೂತ ಸಂಘಾತರೂಪಂ ಶರೀರ ಮಧಿಷ್ಠಾನಮ್; ತಥಾಕರ್ತಾ-ಜೀವಾತ್ಮಾ; ಅಸ್ಯಜೀವಾತ್ಮನೋ ಜ್ಞಾತೃತ್ವಂ ಕರ್ತೃತ್ವಂಚ—(೧) "ಜ್ಞೋತ ಏವ" (೨) "ಕರ್ತಾ ಶಾಸ್ತ್ರಾರ್ಥವತ್ವಾತ್" ಇತಿ**

---

ಯಾಗಲಿ, **ಸರ್ವಸ್ಮಿನ್ಕರ್ಮಣಿ**-ಹೀಗೆ ಸಮಸ್ತಕರ್ಮಗಳಲ್ಲೂ, ಅವು **ಶಾರೀರೇ**-ಶರೀರಮೂಲಕವೇಯಾಗಲಿ, **ವಾಚಿಕೇ**-ವಾಕ್ಕಿನ ಮೂಲಕವೇಯಾಗಲಿ, **ಮಾನಸೇಚ**-ಮನಸ್ಸಿನ ಮೂಲಕವೇಯಾಗಲಿ, ಹೀಗೆ ನಡೆಯುವ ಸಮಸ್ತ ಕರ್ಮಗಳಲ್ಲೂ, **ಪಞ್ಚೈತೇಹೇತವಃ**-ಈ ಐದೂ ಕಾರಣಗಳು, ಅವು ಯಾವುವೆಂದರೆ—(೧) **ಅಧಿಷ್ಠಾನಂ**-ಆತ್ಮಾವಿಗೆ ಇರಲು ಸ್ಥಳವಾಗಿರುವ ಶರೀರವು. ಅಧಿಷ್ಠಾನಶಬ್ದದಿಂದ ಶರೀರವು ಹೇಗೆ ಹೇಳಲ್ಪಟ್ಟಿತು? ಎಂದರೆ ವ್ಯುತ್ಪತ್ತಿಮೂಲಕ **ಅಧಿಷ್ಠೀಯತೇ ಜೀವಾತ್ಮನೇತಿ**-ಜೀವಾತ್ಮನಿಂದ ಅಧೀನದಲ್ಲಿಡಲ್ಪಡುತ್ತದೆಯಾದುದರಿಂದ, **ಮಹಾಭೂತ ಸಂಘಾತರೂಪಂ ಶರೀರ ಮಧಿಷ್ಠಾನಂ**-ಪಂಚಮಹಾಭೂತಗಳ ಸಂಘಾತರೂಪವಾದ ಶರೀರವು ಜೀವಾತ್ಮನಿಗೆ ಅಧಿಷ್ಠಾನವೆಂದು ಹೇಳಿಸಿಕೊಳ್ಳುತ್ತದೆ; **ಅಧಿಷ್ಠಾನ** ಶಬ್ದವು ಆತ್ಮನ ಕ್ಷೇತ್ರ, ಶರೀರವೆಂದು ಹೇಳಲು ಪ್ರಮಾಣಗಳುಂಟೋ ಎಂದರೆ ಭಾರತದಲ್ಲಿ ಹಾಗೆ ಪ್ರಯೋಗವುಂಟು:-ಹೇಗೆಂದರೆ "**ಅಧಿಷ್ಠಾನಂಕ್ಷೇತ್ರ ಮಾಹು ರೇತತ್ತ್ವಂಚವಿಂಶಕಂ**" ಮುಂದಕ್ಕೆ "**ತಚ್ಚಕ್ಷೇತ್ರಂ ಮಹನಾತ್ಮಾ ಪಂಚವಿಂಶೋಽಧಿಷ್ಠತಿ**" ಎಂದು ವಸಿಷ್ಠರು ಕರಾಳರಾಜನಿಗೆ ಹೇಳುವ ಸಂದರ್ಭವು. ೨೪ ಜಡತತ್ವಗಳಿಂದ ಕೂಡಿದ ಈ ಶರೀರವು (ಭಾರತ ಶಾನ್ತಿ. ೩೧೨. ೧೪) ೨೫ನೆಯ ತತ್ತ್ವವಾದ ಜೀವಾತ್ಮನಿಗೆ ಇರಲು ಆಶ್ರಯವಾದ ಕ್ಷೇತ್ರವೆಂದು ಹೇಳಲ್ಪಟ್ಟಿರುತ್ತದೆ ಹಾಗೆಯೇ ಶ್ರುತಿಯಲ್ಲೂ "**ಮಘಾವನ್ಮರ್ತ್ಯಂವಾ ಇದಂ ಶರೀರಮಾತ್ತಂಮೃತ್ಯುನಾ ತದೇತದಮೃತಸ್ಯಾ ಶರೀರಸ್ಯಾತ್ಮನೋಽಧಿಷ್ಠಾನಮ್**" (ಛಾಂ. ೮. ೧೨. ೧) ಅಧಿಷ್ಠಾನವು ಆತ್ಮನ ಶರೀರವೆಂದು ಹೇಳಲ್ಪಟ್ಟಿರುತ್ತದೆ ಇದರರ್ಥವೇನೆಂದರೆ, **ಇದಂ ಶರೀರಂವಾ ಮರ್ತ್ಯಂ**-ಈ ಶರೀರವೇ ಮರಣಧರ್ಮ ಉಳ್ಳದುದು; ಕೇವಲ ಮರಣಧರ್ಮವುಳ್ಳದು ಮಾತ್ರವೇ ಅಲ್ಲವು; ಮತ್ತೇನೆಂದರೆ, **ಮೃತ್ಯುನಾ ಆತ್ತಂ**-ಮೃತ್ಯುವಿಂದ ವ್ಯಾಪಿಸಲ್ಪಟ್ಟಿದುದೂ ಹೌದು, ಎಂದರೆ ಸತತ ವಿನಾಶವನ್ನು ಹೊಂದುವ ಸ್ವಭಾವವುಳ್ಳದು; **ತದೇತತ್**-ಇಂತಹ ಹೇಯವಾದ ಶರೀರವು, **ಅಮೃತಸ್ಯ**-ನಾಶರಹಿತನಾಗಿ ನಿತ್ಯನಾಗಿ ಪರಿಶುದ್ಧನಾಗಿ, **ಅಶರೀರಸ್ಯ**-ಅಣುವಾಗಿ ಶರೀರವಿಲ್ಲದ, **ಆತ್ಮನೋಽಧಿಷ್ಠಾನಮ್**-ಆತ್ಮನಿಗೆ ಕರ್ಮದಿಂದ ಪ್ರಾಪ್ತವಾಗಿ ಕರ್ಮಭೋಗಕ್ಕಾಗಿ ಆತನಿಗೆ ಒಳಪಟ್ಟ ಆಶ್ರಯವು. ಮುಂದೆ ಹೀಗೆ ಶರೀರದಿಂದ ಇರುವ ಆತ್ಮನಿಗೇನೇ ಪ್ರಿಯಾಪ್ರಿಯಗಳ ಹೊಡತ ಉಂಟೆಂದು, ಹಾಗೆ ಕರ್ಮಕೃತ ಶರೀರವಿಲ್ಲದೇ ಇರುವ ಮುಕ್ತದೆಶೆಯಲ್ಲಿ ಅಂತಹ ಪ್ರಿಯಾಪ್ರಿಯಗಳ ಬಾಧೆ ಇಲ್ಲವೆಂದು ಹೇಳಲ್ಪಡುತ್ತದೆ. **ಅಧಿಷ್ಠೀಯತೇ ಜೀವಾತ್ಮನಾ** ಎಂದು ಏಕೆ ಭಾಷ್ಯವೆಂದರೆ ಪರಮಾತ್ಮನೂ ಇದ್ದರೂ ಪರಮಾತ್ಮನನ್ನು ವ್ಯವಚ್ಛೇದಿಸಿ ಜೀವಾತ್ಮನ ವ್ಯಾಪಾರಗಳಿಗೆ ಕಾರಣಗಳನ್ನು ಹೇಳುವದು ವಿವಕ್ಷಿತವಾದುದರಿಂದಲೂ, ಮತ್ತು ಪರಮಾತ್ಮನು ಈ ಯಾವಕಾರಣಗಳೂ ಬೇಕಾಗಿಲ್ಲದೆ ಸಙ್ಕಲ್ಪಮಾತ್ರದಿಂದಲೇ ಸೃಷ್ಟ್ಯಾದಿ ವ್ಯಾಪಾರಗಳನ್ನು ನಡೆಸುವನಾದುದರಿಂದಲೂ ಹಾಗೆ ಪ್ರಯೋಗವು. (೨) **ತಥಾ**-ಹಾಗೆಯೇ, **ಕರ್ತಾ** ಎಂದರೆ ಜೀವಾತ್ಮನು; ಜೀವಾತ್ಮನ ಮೂಲಕವಾಗಿ ಈ ಕೆಲಸಗಳೆಲ್ಲಾ ನಡೆಯುವದರಿಂದ ಆತನು **ಕರ್ತಾ** ಎಂದು ಹೇಳಲ್ಪಟ್ಟನು. ಆದುದರಿಂದ ಜಗದ್ವ್ಯಾಪಾರಾದಿಗಳು ಲಕ್ಷ್ಮೀನಾರಾಯಣರ ಸಙ್ಕಲ್ಪಾನುಸಾರ ಮಾತ್ರವೇ ನಡೆಯುವದರಿಂದ ಅಂತಹ ಜಗದ್ವ್ಯಾಪಾರಗಳು ಇದ

---

(೧) ಶಾರೀ. ೨ ೩. ೧೮. (೨) ಶಾರೀ. ೨. ೩. ೩೩

**ಚ ಸೂತ್ರೋಪಪಾದಿತಮ್; ಕರಣಂಚ, ಪೃಥಗ್ವಿಧಂ-ವಾಕ್ಪಾಣಿ ಪಾದಾದಿ**

---

ರಿಂದ ವ್ಯಾವರ್ತಿಸಲ್ಪಟ್ಟವು. ಆದರೆ, ಅಕರ್ತೃತ್ವಾನುಸಂಧಾನವನ್ನು ಉಪದೇಶಿಸಿ ಈಗ **ಕರ್ತಾ** ಎಂದು ಹೇಳುವದು ಹೇಗೆ? ಎಂದರೆ ಏದರಲ್ಲಿ ಈತನು ಒಂದು ಕಾರಣವಾದುದರಿಂದ ತನಗೆ ಸಂಬಂಧಪಟ್ಟಷ್ಟು ಕರ್ತೃತ್ವವೂ, ಹಾಗೆಯೇ ಜ್ಞಾತೃತ್ವವೂ ಸಹ, ಜೀವಾತ್ಮನಿಗೆ ಉಂಟೇ ಉಂಟು ಎಂದು ಸಪ್ರಮಾಣವಾಗಿ ಮುಂದೆ ತಿಳಿಸುತ್ತಾರೆ; ಆಗಲಿ, ಪರಮಾತ್ಮನೂ **ಕರ್ತಾ**ವಲ್ಲವೋ? ಎಂದರೆ, ಹೌದು ಆತನು ಮುಂದೆ **ದೈವಂಚ** ಎಂದು ಹೇಳಲ್ಪಡುವದರಿಂದ, ಇಲ್ಲಿ **ಕರ್ತಾ** ಜೀವಾತ್ಮಾ. **ಅಸ್ಯಜೀವಾತ್ಮನಃ**-ಈ ಜೀವಾತ್ಮನಿಗೆ, **ಜ್ಞಾತೃತ್ವವೂ, ಕರ್ತೃತ್ವವೂ** ಸಹ "**ಜ್ಞೋತ ಏವ**" ಎಂದೂ, "**ಕರ್ತಾ ಶಾಸ್ತ್ರಾರ್ಥವತ್ವಾತ್**" **ಇತಿಚ**-ಎಂದೂ ಸಹ, **ಸೂತ್ರೋಪಪಾದಿತಮ್**- ಬ್ರಹ್ಮಸೂತ್ರಗಳಲ್ಲಿ ಉಪಪಾದಿತವು. ಜೀವಾತ್ಮನೇನು ಚೈತನ್ಯಮಾತ್ರಸ್ವರೂಪನೇ? ಜಡಸ್ವರುಪನಾಗಿದ್ದು ಆಗನ್ತುಕವಾಗಿ ಜ್ಞಾನವನ್ನು ಹೊಂದಿದವನೇ? ಅಥವಾ ಜ್ಞಾತೃತ್ವೈಕಸ್ವರೂಪನೇ? ಎಂಬ ಸಂದೇಹದಲ್ಲಿ ಜ್ಞಾನಮಾತ್ರಸ್ವರೂಪನೆಂದು ಕೆಲವರು ಹೇಳುವದನ್ನು ಒಪ್ಪಿದರೆ, ಸುಷುಪ್ತಿ ಮೂರ್ಛಾದಿಗಳಲ್ಲಿ ಆತ್ಮಾವಿಗೆ ಜ್ಞಾನವು ತೋರುವದಿಲ್ಲವಾದುದರಿಂದ ಜ್ಞಾನಮಾತ್ರ ಸ್ವರೂಪನಾಗುವದಿಲ್ಲವು. ಮತ್ತು ಆತನು ಪಾಷಾಣ ರೂಪದಲ್ಲಿ ಇರುವವನು, ಆತನಿಗೆ ಈ ಜ್ಞಾತೃತ್ವವು, ಆಗನ್ತುಕವೆಂಬುದೂ ಕೂಡುವದಿಲ್ಲವು; ಏಕೆಂದರೆ ಶ್ರುತಿಯು "**ಅಥಯೋವೇದೇದಂ ಜಿಘ್ರಾಣೀತಿ ಸ ಆತ್ಮಾ**" ಎಂದು ಹೇಳಿರುವದರಿಂದ ಜ್ಞಾತೃತ್ವವು ಜೀವಾತ್ಮನಿಗೆ ಯಾವಾಗಲೂ ಸ್ವರೂಪತಃ ಉಂಟೆಂದು ಈ **ಜ್ಞೋತ ಏವ** ಎಂಬ ಶಾರೀರಕ ಸೂತ್ರದಲ್ಲಿ (೨. ೩. ೧೯) ಬೋಧಿತವು. ಆದರೆ ಶ್ರುತಿಯಲ್ಲಿ "**ವಿಜ್ಞಾನಂ ಯಜ್ಞಂ ತನುತೇ**" ಎಂಬಲ್ಲಿ ಜ್ಞಾನಮಾತ್ರ ಸ್ವರೂಪನೆಂದು ತೋರಿಬರುವದಿಲ್ಲವೇ? ಎಂದರೆ ಹಾಗೆ ಶ್ರುತಿ ಹೇಳಲು ಕಾರಣವೇನೆಂದರೆ—ಜ್ಞಾನಸ್ವರೂಪನಾದ ಜೀವಾತ್ಮನಿಗೆ ಧರ್ಮಭೂತ ಜ್ಞಾನವು ಸ್ವರೂಪನಿರೂಪಕ ಧರ್ಮವೆಂದು ತಿಳಿಸುವದಕ್ಕಾಗಿ ಹಾಗೆ ಪ್ರಯೋಗವೆಂದು ಭಾವಿಸತಕ್ಕದ್ದು. ಸುಷುಪ್ತಿ ಮೂರ್ಛೆಗಳಲ್ಲಿ ಏಕೆ ಜ್ಞಾತೃತ್ವವಿಲ್ಲವೆಂದರೆ, ಧರ್ಮಭೂತಜ್ಞಾನಕ್ಕೆ ಕರ್ಮಮೂಲಕ ಸಂಕೋಚವುಂಟಾಗಿರುವದರಿಂದ ಎಂದು ತಿಳಿಯತಕ್ಕದ್ದು. ಆದುದರಿಂದ ಆ ಜೀವಾತ್ಮ ಜ್ಞಾತೃತ್ವವಿಲ್ಲದ ಬರೀ ಜ್ಞಾನಸ್ವರೂಪನೆಂಬ ವಾದವು ಸರಿಯಲ್ಲವು, ಆತನು **ಜ್ಞೋತ ಏವ;** ಆತನಿಗೆ ಧರ್ಮಭೂತಜ್ಞಾನದ್ವಾರಾ ಜ್ಞಾತೃತ್ವವೂ ಉಂಟು, ಇದು ಈ ಸೂತ್ರಾರ್ಥವು. "**ಕರ್ತಾಶಾಸ್ತ್ರಾರ್ಥವತ್ವಾತ್**" ಎಂಬ ಸೂತ್ರದಿಂದ, ಸಾಂಖ್ಯಮತವಾದ ಜೀವಾತ್ಮನಿಗೆ ಕರ್ತೃತ್ವವಿಲ್ಲವು, ದೇಹವಾದ ಪ್ರಕೃತಿಗೇ ಕರ್ತೃತ್ವವು ಎಂಬ ಅಭಿಪ್ರಾಯವು ಖಂಡಿಸಲ್ಪಟ್ಟಿರುತ್ತದೆ "**ಯಜೇತ**" "**ಉಪಾಸೀತ**" ಇತ್ಯಾದಿ ಶಾಸ್ತ್ರವಿಧಿ ವಾಕ್ಯಗಳಿರುವದರಿಂದ, ಅಂತಹ ವಿಧಿಯು **ಜ್ಞಾತೃತ್ವ**ವಿರುವ ಮತ್ತೂ ಕರ್ತೃತ್ವವಿರುವ ಅಧಿಕಾರಿಗೆ ಮಾತ್ರವೇ ಅನ್ವಯಿಸುವದರಿಂದ, ಜಡವಾದ ದೇಹಕ್ಕೆ ಅನ್ವಯಿಸಲಾರದುದರಿಂದಲೂ ಜೀವಾತ್ಮನಿಗೆಕರ್ತೃತ್ವವನ್ನೂ ಜ್ಞಾತೃತ್ವವನ್ನೂ ಒಪ್ಪತಕ್ಕದ್ದಾಗಿರುತ್ತದೆ ಎಂಬುದು ಸೂತ್ರಾಭಿಪ್ರಾಯವು. ಜ್ಞಾತೃತ್ವವು ಜ್ಞೇಯವಸ್ತುವನ್ನು ಅಪೇಕ್ಷಿಸುತ್ತದೆ. ಜ್ಞೇಯವಾದ ಜಗತ್ತಿನ ವಸ್ತುಗಳೆಲ್ಲಾ ಮಿಥ್ಯೆಯಾದರೆ, ಜ್ಞಾತೃತ್ವವೂ ಬೇಕಾಗಿಲ್ಲವೆಂಬ ವಾದವನ್ನು ನಿರಾಕರಿಸುವದಕ್ಕಾಗಿಯೇ ಇಲ್ಲಿ ಜ್ಞಾತೃತ್ವವೂ ಕರ್ತೃತ್ವವೂ ಎರಡೂ ಆತ್ಮನಿಗೆ ಉಂಟೆಂದು ಉದಾಹರಿಸಿದ **ಜ್ಞೋತ ಏವಾದಿ** ಎರಡು ಸೂತ್ರಗಳಲ್ಲಿ ಉಪಪಾದಿತವೆಂದು ಹೇಳಿದರು. ಕರ್ತೃತ್ವವು ಜೀವಾತ್ಮನಲ್ಲಿ "**ಶಾಸ್ತ್ರಫಲಂ ಪ್ರಯೋಕ್ತರಿ**" ಎಂದು ಹೇಳಿರುವ ಹಾಗೆ ಉಂಟೆಂದು ಹೇಳುವ ಸಂದರ್ಭದಲ್ಲಿ **ಜ್ಞಾತೃತ್ವವನ್ನು** ಏಕೆ ತಂದರು ಎಂದು ಕೇಳಿದರೆ, ಜ್ಞಾತೃತ್ವವಿಲ್ಲದೆ ಬರೀ ಜ್ಞಾನಸ್ವರೂಪವಾದರೆ ಕರ್ತೃತ್ವವೂ ಸಹ ಉಂಟಾಗುವದಿಲ್ಲವೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಬ್ರಹ್ಮಸೂತ್ರಗಳಲ್ಲೂ ಆತ್ಮನಿಗೆ ಮೊದಲು ಜ್ಞಾತೃತ್ವವನ್ನು **ಜ್ಞೋತ ಏವ** ಎಂಬ ಸೂತ್ರದಿಂದ

**ಪಞ್ಚಕಂ ಸಮನಸ್ಕಂ ಕರ್ಮೇಂದ್ರಿಯಂ, ಪೃಥಗ್ವಿಧಂ-ಕರ್ಮನಿಷ್ಪತ್ತೌ ಪೃಥಗ್ವ್ಯಾಪಾರವತ್; ವಿವಿಧಾಚ ಪೃಥಕ್ಚೇಷ್ಟಾ-ಚೇಷ್ಟಾಶಬ್ದೇನ ಪಞ್ಚಾತ್ಮಾ ವಾಯು**

---

ಉಪಪಾದಿಸಿ, ಅನನ್ತರ ಕರ್ತೃತ್ವವು ಸ್ಥಾಪಿಸಲ್ಪಟ್ಟಿರುತ್ತದೆ ಮುಂದೆ ಮೂರನೆಯ ಕಾರಣವು ಹೇಳಲ್ಪಡುತ್ತದೆ. (೩) **ಕರಣಂಚ ಪೃಥಗ್ವಿಧಂ** ಎಂದರೆ **ವಾಕ್ಪಾಣಿಪಾದಾದಿಪಂಚಕಂ ಸಮನಸ್ಕಂ ಕರ್ಮೇಂದ್ರಿಯಂ**-ವಾಕ್ಕು ಕೈಕಾಲು ಮೊದಲಾದ ಐದಾಗಿ ಮನಸ್ಸಿನಿಂದ ಸೇರಿರುವ ಕರ್ಮೇಂದ್ರಿಯ ಸಮೂಹವು, **ಅದು ಪೃಥಗ್ವಿದಂ** ಎಂದು ಹೇಳಲ್ಪಟ್ಟಿತು, ಎಂದರೆ **ಕರ್ಮನಿಷ್ಪತ್ತೌ ಪೃಥಗ್ವ್ಯಾಪಾರಂ**-ಕರ್ಮವು ಉಂಟಾಗುವದಕ್ಕೆ ನಾನಾವಿಧ ವ್ಯಾಪಾರವುಳ್ಳವು ಎಂದು ಹೇಳಲ್ಪಟ್ಟಿತು; ಇಲ್ಲಿ ವ್ಯಾಖ್ಯಾನದಲ್ಲಿ **ಕರ್ಮಣಂಚ** ಎಂಬುದಕ್ಕೆ **ವಾಕ್ಪಾಣಿಪಾದಾದಿ ಪಂಚಕಂ ಸಮನಸ್ಕಂ ಕರ್ಮೇಂದ್ರಿಯಂ** ಎಂದು ಕರ್ಮೇಂದ್ರಿಯವನ್ನು ಮಾತ್ರ ಸೂಚಿಸಿರುವದು ನ್ಯಾಯವೇ? ಜ್ಞಾನೇಂದ್ರಿಯಗಳಾದ ಚಕ್ಷುರಾದಿಗಳು ಕರ್ಮೇಂದ್ರಿಯ ವ್ಯಾಪಾರಗಳಿಗೂ ಬೇಡವೋ ಎಂದು ಆಕ್ಷೇಪಿಸಿದರೆ, ಯದ್ಯಪಿ ದೇಹಪ್ರವೃತ್ತಿಗಳಿಗೆ ಕರ್ಮೇಂದ್ರಿಯಗಳೇ ಬೇಕಾಗಿದ್ದರೂ, **ಸಮನಸ್ಕಂ** ಎಂಬ ಪ್ರಯೋಗದಿಂದ ಜ್ಞಾನೇಂದ್ರಿಯಗಳ ಸಹಾಯವುಳ್ಳ ಮನಸ್ಸಿಲ್ಲದೆ ಯಾವ ವ್ಯಾಪಾರವೂ ನಡೆಯದೇ ಇರುವದರಿಂದ ಭಾಷ್ಯವು ಉಪಪನ್ನವೇ ವಿನಾ ಆಕ್ಷೇಪಣೆಗೆ ಕಾರಣವಿಲ್ಲವು. ಮನಸ್ಸು ಜ್ಞಾನಕರಣವು, ಏಕೆಂದರೆ ವಿಷಯಗಳ ಜ್ಞಾನವನ್ನು ಜ್ಞಾನೇಂದ್ರಿಯಗಳ ಮೂಲಕ ಧರ್ಮಭೂತಜ್ಞಾನದ್ವಾರಾ ಆತ್ಮಾವಿಗೆ ಉಂಟುಮಾಡುತ್ತದೆಯಾದುದರಿಂದ ಎಂಬ ಭಾವವು. ಹೀಗೆ ಮನಸ್ಸಿನ ಮೂಲಕ ಜ್ಞಾನ ಉಂಟಾಗಿ, ಅತನು ಸಙ್ಕಲ್ಪಿಸಿ ವ್ಯಾಪಾರಗಳನ್ನು ಒಡನೆ ನಡೆಸುವನಾದುದರಿಂದ **ಸಮನಸ್ಕಂ** ಎಂಬ ವ್ಯಾಖ್ಯಾನವು. ಜ್ಞಾನೇಂದ್ರಿಯಗಳಿಂದ ಉಂಟಾದ ಮನೋವೃತ್ತಿಯೇ ಸಕಲ ಕರ್ಮೇಂದ್ರಿಯಗಳ ಪ್ರವೃತ್ತಿಗೂ ಕಾರಣವು. ಈ ಸಂದರ್ಭದಲ್ಲಿ "**ಮನಸಾ ಹ್ಯೇವಪಶ್ಯತಿ, ಮನಸಾಶೃಣೋತಿ**" (ಬೃ. ೩. ೫ ೩) ಎಂಬ ಶ್ರುತಿವಾಕ್ಯವೂ ಮತ್ತು "**ಮನೋಹಿ ಹೇತುಸ್ಸರ್ವೇಷಾಂ ಇಂದ್ರಿಯಾಣಾಂ ಪ್ರವರ್ತನೇ**" (ರಾ. ಸು. ೧೧. ೪೧) ಎಂಬ ಆಂಜನೇಯೋಕ್ತಿಯೂ ಅನುಸಂಧೇಯಗಳು. ಮನಸ್ಸು ಆತ್ಮನಿಗೆ ಧರ್ಮಭೂತದ ಮೂಲಕ ಜ್ಞಾನ ಉಂಟುಮಾಡುವದಕ್ಕೂ ದ್ವಾರವೂ, ಮತ್ತೂ ಆತ್ಮನ ಸಙ್ಕಲ್ಪಾದಿಗಳಿಗೆ ಅನುಗುಣವಾಗಿ ಕರ್ಮೇಂದ್ರಿಯಗಳ ಪ್ರವೃತ್ತಿಗೂ ಸಹ ಮನಸ್ಸೇ ದ್ವಾರವೂ; ಆದುದರಿಂದಲೇ **ಸಮನಸ್ಕಂ** ಎಂಬ ಪ್ರಯೋಗವು; ಇದರಿಂದ ಜ್ಞಾನೇಂದ್ರಿಯಗಳೂ ವಿವಕ್ಷಿತವು, **ಕರಣಗಳು ಪೃಥಗ್ವಿದಂ** ಎಂದು ಹೇಳಿರುವದರ ಅಭಿಪ್ರಾಯವೇನೆಂದರೆ, ಕರಣಗಳಾದ ಕರ್ಮೇಂದ್ರಿಯಗಳು ಐದೇ ಆಗಿರುವದರಿಂದ, **ಪೃಥಗ್ವಿಧಂ** ಎಂಬುದರಿಂದ ಅವುಗಳ ವ್ಯಾಪಾರಗಳು ಸಂದರ್ಭಾನುಸಾರವಾಗಿ ನಾನಾವಿಧಗಳು ಎಂಬುದನ್ನು ಸೂಚಿಸುತ್ತದೆ ಎಂಬ ಭಾವದಿಂದ, **ಕರ್ಮನಿಷ್ಪತ್ತೌ ಪೃಥಗ್ವ್ಯಾಪಾರವತ್**-ಕರ್ಮವನ್ನುಂಟುಮಾಡುವದರಲ್ಲಿ ಬೇರೆ ಬೇರೆ ವ್ಯಾಪಾರಗಳನ್ನುಳ್ಳವು ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಈ ಸಂದರ್ಭದಲ್ಲಿ ಸಾಂಖ್ಯರ ಉಕ್ತಿಯು ಏನೆಂದರೆ—"**ಬುದ್ಧೀನ್ದ್ರಿಯಾಣಿ ಚಕ್ಷುಶ್ಶ್ರೋತ್ರ ಘ್ರಾಣ ರಸನತ್ವಗಾಖ್ಯಾನಿ, ವಾಕ್ಪಾಣಿಪಾದ ಪಾಯೂಪಸ್ಥಾನ್ಕರ್ಮೇನ್ದ್ರಿಯಾಣ್ಯಾಹುಃ। ಉಭಯಾತ್ಮಕಮತ್ರಮನಸ್ಸಂಕಲ್ಪಕಮಿನ್ದ್ರಿಯಂಚ ಸಾಧರ್ಮ್ಯಾತ್**" ಇದರಿಂದ ಮನಸ್ಸು ಎರಡು ವಿಧವಾಗಿ ಜ್ಞಾನೇಂದ್ರಿಯವಾಗಿ ಜ್ಞಾನಕ್ಕೂ ಹೇತುವು, ಕರ್ಮೇಂದ್ರಿಯವಾಗಿ ಕರ್ಮಕ್ಕೂ ಹೇತುವು. ಆದುದರಿಂದ **ಸಮನಸ್ಕಂ** ಎಂಬ ಪ್ರಯೋಗವು. (೪) ನಾಲ್ಕನೆಯ ಕಾರಣವು **ವಿವಿಧಾಚ ಪೃಥಕ್ಚೇಷ್ಟಾ**-ಇಲ್ಲಿ **ಚೇಷ್ಟಾಶಬ್ದೇನ**-ಚೇಷ್ಟಾ ಎಂಬ ಶಬ್ದದಿಂದ, **ಪಂಚಾತ್ಮಾವಾಯುಃ**-ಪ್ರಾಣಾಪಾನಾದಿ ಐದು ವಿಧವಾದ ಪ್ರಾಣವಾಯುವು, **ತದ್ವೃತ್ತಿವಾಚಿನಾ**-ಅದರ ವ್ಯಾಪಾರವನ್ನು ಚೇಷ್ಟಾಶಬ್ದವು ಬೋಧಿಸುವದರಿಂದ, **ಅಭಿಧೀಯತೇ**-ಹೇಳಲ್ಪಡುತ್ತದೆ. ಅದು ಹೇಗೆ ಎಂಬುದನ್ನು ಮುಂದೆ ಉಪಪಾದಿಸಿ ಹೇ..ತ್ತಾರೆ—

**ರಭಿಧೀಯತೇ ತದ್ವ್ಯೃತ್ತಿವಾಚಿನಾ; ಶರೀರೇನ್ದ್ರಿಯಧಾರಣಸ್ಯ ಪ್ರಾಣಾಪಾನಾದಿ ಭೇದ ಭಿನ್ನಸ್ಯ ವಾಯೋಃ ಪಂಚಾತ್ಮನೋ, ವಿವಿಧಾಚಚೇಷ್ಟಾ-ವಿವಿಧಾ ವೃತ್ತಿಃ; ದೈವಂಚೈವಾತ್ರಪಂಚಮಮ್-ಅತ್ರ ಕರ್ಮಹೇತುಕಲಾಪೇ ದೈವಂ**

---

**ಶರೀರೇನ್ದ್ರಿಯಧಾರಣಸ್ಯ**-ಶರೀರೇಂದ್ರಿಯುಗಳಿಗೆ ಧಾರಕಗಳಾದ, **ಪ್ರಾಣಾಪಾನಾದಿ ಭೇದ ಭಿನ್ನಸ್ಯವಾಯೋಃ**-ಪ್ರಾಣ, ಅಪಾನ, ಆದಿಶಬ್ದದಿಂದ ವ್ಯಾನ, ಉದಾನ, ಸಮಾನಗಳು ಹೇಳಲ್ಪಟ್ಟವು. ಹೀಗೆ ಐದು ವಿಧವಾದ ಭೇದದಿಂದ ಭಿನ್ನವಾದ ವಾಯುವಿನ, **ಪಂಚಾತ್ಮನೋ ವಿವಿಧಾಚಚೇಷ್ಟಾ**-ಐದು ವಿಧವಾಗಿ ಬೇರೆ ಬೇರೆ ರೂಪವಾದ ಚೇಷ್ಟೆಯೂ; **ಚೇಷ್ಟಾ** ಎಂದರೆ ಸಙ್ಕಲ್ಪ ಪ್ರಯತ್ನಾದಿಗಳ ಮೂಲಕ ವಾಕ್ಕು ಶರೀರ ಇವುಗಳ ಪ್ರವೃತ್ತಿ ಎಂದು ಹೇಳುವದು ನ್ಯಾಯವು. ಹಾಗಲ್ಲದೆ ಚೇಷ್ಟಾ ಶಬ್ದಕ್ಕೆ ಪಂಚವಾಯುಗಳ ಮೂಲಕ ನಡೆಯುವ ವ್ಯಾಪಾರವೆಂಬ ಭಾಷ್ಯವು ಹೇಗೆ; ಎಂದರೆ ಶರೀರಾದಿಗಳ ವ್ಯಾಪಾರಗಳೆಲ್ಲಾ ಶಾಸ್ತ್ರಗಳಲ್ಲಿ ಪ್ರಾಣಾಯತ್ತವೆಂದು ಹೇಳಿರುವದನ್ನು ಅನುಸರಿಸಿ ಹಾಗೆ ವ್ಯಾಖ್ಯಾನವು; ಜೀವಾತ್ಮನ ಸಙ್ಕಲ್ಪಾದಿಗಳು ಸರಿಯಾಗಿ ನಡೆಯಬೇಕಾದರೆ ಪಂಚ ಪ್ರಾಣವಾಯುಗಳ ಸಹಾಯವು ಆವಶ್ಯಕವಾದುದರಿಂದ ಹಾಗೆ ವ್ಯಾಖ್ಯಾನವೆಂದು ಭಾವಿಸತಕ್ಕದ್ದು. ಅದೂ ಅಲ್ಲದೆ ಶರೀರೇಂದ್ರಿಯಗಳಿಗೂ ಪ್ರಾಣಕ್ಕೂ ಸಹ ಶರೀರ ಧಾರಣ ವಿಷಯದಲ್ಲಿ ಪ್ರಾಧಾನ್ಯದ ವಿಷಯದಲ್ಲಿ ವಿವಾದ ಉಂಟಾದಾಗ ಪ್ರಾಣಕ್ಕೆ ಪ್ರಾಧಾನ್ಯವನ್ನು ಶ್ರುತಿಯು ಉಪಪಾದಿಸಿರುವದನ್ನು ಮನಸ್ಸಿನಲ್ಲಿಟ್ಟೇ **ಶರೀರೇನ್ದ್ರಿಯಧಾರಕಸ್ಯವಾಯೋಃ** ಎಂಬ ವ್ಯಾಖ್ಯಾನವು. **ವಾಯೋಃ** ಎಂಬ ಏಕವಚನದಿಂದ ಪ್ರಾಣಾಪಾನಾದಿಗಳು ಭಿನ್ನರೂಪವಾದ ಐದು ಬೇರೆ ಬೇರೆ ರೂಪಗಳಲ್ಲವು; ಎಂಬುದು ಸೂಚಿತವು. ಈ ಪ್ರಾಣಾಪಾನಾದಿ ಐದು ವಾಯುಗಳನ್ನು ಹೇಳಿದುದು, "**ನಾಗಃ ಕೂರ್ಮ ಕೃಕರೋ ದೇವದತ್ತೋ ಧನಂಜಯಃ। ವಾಗ್ದ್ವಾರೇ ನಾಗ ಆಖ್ಯಾತಃ ಕೂರ್ಮ ಉನ್ಮೀಲನೇಸ್ಮೃತಃ। ಕೃಕರಾಚ್ಚ ಕ್ಷುತಂಜ್ಞೇಯಮ್ ದೇವದತ್ತಾ ದ್ವಿಜೃಂಭಣಮ್। ನಜಹಾತಿ ಮೃತಂವಾಪಿ ಸರ್ವವ್ಯಾಪೀ ಧನಂಜಯಃ**" ಎಂಬಲ್ಲಿ ಹೇಳಲ್ಪಟ್ಟ ಪೃಥಗ್ವ್ಯಾಪಾರಗಳುಳ್ಳ ಐದು ವಾಯ್ವಂತರಗಳ ವ್ಯಾಪಾರಕ್ಕೂ ಉಪಲಕ್ಷಣವು ವ್ಯಾಪಾರಗಳಾದರೋ ಭಿನ್ನವು; ಇದು "**ಪಂಚವೃತ್ತಿರ್ಮನೋವದ್ವ್ಯಪದಿಶತೇ**" (ಶಾರೀ ೨. ೪. ೧೧) ಎಂಬ ಸೂತ್ರದಲ್ಲಿ ಉಪಪಾದಿತವು. ಹೇಗೆ ಮನಸ್ಸು ಒಂದೇಯಾಗಿ ಪ್ರವೃತ್ತಿಗಳಾದ **ಕಾಮವೆಂ** ದರೆ ವಿಷಯಾಭಿಲಾಷೆಯೂ, **ಸಙ್ಕಲ್ಪ**- ವ್ಯವಸಾಯವೂ, **ವಿಚಿಕಿತ್ಸಾ**-ಸಂದೇಹವೂ, **ಶ್ರದ್ಧಾ**-ಕರ್ಮದಲ್ಲಿ ಆಸ್ತಿಕ್ಯಬುದ್ಧಿಯೂ **ಅಶ್ರದ್ಧಾ**-ಅದಕ್ಕೆ ವ್ಯತ್ಯಸ್ತವಾದ ಬುದ್ಧಿಯೂ, **ಧೃತಿಃ**- ಪ್ರೀತಿಯೂ, **ಅಧೃತಿಃ**-ಅಪ್ರೀತಿಯೂ **ಹ್ರೀ**-ಲಜ್ಜೆಯು, **ಧೀಃ**-ಪ್ರಮಾಣಜನ್ಯಜ್ಞಾನವು, **ಭೀಃ**-ಮುಂದೆ ಬರುವ ದುಃಖದ ಶಙ್ಕೆ, ಇವೆಲ್ಲವೂ ಹೇಗೆ ಮನಸ್ಸೋ ಎಂದರೆ, ಇವುಗಳಿಗೆಲ್ಲಾ ಹೇಗೆ ಮನಸ್ಸೇ ಪ್ರಧಾನಸಾಧನವೋ, ಹಾಗೆಯೇ ಪ್ರಾಣ, ಅಪಾನ, ವ್ಯಾನ ಉದಾನ, ಸಮಾನ ವ್ಯಾಪಾರಗಳಿಗೆ ಪ್ರಾಣಾಪಾನಾದಿ ವಾಯುವೇ ಸಾಧನವೆಂಬುದು ಸೂತ್ರಾಭಿಪ್ರಾಯವು. ಆದುದರಿಂದ ಆತ್ಮನಿಂದ ನಡೆಯುವ ವ್ಯಾಪಾರಗಳಿಗೆ ವಾಗಾದಿ ಕರ್ಮೇಂದ್ರಿಯಗಳೂ ಮನಸ್ಸೊಂದಿಗೆ ಜ್ಞಾನೇಂದ್ರಿಯಗಳೂ, ಪಂಚವೃತ್ತಿಪ್ರಾಣವೂ ಆವಶ್ಯಕವೆಂದು ಬೃಹದಾರಣ್ಯಕ ೩-೫-೩ನೇ ವಾಕ್ಯವಾದ "**ತ್ರೀಣ್ಯಾತ್ಮನೇ ಕುರುತೇತಿ ಮನೋವಾಚಂ ಪ್ರಾಣಂ**" ಎಂದಾರಂಭಿಸಿ, "**ಮನಸಾಹ್ಯೇವಪಶ್ಯತಿ, ಮನಸಾಶೃಣೋತಿ** ಎಂದು ಹೇಳಿ **ಕಾಮಸ್ಸಙ್ಕಲ್ಪೋವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ ಧೃತಿರಧೃತಿ ರ್ಹ್ರೀ ರ್ಧೀ ರ್ಭೀ ರಿತ್ಯೇತ್ಸರ್ವಂಮನ ಏವ**,ಮನಸ್ಸೇ ಪ್ರಧಾನಸಾಧನವು ಜೀವಾತ್ಮನ ಕರ್ತೃತ್ವದಲ್ಲಿ ಎಂಬ ಭಾವವು. ಹಾಗೆಯೇ, ಪ್ರಾಣನಾದಿ ವ್ಯಾಪಾರಗಳಿಗೂ ಪ್ರಾಣಾಪಾನಾದಿ ಪಂಚವೃತ್ತಿ

**ಪಂಚಮಮಿತ್- ಪರಮಾತ್ಮಾನ್ತರ್ಯಾಮೀ ಕರ್ಮನಿಷ್ಪತ್ತೌ ಪ್ರಧಾನ ಹೇತುರಿತ್ಯರ್ಥಃ; ಉಕ್ತಂ ಹಿ (೧) "ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಸ್ಸ್ಮೃತಿರ್ಜ್ಞಾನಮಪೋಹನಂಚ" ಇತಿ. ವಕ್ಷ್ಯತಿ ಚ (೨) "ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ**

ಪ್ರಾಣವಾಯುವೇ ಕಾರಣವು. ಇದರಿಂದ ಪಂಚವೃತ್ತಿ ಪ್ರಾಣವೂ ಆತ್ಮನ ಕರ್ತೃತ್ವಕ್ಕೆ ಹೇತುವೆಂದು ಈ ಬೃಹದಾರಣ್ಯಕ ಶ್ರುತಿಯನ್ನು ಮನಸ್ಸಿನಲ್ಲಿಟ್ಟು ಶ್ರೀ ಯತಿವರ್ಯರು **ವಿವಿಧಾಶ್ಚ ಪೃಥಕ್ಚೇಷ್ಟಾ** ಎಂಬುದಕ್ಕೆ ಭಾಷ್ಯವನ್ನು ಅನುಗ್ರಹಿಸಿರುತ್ತಾರೆ. ಇತರರು ಮಾಡಿರುವ ಅರ್ಥವಾದ ಚೇತನನ ಸಙ್ಕಲ್ಪ ಪ್ರಯತನಾದಿಗಳಿಂದ ವಿವಿಧ ವ್ಯಾಪಾರವೆಂಬರ್ಥವೂ ಉಪಾದೇಯವೇ; ಏಕೆಂದರೆ ಆ ವ್ಯಾಪಾರಗಳು ಪಂಚವೃತ್ತಿ ಪ್ರಾಣಾಪಾನಾದಿ ಪ್ರಾಣವಾಯುವಿನಿಂದುಂಟಾಗುವದರಿಂದ, ಶ್ರೀ ಭಾಷ್ಯಕಾರರು ಮಾಡಿರುವ ಅರ್ಥದಲ್ಲೇ ಅಂತರ್ಗತವು. ಆದುದರಿಂದ ಎರಡೂ ಒಂದೇ ಅಭಿಪ್ರಾಯವುಳ್ಳವು; ಇತರರು ಶಾಸ್ತ್ರಪ್ರಮಾಣವನ್ನು ಮನಸ್ಸಿನಲ್ಲಿಟ್ಟು ವ್ಯಾಖ್ಯಾನಿಸಲಿಲ್ಲವು. ಶ್ರೀ ಯತಿವರ್ಯರಿಗೆ ಉಪನಿಷತ್ತುಗಳೆಲ್ಲಾ ಕರತಲಾ ಮಲಕವಾದುದರಿಂದ ಈ ಬೃಹದಾರಣ್ಯಕ ಶ್ರುತಿ ಪ್ರಮಾಣಾನುಸಾರವಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಆ ವಾಕ್ಯದ ಮುಖ್ಯ ತಾತ್ಪರ್ಯವೇನೆಂದರೆ ಜೀವಾತ್ಮನ ವ್ಯಾಪಾರಗಳೆಲ್ಲಾ ವಾಗಾದಿ ಕರ್ಮೇಂದ್ರಿಯಗಳಿಂದ ಮತ್ತು ಜ್ಞಾನೇಂದ್ರಿಯಗಳಿಂದ ಕೂಡಿದ ಮನಸ್ಸಿನ ಮತ್ತು ಪಂಚವೃತ್ತಿಯುಳ್ಳ ಪ್ರಾಣವಾಯುಗಳಿಂದ ಸಾಧ್ಯವೆಂಬುದು. (೫) ಹೀಗೆ ಆತ್ಮನು ನಡೆಸುವ ಕಾರ್ಯಗಳಿಗೆ ಆತನೂ ಸೇರಿ ನಾಲ್ಕು ಹೇತುಗಳನ್ನು ಹೇಳಿ, ಮುಂದೆ ಇವೆಲ್ಲಕ್ಕೂ ಕಾರಣ ಭೂತನಾಗಿರುವ ಪ್ರಧಾನ ಹೇತುವು ಪರಮಾತ್ಮನ ಸಙ್ಕಲ್ಪವೆಂದು ಹೇಳುತ್ತಾರೆ—**ದೈವಂಚೈವಾತ್ರ ಪಂಚಮಮಿತ್** ಎಂದರೆ **ಪರಮಾತ್ಮಾ ಅಂತರ್ಯಾಮೀ ಕರ್ಮನಿಷ್ಪತ್ತೌ ಪ್ರಧಾನ ಹೇತುರಿತ್ಯರ್ಥಃ**-ಅಂತರ್ಯಾಮಿಯಾಗಿರುವ ಪರಮಾತ್ಮನು ಕರ್ಮದ ಪ್ರವೃತ್ತಿಯಲ್ಲಿ ಮುಖ್ಯ ಕಾರಣನು ಎಂಬ ಭಾವವು. ಮೂಲದಲ್ಲಿ ಪ್ರಧಾನಕಾರಣನು ಎಂಬುವ ಪ್ರಯೋಗವಿಲ್ಲದಿದ್ದರೂ ಮುಖ್ಯ ಕಾರಣನು ಎಂಬ ಪ್ರಯೋಗ ಹೇಗೆ? ಎಂದರೆ, **ಏವಕಾರದಿಂದ** ಪ್ರಧಾನಕಾರಣನೆಂಬ ಶಾಸ್ತ್ರಾರ್ಥವೂ ದ್ಯೋತಿತವೂ ಅಲ್ಲದೆ, ಹೇಳಿಕೆಯಲ್ಲಿ ತುಂಬಾ ಪ್ರಧಾನವಾದ ಕಾರಣವನ್ನು ಕೊನೆಯಲ್ಲಿ ಹೇಳುವ ವಾಡಿಕೆಯೂ ಇರುವದರಿಂದ ಹಾಗೆ ಭಾಷ್ಯವು. ಹಿಂದೆಯೂ ಹಾಗೆಯೇ ಮುಂದೆಯೂ ಸಹ ಭಗವದ್ವಾಕ್ಯಗಳಿಂದಲೇ ಈ ಅರ್ಥವು ವೇದ್ಯವೆಂದು ಪ್ರಮಾಣಗಳನ್ನು ಉದಾಹರಿಸುತ್ತಾರೆ—"**ಸರ್ವಸ್ಯ ಚಾಹಂ**" ಎಂಬ ಶ್ಲೋಕಕ್ಕೆ ವ್ಯಾಖ್ಯಾನವನ್ನು ಪರಾಂಬರಿಸಬಹುದು. ಅವರುಗಳಿಗೆ ಕರಣಕಳೇಬರ ದಾನ, ಶಾಸ್ತ್ರ ಪ್ರದಾನಾದಿಗಳೇನು, ಅವರಿಗೆ ಜ್ಞಾನ ವಿವೇಕ ಪ್ರದಾನವೇನು ಅವರುಗಳ ಹೃದಯ ಗುಹೆಯಲ್ಲೇ ಇದ್ದುಕೊಂಡು ಅವರುಗಳ ಸರ್ವ ಪ್ರವೃತ್ತಿಗಳಿಗೂ ಪ್ರೇರಿತನಾಗಿರುವದೇನು, ಇವುಗಳಿಂದ ತಾನು ಪ್ರಧಾನಕಾರಣನೆಂಬುದು ತಾತ್ಪರ್ಯವು. ಹಾಗೆಯೇ "**ಈಶ್ವರಸ್ಸರ್ವಭೂತಾನಾಂ**" ಎಂಬ ೧೮ನೆಯ ಅಧ್ಯಾಯ ಶ್ಲೋಕದಲ್ಲೂ, **ವಕ್ಷ್ಯತಿ ಚ**-ಮುಂದೆಯೂ ಹೇಳಲ್ಪಡುತ್ತದೆ. ಈ ಶ್ಲೋಕಾಭಿಪ್ರಾಯವನ್ನು ಅಲ್ಲಿ ಕಾಣಬಹುದು. ಇದರ ಸಙ್ಗ್ರಹಾರ್ಥವೇನೆಂದರೆ—ನಾನು ಸಮಸ್ತ ಪ್ರಾಣಿಗಳಿಗೂ ನಿಯಾಮಕನಾಗಿ ಅವರುಗಳ ಸಮಸ್ತ ಪ್ರವೃತ್ತಿಗಳಿಗೂ ಹೇತುವಾಗಿರುವ ಜೀವಾತ್ಮನಿರುವ ಹೃದಯದಲ್ಲೇ ವಾಸುದೇವನಾಗಿರುವೆನು, ಅದರಿಂದ ಈ ಪ್ರಾಣಿಗಳಿಗೆ ಶರೀರವೆಂಬ ವಿಚಿತ್ರವಾದ ಯಂತ್ರವನ್ನು ನನ್ನ ವಿಭೂತಿಯಲ್ಲಿ ಸೇರಿದ ಪ್ರಕೃತಿಯ ಮೂಲಕ ಒದಗಿಸಿಕೊಟ್ಟು, ತನ್ಮೂಲಕವಾಗಿ ಅವರ ಸಮಸ್ತ ಪ್ರವೃತ್ತಿ ನಿವೃತ್ತಿಗಳ ರೂಪದಲ್ಲಿ ಅವರು ಪ್ರವರ್ತಿಸುವ ಹಾಗೆ ಮಾಡುವೆನು ಎಂದು ಹೇಳಲ್ಪಟ್ಟಿರುತ್ತದೆ.

(೧) ಗೀ. ೧೫. ೧೫ (೨) ಗೀ. ೧೮. ೬೧

ಮಾಯಯಾ" ಇತಿ; ಪರಮಾತ್ಮಾಯತ್ತಂಚ ಜೀವಾತ್ಮನಃ ಕರ್ತೃತ್ವಮ್, (೩) "ಪರಾತ್ತು ತಚ್ಛ್ರುತೇಃ" ಇತ್ಯುಪಪಾದಿತತ್ವಾತ್. ನನ್ವೇವಂ ಪರಮಾತ್ಮಾಯತ್ತೇ ಜೀವಾತ್ಮಕರ್ತೃತ್ವೇ ಜೀವಾತ್ಮಾ ಕರ್ಮಣ್ಯನಿಯೋಜ್ಯೋ ಭವತೀತಿ ವಿಧಿನಿಷೇಧ ಶಾಸ್ತ್ರಾಣ್ಯನರ್ಥಕಾನಿಸ್ಯುಃ; ಇದಮಪಿ ಚೋದ್ಯಂ ಸೂತ್ರಕಾರೇಣೈವ ಪರಿಹೃತಮ್. (೬) "ಕೃತಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷಿದ್ಧಾ

---

ಆದರೆ ಜೀವಾತ್ಮನನ್ನು ಕರ್ತೃವಾಗಿ ಹೇಳಿದುದೇನು? ಇಲ್ಲಿ ಪರಮಾತ್ಮನನ್ನು ಪ್ರಧಾನ ಹೇತುವೆಂದು ಹೇಳಿದುದೇನು? ಇಬ್ಬರು ಚೇತನರು ಹೇತುವು ಹೇಗೆ? ಇತ್ಯಾದಿ ಶಂಕೆಗಳಿಗೆ ಸಮಾಧಾನವಾಗಿ ಮುಂದೆ ಹೇಳುತ್ತಾರೆ. **ಪರಮಾತ್ಮಾಯತ್ತಂಚ ಜೀವಾತ್ಮನಃ ಕರ್ತೃತ್ವಮ್**-ಜೀವಾತ್ಮನ ಕರ್ತೃತ್ವವಾದರೋ ಪರಮಾತ್ಮನಿಗೆ ಅಧೀನವಾದುದು. ಅದುದರಿಂದ ಪರಮಾತ್ಮನು ಪ್ರಧಾನಕಾರಣವೆಂದು ಹೇಳಲ್ಪಟ್ಟಿತು. ಹೀಗೆ ಹೇಳಲು ಪ್ರಮಾಣ ಉಂಟೋ ಎಂದರೆ,—**ಪರಾತ್ತು ತಚ್ಛ್ರುತೇಃ ಇತ್ಯುಪಪಾದಿತಂ**-ಆ ಜೀವಾತ್ಮ ಕರ್ತೃತ್ವವು ಪರಮಪುರುಷ ಅಧೀನವಾದುದೆಂದು "ಅನ್ತಃ ಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ" (೫) "ಯ ಆತ್ಮಾನ ಮನ್ತರೋ ಯಮಯತಿ" ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟಿರುತ್ತದೆ ಎಂಬುದು ಸೂತ್ರಾರ್ಥವು. ಇದರಿಂದ ಜೀವಾತ್ಮನಿಗೆ ಸ್ವತಂತ್ರವಾದ ಕರ್ತೃತ್ವವಿಲ್ಲವೆಂದೂ ಪರಮಾತ್ಮನಿಗೆ ಅಧೀನವಾದ ಕರ್ತೃತ್ವ ಉಂಟೆಂದೂ ಹೇಳಿದಂತಾಯಿತು. ಹೀಗಾದ ಪಕ್ಷದಲ್ಲಿ ಶಾಸ್ತ್ರದ ವಿಧಿ ನಿಷೇದ ವಾಕ್ಯಗಳು ನಿರರ್ಥಕಗಳಾಗಲಿಲ್ಲವೋ? ತಾನಲ್ಲದೆ ಬೇರೆಯಾದ ಸಮರ್ಥನಾದ ಸರ್ವೇಶ್ವರನ ಆಜ್ಞಾನುವರ್ತಿಯಾಗಿ ಕೆಲಸ ಮಾಡಿದರೆ, ಅದಕ್ಕೆ ಫಲವಾಗಿ ಪರಮಾತ್ಮನು ಅನುಗ್ರಹಿಸುವದೂ ಶಿಕ್ಷಿಸುವದೂ ಸಹ ನ್ಯಾಯುವೋ ಎಂಬ ಪೂರ್ವಪಕ್ಷಗಳು ಉಂಟಾಗುತ್ತವೆ. ಆದುದರಿಂದ ಮುಂದಿನ ವಾಕ್ಯಗಳಿಂದ ಆ ಪೂರ್ವ ಪಕ್ಷಗಳನ್ನು ಪಪಾದಿಸಿ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ—ಮೊದಲು ಪೂರ್ವಪಕ್ಷವನ್ನು ಉಪಪಾದಿಸುತ್ತಾರೆ—**ನನು**-ಆಗಲಿ, ಇಲ್ಲಿ ಇದು ಪೂರ್ವಪಕ್ಷಾರಂಭವನ್ನು ಸೂಚಿಸುವ ಪದವು, **ಜೀವಾತ್ಮಕರ್ತೃತ್ವೇ**-ಜೀವಾತ್ಮನ ಕರ್ತೃತ್ವವು, **ಏವಂ**-ಹೀಗೆ ಎಂದರೆ **ಪರಾತ್ತು ತಚ್ಛ್ರುತೇಃ** ಎಂಬ ಶಾರೀರಕ ಸೂತ್ರದಲ್ಲಿ ಹೇಳಿರುವ ಹಾಗೆ, **ಪರಮಾತ್ಮಾಯತ್ತೇ**-ಪರಮಾತ್ಮನಿಗೆ ಅಧೀನವಾಗಲಾಗಿ ಎಂದರೆ ಅಧೀನವಾದರೆ **ಕರ್ಮಣಿ**-ಕರ್ಮದಲ್ಲಿ, **ಅನಿಯೋಜ್ಯಃ**-ಸ್ವಾತಂತ್ರ್ಯವಿಲ್ಲದದರಿಂದ ನಿಯಮಿಸಲ್ಪಡದವನಾಗಿ, **ಭವತೀತಿ**-ಆಗುವನಾದುದರಿಂದ, **ವಿಧಿ ನಿಷೇಧ ಶಾಸ್ತ್ರಾಣಿ**-ಹೀಗೆ ಮಾಡು, ಹೀಗೆ ಮಾಡಬೇಡವೆಂದು ಶ್ರುತಿಯಲ್ಲಿ ಹೇಳಿರುವುವು. **ಅನರ್ಥಕಾನಿಸ್ಯುಃ**-ನಿಷ್ಪ್ರಯೋಜನವುಳ್ಳವುಗಳಾಗುವುವು; ಆಗ ಶಾಸ್ತ್ರವೈಯರ್ಥ್ಯವೂ, ಗುರೂಪದೇಶ ವೈಯರ್ಥ್ಯವೂ ಉಂಟಾಗುವುವೆಂಬ ಭಾವವು. ಜೀವಾತ್ಮನ ಕರ್ಮಗಳನ್ನೆಲ್ಲಾ ಪರಮಾತ್ಮನೇ ತನ್ನ ಸಙ್ಕಲ್ಪಾನುಸಾರವಾಗಿ ನಡೆಸಿಬಿಟ್ಟರೆ, ಜೀವಾತ್ಮನೇ ಕರ್ತೃ ಹೇಗೆ? ಆಗ ಶಾಸ್ತ್ರಗಳಲ್ಲಿ ಹೇಳಿರುವ **ಮಾಮುಪಾಸ್ವ, ಸತ್ಯಂವದ,** ಇತ್ಯಾದಿ ಆಜ್ಞೆಗಳೆಲ್ಲಾ ನಿರರ್ಥಕವಲ್ಲವೋ? ಹಾಗೆ ಪರಮಾತ್ಮನಿಗೆ ಅಧೀನವಾಗಿಯೇ ದುಷ್ಕೃತಗಳನ್ನು ಮಾಡಿದರೆ, ಪರಮಾತ್ಮನು ಅದಕ್ಕಾಗಿ ಶಿಕ್ಷಿಸುವದು ಯಾವ ನ್ಯಾಯವು? ಅಂತವನು ಕೃಪಾನಿಧಿಯು ಹೇಗೆ? ಇತ್ಯಾದಿ ಶಙ್ಕೆಗಳು ಉಂಟಾಗಬಹುದು, ಇದಕ್ಕೆ ಸಮಾಧಾನವನ್ನು ಸೂತ್ರಕಾರರೇ, ಆದರ ಮುಂದಿನ ಸೂತ್ರದಲ್ಲಿ ಅಂತಹ ಶಙ್ಕೆಗಳೆಲ್ಲವನ್ನೂ ಪರಿಹರಿಸಿರುತ್ತಾರೆ—ಅದನ್ನೇ ಮುಂದೆ ಶ್ರೀ ಯತಿವರ್ಯರು ಉಪಪಾದಿಸುತ್ತಾರೆ—**ಇದಮಪಿಚೋದ್ಯಂ**-ಇಂತಹ ಕುತರ್ಕವನ್ನು, ಶಙ್ಕೆಯನ್ನು, **ಸೂತ್ರಕಾರೇಣೈವ ಪರಿಹೃತಮ್**-ಸೂತ್ರಕಾರರಾದ ಶ್ರೀ ವ್ಯಾಸ

---

(೩) ಶಾರೀ. ೨.೩ ೪೦. (೪) ತೈ. ३. ೧೧. ೨೦. (೫) ಬೃ. ೫. ೭.೨೨. (೬) ೨. ೩. ೪೧.

ವೈಯರ್ಥ್ಯಾದಿಭ್ಯಃ" ಇತಿ. ಏತದುಕ್ತಂಭವತಿ.—ಪರಮಾತ್ಮನಾ ದತ್ತೈಸ್ತದಾಧಾರೈಶ್ಚ ಕರಣ ಕಲೇಬರಾದಿಭಿಸ್ತದಾಹಿತ ಶಕ್ತಿಭಿಸ್ಸ್ವಯಂ ಚ ಜೀವಾತ್ಮಾ ತದಾಧಾರ ಸ್ತದಾಹಿತ ಶಕ್ತಿಸ್ಸನ್ ಕರ್ಮ ನಿಷ್ಪತ್ತಯೇ ಸ್ವೇಚ್ಛಯಾ ಕರಣಾದ್ಯ

---

ಮಹರ್ಷಿಯಿಂದಲೇ ಪರಿಹರಿಸಲ್ಪಟ್ಟಿರುತ್ತದೆ. ಆ ಸೂತ್ರವನ್ನು ಉದಾಹರಿಸುತ್ತಾರೆ.—"**ಕೃತಪ್ರಯತ್ನಾಪೇಕ್ಷಸ್ತು**" ಎಂಬಲ್ಲಿರುವ **ತು** ಎಂಬ ಶಬ್ದವು, ಮೇಲೆ ಹೇಳಿದ ಶಙ್ಕೆಗಳ ವ್ಯಾವೃತ್ತಿಗಾಗಿ ಪ್ರಯೋಗಿಸಲ್ಪಟ್ಟಿರುತ್ತದೆ. ಶಙ್ಕೆ ಯಾವುದೆಂದರೆ, ಹಿಂದಿನ ಸೂತ್ರವಾದ "**ಪರಾತ್ತು ತಚ್ಛ್ರುತೇಃ**" ಎಂಬುದರಿಂದ ಜೀವನ ಕರ್ತೃತ್ವವು ಪರಮಪುರುಷಾಧೀನವಾದರೆ ಜೀವಾತ್ಮನಿಗೆ ಶಾಸ್ತ್ರವಿಧಿನಿಷೇಧವಾಕ್ಯಗಳಿಗೆ ಅಧೀನವಲ್ಲಿಯದು? ಆಗ ಗುರೂಪದೇಶ ಮತ್ತೂ ಶಾಸ್ತ್ರವು ನಿರರ್ಥಕಗಳಲ್ಲವೋ? ಆಗ ಜೀವನ ಕರ್ತೃತ್ವ ಮೂಲಕವಾಗಿ ನಿಗ್ರಹಾನುಗ್ರಹಗಳು ನ್ಯಾಯವೋ? ಇತ್ಯಾದಿ ಶಙ್ಕಾ ನಿವಾರಣೆಗಾಗಿ **ತು** ಶಬ್ದವು, **ಕೃತಪ್ರಯತ್ನಾಪೇಕ್ಷಸ್ತು**-ಜೀವಾತ್ಮನು ಮಾಡುವ ಸಮಸ್ತ ಕರ್ಮದಲ್ಲಿ ಪರಮಾತ್ಮನು ಪ್ರಥಮತಃ ಉದಾಸೀನನಾಗಿದ್ದು ಆತನ ಸಙ್ಕಲ್ಪ ಪ್ರಯತ್ನಗಳನ್ನು ಅಪೇಕ್ಷಿಸುವನು; ಅನಂತರ ಆ ಕರ್ತೃಗಳಿಗೆ ಪರಮಾತ್ಮನು ಅನುಮನ್ತೃವಾಗಿ ಅನುಮತಿಯನ್ನು ಕೊಟ್ಟು ನಡೆಸುವನು. ಇಲ್ಲಿ ಜೀವಾತ್ಮನಿಗೆ ಶಾರೀರಕ ಸೂತ್ರವಾದ "**ಕರ್ತಾ ಶಾಸ್ತ್ರಾರ್ಥವತ್ತ್ವಾತ್**" ಎಂಬುದು ಕರ್ತೃತ್ವ ಉಂಟೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ ಎಂದು ಶ್ರುತಿಪ್ರಮಾಣಗಳು ಉದಾಹರಿಸಲ್ಪಟ್ಟಿತು. ಅನಂತರ "**ಪರಾತ್ತು ತಚ್ಛ್ರುತೇಃ**" ಎಂಬ ಸೂತ್ರವು ಜೀವಾತ್ಮ ಕರ್ತೃತ್ವವು ಪರಮಪುರುಷನ ಸಙ್ಕಲ್ಪಾಧೀನವೆಂದೂ ಶಾಸ್ತ್ರವು ಬೋಧಿಸುತ್ತದೆಂದೂ ಹೇಳಲ್ಪಟ್ಟಿತು. ಇವೆರಡು ಶಾಸ್ತ್ರೋಪದೇಶಗಳೂ ಪರಸ್ಪರ ವಿರುದ್ಧವಾದುವಲ್ಲವೋ ಎಂದರೆ, ಏನೊಂದೂ ವಿರೋಧವಿಲ್ಲವು ಎಂದು ಈ "**ಕೃತಪ್ರಯತ್ನಾಪೇಕ್ಷಸ್ತು**" ಎಂಬ ಸೂತ್ರವು ಸಾಮಂಜಸ್ಯವನ್ನು ತೋರ್ಪಡಿಸುವದಕ್ಕಾಗಿ ಉದಾಹರಿಸಲ್ಪಟ್ಟಿತು. ಪ್ರಥಮತಃ ಜೀವಾತ್ಮನನ್ನು ಸ್ವತಂತ್ರನಾಗಿ ಬಿಟ್ಟು, ಶಾಸ್ತ್ರಗಳ ವಿಧಿನಿಷೇಧವಾಕ್ಯಗಳಿಗನುಗುಣವಾಗಿ ನಡೆಯುತ್ತಾನೆಯೋ ಇಲ್ಲವೋ ಎಂದು **ಸಾಕ್ಷಿಯಾಗಿ** ಇದ್ದುಕೊಂಡು, ಆತನ ಪ್ರಯತ್ನವನ್ನು ಹೀಗೆ ಅಪೇಕ್ಷಿಸಿ, **ಅನುಮನ್ತೃವಾಗಿ** ಆತನ ಕೈಯಲ್ಲಿ ಮಾಡಿಸುವನು. ಇದು ಎತಕ್ಕೆ? ಎಂದರೆ **ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ**-ಶಾಸ್ತ್ರದಲ್ಲಿ ಹೇಳಿರುವ ವಿಧಿನಿಷೇಧವಾಕ್ಯಗಳೇ ಮೊದಲಾದವುಗಳು ನಿರರ್ಥಕಗಳಾಗದೇ ಇರುವದಕ್ಕಾಗಿ ಹಾಗೆ ಪರಮಾತ್ಮನ ಸಙ್ಕಲ್ಪವು. ಇಲ್ಲಿ ಆದಿಶಬ್ದದಿಂದ, ಪರಮಪುರುಷನಿಗೆ ವೈಷಮ್ಯ ನೈರ್ಘೃಣ್ಯಾದಿಗಳು ಉಂಟಾಗದೇ ಇರುವದಕ್ಕಾಗಿ ಹಾಗೆ ಪರಮಾತ್ಮನ ಸಙ್ಕಲ್ಪವು, ಇಲ್ಲಿ **ಆದಿ** ಪದದಿಂದ ಪರಮಪುರುಷನಿಗೆ ವೈಷಮ್ಯ ನೈರ್ಘೃಣ್ಯಾದಿಗಳು ಉಂಟಾಗದೆ ಇರುವದು ಮತ್ತು ಜೀವಾತ್ಮನ ದುಷ್ಕೃತ ಸುಕೃತಗಳಿಗನುಗುಣವಾಗಿ ನಿಗ್ರಹಾನುಗ್ರಹಗಳಿಂದ ದೋಷ ಉಂಟಾಗದಿರುವದೂ, ಹೇಳಲ್ಪಟ್ಟವು. ಹೀಗೆ ಈ ಪೂರ್ವ ಸೂತ್ರಾರ್ಥಗಳ ಒಟ್ಟು ತಾತ್ಪರ್ಯವನ್ನು ಮುಂದೆ "**ಏತದುಕ್ತಂ ಭವತಿ**" ಇದೀಗ ತಾತ್ಪರ್ಯವೆಂದಾರಂಭಿಸಿ ಹೇಳುತ್ತಾರೆ.—**ಪರಮಾತ್ಮನಾದತ್ತೈಃ**-ಪರಮಾತ್ಮನಿಂದ ಕೊಡಲ್ಪಟ್ಟ, **ತದಾಧಾರೈಶ್ಚ**-ಆತನನ್ನೇ ಆಧಾರವಾಗಿಯುಳ್ಳ, **ಕರಣ ಕಲೇಬರಾದಿಭಿಃ**-ಶರೀರೇನ್ದ್ರಿಯಗಳೇ ಮೊದಲಾದವುಗಳಿಂದ, ಆದಿ ಶಬ್ದದಿಂದ ಪ್ರಾಣ, ಮನಸ್ಸು ಹೇಳಲ್ಪಟ್ಟವು. **ತದಾಹಿತ ಶಕ್ತಿಭಿಃ**-ಆ ಪರಮಪುರುಷನಿಂದ ಈ ಜೀವಾತ್ಮನಲ್ಲಿ ಇಡಲ್ಪಟ್ಟ ಶಕ್ತಿಗಳಿಂದ, **ಸ್ವಯಂ ಜೀವಾತ್ಮಾ**-ಜೀವಾತ್ಮನಾದ ತಾನೂ ಸಹ, **ತದಾಧಾರಃ**-ಆತನನ್ನೇ ಆಧಾರವಾಗಿವುಳ್ಳವನಾಗಿ ಎಂದರೆ ಆತನ ಶರೀರವಾಗಿ ಆತನಿಂದಲೇ ಅಧೀನನಾಗಿ ಆದುದರಿಂದ ಆತನನ್ನೇ ಆಧಾರವಾಗಿವುಳ್ಳವನಾಗಿ, **ತದಾಹಿತ ಶಕ್ತಿಸ್ಸನ್**-ಆತನಿಂದಲೇ ಇಡಲ್ಪಟ್ಟ ಎಂದರೆ ದಯ

**ಧಿಷ್ಠಾನಾಕಾರಂ ಪ್ರಯತ್ನಂಚಾರಭತೇ; ತದನನ್ತರವಸ್ಥಿತಃ ಪರಮಾತ್ಮಾ ಸ್ವಾನು ಮತಿದಾನೇನ ತಂ ಪ್ರವರ್ತಯತೀತಿ ಜೀವಸ್ಯಾಪಿಸ್ವಬುದ್ಧ್ಯೈವ ಪ್ರವೃತ್ತಿ ಹೇತುತ್ವಮಸ್ತಿ; ಯಥಾ ಗುರುತರ ಶಿಲಾ ಮಹೀರುಹಾದಿ ಚಲನಾದಿ ಫಲ ಪ್ರವೃತ್ತಿಷು ಬಹು ಪುರುಷಸಾಧ್ಯಾಸು ಬಹೂನಾಂ ಹೇತುತ್ವಂ, ವಿಧಿನಿಷೇಧ ಭಾಕ್ತ್ವಂಚ-ಇತಿ.** ||೧೪,೧೫||

---

ಪಾಲಿಸಲ್ಪಟ್ಟ ಸತ್ತಾಯುಕ್ತನಾಗಿ, **ಕರ್ಮನಿಷ್ಪತ್ತಯೇ**-ಕರ್ಮಾರಂಭಕ್ಕಾಗಿ **ಸ್ವೇಚ್ಛಯಾ**-ಜೀವಾತ್ಮನಾದ ತನ್ನ ಸಙ್ಕಲ್ಪದಿಂದ, **ಕರಣಾದ್ಯಧಿಷ್ಠಾನಾಕಾರಂ**-ಇಂದ್ರಿಯಗಳು ಶರೀರಗಳ ಮೂಲಕ, **ಪ್ರಯತ್ನಂಚಾರಭತೇ**-ಪ್ರಯತ್ನಿಸಲು ಪ್ರಾರಂಭಿಸುತ್ತಾನೆ. ಈ ಜೀವಾತ್ಮನ ಪ್ರಥಮ ಸಙ್ಕಲ್ಪದೆಶೆಯಲ್ಲಿ ಪರಮಾತ್ಮನು ಸ್ವಾತಂತ್ರ್ಯವನ್ನು ಕೊಟ್ಟು ತಾನು **ಉದಾಸೀನನಾಗಿ**, ತಾನು ಜೀವಾತ್ಮನಿಗೆ ದಯಪಾಲಿಸಿರುವ ಕರಣ ಕಳೇಬರಗಳ ಮೂಲಕವಾಗಿಯೂ, ಶಾಸ್ತ್ರ ಜ್ಞಾನ ವಿವೇಕಾದಿಗಳ ಮೂಲಕವಾಗಿಯೂ ಸ್ವತಃ ಪ್ರಯತ್ನಿಸುವ ಹಾಗೆ ಮಾಡುತ್ತಾನೆ. ಆದುದರಿಂದ ಜೀವನಿಗೆ ಕರ್ತೃತ್ವವು ಏರ್ಪಟ್ಟಿತೆಂಬ ಭಾವವು. **ತದನನ್ತರವಸ್ಥಿತಃ**-ಅನಂತರ ಆ ಜೀವಾತ್ಮನಿಗೆ (೩) "ಅಂತರೋಯಮಯತಿ" ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ **ಅಂತರ್ಯಾಮಿಯಾಗಿ** ಒಳಗಿರುವವನಾಗಿ, **ಪರಮಾತ್ಮನು, ಸ್ವಾನುಮತಿದಾನೇನ**-ಆ ಜೀವ ಕರ್ತೃತ್ವಕ್ಕೆ ಅನುಮತಿಯನ್ನು ಕೊಡುವುದರ ಮೂಲಕ, **ತಂ ಪ್ರವರ್ತಯತೀತಿ**-ಕೃತಪ್ರಯತ್ನ ನಾದ ಆತನನ್ನು ಕಾರ್ಯದಲ್ಲಿ ಪ್ರವರ್ತಿಸುವ ಹಾಗೆ ಮಾಡುವನೆಂಬುವದರಿಂದ, **ಜೀವಸ್ಯಾಪಿ**-ಜೀವಾತ್ಮನಿಗೂ ಕೂಡ, **ಸ್ವಬುದ್ಧ್ಯೈವ**-ತನ್ನ ಸ್ವಂತ ಬುದ್ಧಿಯಿಂದಲೇ, **ಪ್ರವೃತ್ತಿ ಹೇತುತ್ವ ಮಸ್ತಿ**-ಕಾರ್ಯದ ಪ್ರವೃತ್ತಿಗೆ ತನಗೇನೆ ಕಾರಣವು ಉಂಟು; ಆ ಕರ್ತೃತ್ವಕ್ಕೆ ನಾಲ್ಕರ ಸಹಾಯ ಕಾರಣಗಳನ್ನು ಹೇಳಿಬಿಟ್ಟು ಕರ್ತೃತ್ವವೂ ಉಂಟೆಂದು ಸಾಮಂಜಸ್ಯವನ್ನು ಕಲ್ಪಿ ಸಿದರಲ್ಲಾ ಅದು ಹೇಗೆ ಎಂದು ಕೇಳುತ್ತೀಯೋ, ಒಂದು ದೃಷ್ಟಾಂತ ಮೂಲಕ ವ್ಯಕ್ತ ವಾಗುತ್ತದೆಂದು ತಾವು **ವೇದಾಂತಸಾರವೆಂಬ** ಗ್ರಂಥದಲ್ಲಿ ಉಪಪಾದಿಸಿರುವ ದೃಷ್ಟಾಂತವನ್ನು ಇಲ್ಲಿಯೂ ಕೊಡುತ್ತಾರೆ—**ಯಥಾ**-ಹೇಗೆಂದರೆ? **ಗುರುತರ ಶಿಲಾ ಮಹೀರುಹಾದಿ ಚಲ ನಾದಿ ಫಲ ಪ್ರವೃತ್ತಿಷು**-ತುಂಬಾ ದೊಡ್ಡ ಬಂಡೆ, ಮರ ಮೊದಲಾದವುಗಳನ್ನು ಕದಲಿಸ ಬೇಕೆಂಬ ಪ್ರಯತ್ನದಲ್ಲಿ, **ಬಹುಪುರುಷ ಸಾಧ್ಯಸು**-ಅನೇಕ ಜನರಿಂದ ಸಾಧ್ಯವಾಗಿರು ವದಾಗಿ, **ಬಹೂನಾಂ ಹೇತುತ್ವಂ**-ಅನೇಕರ ಕಾರಣಗಳಿಗೆ ವಶವಾಗಿರುವದುಂಟು. ಹಾಗೆ ಜೀವ ಕರ್ತೃತ್ವವೂ ಇನ್ನು ನಾಲ್ಕು ಸಹಾಯಗಳನ್ನೂ ಅಪೇಕ್ಷಿಸುತ್ತದೆ. ಹಾಗೆಯೇ ಜೀವಾ ತ್ಮನ ಕರ್ತೃತ್ವವೂ ತನ್ನ ಪ್ರವೃತ್ತಿಯಲ್ಲಿ ಹೇತುವಾಗಿರುವದರಲ್ಲಿ ಏನೊಂದು ಅಸಾಮಂಜಸ್ಯ ವಿಲ್ಲವು ಎಂಬ ಭಾವವು; ಯಾವಾಗ ಕರ್ತೃತ್ವವು ಏರ್ಪಟ್ಟಿತೋ ಆಗ, **ವಿಧಿನಿಷೇಧ ಭಾಕ್ತ್ವಂಚ**-ಆಗ ಶಾಸ್ತ್ರಗಳ ವಿಧಿ ನಿಷೇಧ ವಾಕ್ಯಗಳಿಗೆ ವಶ್ಯತೆಯೂ ಸಹ ಏರ್ಪಟ್ಟಿತು; **ಇತಿ**-ಎಂಬುದೀಗ ಈ ಮೂರು ಸೂತ್ರಗಳ ತಾತ್ಪರ್ಯವು. ಯಾವಾಗ ಸರ್ವೇಶ್ವರನು ಜೀವಾತ್ಮನಿಗೆ ಆತನ ಹಿಂದಿನ ಕರ್ಮಾನುಗುಣವಾಗಿ ಕರಣ ಕಳೇಬರ ರೂಪದಲ್ಲಿ ಅದ್ಭುತಯಂತ್ರವನ್ನು ಕೊಟ್ಟು ಆ ಕರಣ ಕಳೇಬರಗಳಿಗೆ ಕೆಲವು ಶಕ್ತಿಗಳನ್ನೂ ಕೊಟ್ಟು ಅವುಗಳನ್ನು ಉಪಯೋಗಿಸುವ ಶಕ್ತಿ ಯನ್ನೂ ಈತನಿಗೆ ದಯಪಾಲಿಸಿ, ಈತನಲ್ಲೂ ಅಂತರ್ಯಾಮಿಯಾಗಿದ್ದುಕೊಂಡು, ತಾನು ಕೊಟ್ಟಿ ರುವ ಜ್ಞಾನ ಚಿಕೀರ್ಷಾ ಪ್ರಯತ್ನದ ಮೂಲಕ ವಿಧಿ ನಿಷೇಧ ಶಾಸ್ತ್ರವಾಕ್ಯಗಳಿಗನುಸಾರವಾಗಿ ನಡೆಯಲು ಸ್ವಾತಂತ್ರ್ಯವನ್ನೂ ಕೊಟ್ಟಿರುವದರಿಂದ, ಯಾವ ವಿಧವಾದ ಚೋದ್ಯಗಳಿಗೂ ಶಙ್ಕಾಗಳಿಗೂ ಅವಕಾಶವಿಲ್ಲವು. ಹೀಗೆ ಪರಮ ಕೃಪಯಾ ಸ್ವಾಮಿಯಿಂದ ಶಾಸ್ತ್ರವು ಕೊಡ ಲ್ಪಟ್ಟು, ದಾಸನಾದ ಈ ಚೇತನನು ವರ್ತಿಸುವ ಕ್ರಮವನ್ನೂ, ತನ್ನ ಆಜ್ಞೆಗಳನ್ನೂ ವಿಧಿನಿಷೇಧ

ವಾಕ್ಯಗಳ ಮೂಲಕ ತಿಳಿಸಿರುವದರಿಂದ, ತದನುಗುಣವಾಗಿ ನಡೆಯಲು ಈ ಚೇತನನಿಗೆ ಸರ್ವ ಸ್ವಾತಂತ್ರ್ಯವುಂಟು. ಹಾಗೆ ಉಪದೇಶಿಸಿದ್ದರೂ ಅವುಗಳನ್ನು ಅತಿಲಂಘಿಸಿ ಅಕೃತ್ಯಕರಣ ಕೃತ್ಯಾಕರಣ ದೋಷಗಳನ್ನು ಸಂಪಾದಿಸಿಕೊಂಡರೆ, ಭಗವನ್ನಿಗ್ರಹಕ್ಕೆ ಪಾತ್ರನಾಗಿ ಶಿಕ್ಷಿಸಲ್ಪಡುವನು. ಈ ಶಿಕ್ಷೆಯೂ ಕೂಡ ದುರ್ಮಾರ್ಗಿಯಾದ ಪುತ್ರನನ್ನು ಪಿತಾ ಶಿಕ್ಷಿಸುವ ತೆರದಿ, ಮುಂದೆ ಅಂತಹ ದೋಷಗಳಿಗೆ ಗುರಿಯಾಗದೇ ಇರುವ ಹಾಗೆ ಮಾಡುವ ಅನುಗ್ರಹವೆಂದೇ ಭಾವಿಸತಕ್ಕದ್ದಾಗಿರುತ್ತದೆ. ಇದರಿಂದ ಗುರೂಪದೇಶ ಶಾಸ್ತ್ರ ವೈಯರ್ಥ್ಯಗಳಿಲ್ಲವು ; ಜೀವಾತ್ಮನಿಗೂ ಕರ್ತೃತ್ವವು ಏರ್ಪಟ್ಟಿತು. ಈತನ ಸುಕೃತ ದುಷ್ಕೃತಗಳಿಗನುಗುಣವಾಗಿ ಅನಂತರ ಅನುಮತಿಯನ್ನಿತ್ತು ಅನುಗ್ರಹ ನಿಗ್ರಹಗಳಿಗೆ ಕಾರಣನಾಗುವನೆಂಬುದರಲ್ಲಿ ಯಾವ ವಿಧವಾದ ಅಸಾಮಂಜಸ್ಯವೂ ಇಲ್ಲವು.

ಈ ಉಪದೇಶಕ್ಕೆ ಅತ್ಯುತ್ತಮವಾದ ಮತ್ತು ಸ್ವಾರಸ್ಯವಾದ ನಿದರ್ಶನವು ಯಾವುದೆಂದರೆ? ಅರ್ಜುನನಿಗೆ ಲೀಲಾಸಾರಥಿಯಾಗಿರುವ ಸನ್ನಿವೇಶವೇ. ಹೇಗೆಂದರೆ ; ಯುದ್ಧದಲ್ಲಿ ಕರ್ತೃತ್ವವು ಅರ್ಜುನನದೇ ; ಆತನೇ ಸಙ್ಕಲ್ಪಿಸಿ, ಪ್ರಯತ್ನಿಸಿ ಯುದ್ಧಮಾಡತಕ್ಕದ್ದು. ಪರಮಪುರುಷನಾದ ಶ್ರೀ ಕೃಷ್ಣನು ಶಾಸ್ತ್ರೋಪದೇಶರೀತ್ಯಾ ಪ್ರೇರಕನು ಮಾತ್ರವೇ. ಯುದ್ಧವು ತನಗೆ ಧರ್ಮವಾಗಿದ್ದರೂ ಯುದ್ಧಮಾಡುವದಿಲ್ಲವೆಂದು ಅರ್ಜುನ ಪ್ರತಿಜ್ಞೆಯು ಪರಮಪುರುಷನಿಂದಲೇ ಲಬ್ಧಶಕ್ತನಾದುದರಿಂದ, ಅರ್ಜುನನಿಗೆ ಶಾಸ್ತ್ರಜ್ಞಾನ ವಿವೇಕಾದಿ ಪ್ರದಾನ ಮೂಲಕ ಪರಮ ಸಹಾಯಕನಾಗಿ ಪರಮಪುರುಷನು ಪ್ರಧಾನ ಫಲಿಯು. "**ನಿಮಿತ್ತಮಾತ್ರಂ ಭವ ಸವ್ಯಸಾಚಿನ್**" ಎಂಬಲ್ಲಿ ಹೇಳಿರುವ ಹಾಗೆ, ಪರಮಾತ್ಮನಿಗೆ ಅಧೀನವಾದ ಕರ್ತೃತ್ವವನ್ನು ಹೊಂದಿರುವವನು. "**ಪರಾತ್ತು ತಚ್ಛ್ರುತೇಃ**" ಎಂಬ ಸೂತ್ರಾರ್ಥವು ಇಲ್ಲಿ ತೋರಿಬರುತ್ತದೆ. ಉಪದೇಶಾನುಗುಣವಾಗಿ "**ಕರಿಷ್ಯೇ ವಚನಂತವ**" ಎಂದು ಹೇಳಿ ಯುದ್ಧದಲ್ಲಿ ಪ್ರವರ್ತಿಸಿದರೆ ಆಗ ಶ್ರೀ ಕೃಷ್ಣನ ಅನುಗ್ರಹ ರೂಪಫಲಕ್ಕೆ ಕಾರಣನಾಗುವನೆಂಬುದು "**ಯತ್ರ ಯೋಗೇಶ್ವರಃ ಕೃಷ್ಣಃ ಯತ್ರಪಾರ್ಥೋ ಧನುರ್ಧರಃ । ತತ್ರ ಶ್ರೀರ್ವಿಜಯಃ**" ಎಂಬ ಸಂಜಯೋಕ್ತಿಯಿಂದ ವ್ಯಕ್ತವು. "**ಕೃತಪ್ರಯತ್ನಾಪೇಕ್ಷಸ್ತು**" ಎಂಬ ಸೂತ್ರಾರ್ಥಾನುಗುಣವಾಗಿ, ಶ್ರೀ ಕೃಷ್ಣನು "**ಯಥೇಚ್ಛಸಿ ತಥಾ ಕುರು**" ನೀನು ಮಹಾ ಪ್ರಾಜ್ಞನಾಗಿ, ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಗಳನ್ನು ಅಪೇಕ್ಷಿಸುವದರಿಂದ **ಯಥಾ ಇಚ್ಛಸಿ,** ಹೇಗೆ ಇವು ಲಭಿಸಬೇಕೋ ಹಾಗೆ ಮಾಡು ಎಂದು ಸರ್ವಸ್ವಾತಂತ್ರ್ಯವನ್ನೂ ಅರ್ಜುನನಿಗೆ ಕೊಟ್ಟಿರುತ್ತಾನೆ. ಅನಂತರ ಒಪ್ಪಿ ಯುದ್ಧಕಾರ್ಯವನ್ನು ಆರಂಭಿಸಿದುದರಿಂದ ಶಾಸ್ತ್ರವೈಯರ್ಥ್ಯವೂ ಗುರೂಪದೇಶ ವೈಯರ್ಥ್ಯವೂ ಇಲ್ಲವು. ಹಾಗೆ ಸ್ವತಂತ್ರನಾಗಿ ಯುದ್ಧ ಸಙ್ಕಲ್ಪವನ್ನು ಮಾಡಿದನಂತರ ಶ್ರೀ ಕೃಷ್ಣನು ಸ್ವಾನುಮತಿಯನ್ನು ದಯಪಾಲಿಸಿ, ಆತನು ಜಯಶೀಲನಾಗುವ ಹಾಗೆ ಮಾಡಿ, ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗುವ ಹಾಗೆ ಮಾಡಿದನು. ಈ ಯುದ್ಧವನ್ನು ಕೈಕೊಳ್ಳದೆ, ಶಾಸ್ತ್ರವನ್ನು ತ್ಯಜಿಸಿ, ಲೋಕ ಗುರುವಿನ ಮಾತಿನಲ್ಲಿ ವಿಶ್ವಾಸವಿಲ್ಲದೆಹೋಗಿದ್ದರೆ ಅರ್ಜುನನಿಗೆ ಯಾವ ಪುರುಷಾರ್ಥವೂ ಇಲ್ಲದೆ ಹೋಗುತ್ತಿತ್ತು. ಅರ್ಜುನನಿಗೆ ಸ್ವಾತಂತ್ರ್ಯವನ್ನು ಕೊಟ್ಟು "**ಯುಧ್ಯಸ್ವವಿಗತಜ್ವರಃ**" ಎಂದು ಹೇಳಿದುದಕ್ಕನುಸಾರವಾಗಿ, ಆತನು "**ಕರಿಷ್ಯೇ ವಚನಂತವ**" ಎಂದು ಹೇಳಿ, ಯುದ್ಧೋನ್ಮುಖನಾಗಲು, ಆಗ ಶ್ರೀ ಕೃಷ್ಣನು ಸಿದ್ಧೋಪಾಯನಾಗಿ ಸಾರಥಿಯಾಗಿ ಸ್ವಾನುಮತಿಯನ್ನಿತ್ತು ನಡೆಸಿಕೊಟ್ಟಿರುತ್ತಾನೆ. ಹೀಗೆ ನರನಾರಾಯಣರ ಪ್ರವೃತ್ತಿಗಳಿಂದಲೇ ಈ ಶಾಸ್ತ್ರ ಸ್ವಾರಸ್ಯಾಭಿಪ್ರಾಯಗಳನ್ನೆಲ್ಲಾ ನಾವು ಗ್ರಹಿಸಬಹುದು. ಹೀಗೆ ಜೀವಾತ್ಮನಿಗೆ ಪ್ರಥಮ ಪ್ರವೃತ್ತಿಯಲ್ಲಿ ಜ್ಞಾನ ವಿವೇಕಾದಿಗಳನ್ನು ಕೊಟ್ಟಿರುವದರಿಂದ, ಸರ್ವ ಸ್ವಾತಂತ್ರ್ಯವನ್ನೂ ಕೊಟ್ಟು, ಸರ್ವೇಶ್ವರನು ಉದಾಸೀನನಾಗಿದ್ದುಕೊಂಡು, ಜೀವಾತ್ಮನ ಪೂರ್ವ ಕರ್ಮಗಳಾದ ಸುಕೃತ ದುಷ್ಕೃತಗಳಿಗನುಸಾರವಾಗಿ ಅನುಮನ್ತಾವಾಗುವನು. ಇದರಿಂದ ಸುಕೃತಿಯು ತನ್ನ ಶ್ರೇಯಸ್ಸಂಪಾದನೆಗೆ ಯೋಗ್ಯವಾದ

ಕರ್ಮಗಳನ್ನು ಸ್ವತಂತ್ರನಾಗಿ ಸಙ್ಕಲ್ಪಿಸಿ ಮಾಡುವನು ದುಷ್ಕೃತಿಯು ತನ್ನ ಆತ್ಮನಾಶಕ್ಕೆ ಯೋಗ್ಯವಾದ ಕರ್ಮಗಳನ್ನು ಸ್ವತಂತ್ರಿಸಿ ಸಙ್ಕಲ್ಪಿಸಿ ನಡೆಸುವನು ಇದರಿಂದ ಕಳ್ಳತನವು ಇತರರ ದ್ರವ್ಯಾಪಹಾರರೂಪವಾಗಿ ನಿಂದ್ಯವೆಂದು ತನಗೆ ಅಶ್ರೇಯಸ್ಸನ್ನುಂಟುಮಾಡುತ್ತದೆಂದು ಸ್ವಾಮಿದತ್ತ ಶಾಸ್ತ್ರ ವಿವೇಕಜ್ಞಾನದಿಂದ ತಿಳಿದಿದ್ದರೂ ಕೂಡ, ಸ್ವತಂತ್ರಿಸಿ ಸಙ್ಕಲ್ಪಿಸಿ ಕದಿಯುವನು ಇದಕ್ಕೆ ಇಲ್ಲಿಯೇ ನಿದರ್ಶನ ಉಂಟು. ದುರ್ಯೋಧನ ದುಶ್ಶಾಸನ ಮುಂತಾದವರು ಮಹಾ ಪತಿವ್ರತೆಯಾದ ಪಾಂಡವ ಪತ್ನಿಯನ್ನು ಸಭೆಗೆ ಎಳೆತಂದು ಮಾನಭಂಗಮಾಡುವದೂ, ಪಾಂಡವರ ರಾಜ್ಯವನ್ನು ಅಪಹರಿಸಿರುವದೂ, ಸರಿಯಲ್ಲವೆಂಬ ವಿವೇಕಜ್ಞಾನವಿದ್ದರೂ, ಸ್ವತಂತ್ರಿಸಿ ಇಂತಹ ಅಕೃತ್ಯ ಕರ್ಮಗಳನ್ನು ಮಾಡಿದುದರಿಂದ, ಅಲ್ಲಿಯೂ ಶ್ರೀ ಕೃಷ್ಣನು ಅನುಮನ್ತಾವಾಗಿ ವರ್ತಿಸಿ, ಅವರುಗಳ ನಿಧನಕ್ಕೆ ಕಾರಣನಾದನು. ಆಗಲಿ, ಹಾಗೆ ಸ್ವಾಮಿ ಸಙ್ಕಲ್ಪವಾದ ಪಕ್ಷದಲ್ಲಿ ಸಂಧಿಗಾಗಿ ತಾನೇ ಹೋದುದು ಹೇಗೆ? ಸಂಧಿಯಾಗಿದ್ದ ಪಕ್ಷದಲ್ಲಿ ದುಷ್ಟನಿಗ್ರಹವಿಲ್ಲದೇ ಹೋಗುತ್ತಿತ್ತು ಅಲ್ಲವೇ? ಎಂದರೆ, ಇನ್ನು ಯಾರಾದರೂ ಹೋದರೆ ಎಲ್ಲಿ ಸಂಧಿಗೆ ಅವಕಾಶವಾದೀತೋ ಎಂದು ತಾನೇ ಸಾಕ್ಷಾತ್ತಾಗಿ ಹೋಗಿ ಸಂಧಿಯಾಗದ ಹಾಗೆ ಮಾಡಿರುತ್ತಾನೆ.

ಆದುದರಿಂದ ಪ್ರಥಮ ಸಙ್ಕಲ್ಪದಲ್ಲಿ ಜೀವನನ್ನು ಸ್ವತಂತ್ರನಾಗಿ ಮಾಡಿದರಿಂದ ಜೀವನಿಗೆ ಕರ್ತೃತ್ವವು ಏರ್ಪಟ್ಟಿತು. ಆದರೆ ಅದು ಇನ್ನೂ ನಾಲ್ಕು ಕಾರಣಗಳ ಸಹಾಯವನ್ನು ಅಪೇಕ್ಷಿಸುತ್ತದೆ ಆತನಿಗೆ ಈ ಕರ್ತೃತ್ವವನ್ನುಂಟುಮಾಡಲು, ಕರಣ ಕಳೇಬರಾದಿಗಳನ್ನೂ ಅವುಗಳನ್ನು ಉಪಯೋಗಿಸುವ ಶಕ್ತಿಯನ್ನೂ, ಜ್ಞಾನ ವಿವೇಕಾದಿಗಳನ್ನೂ, ಸಚ್ಛಾಸ್ತ್ರವನ್ನೂ, ಉಪದೇಶಿಕರನ್ನೂ, ಕೊಟ್ಟು, ಹೀಗೆ ನಾನಾವಿಧದಲ್ಲಿ ಪರಮೋಪಕಾರಕನಾಗಿರುವ ಪರಮಪುರುಷನೇ ಪ್ರಧಾನಕಾರಣನಾದುದರಿಂದ **ದೈವಂಚೈವಾತ್ರಪಂಚಮಂ** ಎಂದು ವಿಶೇಷಿಸಿ ಹೇಳಲ್ಪಟ್ಟಿತು. ಹೀಗೆ ಜೀವಾತ್ಮನು ಪ್ರಥಮ ಸಙ್ಕಲ್ಪದಲ್ಲಿ ಸ್ವತಂತ್ರಿಸಿ ನಡೆಸುವದೂ ಸಹ ತನ್ನ ಪೂರ್ವ ಸುಕೃತ ದುಷ್ಕೃತಾನುಸಾರವೆಂದು ತಿಳಿಯತಕ್ಕದ್ದು.

೧. ಆದರೆ, ಈ ಚೇತನನ ಸಙ್ಕಲ್ಪವು ಪೂರ್ವ ಸುಕೃತ ದುಷ್ಕೃತಾನುಸಾರವೆಂದು ಹೇಳಿದರೆ ಅದು ಸ್ವತಂತ್ರವಾದುದು ಎಂಬ ಹೇಳಿಕೆಯ ಅಭಿಪ್ರಾಯವೇನು? ಇತ್ಯಾದಿ ಶಙ್ಕೆಗಳಿಗೆ ಸಮಾಧಾನವು ಹೇಗೆ? ಸ್ವತಂತ್ರವೆಂದು ಹೇಳುವದರಲ್ಲಿ ಅಭಿಪ್ರಾಯವೇನೆಂದರೆ? ಸರ್ವೇಶ್ವರನು ಉದಾಸೀನನಾಗಿ ಆಗ ಇರುವನೆಂಬ ಭಾವವು. ಹಾಗೆ ಉದಾಸೀನನಾಗಿರಲು ಕಾರಣವೇನೆಂದರೆ, ಈತನಿಗೆ ಜ್ಞಾನೇಂದ್ರಿಯಗಳನ್ನೂ ವಿವೇಕಾದಿಗಳನ್ನೂ ಶಾಸ್ತ್ರ ಮೊದಲಾದವುಗಳನ್ನು ಕೊಟ್ಟಿರುವದರಿಂದ ಅವುಗಳನ್ನು ಉಪಯೋಗಿಸಿ, ಕಾರ್ಯಾರಂಭದಲ್ಲಿ ಸ್ವಾಮಿಯನ್ನು ಶರಣು ಹೊಂದಿ ಸರಿಯಾದ ಮಾರ್ಗದಲ್ಲಿ ಪ್ರೇರಿಸು ಎಂದು ಪ್ರಾರ್ಥಿಸಿದರೆ ಆಗ ಪ್ರಬಲಕರ್ಮ ವಾಸನೆಯೂ ದೂರೀಕೃತವಾಗುತ್ತದೆಂಬುದು ಸಮಾಧಾನವು. ಈ ಅಭಿಪ್ರಾಯವೇ "**ತಮೇವ ಶರಣಂ ಗಚ್ಛ**" (ಗೀ. ೧೮. ೬೨) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ.

೨. ಕರ್ಮವಾಸನಾ, ಅದರಿಂದುಂಟಾಗುವ ಈಶ್ವರಾನುಗ್ರಹನಿಗ್ರಹಗಳಿಗೆ ವಶನಾಗಿ ಜೀವನ ಪ್ರಥಮ ಸಙ್ಕಲ್ಪವು ಏರ್ಪಟ್ಟರೆ, ಆಗಲೂ ಶಾಸ್ತ್ರವು ಹೀಗೆ ಮಾಡು, ಹೀಗೆ ಮಾಡಬೇಡ ಎಂದು ಹೇಳಿದ್ದರೂ, ಕರ್ಮಬಲಿಷ್ಠವಾಗಿ ತದನುಗುಣವಾಗಿ ಪ್ರವೃತ್ತಿಯುಂಟಾದರೆ, ಆಗಲೂ ಶಾಸ್ತ್ರವೈಯರ್ಥ್ಯವಿಲ್ಲವೋ? ಎಂದರೆ ಸರ್ವೇಶ್ವರನನ್ನು ಸರಿಯಾದ ಮಾರ್ಗದಲ್ಲಿ ಪ್ರವರ್ತಿಸುವ ಹಾಗೆ ಮಾಡು ಎಂದು ಆತನಿಗೆ ಶರಣಾಗತನಾದರೆ ಶಾಸ್ತ್ರೋದಿತ ಮಾರ್ಗದಲ್ಲೇ ನಡೆಯುವ ಹಾಗೆ ಸ್ವಾಮಿಯು ಪ್ರೇರಿಸುವನು ಎಂಬುದು ಸಮಾಧಾನವು.

೩. ಆಗಲಿ, ಒಂದುವೇಳೆ ಹಾಗೆ ಶರಣಾಗತನಾಗದೆ ಹೋದರೆ, ಕರ್ಮವು ಬಲಿಷ್ಠವಾಗಿ ಈತನು ಕೆಟ್ಟ ಕೆಲಸಗಳನ್ನು ಮಾಡುತ್ತಾ ಹೋಗಿ ಅದಕ್ಕಾಗಿ ಸರ್ವೇಶ್ವರನು ಕುಪಿತ

ನಾಗಿ "**ಕ್ಷಿಪಾಮ್ಯಜಸ್ರಂ ಆಸುರುಷ್ವೇವಯೋನಿಷು**" ಎಂದು ಹೇಳಿದರೆ, ಆಗಲೂ ಶಾಸ್ತ್ರವೈಯರ್ಥ್ಯವು ಸ್ವಲ್ಪಮಟ್ಟಿಗೆ ಉಂಟಾಗಲಿಲ್ಲವೇ? ಎಂದರೆ, ಈತನು ಯಾವಾಗಲಾದರೂ ಹೊಸ ಹೊಸ ಕರ್ಮಗಳನ್ನು ಮಾಡುವಾಗ ಶಾಸ್ತ್ರಾನುಗುಣ ನಡೆದು, ಸ್ವಲ್ಪ ಸುಕೃತವನ್ನೂ ಸ್ವತಂತ್ರಿಸಿ ಮಾಡಬಹುದಾಗಿ ತನ್ಮೂಲಕ ಭಗವದನುಗ್ರಹ ಉಂಟಾಗುತ್ತದೆಯಾದುದರಿಂದ, ಆಗ ಶಾಸ್ತ್ರವೈಯರ್ಥ್ಯವಿಲ್ಲವು.

೪. ಆಗಲಿ, ಈ ಲೋಕದಲ್ಲಾದರೋ ಯಜಮಾನನು ತನಗೆ ಅಧೀನನಾಗಿ ಕೆಲಸ ಮಾಡುವವನನ್ನು ಸದಾ ನೋಡಿಕೊಂಡಿರುವದು ಸಾಧ್ಯವಿಲ್ಲದೆ, ಆತನೇನಾದರೂ ತನ್ನ ಆಜ್ಞೆಯನ್ನು ಉಲ್ಲಂಘಿಸಿ ನಡೆದರೆ, ಅದಕ್ಕಾಗಿ ಆತನನ್ನು ಶಿಕ್ಷಿಸುವದೇನೋ ನ್ಯಾಯವು. ಸರ್ವೇಶ್ವರನಾದರೋ ಸರ್ವಜ್ಞನು. ತನಗೆ ಪುತ್ರಸ್ಥಾನದಲ್ಲಿರುವ ಜೀವಾತ್ಮನು ದುರ್ಮಾರ್ಗದಲ್ಲಿ ಪ್ರವರ್ತಿಸಿದರೆ, ಅಂತವನನ್ನು ಕೃಪಾನಿಧಿಯು ತಿದ್ದದೆ ಅಂತಹ ಪ್ರವೃತ್ತಿಯಲ್ಲೇ ಬಿಟ್ಟುಬಿಟ್ಟು, ತಾನು ಅನುಮನ್ತಾವಾಗಿರೋಣವು ಯಾವ ನ್ಯಾಯವು? ಒಂದು ವೇಳೆ ಒಳ್ಳೆಯ ಕೆಲಸವನ್ನು ಸ್ವತಂತ್ರಿಸಿ ಸಙ್ಕಲ್ಪಿಸಿ ಆರಂಭಿಸಿದರೆ ತಾನು ಅನುಮನ್ತಾವಾಗಿರುವದೇನೋ ನ್ಯಾಯವು. ಕೆಟ್ಟ ಕೆಲಸಕ್ಕೆ ಅನುಮನ್ತಾವಾಗಿರುವದು ಸರಿಯೋ? ಎಂದರೆ ಅಂತವನನ್ನು ತಿದ್ದುವದಕ್ಕಾಗಿಯೇ ತಾನು ಎಲ್ಲರ ವಿಷಯದಲ್ಲೂ ಸಮಭಾವದಿಂದ ಇದ್ದು, ಏನೊಂದೂ ಪಕ್ಷಪಾತವಿಲ್ಲದೆ, ಜ್ಞಾನ ವಿವೇಕಾದಿಗಳನ್ನೂ ಸಚ್ಛಾಸ್ತ್ರವನ್ನೂ ತದುಪದೇಶಿಕರನ್ನೂ ಕೊಟ್ಟಿರುವದರಿಂದ **ಅನುಮನ್ತಾ**ವಾಗಿರುವದು ನ್ಯಾಯವೇ. ದುರುಳನನ್ನೂ ಮಹರ್ಷಿಯನ್ನೂ ಸಮಭಾವದಿಂದ ರಕ್ಷಿಸಿ ಬಿಟ್ಟರೆ, ಸರ್ವೇಶ್ವರನಿಗೆ ಪಕ್ಷಪಾತವನ್ನು ಆರೋಪಿಸಿದಂತಾಗುತ್ತದೆ ಆದುದರಿಂದ "**ಹಿತಸ್ರೋತೋವೃತ್ತ್ಯಾ**" ದುಷ್ಟನನ್ನು ಶಿಕ್ಷಿಸುವದೇ ನ್ಯಾಯವು. ಕಾಕಾಸುರನ ಒಂದು ಕಣ್ಣನ್ನು ತೆಗೆದುಹಾಕಿದುದೇ ಮೊದಲಾದ ಶಿಕ್ಷೆಗಳು ನ್ಯಾಯವಾದವೇ. ಆತನ ಹಿತಕ್ಕಾಗಿಯೇ ಶಿಕ್ಷೆಯು.

೫. ಪೂರ್ವ ಕರ್ಮಾನುಗುಣವಾಗಿ ಕರಣ ಕಳೇಬರಾದಿಗಳುಂಟಾಗಿ, ಅಂತಹ ಕರ್ಮಾನುಭವಕ್ಕಾಗಿ ಕರ್ಮಾಧೀನ ಪ್ರವೃತ್ತಿಯು ಎಂದರೆ ಐದನೆಯ ಹೇತುವಾದ **ದೈವಂಚೈವಾತ್ರಪಂಚಮಂ** ಎಂಬುದು ನಿರರ್ಥಕವಲ್ಲವೋ? ಸರ್ವೇಶ್ವರನ ಸ್ವಾತಂತ್ರ್ಯಕ್ಕೂ ಕುಂದಕವಲ್ಲವೋ? ಎಂದರೆ, ಆತನ ಪ್ರಾಮುಖ್ಯತೆಗೂ, ಸ್ವಾತಂತ್ರ್ಯಕ್ಕೂ ಏನೊಂದೂ ಭಂಗವಿಲ್ಲವು. ಪರಮೇಶ್ವರನೇ **ಕಾರಯಿತಾ** ಎಂಬುದು ಸಿದ್ಧವು. ಚೇತನನ ಸತ್ತಾಸ್ಥಿತಿ ನಿಯಮನಾದಿಗಳೆಲ್ಲಾ ಪರಮಾತ್ಮನಿಗೆ ಅಧೀನವು. ಸ್ವತಂತ್ರನಾದುದರಿಂದಲೇ ವಿವೇಕಜ್ಞಾನವನ್ನೂ, ಶಾಸ್ತ್ರಗಳನ್ನೂ ಶಾಸ್ತ್ರೋಪದೇಶಿಕರನ್ನೂ ಕೊಟ್ಟು ತಾನು **ಉದಾಸೀನ**ನಾಗಿರುತ್ತಾನೆ. ಅದೂ ಅಲ್ಲದೆ ಆತನ ಪ್ರವೃತ್ತಿಗಳಿಗೆಲ್ಲಾ ಅಪೇಕ್ಷಿಸಿದರೆ ಸಹಾಯಕನಾಗಿರುತ್ತಾನೆ. ಈ ಸಂದರ್ಭದಲ್ಲಿ ಆತನು **ಸಮೋಹಂ** ಎಂಬಲ್ಲಿ ಹೇಳಿರುವ ಹಾಗೆ ಸರ್ವರಿಗೂ **ಸಮನು**. ಹೇಗೆಂದರೆ ಎಲ್ಲಾ ಸಸ್ಯವೃದ್ಧಿಗೆ ನೀರು ಹೇಗೆ ಸಾರ್ವತ್ರಿಕವಾಗಿ ಬೇಕೋ, ಹಾಗೆ ಸರ್ವೇಶ್ವರನು. ಬೀಜವು ಹೇಗೆ ಸಸದ ರೂಪವನ್ನು ನಿರ್ಧರಿಸುತ್ತದೋ ಹಾಗೆ ಚೇತನನ ಗುಣಕರ್ಮಗಳು ಪ್ರವೃತ್ತಿಯ ಸ್ವರೂಪವನ್ನು ನಿರ್ಧರಿಸುತ್ತದೆ. ಇಷ್ಟು ಮಾತ್ರವೇ ಅಲ್ಲದೆ ಸರ್ವೇಶ್ವರನು **ಸಾಕ್ಷಿ**ಯೂ ಹೌದು. ಚೇತನನ ಕಾರ್ಯದಿಂದ ಆತನೇನು ಅನುಗ್ರಹ ಯೋಗ್ಯನೇ ಅಥವಾ ನಿಗ್ರಹಕ್ಕೆ ಯೋಗ್ಯನೇ ಎಂಬ ವಿಷಯದಲ್ಲಿ ಇತರರ ಸಾಕ್ಷ್ಯವು ಆತನಿಗೆ ಬೇಕಾಗಿಲ್ಲದೆ, ತಾನೇ ಸಾಕ್ಷಾತ್ತಾಗಿ ನೋಡುತ್ತಿರುವದರಿಂದ **ಸಾಕ್ಷಿಯು**. ಹೀಗೆ **ಉದಾಸೀನನಾಗಿಯೂ**, ಅನಂತರ **ಕಾರಯಿತಾ**, **ಅನುಮಂತಾ**ವಾಗಿ, **ಸಾಕ್ಷಿಯಾಗಿ**ದ್ದವನು. ಚೇತನನು ಶರಣಾಗತಿಯ ಮೂಲಕ ಉಪಾಯಾನುಷ್ಠಾನವನ್ನು ಮಾಡಿದರೆ, ತಾನೇ ಶ್ರೇಯಸ್ಸಿಗೆ **ಸಹಕಾರಿ**ಯಾಗಿ, **ದಯಾಶೀಲ**ನಾಗಿ, **ರಕ್ಷಕ**ನಾಗಿ, **ಅನಿಷ್ಟನಿವಾರಕ**ನಾಗಿ, **ಫಲಪ್ರದಾತಾ**ವಾಗಿ, ಹೀಗೆ ವಿಶೇಷಾನುಗ್ರಹಗಳನ್ನು ವರ್ಷಿಸಿ, ದುಷ್ಕರ್ಮಗಳನ್ನೆಲ್ಲಾ ಪರಿಗಣಿಸದೆ ಒಳ್ಳೆ ಸ್ಥಿತಿಗೆ ಬಂದನೇ ಎಂದು **ಆನಂದಿಸಿ**, **ಅರ್ಚಿರಾದಿಗತಿ**

**ಮೂ. ತತ್ರೈವಂ ಸತಿ, ಕರ್ತಾರ ಮಾತ್ಮಾನಂ ಕೇವಲಂತುಯಃ ।**
**ಪಶ್ಯತ್ಯ ಕೃತಬುದ್ಧಿತ್ವಾ ನ್ನಸ ಪಶ್ಯತಿ ದುರ್ಮತಿಃ ॥೧೬॥**

---

ಯನ್ನುಂಟುಮಾಡಿ, ತನಗೆ ಸಮಾನವಾದ ನಿರತಿಶಯವಾದ ಆನಂದವನ್ನು ದಯಪಾಲಿಸಿ, ತಾನೂ ಆನಂದಪಡುವನಾದುದರಿಂದ ಆತನೇ **ಪ್ರಧಾನಫಲಿಯೂ** ಮತ್ತು **ಭೋಕ್ತೃ;** ಹೀಗೆಲ್ಲಾ ನಡೆಸುವ ಪರಮ ಪುರುಷನ ಸ್ವಾತಂತ್ರ್ಯಕ್ಕೆ ಭಂಗವೆಲ್ಲಿಯದು? ಈ ಅಭಿಪ್ರಾಯ ವನ್ನೇ ಮುಂದೆ "**ತಮೇವ ಶರಣಂಗಚ್ಛ**" (ಗೀ. ೧೮. ೬೧) ಎಂಬಲ್ಲಿ ಅನಭಿಮತ ಪ್ರಾರಬ್ಧ ನಿವೃತ್ತಿಯನ್ನೂ, "**ಸರ್ವಧರ್ಮಾ ಪರಿತ್ಯಜ್ಯ**" (ಗೀ. ೧೮. ೬೬) ಎಂಬಲ್ಲಿ ಮೋಕ್ಷಪ್ರಾಪ್ತಿ ಯನ್ನೂ ವ್ಯಕ್ತಪಡಿಸಿರುತ್ತಾರೆ.

ಆದುದರಿಂದ ಈ ಗೀತೋಪನಿಷತ್ತು ದಶೋಪನಿಷತ್ತುಗಳ ಸಾರಭೂತಾಂಶವಾದುದ ರಿಂದ, ಇದರಲ್ಲಿನ ಜ್ಞಾನದೀಪ್ತಿ ಎದುರಿಗೆ ಯಾವ ಅಂಧಕಾರ ಚೋದ್ಯವೂ ನಿಲ್ಲಲಾರದು ಇದರಲ್ಲಿರುವ ಶಾಸ್ತ್ರ ಸಾಮಂಜಸ್ಯವನ್ನೂ ಐಕ ಕಂಠ್ಯವನ್ನೂ, ವಿಚಾರಮಾಡಿ ಗ್ರಹಿಸಲು ಶಕ್ತಿ ಯಿಲ್ಲದ ಅಲ್ಪಬುದ್ಧಿಗಳಿಗೆ ನಾನಾವಿಧ ಸಂಶಯಗಳ ಬಾಧೆಯು ಇರಬಹುದು. ಇದೇ ಮುಂದಿನ ಶ್ಲೋಕದಲ್ಲಿ ಉಪಪಾದಿತವು. ಶಾಸ್ತ್ರದಲ್ಲಿ ವಿಶ್ವಾಸವಿಲ್ಲದ ಅಕೃತ ಬುದ್ಧಿಯುಳ್ಳವನಾದರೋ, ಯಥಾವಸ್ಥಿತ ಜ್ಞಾನವಿಲ್ಲದೆ, **ತಾನೇ** ಕರ್ತಾ ಎಂದು ಭಾವಿಸುವನೆಂದು ಮುಂದೆ ಹೇಳಲ್ಪಡು ತ್ತದೆ.—ಹೀಗೆ, ಜೀವಾತ್ಮನಿಗ ಪ್ರಥಮ ಸಙ್ಕಲ್ಪದಲ್ಲಿ ಸ್ವಾಮಿದತ್ತ ಜ್ಞಾನ ವಿವೇಕ ಶಕ್ತ್ಯಾದಿ ಮೂಲಕ ಸ್ವಾತಂತ್ರ್ಯವಿರುವದರಿಂದ ಆತನು ಕರ್ತಾ ಎಂದೂ, ಇದರಿಂದ ವಿಧಿನಿಷೇಧ ವಾಕ್ಯ ಗಳಿಗೂ ಶಾಸ್ತ್ರಕ್ಕೂ ಗುರೂಪದೇಶಾದಿಗಳಿಗೂ ವೈಯರ್ಥ್ಯವಿಲ್ಲವೆಂದೂ, ಸರ್ವೇಶ್ವರನು ಕರಣ ಕಳೇಬರ ಪ್ರದಾತಾವಾಗಿ, ಶಾಸ್ತ್ರವನ್ನೂ ತದುಪದೇಶಕರನ್ನೂ ಒದಗಿಸಿಕೊಟ್ಟು, ಅವುಗಳನ್ನು ಗ್ರಹಿಸಿ ವಿವೇಕಿಸುವ ಶಕ್ತಿಯನ್ನೂ ಕೊಟ್ಟು ಪ್ರವೃತ್ತಿಯಲ್ಲಿ ಅನುಮನ್ತಾನಾಗಿ ಕಾರಣನೆಂದೂ ಹಿಂದೆ ಒಂದು ಪ್ರವೃತ್ತಿಗೆ ಹೀಗೆ ಐದು ಹೇತುವೆಂದು ಉಪದೇಶಿಸಲ್ಪಟ್ಟಿತು. ಇಂತಹ ಉಪ ದೇಶ ಮೂಲಕವಾದ ಯಥಾವಸ್ಥಿತ ಜ್ಞಾನವಿಲ್ಲದ ಅಜ್ಞನಾದರೋ ಪರಮಾತ್ಮನಿಂದ ಮಹೋಪ ಕಾರಗಳನ್ನು ಹೊಂದಿರುವದರ ಮೂಲಕವಲ್ಲವೇ ತನಗೆ ಕರ್ತೃತ್ವವೆಂದೂ, ಮತ್ತು ಆ ಕರ್ತೃ ತ್ವವೂ ಶಾಸ್ತ್ರಗಳ ವಿಧಿನಿಷೇಧ ವಾಕ್ಯಗಳಿಗನುಸಾರವಾಗಿರತಕ್ಕದ್ದೆಂದೂ, ಭಾವಿಸದೇ, ತಾನೇ ಸ್ವತಂತ್ರ ಕರ್ತಾವೆಂದು ಭಾವಿಸುವನೆಂದು ಇಲ್ಲಿ ಹೇಳುತ್ತಾರೆ. ಆದುದರಿಂದ ಮೇಲೆ ವಿಶದ ವಾಗಿ ಹೇಳಿದ ಪ್ರಕಾರ ತನ್ನ ಕರ್ತೃತ್ವಕ್ಕೆ ಇತರ ಸಹಕಾರಿ ವಿಶೇಷಗಳೆಲ್ಲಾ ಬೇಕಾಗಿರುವದ ರಿಂದ, ಕರ್ಮಗಳಲ್ಲಿ ತನಗೆ ಕರ್ತೃತ್ವವಿಲ್ಲವು ಎಂಬ ಅನುಸಂಧಾನವೇ ಯುಕ್ತವಾದುದು ಎಂಬ ಭಾವದಿಂದ ಉಪದೇಶಿಸುತ್ತಾರೆ.—

**ಮೂಲಕ್ಕೆ ಅರ್ಥವು :—ಏವಂಸತಿ**-ತನ್ನ ಕರ್ತೃತ್ವವು ಹೀಗೆ ಸ್ವಾಮಿದತ್ತ ದೇಹೇ ನ್ದ್ರಿಯ ಪ್ರಾಣಗಳಿಗೆ ಅಧೀನವಾಗಿಯೂ ಇರಲಾಗಿ, **ಯಃ**-ಯಾವನು **ಆತ್ಮಾನಂತು**-ತನ್ನನ್ನೇ ಎಂದರೆ ಆತ್ಮಾವನ್ನೇ, **ತತ್ರ**-ಆ ಕರ್ಮರೂಪ ಪ್ರವೃತ್ತಿಯಲ್ಲಿ, **ಕೇವಲಂ ಕರ್ತಾರಂ**-ಅನನ್ಯಾಧೀನ ಕರ್ತಾವನ್ನಾಗಿ, **ಅಕೃತ ಬುದ್ಧಿತ್ವಾತ್**-ಅಧ್ಯಾತ್ಮ ಶಾಸ್ತ್ರದಿಂದ ಸಂಸ್ಕಾರ ಹೊಂದಿದ ಬುದ್ಧಿ ಇಲ್ಲದುದರಿಂದ, **ಪಶ್ಯತಿ**-ಹೀಗೆ ತಪ್ಪಾಗಿ ತಿಳಿಯುವನೋ, **ಸಃ ದುರ್ಮತಿಃ**-ಅಂತಹ ಸರಿಯಾದ ಜ್ಞಾನವಿಲ್ಲದ ಮೂಢನು, **ನಪಶ್ಯತಿ**-ವಿವೇಕಿಸಿ ಯಥಾರ್ಥವಾಗಿ ತಿಳಿಯುವ ದಿಲ್ಲವು. ಸರಿಯಾದ ಶಾಸ್ತ್ರಜನ್ಯಜ್ಞಾನವು ಸದ್ಗುರುವಿನ ಉಪದೇಶ ಮೂಲಕ ದೊರೆತು ಜ್ಞಾನವು ಸಂಸ್ಕಾರ ಹೊಂದದೆ ಹೀಗೆ ಅಕೃತಬುದ್ಧಿಯಾದುದರಿಂದ ಈ ಕರ್ಮಾರಂಭ ನಿಷ್ಪತ್ತಿ ಗಳಲ್ಲಿ ತಾನೇ ಸ್ವತಂತ್ರ ಕರ್ತಾವೆಂದು ಭ್ರಮಿಸುವನು ಎಂಬ ತಾತ್ಪರ್ಯವು.

ಹೀಗೆ ಇನ್ನೂ ನಾಲ್ಕು ಹೇತುಗಳಿಗೆ ಅಧೀನವಾಗಿ, ಅವುಗಳಲ್ಲಿ ಮುಖ್ಯವಾಗಿ ಪರ ಮಾತ್ಮನಿಗೆ ಅಧೀನವಾಗಿಯೂ ತನ್ನ ಕರ್ತೃತ್ವವು ಇದ್ದರೂ, ಎಂಬ ಭಾವವನ್ನು ತಿಳಿಸುವದ

**ಭಾ. ಏವಂ-ಪರಮಾತ್ಮಾನುಮತಿ ಪೂರ್ವಕೇ ಜೀವಾತ್ಮನಃ ಕರ್ತೃತ್ವೇಸತಿ, ತತ್ರ-ಕರ್ಮಣಿ ಕೇವಲ ಮಾತ್ಮಾನಮೇವ ಕರ್ತಾರಂ ಯಃ ಪಶ್ಯತಿ, ಸ ದುರ್ಮತಿಃ-**

---

ಕ್ಕಾಗಿ **ಏವಂ ಸತಿ** ಎಂಬ ಭಾವವು; ಅಂಬಾ ಜ್ಞಾನಿಯಾದ ಸದ್ಗುರುವಿನ ಮೂಲಕ ಪ್ರಾಪ್ತವಾಗುವ ಬುದ್ಧಿಯೇ ಕೃತಬುದ್ಧಿಯು ಎಂದೆನಿಸುತ್ತದೆ. ಅಂತಹ ಸಂಸ್ಕಾರವಿಲ್ಲದ ಬುದ್ಧಿಯು ಅಕೃತಬುದ್ಧಿಯು; ಅಂತಹ ಬುದ್ಧಿಯು ಯಥಾರ್ಥವಾಗಿ ಯಾವುದನ್ನೂ ಗ್ರಹಿಸಲಾರದು; ತಾನೇ ಸ್ವತಂತ್ರ ಕರ್ತಾವೆಂಬ ಭ್ರಮೆಯಿಂದ ಯುಕ್ತವಾಗುತ್ತದೆಂಬ ಭಾವವು; ಹೀಗೆ ಶಾಸ್ತ್ರಜ್ಞಾನದ ಸದುಪದೇಶವಿಲ್ಲದೆ ಹೋದವನನ್ನು ಇಲ್ಲಿ **ದುರ್ಮತಿಃ** ಮೂಢನೆಂದು ಹೇಳಿರುತ್ತಾರೆ. ಇಲ್ಲಿ **ಅಕೃತ ಬುದ್ಧಿತ್ವಾತ್** ಆತನು **ದುರ್ಮತಿಃ** ಎಂದು ಹೇಳಲ್ಪಟ್ಟಿರುವದರಿಂದ ಅಧ್ಯಾತ್ಮ ಶಾಸ್ತ್ರಜ್ಞಾನವಿಲ್ಲದವನಿಗೆ ದೇಹಾತ್ಮ ಭ್ರಾಂತಿಯಿಂದ ಸ್ವತಂತ್ರಾತ್ಮ ಭ್ರಾಂತಿಯು ಉತ್ಪನ್ನವಾಗುತ್ತದೆಂದೂ ಹೇಳಿದುದೂ ಅಲ್ಲದೆ, ಬರೀ ಶಾಸ್ತ್ರಪರಿಚಯವಿದ್ದು ಸದ್ಗುರುವಿನ ಮೂಲಕ ಸಂಸ್ಕಾರ ಹೊಂದದೇ ಇರುವ ಜ್ಞಾನವೂ ಆ ರಾಶಿಗೇನೇ ಸೇರಿದುದು ಎಂಬ ಭಾವವೂ ತೋರಿಬರುತ್ತದೆ. ಆದುದರಿಂದಲೇ "**ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಶ್ಚಲನ ಕಾರಣಮ್ । ಉಪದೇಶಾ ದ್ಧರಿಂಬುದ್ಧ್ವಾ ವಿರಮೇತ್ಸರ್ವಕರ್ಮಸು**" ಎಂಬಲ್ಲಿ ಹೇಳಿರುವ ಹಾಗೆ, ಬರೀ "**ಶಾಸ್ತ್ರಜ್ಞಾನವು**" ಬಹು ಕ್ಲೇಶವೆಂದೂ, "**ಬುದ್ಧೇಶ್ಚಲನ**" ಕಾರಣವೆಂದೂ ಹೇಳಲ್ಪಟ್ಟಿರುತ್ತದೆ: '**ಉಪದೇಶ**'ದಿಂದ ಕೃತಬುದ್ಧಿಯಾದರೇನೇ ಸ್ವತಂತ್ರ ಕರ್ತೃತ್ವ ಭ್ರಾಂತಿಯು ತೊಲಗಿ, ಮೇಲೆ ಕರ್ಮಸನ್ನ್ಯಾಸ ಅಥವಾ ತ್ಯಾಗವನ್ನು ಹೇಳುವ ಸಂಧರ್ಭದಲ್ಲಿ ಕರ್ತೃತ್ವತ್ಯಾಗಬುದ್ಧಿಯಿಂದ ಕರ್ಮವನ್ನನುಷ್ಠಿಸತಕ್ಕದ್ದೆಂದು ಉಪದೇಶಿಸಲ್ಪಟ್ಟಿತು. ಆದುದರಿಂದ ಶಾಸ್ತ್ರಜ್ಞಾನವೂ, ಅದನ್ನು ಯಥಾರ್ಥವಾಗಿ ತಿಳಿದು ನಡೆಯಲು ಬೇಕಾದ ವಿವೇಕಜ್ಞಾನವೂ, ಎರಡೂ ಆವಶ್ಯಕವೆಂದು ಬೋಧಿಸಲ್ಪಟ್ಟಿತು.

**ಭಾಷ್ಯಾರ್ಥವು**—ಹೀಗೆ ಐದು ಹೇತುಗಳಿಂದು ಜೀವಾತ್ಮನ ಪ್ರವೃತ್ತಿಗೆ ಹೇಳಿದ್ದರೂ ಕೂಡ, ಜೀವಾತ್ಮನೂ ಕರ್ತಾ ಎಂದಾದರೆ ಅಕರ್ತೃತ್ವಾನುಸಂಧಾನವಿರಬೇಕೆಂದು ಹೇಳಿದುದು ಹೇಗೆ ಸರಿಹೋಗುತ್ತದೆ? ಅಂತಹ ಅನುಸಂಧಾನವು ಬರೀ ಭ್ರಮರೂಪವಾದುದಷ್ಟೇ? ವಿಧಿನಿಷೇಧ ಶಾಸ್ತ್ರವಾಕ್ಯಗಳ ಸಂಗತ್ಯನ್ನೆಗಾಗಿ ಜೀವಾತ್ಮನಿಗೆ ಕರ್ತೃತ್ವವು ಬಿಟ್ಟಿದ್ದಲ್ಲವು. ಅಕರ್ತೃತ್ವಾನುಸಂಧಾನದಲ್ಲಿ ಸಹಕಾರಿ ನಿರಪೇಕ್ಷವಾಗಿ ಕರ್ತೃತ್ವನ್ನು ನಿಷೇಧಿಸಲ್ಪಟ್ಟಿತೆಂದು ಹೇಳಲೂ ಸಾಧ್ಯವಿಲ್ಲವಷ್ಟೇ. ಇದೂ ಅಲ್ಲದೆ ಯಾವನಾದರೂ ಒಬ್ಬನು ದೇಹೇಂದ್ರಿಯಾದಿಗಳ ಅಪೇಕ್ಷೆಯೂ ಇಲ್ಲದೆ ತಾನು ಕರ್ಮವನ್ನು ಮಾಡುತ್ತೇನೆ ಎಂದು ತಿಳಿಯಬಹುದು ಎಂಬ ಶಬಾಕ್ಯವಿನಲ್ಲಿ ಈ ಶ್ಲೋಕವು ಅಂತವನನ್ನು ಕುರಿತು ಅಜ್ಞನೇ ಎಂಬ ಮತಿಹೀನನನ್ನು ಪ್ರದರ್ಶಿಸುತ್ತದೆ—ಶಾಸ್ತ್ರೋಪದೇಶದಿಂದ ಸಂಸ್ಕಾರ ಹೊಂದದ ಬುದ್ಧಿಯುಳ್ಳವನು, ಹೀಗೆ ತನ್ನ ಕರ್ತೃತ್ವ ಸಹಾಯಾರ್ಥವಾಗಿ, ತನಗೆ ಶರೀರೇಂದ್ರಿಯಗಳನ್ನೂ, ಪ್ರಾಣವನ್ನೂ ಸರ್ವೇಶ್ವರನು ದಯಪಾಲಿಸಿ, ಜ್ಞಾನಶಕ್ತಿ ಪ್ರದಾನರೂಪ ಸತ್ತೆಯನ್ನೂ ಕೊಟ್ಟು, ಪ್ರಥಮ ಸಂಕಲ್ಪದಲ್ಲಿ ಮಾತ್ರ ಸ್ವಾತಂತ್ರ್ಯವನ್ನು ಕೊಟ್ಟು, ಅನಂತರ ಕಾರ್ಯಾರಂಭವನ್ನುಂಟುಮಾಡಿ, ಪೂರೈಸಿಕೊಡುವದಕ್ಕಾಗಿ ಅನುಮನ್ತಾವಾಗಿ, ಹೀಗೆ ಸರ್ವವಿಧದಲ್ಲೂ ಸಹಾಯಕನು ಎಂದು ತಿಳಿಯದೆಯೂ, ಆ ಪರಮಾತ್ಮನಿಂದಲೇ ತನ್ನ ಎಲ್ಲಾ ಪ್ರವೃತ್ತಿಗಳು, ಆತನು ಇಲ್ಲದಿದ್ದರೆ ಯಾವುದೂ ಇಲ್ಲವು ಎಂಬ ಇಂತಹ ಶಾಸ್ತ್ರಜ್ಞಾನದ ಸಂಸ್ಕಾರವಿಲ್ಲದ ಮೂಢನು, ವಿಪರೀತಬುದ್ಧಿಯಿಂದ ತನಗೇನೇ ಸ್ವತಂತ್ರ ಕರ್ತೃತ್ವ ಉಂಟೆಂದು ಭ್ರಮಿಸುವನೆಂದು ಹೇಳಲ್ಪಡುತ್ತದೆ—**ಪರಮಾತ್ಮಾನುಮತಿಪೂರ್ವಕೇ ಜೀವಾತ್ಮನಃ ಕರ್ತೃತ್ವೇ ಸತಿ**-ಇದು **ಏವಂ ಸತಿ** ಎಂದು ಮೂಲದಲ್ಲಿರುವದರ ವ್ಯಾಖ್ಯಾನವು. ಜೀವಾತ್ಮನ ಕರ್ತೃತ್ವವು ಪರಮಾತ್ಮನ ಅನುಮತಿ **ಪೂರ್ವಕ**ವೆಂದು ಸ್ಥಾಪಿತವಾಗಲಾಗಿ, **ತತ್ರ** ಎಂದರೆ **ಕರ್ಮಣಿ**-ತಾನು ಮಾಡುವ ಕರ್ಮವಲ್ಲಿ, **ಕೇವಲ ಮಾತ್ಮಾ**

**ವಿಪರೀತಮತಿಃ, ಅಕೃತ ಬುದ್ಧಿತ್ವಾತ್-ಅನಿಷ್ಪನ್ನ ಯಥಾವಸ್ಥಿತ ವಸ್ತು ಬುದ್ಧಿತ್ವಾತ್, ನಪಶ್ಯತಿ-ನ ಯಥಾವಸ್ಥಿತ ಕರ್ತಾರಂ ಪಶ್ಯತಿ** ||೧೬||

---

**ನಮೇವ ಕರ್ತಾರಂ**-ಇತರ ಹೇತುಗಳ ನಿರಪೇಕ್ಷವಾಗಿ ತಾನೇನೇ ಕರ್ತಾವೆಂಬದಾಗಿ ಎಂದರೆ ತಾನೇ ಸ್ವತಂತ್ರ ಕರ್ತಾ ಎಂಬದಾಗಿ, **ಯಃ ಪಶ್ಯತಿ**-ಯಾವನು ತಿಳಿಯುವನೋ **ಸಃ**-ಅವನು, **ದುರ್ಮತಿಃ** ಎಂದರೆ **ವಿಪರೀತಮತಿಃ**-ವ್ಯತ್ಯಸ್ತವಾದ ಬುದ್ಧಿಯುಳ್ಳವನು, ಯಥಾವತ್ತಾದ ಜ್ಞಾನವಿಲ್ಲದವನು; ಏಕೆಂದರೆ, **ಅಕೃತ ಬುದ್ಧಿತ್ವಾತ್** ಎಂದರೆ **ಅನಿಷ್ಪನ್ನಯಥಾವಸ್ಥಿತ ವಸ್ತುಬುದ್ಧಿತ್ವಾತ್**-ವಸ್ತು ವಿಷಯದಲ್ಲಿ ಯಥಾರ್ಥವಾದ ಜ್ಞಾನವು ಇನ್ನೂ ಉಂಟಾಗದೇ ಇರುವದರಿಂದ, **ನಪಶ್ಯತಿ** ಎಂದರೆ **ನಯಥಾವಸ್ಥಿತ ಕರ್ತಾರಂ ಪಶ್ಯತಿ**-ಈ ಚೇತನನು ಎಷ್ಟರ ಮಟ್ಟಿಗೆ ಕರ್ತಾವೆಂಬುದನ್ನು ಯಥಾವತ್ತಾಗಿ ತಿಳಿದವನಲ್ಲವು. ಇಲ್ಲಿ **ಏವಂ** ಎಂಬುದಕ್ಕೆ ಅರ್ಥಮಾಡುವದರಲ್ಲಿ ಚೇತನನು ಮಾಡುವ ಕರ್ಮಕ್ಕೆ ಪರಮಾತ್ಮನು **ಅನುಮಂತಾ** ಎಂದು ಅರ್ಥಮಾಡಿದರು; ಇದರಲ್ಲೇ **ಕಾರಯಿತಾ** ಎಂಬ ಭಾವವೂ ಅಂತರ್ಗತವೆಂದು ಭಾವಿಸತಕ್ಕದ್ದು; ಏಕೆಂದರೆ ಜೀವನ ಕರ್ತೃತ್ವಕ್ಕೆ ಇನ್ನು ನಾಲ್ಕರ ಸಹಾಯವಿಲ್ಲದೇ ಕಾರ್ಯೋತ್ಪತ್ತಿಯಿಲ್ಲವೆಂದು **ಏವಂಸತಿ** ಎಂಬ ಪ್ರಯೋಗವಾದುದರಿಂದ, ಅನುಮನ್ತೃತ್ವದೊಡನೆ ಕಾರಯಿತೃತ್ವವೂ ಸೇರಿತು. ಕರಣ ಕಳೇಬರ ಯೋಗ ಪ್ರಾಣ ದಾನಾದಿಗಳನ್ನೂ, ಜ್ಞಾನಶಕ್ತ್ಯಾದಿಗಳೇ ಮೊದಲಾದವನ್ನು ಕೊಟ್ಟು ಮಾಡಿಸುವದರಿಂದ **ಕಾರಯಿತಾ** ಎಂದೂ, ಪ್ರಾರಬ್ಧ ಕರ್ಮಾನುಗುಣವಾಗಿ ಅನುಭವರೂಪ ಫಲಕ್ಕಾಗಿ ನಿಗ್ರಹಾನುಗ್ರಹ ರೂಪದಲ್ಲಿ ಕಾರ್ಯಪ್ರವರ್ತನೆಯು ಉಂಟಾಗುವ ಹಾಗೆ ಮಾಡುವದರಿಂದ **ಅನುಮಂತಾ**ವೆಂದೂ, ಹಿಂದೆಯೇ ಉಪಪಾದಿಸಲ್ಪಟ್ಟಿರುವದರಿಂದ **ಏವಂಸತಿ**ಎಂಬುದಕ್ಕೆ ಹಾಗೆ ವ್ಯಾಖ್ಯಾನವು. ಮೂಲದ **ಕೇವಲ** ಶಬ್ದವು ಇತರ ಹೇತು ನಿರಪೇಕ್ಷವೆಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿತೆಂದು ಭಾವಿಸಿ **ಕೇವಲ ಮಾತ್ಮಾನಮೇವಕರ್ತಾರಂ** ಎಂದು ಅವಧಾರಣೆಯಿಂದ ಸೇರಿಸಿ ವ್ಯಾಖ್ಯಾನ ಮಾಡಿರುತ್ತಾರೆ. ಅವಧಾರಣಾರ್ಥವು ಹೇಗೆ ಬಂತು? ಎಂದರೆ ಮೂಲದ **ತು** ಶಬ್ದಾರ್ಥವೆಂಬ ಭಾವದಿಂದ ಹಾಗೆ ವ್ಯಾಖ್ಯಾನವು. ಅಥವಾ **ತು** ಶಬ್ದವು ಹಿಂದೆ ಹೇಳಿದುದನ್ನು ವ್ಯಾವರ್ತಿಸಿ ಹೇಳಲ್ಪಡುತ್ತದೆಂದೂ ಭಾವಿಸಬಹುದು. ಇರುವದು ಒಂದೇ ಆತ್ಮಾ ಎಂದು ಇಲ್ಲಿ ಜೀವಾತ್ಮ ಪರಮಾತ್ಮ ಐಕ್ಯವನ್ನು ಸಾಧಿಸುವರು, **ಕೇವಲಂ ಆತ್ಮಾನಂ**-ಪರಿಶುದ್ಧನಾದ ಪರಮಾತ್ಮನಾಗಿರುವ ತನ್ನನ್ನು ಅವಿದ್ಯಾಗೃಹೀತನಾಗಿ **ಕರ್ತಾರಂ ಯಃ ಪಶ್ಯತಿ**-ಕರ್ತಾ ಎಂದು ತಿಳಿಯುವನೋ, ಆತನು **ದುರ್ಮತಿ** ಎಂದು ಅರ್ಥಮಾಡಿರುತ್ತಾರೆ. ಈ ಅಭಿಪ್ರಾಯವು **ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯ** ಎಂಬುವದರಲ್ಲಿ ಉಪಪಾದಿಸಿರುವದಕ್ಕೆ ವಿರುದ್ಧವಾದುದು. "**ಕರ್ತಾ ಶಾಸ್ತ್ರಾರ್ಥವತ್ತ್ವಾತ್**" ಎಂಬ ಸೂತ್ರಕಾರರ ಅಭಿಪ್ರಾಯಕ್ಕೂ ವಿರುದ್ಧವಾದುದು. ಅದೂ ವ್ಯಾಸವಾಕ್ಯವು, ಇದೂ ವ್ಯಾಸವಾಕ್ಯವು; ಸೂತ್ರದಲ್ಲಿ ಹೇಳಿದ ಅಭಿಪ್ರಾಯವು ಸರಿಯಲ್ಲವೆಂದು ತಾವೇ ನಿಂದಿಸಿಕೊಂಡರೆಂದು ಹೇಳಿದಂತಾಗುವುದಿಲ್ಲವೇ? ಇನ್ನು ಕೆಲವರು **ಕೇವಲಂ** ಎಂದರೆ ಜೀವಾತ್ಮನು ಅಣುವಾದ ಪ್ರಯುಕ್ತ, ನಿಷ್ಕ್ರಿಯನಾಗಿರುವದರಿಂದ **ಕರ್ತಾ** ಎಂದು ಭಾವಿಸುವನೋ **ಸಃ ದುರ್ಮತಿಃ** ಎಂದು ಅರ್ಥ ಮಾಡಿರುತ್ತಾರೆ. ಪ್ರಕರಣವು ಸ್ವಸ್ವರೂಪವನ್ನು ಹೇಳುವ ಸಂದರ್ಭವಲ್ಲವು. ಉದ್ದೇಶೆಯಲ್ಲಿ ಕರ್ತೃತ್ವ ಉಂಟೆಂದು ಹೇಳಿ, ಆತ್ಮನಿಗೆ ಇನ್ನು ನಾಲ್ಕು ಹೇತುಗಳಿಂದ ಸೇರಿದ ಕರ್ತೃತ್ವ ಉಂಟೆಂದು ಸ್ಥಾಪಿಸುವ ಪ್ರಕರಣವಾಗಿ ಹಾಗೆ ಕರ್ತಾವಾಗಿದ್ದರೂ ಅಕರ್ತೃತ್ವಾನುಸಂಧಾನವಿರಬೇಕೆಂದೂ, ಅಂತಹ ಅನುಸಂಧಾನಕ್ಕೆ ಸಾಧನವಾಗಿ ಕರ್ಮ ನಿಷ್ಪತ್ತಿಯು ಹೇಗೆ ಎಂಬುದನ್ನು ತಿಳಿಸುವ ಪ್ರಕರಣವಾದುದರಿಂದ, **ಕೇವಲಂ** ಎಂಬುದಕ್ಕೆ ನಿಷ್ಕ್ರಿಯಂ ಎಂಬ ಅರ್ಥವು ಪ್ರಕರಣಾನುಗುಣವಾದ ಅರ್ಥವಾಗುವದಿಲ್ಲವು. ಇಲ್ಲಿ **ದುರ್ಮತಿಃ** ಎಂಬ ಪ್ರಯೋಗವು ಅಂತವನನ್ನು ನಿಂದಿಸುವ ಅಭಿಪ್ರಾಯ

**ಮೂ. ಯಸ್ಯನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನಲಿಪ್ಯತೇ ।**
**ಹತ್ವಾಪಿ ಸ ಇಮಾಲ್ಲೋಕಾ ನ್ನಹನ್ತಿ ನನಿಬಧ್ಯತೇ ॥** ॥೧೭॥

---

ವಲ್ಲವು. ಸರಿಯಾದ ಜ್ಞಾನವಿಲ್ಲವೇ ಎಂಬ ಪರಿತಾಪದಿಂದ ಹಾಗೆ ಪ್ರಯೋಗವೆಂದು ತಿಳಿಸು ವದಕ್ಕಾಗಿ **ದುರ್ಮತಿಃ** ಎಂದರೆ **ವಿಪರೀತಮತಿಃ** ಎಂಬ ವ್ಯಾಖ್ಯಾನವು. ಸರಿಯಾದ **ಶಾಸ್ತ್ರ** ಜ್ಞಾನವುಳ್ಳವನಾಗಿ ಸನ್ಮತಿಯಾಗಿದ್ದ ಪಕ್ಷದಲ್ಲಿ ತನಗೆ ಸ್ವತಂತ್ರ ಕರ್ತೃತ್ವವಿಲ್ಲವು. ಇತರ ನಾಲ್ಕು ಹೇತುಗಳೂ ಕೂಡಿದರೇನೇ ಕರ್ತೃತ್ವವು, ಅನ್ಯಥಾ ಇಲ್ಲವೆಂದು ನಿಶ್ಚಯಿಸಿ ತಿಳಿ ಯುವನೆಂಬ ಭಾವವು.

ಇಲ್ಲಿ ಅಂತವನ ಬುದ್ಧಿಯು ವಿಪರೀತವಾಗಲು ಕಾರಣವೇನೆಂದರೆ **ಅಕೃತ ಬುದ್ಧಿ ತ್ವಾತ್** ಎಂದು ಹೇತುವು ಹೇಳಲ್ಪಟ್ಟಿರುವದರಿಂದ, **ಅಕೃತ ಬುದ್ಧಿಯು** ಯಾವುದು ಎಂದರೆ ಅಧ್ಯಾತ್ಮ ಶಾಸ್ತ್ರಜ್ಞಾನ ಶೂನ್ಯತೆಯಿಂದ ತನಗೆ ಸತ್ತಾ ಸ್ಥಿತಿ ಪ್ರಯತ್ನಗಳೆಲ್ಲಾ ಹೇಗೆ ಪ್ರಾಪ್ತ ವಾದವೆಂಬುದು ತಿಳಿಯದು ಎಂಬ ಭಾವದಿಂದ **ಅನಿಷ್ಪನ್ನ ಯಥಾವಸ್ಥಿತ ಬುದ್ಧಿತ್ವಾತ್** ಎಂಬ ವ್ಯಾಖ್ಯಾನವು. ಅಂತವನು ತಿಳಿದವನಲ್ಲವೆಂಬ ಭಾವದಿಂದ **ನಪಶ್ಯತಿ** ಎಂದು ಹೇಳ ಲ್ಪಟ್ಟಿತು; ಯಾವ ವಿಷಯದಲ್ಲಿ ತಿಳಿದವನಲ್ಲವು ಎಂದರೆ ಎಷ್ಟು ಮಟ್ಟಿಗೆ ತಾನು **ಕರ್ತಾ** ಎಂಬು ದನ್ನು ತಿಳಿದವನಲ್ಲವು, ಅದನ್ನೇ **ಸಃ ಯಥಾವಸ್ಥಿತ ಕರ್ತಾರಂ ನಪಶ್ಯತಿ** ಎಂದು ವ್ಯಕ್ತಪಡಿ ಸಿರುತ್ತಾರೆ. ಶಾಸ್ತ್ರಜ್ಞಾನವಿಲ್ಲದೆ ತಾನೇ ಸ್ವತನ್ತ್ರಕರ್ತಾ ಎಂದು ಭಾವಿಸಿ ಹೀಗೆ ವಿಪರೀತ ಬುದ್ಧಿಯುಕ್ತನಾದರೆ, ವಿಪರೀತಾಚರಣೆಯು ಎಂದರೆ ಶಾಸ್ತ್ರವಿರುದ್ಧಾಚರಣೆಯು ಉಂಟಾಗು ವದರಿಂದಲೂ ಅಂತವನು ತಿಳಿದವನಲ್ಲವು; ಏಕೆಂದರೆ ಈತನಿಗೆ ಅನಿಷ್ಟಪ್ರಾಪ್ತಿಗೆ ಹೇತುವಾಗು ವದರಿಂದ ಹಿಂದೆ ಹೇಳಿದ ಹಾಗೆ **ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯ ವ್ಯವ ಸ್ಥಿತೌ** ಎಂಬ ಹಿತೋಪದೇಶಾನುಗುಣವಾಗಿ ಶಾಸ್ತ್ರವಿಹಿತ ಕರ್ಮವನ್ನು ಪರಮಪುರುಷಾರಾಧನಾ ರೂಪದಲ್ಲಿ ಅನುಷ್ಠಿಸಿ, ಆ ಅನುಷ್ಠಾನಕ್ಕೆ ಪರಮಾತ್ಮನೇ ಪ್ರಧಾನ ಕಾರಣಭೂತನಾದುದರಿಂದ ಆತನಲ್ಲೀ ಸಮರ್ಪಿಸುವದು ಪರಮ ಶ್ರೇಯಸ್ಕರವಾದುದೆಂದು ಭಾವಿಸಿ, ತಾನು ಸ್ವತಂತ್ರ ಕರ್ತಾ ಎಂದು ಸರ್ವಾತ್ಮನಾ ಭಾವಿಸತಕ್ಕದ್ದಲ್ಲವು. ಹಾಗೆ ಭಾವಿಸುವುದು ಅಜ್ಞಾನದ ವಿಜೃಂ ಭಣೆಯೆಂದು ಇಲ್ಲಿ ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಒಂದು ಗೂಢಾರ್ಥವೂ ಸೂಚಿತವು. ಏನೆಂದರೆ?—ನೀನು ಪ್ರಥಮತಃ ಸ್ವತಂತ್ರಕರ್ತಾ ಎಂದು ಭಾವಿಸಿ ಗಾಂಡೀವವನ್ನು ತ್ಯಜಿಸಿ ಯುದ್ಧಮಾಡುವುದಿಲ್ಲವೆಂದು ನಿಶ್ಚಯಿಸಿದುದು ಸರಿಯಲ್ಲವು. ಆದರೆ ನೀನು **ದುರ್ಮತಿ** ಎಂದರೆ ವಿಪರೀತ ಮತಿಯುಳ್ಳವನಲ್ಲವು. ಏಕೆಂದರೆ ನಿನ್ನ ಪ್ರವೃತ್ತಿಯು ಸಾಧುವೇ ಅಸಾಧುವೇ ಎಂದೇ ತಿಳಿಯಲು, ನಿನ್ನ ವಿವೇಕಜ್ಞಾನವು ಉತ್ಪನ್ನವಾಗಿ, ನನ್ನಲ್ಲಿ ಶರಣಾಗತಿಯನ್ನನುಷ್ಠಿಸಿ **"ಕಾರ್ಪಣ್ಯದೋಷೋಪಹತಸ್ವಭಾವ"** ನೆಂದೂ, **ಧರ್ಮಸಂಮೂಢಚೇತಸ್ಕ**ನೆಂದೂ **ಹೇಳಿ ಕೊಂಡು**, ಯುದ್ಧ ಮಾಡುವುದು ಶ್ರೇಯಸ್ಕರವೇ, ಮಾಡದಿರುವುದು ಶ್ರೇಯಸ್ಕರವೇ ಎಂದು ಕೇಳಿ ತಿಳಿಯಲು ಉದ್ಯುಕ್ತನಾಗಿರುವುದರಿಂದ ನೀನು ವಿಪರೀತ ಬುದ್ಧಿಯುಳ್ಳ **ದುರ್ಮತಿ** ಯಲ್ಲವೆಂಬ ಭಾವವು ಸೂಚಿತವು. ಮುಂದಿನ ಶ್ಲೋಕದಲ್ಲಿ ಈ ಗೂಢಾಭಿಪ್ರಾಯವನ್ನು ಮನಸ್ಸಿನಲ್ಲಿಟ್ಟೇ, ನೀನು ಒಂದುವೇಳೆ ಇದನ್ನೆಲ್ಲಾ ಅನುಸಂಧಾನಮಾಡಿ ನನ್ನ **ಉಪದೇಶದ** ಪ್ರಕಾರ ಈ ದುಷ್ಟರನ್ನೆಲ್ಲಾ **ಹತ್ವಾಪಿ**-ಕೊಂದರೂ ಕೂಡ, ಅದರಿಂದ ನಿನಗೆ **ನನಿಬಧ್ಯತೇ**- ಬಂಧಕವಾಗುವದಿಲ್ಲವೆಂಬ ಅಭಿಪ್ರಾಯ ಉಂಟಾಗುವ ಹಾಗೆ ಹೇಳಿರುತ್ತಾರೆ. ॥೧೬॥

**ಮೂಲಕ್ಕೆ ಅರ್ಥವು**—ಪ್ರವೃತ್ತಿಗಳಲ್ಲಿ ಕರ್ತೃತ್ವ, ಮಮತಾ, ಫಲ ತ್ಯಾಗಮಾಡಿ ಪರಮಪುರುಷಾಯತ್ತವಾಗಿ ನಡೆಯಿತು ಎಂಬ ಅಭಿಸಂಧಿಯಿಲ್ಲದೆ, ಯಾವನು ತಾನೇ ಸ್ವಯಂ ಕರ್ತಾ ಎಂದು ಭಾವಿಸುವನೋ, ಅವನು ಅಧ್ಯಾತ್ಮ ಶಾಸ್ತ್ರಜ್ಞಾನವಿಲ್ಲದ ದುರ್ಮತಿ ಎಂದು ಹೇಳಿದರು. ಇದರಿಂದ ಅಂತವನಿಗೆ ಬಂಧನವೂ ತಪ್ಪಿದ್ದಲ್ಲವೆಂದು ಹಿಂದಿನ ಶ್ಲೋಕದಲ್ಲಿ

ಅರ್ಥವಾಗಿ ತೋರುತ್ತದೆ. ಈ ಶ್ಲೋಕದಲ್ಲಾದರೋ ಹಾಗಲ್ಲದೆ ಅಧ್ಯಾತ್ಮಶಾಸ್ತ್ರಜ್ಞಾನ ಸಂಸ್ಕಾರ ಬಲದಿಂದ ತಾನು ಸ್ವತಃ ಕರ್ತಾವಲ್ಲವು; ಸ್ವಾಮಿ ಸಙ್ಕಲ್ಪಾನುಸಾರ ನಡೆಯುತ್ತದೆ ಎಂದು ಭಾವಿಸಿ, ಮಮತೆಯನ್ನು ನೀಗಿ **ಮಯಿಸರ್ವಾಣಿಕರ್ಮಾಣಿ** ಎಂದು ಹಿಂದೆ ಹೇಳಿದ ಹಾಗೆ ನನ್ನಲ್ಲಿ ಸಮರ್ಪಿಸುವನೋ, ಅಂತವನಿಗೆ "**ನಕರ್ಮ ಲಿಪ್ಯತೇನರೇ**" ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಕರ್ಮಲೇಪವಿಲ್ಲವು ಎಂದು ಉಪದೇಶಿಸುತ್ತಾರೆ. ನೀರಿನ ಮಧ್ಯದಲ್ಲೇ ಇರುವ ಕಮಲಪತ್ರಕ್ಕೆ ನೀರಿನ ಲೇಪ ಹೇಗಿಲ್ಲವೋ, ಹಾಗೆಯೇ ಪ್ರವೃತ್ತಿಗಳ ಮಧ್ಯದಲ್ಲಿರುವ ಈ ಆತ್ಮನಿಗೆ ಕರ್ಮ ಲೇಪವಿಲ್ಲವು. ಹಿಂದಿನ ಶ್ಲೋಕದವನು ದುರ್ಮತಿಯಾದರೇ ಈ ಶ್ಲೋಕದಲ್ಲಿ ಹೇಳಲ್ಪಟ್ಟವನು ಸನ್ಮತಿಯು, ಈ ಶ್ಲೋಕದಲ್ಲಿ ಹೇಳಿದವನು ಕರ್ಮಲೇಪವಿಲ್ಲದುದರಿಂದ ಬಂಧವಿಲ್ಲದವನಾದರೆ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟವನು ಕರ್ಮ ಲೇಪವನ್ನು ಹೊಂದಿ ಬಂಧಕ್ಕೆ ಸಿಕ್ಕುವನೆಂದು ಹೇಳಿದಂದಾಯಿತು. ಇದೇ ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ.—

**ಯಸ್ಯ**-ಯಾವನಿಗೆ, ಇದು ಮೋಕ್ಷಾರ್ಥಿಯನ್ನು ಕುರಿತು ಹೇಳುವ ಪ್ರಕರಣವಾದುದರಿಂದ, ಯಾವ ಮೋಕ್ಷಾರ್ಥಿಗೆ, **ನಾಹಂಕೃತೋಭಾವಃ**-ಯದ್ಯಪಿ ಪ್ರಥಮ ಸಂಕಲ್ಪವು ತನ್ನದಾಗಿದ್ದರೂ, ಪರಮಾತ್ಮ ಸಙ್ಕಲ್ಪಾನುಸಾರ ಆತನ ಅನುಮತಿಯಿಂದಲೇ ನಡೆಯುತ್ತದೆ ಎಂಬುದು ಯಥಾರ್ಥ ವಿಷಯವಾದುದರಿಂದ, ಅದನ್ನು ತಿಳಿದವನಾಗಿ, ತಾನು ಮಾಡಿದನೆಂಬ ಅಭಿಮಾನ ರಹಿತವಾದ ತಿಳಿವಳಿಕೆಯುಂಟೋ; **ಯಸ್ಯಬುದ್ಧಿರ್ನಲಿಪ್ಯತೇ**-ಯಾವ ಮೋಕ್ಷಾರ್ಥಿಯ ವಿವೇಕಜ್ಞಾನವು, ತಾನೇ ಈ ಕರ್ಮವನ್ನು ನಡೆಸಿದೆನೆಂದೂ, ಆ ಫಲವನ್ನನುಭವಿಸುವವನು ತಾನೇ ಎಂದು ಕರ್ಮದಲ್ಲಿ ಲಿಪ್ತನಾಗುವದಿಲ್ಲವೋ, **ಸಃ**-ಅಂತಹ ತಾನು ಪರತಂತ್ರನೆಂಬ ಜ್ಞಾನವಿರುವವನು, **ಇಮಾಁಲ್ಲೋಕಾನ್**-ಇವೆಲ್ಲಾ ಲೋಕಗಳನ್ನು, **ಹತ್ವಾಪಿ**- ಈಗ ನೀನು ಯುದ್ಧದಲ್ಲಿ ನಿನ್ನ ಅಧರ್ಮಿಗಳಾದ ಶತ್ರುಗಳನ್ನು ಕೊಲ್ಲಬೇಕಾಗಿ ಬಂದಿರುವ ಹಾಗೆ, ದುಷ್ಟಭಾವ ಹೊಂದಿದ್ದುದರಿಂದ ಕೊಲ್ಲಬೇಕಾಗಿ ಬಂದು ಕೊಂದರೂ ಕೂಡ, **ನನಿಬಧ್ಯತೇ**-ಬಂಧಕ್ಕೆ ಒಳಗಾಗುವನಲ್ಲವು. ಇದರಿಂದ ನೀನೂ ಈಗ ಯುದ್ಧಮಾಡಬೇಕಾಗಿ ಒದಗಿರುವ ಸಂದರ್ಭದಲ್ಲಿ ಇದು ಪರಮಾತ್ಮ ಸಂಕಲ್ಪಾನುಗುಣವಾಗಿ ಪ್ರಾಪ್ತವಾದುದು; ಇದು ಆತನ ಆಜ್ಞಾಕೈಂಕರ್ಯವು; ನಾನು ಪರತಂತ್ರನು, ಆತನೇ ಮಾಡಿಸುತ್ತಿದ್ದಾನೆಂದು ತಿಳಿದು ಕರ್ತೃತ್ವ ಮಮತಾ ಫಲ ತ್ಯಾಗಗಳೊಂದಿಗೆ ಮಾಡಿದುದಾದರೆ ನಿನಗೂ ಸಹ ಕರ್ಮಲೇಪವಿಲ್ಲವು ಎಂದು ಉಪದೇಶಿಸಿದಹಾಗಾಯಿತು. ಹಾಗೆ ಎಲ್ಲಾ ಲೋಕಗಳನ್ನು ಕೊಂದರೂ ಬಂಧವಿಲ್ಲವೆಂದು ಹೇಳಿದ ಉಪದೇಶವು ನ್ಯಾಯವೋ? ಎಂದರೆ ಸರ್ವೇಶ್ವರನೇ ತನ್ನ ಸಙ್ಕಲ್ಪಾನುಮತಿ ಪೂರ್ವಕವಾಗಿ, ಲೋಕದ ಜೀವಾತ್ಮರಿಗೆ ಅವರವರ ಕರ್ಮಾನುಭವಾನಂತರ ಅವರನ್ನು ಕೊಲ್ಲುವದಕ್ಕಾಗಿ ಯಮನನ್ನು ನಿರ್ಮಿಸಿರುತ್ತಾನೆ; ಯಮನು ಹೀಗೆ ಪರತಂತ್ರನಾಗಿ ಕೊಂದರೆ ಯಮನು ಆ ಪ್ರವೃತ್ತಿಯಿಂದ ಮುಂದೆ ಬಂಧಕ್ಕೆ ಒಳಗಾಗುವುದಿಲ್ಲವು. ಹಾಗೆಯೇ ರುದ್ರನೂ ಪ್ರಳಯವನ್ನುಂಟುಮಾಡುವದರಲ್ಲಿ ನಾಹಂಕೃತಭಾವವಿರುವದರಿಂದಲೂ, ಕರ್ಮದಲ್ಲಿ ಲಿಪ್ತನಾಗದ ಬುದ್ಧಿ ಇರುವದರಿಂದಲೂ ಆತನು ಬಂಧಕ್ಕೆ ಒಳಗಾಗುವದಿಲ್ಲವು. ಲೋಕದಲ್ಲೂ ಕೂಡ ರಾಜಾಜ್ಞೆಯಿಂದ ಶಿಕ್ಷಿಸುವ ಅಧಿಕಾರಿಗಳು ಪರತಂತ್ರರಾಗಿ ಮಾಡುವದರಿಂದ ಅವರಿಗೆ ಕರ್ಮಲೇಪವೂ ಇಲ್ಲವು; ಶಿಕ್ಷೆಯೂ ಇಲ್ಲವು; ರಾಜಸನ್ಮಾನಗಳಾದ ಮೆಡಲ್ ಮೊದಲಾದವುಗಳು ದೊರೆಯಬಹುದು. ಈ ಸಂದರ್ಭದಲ್ಲಿ ಸೀತೆಯು ತನಗೆ ತೊಂದರೆಯನ್ನು ಕೊಟ್ಟ ರಾಕ್ಷಸ ಸ್ತ್ರೀಯರನ್ನು ಕೊಲ್ಲಲು ಅನುಜ್ಞೆಯನ್ನು ಬೇಡಿದ ಆಂಜನೇಯನನ್ನು ಕುರಿತು ಹೇಳುವ ವಾಕ್ಯವು ಅನುಸಂಧೇಯವು. "**ರಾಜಸಂಶ್ರಯವಶ್ಯಾನಾಂ ಕುರ್ವನ್ತೀನಾಂ ಪರಾಜ್ಞಯಾ । ವಿಧೇಯಾನಾಂ ಚ ದಾಸೀನಾಂ ಕಃ ಕುಪ್ಯೇದ್ವಾನರೋತ್ತಮ**" ಎಂದು ಹೇಳಿರುವ ಹಾಗೆ ಹನನವೇ ಆಗಲಿ ಅಥವಾ ಇತರ ಹಿಂಸಾರೂಪ ಕರ್ಮವೇ ಆಗಲಿ ಇತಿ ಕರ್ತವ್ಯತೆಯಾಗಿ ಪರಾಧೀನತೆಯಿಂದ ಪ್ರಾಪ್ತವಾದರೆ ಬಂಧಕವಾಗುವದಿಲ್ಲವು. ಹಾಗಲ್ಲದೆ ವಿಧಿವಾಕ್ಯ

**ಭಾ.** **ಪರಮಪುರುಷ ಕರ್ತೃತ್ವಾನುಸಂಧಾನೇನ, ಯಸ್ಯಭಾವಃ-ಕರ್ತೃತ್ವ ವಿಷಯೋ ಮನೋವೃತ್ತಿ ವಿಶೇಷೋ ನಾಹಂಕೃತಃ ನಾಹಮಭಿಮಾನಕೃತಃ, ಅಹಂಕರೋಮೀತಿ ಜ್ಞಾನಂ ಯಸ್ಯ ನವಿದ್ಯತ ಇತ್ಯರ್ಥಃ, ಬುದ್ಧಿರ್ಯಸ್ಯ ನಲಿಪ್ಯತೇ-ಅಸ್ಮಿನ್ ಕರ್ಮಣಿ ಮಮ ಕರ್ತೃತ್ವಾಭಾವಾತ್ ಏತತ್ಫಲಂ ನ ಮಯಾ ಸಂಬಧ್ಯತೇ-ನ ಚ ಮದೀಯಂ ಕರ್ಮೇತಿ ಯಸ್ಯ ಬುದ್ಧಿರ್ಜಾಯತೇ ಇತ್ಯರ್ಥಃ; ಸ ಇಮಾನ್ ಲೋಕಾನ್ ಯುದ್ಧೇ ಹತ್ವಾಪಿ ತಾನ್ನ ನಿಹನ್ತಿ; ನಕೇವಲಂ ಭೀಷ್ಮಾದೀ**

---

ಮಾದ ಯಾರನ್ನೂ ಕೊಲ್ಲಬೇಡವೆಂಬ ವಾಕ್ಯಕ್ಕೆ ವಿರುದ್ಧವಾಗಿ ಹನನ ಹಿಂಸಾದಿಗಳಾದರೆ ನಿಂದ್ಯವೇ ಸರಿ. ಅವುಗಳು ಬಂಧಕಗಳೇ; ಸಂದೇಹವಿಲ್ಲವು.

**ಭಾಷ್ಯಾರ್ಥವು**—ಹೀಗೆ ಪ್ರತಿಯೊಂದು ಜೀವಾತ್ಮನ ಪ್ರವೃತ್ತಿಗೂ ಐದು ಹೇತುಗಳಿರುವಾಗ, ಅವುಗಳ ಜ್ಞಾನವಿಲ್ಲದೆ, ತಾನೇ ಸ್ವತಂತ್ರ ಕರ್ತೃವೆಂದು ಭಾವಿಸುವವನು ಜ್ಞಾನಶೂನ್ಯನಾದುದರಿಂದ **ದುರ್ಮತಿ** ಎಂದು ಹೇಳಲ್ಪಟ್ಟನು; ಹಾಗಾದರೆ **ಸುಮತಿಯು** ಯಾರು ಎಂಬುದನ್ನು ಈ ಶ್ಲೋಕದಲ್ಲಿ ಹೇಳುವದರ ಮೂಲಕ ಅಂತಹ ಅನುಸಂಧಾನದಿಂದ ಪ್ರಾಪ್ತವಾಗುವ ಪ್ರಯೋಜನವನ್ನೂ ತಿಳಿಸುತ್ತಾರೆ.—ತಾನು ಮಾಡಿದೆನು ಎಂಬ ಅಹಂಭಾವವಿಲ್ಲದೆ, ಪರಮಾತ್ಮನೇ ಎಲ್ಲವನ್ನೂ ನಡೆಸುವನು ಎಂಬ ಅಭಿಪ್ರಾಯವಿದ್ದರೆ, ಕರ್ಮದಿಂದ ಬಂಧನವಿಲ್ಲವೆಂದು ಹೇಳುತ್ತಾರೆ.—ಆದರೆ ಆ ಹನನಕರ್ಮವು ಧರ್ಮಪ್ರತಿಷ್ಠಿತವಾಗಿರಬೇಕು. ಹಾಗೆ ಧರ್ಮಪ್ರತಿಷ್ಠಿತವಲ್ಲದೆ ಅಧರ್ಮವಾಗಿದ್ದರೆ **ನಿಬಧ್ಯತೇ** ಎಂದು ಭಾವಿಸತಕ್ಕದ್ದೆಂಬ ಭಾವವು. ಇದಕ್ಕೆ ನಿದರ್ಶನಗಳು ಈ ಲೋಕದಲ್ಲೆಲ್ಲಾ ಪ್ರಕಟಿಸಲ್ಪಟ್ಟಿವೆ-ಜರ್ಮನಿ, ಇಟಲಿ, ಜಪಾನ್ ಮೂರು ದೇಶದ ನಿರ್ವಾಹಕರೂ ಇತರ ರಾಜ್ಯಾಪಹಾರದ ಆಶೆಯಿಂದ ಅಧರ್ಮಯುದ್ಧವಾದುದರಿಂದ ನಾಶವಾದರು. ಅಮೆರಿಕ, ಇಂಗ್ಲೆಂಡು, ಆಸ್ಟ್ರೇಲಿಯಾ, ಚೀನಾ ರಾಜ್ಯಾಧಿಕಾರಿಗಳು ನಡೆಸಿದ ಯುದ್ಧವು ಶತ್ರುಗಳ ದುರಾಶೆಯನ್ನು ತಡೆಯಲು ಯತ್ನಿಸಿದ ಯುದ್ಧವಾದುದರಿಂದ ಜಯಪ್ರದರಾದರು. ಹೀಗೆ ಸ್ವಾಮಿಸಂಕಲ್ಪವು ದುಷ್ಟರನ್ನು ಶಿಕ್ಷಿಸುವುದು, ಶಿಷ್ಟರನ್ನು ಅನುಗ್ರಹಿಸುವುದು. ಆದುದರಿಂದ ಅದಕ್ಕನುಸಾರವಾಗಿ ಸ್ವಾಮಿಯು ಲೋಕದಲ್ಲಿ ಪ್ರವೃತ್ತಿಯನ್ನುಂಟುಮಾಡುವನೆಂಬುದನ್ನು ಚನ್ನಾಗಿ ಗ್ರಹಿಸತಕ್ಕದ್ದಾಗಿರುತ್ತದೆ. **ಪರಮಪುರುಷ ಕರ್ತೃತ್ವಾನುಸಂಧಾನೇನ-ದೈವಂಚೈವಾತ್ರಪಂಚಮಂ** ಎಂಬಲ್ಲಿ ತೋರಿಬರುವ ಪರಮಪುರುಷನಿಗೇನೇ ಸರ್ವಕರ್ತೃತ್ವವೂ ಇರುವದು ಎಂಬ ಅನುಸಂಧಾನದಿಂದ, **ಯಸ್ಯಭಾವಃ**-ಯಾರಿಗೆ ಅಭಿಪ್ರಾಯವೋ, ಇದನ್ನೇ ಉಪಪಾದಿಸಿ ಹೇಳುತ್ತಾರೆ.—**ಕರ್ತೃತ್ವವಿಷಯ**ವಾದ. **ಮನೋವೃತ್ತಿವಿಶೇಷಃ**-ಮನಸ್ಸಿನ ಪ್ರವೃತ್ತಿರೂಪ ವಿಶೇಷವು, ಇಲ್ಲಿ ಭಾವಶಬ್ದಕ್ಕೆ ಮನೋವೃತ್ತಿ ವಿಶೇಷವೆಂದು ಅರ್ಥಮಾಡಿರುತ್ತಾರೆ; **ನಾಹಂಕೃತಃ** ಎಂದರೆ **ನಾಹಮಭಿಮಾನಕೃತಃ**-ನಾನು ಮಾಡಿದೆನೆಂಬ ಅಭಿಮಾನದಿಂದ ಮಾಡಲ್ಪಡಲಿಲ್ಲವೋ, ಇದರ ಅರ್ಥವನ್ನು ವ್ಯಕ್ತಪಡಿಸಿ ಹೇಳುತ್ತಾರೆ-**ಅಹಂಕರೋಮೀತಿಜ್ಞಾನಂ ಯಸ್ಯ ನವಿದ್ಯತೇತ್ಯರ್ಥವು**-ನಾನೇ ಮಾಡುತ್ತೇನೆಂಬ ಜ್ಞಾನವು ಯಾವನಿಗೆ ಇಲ್ಲವೋ ಎಂಬ ತಾತ್ಪರ್ಯವು, **ಬುದ್ಧಿರ್ಯಸ್ಯನಲಿಪ್ಯತೇ** ಎಂದರೆ, **ಅಸ್ಮಿನ್ ಕರ್ಮಣಿ**-ಈ ಕರ್ಮದಲ್ಲಿ **ಮಮಕರ್ತೃತ್ವಾಭಾವಾತ್**-ನನಗೆ ಕರ್ತೃತ್ವವು ಇರುವದಿಲ್ಲದುದರಿಂದ, **ಏತತ್ಫಲಂ**-ಈ ಫಲವೂ, **ನಮಯಾ ಸಂಬಧ್ಯತೇ**-ನನಗೆ ಸಂಬಂಧಿಸಿದುದೂ ಅಲ್ಲವು, ಮತ್ತು **ನಚಮದೀಯಂ ಕರ್ಮೇತಿ**-ಈ ಕರ್ಮವು ನನ್ನ ಸಂಬಂಧವಾದುದು ಅಲ್ಲವೆಂದು, **ಯಸ್ಯ ಬುದ್ಧಿರ್ಜಾಯತೇ**-ಯಾರಿಗೆ ವಿವೇಕ ಜ್ಞಾನ ಉಂಟಾಗುತ್ತದೋ, **ಸ ಇಮಾನ್ ಲೋಕಾನ್ ಯುದ್ಧೇ ಹತ್ವಾಪಿ**-ಅಂತಹ ಮೋಕ್ಷಾರ್ಥಿಯು ಈ ಎಲ್ಲಾ ಲೋಕಗಳನ್ನೂ ಅಥವಾ ಎಲ್ಲಾ ಜನರನ್ನೂ ಕ್ಷತ್ರಿಯನಿಗೆ ದುಷ್ಟರನ್ನು ಹನನ ಮಾಡುವ ಧರ್ಮವಾದ

**ನಿತ್ಯರ್ಥಃ; ತತಸ್ತೇನ ಯುದ್ಧಾಖ್ಯೇನ ಕರ್ಮಣಾ ನನಿಬಧ್ಯತೇ-ತತ್ಫಲಂ ನಾನುಭವತೀತ್ಯರ್ಥಃ ॥ ೧೭ ॥**

ಯುದ್ಧದಲ್ಲಿ ಕೊಂದರೂ ಸಹ, **ತಾನ್ನಹನ್ತಿ**-ಅವರುಗಳನ್ನು ಆತನು ಕೊಲ್ಲುವದಿಲ್ಲವು; **ನಕೇವಲಂ ಭೀಷ್ಮಾದೀ ನಿತ್ಯರ್ಥಃ**-ಕೇವಲ ಭೀಷ್ಮ ದ್ರೋಣಾದಿಗಳನ್ನು ಮಾತ್ರವೇ ಕೊಲ್ಲದೆ ಲೋಕದ ಎಲ್ಲಾ ಜನರನ್ನು ಕೊಲ್ಲಬೇಕಾಗಿ ಯುದ್ಧದಲ್ಲಿ ಪ್ರಾಪ್ತವಾದರೂ, ಆತನಿಗೆ ಕೊಂದ ಪಾಪವು ಉಂಟಾಗುವದಿಲ್ಲವೆಂಬ ಭಾವವು. ಇದೇ ಮುಂದೆ ಹೇಳಲ್ಪಡುತ್ತದೆ—**ತತಃ**-ಆ ಕಾರಣದಿಂದ **ಯುದ್ಧಾಖ್ಯೇನಕರ್ಮಣಾ**-ಯುದ್ಧವೆಂಬ ಕರ್ಮದಿಂದ, **ನನಿಬಧ್ಯತೇ** ಎಂದರೆ **ತತ್ಫಲಂ ನಾನುಭವತೀತ್ಯರ್ಥಃ**-ಅದರ ಫಲವನ್ನು ಅನುಭವಿಸುವದಿಲ್ಲವೆಂಬುದು ಅಭಿಪ್ರಾಯವು ಇಲ್ಲಿ **ನಾಹಂ ಕೃತೋ ಭಾವಃ** ಎಂಬಲ್ಲಿ ಭಾವಶಬ್ದಕ್ಕೆ ಅಭಿಪ್ರಾಯವೆಂಬರ್ಥವು; ಅದು ಮನಸ್ಸಿನ ಮೂಲಕವಾಗಿಯೇ ಉಂಟಾಗತಕ್ಕ ಜ್ಞಾನವೆಂದು ತಿಳಿಸುವದಕ್ಕಾಗಿ **ಮನೋವೃತ್ತಿ ವಿಶೇಷಃ,** ಇದರಿಂದ ಮನಸ್ಸಿನ ಮೂಲಕವೇ ನಮಗೆ ಜ್ಞಾನ ಉಂಟಾಗುವುದೂ, ಮತ್ತು ಮನಸ್ಸಿನ ಮೂಲಕವಾಗಿಯೇ ಪ್ರವೃತ್ತಿಗಳೂ ಸಹ ಎಂಬುದು ಬೋಧಿತವು. **ನಾಹಂಕೃತಃ** ಎಂಬಲ್ಲಿ **ಅಹಂಕರೋಮಿ** ಎಂಬ ಜ್ಞಾನವಿಲ್ಲದವನು ಎಂದರ್ಥಮಾಡಲ್ಪಟ್ಟಿತಲ್ಲಾ, ಆತ್ಮಾವನ್ನು ತಿಳಿಯುವದೇ ಅಹಂವೆಂದಾಗಿರುವಾಗ **ನಾಹಂಕೃತಭಾವಃ** ಎಂಬುದಕ್ಕೆ ಮೇಲಿನ ಅರ್ಥವು ಹೇಗೆ ಸಾಧುವು? ಎಂದರೆ, ಹಿಂದಿನ ಶ್ಲೋಕದಲ್ಲಿ ಹೇಳಿದ ಹಾಗೆ ನಾನೇ ಮಾಡುತ್ತೇನೆ ಎಂಬ ಜ್ಞಾನವಿಲ್ಲದವನು ಎಂದು ಇಟ್ಟುಕೊಂಡರೆ ಆಕ್ಷೇಪಕ್ಕೆ ಸಮಾಧಾನವು ದೊರೆಯುತ್ತದೆ; ಅಥವಾ ನಾನೇ ಮಾಡಿದೆನೆಂಬ ಅಭಿಮಾನವಿಲ್ಲದವನು ಎಂದಾಗಲಿ ಹೇಳಬಹುದು. ಯಾವಾಗ ನಾನೇಮಾಡಿದೆನೆಂಬ ಅಭಿಮಾನವಿಲ್ಲವೋ ಆಗ ಫಲವೂ ತನ್ನದಲ್ಲವೆಂಬ ಭಾವನೆಯು ಸಿದ್ಧವು; ಅದನ್ನೇ ಮುಂದೆ **ಬುದ್ಧಿರ್ಯಸ್ಯ ನಲಿಪ್ಯತೇ** ಎಂಬಲ್ಲಿ ಹೇಳಲ್ಪಟ್ಟಿರುತ್ತದೆಂದು ವ್ಯಾಖ್ಯಾನಮಾಡಿರುತ್ತಾರೆ. ಎಲ್ಲಾ ಲೋಕವನ್ನು ಕೊಂದರೂ **ನ ನಿಬಧ್ಯತೇ** ಎಂದು ಹೇಳಲ್ಪಟ್ಟಿತಲ್ಲಾ, ಇದು ಸರಿಯಾದ ಉಪದೇಶವು ಹೇಗೆ? ಕಠಶ್ರುತಿಯು, (1) **"ನಾವಿರತೋದುಶ್ಚರಿತಾತ್ ನಾಶಾನ್ತೋ ನಾ ಸಮಾಹಿತಃ। ನಾಶಾನ್ತ ಮಾನಸೋವಾಪಿ ಪ್ರಜ್ಞಾನೇನೈನ ಮಾಪ್ನುಯಾತ್"** ಎಂದರೆ "ಪರದಾರ ಪರದ್ರವ್ಯಹರಣ ಪರಹನನ ಮೊದಲಾದ ದುಷ್ಕೃತಗಳಿಂದ ನಿವೃತ್ತನಾಗದವನೂ, ಅನುಪಶಾನ್ತವಾದ ಕಾಮಕ್ರೋಧಗಳ ವೇಗವುಳ್ಳವನೂ, ನಾನಾವಿಧ ವ್ಯಾಪಾರಗಳಲ್ಲಿ ವ್ಯಾಪ್ತನಾದುದರಿಂದ ಅವಹಿತ ಚಿತ್ತನಲ್ಲದವನೂ, ನಿಗ್ರಹಿಸದ ಮನವುಳ್ಳವನೂ, ಪ್ರಾಜ್ಞತೆಯನ್ನು ಪಡೆಯುವದರ ಮೂಲಕ ಈ ಪರಮಾತ್ಮನನ್ನು ಪ್ರಾಪ್ಯವನ್ನಾಗಿ ಹೊಂದಲಾರನು" ಎಂಬಲ್ಲಿ ಪರಮಾತ್ಮಪ್ರಾಪ್ತಿಗೆ ಹೇತುವಾದ ಉಪಾಸನಕ್ಕೆ ಅಙ್ಗವಾಗಿ ಹನನವೇ ಮೊದಲಾದ ಪರಹಿಂಸಾ ಮೊದಲಾದ ದುಶ್ಚರಿತಗಳು ಕೂಡದೆಂದು ಉಪದೇಶಿಸಿರುವಾಗ ಇಲ್ಲಿನ ಈ ಉಪದೇಶವು ಹೇಗೆ ಸಾಧುವು? ಎಂದರೆ, ಅದಕ್ಕಾಗಿಯೇ **ಯುದ್ಧೇಹತ್ವಾಪಿ**-ಕ್ಷತ್ರಿಯನಿಗೆ ಸ್ವಧರ್ಮವಾಗಿರುವ ದುಷ್ಟರನ್ನು ಹನನಮಾಡಬೇಕಾಗಿ ಒದಗಿರುವ ಧರ್ಮಯುದ್ಧದಲ್ಲಿ ಕೊಂದರೂ ಎಂಬ ವ್ಯಾಖ್ಯಾನವು. **ಹತ್ವಾಪಿನಹನ್ತಿ** ಎಂದು ಹೇಳಿದುದರ ಅಭಿಪ್ರಾಯವೇನೆಂದರೆ ದುಷ್ಟರನ್ನು ಯುದ್ಧದಲ್ಲಿ ಕೊಲ್ಲುವುದು ದೋಷವಲ್ಲವೆಂಬ ಅನುಸಂಧಾನವು ಕ್ಷತ್ರಿಯನಿಗೆ ಯೋಗ್ಯವಾದುದು. ಅದರಿಂದ ಪರಮಪುರುಷನು ಸುಪ್ರೀತನೇ ಆಗುವನು. ಹೇಗೆಂದರೆ ತಾಟಕಿಯ ಸಂಹಾರದಿಂದ, ಋಷಿಯಾಗಿದ್ದರೂ, ಹಿಂಸಾಕಾರ್ಯದಲ್ಲಿ ಪ್ರವರ್ತಿಸಿದ ವಿಶ್ವಾಮಿತ್ರರು ಹೇಗೆ ಆನಂದಿಸಿದರೋ ಹಾಗೆ ಎಂಬ ಭಾವವು. ಆಹನನ ಕಾರ್ಯದಲ್ಲಿ ಪರಮಾತ್ಮನಾದ ಶ್ರೀರಾಮನೇ ದುಷ್ಟಸ್ತ್ರೀಯನ್ನೂ ಕೂಡ ಕೊಲ್ಲಬಹುದೆಂದೂ ಅದರಿಂದ ಪ್ರತ್ಯವಾಯವೇನೂ ಇಲ್ಲವೆಂದು ತೋರಿಸಿರುತ್ತಾನೆ. ಹಾಗೆಯೇ ಅನೇಕ ರಾಕ್ಷಸರುಗಳನ್ನೂ ಶ್ರೀರಾಮ

---

(೧) ಕಠ. ೧. ೨. ೨೪.

ಕೃಷ್ಣಾದ್ಯವತಾರಗಳಲ್ಲಿ ತಾನೇ ಕೊಂದು ಪ್ರತ್ಯವಾಯವಿಲ್ಲವೆಂಬುದನ್ನು ಪ್ರದರ್ಶಿಸಿರುತ್ತಾರೆ. ಹೀಗೆ ಅರ್ಥಮಾಡದೆ, ಕೊಂದರೂ ಕೊಲ್ಲುವದಿಲ್ಲವೆಂಬುದನ್ನು ಸಾರ್ವತ್ರಿಕವಾಗಿ ಉಪದೇಶಿಸಲಿಲ್ಲವು. ಹನನ ಧರ್ಮವು ಎಲ್ಲಿ ದೋಷವಲ್ಲವೋ ಅಲ್ಲಿಗೆ ಮಾತ್ರವೇ ಅನ್ವಯಿಸತಕ್ಕದ್ದು. ಹಾಗಲ್ಲದೆ ಸಾರ್ವತ್ರಿಕವಾಗಿ ಅನ್ವಯಿಸಿಬಿಟ್ಟರೆ ಅಧರ್ಮಪ್ರವೃತ್ತಿಯನ್ನು ಮಾಡು ; ಅದು ನಿನಗೆ ಬಂಧಕವಲ್ಲವು ಎಂದು ದುಶ್ಚರಿತವನ್ನೇ ಉಪದೇಶಿಸಿದಂತಾಗುವುದು ; ಆತ್ಮನಿಗೆ ಕರ್ತೃತ್ವವೇ ಇಲ್ಲವು, ಉಪಾಧಿಯಿಂದ ಯುಕ್ತನಾಗಿ ತನಗೆ ಕರ್ತೃತ್ವ ಉಂಟೆಂದು ಶುಕ್ತಿಯಲ್ಲಿ ರಜತಜ್ಞಾನದ ಹಾಗೆ ಭ್ರಮಿಸುವನೆಂದು ಅರ್ಥಮಾಡಿದರೆ, **ಯಸ್ಯ ನಾಹಂಕೃತೋ ಭಾವಃ** ಎಂಬಲ್ಲಿ ಐದು ಜನರು ಸೇರಿ ಒಂದು ತೇರನ್ನು ಎಳೆದರೆ, ನಾನೇ ಎಳೆದದ್ದು ಇತರರಲ್ಲವೆಂಬ ಭಾವವು ಅಜ್ಞಾನದ ವಿಜೃಂಭಣೆಯು ; ತಾನು ಇತರರ ಸಹಾಯವಿಲ್ಲದೆ ಇದ್ದರೆ ಎಂದಿಗೂ ಎಳೆಯುತ್ತಿರಲಿಲ್ಲವು. ಹಾಗೆಯೇ ಇತರ ಮುಖ್ಯ ಸಹಾಯವಾದ ಪರಮಾತ್ಮ ಸಹಾಯದಿಂದಲೇಯಾದುದರಿಂದ ತಾನೇ ಕರ್ತಾ ಅಲ್ಲವು ಎಂಬ ಅನುಸಂಧಾನವು ಜ್ಞಾನಿಯ ವಿಷಯದಲ್ಲಿ ಸಮಂಜಸವಾಗುತ್ತದೆ ; ಹಾಗಲ್ಲದೆ ಆತ್ಮನಿಗೆ ಕರ್ತೃತ್ವವೇ ಇಲ್ಲವು. ಭ್ರಮದಿಂದ ಕರ್ತೃತ್ವಾರೋಪಣೆಯು, ಎಂದರೆ ಜ್ಞಾನಿಯ ಮತ್ತು ಅಜ್ಞಾನಿಯ ಪ್ರವೃತ್ತಿಗಳೆರಡಕ್ಕೂ ಇದು ಸರಿಹೋಗುವದರಿಂದ ಅಧರ್ಮಪ್ರವರ್ತನೆಯೂ ಸಹ ಬಂಧಿಸುವದಿಲ್ಲವೆಂಬರ್ಥವು ಉಂಟಾಗುವದರಿಂದ ಸಮಂಜಸವಾಗಿ ತೋರುವದಿಲ್ಲವು ; ಏಕೆಂದರೆ ಪ್ರವೃತ್ತಿಯೂ ಮಿಥ್ಯಾವಾಗಿ ಫಲವೂ ಮಿಥ್ಯಾವಾಗುತ್ತದೆ ಎಂಬ ಕುವಾದವನ್ನು ತರಬೇಕಾಗುತ್ತದೆ. **ನಚೇಸಲಂ ಭೀಷ್ಮಾದೀನ್** ಎಂಬ ವ್ಯಾಖ್ಯಾನವೇತಕ್ಕೆ ಎಂದು ಆಕ್ಷೇಪಿಸಿದರೆ, ಧರ್ಮಯುದ್ಧದಲ್ಲಿ ದುಷ್ಟರನ್ನಲ್ಲವೇ ಕೊಲ್ಲತಕ್ಕದ್ದು ; ಭೀಷ್ಮದ್ರೋಣರು ಹೇಗೆ ಹನನಯೋಗ್ಯರೆಂದು ಕೇಳಿದರೆ, ಇವರು ಜ್ಞಾನಿಗಳಾಗಿದ್ದರೂ, ಮಹಾಪಾಪಿಯಾಗಿ, ಆತತಾಯಿಯಾಗಿರುವ ದುರ್ಯೋಧನನನ್ನು ನಿರೋಧಿಸದೆ, ಅಂತಹ ದುಷ್ಟನ ಅನ್ನವನ್ನು ಪರಿಗ್ರಹಿಸಿ, ಆತನ ದುಷ್ಟಪ್ರವೃತ್ತಿಗೆ ಸಹಾಯಕರಾಗಿ, ಧರ್ಮಪ್ರಶಂಸೆಯಲ್ಲಿ ಮಹಾಸಂಕಟಕ್ಕೆ ಸಿಕ್ಕಿದ ದ್ರೌಪದಿಯು ಇವರುಗಳನ್ನು ಕುರಿತು ಧರ್ಮಪ್ರಶ್ನೆ ಮಾಡಿದರೆ, ಧರ್ಮವನ್ನು ತಿಳಿದಿದ್ದರೂ ನಿರ್ಣಯವಾಗಿ ಹೇಳದೆ ಮರೆಮಾಚಿಸಿದುದರಿಂದ, ಅಧರ್ಮಿಗಳ ಗೋಷ್ಠಿಗೇನೇ ಸೇರಿದವರಾದುದರಿಂದಲೂ, ಅದೂ ಅಲ್ಲದೆ ಬ್ರಾಹ್ಮಣಯೋನಿಯಲ್ಲಿ ಜನಿಸಿ ಬ್ರಾಹ್ಮಣವೃತ್ತಿಯಲ್ಲಿರದೆ ಕ್ಷತ್ರಿಯ ವೃತ್ತಿಯನ್ನು ಅವಲಂಬಿಸಿದುದರಿಂದಲೂ ಹನನಯೋಗ್ಯರೇ. ಹಾಗೆಯೇ ಲೋಕವೆಲ್ಲಾ ಅಧರ್ಮದಿಂದ ಪ್ರೇರಿತವಾದರೆ, ಅವರೆಲ್ಲರನ್ನೂ ಕ್ಷತ್ರಿಯನು ಕೊಲ್ಲುವದು ಬಂಧಕವಾಗುವುದಿಲ್ಲವೆಂದು ಸಮಂಜಸವಾಗಿ ಉಪದೇಶಿಸಿರುತ್ತಾರೆ. ಈ ಅಭಿಪ್ರಾಯವು ಅರ್ಜುನನಿಗೆ ಪ್ರಾರಂಭದಲ್ಲಿ ತೋಚದೆ **ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ । ಇಷುಭಿಃ ಪ್ರತಿಯೋತ್ಸ್ಯಾಮಿ** " ಎಂದು ಪ್ರಶ್ನಿಸಿರುತ್ತಾನೆ. ಅದಕ್ಕೆ ಈ ಶ್ಲೋಕದಲ್ಲಿ ಆತನಿಗೆ ಸಮಾಧಾನವು ದೊರೆಯಿತು ಎಂದು ಭಾವಿಸತಕ್ಕದು. ಯಾವಾಗ ಇವರೇ ಹನನಾರ್ಹರೋ ಕೌರವರ ಗುಂಪೆಲ್ಲಾ ಹನನಯೋಗ್ಯರೆಂಬುದು ಸ್ವತಸ್ಸಿದ್ಧವು. ಆದುದರಿಂದ **ಇಮಾಁಲ್ಲೋಕಾನ್** ಎಂಬ ಪ್ರಯೋಗವು ಶ್ರೀರಾಮಾವತಾರವು ಏತಕ್ಕೆ ? ಎಂದರೆ ಲೋಕವನ್ನೆಲ್ಲಾ ಅರಾಕ್ಷಸವಾಗಿ ಮಾಡಬೇಕೆಂಬ ಉದ್ದೇಶದಿಂದಲೇ ಎಂದು ಸೀತೆಯು ವ್ಯಕ್ತಪಡಿಸಿರುತ್ತಾಳೆ. ಹನನದಲ್ಲಿ ಯಾರಿಗೆ ಅಧಿಕಾರವೋ ಅವರಿಗೆ ಮಾತ್ರ ಇದು ಅನ್ವಯಿಸುತ್ತದೆ. ಅರ್ಜುನನು ಕ್ಷತ್ರಿಯನಾದುದರಿಂದ ಆತನಿಗೆ ಅನ್ವಯಿಸುತ್ತದೆ. ಬ್ರಾಹ್ಮಣರಿಗೆ ಅಧಿಕಾರವಿಲ್ಲದುದರಿಂದ ಅನ್ವಯಿಸುವದಿಲ್ಲವು. ಆಗ ಈ ಕ್ಷತ್ರಿಯ ಕರ್ತವ್ಯತಾರೂಪ ಹನನವನ್ನು ಹೇಳಿದುದು, ಬ್ರಾಹ್ಮಣಕರ್ತವ್ಯವಾದ ಯಜ್ಞದಾನ ತಪಸ್ಸೇ ಮೊದಲಾದವುಗಳನ್ನು ಉಪಲಕ್ಷಣವಾಗಿಟ್ಟುಕೊಂಡು, ಅವುಗಳೂ ಬಂಧಕವಾಗುವುದಿಲ್ಲವೆಂದು ಭಾವಿಸಬಹುದು. ಲೋಕವನ್ನೆಲ್ಲಾ ಜೀವರ ಕಾಲಾವಧಿಯಾದನಂತರ ಶ್ರೀಶಾಜ್ಞಯಾ ಹನನಮಾಡುತ್ತಿರುವ ಯಮನೂ; ಸರ್ವೇಶ್ವರ ನಿಯಮನಾನುಸಾರ ನಡೆಸುವದರಿಂದ ಅದು ಬಂಧಕವಲ್ಲವು.

**ಅಧರ್ಮ**ವು ಲೋಕದಲ್ಲಿ ವಿಶೇಷವಾಗಿ ಹೆಚ್ಚುವದರಿಂದ, ಕಲಿಯುಗಾಂತ್ಯದಲ್ಲೂ **ಪುನಃ** ಈ ಲೀಲಾ ವಿಭೂತಿಯಲ್ಲಿ ಅಧರ್ಮಪ್ರವರ್ತನೆಯನ್ನು ತಪ್ಪಿಸುವದಕ್ಕಾಗಿ ಪ್ರಳಯವನ್ನು ಉಂಟುಮಾಡಲು ಸಙ್ಕಲ್ಪಿಸಿರುವವನು ಸರ್ವೇಶ್ವರನು ಎಂದು ಶಾಸ್ತ್ರವು ಬೋಧಿಸುತ್ತದೆ. ಹೀಗೆ ಧರ್ಮಪ್ರವೃತ್ತಿಗೆ ನ್ಯೂನತೆ ಬಾರದ ಹಾಗೆ ಅರ್ಥಮಾಡಬೇಕಾಗಿರುತ್ತದೆ. ಕೆಲವರು ಅರ್ಥಮಾಡಿರುವುದು ಧರ್ಮ ಹಾನಿಯುಳ್ಳ ಪ್ರವೃತ್ತಿಗೆ ತಡೆಯೇ ಇಲ್ಲದ ಹಾಗೆ ವ್ಯಾಖ್ಯಾನ ಮಾಡಿರುತ್ತಾರೆ. ಆತ್ಮಾವಿಗೆ ಹನನಕರ್ತೃತ್ವವೇ ಇಲ್ಲವು, ಅಧರ್ಮಫಲವುಳ್ಳ ಆ ಹನನದಿಂದ ಆತ್ಮನು ಸಂಬಂಧಿಸುವದೇ ಇಲ್ಲವು ಎಂಬರ್ಥವನ್ನು ಹೇಳಿದರೆ, **ಯಸ್ಯನಾಹಂ ಕೃತೋಭಾವಃ** ಎಂದು ವಿಶೇಷಿಸಿ ಹೇಳುವದು ಏತಕ್ಕೆ ಎಂದು ಕೇಳಬೇಕಾಗುತ್ತದೆ. ಹಾಗಾದರೆ ಅಹಂಕೃತಭಾವವುಳ್ಳವನೆಂದು ಹಿಂದೆ ಹೇಳಿದುದಕ್ಕೂ ಇದಕ್ಕೂ ವೈಲಕ್ಷಣ್ಯವನ್ನು ಹೇಳಲು ಹೊರಟು ಪ್ರಕರಣಕ್ಕೆ ಅರ್ಥವು ಸರಿಹೋಗುತ್ತದೆಯೇ? ಆ ದುರ್ಮತಿಯ ಪ್ರವೃತ್ತಿವಿಷಯದಲ್ಲೂ ಬಂಧಕವಲ್ಲವೆಂದು ಹೇಳಬೇಕಾಗುವದಿಲ್ಲವೇ? ಕರ್ಮಲೇಪವೂ ಆಗಲೂ ಮಿಥ್ಯೆ ಎಂದೇ ಹೇಳಬೇಕಾಗುತ್ತದೆ. ಏಕೆಂದರೆ ಆಗ ಕೊಲ್ಲುವದೂ ಮಿಥ್ಯಾ, ಬಂಧವೂ ಮಿಥ್ಯಾ ಎಂದಲ್ಲವೇ ಅರ್ಥವನ್ನು ಹೇಳಬೇಕಾಗುತ್ತದೆ? ಇಂತಹ ಅಭಿಪ್ರಾಯದಲ್ಲಿ ಸಮಾಧಾನವಿಲ್ಲದೆ ಯತಿವರ್ಯರು ತಮ್ಮ ತಾತ್ಪರ್ಯವನ್ನು **ತತಸ್ತೇನ ಯುದ್ಧಾಖ್ಯೇನ ಕರ್ಮಣಾನನಿಬಧ್ಯತೇ** ಎಂದಾರಂಭಿಸಿ ವ್ಯಕ್ತಪಡಿಸಿರುತ್ತಾರೆ. ಇಲ್ಲಿ ಯುದ್ಧವು, ಕ್ಷತ್ರಿಯನಿಗೆ ಅಧರ್ಮಿಗಳನ್ನು ಹನನಮಾಡುವ ಕೃತ್ಯವಾಗಿ ಹೇಳಲ್ಪಟ್ಟಿತೇ ವಿನಾ, ಹೆಚ್ಚು ರಾಜ್ಯ ಧನಪ್ರಾಪ್ತಿಗಾಗಿ ದುರಾಶೆಯಿಂದ ಮಾಡುವ ಯುದ್ಧವು ಬೋಧಿತವಲ್ಲವು; ಅವೂ ಕೂಡ ಅಧರ್ಮಯುದ್ಧವು. ಈಗ ಶ್ರೀ ಯತಿವರ್ಯರು ಮಾಡಿರುವ ಅರ್ಥವೇ ಸಮಂಜಸವೆಂಬುದನ್ನು ಮುಂದೆ ಬರುವುದಾದ "**ಅನುಬಂಧಂ ಕ್ಷಯಂ ಹಿಂಸಾ ಮನವೇಕ್ಷ್ಯಚ ಪೌರುಷಂ । ಮೋಹಾದಾ ರಭ್ಯತೇ ಕರ್ಮ ಯತ್ತತ್ತಾಮ ಸ ಮುಚ್ಯತೇ**" ಎಂಬ ಶ್ಲೋಕದಲ್ಲಿ ಗ್ರಹಿಸಬಹುದು; ಹನನವು ಹಿಂಸಾರೂಪವೇ; ಅದರಲ್ಲಿ ಸಂದೇಹವಿಲ್ಲವಷ್ಟೇ. ಧಾತ್ವರ್ಥವಾದ "ಹನಹಿಂಸಾಗತ್ಯೋಃ" ಎಂಬುದರಿಂದಲೇ ವ್ಯಕ್ತವು, ಆದುದರಿಂದ ಇಂತಹ ಕರ್ಮವು ಹನನವಾಗದೆಯೂ, ಬಂಧಕವಾಗದೆಯೂ ಇರಲು, ಈ ಶ್ಲೋಕದಲ್ಲಿ ಹೇಳಿರುವ ಹೇತುಗಳು ಯಾವುವು ಎಂದರೆ, ಶಾಸ್ತ್ರವಿಹಿತವಾದ ಕರ್ಮಪ್ರವೃತ್ತಿಯಲ್ಲಿ **ನಾಹಂಕೃತಭಾವ** ಮತ್ತು **ಯಸ್ಯಬುದ್ಧಿರ್ನಲಿಪ್ಯತೇ** ಎಂಬಲ್ಲಿ ಹೇಳಿದ ಅಭಿಪ್ರಾಯವೂ ಇರಬೇಕು ಎಂದರೆ ನಾನು ಮಾಡಿದೆ ಎಂಬ ಕರ್ತೃತ್ವವೂ ಮಮತೆಯೂ ಇಲ್ಲದಿರಬೇಕು, ಮತ್ತು ಫಲಾಭಿಸಂಧಿಯೂ ಇಲ್ಲದೆ ಪ್ರವೃತ್ತಿಯಿರಬೇಕೆಂದು ಹೇಳಲ್ಪಟ್ಟಿತು. ಈ ಅಭಿಪ್ರಾಯವೇ ಹಿಂದೆ "**ಮಾಕರ್ಮ ಫಲಹೇತುರ್ಭೂಃ**" (      ) ಎಂಬಲ್ಲೂ "**ಮಯಿಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ । ನಿರಾಶೀ ರ್ನಿರ್ಮಮೋಭೂತ್ವಾ ಯುದ್ಧ್ಯಸ್ವ ವಿಗತಜ್ವರಃ**" ಎಂಬಲ್ಲಿ ಹೇಳಿರುವ ಅಭಿಪ್ರಾಯವೇ; ಮತ್ತು ಇದೇ ಅಧ್ಯಾಯದಲ್ಲೇ (೧೮-೬) "**ಏತಾನ್ಯಪಿತು ಕರ್ಮಾಣಿ ಸಙ್ಗಂತ್ಯಕ್ತ್ವಾ ಫಲಾನಿಚ । ಕರ್ತವ್ಯಾನೀ ತಿ ಮೇ ಪಾರ್ಥ ನಿಶ್ಚಿತಂ ಮತ ಮುತ್ತಮಮ್**" ಎಂಬಲ್ಲಿರುವ ಮತ್ತು "**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇ ಜುರ್ನ । ಸಙ್ಗಂತ್ಯಕ್ತ್ವಾ ಫಲಂ ಚೈವಸತ್ಯಾಗ ಸ್ಸಾತ್ವಿಕೋಮತಃ**" ಎಂಬಲ್ಲೂ ಹೇಳಿರುವ ಅಭಿಪ್ರಾಯವೇ, ಇಲ್ಲಿ ವಿಸ್ತರಿಸಿ ಉಪಪಾದಿಸಲ್ಪಟ್ಟಿತೆಂದಾದರೂ ಭಾವಿಸಬಹುದು. **ಅಥವಾ** ಅಲ್ಲಿ ಸಾರ್ವತ್ರಿಕವಾಗಿ ಹೇಳಲ್ಪಟ್ಟ ಅಭಿಪ್ರಾಯಗಳನ್ನು ಇಲ್ಲಿ ವಿಶೇಷಿಸಿ, ಅರ್ಜುನನು ಕ್ಷತ್ರಿಯನಾದುದರಿಂದ ಆತನಿಗೇನೇ ಅನ್ವಯಿಸುವ ಹಾಗೆ ಹೇಳಲ್ಪಟ್ಟಿತೆಂದಾಗಲಿ ಭಾವಿಸಬಹುದು. ಈಗ ಉದಾಹರಿಸುವ ಶ್ಲೋಕಗಳಲ್ಲಿರುವ "ಕರ್ತವ್ಯಾನಿ" ಎಂಬ **ಕಾರ್ಯಂ ನಿಯತಂ** ಎಂಬ ಪದಗಳಿಂದ ಈ ಶ್ಲೋಕದಲ್ಲಿ ಹೇಳಲ್ಪಟ್ಟ **ಹನನಕರ್ಮವೂ ಕರ್ತವ್ಯವೂ, ಕಾರ್ಯವೂ, ನಿಯತವೂ** ಆಗಿರಬೇಕೆಂದೇ ಇಟ್ಟುಕೊಳ್ಳತಕ್ಕದ್ದಾಗಿರುತ್ತದೆ. "**ನಹನ್ತಿ**" ಎಂದು ಹೇಳಿದುದರಿಂದ ಆತನಿಗೆ ಕರ್ತೃತ್ವವೂ ಲೇಪಿಸುವದಿಲ್ಲವೆಂದೂ, **ನನಿಬಧ್ಯತೇ** ಎಂಬುದರಿಂದ ಆದರ ಫಲದ

**ಭಾ. ಅವ. ಸರ್ವಮಿದ ಮಕರ್ತೃತ್ವಾದ್ಯನುಸಂಧಾನಂ ಸತ್ವಗುಣ ವೃದ್ಧ್ಯೈವ ಭವ ತೀತಿ, ಸತ್ತ್ವಸ್ಯೋಪಾದೇಯತಾ ಜ್ಞಾಪನಾಯ, ಕರ್ಮಣಿ ಸತ್ತ್ವಾದಿಗುಣ ಕೃತಂ ವೈಷಮ್ಯಂ ಪ್ರಪಞ್ಚಯಿಷ್ಯನ್, ಕರ್ಮಚೋದನಾಪ್ರಕಾರಂ ತಾವದಾಹ—**

---

ಸಂಬಂಧವಾದ ಬಂಧನವೂ ಇಲ್ಲವೆಂದೂ ಹೇಳಲ್ಪಟ್ಟಿತು. ವಿಹಿತ ಕರ್ಮವನ್ನು ಮಾಡುವಾಗಲೂ ಅಹಂಭಾವವು ಕೂಡದು. ಮಾಡಿದನಂತರವೂ ಫಲ ಬೇಕೆಂಬ ಲೇಪವೂ ಇರಕೂಡದು ಎಂದು ಇದರಿಂದ ಹೇಳಿದಂತಾಯಿತು. || ೧೭ ||

**ಭಾಷ್ಯಾವತಾರಿಕೆಯ ಅರ್ಥವು**—ಈಗ ಅಧ್ಯಾಯಾದಿಯಿಂದಲೂ ಹೇಳಿದುದು ಕರ್ಮ ಸನ್ಯಾಸ ಕರ್ಮತ್ಯಾಗವೂ ಎರಡೂ ಒಂದೇ ಎಂದೂ, ಆವೆರಡೂ ಸಾತ್ವಿಕತ್ಯಾಗವನ್ನೇ ಬೋಧಿ ಸುತ್ತವೆ ಎಂಬುದಾಗಿ. ಹಿಂದೆ ೩ನೆಯ ಅಧ್ಯಾಯದ ೩೦ನೆಯ ಶ್ಲೋಕದಲ್ಲಿ ಸಙ್ಗ್ರಹವಾಗಿ ಹೇಳಲ್ಪಟ್ಟ '' **ಮಯಿಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ । ನಿರಾಶೀರ್ನಿ ರ್ಮಮೋಭೂತ್ವಾಯುಧ್ಯಸ್ವ ವಿಗತಜ್ವರಃ** " ಎಂಬರ್ಥವನ್ನೇ ಇಲ್ಲಿ ವಿಸ್ತರಿಸಿ ಹೇಳುವವ ರಾಗಿ ವಿಹಿತಕರ್ಮಗಳಲ್ಲಿ, ಕರ್ತೃತ್ವ ಮಮತಾಫಲಗಳನ್ನು ತ್ಯಾಗಮಾಡಿ ಸ್ವಾಮಿಯಲ್ಲಿ ಸಮರ್ಪಿಸಿ ಪರಮಪುರುಷನೇ ಕರ್ತಾ ಕಾರಯಿತಾ ಎಂಬ ಅನುಸಂಧಾನವಿರಬೇಕೆಂದು ನಿಪುಣತರವಾಗಿ ಹೇಳಿ, ಆ ಅನುಸಂಧಾನಕ್ಕೆ ಕಾರಣವೇನು ಎಂದರೆ ಒಂದು ಪ್ರವೃತ್ತಿಗೆ ಐದು ಕಾರಣಗಳೆಂದೂ, ಆ ಐದರಲ್ಲಿ ತಾನು ಪರಾಧೀನನಾಗಿ ಒಬ್ಬನೆಂದೂ, ಇನ್ನೂ ನಾಲ್ಕು ಸರ್ವೇಶ್ವರನೂ, ಆತನು ಏರ್ಪಡಿಸಿರುವ ಆತನ ಸ್ವತ್ತಾದ ದೇಹರೂಪ ಯಂತ್ರಾದಿಗಳೆಂದೂ, ಆ ಕಾರಣದಿಂದ ಆ ಅನು ಸಂಧಾನವು ಯಥಾರ್ಥವಾದುದೆಂದೂ, ತೋರ್ಪಡಿಸಿದರು. ಈಗ ಈ ಶ್ಲೋಕದಲ್ಲಿ, ಹಿಂದೆ ಜೀವಾತ್ಮನಿಗೆ ಕರ್ತೃತ್ವವು ಹೇಳಲ್ಪಟ್ಟಿತಲ್ಲಾ ಅದು ಹೇಗೆ ಏರ್ಪಡುತ್ತದೆಂದೂ, ಆತನು ಮಾಡುವ ಕರ್ಮದಲ್ಲಿ ಸೇರಿರುವ ಅಂಶಗಳು ಯಾವುವು ಎಂದೂ ಹೇಳಲ್ಪಡುವುವು. ಹೀಗೆ ಇಲ್ಲಿ ಹೇಳಲು ಕಾರಣವೇನು ? ಹಿಂದೆ ಹೇಳಿದುದಕ್ಕೂ ಮುಂದೆ ಹೇಳುವುದಕ್ಕೂ ಈ ಶ್ಲೋಕದಲ್ಲಿ ಹೇಳುವುದು ಹೇಗೆ ಸಙ್ಗತವು ಎಂಬುದನ್ನು ವ್ಯಕ್ತಪಡಿಸುವದಕ್ಕಾಗಿ ಈ ಅವ ತಾರಿಕೆಯನ್ನು ದಯಪಾಲಿಸಿರುತ್ತಾರೆ. **ಸರ್ವಮಿದಂ**-ಈಗ ಅಧ್ಯಾಯಾದಿಯಿಂದಲೂ ಹಿಂದೆಯೂ ಸಹ ಉಪಪಾದಿಸಿ ಹೇಳಿದ, ಈ ಸಮಸ್ತವಾದ **ಅಕರ್ತೃತ್ವಾನುಸಂಧಾನಂ**- ತಾನು ಕರ್ತಾವಲ್ಲವು, ಪರಮಾತ್ಮಾಯತ್ತನಾಗಿ ಆತನ ಪ್ರೀತಿಗಾಗಿ ಈ ಕರ್ಮಗಳನ್ನೆಲ್ಲಾ ಮಾಡುತ್ತೇನೆಂಬ ಅನುಸಂಧಾನವು, **ಸತ್ವಗುಣವೃದ್ಧ್ಯೈಭವತೀತಿ**-ಸತ್ವಗುಣವೃದ್ಧಿಯಿಂದ ಲೇನೇ ಉಂಟಾಗುತ್ತದೆಂದು ಮುಂದೆ ಹೇಳುವದರಿಂದ, **ಸತ್ವಸ್ಯೋಪಾದೇಯತಾಜ್ಞಾಪ ನಾಯ**-ಹಿಂದೆ ಹೇಳಿದ ಸತ್ವಗುಣಾಧಿಕ್ಯವೇ ಅಙ್ಗೀಕಾರ್ಯವೆಂಬುದನ್ನು ಜ್ಞಾಪಿಸುವುದಕ್ಕಾಗಿ, **ಕರ್ಮಣಿ**-ಕರ್ಮದಲ್ಲಿ,**ಸತ್ವಾದಿಗುಣಕೃತಂ**-ಸತ್ವರಜಸ್ತಮೋಗುಣಗಳಿಂದಮಾಡಲ್ಪಟ್ಟ,**ವೈಷಮ್ಯಂ**- ವ್ಯತ್ಯಾಸವನ್ನೂ, **ಪ್ರಪಂಚಯಿಷ್ಯನ್**-ವಿಸ್ತರಿಸಿ ಹೇಳುವವರಾಗಿ, **ಕರ್ಮಚೋದನಾ ಪ್ರಕಾರಂ**-ಕರ್ಮಪ್ರವೃತ್ತಿಯಲ್ಲಿ ಪ್ರೇರಣೆಯು ಹೇಗಾಗುತ್ತದೆಂಬುದನ್ನು, **ತಾವದಾಹ**- ಮೊದಲು ಹೇಳುತ್ತಾರೆ—ಇಲ್ಲಿ **ಅಕರ್ತೃತ್ವಾನುಸಂಧಾನಕ್ಕಾಗಿ** ಹಿಂದೆಯೇ ಸಾತ್ವಿಕತ್ಯಾಗ ವನ್ನು ಹೇಳಿ, ಸಮಸ್ತ ಕರ್ಮಗಳಲ್ಲೂ ಕರ್ತೃತ್ವಮಮತಾ ಫಲತ್ಯಾಗದೊಂದಿಗೆ ಪರಮಪುರುಷಾ ರಾಧನವೆಂದು ಭಾವಿಸಿ ಆತನಲ್ಲಿ ಸಮರ್ಪಿಸತಕ್ಕದ್ದೆಂದು ಹೇಳಲ್ಪಟ್ಟಿತು. ಆದುದರಿಂದ ಈಗ ಸತ್ವಗುಣಾಭಿವೃದ್ಧಿಯೇ ಉಪಾದೇಯವೆಂದು ಹೇಳಬೇಕಾಗಿತ್ತು. ಹಾಗೆ ಹೇಳದೆ ಈಗ ಮಧ್ಯದಲ್ಲಿಕರ್ಮಚೋದನಾ ಪ್ರಕಾರ ಹೇಳಲು ಕಾರಣವೇನೆಂದರೆ, ಹಿಂದೆ ಹೇಳಿದುದಕ್ಕೂ ಈಗ ಈ ಮುಂದಿನ ಶ್ಲೋಕದಲ್ಲಿ ಹೇಳುವದಕ್ಕೂ ಸಙ್ಗತಿ ಏನೆಂದರೆ—ಕರ್ಮಚೋದನಾ ಪ್ರಕಾರವು ವಿದಿತವಾದರೆ, ಯಾವ ಗುಣಾಭಿವೃದ್ಧಿಯನ್ನು ಮಾಡಿಕೊಳ್ಳಬೇಕೆಂಬ ಜ್ಞಾನವು ತಾನೇ

**ಮೂ. ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಙ್ಗ್ರಹಃ ॥೧೮॥**

**ಭಾ. ಜ್ಞಾನಂ-ಕರ್ತವ್ಯಕರ್ಮವಿಷಯಜ್ಞಾನಮ್, ಜ್ಞೇಯಂಚ-ಕರ್ತವ್ಯಂಕರ್ಮ, ಪರಿಜ್ಞಾತಾ-ತಸ್ಯಬೋದ್ಧೇತಿ, ತ್ರಿವಿಧಾ ಕರ್ಮಚೋದನಾ-ಬೋಧ ಬೋದ್ಧವ್ಯ**

---

ಉಂಟಾಗುವದರಿಂದ ಮೊದಲು ಕರ್ಮಚೋದನಾ ಪ್ರಕಾರವನ್ನು ತಿಳಿಸುತ್ತಾರೆಂದು ಅವತಾರಿಕೆಯನ್ನು ಕೊಟ್ಟಿರುತ್ತಾರೆ.

**ಮೂಲಕ್ಕೆ ಅರ್ಥವು**—ಮುಂದೆ ಹೇಳತಕ್ಕ ವಿಷಯವೇನೆಂದರೆ, ಮೋಕ್ಷಾರ್ಥಿಯು ಮಾಡುವ ಶಾಸ್ತ್ರವಿಹಿತ ಕರ್ಮಗಳಲ್ಲಿ ಕರ್ತೃತ್ವತ್ಯಾಗ, ಮಮತಾತ್ಯಾಗ, ಫಲತ್ಯಾಗಗಳನ್ನು ಮಾಡಿ ಪರಮಪುರುಷಾರಾಧನ ರೂಪವೆಂದು ಅಕರ್ತೃತ್ವಾನುಸಂಧಾನಪೂರ್ವಕ ಸಾತ್ವಿಕ ತ್ಯಾಗಕ್ಕೆ ಕರ್ತಾವಾದ ತಾನು ಸಾತ್ವಿಕನಾಗಿಯೂ, ಸಾತ್ವಿಕಜ್ಞಾನವನ್ನು ಹೊಂದಿ ಸಾತ್ವಿಕಕರ್ಮವನ್ನು ಮಾಡತಕ್ಕದ್ದೆಂದು ಮುಂದೆ ಉಪದೇಶಿಸಲು ಉಪಕ್ರಮಿಸುತ್ತಾರೆ. ಅದಕ್ಕೆ ಪೂರ್ವಭಾವಿಯಾಗಿ ಒಂದು ಕರ್ಮವನ್ನು ಶಾಸ್ತ್ರರೀತ್ಯಾ ಅನುಷ್ಠಿಸೋಣವು ಯಾವ ಯಾವುಗಳನ್ನು ಒಳಗೊಂಡಿದೆ ಎಂದು ಪೂರ್ವಾರ್ಧದಿಂದ ತಿಳಿಸಿ, ಉತ್ತರಾರ್ಧದಿಂದ ಆ ವಿಹಿತಕರ್ಮವೇ ಯಾವು ಯಾವುಗಳನ್ನು ಒಳಗೊಂಡಿರಬೇಕೆಂಬುದನ್ನು ಮೊದಲು ತಿಳಿಸುತ್ತಾರೆ. ಇಲ್ಲಿ ಹೇಳುವ ವಿಷಯವಾದ ಲೌಕಿಕ ಕರ್ಮಚೋದನಾ ವೈದಿಕಕರ್ಮಗಳಿಗೂ ಸಹ ಉಪಲಕ್ಷಣವಾಗಿ ಭಾವಿಸಬಹುದು. ಆದುದರಿಂದ ಸಾಮಾನ್ಯವಾಗಿ ಎಲ್ಲಾ ಕರ್ಮಪ್ರೇರಣೆಯೂ ಮತ್ತು ಎಲ್ಲಾ ಕರ್ಮಗಳೂ, "**ನ್ಯಾಯ್ಯಂವಾವಿಪರೀತಂವಾ**" ಎಂದು ಹಿಂದೆ ಹೇಳಿದ ಹಾಗೆ ಮೂರು ಮೂರು ಅಂಶಗಳುಳ್ಳವೆಂದು ಉಪದೇಶಿಸುತ್ತಾರೆ—

**ಜ್ಞಾನಂ**-ಮಾಡಬೇಕಾಗಿರುವ ಕರ್ಮದ ಜ್ಞಾನವೂ, **ಜ್ಞೇಯಂ**-ಆಜ್ಞಾನಕ್ಕೆ ವಿಷಯವಾದ ಕರ್ಮವೂ, **ಪರಿಜ್ಞಾತಾ**-ಕರ್ಮವು ನ್ಯಾಯವಾದುದೇ ವಿಪರೀತವಾದುದೇ ಎಂದು ವಿಮರ್ಶಿಸಿ ಚನ್ನಾಗಿ ತಿಳಿಯುವ ಅಧಿಕಾರಿಯು, ಹೀಗೆ **ತ್ರಿವಿಧಾ**-ಮೂರನ್ನು ಉಳ್ಳದು, ಎಂದರೆ ಹೀಗೆ ಮೂರಂಶಗಳನ್ನು ಹೊಂದಿರುವುದು, **ಕರ್ಮಚೋದನಾ**-ಕರ್ಮದ ಪ್ರೇರಣೆಯು ; ಒಂದು ಕರ್ಮವನ್ನು ಮಾಡಬೇಕೆಂಬ ಪ್ರೇರಣೆಗೆ ಮೂರು ಬೇಕಾದುದು ; ಅವು ಯಾವುವೆಂದರೆ (೧) ಕರ್ಮವನ್ನು ಹೇಗೆ ಮಾಡತಕ್ಕದ್ದೆಂಬ ಜ್ಞಾನವು ಬೇಕು. (೨) ಆ ಕರ್ಮವು ಯಾವುದು ಎಂದು ತಿಳಿದಿರಬೇಕು. (೩) ಇದನ್ನೆಲ್ಲಾ ತಿಳಿದಿರುವ ಒಬ್ಬ ಅಧಿಕಾರಿಯು, ಹೀಗೆ ಈ ಮೂರೂ ಸೇರಿದರೆ ಕರ್ಮಪ್ರೇರಣೆಯುಂಟಾಗುತ್ತದೆಂಬ ಭಾವವು. ಆದರೆ ಚೋದನಾ ಶಬ್ದವು ಶಾಸ್ತ್ರವಿಧಿಯನ್ನು ಬೋಧಿಸುವ ಅರ್ಥದಲ್ಲೇ ಪ್ರಯೋಗವಾದುದರಿಂದಲೂ ಪ್ರಕರಣವು ಮೋಕ್ಷಾರ್ಥಿಯ ವಿಷಯವಾದುದರಿಂದಲೂ, ಜ್ಞಾನವೆಂದರೆ ಕರ್ಮವನ್ನು ಯಥಾಶಾಸ್ತ್ರವಾಗಿ ಅನುಷ್ಠಿಸುವ ಜ್ಞಾನವೆಂದೂ ಕರ್ಮವೆಂದರೆ ಶಾಸ್ತ್ರವಿಹಿತವಾದ ಕರ್ಮವೆಂದೂ, **ಪರಿಜ್ಞಾತಾ**ವೆಂದರೆ ಇವುಗಳನ್ನೆಲ್ಲಾ ಚನ್ನಾಗಿ ವಿಮರ್ಶಿಸಿ ತಿಳಿಯುವ ಅಧಿಕಾರಿಎಂಬ ಧ್ವನ್ಯರ್ಥವನ್ನೂ ಇಲ್ಲಿಯೇ ಗ್ರಹಿಸಬಹುದು. ಆದರೂ, ಹಾಗಲ್ಲದೆ ಸಾಮಾನ್ಯವಾಗಿ ಎಲ್ಲಾ ಕರ್ಮಗಳಿಗೂ ಈ ಶ್ಲೋಕದಲ್ಲಿ ಅನ್ವಯವು. ಏಕೆಂದರೆ ಕರ್ಮಕ್ಕೆ ಯಾವ ವಿಶೇಷಣವೂ ಇಲ್ಲದೆ **ಕರ್ಮಚೋದನಪ್ರಕಾರವ**ನ್ನು ಎಂದು ಹೇಳಿರುವದರಿಂದ, ಆದರೆ ಹಿಂದೆ ಹೇಳಿರುವ ಉಪಪಾದನವನ್ನು ಗಮನಿಸಿದರೆ ಶ್ರೀಯುತಿವರ್ಯರಿಗೆ ಮುಮುಕ್ಷುವಿನ ಕರ್ಮಚೋದನವೇ ಮುಖ್ಯವಾದ ವಿಷಯವಾಗಿದ್ದರೂ ಪ್ರಾಸಙ್ಗಿಕವಾಗಿ ಜ್ಞಾನ, ಜ್ಞೇಯ, ಕರ್ತಾ ಸಹ ಮೂರು ವಿಧಗಳೆಂದು, ಮುಂದಿನ ಶ್ಲೋಕಗಳಲ್ಲಿ ಹೇಳುತ್ತಾರೆ. ರಾಜಸ ತಾಮಸಗಳಿಗೂ

**ಬೋದ್ಧವ್ಯಯುಕ್ತೋ ಜ್ಯೋತಿಷ್ಟೋಮಾದಿ ಕರ್ಮವಿಧಿರಿತ್ಯರ್ಥಃ ; ತತ್ರಬೋದ್ಧವ್ಯರೂಪಂ ಕರ್ಮತ್ರಿವಿಧಂ ಸಂಗೃಹ್ಯತೇ-ಕರಣಂ ಕರ್ಮಕರ್ತೇತಿ; ಕರಣಂ-**

ಈ ಸಾತ್ವಿಕಗಳಿಗೂ ವೈಲಕ್ಷಣ್ಯವನ್ನು ಉಪಪಾದಿಸಿದರೆ, ಸಾತ್ವಿಕದ ಮಾಹಾತ್ಮ್ಯಕ್ಕೇ ಆಧಿಕ್ಯವೆಂಬ ಭಾವದಿಂದ ಮೂರೂ ಹೇಳಲ್ಪಡುತ್ತವೆ. ಹೀಗೆ ತಾಮಸಗುಣಗಳಿಗೂ ಸಹ ಇದು ಅನ್ವಯಿಸುತ್ತದೆ. ಉತ್ತರಾರ್ಧದಲ್ಲಿ ಆ ಎರಡನೆಯದಾದ ಆ ಮಾಡತಕ್ಕ ಕಾರ್ಯವೂ ಸಹ ಮೂರನ್ನು ಒಳಗೊಂಡಿರಬೇಕು ; ಅವು ಯಾವುವೆಂದರೆ ಹೇಳುತ್ತಾರೆ. (೧) **ಕರಣಂ**-ಕರ್ಮಕ್ಕೆ ಉಪಕಾರಕವಾದ ಸಹಕಾರಿ ದ್ರವ್ಯವು, **ಕರ್ಮ**-ನ್ಯಾಯವೋ ವಿಪರೀತವೋ ಆದ ಕರ್ಮವು, ಆದರೆ ಪ್ರಕರಣವು ಮೋಕ್ಷಾರ್ಥಿಯ ವಿಷಯವಾದುದರಿಂದ ನಿವೃತ್ತಿ ರೂಪಧರ್ಮವು, **ಕರ್ತಾ**-ಕರ್ಮವನ್ನು ಅನುಷ್ಠಿಸುವವನು, ಹೀಗೆ **ತ್ರಿವಿಧಃ**-ಮೂರು ಅಂಶಗಳನ್ನುಳ್ಳದು, **ಕರ್ಮಸಙ್ಗ್ರಹಃ**-ಕರ್ಮವಿಷಯದಲ್ಲಿ ತಿಳಿಯತಕ್ಕ ವಿಷಯವು ; ಕರ್ಮವೆಂತಹುದು ಎಂದು ತಿಳಿಯಬೇಕಾದರೆ, ಕರ್ಮಾನುಷ್ಠಾತೃವು ಎಂತಹವನು ? ಆ ಕರ್ಮಗಳಿಗೆ ಬೇಕಾದ ದ್ರವ್ಯಾದಿ ಉಪಕರಣಗಳು ಎಂತವು ? ಕರ್ಮಸ್ವರೂಪವೆಂತಹದ್ದು ? ಎಂಬ ಮೂರು ವಿಷಯಗಳನ್ನು ಕರ್ಮವು ಒಳಗೊಂಡಿರುತ್ತದೆಂಬ ಭಾವವು. ಇಲ್ಲಿಯೂ ಕೂಡ **ಕರ್ಮ**ವೆಂದರೆ ಶಾಸ್ತ್ರವಿಹಿತಕರ್ಮವಾದುದರಿಂದ, **ಕರಣ**ವೆಂದರೆ ದ್ರವ್ಯಾದಿ ಸಲಕರಣಗಳೆಂದೂ, **ಕರ್ತಾ**-ಯಾಗೆ ಅನುಷ್ಠಿಸುವ ಅಧಿಕಾರಿ ಎಂದೂ ಅರ್ಥ ಮಾಡಬಹುದು. ಮುಖ್ಯ ಕವಿಯ ದಿವ್ಯಸೂಕ್ತಿಯಾದುದರಿಂದ ಈ ಶ್ಲೋಕದಲ್ಲಿ ಒಂದು ಧ್ವನ್ಯರ್ಥವೂ ತೋರಿಬರುತ್ತದೆ, ಏನೆಂದರೆ-**ಕರ್ಮಚೋದನಾ** ಎಂಬಲ್ಲಿ ಮೋಕ್ಷಪ್ರಾಪ್ತಿರೂಪ ಕರ್ಮದ ಚೋದನವು, **ಜ್ಞಾನಂ**-ಪರಮಾತ್ಮೋಪಾಸನದಿಂದುಂಟಾಗುವ "ಸಂಜ್ಞಾಯತೇಯೇನ ತದಸ್ತದೋಷಂ **ಶುದ್ಧಂಪರಂ ನಿರ್ಮಲಮೇಕರೂಪಮ್। ಸಂದೃಶ್ಯತೇ ವಾಪ್ಯಧಿಗಮ್ಯತೇ ನಾತತ್‌ಜ್ಞಾನ ಮಜ್ಞಾನ ಮತೋಽನ್ಯದುಕ್ತಮ್**" ಎಂದು (ವಿ. ಪು. ) ಹೇಳಿರುವ ಹಾಗೆ, ಪರಮಾತ್ಮ ಸಾಕ್ಷಾತ್ಕಾರವು, **ಜ್ಞೇಯಂ**-"**ನಾರಾಯಣಂ ಮಹಾಜ್ಞೇಯಂವಿಶ್ವಾತ್ಮಾನಂಪರಾಯಣಂ**" ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಪ್ರಾಪ್ಯವಾದ, ಶ್ರೀ ವಾಸುದೇವರೂಪದಲ್ಲಿ ದಿವ್ಯ ವೈಕುಂಠದಲ್ಲಿರುವ ದಿವ್ಯಮಂಗಳ ವಿಗ್ರಹವು, **ಪರಿಜ್ಞಾತಾ**-ತನಗಿಂತ ಪರಮಾತ್ಮ ಸ್ವರೂಪದ ವೈಲಕ್ಷಣ್ಯವನ್ನು ವಿವೇಕಿಸಿ ತಿಳಿಯುವ ಜ್ಞಾತಾ, ಹೀಗೆ ಮೂರನ್ನೂ ಒಳಗೊಂಡಿರುತ್ತದೆ ಎಂಬ ಅರ್ಥವೂ ಸೂಚಿತವು, ಇದರಿಂದ ಪರಮಪುರುಷನು ಜ್ಞಾನಮಾತ್ರವು; ಜ್ಞೇಯವೂ ಅಲ್ಲವು, ಜ್ಞಾತಾವು ಅಲ್ಲವು ಎಂಬ ವಾದವು ನಿರಸ್ತವು. ಆತ್ಮಾ ಅನುಭೂತಿ ಮಾತ್ರನೇ ಎಂದು ಹೇಳುವವರಿಗೆ **ಜ್ಞೋತ ಏವ** ಎಂಬ ಬ್ರಹ್ಮಸೂತ್ರವೂ, "ದ್ರಷ್ಟಾಶ್ರೋತಾ" (ಬ ೬-೩-೧೩.) ಇತ್ಯಾದಿ ಶ್ರುತಿಗಳೂ ವಿರೋಧವಾಗುತ್ತವೆ. ಆಗಲಿ, ವಿಜ್ಞಾನಂ ಯಜ್ಞತನುತೇ (ತೈ. ಉ.) ಎಂಬಲ್ಲಿ ಜ್ಞಾನಮಾತ್ರವೆಂದು ಹೇಳಿದೆಯಲ್ಲಾ ಎಂದರೆ, ಜ್ಞಾನವು ಪ್ರಧಾನ ಗುಣವೆಂದು ತಿಳಿಸುವದಕ್ಕಾಗಿ ಹಾಗೆ ಪ್ರಯೋಗವೆಂದು ತಿಳಿಯತಕ್ಕದ್ದು. ಆದುದರಿಂದ ಆತ್ಮನು ಬದ್ಧಮುಕ್ತಾವಸ್ಥೆಗಳಲ್ಲೂ ಜ್ಞಾತಾವೆಂಬುದು ಸಿದ್ಧವು. ಸುಷುಪ್ತಿ ಮೂರ್ಛೆ ಮೊದಲಾದ ಅವಸ್ಥೆಗಳಲ್ಲೂ ಜ್ಞಾತೃತ್ವವು ಉಂಟು ; ಆದರೆ ಆಗ ಅಭಿವ್ಯಕ್ತವಿಲ್ಲದೆ, ಜಾಗರಾವಸ್ಥೆಯುಂಟಾದಾಗ ವಿಕಸಿತವಾಗಿ ಅಭಿವ್ಯಕ್ತವಾಗುತ್ತದೆಂದು ತಿಳಿಯತಕ್ಕದ್ದು. ಎಚ್ಚರಿಸಿದ ಬಳಿಸೆಯೇ ಅಭಿವ್ಯಕ್ತಿಯುಂಟಾಗಬೇಕಾದರೆ, ಮೊದಲು ಇದ್ದೇ ಇರಬೇಕಲ್ಲವೇ. ಇಲ್ಲದುದು ಹೇಗೆ ಉತ್ಪನ್ನವಾದೀತು ? ||೧೮||

**ಭಾಷ್ಯಾರ್ಥವು**—ಶ್ಲೋಕದಲ್ಲಿ **ಚೋದನಾ** ಎಂಬ ಪ್ರಯೋಗವಿರುವುದರಿಂದ ಶಾಸ್ತ್ರವಿಹಿತವಾಗಿ ಕರ್ತವ್ಯರೂಪ ಕರ್ಮವಿಧಿಯನ್ನೇ ಈ ಶ್ಲೋಕವು ಬೋಧಿಸುತ್ತದೆ ಎಂದು ಭಾವಿಸಿ, ಹಾಗೆಯೇ ವ್ಯಾಖ್ಯಾನವನ್ನು ದಯಪಾಲಿಸುತ್ತಾರೆ—**ಜ್ಞಾನಂ**-ಕರ್ಮಚೋದನವು ಪ್ರಕೃತ

**ಸಾಧನಭೂತಂ ದ್ರವ್ಯಾದಿಕಮ್, ಕರ-ಯಾಗಾದಿಕಮ್, ಕರ್ತಾ-ಅನುಷ್ಠಾತೇತಿ || ೧೮ ||**

---

ವಿಷಯವಾದುದರಿಂದ ಅದಕ್ಕನುಗುಣವಾದ ಜ್ಞಾನವೆಂದು ಅರ್ಥಮಾಡುವದೇ ಉಚಿತವಾದುದರಿಂದ ಜ್ಞಾನಶಬ್ದಕ್ಕೆ **ಕರ್ತವ್ಯವಿಷಯಜ್ಞಾನಮ್** ಎಂಬ ವ್ಯಾಖ್ಯಾನವು, ಮಾಡಬೇಕಾದ ಕರ್ಮದ ವಿಷಯವಾದ ಸಾಮಾನ್ಯ ಜ್ಞಾನವು, ಜ್ಞೇಯಂಚ-ಮತ್ತು ಜ್ಞೇಯವು ಎಂದರೆ **ಕರ್ತವ್ಯಂಕರ್ಮ**-ಶಾಸ್ತ್ರದಲ್ಲಿ ಮಾಡಬೇಕೆಂದು ಹೇಳಿರುವಕರ್ಮವು, ಮತ್ತು **ಪರಿಜ್ಞಾತಾ**-ಎಂದರೆ **ತಸ್ಯಬೋದ್ಧಾ**-ಆ ಕರ್ಮವಿಷಯವನ್ನು ಚೆನ್ನಾಗಿ ತಿಳಿದವನು ; **ಇತಿ**-ಹೀಗೆ, **ತ್ರಿವಿಧಕರ್ಮಚೋದನಾ** ಎಂದರೆ **ಬೋಧಬೋದ್ಧವ್ಯಬೋದ್ಧೃಯುಕ್ತೋ ಜ್ಯೋತಿಷ್ಟೋಮಾದಿಕರ್ಮವಿಧಿರಿತ್ಯರ್ಥಃ**-ಜ್ಞಾನ ಮತ್ತು ಜ್ಞಾನದಿಂದ ತಿಳಿಯಬೇಕಾದ ಕರ್ತವ್ಯ, ತಿಳಿಯುವ ಅಧಿಕಾರಿ, ಈ ಮೂರರಿಂದ ಸೇರಿದ ಜ್ಯೋತಿಷ್ಟೋಮವೇ ಮೊದಲಾದ ಕರ್ಮಾನುಷ್ಠಾನವನ್ನು ಬೋಧಿಸುವ ವಿಧಿ ಎಂಬ ತಾತ್ಪರ್ಯವು. **ತತ್ರ**-ಈ ಜ್ಞಾನ, ಕರ್ತವ್ಯಕರ್ಮ, ಪರಿಜ್ಞಾತಾ ಈ ಮೂರರಲ್ಲಿ, **ಬೋದ್ಧವ್ಯರೂಪಂಕರ್ಮ**-ತಿಳಿಯಬೇಕಾದ ಕರ್ತವ್ಯವಾದ ಕರ್ಮವು, **ತ್ರಿವಿಧಂಸಂಗೃಹ್ಯತೇ ಕರಣಂಕರ್ಮಕರ್ತೇತಿ**-ಕರಣ ಕರ್ಮ ಕರ್ತಾ ಎಂದು ಹಾಗೆಯೇ ಮೂರನ್ನುಳ್ಳದ್ದಾಗಿ ತಿಳಿಯಲ್ಪಟ್ಟಿರುತ್ತದೆ. ಅವು ಯಾವುವೆಂದರೆ-**ಕರಣಂ**-ಎಂದರೆ **ಸಾಧನಭೂತಂ ದ್ರವ್ಯಾದಿಕಮ್**-ಕರ್ಮಕ್ಕೆ ಸಾಧನಭೂತವಾಗಿರುವ ದ್ರವ್ಯವೇ ಮೊದಲಾದವುಗಳನ್ನುಳ್ಳ ಸಲಕರಣೆಯು, **ಕರ್ಮ** ಎಂದರೆ **ಯಾಗಾದಿಕಂ**-ಯಾಗವೇ ಮೊದಲಾದವು. ಇಲ್ಲಿ ಯಾಗಾದಿಗಳಲ್ಲದೆ ಬೇರೆ ವಿಧ ಕರ್ಮಗಳು ಹೇಳಲ್ಪಡಲಿಲ್ಲವೆಂಬುದನ್ನು ಚೋದನಾಶಬ್ದದಿಂದ ಗ್ರಹಿಸಬಹುದು. ಇತರವಾದವುಗಳನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ **ಯಾಗಾದಿಕಂ** ಎಂಬ ಭಾಷ್ಯವು. **ಕರ್ತಾ** ಎಂದರೆ **ಅನುಷ್ಠಾತೇತಿ**-ಅನುಷ್ಠಿಸುವವನು ಎಂಬದಾಗಿ ಮೂರನ್ನುಳ್ಳದು ಕರ್ಮವು ಎಂಬ ತಾತ್ಪರ್ಯವು. ಇಲ್ಲಿ ಜ್ಞಾನ ಜ್ಞೇಯ ಜ್ಞಾತೃಶಬ್ದಗಳು ಸಾಮಾನ್ಯವಾಗಿ ವ್ಯಾಖ್ಯಾನಮಾಡಲು ಸಾಧ್ಯವಾದರೂ, ಕರ್ಮಚೋದನಕ್ಕೆ ತ್ರೈವಿಧ್ಯವನ್ನು ಸ್ಥಾಪಿಸಬೇಕಾಗಿರುವದರಿಂದಲೂ, **ಚೋದನಾ** ಅರ್ಥವು ಶಾಸ್ತ್ರವಿಧಿಯನ್ನು ಬೋಧಿಸುವದರಿಂದಲೂ, ಜ್ಞಾನಶಬ್ದಕ್ಕೆ ಸಾಮಾನ್ಯಾರ್ಥವನ್ನು ತ್ಯಜಿಸಿ, **ಕರ್ತವ್ಯಯಾಗಾದಿಕಂಕರ್ಮವಿಷಯಜ್ಞಾನವೆಂದು** ಅರ್ಥ ಮಾಡಿರುತ್ತಾರೆ, ಇದರಿಂದ ಸರ್ವ ವಿಷಯ ಶಾಸ್ತ್ರಜ್ಞಾನವು ಜ್ಞಾನಶಬ್ದದಿಂದ ಸಾಮಾನ್ಯವಾಗಿ ಮಾಡಿರುವ ಅರ್ಥವು ಪ್ರಕರಣಕ್ಕೆ ಅನುಕೂಲಿಸುವದಿಲ್ಲವೆಂದು ಹೇಳಿದಂತಾಯಿತು. ಇಲ್ಲಿ **ತ್ರಿವಿಧಾ ಕರ್ಮಚೋದನಾ** ಎಂದಿರುವದರಿಂದ ಕರ್ಮಚೋದನವೇ ಮೂರು ವಿಧವೆಂದು ಭಾವಿಸತಕ್ಕದ್ದಲ್ಲವು ; ತ್ರಿವಿಧಾ ಎಂಬುದು ಬಹುವ್ರೀಹ್ಯರ್ಥದಲ್ಲಿ ಪ್ರಯೋಗಿಸಿರುವದರಿಂದ ಒಂದೇ ಚೋದನವು ಮೂರು ಅಂಶಗಳನ್ನು ಅಥವಾ ಪ್ರಕಾರಗಳನ್ನೂ ಒಳಗೊಂಡದು ಎಂಬ ಭಾವವು ; ಆದುದರಿಂದಲೇ ಇದನ್ನು ಚನ್ನಾಗಿ ವ್ಯಕ್ತಪಡಿಸುವದಕ್ಕಾಗಿ **ಬೋಧಬೋದ್ಧವ್ಯಬೋದ್ಧೃಯುಕ್ತಃ** ಎಂಬುದಾಗಿ ವ್ಯಾಖ್ಯಾನವು. **ಚೋದನಾ**ಶಬ್ದಕ್ಕೆ ಕರ್ಮವಿಧಿ ಎಂದು ಅರ್ಥಮಾಡಿರುತ್ತಾರೆ ; ಇದು ಶಾಸ್ತ್ರದಲ್ಲಿ ವಿಧಿ ನಿಷೇಧವಾಕ್ಯಗಳ ಮೂಲಕವಾಗಿ ಚೋದನವು. ಹೀಗೆಯೇ **ತ್ರಿವಿಧಃ ಕರ್ಮಸಙ್ಗ್ರಹಃ** ಎಂಬಲ್ಲೂ ಅರ್ಥಮಾಡತಕ್ಕದ್ದಾಗಿರುತ್ತದೆ. ಮೇಲೆ **ಕರ್ಮ**ಚೋದನೆಯಲ್ಲಿ ಹೇಳಲ್ಪಟ್ಟ ಕರ್ಮವೇ ಮೂರಂಶವುಳ್ಳದೆಂದು ವ್ಯಕ್ತಪಡಿಸುವದಕ್ಕಾಗಿ ಜ್ಞೇಯಶಬ್ದದಿಂದ ಹೇಳಲ್ಪಟ್ಟ ಕರ್ಮವಿಷಯವಾಗಿಯೇ ಉತ್ತರಾರ್ಧವು **ಪ್ರಸ್ತುತ**ವೆಂದು ತಿಳಿಸುವದಕ್ಕಾಗಿ, **ತತ್ರ**-ಆ ಮೂರರಲ್ಲೇ ಎಂಬ ಪ್ರಯೋಗವು. **ಕರ್ಮಸಙ್ಗ್ರಹಃ** ಎಂಬಲ್ಲಿ ಕರ್ಮಣಿ ವ್ಯುತ್ಪತ್ತಿಯಿಂದ ಅರ್ಥಮಾಡಿ **ಕರ್ಮತ್ರಿವಿಧಂ ಸಙ್ಗೃಹ್ಯತೇ** ಎಂದು ಅರ್ಥಮಾಡಿರುತ್ತಾರೆ ; ಅಥವಾ ಕರ್ಮರೂಪ ಸಙ್ಗ್ರಹವೆಂದು ಕರ್ಮಧಾರಯಾರ್ಥವನ್ನೂ ಹೇಳ

**ಮೂ. ಜ್ಞಾನಂ ಕರ್ಮಚ ಕರ್ತಾಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ ೧೯ ॥**

---

ಬಹುದು ; ಅಥವಾ **ಕರ್ಮಣಃ ಸಙ್ಗ್ರಹಃ** ಎಂದು ಷಷ್ಠೀತತ್ಪುರುಷವಾದರೂ ಆಗಬಹುದು. **ಕರಣಂ** ಎಂಬುದಕ್ಕೆ **ಸಾಧನಭೂತಂದ್ರವ್ಯಾದಿಕಂ** ಎಂಬ ವ್ಯಾಖ್ಯಾನವನ್ನು "**ವ್ರೀಹಿಭಿರ್ಯಜೇತ**" "**ದಧ್ನಾಜುಹೋತಿ**" ಇತ್ಯಾದಿ ವಾಕ್ಯಗಳಲ್ಲಿ ಯಜ್ಞಕ್ಕೆ ಭತ್ತವೂ, ಹೋಮಕ್ಕೆ ಮೊಸರೂ ಹೀಗೆ ವಿಧಿಸಲ್ಪಟ್ಟ ದ್ರವ್ಯಾದಿಗಳನ್ನು ಮನಸ್ಸಿನಲ್ಲಿಟ್ಟು ಮಾಡಿದ ವ್ಯಾಖ್ಯಾನವು. ಇಲ್ಲಿ **ಕರಣಂ** ಎಂದರೆ ಯಾವುದರ ಮೂಲಕ ಜ್ಞಾಯತೇ ತಿಳಿಯಲ್ಪಡುತ್ತದೋ ಅದು, ಇಂದ್ರಿಯ ಗ್ರಾಮವು, ಹಾಗೆ ಅರ್ಥಮಾಡಬಹುದಲ್ಲಾ ? ಅದೂ ಅಲ್ಲದೆ ಪೂರ್ವಾರ್ಧದಲ್ಲಿ ಹೇಳಿದವೇ ಇಲ್ಲೂ, ಕರಣಂ, ಕರ್ಮ ಕರ್ತಾ ಎಂದು ಏಕೆ ಅರ್ಥಮಾಡಕೂಡದು ? ಎಂದರೆ ಹಿಂದೆ ಹೇಳಿದವೇ ಪುನಃ ಬೇರೆ ಪದಗಳಿಂದ ಹೇಳಲ್ಪಟ್ಟವೆಂದರೆ ಸ್ವಾರಸ್ಯಭಂಗವು. ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ಜ್ಞಾನವೂ, ಉತ್ತರಾರ್ಧದಲ್ಲಿ ಹೇಳಲ್ಪಟ್ಟ ಕರ್ಮವೂ ಮತ್ತು ಅಧಿಕಾರಿಯೂ ಸಹ, ಸಾತ್ವಿಕರಾಜಸತಾಮಸರೂಪದಲ್ಲಿ ಮೂರು ವಿಧವೆಂದು ಉಪಪಾದಿಸುವದರಿಂದ, ಹೀಗೆ ಅರ್ಥಮಾಡುವದರಲ್ಲಿ ಸ್ವಾರಸ್ಯವು ಹೆಚ್ಚು. ಪೂರ್ವಾರ್ಧದಲ್ಲಿ **ಕರ್ಮಚೋದನಾ,** ಉತ್ತರಾರ್ಧದಲ್ಲಿ **ಕರ್ಮಸಙ್ಗ್ರಹಃ** ಎಂದು ಭಿನ್ನವಾಗಿ ಹೇಳಲ್ಪಟ್ಟಿರುವದರಿಂದ ಪುನರುಕ್ತಿದೋಷವಿಲ್ಲದ ಹಾಗೆ ಸರಿಯಾಗಿ ಭಾಷ್ಯವನ್ನು ಅನುಗ್ರಹಿಸಿರುತ್ತಾರೆ. ಪೂರ್ವಾರ್ಧದ ಅಧಿಕಾರಿಯನ್ನು **ಪರಿಜ್ಞಾತಾ** ಎಂದು, ಜ್ಞಾನದಿಂದ ಚನ್ನಾಗಿ ವಿಮರ್ಶಿಸಿ ತಿಳಿಯುವನೆಂದು ಹೇಳಿ, ಅನಂತರ ಆತನೇ ಆ ಕರ್ಮಕ್ಕೆ **ಕರ್ತಾ**ವಾಗುತ್ತದೆಂದು ಕರ್ತಾ ಎಂದು ಹೇಳಲ್ಪಟ್ಟನೆಂಬ ಸ್ವಾರಸ್ಯವೂ ಉಂಟಾಗುತ್ತದೆ ; ಆದುದರಿಂದಲೇ **ಕರ್ತಾ** ಎಂದರೆ **ಅನುಷ್ಠಾತಾ** ಎಂದು ಇಲ್ಲಿ ವ್ಯಾಖ್ಯಾನಮಾಡಿ, ಆಲ್ಲಿ **ಬೋದ್ಧಾ** ಎಂದು ವ್ಯಾಖ್ಯಾನಮಾಡಿರುತ್ತಾರೆ. ಪೂರ್ವಾರ್ಧದಲ್ಲಿ **ಜ್ಞೋಽತಏವ** ಎಂಬ ಸೂತ್ರಾಭಿಪ್ರಾಯವು ; ಉತ್ತರಾರ್ಧದಲ್ಲಿ **ಕರ್ತಾಶಾಸ್ತ್ರಾರ್ಥವತ್ತ್ವಾತ್** ಎಂಬ ಸೂತ್ರಾಭಿಪ್ರಾಯವು. ||೧೮||

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಕರ್ಮವಿಷಯವಾದ ಜ್ಞಾನವೂ, ಜ್ಞೇಯಶಬ್ದದಿಂದ ಹೇಳಲ್ಪಟ್ಟ ಕರ್ಮವೂ, ಪರಿಜ್ಞಾತಾ ಮತ್ತು **ಕರ್ತಾ** ಶಬ್ದಗಳಿಗೆ **ಹೇಳಲ್ಪಟ್ಟ** ಕರ್ಮಾನುಷ್ಠಾನವನ್ನು ತಿಳಿದು ಅನುಷ್ಠಿಸುವ ಅಧಿಕಾರಿ ಈ ಶ್ಲೋಕದಲ್ಲಿ **ಜ್ಞಾನಂ, ಕರ್ಮಚ, ಕರ್ತಾಚ** ಎಂಬುದರಿಂದ ಅನುವಾದ ಮಾಡಲ್ಪಟ್ಟು ಹೀಗೆ ಈ ಮೂರೂ ಸಾತ್ವಿಕ **ರಾಜಸ ತಾಮಸ** ಗುಣಭೇದದಿಂದ ಮೂರು ವಿಧವು, ಅವುಗಳ ವಿಷಯವನ್ನು ಕುರಿತು **ತಿಳಿಸುತ್ತೇನೆ ಕೇಳೆಂದು** ಹೇಳುತ್ತಾರೆ. ಹಿಂದೆ **ಜ್ಞೇಯಂ** ಎಂಬುದು ಕರ್ಮವೇ ಆದುದರಿಂದ, ಅದಕ್ಕೆ ಬದಲಾಗಿ **ಕರ್ಮ** ಎಂಬ ಪ್ರಯೋಗವೂ, ಅಲ್ಲಿರುವ ಪರಿಜ್ಞಾತಾವೇ ಅನುಷ್ಠಾತೃವಾಗಿ **ಕರ್ತಾ**ವಾದುದರಿಂದ ಇಲ್ಲಿ **ಕರ್ತಾ** ಎಂಬ ಪ್ರಯೋಗವೂ ಎಂದು ಭಾವಿಸತಕ್ಕದ್ದು. **ಜ್ಞಾನಂ**-ಮಾಡಬೇಕಾಗಿರುವ ಕರ್ಮದ ಜ್ಞಾನವೂ, **ಕರ್ಮಚ**-ಆ ಮಾಡಬೇಕಾದ ಕರ್ಮವೂ, **ಕರ್ತಾಚ**-ಕರ್ಮ ಮಾಡುವವನೂ ಸಹ, **ಗುಣಭೇದತಃ**-ಪೂರ್ವಕರ್ಮವಾಸನಾನುಗುಣವಾಗಿ ಉಂಟಾದ ಶರೀರದ ಸಾತ್ವಿಕ ರಾಜಸತಾಮಸ ಗುಣಗಳ ಭೇದಮೂಲಕವಾಗಿ, **ತ್ರಿಧೈವ**-ಹಿಂದೆ ಆಹಾರ ಶ್ರದ್ಧಾ ಮೊದಲಾದವುಗಳನ್ನು ಹೇಳಿದ ಹಾಗೆಯೇ ಇವು ಕೂಡ ಮೂರು ಮೂರೂ ವಿಧವಾಗಿರುವುಗಳೇ, ಎಂದು **ಪ್ರೋಚ್ಯತೇ**-ಹೇಳಲ್ಪಡುತ್ತದೆ. ಆಹಾರಾದಿಗಳ ವಿಷಯದಲ್ಲಿ ಯಥಾವತ್ತಾಗಿ ನಿನಗೆ ಉಪದೇಶಿಸಿದ ರೀತಿಯಲ್ಲೇ, **ತಾನ್ಯಪಿ**-ಅವುಗಳನ್ನೂ ಸಹ, **ಗುಣಸಂಖ್ಯಾನೇ**-ಈ ಸಾತ್ವಿಕ **ರಾಜಸ ತಾಮಸ** ಗುಣಗಳ ವಿವೇಚನೆಯಲ್ಲಿ, **ಯಥಾವತ್**-ಅವುಗಳು ಹೇಗೆ ಹೇಗೆ ಇವೆಯೋ ಹಾಗೆಯೇ **ಶೃಣು**-ಹೇಳುತ್ತೇನೆ ಕೇಳು, ಹಿಂದೆ ೧೪ನೆಯ ಗುಣತ್ರಯ ವಿಭಾಗಾಧ್ಯಾಯದಲ್ಲಿ

**ಭಾ. ಕರ್ತವ್ಯ ಕರ್ಮ ವಿಷಯಂ ಜ್ಞಾನಂ, ಮನುಷ್ಠೀಯಮಾನಂಚಕರ್ಮ, ತಸ್ಯಾನುಷ್ಠಾತಾಚ, ಸತ್ವಾದಿಗುಣ ಭೇದತ ಸ್ತ್ರಿಧೈವ ಪ್ರೋಚ್ಯತೇ ; ಗುಣಸಂಖ್ಯಾನೇ-ಗುಣ ಕಾರ್ಯಗಣನೇ, ಯಥಾವಚ್ಛೃಣುತಾನ್ಯಪಿ-ತಾನಿಗುಣತೋ ಭಿನ್ನಾನಿ ಜ್ಞಾನಾದೀನಿ ಯಥಾವಚ್ಛೃಣು ||೧೯||**

---

ಕೆಲವೆಲ್ಲಾ ಸಾತ್ವಿಕ ರಾಜಸ ತಾಮಸ ಗುಣಬೇಧದಿಂದ ಭಿನ್ನಭಿನ್ನವಾಗಿವೆ ಎಂದು ಹೇಗೆ ತಿಳಿಸಿದೆನೋ, ಅದೇ ಮೇರಿಗೇನೇ ಈ ಕರ್ತವ್ಯಕರ್ಮದ ಜ್ಞಾನವೂ, ಆ ಕರ್ಮವೂ, ಅದರ ಅನುಷ್ಠಾತಾ ಸಹ ಸಾತ್ವಿಕ ರಾಜಸ ತಾಮಸ ಗುಣಭೇದದಿಂದ ಮೂರು ಮೂರು ವಿಧವಾಗಿ ಹೇಗೆ ಭಿನ್ನವೆಂಬುದನ್ನು ಅವುಗಳ ಸ್ವರೂಪವನ್ನನುಸರಿಸಿ ವಿಸ್ತರಿಸಿ ಹೇಳುತ್ತೇನೆ, ಕೇಳು ಎಂದು ಹೇಳುತ್ತಾರೆ. ಇಲ್ಲಿ ಜ್ಞಾನಂ ಎಂದರೆ ಪರಮಾತ್ಮ ವಿಷಯಕ ಅಥವಾ ಜೀವಾತ್ಮ ವಿಷಯಕಜ್ಞಾನವೆಂದು ಅರ್ಥಮಾಡದೆ, ಕರ್ಮಮಾಡುವದಕ್ಕೆ ಹೇತುಭೂತವಾದ ಜ್ಞಾನವೆಂದು ಹೇಳಲು ಕಾರಣವೇನು ಎಂದಾಕ್ಷೇಪಿಸಿದರೆ, ಕರ್ಮಚೋದನಕ್ಕೆ ಬೇಕಾದ ಜ್ಞಾನವೆಂದು ಹೇಳಿರುವದರಿಂದ ಬೇರೆ ವಿಧವಾಗಿ ಅರ್ಥಮಾಡಲು ಸಾಧ್ಯವಿಲ್ಲವು. ಇದು ಹಿಂದೆಯೂ ಗೀ. ೪-೧೫ನೆಯ ಶ್ಲೋಕವಂದ " **ಏವಂಜ್ಞಾತ್ವಾಕೃತಂ ಕರ್ಮಪೂರ್ವೈರಪಿ ಮುಮುಕ್ಷುಭಿಃ | ಕುರು ಕರ್ಮೈವತಸ್ಮಾತ್ತ್ವಂ** " ಎಂಬಲ್ಲಿಯೂ ಉಪಪಾದಿತವು.

**ಭಾಷ್ಯಾರ್ಥವು**—ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ, ಕರ್ಮವಿಷಯವಾದ ಜ್ಞಾನವೂ, ಜ್ಞೇಯ ಕರ್ಮಶಬ್ದಗಳಿಗೆ ಹೇಳಲ್ಪಟ್ಟ ಕರ್ಮವೂ, ಮತ್ತು ಪರಿಜ್ಞಾತಾವಾಗಿ ಅನಂತರ ಕರ್ತಾವಾಗಿ ಹೇಳಲ್ಪಟ್ಟ ಅಧಿಕಾರಿಯೂ, ಅವೇ ಈ ಶ್ಲೋಕದಲ್ಲಿ ಜ್ಞಾನಂ ಕರ್ಮಚ ಕರ್ತಾಚ ಎಂದು ಹೇಳಲ್ಪಟ್ಟು, ಈ ಮೂರೂ ಗುಣಭೇದದಿಂದ ಸಾತ್ವಿಕ ರಾಜಸ ತಾಮಸಗಳಾಗಿ ಮೂರು ಮೂರು ವಿಧಗಳೆಂದು ವಿವೇಕಿಸಿ ಹೇಳಿ, ಅದನ್ನು ಸಾವಧಾನದಿಂದ ಕೇಳು ಎನ್ನುತ್ತಾರೆ. ಈ ಶ್ಲೋಕವು ಪ್ರತಿಜ್ಞಾವಾಕ್ಯವಾಗಿ, ಅವುಗಳ ಗುಣಭೇದಗಳನ್ನು ಮುಂದೆ ಒಂಭತ್ತು ಶ್ಲೋಕಗಳ ಮೂಲಕ ೨೮ನೆಯ ಶ್ಲೋಕಾಂತ್ಯದವರೆಗೂ ಉಪಪಾದಿಸಿ ಹೇಳುತ್ತಾರೆ. ಹಿಂದಿನ ಶ್ಲೋಕದಲ್ಲಿ **ಕರಣಂ**-ಎಂದು ಕಾರ್ಯಸಾಮಗ್ರಿಯು ಹೇಳಲ್ಪಟ್ಟಿತಲ್ಲಾ ಅದರ ವಿಷಯವು ಹೇಗೆ ಎಂದರೆ ಅದು ಕರ್ಮದಲ್ಲೇ ಅಡಗಿದುದು ಎಂದು ಭಾವಿಸತಕ್ಕದ್ದಾಗಿರುತ್ತದೆ—ಮೂಲದ ಜ್ಞಾನಶಬ್ದಾರ್ಥವೇನೆಂದರೆ **ಕರ್ತವ್ಯವಿಷಯಜ್ಞಾನಂ**-ಮಾಡಬೇಕಾಗಿರುವ ಯಜ್ಞಾದಿ ಕರ್ಮದ ವಿಷಯವಾದ ಜ್ಞಾನವೂ, **ಕರ್ಮ**ವೆಂದರೆ **ಅನುಷ್ಠೀಯಮಾನಂಚಕರ್ಮ**-ಅನುಷ್ಠಿಸಬೇಕಾಗಿರುವ ಕರ್ಮವೂ, **ಕರ್ತಾ** ಎಂದರೆ **ತಸ್ಯಾನುಷ್ಠಾತಾಚ**-ಆ ಕರ್ಮಾನುಷ್ಠಾನ ಮಾಡುವ ಅಧಿಕಾರಿಯೂ ಸಹ, **ಸತ್ವಾದಿಗುಣಭೇದತಃ**-ಸತ್ವರಜಸ್ತಮೋ ಗುಣಗಳ ಭೇದ ಮೂಲಕವಾಗಿ, **ತ್ರಿಧೈವ**-ಮೂರು ಮೂರು ವಿಧಗಳೇ ಎಂದು, **ಪ್ರೋಚ್ಯತೇ**-ಹೇಳಲ್ಪಟ್ಟಿರುತ್ತದೆ. **ಗುಣಸಂಖ್ಯಾನೇ** ಎಂದರೆ **ಗುಣಕಾರ್ಯಗಣನೇ**-ಸಾತ್ವಿಕ ರಾಜಸ ತಾಮಸ ಗುಣಗಳಿಂದುಂಟಾಗುವ ಕಾರ್ಯದ ಪರಿಗಣನೆಯಲ್ಲಿ, **ಯಥಾವಚ್ಛೃಣುತಾನ್ಯಪಿ** ಎಂದರೆ **ತಾನಿ ಗುಣತೋಭಿನ್ನಾನಿ ಜ್ಞಾನಾದೀನಿ ಯಥಾವಚ್ಛೃಣು**-ಸಾತ್ವಿಕ ರಾಜಸ ತಾಮಸ ಗುಣಗಳ ಮೂಲಕ ಬೇರೆಬೇರೆಯಾಗಿ ತೋರುವ ಆ ಜ್ಞಾನಕರ್ಮಕರ್ತೃಗಳನ್ನು ಆ ಗುಣಭೇದಗಳಿಂದ ಅವು ಹೇಗೆ ಇವೆಯೋ ಹಾಗೆಯೇ ತಿಳಿಸುವೆನು. ಸಾವಧಾನದಿಂದ ಕೇಳು. ಇಲಿ **ಗುಣಸಂಖ್ಯಾನೇ** ಎಂಬುದಕ್ಕೆ ಸಾಂಖ್ಯಸಿದ್ಧಾಂತಪ್ರಕ್ರಿಯೆಯು ಸಂಖ್ಯಾನಶಬ್ದದಿಂದ ಹೇಳಲ್ಪಟ್ಟಿತೆಂದು ಭಾವಿಸುವರು ; ಇದಕ್ಕೆ ಪ್ರಮಾಣವೂ ಇಲ್ಲದೆ, ಆಕಾಪಿಲ ಸಿದ್ಧಾಂತವು ಬ್ರಹ್ಮಸೂತ್ರಗಳಲ್ಲಿ ಖಂಡಿಸಲ್ಪಟ್ಟು, ಆ ಸಿದ್ಧಾಂತವು ಅಪ್ರಸ್ತುತವಾಗಿಯೂ ಅನುಪಯೋಗವಾಗಿಯೂ ಇರುವದರಿಂದ ಆ ಅರ್ಥವು ಇಲ್ಲಿ ಅನುಪಾದೇಯವು ; ಆದುದರಿಂದ **ಗುಣ**

**ಮೂ. ಸರ್ವಭೂತೇಷು ಯೇನೈಕಂ ಭಾವ ಮವ್ಯಯ ಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಮ್ ॥೨೦॥**

---

**ಸಂಖ್ಯಾನೇ** ಎಂಬುದಕ್ಕೆ **ಗುಣಕಾರ್ಯಗಣನೇ** ಎಂದು ಅರ್ಥ ಮಾಡಿರುತ್ತಾರೆ. ಇಲ್ಲಿ **ಯಥಾವತ್** ಎಂಬ ಶಬ್ದವು ಸಾತ್ವಿಕಾದಿ ಗುಣಗಳಿಂದ ಹೇಗೆ ಭಿನ್ನವಾಗಿರುತ್ತದೋ ಹಾಗೆ ಎಂಬ ಅಭಿಪ್ರಾಯವನ್ನು ಸೂಚಿಸುವದಕ್ಕಾಗಿ **ಗುಣತೋಭಿನ್ನಾನಿ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಮುಂದೆ ಒಂಭತ್ತು ಶ್ಲೋಕಗಳಿಂದ ಹೇಳಲ್ಪಡುವದಕ್ಕೆ ಇದು ಪ್ರತಿಜ್ಞಾರೂಪ ಶ್ಲೋಕವು. **ಶೃಣು** ಎಂದು ಕೇಳುತ್ತಾ ಇರುವವನನ್ನೇ ಕುರಿತು ಹೇಳಿದರೆ ಸಾವಧಾನದಿಂದ ಚನ್ನಾಗಿ ಕೇಳು ಎಂಬ ಅಭಿಪ್ರಾಯವು ಸೂಚಿತವು. ॥೧೯॥

**ಮೂಲಕ್ಕೆ ಅರ್ಥವು**—ಕರ್ಮಚೋದನವನ್ನು ಒಳಗೊಂಡಿರುವ ಜ್ಞಾನವು ಸಾತ್ವಿಕ ರಾಜಸ ತಾಮಸವೆಂದು ಹಿಂದಿನ ಶ್ಲೋಕದಲ್ಲಿ ಹೇಳಿ, ಈ ಶ್ಲೋಕದಲ್ಲಿ ಕರ್ಮಚೋದನವನ್ನು ಒಳಗೊಂಡಿರುವ ಸಾತ್ವಿಕಜ್ಞಾನವು ಎಂತಾದ್ದೆಂದು ಹೇಳಲ್ಪಡುತ್ತದೆ. **ಸರ್ವಭೂತೇಷು** ಎಂದರೆ ಸಮಸ್ತರಾದ ಮನುಷ್ಯರಲ್ಲೂ, ಅವರು ಎಂತವರೆಂದರೆ, **ವಿಭಕ್ತೇಷು**-ಜನ್ಮಾದಿಗಳಿಂದ ವರ್ಣಾಶ್ರಮ ಧರ್ಮಗಳ ಮೂಲಕ ಬೇರೆಬೇರೆಯಾಗಿರುವವರಲ್ಲಿ, **ಯೇನ**-ಯಾವ ಕರ್ಮಚೋದನಕ್ಕೆ ಬೇಕಾದ ಜ್ಞಾನದಿಂದ, **ಏಕಂಭಾವಂ**-ಆ ಶರೀರಗಳಲ್ಲೆಲ್ಲಾ ಇರುವ ಆತ್ಮವಸ್ತುವು ಜ್ಞಾನೈಕಾಕಾರತೆಯಿಂದ ಒಂದೇ ಎಂಬುದನ್ನು, ಅದು ಇನ್ನೂ ಎಂತಾದ್ದೆಂದರೆ. **ವಿಭಕ್ತೇಷು ಅವಿಭಕ್ತಂ**-ಭಿನ್ನಭಿನ್ನ ಶರೀರದಲ್ಲಿದ್ದರೂ, ಭೇದವಿಲ್ಲದೆ ಒಂದೇ ವಿಧವಾಗಿ ಅಣುವಾಗಿ ಜ್ಞಾನಸ್ವರೂಪಗುಣವುಳ್ಳದಾಗಿಯೂ, **ಅವ್ಯಯಂ**-ನಾಶಯುಕ್ತವಾದ ಶರೀರದೊಂದಿಗೆ ಸೇರಿದ್ದರೂ ಯಾವ ವಿಧವಾದ ಪರಿಣಾಮಗಳಿಲ್ಲದೆ ಸ್ವರೂಪವು ಜ್ಞಾನೈಕಾರತೆಯನ್ನು ಹೊಂದಿ ಸತ್ಯವಾಗಿರುವದನ್ನಾಗಿಯೂ, **ಈಕ್ಷತೇ**-ತಿಳಿಯಲ್ಪಡುತ್ತದೋ, **ತಜ್ಜ್ಞಾನಂ**-ಅಂತಹ ಕರ್ಮಚೋದನವನ್ನೊಳಗೊಂಡಿರುವ ಜ್ಞಾನವನ್ನು, **ಸಾತ್ವಿಕಂವಿದ್ಧಿ**-ಸಾತ್ವಿಕವಾದುದೆಂದು ತಿಳಿ. ವರ್ಣಾಶ್ರಮಭೇದಗಳಿಂದ ಭಿನ್ನಭಿನ್ನಗಳಾದ ಶರೀರಗಳಲ್ಲಿ ಜೀವಾತ್ಮರು ಇದ್ದಾರೆ. ಈ ಆತ್ಮರೆಲ್ಲಾ "ನಿತ್ಯೋ ನಿತ್ಯಾನಾಂ" (          ) ಎಂಬ ಶ್ರುತಿಮೂಲಕ ಭಿನ್ನರಾದರೂ, ಸ್ವರೂಪತಃ ಮತ್ತು ಸ್ವಭಾವತಃ ಒಂದೇಯಾಗಿರುವದೆಂಬ ಜ್ಞಾನವು ಕರ್ಮವನ್ನು ಮಾಡುವಾಗ ಇರತಕ್ಕದ್ದು. ಆತ್ಮರೆಲ್ಲಾ ನಾಶರಹಿತರಾಗಿರುವ ಭಾವವು ತೋರಿಬರುವದರಿಂದ ಕರ್ಮಚೋದನಕ್ಕೆ ಬೇಕಾದ ಜ್ಞಾನವೂ ಸಹ ಶಾಶ್ವತಸುಖ ಸಂಪಾದಕವಾಗಿಯೂ, ವ್ಯಯಯುಕ್ತವಾಗಿ ಅಲ್ಪಾಸ್ಥಿರಗಳಾಗಿಯೂ ಫಲಸಂಪಾದಕ ಕರ್ಮದಲ್ಲಿ ಪ್ರವರ್ತಸಕೂಡದಾಗಿಯೂ ಇರಬೇಕೆಂಬುದು ಉಪದಿಷ್ಟವು. **ಅವ್ಯಯ** ಶಬ್ದದಿಂದ ಇನ್ನೊಂದು ಭಾವವು ಸೂಚಿತವು; ವ್ಯಯವೆಂದರೆ ಪರಿಣಾಮವನ್ನು ಹೊಂದುವ ಶರೀರದಲ್ಲಿದ್ದರೂ, ತಾನು ನಿತ್ಯನಾದುದರಿಂದ ಎಂದೂ ಅರ್ಥ ಮಾಡಬಹುದು. **ಏಕಂ** ಎಂಬುದರಿಂದ ಬದ್ಧಜೀವರುಗಳು ಅಸಂಖ್ಯಾತರಾದರೂ ಮತ್ತು ಅವರಲ್ಲಿರುವ ಆತ್ಮರುಗಳೂ ಸಹ ಅನೇಕರೆಂದು ಹಿಂದೆ ಗ್ರಂಥದಲ್ಲೂ "ನಿತ್ಯೋನಿತ್ಯಾನಾಂ" (          ) ಎಂಬ ಶ್ರುತಿಯಲ್ಲೂ ಹೇಳಲ್ಪಟ್ಟಿದ್ದರೂ, ಜ್ಞಾನಸ್ವರೂಪ ಸ್ವಭಾವವುಳ್ಳವರಾಗಿ ಜ್ಞಾನೈಕಾಕಾರದಲ್ಲಿರುತ್ತಾರೆಂಬ ಜ್ಞಾನವಿರಬೇಕೆಂದು ಹೇಳಲ್ಪಟ್ಟಿತು. ಈ ಅಭಿಪ್ರಾಯವು ಹಿಂದೆಯೇ ಅನೇಕಸಲ ಉಪಪಾದಿತವಾಗಿರುವದರಿಂದ ಅದರ ಅನುವಾದವೆಂದು ಭಾವಿಸತಕ್ಕದ್ದು. ಎಲ್ಲಿ ಹೇಳಲ್ಪಟ್ಟಿದೆ ಎಂದರೆ **"ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ** ಗವಿ **ಹಸ್ತಿನಿ । ಶುನಿಚೈವ ಶ್ವಪಾಕೇಚ ಪಣ್ಡಿತಾ ಸ್ಸಮದರ್ಶಿನಃ"** (ಗೀ. ೫.೧೮) ಎಂಬ, **ನಿರ್ದೋಷಂಹಿ ಸಮಂಬ್ರಹ್ಮ** (ಗೀ. ೫. ೧೯) ಎಂಬಿವೇ ಮೊದಲಾದ ಸ್ಥಳಗಳಲ್ಲಿ ಉಪಪಾದಿತವು. ಹೀಗೆ ಹೇಳಿರುವದರಿಂದ ತಾನು ಮಹಾ ತೇಜಸ್ವಿಯಾಗಿ ದೋಷಗಂಧರಹಿತನು; ಅಂತಹ ಪರಿಶುದ್ಧ

**ಭಾ. ಬ್ರಾಹ್ಮಣ ಕ್ಷತ್ರಿಯ ಬ್ರಹ್ಮಚಾರಿ ಗೃಹಸ್ಥಾದಿರೂಪೇಣ ವಿಭಕ್ತೇಷು ಸರ್ವೇಷು ಭೂತೇಷು ಕರ್ಮಾಧಿಕಾರಿಷು, ಯೇನ-ಜ್ಞಾನೇನ-ಏಕಂ-ಆತ್ಮಾಖ್ಯಂ ಭಾವಂ, ತತ್ತ್ವಾತ್ಮವಿಭಕ್ತಂ-ಬ್ರಾಹ್ಮಣತ್ವಾದ್ಯನೇಕಾಕಾರೇಷ್ವಪಿ ಭೂತೇಷು ಸಿತ ದೀರ್ಘಾದಿವಿಭಾಗವತ್ಸು, ಜ್ಞಾನಾಕಾರೇ ಆತ್ಮನಿ ವಿಭಾಗರಹಿತಮ್,ಅವ್ಯಯಂ-**

ನಾಗಿ ಮಂದಾಕಿನೀ ನದಿಯಲ್ಲಿ ಮಿಂದು ನಿರ್ಮಲವಾಗಿರುವ ಸ್ವಭಾವವುಳ್ಳವನ ಹಾಗೆ ಇರುವವನು, ಕೆಸರುಗುಂಡಿಯಲ್ಲಿ ಬಿದ್ದು ಕಲುಷಿತವಾಗುವ ಹಾಗೆ ಮಾಡಿಕೊಳ್ಳುವುದು ನ್ಯಾಯವೇ ಎಂಬ ವಿವೇಕಜ್ಞಾನ ಉಂಟಾಗಿ, ಅಂತಹ ನಿಷಿದ್ಧಾಚರಣೆಯಲ್ಲಿ ಪ್ರವರ್ತಿಸದೆ ಪರಮಪುರುಷನಿಗೆ ಹಿತವಾದ ಕಾರ್ಯದಲ್ಲಿ ಪ್ರವರ್ತಿಸಲು ಈ ಸಾತ್ವಿಕಜ್ಞಾನವು ಸಹಕಾರಿಯಾಗುತ್ತದೆಂಬುದು ಸೂಚಿತವು. ಮತ್ತು ಇನ್ನೂ ಎಂತಹ ಜ್ಞಾನವಿರಬೇಕೆಂದರೆ ವಿಭಕ್ತೇಷು ಅವಿಭಕ್ತವಾದುದು ಈ ಆತ್ಮಾ ಎಂಬ ಜ್ಞಾನವಿರಬೇಕು. ನಾನಾವಿಧ ದೇಹಸಂಬಂಧವಿದ್ದು ಬೇರೆಬೇರೆಯಾಗಿರುವ ಹಾಗೆ ವಿಭಕ್ತವಾಗಿ ತೋರಿದರೂ, ಪರಮಾತ್ಮನಿಗೆ ಶರೀರವಾಗಿ ಅವಿಭಕ್ತವು; ಪರಮಾತ್ಮನಿಗೆ ಅಪೃಥಕ್ಸಿದ್ಧ ವಿಶೇಷಣವುಎಂಬ ಜ್ಞಾನವು; ಹೀಗೆ ಎಲ್ಲವೂ ಪರಮಾತ್ಮನಿಗೆ ಶರೀರವಾಗಿದೆಎಂಬ ಜ್ಞಾನದಿಂದಲೂ ಹಿತಾಚರಣೆಯನ್ನು ಮಾಡುವನೇ ವಿನಾ, ಜುಗುಪ್ಸಿತವಾಗಿ ಪರಮಪುರುಷನಿಂದ ನಿಗ್ರಹವನ್ನು ಸಂಪಾದಿಸಿಕೊಳ್ಳುವ ಪ್ರವೃತ್ತಿಗಳಲ್ಲಿ ಪ್ರವರ್ತಿಸನು ಎಂದು ಹೇಳಿದಂತಾಯಿತು. ಈ ಸಾತ್ವಿಕ ಕರ್ಮಾರಂಭಕಜ್ಞಾನ ಮೂಲಕವಾಗಿ **ಸಾಧುಕಾರೀ ಸಾಧುರ್ಭವತಿ,** ತುಂಬಾ ಸಾತ್ವಿಕನಾಗುವನೆಂಬ ಶ್ರುತ್ಯರ್ಥವು ಇಲ್ಲಿ ಉಪಪಾದಿಸಲ್ಪಟ್ಟಿತು. ಇಂತಹ ಸಾತ್ವಿಕಜ್ಞಾನವು ಕರ್ಮಾರಂಭಕ್ಕೆ ಆವಶ್ಯಕವೆಂಬ ಭಾವವು. ಇಂತಹ ಸಾತ್ವಿಕ ಜ್ಞಾನವು ಇದ್ದುದಾದರೆ ತಾನೂ ಸಾತ್ವಿಕನಾಗಿ. ಸತ್ಕರ್ಮನಿರತನಾಗಿ ಮಹಾಪರಿಶುದ್ಧನಾಗಿ, ಉಪಾಯಭೂತವಾದ ಪರಮಾತ್ಮೋಪಾಸನಕ್ಕೆ ಬೇಕಾದ ಪರಾಭಕ್ತಿಯು ಸಿದ್ಧಿಸುತ್ತದೆಂದು ಮುಂದೆ ೫೫ನೆಯ ಶ್ಲೋಕದಲ್ಲಿ ಹೇಳಲ್ಪಡುತ್ತದೆ.

**ಭಾಷ್ಯಾರ್ಥವು**—ಸಾತ್ವಿಕಕರ್ಮಾನುಷ್ಠಾನಕ್ಕೆ ಆ ವೇಳೆಯಲ್ಲಿ ಬೇಕಾದ ಸಾತ್ವಿಕ ಜ್ಞಾನವು ಎಂತಾದ್ದೆಂಬುದು ಉಪದೇಶಿಸಲ್ಪಡುತ್ತದೆ. ಇದರಿಂದ ನಾವು ತಿಳಿಯತಕ್ಕ ಅಂಶವೇನೆಂದರೆ, ಕರ್ಮಾರಂಭಕ್ಕೆ ಬೇಕಾದ ಜ್ಞಾನವೂ ಸಹ ಪೂರ್ವಕರ್ಮಾನುಸಾರಗುಣ ಪಾರತಂತ್ರ್ಯವುಳ್ಳದು ಎಂಬುದನ್ನು ಇಲ್ಲಿ ಗ್ರಹಿಸಬಹುದು. ಮೊದಲು ಮೂಲದ **ಸರ್ವಭೂತೇಷು** ಎಂಬುದಕ್ಕೆ ವ್ಯಾಖ್ಯಾನ ಬರೆಯುತ್ತಾರೆ. **ಬ್ರಾಹ್ಮಣಕ್ಷತ್ರಿಯಾದಿ** ವರ್ಣಭೇದಗಳೇನು, ಮತ್ತು **ಬ್ರಹ್ಮಚಾರೀಗೃಹಸ್ಥಾದಿ** ರೂಪದಿಂದ ಆಶ್ರಮಭೇದವೇನು, **ವಿಭಕ್ತೇಷು ಸರ್ವೇಷು ಭೂತೇಷು**-ಹೀಗೆ ಭಿನ್ನವಾಗಿ ಸಮಸ್ತಬದ್ಧ ಚೇತನರಲ್ಲೂ, ಇಲ್ಲಿ ತಿರ್ಯಗಾದಿಗಳು **ಭೂತೇಷು** ಎಂಬ ಪದದಲ್ಲಿ ಅಂತರ್ಗತವಾಗಿದ್ದರೂ, ಜ್ಞಾನಶೂನ್ಯವಾದವುಗಳಾದುದರಿಂದ ಇಲ್ಲಿ ಮುಖ್ಯವಾಗಿ ಮನುಷ್ಯರೇ ಹೇಳಲ್ಪಟ್ಟರು ಎಂದು ತಿಳಿಸುವದಕ್ಕಾಗಿ, **ಕರ್ಮಾಧಿಕಾರಿಷು**-ಜ್ಞಾನವನ್ನು ಪ್ರಯೋಗಿಸಿ ತನ್ಮೂಲಕ ಕರ್ಮ ಮಾಡುವವರಲ್ಲಿ, **ಯೇನ** ಎಂದರೆ **ಜ್ಞಾನೇನ**-ಯಾವ ಜ್ಞಾನದಿಂದ, **ಏಕಂ** ಎಂದರೆ **ಆತ್ಮಾಖ್ಯಂಭಾವಂ**-ಆತ್ಮಾ ಎಂದು ಹೇಳಿಸಿಕೊಳ್ಳುವ ಭಾವವನ್ನೂ, ಮತ್ತು **ತತ್ತ್ವಾತ್ಮವಿಭಕ್ತಂ** ಎಂದರೆ **ಬ್ರಾಹ್ಮಣತ್ವಾದ್ಯನೇಕಾಕಾರೇಷ್ವಪಿ**-ಬ್ರಾಹ್ಮಣ ಕ್ಷತ್ರಿಯ ಮೊದಲಾದ ಅನೇಕಗಳಾದ ಆಕಾರಗಳುಳ್ಳವುಗಳಾಗಿ, **ಸಿತದೀರ್ಘಾದಿ ವಿಭಾಗವತ್ಸು**-ಕಪ್ಪು ಬಿಳುಪು ದೀರ್ಘ ಮತ್ತು ಹ್ರಸ್ವ ಇವೇ ಮೊದಲಾದ ಭೇದಗಳುಳ್ಳ, **ಭೂತೇಷು**-ಪ್ರಾಣಿಗಳಲ್ಲಿದ್ದರೂ, **ಜ್ಞಾನಾಕಾರೇ**-ಜ್ಞಾನೈಕಾಕಾರನಾಗಿರುವ ಎಂದರೆ ಜ್ಞಾನಸ್ವರೂಪ ಸ್ವಭಾವಗಳಿಂದ ಒಂದೇ ವಿಧವಾದ ಸ್ವರೂಪವುಳ್ಳ, **ಆತ್ಮನಿ**-ಜೀವಾತ್ಮನಲ್ಲಿ (ಜಾತ್ಯೇಕವಚನವು) **ವಿಭಾಗರಹಿತಮ್**-ಭೇದವಿಲ್ಲದಿರುವನನ್ನಾಗಿಯೂ, ಮತ್ತು **ಅವ್ಯಯಂ**-ವ್ಯಯ

**ವ್ಯಯ ಸ್ವಭಾವೇಷ್ವಪಿ ಬ್ರಾಹ್ಮಣಾದಿ ಶರೀರೇಷ್ವವ್ಯಯಮ್ – ಅವಿಕೃತಂ, ಫಲಾದಿ ಸಙ್ಗಾನರ್ಹಂಚ ಕರ್ಮಾಧಿಕಾರ ವೇಲಾಯಾ ಮೀಕ್ಷತೇ, ತಜ್ಞಾನಂ ಸಾತ್ತ್ವಿಕಂ ವಿದ್ಧಿ ||೨೦||**

---

**ಸ್ವಭಾವೇಷ್ವಪಿ**–ನಾಶಕ್ಕೆ ಯೋಗ್ಯವಾದ ಶರೀರದಲ್ಲಿದ್ದರೂ ಎಂದರೆ ಮೇಲೆ ಹೇಳಿದಹಾಗೆ ಶರೀರಗಳಲ್ಲಿದ್ದರೂ, **ಅವ್ಯಯಂ** . ಎಂದರೆ **ಅವಿಕೃತಂ** - ಸ್ವರೂಪದಲ್ಲಿ ವಿಕಾರವಿಲ್ಲದೆ ಇರುವ ನನ್ನಾಗಿಯೂ, **ಫಲಾದಿ ಸಙ್ಗಾನರ್ಹಂಚ ಕರ್ಮಾಧಿಕಾರವೇಲಾಯಾಂಚ**-ಅಕಾರಣದಿಂದ ಕರ್ಮಾಧಿಕಾರಿಯಾಗಿರುವ ವೇಳೆಯಲ್ಲಿ ಎಂದರೆ ಕರ್ಮವನ್ನು ಮಾಡುವ ಕಾಲದಲ್ಲಿ, ಈ ಅಲ್ಪಾಸ್ಥಿರ ಫಲಾನುಭವಗಳಿಗೆ ಅನರ್ಹನಾಗಿರುವವನೆಂದಾಗಿಯೂ ಸಹ, **ಈಕ್ಷತೇ** – ನೋಡುತ್ತಾನೋ ಎಂದರೆ ತಿಳಿಯುತ್ತಾನೋ, **ತಜ್ಞಾನಂ** – ಅಂತಹ ಜ್ಞಾನವನ್ನು, **ಸಾತ್ವಿಕಂ ವಿದ್ಧಿ** – ಸಾತ್ವಿಕವಾದುದೆಂದು ತಿಳಿ. ಈ ಶ್ಲೋಕದಲ್ಲಿ **ಸರ್ವಭೂತೇಷು** ಎಂದು ಸಾಮಾನ್ಯವಾಗಿ ಹೇಳಿದ್ದರೂ, ಕಾರ್ಯಕ್ಕೆ ಬೇಕಾದ ಜ್ಞಾನವನ್ನು ಸಂಪಾದಿಸಿ ವಿವೇಕವನ್ನು ಹೊಂದುವವರು ಮಾತ್ರವೇ ಹೇಳಲ್ಪಟ್ಟು ತಿರ್ಯಗಾದಿಗಳು ಹೇಳಲ್ಪಡಲಿಲ್ಲವೆಂದು ತಿಳಿಸುವದಕ್ಕಾಗಿ **ಬ್ರಾಹ್ಮಣ ಕ್ಷತ್ರಿಯ ಬ್ರಹ್ಮಚಾರಿ ಗೃಹಸ್ಥಾದಿ ರೂಪೇಣ ವಿಭಕ್ತೇಷು ಸರ್ವೇಷು ಭೂತೇಷು** ಎಂಬ ವ್ಯಾಖ್ಯಾನವು. ವರ್ಣಾಶ್ರಮ ಭೇದಗಳಿರುವ ಸಮಸ್ತ ಜನರೂ ಸರ್ವಭೂತ ಶಬ್ದದಿಂದ ಹೇಳಲ್ಪಟ್ಟರೆಂಬ ಭಾವವು. ಇಲ್ಲಿ ಹೇಳಿರುವ **ಜ್ಞಾನ** ಶಬ್ದವು ಕರ್ಮಾಧಿಕಾರಿಗೆ ಕರ್ಮಾನುಷ್ಠಾನಕ್ಕಾಗಿ ಬೇಕಾದ ಜ್ಞಾನವೆಂದು ತಿಳಿಸುವದಕ್ಕಾಗಿ **ಕರ್ಮಾಧಿ ಕಾರಿಷು ಯೇನ ಜ್ಞಾನೇನ** ಎಂದು ಪ್ರಯೋಗಿಸಿರುತ್ತಾರೆ. ಇಲ್ಲಿ ಭಾವಶಬ್ದದಿಂದ ವಸ್ತುವು ಹೇಳಲ್ಪಟ್ಟಿತು. **ಏಕಂ ಭಾವಂ** ಎಂಬುದರಿಂದ ಸ್ವರೂಪ ಸ್ವಭಾವಗಳಿಂದ ಎಲ್ಲಾ ಆತ್ಮರೂ ಸಮವೆಂಬ ಅಭಿಪ್ರಾಯವು ಸೂಚಿಸಲ್ಪಟ್ಟಿತು ; ಆದುದರಿಂದ **ಜ್ಞಾನೇನೈಕಂ** ಎಂಬ ಪ್ರಯೋಗವು. ಇಲ್ಲಿ ಜ್ಞಾನಶಬ್ದಕ್ಕೆ ಮೇಲೆ ಹೇಳಿದ ಕರ್ಮಾಧಿಕಾರಕ್ಕೆ ಬೇಕಾದ ಜ್ಞಾನವೆಂಬರ್ಥವಲ್ಲವು ; ಸ್ವರೂಪ ಜ್ಞಾನವು ಸೂಚಿಸಲ್ಪಟ್ಟಿತು ; **ಏಕಂಭಾವಂ** ಎಂಬುದರಿಂದ ಅದ್ವೈತಾರ್ಥವಾದ ಇರುವದೆಲ್ಲಾ ಒಂದೇ ಆತ್ಮಾ ಎಂಬ ಭಾವವು ಹೇಳಲ್ಪಡಲಿಲ್ಲವು ; ಏಕೆಂದರೆ ಗೀತೋಪದೇಶವನ್ನಾರಂಭಿಸಿದ ಪ್ರಥಮಶ್ಲೋಕದಲ್ಲೇ ಜೀವಬಹುತ್ವವು **"ನಿತ್ಯೋನಿತ್ಯಾನಾಂ"** ಎಂಬ ಶ್ರುತ್ಯನುಸಾರವಾಗಿ ಪ್ರತಿಜ್ಞಾತವಾಗಿ ಹೇಳಲ್ಪಟ್ಟಿತು ; ಅಲ್ಲಿ **"ನತ್ವೇವಾಹಂ"** ಎಂಬಲ್ಲಿ ತ್ವಂ ಇಮೇ ಶಬ್ದಗಳಿಂದಲೇ ವ್ಯಕ್ತವು ; **"ಮನುಷ್ಯಾಣಾಂ ಸಹಸ್ರೇಷು"** ಇತ್ಯಾದಿಗಳಲ್ಲೂ ವ್ಯಕ್ತವು. ಜೀವಾತ್ಮರೆಲ್ಲಾ ಬೇರೆ ಬೇರೆ ಎಂಬ ಭಾವವು ಮುಂದಿನ ಶ್ಲೋಕದಲ್ಲಿ "**ನಾನಾಭಾವಾ**" ಎಂಬ ಪದದಿಂದಲೂ ಉಪಪಾದಿತವು. ಎಲ್ಲಾ ಶರೀರಗಳಲ್ಲಿರುವ ಆತ್ಮವರ್ಗವೆಲ್ಲಾ ಜ್ಞಾನೈಕಾಕಾರತೆಯಿಂದ ಸಮವೆಂಬುದು **"ವಿದ್ಯಾವಿನಯ ಸಂಪನ್ನೇ"** (ಗೀ. ೫. ೧೮.) ಎಂಬ ಶ್ಲೋಕದಲ್ಲಿ ವ್ಯಕ್ತವು : ಶರೀರಗಳು ವ್ಯತ್ಯಸ್ತಗಳಾಗಿರಬಹುದು ; ಅವುಗಳಲ್ಲಿರುವ ಆತ್ಮರುಗಳೆಲ್ಲಾ ಸ್ವರೂಪತಃ ಒಂದೇ ವಿಧವು. ಆದುದರಿಂದ ಸಿತ ದೀರ್ಘಾದಿ ವಿಭಾಗವುಳ್ಳವುಗಳು ಶರೀರಗಳು ; ಇವುಗಳನ್ನೆಲ್ಲಾ **ವಿಭಕ್ತೇಷು** ಎಂಬ ಪದದಿಂದ ತಿಳಿಸಿ, ಇವುಗಳಲ್ಲೆಲ್ಲಾ ಒಂದೇ ಸಮವಾಗಿರುವ ಆತ್ಮವರ್ಗವು **ಅವಿಭಕ್ತಂ** ಎಂಬುದರಿಂದ ಹೇಳಲ್ಪಟ್ಟಿತು. ಈ ಅಭಿಪ್ರಾಯವೇ ಅಮೃತಬಿಂದೂಪನಿಷತ್ತಿನಲ್ಲಿ **"ಗವಾಮನೇಕ ವರ್ಣಾನಾಂ ಕ್ಷೀರಸ್ಯ ತ್ವೇಕವರ್ಣತಾ"** ಅನೇಕ ವರ್ಣಗಳುಳ್ಳ ಗೋವುಗಳಲ್ಲೆಲ್ಲಾ ಇರುವ ಹಾಲು ಹೇಗೆ ಒಂದೇ ವರ್ಣವಾಗಿ ಒಂದೇ ಸ್ವರೂಪವುಳ್ಳದ್ದಾಗಿರುತ್ತದೋ, ಹಾಗೆಯೇ ಅನೇಕ ಭೇದಗಳಿರುವ ಶರೀರಗಳಲ್ಲಿರುವ ಆತ್ಮರೆಲ್ಲಾ ಸ್ವರೂಪತಃ ಒಂದೇ ಎಂದು ಹೇಳಲ್ಪಟ್ಟಿರುತ್ತದೆಂದು ಶ್ರೀ ದೇಶಿಕರವರು ಉದಾಹರಿಸಿರುತ್ತಾರೆ. ಹಿಂದೆ ಎರಡನೆಯ ಅಧ್ಯಾಯದಲ್ಲಿ (೨೪–೨೫)

**ಮೂ. ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾ ಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥೨೧॥**

---

ಜೀವಾತ್ಮನಿಗೆ ಪರಿಣಾಮವುಳ್ಳ ಶರೀರದಲ್ಲಿದ್ದರೂ ಆತನಿಗೆ ಪರಿಣಾಮವಿಲ್ಲವೆಂಬ ಅಭಿಪ್ರಾಯವನ್ನೇ ಅನುವಾದಮಾಡಿ ಹೇಳುವದಕ್ಕಾಗಿ ಅವ್ಯಯಂವೆಂದು ಈ ಶ್ಲೋಕದಲ್ಲಿ ಹೇಳಲ್ಪಟ್ಟ ಅದಕ್ಕೆ ವ್ಯಾಖ್ಯಾನವಾಗಿ **ವ್ಯಯ ಸ್ವಭಾವೇಷು ಶರೀರೇಷು ಅವಿಕೃತಂ** ಎಂದು ಹೇಳಲ್ಪಟ್ಟಿತು. ಹೀಗೆ ನಿತ್ಯನಾಗಿ ಶಾಶ್ವತನಾಗಿರುವವನು, ಅನಿತ್ಯವಾಗಿ ಅಶಾಶ್ವತವಾಗಿ ದುಃಖ ಮಿಶ್ರವಾಗಿರುವ ಅಲ್ಪಾಸ್ಥಿರ ಫಲಗಳಿಗೆ ಅರ್ಹನಾಗುವನೇ ? ಎಂದಿಗೂ ಇಲ್ಲವೆಂದು ಹೇಳುವದಕ್ಕಾಗಿ **ಫಲಾದಿಸಙ್ಗಾನರ್ಹಂ ಚ** ಎಂಬ ಭಾಷ್ಯವು. ಹೀಗೆ ತನ್ನ ಆತ್ಮಾ ಜ್ಞಾನೈಕಾಕಾರತೆಯಿಂದ ಮಹಾ ಪರಿಶುದ್ಧನಾಗಿ ತೇಜೋಮಯನಾಗಿ ಎಲ್ಲರಲ್ಲೂ ಸಮನೂ ಎಂದು ವ್ಯಯಯುಕ್ತವಾದ ಶರೀರದಲ್ಲಿದ್ದರೂ ಪರಿಣಾಮರಹಿತನಾಗಿ ಅವ್ಯಯನೂ, ಮತ್ತು ವ್ಯಯ ಸ್ವಭಾವವುಳ್ಳ ಫಲಾಕಾಂಕ್ಷೆ ಇಲ್ಲದವನೂ ಎಂದೂ, ಭಿನ್ನ ಭಿನ್ನಗಳಾದ ಶರೀರಗಳಲ್ಲಿದ್ದರೂ ಪರಮಾತ್ಮನೊಂದಿಗೇನೇ ಇರಲು ಅರ್ಹನಾಗಿ ಆತನ ಹಾಗೆ ಜ್ಞಾನಸ್ವರೂಪನಾಗಿ ಜ್ಞಾನಗುಣಕನಾಗಿರುವದರಿಂದ ಅವಿಭಕ್ತನೆಂದೂ, ಯಾವ ಇಂತಹ ಜ್ಞಾನದಿಂದ ಕರ್ಮವನ್ನಾರಂಭಿಸುವ ಕಾಲದಲ್ಲಿ ತಿಳಿಯುವನೋ ಅಂತಹ ಜ್ಞಾನವೇ ಕರ್ಮಾರಂಭಕ ಸಾತ್ವಿಕಜ್ಞಾನವೆಂದು ಹೇಳಲ್ಪಟ್ಟಿತು. ಹೀಗೆ ಕರ್ಮಾರಂಭ ಕಾಲದಲ್ಲಿ ಇಂತಹ ಸಾತ್ವಿಕ ಜ್ಞಾನವಿರುವ ಅಧಿಕಾರಿಯು, ಸಮಸ್ತ ಆತ್ಮರುಗಳೂ ಜ್ಞಾನೈಕಾಕಾರತೆಯಿಂದ ಸಮವೆಂದು ಭಾವಿಸಿ, ಪರಮಾತ್ಮ ಶರೀರವೆಂಬ ಅಭಿಪ್ರಾಯ ಯಾವಾಗ ಉಂಟಾಯಿತೋ ಆಗ ಆತನು ಆರಂಭಿಸುವ ಕಾರ್ಯಗಳಲ್ಲಿ ಯಾರಿಗೂ ಪ್ರತಿಕೂಲನಾಗಿ ಎಂದಿಗೂ ಆಚರಿಸನು ; ಅಧರ್ಮದಲ್ಲಿ ಪ್ರವರ್ತಿಸನು ; ಇಂತಹ ಜ್ಞಾನಸ್ವರೂಪ ಸ್ವಭಾವವುಳ್ಳವನಿಗೆ ಪ್ರಾಪ್ತವಾಗಿರುವ ಸ್ವಭಾವದಲ್ಲಿರುವ ವ್ಯಯಧರ್ಮವನ್ನು ಕಳೆದುಕೊಂಡು ಅವ್ಯಯ ಸ್ವಭಾವವನ್ನು ಹೊಂದಲು ಯತ್ನಿಸುವನು. ಈ ಕರ್ಮಾರಂಭಕಜ್ಞಾನವು ಒಳ್ಳೇ ಸ್ಥಿತಿಯನ್ನು ಹೊಂದಲು ಅನುಕೂಲಿಸುವದರಿಂದ ಸಾತ್ವಿಕವೆಂದು ಹೇಳಲ್ಪಟ್ಟಿತು.

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕದಲ್ಲಿ ಕರ್ಮಾರಂಭಕ ಸಾತ್ವಿಕಜ್ಞಾನವೆಂತಾದ್ದೆಂದು ಹೇಳಿ, ಈ ಶ್ಲೋಕದಲ್ಲಿ ಕರ್ಮಾರಂಭಕ ರಾಜಸಜ್ಞಾನವೆಂತಾದ್ದೆಂಬುದನ್ನು ತಿಳಿಸುತ್ತಾರೆ.—ಇಲ್ಲಿನ ತು ಶಬ್ದವು ಅಂತಹ ಜ್ಞಾನವನ್ನು ವ್ಯಾವರ್ತಿಸಿ ಹೇಳುತ್ತದೆ. **ಸರ್ವೇಷು ಭೂತೇಷು** - ಈ ಬ್ರಾಹ್ಮಣ ಕ್ಷತ್ರಿಯ ಮೊದಲಾದ ಮತ್ತು ಬ್ರಹ್ಮಚಾರಿ ಗೃಹಸ್ಥ ಮೊದಲಾದ ವರ್ಣಾಶ್ರಮಿಗಳಾದ ಅಧಿಕಾರಿಗಳಲ್ಲಿ, **ಪೃಥಕ್ತ್ವೇನ** - ಹೀಗೆ ಬೇರೆ ಬೇರೆ ಶರೀರಗಳೊಂದಿಗೆ ಇರುವದರಿಂದ, **ನಾನಾಭಾವಾನ್** – ಈ ಬೇರೆ ಬೇರೆಯಾಗಿರುವ ಆತ್ಮರುಗಳನ್ನೆಲ್ಲಾ, **ಪೃಥಗ್ವಿಧಾನ್** – ಬೇರೆ ಬೇರೆ ಸ್ವರೂಪವುಳ್ಳವುಗಳನ್ನಾಗಿ, **ಯತ್ ಜ್ಞಾನಂತು** - ಯಾವ ಕರ್ಮಾರಂಭಕಜ್ಞಾನವು, **ವೇತ್ತಿ** - ತಿಳಿಯುತ್ತದೋ, **ತತ್ ಜ್ಞಾನಂತು** - ಹಾಗೆ ಭಿನ್ನಸ್ವರೂಪವುಳ್ಳವುಗಳೆಂದು ಭಾವಿಸಿರುವ ಜ್ಞಾನವನ್ನಾದರೋ, **ರಾಜಸಂ ವಿದ್ಧಿ** – ರಾಜಸವೆಂಬದಾಗಿ ತಿಳಿ, ಬೇರೆ ಬೇರೆ ಶರೀರಗಳಲ್ಲೂ ಅವರವರ ಪೂರ್ವಕರ್ಮಾನುಸಾರ ಸುಖ ದುಃಖಾದಿಗಳನ್ನನುಭವಿಸುವದಕ್ಕಾಗಿ ಇರುವ ಆತ್ಮರುಗಳೆಲ್ಲಾ ಬೇರೆ ಬೇರೆಯಾಗಿದ್ದರೂ, ಸ್ವರೂಪತಃ ಎಲ್ಲಾ ಆತ್ಮರೂ ಒಂದೇ ಎಂಬ ಜ್ಞಾನವಿಲ್ಲದೆ, ಭಿನ್ನ ಶರೀರಕರಾಗಿರುವದರಿಂದ ಸ್ವಭಾವತಃ ಬೇರೆಬೇರೆಯಾಗಿ ತೋರುವದರಿಂದ ಸ್ವರೂಪತಃ ಎಲ್ಲಾ ಆತ್ಮರೂ ಬೇರೆ ಬೇರೆ ಎಂದು ಈ ರಾಜಸ ಜ್ಞಾನಾಧಿಕಾರಿಯು ತಿಳಿಯುವನು. ಇಂತಹ ಜ್ಞಾನವು ಆತನಿಗೆ ಅನುಕೂಲಾಚರಣೆಗೂ, ಪ್ರತಿಕೂಲಾಚರಣೆಯ ತ್ಯಾಗಕ್ಕೂ ಅನುಕೂಲವಾಗುವದಿಲ್ಲವು. ಅಧರ್ಮಪ್ರವೃತ್ತಿಯಿಂದ ಈ ಜ್ಞಾನವು ಈತನನ್ನು ಅಂತಹ ಕರ್ಮ

**ಭಾ. ಸರ್ವೇಷು ಭೂತೇಷು–ಬ್ರಾಹ್ಮಣಾದಿಷು, ಬ್ರಾಹ್ಮಣಾದ್ಯಾಕಾರ ಪೃಥಕ್ತ್ವೇನ ಆತ್ಮಾಖ್ಯಾನಪಿ ಭಾವಾನ್ನಾನಾಭೂತಾನ್, ಸಿತ ದೀರ್ಘಾದಿ ಪೃಥಕ್ತ್ವೇನ ಚ ಪೃಥಗ್ವಿಧಾನ್ ಫಲಾದಿ ಸಂಯೋಗ ಯೋಗ್ಯಾನ್ ಕರ್ಮಾಧಿಕಾರವೇಲಾಯಾಂ ಯತ್ ಜ್ಞಾನಂ ವೇತ್ತಿ ತತ್ ಜ್ಞಾನಂ ರಾಜಸಂ ವಿದ್ಧಿ ||೨೧||**

---

ವನ್ನು ಮಾಡದ ಹಾಗೆ ನಿವರ್ತಿಸಲಾರದು. ಆದುದರಿಂದ ರಾಜಸಜ್ಞಾನವೆಂದು ಹೇಳಲ್ಪಟ್ಟಿತು. ||೨೧||

**ಭಾಷ್ಯಾರ್ಥವು—ಸರ್ವೇಷುಭೂತೇಷು** – ಹಿಂದಿನ ಶ್ಲೋಕದಲ್ಲಿನ ಹಾಗೆಯೇ ಇಲ್ಲಿಯೂ ಅರ್ಥವು, ಆದುದರಿಂದ **ಬ್ರಾಹ್ಮಣಾದಿಷು** - ಬ್ರಾಹ್ಮಣರೇ ಮೊದಲಾದವರಲ್ಲಿ, ಆದಿ ಶಬ್ದದಿಂದ ವರ್ಣಾಶ್ರಮ ಪ್ರಭೇದಗಳು ಜನ್ಮತಃ ಉಂಟಾದವು ಹೇಳಲ್ಪಟ್ಟವು, **ಬ್ರಾಹ್ಮಣಾದ್ಯಾಕಾರಪೃಥಕ್ತ್ವೇನ** – ಹೀಗೆ ಬ್ರಾಹ್ಮಣ ಮೊದಲಾದ ಜನ್ಮತಃ ಉಂಟಾದ ಶರೀರ ಭೇದದಿಂದ, **ಆತ್ಮಾಖ್ಯಾನಪಿ ಭಾವಾನ್** – ಜೀವಾತ್ಮರೆಂದು ಹೇಳಿಸಿಕೊಳ್ಳುವುವುಗಳನ್ನೂ, **ನಾನಾಭೂತಾನ್** - ಬೇರೆ ಬೇರೆಯಾದವುಗಳನ್ನಾಗಿ, ಹೇಗೆಂದರೆ—**ಸಿತದೀರ್ಘಾದಿ ಪೃಥಕ್ತ್ವೇನ ಚ ಪೃಥಗ್ವಿಧಾನ್** – ಬೆಳ್ಳಗೆ ಮತ್ತು ದೀರ್ಘವೇ ಮೊದಲಾದ ಶರೀರದಿಂದ ಬೇರೆಯಾಗಿ ಬೇರೆ ಬೇರೆ ವಿಧವಾಗಿರುವವನ್ನಾಗಿ, **ಫಲಾದಿ ಸಂಯೋಗ ಯೋಗ್ಯಾನ್** - ಫಲವೇ ಮೊಲಾದವುಗಳನ್ನು ಹೊಂದಲು ಯೋಗ್ಯಗಳನ್ನಾಗಿ, **ಕರ್ಮಾಧಿಕಾರವೇಲಾಯಾಂ** - ಕರ್ಮವನ್ನು ಆರಂಭಿಸುವವರ ಮೂಲಕ ಕರ್ಮಾಧಿಕಾರಿಯಾಗುವ ಸಮಯದಲ್ಲಿ, **ಯತ್ ಜ್ಞಾನಂವೇತ್ತಿ**–ಯಾವ ಜ್ಞಾನವು ತಿಳಿಯುತ್ತದೋ **ತತ್ ಜ್ಞಾನಂ**-ಅಂತಹ ಜ್ಞಾನವನ್ನು, ರಾಜ**ಸ**ವನ್ನಾಗಿ, **ವಿದ್ಧಿ**-ತಿಳಿ. ಇಲ್ಲಿ **ನಾನಾಭಾವಾನ್** ಎಂಬುದರಿಂದ ಜೀವಬಹುತ್ವವು ಹೇಳಲ್ಪಟ್ಟಿತು ; ಇವುಗಳೆಲ್ಲಾ ಸ್ವರೂಪತಃ ಒಂದೇ ವಿಧವಾಗಿರುವುವುಎಂಬ ಜ್ಞಾನಶೂನ್ಯನಾಗಿ ಬ್ರಾಹ್ಮಣ ಕ್ಷತ್ರಿಯ, ಬ್ರಹ್ಮಚಾರಿ ಗೃಹಸ್ಥ ಮೊದಲಾದ ವರ್ಣಾಶ್ರಮ ಭೇದಗಳಿರುವದರಿಂದ, ಆತ್ಮರುಗಳೂ ಕೂಡ ಶರೀರ ಭೇದವಿರುವದರಿಂದ ಭಿನ್ನಸ್ವರೂಪವುಳ್ಳವು ಎಂಬ ಜ್ಞಾನವು ರಾಜಸಜ್ಞಾನವೆಂದು ಹೇಳಲ್ಪಟ್ಟಿತು. **ಪೃಥಕ್ತ್ವೇನ** ಎಂಬುದರಿಂದ ಶರೀರಭೇದವೂ, **ಪೃಥಗ್ವಿಧಾನ್** ಎಂಬುದರಿಂದ ಸ್ವರೂಪತಃ ಭೇದವೂ ಹೇಳಲ್ಪಟ್ಟಿರುವದರಿಂದ ಪುನರುಕ್ತಿ ದೋಷವಿಲ್ಲವು ; ಹೀಗೆಯೇ **ನಾನಾಭಾವಾನ್** ಎಂಬುದರಿಂದ ಆತ್ಮಬಹುತ್ವವು ಹೇಳಲ್ಪಟ್ಟಿರುವದರಿಂದ, ಶರೀರ ಭೇದಗಳಿಂದ ಆತ್ಮಸ್ವರೂಪದಲ್ಲಿ ಭೇದವೆಂದು ತಿಳಿಯುವದೇ ಕರ್ಮಾರಂಭಕ ರಾಜಸಜ್ಞಾನವೆಂದು ತಿಳಿಯತಕ್ಕದ್ದು. ಇಲ್ಲಿ **ನಾನಾಭಾವಾನ್** ಎಂಬ ಪ್ರಯೋಗವು, ಇರುವದೆಲ್ಲಾ ಒಂದೇ ಆತ್ಮಾ ಎಂಬ ಅದ್ವೈತಾಭಿಪ್ರಾಯಕ್ಕೆ ಅನುಕೂಲಿಸದ ಪ್ರಯೋಗವು. ಹಿಂದಿನ ಶ್ಲೋಕದಲ್ಲಿ **ಸರ್ವಭೂತೇಷು ಯೇನೈಕಂ** ಎಂಬುದರಿಂದ ಆತ್ಮಾವೆಲ್ಲಾ ಒಂದೇ, ಆದುದರಿಂದ ಒಂದೇ ವಸ್ತು ಇರತಕ್ಕದ್ದೆಂದು ಹೇಳಲ್ಪಟ್ಟಿತೆಂದು ಭಾವಿಸುವರು. ಈ ಅದ್ವೈತಾಭಿಪ್ರಾಯವು **ನತ್ವೇವಾಹಂ** ಎಂಬ ಶ್ಲೋಕದಲ್ಲೇ ದೂರೀಕೃತವೆಂದು ವಿಸ್ತರವಾಗಿ ಹೇಳಲ್ಪಟ್ಟಿರುವದರಿಂದ, ಇಲ್ಲಿ ಪುನಃ ಅದರ ಪ್ರಸಙ್ಗವು ಬೇಕಿಲ್ಲವು. ಐಕ್ಯವು ಹೇಗೆ ಎಂದರೆ ಸ್ವರೂಪತಃ ಜ್ಞಾನಸ್ವರೂಪ ಸ್ವಭಾವವುಳ್ಳವುಗಳಾದುದರಿಂದ ಐಕ್ಯವು. ಆದರೆ ಜೀವಬಹುತ್ವವು **"ನಿತ್ಯೋ ನಿತ್ಯಾನಾಂ"** ಎಂಬ ಶ್ರುತಿ ಸಿದ್ಧವು ; ಆ ಅಭಿಪ್ರಾಯವೇ ಇಲ್ಲಿ **ನಾನಾಭಾವಾನ್** ಎಂಬುದರಿಂದ ಉಪದೇಶಿಸಲ್ಪಟ್ಟಿತು. ಶರೀರತಃ ಭೇದವನ್ನಿಟ್ಟೇ ಇಲ್ಲಿಯೂ ಹೇಳಲ್ಪಟ್ಟಿತು ; ಎಂದರೆ **ಪೃಥಕ್ತ್ವೇನ** ಎಂದು ಬೇರೆ ಇರುವದರಿಂದ ಪುನರುಕ್ತಿ ದೋಷವನ್ನು ಮಹರ್ಷಿಗೆ ಕಲ್ಪಿಸಿದಂತಾಗುವುದು. **ನಾನಾಭಾವಾನ್** ಆಗಿರುವದೇನೋ ಸತ್ಯವು ; ಅವುಗಳಿಗೆ **ಪೃಥಕ್ತ್ವೇನ** ಶರೀರವಿರುವದರಿಂದ ಅವುಗಳು ಸ್ವರೂಪತಃ **ಪೃಥಗ್ವಿಧಾನ್** ಎಂಬ ಜ್ಞಾನವೀಗ

ರಾಜಸಜ್ಞಾನವೆಂಬುದು ತಾತ್ಪರ್ಯವು. ಹೀಗೆ ತಿಳಿಯುವದು ಭ್ರಮಜ್ಞಾನವು; ಅಸಾಧುಕರ್ಮವನ್ನೆಸಗಲು ಕಾರಣವಾಗಿ **ಪಾಪಕಾರೀಪಾಪೋ ಭವತಿ** ಎಂದು ಹೇಳಿರುವ ಹಾಗೆ ಅನರ್ಥಗಳಿಗೆ ಸಾಧಕವಾಗುವ ಪ್ರವೃತ್ತಿಜ್ಞಾನವು. ಈತನು ಇಂತಹ ಅನರ್ಥಸಾಧಕಗಳಾದ ಪ್ರವೃತ್ತಿಗಳನ್ನು ಭ್ರಮಜ್ಞಾನದಿಂದ, ತನಗೆ ಇಷ್ಟಗಳಾದ ಫಲಗಳು ದೊರೆಯುವುವು ಎಂದು ಭಾವಿಸುವವನಾದುದರಿಂದ **ಫಲಾದಿ ಸಂಯೋಗಕ್ಕೆ ಯೋಗ್ಯ**ರನ್ನಾಗಿ ಈ ಆತ್ಮರುಗಳನ್ನು ಭಾವಿಸುವನೆಂದು ಹೇಳಲ್ಪಟ್ಟಿತು. ಸಾತ್ವಿಕಜ್ಞಾನವನ್ನುಳ್ಳವನಾದರೋ ಈ ಅಶಾಶ್ವತಗಳಾದ ಫಲಗಳಿಗೆ ಇಂತಹ ಅಮೋಘ ಸ್ವರೂಪಸ್ವಭಾವವುಳ್ಳ ಆತ್ಮರು ಅನರ್ಹರೆಂದು ಭಾವಿಸುವನು ಎಂಬ ತಾತ್ಪರ್ಯದಿಂದ ಹಿಂದಿನ ಶ್ಲೋಕ ಭಾಷ್ಯದಲ್ಲಿ **ಫಲಾದಿ ಸಜ್ಞಾನರ್ಹಂ** ಎಂಬ ಪ್ರಯೋಗವು. ಆದರೆ **ಫಲಾದಿ ಸಜ್ಞಾನರ್ಹಂ** ಎಂದು ಹಿಂದಿನ ಶ್ಲೋಕದಲ್ಲಿ ಏಕವಚನವು ಎಲ್ಲಾ ಆತ್ಮರೂ ಸ್ವರೂಪತಃ ಒಂದೇ ಎಂಬ ಭಾವದಿಂದ ಜಾತ್ಯೇಕವಚನವು. ಈ ಶ್ಲೋಕದಲ್ಲಾದರೋ **ನಾನಾಭಾವಾನ್, ಫಲಾದಿಸಂಯೋಗಯೋಗ್ಯಾನ್** ಎಂಬ ಬಹುವಚನವು ಜೀವ ಬಹುತ್ವವನ್ನು ಮನಸ್ಸಿನಲ್ಲಿಟ್ಟು ಎಂದು ಭಾವಿಸತಕ್ಕದ್ದು, **ಭಾವಾನ್** ಎಂಬ ಬಹುವಚನವೇ ನಿತ್ಯವಾಗಿ ಇರುವ ವಸ್ತುಗಳನ್ನೇ ಬೋಧಿಸುವದರಿಂದ, ಜೀವಾತ್ಮ ಬಹುತ್ವವು ವ್ಯಕ್ತವು. **ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛನ್ತ್ಯನಾಮಯಂ** ಎಂದು ಹಿಂದೆಯೇ ೨-೫೧ನೆಯ ಶ್ಲೋಕದಲ್ಲೇ ಬಂಧದಿಂದ ಬಿಟ್ಟದೆಶೆಯಲ್ಲೂ ಕೂಡ **ಪದಂಗಚ್ಛನ್ತಿ** ಎಂದು ಬಹುವಚನವಿರುವದರಿಂದಲೂ ಜೀವಬಹುತ್ವವೇ ಗೀತೆಯಲ್ಲಿ ಉಪದಿಷ್ಟವು. ಹಾಗೆಯೇ ಶ್ರುತಿಯಲ್ಲೂ ಮುಕ್ತದೆಶೆಯಲ್ಲೂ ಜೀವಬಹುತ್ವವು ಹೇಳಲ್ಪಟ್ಟಿರುತ್ತದೆ. **ಪುರುಷೋಮಾನಸ ಏತ್ಯಬ್ರಹ್ಮಲೋಕಾನ್ ಗಮಯತಿ, ತೇಷು ಬ್ರಹ್ಮಲೋಕೇಷು ಪರಾಃ ಪರವಂತೋವಸನ್ತಿತೇಷಾಂ ನಪುನರಾವೃತ್ತಿಃ**" (ಬೃ. ಆ. ೨. ೧೫) ಅಮಾನವ ಪುರುಷ ಸಂಬಂಧ ಯಾವಾಗ ಉಂಟಾಯಿತೋ, ಆಗ ಪ್ರಾಕೃತ ಶರೀರ ತೊಲಗಿ ಸ್ವಸ್ವರೂಪಾವಿರ್ಭಾವದೊಂದಿಗೆ ಅಪ್ರಾಕೃತ ಶರೀರ ಪ್ರಾಪ್ತಿಯೂ ಅಂತವರು ದಿವ್ಯವೈಕುಂಠವನ್ನು ಹೋಗಿ ಸೇರುತ್ತಾರೆಂದು ಸ್ಥಾನವಿಶೇಷವನ್ನೂ ಹೇಳಿ, **ಪರಾಃ** - ನಿರತಿಶಯಾನಂದಶಾಲಿಗಳಾಗಿ, **ಪರಾವನ್ತಃ** – ಶ್ರೇಷ್ಠನಾದ ಸ್ವಾಮಿಯೊಂದಿಗೆ ಸೇರಿದವರಾಗಿ ಎಂದರೆ ನಾಥವನ್ತರಾಗಿ, **ವಸನ್ತಿ** – ವಸಿಸುವರು, ಅವರಿಗೆ **ನಪುನರಾವೃತ್ತಿಃ** - ಪುನರಾವೃತ್ತಿಯಿಲ್ಲವೆಂದು, ಇಲ್ಲಿಯೂ ಬಹುವಚನವಿರುತ್ತದೆ. ಅಂತಹ ಬಹುವಚನವನ್ನು, **"ತದ್ವಿಷ್ಣೋಃ ಪರಮಂಪದಂ ಸದಾಪಶ್ಯನ್ತಿ ಸೂರಯಃ ದಿವೀವ ಚಕ್ಷುರಾತತಂ"** ಎಂಬಲ್ಲೂ ಕಾಣಬಹುದು. ಹೀಗೆ ಅನೇಕ ಶ್ರುತಿಗಳನ್ನು ಉದಾಹರಿಸಬಹುದು. ಆತ್ಮರುಗಳೆಲ್ಲಾ ಭಿನ್ನ ಸ್ವರೂಪರೆಂಬ ದ್ವೈತಾಭಿಪ್ರಾಯವೂ ಸರಿಯಲ್ಲವೆಂದೂ ಈ ಶ್ಲೋಕದಿಂದ ಹೇಳಿದಂತಾಯಿತು. ಈ ಶ್ಲೋಕದಲ್ಲಿ **ಜ್ಞಾನಂ ವೇತ್ತಿ** ಎಂದು ಜ್ಞಾನಮಾತ್ರ ಹೇಳದುದರಿಂದ ಆತ್ಮಾ, ಜ್ಞಾನ ಮಾತ್ರವೇ ಎಂದು ಭಾವಿಸುವರು. ಆದರೆ ಆ ಸಂದರ್ಭದಲ್ಲಿ **ವೇತ್ತಿ** ಎಂಬ ಕ್ರಿಯಾಪದವನ್ನು ಮರೆತು ಹೇಳುವದಾಗುತ್ತದೆ. **ವೇತ್ತಿ** ಎಂಬುದರಿಂದ ಜ್ಞಾತೃತ್ವವು ಬೋಧಿತವು. ಆದುದರಿಂದ **ಜ್ಞಾನಂ ವೇತ್ತಿ** ಎಂಬಲ್ಲಿ ಪರಿಜ್ಞಾತಾ ವನ್ನು ಹೇಳುವದಕ್ಕೆ ಬದಲಾಗಿ ಆತನ ಜ್ಞಾನವು **ವೇತ್ತಿ** ಎಂದು ಔಪಚಾರಿಕವಾಗಿ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು.

**ಮೂಲಕ್ಕೆ ಅರ್ಥವು**—ಕಾರ್ಯಾರಂಭಕವಾದ ತಾಮಸಜ್ಞಾನ ಲಕ್ಷಣವನ್ನು ಹೇಳುತ್ತಾರೆ—ಎಲ್ಲಾ ಆತ್ಮರುಗಳು ಜ್ಞಾನೈಕಾಕಾರತೆಯಿಂದ ಸಮವೆಂಬ ಭಾವನೆಯಿಂದ ಮಾಡುವ ಕರ್ಮಾರಂಭಕ್ಕೆ ಬೇಕಾದ ಜ್ಞಾನವು ಸಾತ್ವಿಕವೆಂದೂ, ಆತ್ಮರುಗಳೆಲ್ಲಾ ಬೇರೆಬೇರೆಯಾದರೂ ಸ್ವರೂಪತಃ ಬೇರೆ ಬೇರೆ ಎಂಬ ಭಾವನೆಯಿಂದ ಮಾಡುವ ಕರ್ಮಾರಂಭಕ್ಕೆ ಉಪಯುಕ್ತ ಜ್ಞಾನವು ರಾಜಸವೆಂದೂ ಹೇಳಲ್ಪಟ್ಟಿತು. ಈಗಲಾದರೋ, ದೇಹವೇ ಸಮಸ್ತವೂ ಅದೇ ಆತ್ಮಾವೆಂಬ

**ಮೂ. ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತ ಮಹೇತುಕಮ್ ।**
**ಅತತ್ತ್ವಾರ್ಥವದಲ್ಪಂಚ ತತ್ತಾಮಸ ಮುದಾಹೃತಮ್ ॥೨೨॥**

**ಭಾ. ಯತ್ತು-ಜ್ಞಾನಂ, ಏಕಸ್ಮಿನ್ಕಾರ್ಯೇ - ಏಕಸ್ಮಿನ್ ಕರ್ತ್ರವ್ಯೇ ಕರ್ಮಣಿ ಪ್ರೇತಭೂತಗಣಾದ್ಯಾರಾಧನರೂಪೇ, ಅತ್ಯಲ್ಪಫಲೇ, ಕೃತ್ಸ್ನಫಲವತ್ ಸಕ್ತಂ, ಅಹೇತುಕಂ - ವಸ್ತುತಸ್ತ್ವಕೃತ್ಸ್ನ ಫಲವತ್ತಯಾ ತಥಾವಿಧ ಸಙ್ಗಹೇತು ರಹಿತಂ, ಅತತ್ತ್ವಾರ್ಥವತ್ - ಪೂರ್ವವದೇವಾತ್ಮನಿ ಪೃಥಕ್ತ್ವಾದಿಯುಕ್ತತಯಾ ಮಿಥ್ಯಾಭೂತಾರ್ಥ**

---

ಜ್ಞಾನದಿಂದ ಯಾವ ಕರ್ಮಾರಂಭವು ಮಾಡಲ್ಪಡುತ್ತದೋ, ಅಂತಹ ಜ್ಞಾನವು ತಾಮಸವೆಂದು ಹೇಳುತ್ತಾರೆ.—**ಯತ್ತು** - ಯಾವ ಜ್ಞಾನವಾದರೋ, **ಏಕಸ್ಮಿನ್ ಕಾರ್ಯೇ** - ತಾನು ಮಾಡಬೇಕಾದ ಒಂದು ಕಾರ್ಯದಲ್ಲೇ, **ಕೃತ್ಸ್ನವತ್** - ಅದೇ ಸಮಸ್ತವೆಂದು, **ಸಕ್ತಂ** - ಸಙ್ಗವನ್ನು ಹೊಂದಿರುತ್ತದೋ, ಮತ್ತು **ಅಹೇತುಕಂ** - ಶಾಸ್ತ್ರ ಮೊದಲಾದ ಪ್ರಮಾಣಗಳನ್ನು ಅನುಸರಿಸದೇ, ಹೇತುಹೇತು ಮದ್ಭಾವವಿಲ್ಲದೇ ಇರುತ್ತದೋ ಅಥವಾ **ಅಲ್ಪಂ ಚ** - ಅಲ್ಪ ಪ್ರಯೋಜನವುಳ್ಳದಾದುದರಿಂದ ಅಲ್ಪವಾದುದೋ, ತತ್ - ಅಂತಹ ಕರ್ಮಾರಂಭಕ ಜ್ಞಾನವು, **ತಾಮಸಂ**-ತಾಮಸವೆಂಬದಾಗಿ, **ಉದಾಹೃತಮ್** – ಉದಾಹರಿಸಲ್ಪಟ್ಟಿದೆ, ಹೇಳಲ್ಪಟ್ಟಿದೆ ಎಂಬ ಭಾವವು. ಜ್ಞಾನವು ಯಾವ ವಿಧ ಸತ್ತರ್ಕವನ್ನೂ ಅಪೇಕ್ಷಿಸಲಾರದೆಂದು ತಿಳಿಸುವದಕ್ಕಾಗಿ **ಅಹೇತುಕಂ** ಎಂಬ ಪ್ರಯೋಗವು. ಅಂತಹ ಜ್ಞಾನಕ್ಕೆ ಫಲವೇನು ಎಂದರೆ **ಅತತ್ತ್ವಾರ್ಥವತ್** - ನಿಶ್ಚಯವಾದ ಪ್ರಯೋಜನವಿಲ್ಲದುದು, ಮತ್ತು ಅಲ್ಪವಾದುದು, ಅಲ್ಪಾಸ್ಥಿರ ಫಲವನ್ನು ಕೊಡುವಂಥಾದ್ದು. ಕರ್ಮಾರಂಭವು ಇಂತಹ ಜ್ಞಾನದಿಂದುಂಟಾದರೆ, **ತಾಮಸವೆಂದು** ಹೇಳಲ್ಪಟ್ಟು, ಪ್ರತಿಕೂಲಕ್ಕೆ ಹೇತುವಾಗುತ್ತದೆಂಬ ಭಾವವು.

**ಭಾಷ್ಯಾರ್ಥವು—ಯತ್ತು ಜ್ಞಾನಂ** – ಯತ್ತು ಎಂಬುದು ಜ್ಞಾನವನ್ನು ಬೋಧಿಸುತ್ತದೆಂಬ ಭಾವದಿಂದ ಹಾಗೆ ವ್ಯಾಖ್ಯಾನವು, ಯಾವ ಕಾರ್ಯಾರಂಭಕ ಜ್ಞಾನವು ಇಲ್ಲಿರುವ ತು ಶಬ್ದವು ಸಾತ್ವಿಕರಾಜಸಜ್ಞಾನಗಳನ್ನು ವ್ಯಾವರ್ತಿಸಿ ಹೇಳುತ್ತದೆ. **ಏಕಸ್ಮಿನ್ಕಾರ್ಯೇ** ಎಂದರೆ **ಏಕಸ್ಮಿನ್ ಕರ್ತ್ರವ್ಯೇಕರ್ಮಣಿ** – ತಾನು ಮಾಡಬೇಕಾಗಿರುವ ಒಂದೇ ಕರ್ಮದಲ್ಲೇ, ಅದು ಎಂತಾದ್ದೆಂದರೆ— **ಪ್ರೇತಭೂತಗಣಾದ್ಯಾರಾಧನರೂಪೇ ಅತ್ಯಲ್ಪಫಲೇ** - ಹಿಂದೆ ಹೇಳಲ್ಪಟ್ಟಹಾಗೆ ಪ್ರೇತಭೂತಗಣಗಳ ಮೊದಲಾದವುಗಳ ಆರಾಧನರೂಪವಾಗಿ, ಅತ್ಯಲ್ಪಫಲವುಳ್ಳ **ಅಂತಹ** ಒಂದೇ ಕರ್ಮದಲ್ಲೇ. ಕೃತ್ಸ್ನ **ಫಲವತ್** - ಸಮಸ್ತ ಶಾಶ್ವತಫಲವುಳ್ಳದ್ದಾಗಿ, **ಸಕ್ತಂ** - ಸಂಬಂಧಿಸಿಕೊಂಡಿರುವದನ್ನಾಗಿಯೂ ಮತ್ತು **ಅಹೇತುಕಂ** ಎಂದರೆ ವಸ್ತುತಸ್ತ್ವಕೃತ್ಸ್ನ **ಫಲವತ್ತಯಾ ತಥಾವಿಧ ಸಙ್ಗಹೇತುರಹಿತಂ** - ಯಥಾರ್ಥವಾಗಿ ನೋಡಿದರೆ ಶಾಶ್ವತಫಲವಿಲ್ಲದಿರುವದರಿಂದ ಅಂತಹ ಸಂಬಂಧಕ್ಕೆ ಬೇಕಾದ ಕಾರಣವಿಲ್ಲದೆ ಇರುವದೋ, **ಅತತ್ತ್ವಾರ್ಥವತ್** ಎಂದರೆ **ಪೂರ್ವವದೇವಾತ್ಮನಿ ಪೃಥಕ್ತ್ವಾದಿ ಯುಕ್ತತಯಾ ಮಿಥ್ಯಾಭೂತವಿಷಯಂ**-ಹಿಂದೆ ರಾಜಸಜ್ಞಾನ ಲಕ್ಷಣದ ಹಾಗೆಯೇ ಆತ್ಮವರ್ಗದಲ್ಲಿ ಬೇರೆ ಬೇರೆ ಸ್ವರೂಪವುಳ್ಳವೆಂದು ಅಯಥಾರ್ಥ **ವಿಷಯ**ವಾದುದೋ, **ಅತ್ಯಲ್ಪಫಲಂ ಚ** - ಎಂದರೆ **ಪ್ರೇತಭೂತಾದ್ಯಾರಾಧನವಿಷಯತಾಽಲ್ಪಂಚ** - ಆ ಜ್ಞಾನವು ಪ್ರೇತಭೂತ ಮೊದಲಾದುವುಗಳ ಆರಾಧನೆಯ ವಿಷಯವಾಗಿ **ಅದರಿಂದುಂಟಾ**ಗುವ ಫಲವು ಅತ್ಯಲ್ಪವಾದುದೋ, ಇಂತಹ ತಾಮಸಜ್ಞಾನದಿಂದ ಕರ್ಮಾರಂಭ ನಡೆದರೆ **ಫಲವು** ಅತ್ಯಲ್ಪವೆಂಬುದಕ್ಕೆ ಎರಡು ಕಾರಣಗಳನ್ನು ಹೇಳಿರುತ್ತಾರೆ.—(೧) ಅತತ್ತ್ವಾರ್ಥವಾದುದಾಗಿಸುಳ್ಳಾದುದಾದುದರಿಂದ (೨) ತಾಮಸಿಯು ಪ್ರೇತಭೂತಾದಿಗಳ ಆರಾಧನೆಗಳಲ್ಲಿ ಪ್ರವರ್ತಿಸುವನಾದುದರಿಂದ ಅವರುಗಳು ಕೊಡುವ ಫಲವು ಅತ್ಯಲ್ಪವೆಂಬ ಭಾವವು. **ತತ್ಜ್ಞಾನಂ** -

**ವಿಷಯಂ, ಅತ್ಯಲ್ಪ ಫಲಂಚ ಪ್ರೇತಭೂತಾದ್ಯಾರಾಧನ ವಿಷಯತ್ವಾದಲ್ಪಂಚ, ತತ್ ಜ್ಞಾನಂ ತಾಮಸ ಮುದಾಹೃತಮ್ ॥೨೨॥**

**ಭಾ. ಅವ.** ಏವಂ ಕರ್ತ್ತವ್ಯ ಕರ್ಮ ವಿಷಯಜ್ಞಾನಸ್ಯಾಧಿಕಾರವೇಲಾಯಾ ಮಧಿಕಾರ್ಯಂಶೇನ ಗುಣತಸ್ತ್ರೈವಿಧ್ಯ ಮುಕ್ತ್ವಾ, ಅನುಷ್ಠೇಯಸ್ಯ ಕರ್ಮಣೋ ಗುಣತಸ್ತ್ರೈವಿಧ್ಯಮಾಹ—

---

ಅಂತಹ ಕರ್ಮಾರಂಭಕ ಜ್ಞಾನವು, ತಾಮಸವೆಂದು ಹೇಳಲ್ಪಟ್ಟಿರುತ್ತದೆ. ಪ್ರೇತಭೂತಗಣಗಳ ಆರಾಧನೆಯೇ ಸರ್ವಫಲವನ್ನೂ ಸಾಧಿಸಿಕೊಡುತ್ತದೆ ಎಂಬ ಅಭಿಪ್ರಾಯವೇ ತಾಮಸಿಗೆ ಇರುವದರಿಂದ, ಅಂತಹ ಆರಾಧನೆಯೇ ತನಗೆ ನಿರತಿಶಯ ಫಲವನ್ನೂ ಸಾಧಿಸಿಕೊಡುತ್ತದೆ ಎಂದು ನಂಬಿ, ಅಂತಹ ಪ್ರವೃತ್ತಿಯಲ್ಲೇ ಸಕ್ತವಾಗಿರುತ್ತದೆಂದೂ, ಶಾಶ್ವತ ಫಲವನ್ನು ಸಾಧಿಸಿಕೊಡುವದು ಯಾವುದು ಎಂದು ತಿಳಿಯದೆ ಅಂತಹ ಸಾಧನವನ್ನು ಅನುಷ್ಠಿಸದೇ ಇರುತ್ತದೆಂದೂ, ಆತ್ಮಸ್ವರೂಪ ವಿಷಯದಲ್ಲಿ ಸರಿಯಾದ ತಿಳುವಳಿಕೆ ಇಲ್ಲದೆಂದೂ, ಅಂತಹ ಕ್ಷುದ್ರ ಫಲಗಳನ್ನೀಯುವ ಪ್ರೇತಭೂತಗಣಗಳ ಆರಾಧನಾರೂಪವಾದುದರಿಂದ ಕ್ಷುದ್ರಫಲದಾಯಕವೆಂದೂ ಹೇಳಿ ಅಂತಹ ಜ್ಞಾನವು ತಾಮಸವೆಂದು ಹೇಳಿಸಿಕೊಳ್ಳುತ್ತದೆಂದು ಉಪದೇಶಿಸಲ್ಪಟ್ಟಿತು. ಹಿಂದೆ ಗೀತಾ ೧೪-೧೭) ರಲ್ಲಿ **ಸತ್ವಾತ್ಸಂಜಾಯತೇ ಜ್ಞಾನಂ** ಎಂಬಲ್ಲಿ ಸಾತ್ವಿಕ ಜ್ಞಾನ ಮಾತ್ರವೇ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಜ್ಞಾನವೆಂದು ಹೇಳಿಸಿಕೊಳ್ಳಲು ಅಂತಹ ಸಾತ್ವಿಕ ಜ್ಞಾನ ಮಾತ್ರವೇ ಯೋಗ್ಯವೆಂದೂ, ಇದರಿಂದ ರಾಜಸ ತಾಮಸ ಕರ್ಮಾರಂಭಕ ಜ್ಞಾನಗಳು ಜ್ಞಾನ ಶಬ್ದದಿಂದ ಹೇಳಲ್ಪಟ್ಟರೂ ಅಜ್ಞಾನ ತುಲ್ಯಗಳೆಂಬ ಭಾವವು ಇದರಿಂದ ಹೇಳಲ್ಪಟ್ಟಿತು. **ಏತಜ್ಜ್ಞಾನಮಿತಿಪ್ರೋಕ್ತ ಮಜ್ಞಾನ ಯದತೋನ್ಯಥಾ**" ಎಂಬ ಮತ್ತು" **ಸಜ್ಞಾಯತೇ ಯೇನತದಸ್ತದೋಷಂ ಶುದ್ಧಂ ಪರಂ ನಿರ್ಮಲಮೇಕರೂಪಮ್ । ಸಂದೃಶ್ಯತೇವಾಪ್ಯವಗಮ್ಯತೇವಾ ತಜ್ಜ್ಞಾನ ಮಜ್ಞಾನ ಮತೋ ನ್ಯದುಕ್ತಮ್** ॥ ಎಂಬಿವು ಅನುಸಂಧೇಯವು. ॥೨೨॥

**ಭಾಷ್ಯಾವತಾರಿಕೆಯು**—ಹಿಂದೆ ಮಾಡತಕ್ಕ ಕರ್ಮವನ್ನು ಆರಂಭಿಸುವ ಸಮಯದಲ್ಲಿನ ಜ್ಞಾನವು, ಸಾತ್ವಿಕ ರಾಜಸ ತಾಮಸಾಧಿಕಾರಿಗಳಲ್ಲಿ ಈ ಗುಣಭೇದಗಳಿಂದ ಸಾತ್ವಿಕ ರಾಜಸ ತಾಮಸ ರೂಪದಲ್ಲಿ ಮೂರು ವಿಧವೆಂದು ಹೇಳಿ, ಅವುಗಳ ಲಕ್ಷಣಗಳನ್ನು ತಿಳಿಯಪಡಿಸಿದರು. ಈಗ ಆ ಸಾತ್ವಿಕ ರಾಜಸ ತಾಮಸಾಧಿಕಾರಿಗಳು ಮಾಡತಕ್ಕ ಕರ್ಮವೂ ಸಹ, ಅವರವರುಗಳ ಗುಣಭೇದಗಳಿಗೆ ಅನುಸಾರವಾಗಿ, ಮೂರು ವಿಧಗಳೆಂದು ಉಪದೇಶಿಸಿ, ಅಂತಹ ಕರ್ಮಲಕ್ಷಣವನು ಉಪದೇಶಿಸುತ್ತಾರೆ.—**ಏವಂ** - ಹಿಂದಿನ ಮೂರು ಶ್ಲೋಕಗಳಲ್ಲಿ ಜ್ಞಾನವನ್ನು ಕುರಿತು ಹೇಳಲ್ಪಟ್ಟ ಹಾಗೆ, **ಕರ್ತ್ತವ್ಯಕರ್ಮವಿಷಯಜ್ಞಾನಸ್ಯ** - ಮಾಡಬೇಕಾದ ಕರ್ಮದ ವಿಷಯವಾದ ಜ್ಞಾನಕ್ಕೆ, **ಅಧಿಕಾರವೇಲಾಯಾಂ** - ಕರ್ಮವನ್ನು ಪ್ರಾರಂಭಿಸುವ ವೇಳೆಯಲ್ಲಿ, **ಅಧಿಕಾರ್ಯಂಶೇನ** - ಕರ್ಮಮಾಡುವ ಅಧಿಕಾರಿಯ ಗುಣಗಳಿಗೆ ಸಂಬಂಧಿಸಿರುವದರಿಂದ ಎಂದರೆ ಸರ್ವೇಶ್ವರನೊಂದಿಗೆ ಅವಿಭಕ್ತವೆಂದೂ ವಿಭಕ್ತವೆಂದೂ ಹೀಗೆ ವಿಶೇಷಿಸಿ ಹೇಳುವ ಕರ್ಮಾಧಿಕಾರಿಯ ಸ್ವರೂಪದ ಅನುಸಂಧಾನದಿಂದ ಎಂಬ ಭಾವವು. **ಗುಣತಸ್ತ್ರೈವಿಧ್ಯಮುಕ್ತ್ವಾ** . ಸಾತ್ವಿಕ ರಾಜಸ ತಾಮಸ ಗುಣಭೇದದಿಂದ ಮೂರು ವಿಧವೆಂಬುದನ್ನು ಹೇಳಿ, ಈಗ **ಅನುಷ್ಠೇಯಸ್ಯ ಕರ್ಮಣಃ** - ಅನುಷ್ಠಿಸುವ ಕರ್ಮಕ್ಕೂ ಸಹ, **ಗುಣ ತಸ್ತ್ರೈವಿಧ್ಯಮಾಹ** - ಅಧಿಕಾರಿಯ ಸಾತ್ವಿಕ ರಾಜಸ ತಾಮಸ ಗುಣಗಳಿಗೆ ಅನುಗುಣವಾಗಿ ಸಾತ್ವಿಕ ರಾಜಸ ತಾಮಸ ಕರ್ಮಗಳಾಗಿ ಮೂರು ವಿಧವೆಂಬುದನ್ನು ಹೇಳುತ್ತಾರೆ.—ಅಧಿಕಾರಿಗಳು ಸಾತ್ವಿಕ ರಾಜಸ ತಾಮಸ ಗುಣಗಳಾಧಿಕ್ಯದಿಂದ ಮೂರು ವಿಧವು,

**ಮೂ. ನಿಯತಂ ಸಙ್ಗರಹಿತ ಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕ ಮುಚ್ಯತೇ ॥ ೨೩ ॥**

ಭಾ. ನಿಯತಂ - **ಸ್ವವರ್ಣಾಶ್ರಮೋಚಿತಂ, ಸಙ್ಗರಹಿತಂ - ಕರ್ತೃತ್ವಾದಿ ಸಙ್ಗರಹಿತಂ, ಅರಾಗದ್ವೇಷತಃಕೃತಂ - ಕೀರ್ತಿರಾಗಾದ ಕೀರ್ತಿದ್ವೇಷಾಚ್ಚ ನಕೃತಂ,ಅದಂಭೇನ ಕೃತಮಿತ್ಯರ್ಥಃ, ಅಫಲಪ್ರೇಪ್ಸುನಾ - ಅಫಲಾಭಿಸಂಧಿನಾ ಕಾರ್ಯಮಿತ್ಯೇವ ಕೃತಂ ಯತ್ಕರ್ಮ, ತತ್ಸಾತ್ತ್ವಿಕ ಮುಚ್ಯತೇ ॥೨೩॥**

---

ಆದುದರಿಂದ ಅವರ ಪ್ರವೃತ್ತಿಗಳಿಗೆ ಬೇಕಾದ ಜ್ಞಾನವೂ, ಅವರುಗಳ ಕರ್ಮವೂ ಸಹ ಮೂರು ವಿಧವೆಂಬ ತಾತ್ಪರ್ಯವು. ಆದುದರಿಂದಲೇ **ಅಧಿಕಾರ್ಯಂಶೇನ**-ಸಾತ್ತ್ವಿಕ ರಾಜಸ ತಾಮಸ ಗುಣಾಧಿಕ್ಯವುಳ್ಳ ಅಧಿಕಾರಿಗಳಿಗೆ ಸಂಬಂಧಿಸಿರುವದರಿಂದ ಕಾರ್ಯಾರಂಭಕ ಜ್ಞಾನವೂ, ಅಂತಹ ಜ್ಞಾನದಿಂದ ಅನುಷ್ಠಿಸುವ ಕರ್ಮವೂ ಸಾತ್ತ್ವಿಕ ರಾಜಸ ತಾಮಸವಾಗಿ ಮೂರು ವಿಧವೆಂಬ ಭಾವವು.

**ಮೂಲಕ್ಕೆ ಅರ್ಥವು**—ಸಾತ್ತ್ವಿಕಾಧಿಕಾರಿಯಿಂದ, ಕರ್ಮಾರಂಭ ವೇಳೆಯಲ್ಲಿ ಸಾತ್ತ್ವಿಕ ಜ್ಞಾನದಿಂದ ಅನುಷ್ಠಿಸುವ ಸಾತ್ತ್ವಿಕ ಕರ್ಮವು ಎಂತಹದ್ದೆಂದು ಅದರ ಲಕ್ಷಣವನ್ನು ತಿಳಿಸುತ್ತಾರೆ.— **ನಿಯತಂ** - ಕರ್ಮಾಧಿಕಾರಿಗೆ ವರ್ಣಾಶ್ರಮಧರ್ಮಗಳಿಗನುಗುಣವಾಗಿರುವ ವಿಹಿತಕರ್ಮವನ್ನು, ನಿತ್ಯನೈಮಿತ್ತಿಕವಾಗಿಯೂ, ಅಥವಾ ಶಾಸ್ತ್ರಾನುಮತಿಯುಳ್ಳದ್ದಾಗಿಯೂ, **ಸಙ್ಗರಹಿತಂ** - ಕರ್ತೃತ್ವ ಮಮತಾ ರಹಿತವಾಗಿಯೂ, ಅರಾಗದ್ವೇಷತಃ **ಕೃತಂ** - ರಾಗದ್ವೇಷಗಳಿಲ್ಲದೇ ಮಾಡಲ್ಪಟ್ಟದ್ದಾಗಿಯೂ, ಮತ್ತು **ಅಫಲಪ್ರೇಪ್ಸುನಾ ಕೃತಂ** - ಫಲಾಭಿಸಂಧಿಯಿಲ್ಲದಿರುವ ಅಧಿಕಾರಿಯಿಂದ **ಕೃತಂ** – ಮಾಡಲ್ಪಟ್ಟದುದಾಗಿಯೂ, **ಯತ್ಕರ್ಮ** - ಯಾವ ಕರ್ಮ ಉಂಟೋ, **ತತ್** - ಅದು, **ಸಾತ್ತ್ವಿಕಮುಚ್ಯತೇ** - ಸಾತ್ತ್ವಿಕವೆಂದು ಹೇಳಲ್ಪಡುತ್ತದೆ. ಸಾತ್ತ್ವಿಕ ಕರ್ಮವು ಎಂತಾದ್ದು ಎಂದರೆ ತಾನು ಮಾಡುವ ಕರ್ಮಕ್ಕೆ (೧) ಶಾಸ್ತ್ರಸಮ್ಮತಿ ಇರಬೇಕು. (೨) ಕರ್ತೃತ್ವ ಮಮತಾ ಫಲತ್ಯಾಗಗಳಿಂದ ಸಾತ್ತ್ವಿಕತ್ಯಾಗಯುಕ್ತವಾಗಿರಬೇಕು. (೩) ರಾಗದ್ವೇಷಾದಿಗಳಿಗೆ ಸಂಬಂಧಿಸದೇ ಇರಬೇಕು. ಹೀಗೆ ಇದ್ದರೆ ಸಾತ್ತ್ವಿಕಕರ್ಮವೆನಿಸುತ್ತದೆ. ಇಂತಹ ಕರ್ಮವು ಮೋಕ್ಷೋಪಾಯಕ್ಕೆ ಸಾಧನವು. ಕರ್ಮಯೋಗವೂ ನಿಯತಕರ್ಮಗಳನ್ನುಳ್ಳದ್ದಾಗಿ, ಕರ್ಮವೇ ಸ್ವಯಂ ಪ್ರಯೋಜನವಾಗಿ ಕರ್ತೃತ್ವ ಮಮತಾ ಫಲತ್ಯಾಗಗಳೊಂದಿಗೆ ಈಶ್ವರಾರ್ಪಣಬುದ್ಧಿಯಿಂದ ಮಾಡಲ್ಪಡುವದರಿಂದ ಸಾತ್ತ್ವಿಕಕರ್ಮವೆಂದೆನಿಸಿ ಮೋಕ್ಷೋಪಾಯಕ್ಕೆ ಸಾಧನವು.

**ಭಾಷ್ಯಾರ್ಥವು**—ಸಾತ್ತ್ವಿಕ ಕರ್ಮದ ಲಕ್ಷಣವನ್ನು ತಿಳಿಸುತ್ತಾರೆ.—**ನಿಯತಂ** ಎಂದರೆ **ಸ್ವವರ್ಣಾಶ್ರಮೋಚಿತಮ್** - ಅಧಿಕಾರಿಯಾದ ತನ್ನ ವರ್ಣಾಶ್ರಮದ ಧರ್ಮಗಳಿಗೆ ಯೋಗ್ಯವಾದುವಾಗಿಯೂ, **ಸಙ್ಗರಹಿತಂ** ಎಂದರೆ **ಕರ್ತೃತ್ವಾದಿ ಸಙ್ಗರಹಿತಂ** - ಕರ್ತೃತ್ವವೇ ಮೊದಲಾದ ಸಙ್ಗವಿಲ್ಲದುದಾಗಿಯೂ, ಇಲ್ಲಿ ಆದಿಪದದಿಂದ ಮಮತಾ ಹೇಳಲ್ಪಟ್ಟಿತು, ಹಿಂದೆ ೩ನೆಯ ಅಧ್ಯಾಯದ ೩೦ನೆಯ ಶ್ಲೋಕದಲ್ಲೂ, ಪುನಃ ಈ ಅಧ್ಯಾಯದ ಆರನೆಯ ಶ್ಲೋಕದಲ್ಲೂ ಕರ್ಮದಲ್ಲಿ ಕರ್ತೃತ್ವಮಮತಾ ಫಲತ್ಯಾಗಗಳಿರಬೇಕೆಂದು ಹೇಳಲ್ಪಟ್ಟವು; ಈ ಶ್ಲೋಕದ **ಅಫಲಪ್ರೇಪ್ಸುನಾ** ಎಂಬುದರಿಂದ ಫಲತ್ಯಾಗವು ಹೇಳಲ್ಪಡುವದರಿಂದ ಇಲ್ಲಿ **ಸಙ್ಗರಹಿತಂ** ಎಂಬಲ್ಲಿ ಕರ್ತೃತ್ವ ಮತ್ತು ಮಮತಾ ಇಲ್ಲದಿರುವದಾಗಿಯೂ, ಎಂದು ಇಷ್ಟು ಮಾತ್ರವೇ ಅರ್ಥವು, ಮತ್ತು **ಅರಾಗದ್ವೇಷತಃ ಕೃತಂ,** ಎಂದರೆ **ಕೀರ್ತಿರಾಗಾತ್ ಅಕೀರ್ತಿದ್ವೇಷಾಚ್ಚ ನ ಕೃತಂ** – ಕೀರ್ತಿಯು ಬೇಕೆಂಬ ಆಶೆಯಿಂದಲಾಗಲಿ, ಅಥವಾ ಪ್ರಾಪ್ತವಾಗಿರುವ ಅಪಯಶಸ್ಸಿನಲ್ಲಿ ದ್ವೇಷಭಾವದಿಂದಲಾಗಲಿ, ಮಾಡಲ್ಪಡದೇ ಇರುವದಾಗಿಯೂ, ಇದರ ತಾತ್ಪರ್ಯವನ್ನು ವ್ಯಕ್ತಪಡಿಸುತ್ತಾರೆ, **ಅದಂಭೇನ ಕೃತಮಿತ್ಯರ್ಥಃ** – ದಂಭಕ್ಕಾಗಿ ಮಾಡಿದುದಲ್ಲವೆಂಬ ಭಾವವು, **ಖ್ಯಾತಿ**

ಪೂಜೆಗಳಿಗಾಗಿ ಮಾಡಿದುದಲ್ಲವೆಂಬ ತಾತ್ಪರ್ಯವು. ಹಾಗಾದರೆ ಕಾರ್ಯಮಾಡುವವನಭಾವವು ಹೇಗಿರಬೇಕೆಂದರೆ ಹೇಳುತ್ತಾರೆ—**ಅಫಲಪ್ರೇಪ್ಸುನಾ** ಎಂದರೆ **ಅಫಲಾಭಿಸಂಧಿನಾ**. ಫಲಾಭಿಸಂಧಿ ಇಲ್ಲದೇ ಇರುವವನಿಂದ. **ಕಾರ್ಯಮಿತ್ಯೇವಕೃತಂ** - ಮಾಡಲ್ಪಡತಕ್ಕದು ಎಂಬಿಷ್ಟು ಮಾತ್ರ ಭಾವನೆಯಿಂದ ಮಾಡಲ್ಪಟ್ಟಿದ್ದಾಗಿಯೂ, **ಯತ್ಕರ್ಮ** – ಯಾವ ಕರ್ಮ ಉಂಟೋ, **ತತ್ಸಾತ್ವಿಕಮುಚ್ಯತೇ** – ಅದು ಸಾತ್ವಿಕವೆಂದು ಹೇಳಿಸಿಕೊಳ್ಳಲ್ಪಡುತ್ತದೆ. ಮೋಕ್ಷಾರ್ಥಿಗೆ ಪರಬ್ರಹ್ಮ ವಿಷಯಕ ಸಙ್ಗ ಉಂಟು ; ಮತ್ತು ಪ್ರತಿಯೊಂದು ಕರ್ಮವು, ಯಾವುದೋ ಒಂದು ಉದ್ದೇಶ್ಯದಿಂದಲೇ ಮಾಡಲ್ಪಡುತ್ತದೆ; ಮೋಕ್ಷಾರ್ಥಿಯೂ ಮೋಕ್ಷಕಾಮನೆಯಿಂದಲ್ಲವೇ ಕರ್ಮವನ್ನು ಎಸಗುವನು ; ಹೀಗಿರುವಾಗ **ಸಙ್ಗರಹಿತಂ** ಎಂದೂ **ಅರಾಗಕೃತಂ** ಎಂದು ಹೇಳಿದುದರ ಅಭಿಪ್ರಾಯವೇನು? ಎಂದರೆ ಅದಕ್ಕಾಗಿ ಕರ್ತೃತ್ವಾ**ದಿಸಙ್ಗ**ರಹಿತಂ ಎಂದೂ, **ಕೀರ್ತಿರಾಗಾತ್ ನಕೃ**ತಂ ಎಂದೂ ವ್ಯಾಖ್ಯಾನ ಮಾಡಿರುತ್ತಾರೆ ; ಕೀರ್ತಿರಾಗವಿಲ್ಲದೆ ಮಾಡತಕ್ಕದ್ದೆಂಬ ವ್ಯಾಖ್ಯಾನವೇನೋ ಸರಿಹೋಯಿತು, **ಅಕೀರ್ತಿದ್ವೇಷಾಚ್ಚನಕೃತಂ** ಎಂಬ ವ್ಯಾಖ್ಯಾನವು ಹೇಗೆ ? ಅಕೀರ್ತಿಯ ದ್ವೇಷ ಬೇಡವೆಂದರೆ ಅಕೀರ್ತಿ ಇರಬಹುದೋ ಎಂದರೆ, ಅರ್ಥವು ಹಾಗಲ್ಲವು ; ಈತನು ನಿಯತಕರ್ಮಾನುಷ್ಠಾನ ಮಾಡುವನಲ್ಲವೆಂಬ ಅಕೀರ್ತಿಯಲ್ಲಿ ದ್ವೇಷಬುದ್ಧಿಯಿಂದ ಮಾಡಿದರೆ, ಆಗ ದಂಭಕ್ಕಾಗಿ ಆಚರಿಸುವನೆಂದಾಗುತ್ತದೆ; ಹಾಗೆ ಮಾಡಲ್ಪಡದಿರುವ ಕರ್ಮವು ಎಂಬ ಭಾವವು. ಒಟ್ಟು ತಾತ್ಪರ್ಯವನ್ನು **ಅದಂಭೇನಕೃತಂ** ಎಂದು ವ್ಯಕ್ತಪಡಿಸಿರುತ್ತಾರೆ. ಹಿಂದೆ ೧೭-೧೮ನೆಯ ಶ್ಲೋಕದಲ್ಲಿ ರಾಜಸತಪಸ್ಸಿನ ಲಕ್ಷಣವನ್ನು ಹೇಳುವಾಗ **"ತಪೋದಂಭೇನ ಚೈವಯತ್"** ಎಂಬಲ್ಲೇ ತೋರಿಬರುವಹಾಗೆ, ದಂಭದಿಂದ ಮಾಡಿದ ಕರ್ಮವಾಗಕೂಡದೆಂದು ಹಾಗೆ ವ್ಯಾಖ್ಯಾನವು. ಅಥವಾ ಇನ್ನೊಂದು ವಿಧವಾಗಿಯೂ ನಯನವನ್ನು ಮಾಡಬಹುದು. ಹೇಗೆಂದರೆ ? ವಿಹಿತಕರ್ಮಗಳಾದರೂ ರಾಗದ್ವೇಷಾದಿಗಳಿಗೆ ವಶವಾಗಿರಬಹುದು; ಹೇಗೆಂದರೆ? ಪುತ್ರಕಾಮನೆಯಿಂದ ಮಾಡುವ ಪುತ್ರಕಾಮೇಷ್ಟಿಯೂ ಶಾಸ್ತ್ರವಿಹಿತಕರ್ಮವೇ, ಕೆಲವು ಅಧಿಕಾರಿಗಳಿಗೆ ಎಂದೇ ನಿಯತವಾಗಿರಬಹುದು ; ಅಂತಹ ಕರ್ಮವು ಸಙ್ಗಫಲರಹಿತಗಳಲ್ಲದೆ, ರಾಗಪ್ರಾಪ್ತವಾದುದರಿಂದ, ಅದು ಸಾತ್ವಿಕವಾಗಲಾರದು ಎಂಬ ತಾತ್ಪರ್ಯವು: **ಕಾಮೇಪ್ಸುನಾ**-ಕೃತವಾದರೆ ಮುಂದೆ ರಾಜಸವೆಂದು ಹೇಳಲ್ಪಡುತ್ತದೆ. ಹಾಗೆಯೇ ಶಾಸ್ತ್ರ ವಿಹಿತ ಕರ್ಮವು ದ್ವೇಷದಿಂದಲೂ ಮಾಡಲ್ಪಡಬಹುದು. ಪರೀಕ್ಷಿದ್ರಾಜನ ಸರ್ಪಯಾಗವೂ, ಶ್ರೀ ಪರಾಶರರಿಂದ ಮಾಡಲ್ಪಟ್ಟ ರಾಕ್ಷಸನಾಶ ಸತ್ರವೂ. ಸಹ ದ್ವೇಷಪ್ರೇರಿತವಾದುವಾದುದರಿಂದ ಸಾತ್ವಿಕವಾಗಲಾರವು; ಇಂತಹ ರಾಗದ್ವೇಷಗಳಿರಕೂಡದೆಂದು **ಅರಾಗದ್ವೇಷತಃ ಕೃತಂ** ಎಂಬ ಪ್ರಯೋಗವೆಂದಾಗಲಿ ಭಾವಿಸಬಹುದು ; ಇವುಗಳಲ್ಲಿ ಮೊದಲಿನ ಅರ್ಥವೇ ಯುಕ್ತವಾಗಿ ತೋರುತ್ತದೆ.

ಆದುದರಿಂದ ಕರ್ಮವು ಸಾತ್ವಿಕವಾಗಬೇಕಾದರೆ ಅಧಿಕಾರಿಗೆ ನಿಯತವಾಗಿರುವದೂ ಅಲ್ಲದೆ ರಾಗದ್ವೇಷಾದಿಗಳಿಲ್ಲದೆ, ಕರ್ತೃತ್ವ ಮಮತಾ ಫಲಾಭಿಸಂಧಿಗಳಿಲ್ಲದೆ ಇರಬೇಕು. ಆಗ ಅದರಿಂದ ಈಶ್ವರಾನುಗ್ರಹ ಉಂಟಾಗತಕ್ಕದ್ದಾಗಿ ಅಂತಹ ಕರ್ಮವು ನಿರತಿಶಯ ಶ್ರೇಯಸ್ಸಿಗೆ ಸಹಕಾರಿಯಾಗುತ್ತದೆ ಎಂಬುದು ತಾತ್ಪರ್ಯವು. ಹೀಗೆ ಇಲ್ಲಿ ಸಾತ್ವಿಕತ್ಯಾಗ ಭಾವವು ಕರ್ಮಕೆ ಹೇಳಲ್ಪಟ್ಟಿತು.

**ಮೂಲಕ್ಕೆ** ಅರ್ಥವು— ಹಿಂದೆ **ಅಫಲಪ್ರೇಪ್ಸುನಾ**, ಫಲಾಭಿಸಂಧಿರಹಿತನಾದ ಸಾತ್ವಿಕಾಧಿಕಾರಿಯಿಂದ ನಿಯತವಾದುದಾಗಿ, ಕರ್ತೃತ್ವ ಮಮತಾ ಫಲ ತ್ಯಾಗಗಳ ಮೂಲಕವಾಗಿ ರಾಗದ್ವೇಷಾದಿಗಳಿಲ್ಲದೆ ಮಾಡಲ್ಪಟ್ಟ ಕರ್ಮವು ಸಾತ್ವಿಕವೆಂದು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಾದರೋ, **ಫಲೇಪ್ಸುನಾ**, ಫಲಾಭಿಲಾಷೆಯುಳ್ಳವನಿಂದ, ತಾನು ಮಾಡಿದೆ ಎಂಬ ಅಹಂಕಾರ ಬುದ್ಧಿಯುಳ್ಳವನಾಗಿ ತುಂಬಾ ಆಯಾಸದಿಂದ ಮಾಡಲ್ಪಟ್ಟ ಕರ್ಮವು, ರಾಜಸವೆನಿಸುತ್ತದೆಂದು

ಮೂ. ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।
ಕ್ರಿಯತೇ ಬಹುಲಾಯಾಸಂ ತದ್ರಾಜಸ ಮುದಾಹೃತಮ್ ॥೨೪॥

ಭಾ. ಯತ್ತು ಪುನಃ ಕಾಮೇಪ್ಸುನಾ - ಫಲಪ್ರೇಪ್ಸುನಾ, ಸಾಹಂಕಾರೇಣವಾ - ವಾಶಬ್ದ ಶ್ಚಾರ್ಥೇ, ಕರ್ತೃತ್ವಾಭಿಮಾನಯುಕ್ತೇನ ಚ, ಬಹುಲಾಯಾಸಂ, ಯತ್ಕರ್ಮ ಕ್ರಿಯತೇ, ತದ್ರಾಜಸ ಮಿತ್ಯರ್ಥಃ ॥ ೨೪ ॥

ತಿಳಿಸುತ್ತಾರೆ.— ಯತ್ತು ಪುನಃ - ಯಾವ ಕರ್ಮವಾದರೋ, ಇಲ್ಲಿ ತು ಪುನಃ ಎಂಬುದರಿಂದ ಸಾತ್ವಿಕ ಕರ್ಮವನ್ನು ವ್ಯಾವರ್ತಿಸಿ ಹೇಳಲ್ಪಟ್ಟಿತು ; ಕಾಮೇಪ್ಸುನಾ - ಫಲಾಪೇಕ್ಷೆಯುಳ್ಳ ಅಧಿಕಾರಿಯಿಂದಾಗಲಿ, ಮತ್ತು ಸಾಹಂಕಾರೇಣವಾ - ಅಹಂಬುದ್ಧಿಯುಳ್ಳ ಎಂದರೆ ನಾನು ಮಾಡಿದೆ ಎಂಬ ಬುದ್ಧಿಯುಳ್ಳವನಿಂದಾಗಲಿ, ಬಹುಲಾಯಾಸಂ - ತುಂಬಾ ಆಯಾಸ ಉಂಟಾಗುವ ಹಾಗೆ, ಕ್ರಿಯತೇ - ಮಾಡಲ್ಪಡುತ್ತದೋ ತತ್ - ಅಂತಹ ಕರ್ಮವು, ರಾಜಸವೆಂದು, ಉದಾಹೃತಮ್ - ಹೇಳಲ್ಪಡುತ್ತದೆ. ಅಂತಹ ಕರ್ಮವು ರಾಜಸ ಕರ್ಮಕ್ಕೆ ಉದಾಹರಣೆಯು ಎಂಬ ಭಾವವು. ಕರ್ತೃತ್ವ ಮಮತೆ ಫಲಗಳನ್ನು ತ್ಯಾಗಮಾಡದೆ, ತಾನು ಮಾಡಿದೆನೆಂಬ ಖ್ಯಾತಿಗಾಗಿ ತುಂಬಾ ಆಯಾಸದಿಂದ ಮಾಡಿದ ಕರ್ಮವು ರಾಜಸವೆಂದು ಹೇಳಲ್ಪಟ್ಟಿತು. ॥೨೪॥

ಭಾಷ್ಯಾರ್ಥವು—ಫಲಾಕಾಂಕ್ಷೆಯಿಂದಲೂ ಕರ್ತೃತ್ವಾಭಿಮಾನದಿಂದಲೂ ಮಾಡಲ್ಪಡುವ ಕರ್ಮವು ರಾಜಸವೆಂದು ಹೇಳುತ್ತಾರೆ.—ಯತ್ತು ಪುನಃ - ಯಾವ ಕರ್ಮವಾದರೋ ಕಾಮೇಪ್ಸುನಾ ಎಂದರೆ ಫಲೇಪ್ಸುನಾ – ಫಲಾಕಾಂಕ್ಷೆಯುಳ್ಳ ಅಧಿಕಾರಿಯಿಂದ, ಇಲ್ಲಿ ವಾ ಶಬ್ದಶ್ಚಾರ್ಥೇ - ಇಲ್ಲಿ ವಾ ಎಂಬ ಪದವು ಚಕಾರಾರ್ಥದಲ್ಲಿ ಎಂದರೆ ವಿಕಲ್ಪವಲ್ಲದೆ ಸಮುಚ್ಚಯಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ, ಸಾಹಂಕಾರೇಣವಾ ಎಂದರೆ ಕರ್ತೃತ್ವಾಭಿಮಾನಯುಕ್ತೇನ ಚ - ತಾನು ಮಾಡಿದೆ ಎಂಬ ಕರ್ತೃತ್ವಾಭಿಮಾನವನ್ನೂ ಹೊಂದಿರುವವನಿಂದಲೂ, ಬಹುಲಾಯಾಸಂ - ತುಂಬಾ ಆಯಾಸದಿಂದ, ಯತ್ಕರ್ಮಕ್ರಿಯತೇ - ಯಾವ ಕರ್ಮವು ಮಾಡಲ್ಪಡುತ್ತದೋ, ತತ್ - ಅಂತಹ ಕರ್ಮವು, ರಾಜಸಮುಚ್ಯತೇ - ರಾಜಸವೆಂದು ಹೇಳಲ್ಪಡುತ್ತದೆ. ರಜೋಗುಣದ ಮಾಹಾತ್ಮ್ಯೆಯು, ವಿಪರೀತ ಪ್ರವೃತ್ತ್ಯಾಧಿಕ್ಯವಿರುವ ಹಾಗೆ ತುಂಬಾ ಅನುಪಯುಕ್ತವಾಗಿ ವಿಜೃಂಭಣೆ ಇರುವ ಹಾಗೆ ಮಾಡುತ್ತದೆಯಾದುದರಿಂದ, ಬಹುಲಾಯಾಸಂ ಎಂಬ ಪ್ರಯೋಗವು. ಹೀಗೆ ತುಂಬಾ ಪ್ರಯಾಸಪೂರ್ವಕವಾಗಿ ಸರ್ವವನ್ನು ತಾನೇ ಮಾಡಿದೆನೆಂಬ ಅಹಂಕಾರಯುಕ್ತ ಕರ್ಮವೆಂದು ತಿಳಿಸುವದಕ್ಕಾಗಿ ಸಾಹಂಕಾರೇಣ ಎಂಬ ಪ್ರಯೋಗವು. ಮನ್ಯೈವಕ್ರಿಯತೇ ಎಂಬಲ್ಲಿ ಮಯ್ಯೈವ ಎಂದು ಮೂಲದಲ್ಲಿ ಇಲ್ಲದಿರುವದನ್ನು ಹೇಳಿದುದು ಹೇಗೆ ? ಎಂದರೆ, ಇದು ಸಾಹಂಕಾರೇಣ ಎಂಬ ಪದದಿಂದ ತೋರುವ ಅರ್ಥವು. ಸಾತ್ವಿಕ ಕರ್ಮವು ಫಲಾದಿತ್ಯಾಗಪೂರ್ವಕವಾಗಿ ಈಶ್ವರ ಪ್ರೀತಿಗಾಗಿ ಮಾಡಲ್ಪಡುತ್ತದೆ. ರಾಜಸವಾದರೋ ಫಲಕ್ಕಾಗಿ ತಾನು ಮಾಡಿದೆನೆಂಬ ಖ್ಯಾತಿಗಾಗಿ ಮಾಡಲ್ಪಡುತ್ತದೆ. ಇದಕ್ಕೆ ಉದಾಹರಣೆಯು ಅರ್ಜುನನ ಬ್ರಾಹ್ಮಣ ಮೃತ ಪುತ್ರರನ್ನು ತಂದುಕೊಡುವೆನೆಂಬ ಸಙ್ಕಲ್ಪವು. ॥೨೪॥

ಮೂಲಕ್ಕೆ ಅರ್ಥವು—ಸಾತ್ವಿಕ ರಾಜಸ ಕರ್ಮ ಲಕ್ಷಣಗಳನ್ನು ಹೇಳಿ, ಈ ಶ್ಲೋಕದಲ್ಲಿ ತಾಮಸ ಕರ್ಮಲಕ್ಷಣವು ಹೇಳಲ್ಪಡುತ್ತದೆ— ಅನುಬಂಧಂ - ಕರ್ಮವನ್ನು ಮಾಡುವಾಗ ಅದನ್ನನುಸರಿಸಿ ಬರುವ ದುಃಖವನ್ನೂ, ಕ್ಷಯಂ – ಕರ್ಮಮಾಡುವದಕ್ಕೆ ಬೇಕಾದ ಅರ್ಥವ್ಯಯವನ್ನು, ಹಿಂಸಾಂ - ಕರ್ಮಮಾಡುವಾಗ ತನಗೂ ಇತರರಿಗೂ ಉಂಟಾಗುವ ಕಾಯಕ್ಲೇಶವನ್ನೂ, ಪೌರುಷಮ್ – ಪರಮ ಪುರುಷನ ಅನುಗ್ರಹ ಮೂಲಕ ತನಗೆ ಸಾಮರ್ಥ್ಯ ಉಂಟೇ ಎಂಬುವದನ್ನೂ, ಅನವೇಕ್ಷ್ಯ - ಚನ್ನಾಗಿ ವಿಮರ್ಶಿಸಿ ತಿಳಿಯದೆ, ಮೋಹಾತ್ - ಮೇಲೆ ಹೇಳಿದವುಗಳಲ್ಲಿನ ಅವಿ

**ಮೂ. ಅನುಬಂಧಂ ಕ್ಷಯಂ ಹಿಂಸಾ ಮನವೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸ ಮುಚ್ಯತೇ ॥ ೨೫ ॥**

**ಭಾ.** **ಕೃತೇ ಕರ್ಮಣ್ಯನುಬದ್ಧ್ಯಮಾನಂ ದುಃಖಮನುಬಂಧಃ, ಕ್ಷಯಃ - ಕರ್ಮಣಿ ಕ್ರಿಯಮಾಣೇ ಅರ್ಥವಿನಾಶಃ, ಹಿಂಸಾ - ತತ್ರ ಪ್ರಾಣಿಪೀಡಾ, ಪೌರುಷಂ – ಆತ್ಮನಃ ಕರ್ಮಸಮಾಪನ ಸಾಮರ್ಥ್ಯಂ, ಏತಾನಿ ಅನವೇಕ್ಷ್ಯ–ಅವಿಮೃಶ್ಯ, ಮೋಹಾತ್-ಪರಮಪುರುಷ ಕರ್ತೃತ್ವಾಜ್ಞಾನಾತ್, ಯತ್ಕರ್ಮಾರಭ್ಯತೇ, ತತ್ತಾಮಸ ಮುಚ್ಯತೇ ॥೨೫॥**

---

ಜ್ಞತೆಯಿಂದ ಎಂದರೆ, ಹೀಗೆ ದುಃಖವುಂಟು, ಧನವ್ಯಯವುಂಟು, ಪರಮಪುರುಷಾನುಗ್ರಹವಿರಬೇಕು, ಇತ್ಯಾದಿ ಜ್ಞಾನಗಳಿಲ್ಲದೆ ತಾನೇ ನಿರ್ವಹಿಸಿಬಿಡುತ್ತೇನೆ ಎಂಬ ಭ್ರಮದಿಂದ, **ಯತ್ಕರ್ಮ** - ಯಾವ ಕರ್ಮವು, **ಆರಭ್ಯತೇ** - ಆರಂಭಿಸಲ್ಪಡುತ್ತದೋ, **ತತ್** - ಅಂತಹ ಕರ್ಮವು, **ತಾಮಸಮುಚ್ಯತೇ** - ತಾಮಸವೆಂದು ಹೇಳಿಸಿಕೊಳ್ಳುತ್ತದೆ. ಇಂತಹ ತಾಮಸಕರ್ಮವು ಕೈಗೂಡುವದೇ ದುರ್ಲಭವು ; ದುಃಖವನ್ನು ಸಹಿಸಿಕೊಳ್ಳುವ ಮನಸ್ಥೈರ್ಯವಿಲ್ಲವು ; ಪೂರೈಸಲು ದ್ರವ್ಯವು ಸಾಲದು ; ತನಗೂ ಪರರಿಗೂ ಪೀಡಾಯುಕ್ತವಾಗಿರಬಹುದು ; ಪರಮ ಪುರುಷನ ಪ್ರೀತಿಯನ್ನು ಸಂಪಾದಿಸಿಕೊಳ್ಳಲಿಲ್ಲವಾದುದರಿಂದ ಕರ್ಮಕ್ಕೆ ಸತ್ತೆಯೇ ಇಲ್ಲವು ; ಇಂತಹ ಕರ್ಮವು ಎಂದಿಗಾದರೂ ಕಾರ್ಯಕಾರಿಯಾಗುವ ಸಂಭವವೇ ಇಲ್ಲವು. ರಾಜಸವು ನಶ್ವರ ಫಲವನ್ನಾದರೂ ಕೊಡಬಹುದು ; ತಾಮಸ ಕರ್ಮಕ್ಕೆ ಫಲವೇ ಇಲ್ಲವು ; ಭಗವದನುಗ್ರಹವಿಲ್ಲದೆ, ನಿಗ್ರಹವೂ ಉಂಟಾಗಬಹುದು; ಅಂತಹ ಕರ್ಮವು ಅನಿಷ್ಟಫಲವನ್ನು ಕೊಡಬಹುದೆಂಬ ಭಾವವು.

**ಭಾಷ್ಯಾರ್ಥವು—ಕೃತೇಕರ್ಮಣಿ** - ಕರ್ಮವು ಮಾಡಲ್ಪಡಲಾಗಿ, **ಅನುಬದ್ಧ್ಯಮಾನಂ ದುಃಖಮನುಬಂಧಃ** - ಅನುಸರಿಸಿ ಸಂಬಂಧಿಸಿಕೊಂಡು ಬರುವ ಕ್ಲೇಶವು ಅನುಬಂಧವೆನಿಸುತ್ತದೆ ; **ಕ್ಷಯಃ** ಎಂದರೆ **ಕರ್ಮಣಿಕ್ರಿಯಮಾಣೇ** ಅರ್ಥವಿನಾಶಃ - ಕರ್ಮವನ್ನು ಮಾಡುವದರಲ್ಲಿ ವಿಶೇಷ ದ್ರವ್ಯವ್ಯಯವು, **ಹಿಂಸಾ** ಎಂದರೆ ತತ್ರಪ್ರಾಣಿಪೀಡಾ - ಕೆಲಸವು ನಡೆಯುವ ಸಂದರ್ಭದಲ್ಲಿ ಪ್ರಾಣಿಗಳಿಗುಂಟಾಗುವ ತೊಂದರೆಯು, ಎಂದರೆ ತನಗೂ ಇತರರಿಗೂ ಉಂಟಾಗುವ ದೇಹಾಯಾಸವು, **ಪೌರುಷಂ** ಎಂದರೆ **ಆತ್ಮನಃಕರ್ಮಸಮಾಪನ ಸಾಮರ್ಥ್ಯಂ** - ತನಗೆ ಕರ್ಮವನ್ನು ನಿರ್ವಹಿಸಿ ಪೂರೈಸುವ ಸಾಮರ್ಥ್ಯವು ; **ಏತಾನಿ** - ಇವೆಲ್ಲವನ್ನೂ, **ಅನವೇಕ್ಷ್ಯ** ಎಂದರೆ **ಅವಿಮೃಶ್ಯ** - ವಿಮರ್ಶಿಸಿ ತಿಳಿಯದೆ, **ಮೋಹಾತ್** ಎಂದರೆ **ಪರಮಪುರುಷ ಕರ್ತೃತ್ವಾಜ್ಞಾನಾತ್**-ಪರಮ ಪುರುಷನಿಂದಲೇ ಎಲ್ಲವೂ ನಡೆಯುತ್ತೆ ಎಂಬ ಜ್ಞಾನವಿಲ್ಲದೆ, **ಯತ್ಕರ್ಮಾರಭ್ಯತೇ** - ಯಾವ ಕರ್ಮವು ಆರಂಭಿಸಲ್ಪಡುತ್ತದೋ, **ತತ್ತಾಮಸಮುಚ್ಯತೇ** – ಅಂತಹ ಕರ್ಮವು ತಾಮಸವೆಂದು ಹೇಳಲ್ಪಡುತ್ತದೆ. ಇಲ್ಲಿ **ಅನುಬಂಧ** ವೆಂದರೆ ಕರ್ಮಕ್ಕೆ ಸಂಬಂಧಿಸಿಕೊಂಡಿರುವದು ಅದು ಕಾಯಕ್ಲೇಶರೂಪವಾದ ತೊಂದರೆಯಾದುದರಿಂದ ದುಃಖವೆಂದು **ಅರ್ಥ** ಮಾಡಲ್ಪಟ್ಟಿತು, ಹಾಗೆಯೇ ಕ್ಷಯಶಬ್ದವು ನಾಶವನ್ನು ಬೋಧಿಸುತ್ತದೆಯಾದುದರಿಂದ ಕರ್ಮ ಮಾಡುವದು ಪ್ರಕರಣವಾದುದರಿಂದ, ಅದಕ್ಕೆ ಬೇಕಾದ ದ್ರವ್ಯವೆಚ್ಚವು ಇಲ್ಲಿ ಹೇಳಲ್ಪಟ್ಟಿತೆಂದು **ಅರ್ಥವಿನಾಶಃ** ಎಂದು ವ್ಯಾಖ್ಯಾನ ಮಾಡಿರುತ್ತಾರೆ ; ಕರ್ಮಮಾಡುವಾಗ ತನಗೂ ಇತರರಿಗೂ ಸಹ ದೇಹಾಯಾಸವು ತುಂಬಾ ಇರುವದರಿಂದ ಎರಡನ್ನೂ ಒಟ್ಟುಕೂಡಿಸಿ **ಪ್ರಾಣಿಪೀಡಾ** ಎಂದು ಸಾಮಾನ್ಯವಾಗಿ ಹೇಳಿರುತ್ತಾರೆ. ಈತನು ತಾಮಸಿಯಾಗಿ ತಾಮಸಕರ್ಮವನ್ನು ಮಾಡುತ್ತಾನೆಯಾದುದರಿಂದ ತನಿಗೇನೇ ಪೌರುಷವಿರುವದೆಂದು ಭಾವಿಸುವನು. ಪ್ರಾರೀಪ್ಸಿತಕರ್ಮವು ನಿರ್ವಿಘ್ನವಾಗಿ ಪರಿಸಮಾಪ್ತಿಯನ್ನು ಹೊಂದುವದಕ್ಕೆ ಶ್ರೀಹರಿಸ್ಮರಣೆಯು ಆವಶ್ಯಕವು. ಹೀಗೆ ಇವು ನಾಲ್ಕನ್ನು ಚನ್ನಾಗಿ ವಿಮರ್ಶಿಸಿ ನೋಡದೆ ಯಾವ ಕರ್ಮವು ಪ್ರಾರಂಭಿಸಲ್ಪಡು

**ಮೂ. ಮುಕ್ತಸಙ್ಗೋಽನಹಂವಾದೀ ಧೃತ್ಯುತ್ಸಾಹ ಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥೨೬॥**

---

ತ್ತದೋ, ಅದು ತಾಮಸಕರ್ಮವೆಂದು ಹೇಳಿಸಿಕೊಳ್ಳುತ್ತದೆಂಬ ಭಾವವು. ಹಿಂದೆ **ದೈವಂ ಚೈವಾತ್ರ ಪಂಚಮಮ್** (ಗೀ. ೧೮-೧೪) ಎಂಬಲ್ಲಿ ಕರ್ಮವು ಸಫಲವಾಗಿ ನಡೆಯಬೇಕಾದರೆ ಐದು ಹೇತುಗಳು ಆವಶ್ಯಕವೆಂದು ಹೇಳುವ ಪ್ರಕರಣದಲ್ಲಿ ಪರಮ ಪುರುಷನ ಸಙ್ಕಲ್ಪವು ಪ್ರಧಾನ ಕಾರಣವು. ಆ ಭಾವನೆಯಿಲ್ಲದೆ ತಾನೇ ಮಾಡುವೆನೆಂಬ ಮೋಹಬುದ್ಧಿಯಿಂದ ಮಾಡುವದರಿಂದ **ಮೋಹಾತ್** ಎಂಬುದಕ್ಕೆ ಹಾಗೆ ವ್ಯಾಖ್ಯಾನವು. ॥೨೫॥

**ಮೂಲಕ್ಕೆ ಅರ್ಥವು**—ಹಿಂದೆ ಜ್ಞಾನ, ಕರ್ಮ, ಕರ್ತಾ, ಈ ಮೂರೂ ಸಾತ್ತ್ವಿಕ ರಾಜಸ ತಾಮಸರೂಪದಲ್ಲಿ ತ್ರೈವಿಧ್ಯವೆಂದು ಹೇಳಿದುದರಲ್ಲಿ ಜ್ಞಾನ ಮತ್ತು ಕರ್ಮಗಳ ಸಾತ್ತ್ವಿಕ ರಾಜಸ ತಾಮಸ ಲಕ್ಷಣಗಳು ಮೂರು ಮೂರು ಶ್ಲೋಕಗಳ ಮೂಲಕ ಹೇಳಲ್ಪಟ್ಟವು. ಈಗ ಕರ್ತಾ ಮೂರು ವಿಧವೆಂದು ಹೇಳಲುಪಕ್ರಮಿಸಿ ಸಾತ್ತ್ವಿಕ ಕರ್ತಾ ಲಕ್ಷಣವನ್ನು ಹೇಳುತ್ತಾರೆ. ಅಂತಹ ಕರ್ತಾವಿನಲ್ಲಿ ನಾಲ್ಕು ಲಕ್ಷಣಗಳನ್ನು ಬೋಧಿಸುತ್ತಾರೆ.--(೧) **ಮುಕ್ತಸಙ್ಗಃ** - ಸಙ್ಗವಿಲ್ಲದವನಾಗಿಯೂ, ಇಲ್ಲಿ ಕರ್ಮವಿಷಯಕ ತ್ಯಾಗವು ಹೇಳಲ್ಪಟ್ಟಿತು ; ಮುಂದೆ **ಅನಹಂವಾದೀ** ಎಂಬುದರಿಂದ ಕರ್ತೃತ್ವಾಭಿಮಾನವಿಲ್ಲದವನೆಂದು ಹೇಳಲ್ಪಡುವದರಿಂದ ಮಿಕ್ಕ ಎರಡಾದ, ಸ್ವರ್ಗಾದಿ ಫಲದಲ್ಲೂ, ಮಾಡುವ ಕರ್ಮವು ತನ್ನದು ಎಂಬ ಅಭಿಮಾನದಲ್ಲೂ, ಸಙ್ಗವನ್ನು ಬಿಟ್ಟವನಾಗಿಯೂ (೨) **ಅನಹಂವಾದೀ** - ತಾನು ಮಾಡಿದೆ ಎಂಬ ಕರ್ತೃತ್ವಾಭಿಮಾನವಿಲ್ಲದವನಾಗಿಯೂ, (೩) **ಧೃತ್ಯುತ್ಸಾಹ ಸಮನ್ವಿತಃ** - ಎಷ್ಟು ವಿಘ್ನ ಬಂದರೂ ಶ್ರಮಪಟ್ಟು ದೈವಕೃಪೆಯೊಂದಿದ್ದರೆ ಸಾಧಿಸುವೆನೆಂಬ ಧೈರ್ಯವು ಧೃತಿಯು. ಉತ್ಸಾಹವೆಂದರೆ ಹೇಗಾದರೂ ಮಾಡಿ ನಿರ್ವಹಿಸಬೇಕೆಂಬ ಕುತೂಹಲವು, ಇವುಗಳಿಂದ **ಸಮನ್ವಿತಃ** - ಕೂಡಿದವನಾಗಿಯೂ, (೪) **ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ** - ತಾನು ಮಾಡಬೇಕಾದ ಪ್ರಯತ್ನವೆಷ್ಟೋ ಅಷ್ಟು ಮಾಡಿ ಆಯಿತು, ಪರಮಪುರುಷಾನುಗ್ರಹವಿದ್ದರೆ ಸಿದ್ಧಿಯು, ಅದಿಲ್ಲದಿದ್ದರೆ ಅಸಿದ್ಧಿಯು, ಇದರಿಂದ ತನಗೆ ಹರ್ಷಶೋಕಗಳಿಲ್ಲವೆಂದು ತಿಳಿದು ಮನಸ್ಸಿನ ವಿಕಾರವಿಲ್ಲದವನಾಗಿಯೂ, ಇರುವ **ಕರ್ತಾ ಸಾತ್ತ್ವಿಕ ಉಚ್ಯತೇ** - ಸಾತ್ತ್ವಿಕನೆಂದು ಹೇಳಲ್ಪಡುವನು. "**ವಿಘ್ನೈರ್ಮುಹುರ್ಮುಹುರಪಿ ಪ್ರತಿಹನ್ಯಮಾನಾಃ ಪ್ರಾರಬ್ಧ ಮುತ್ತಮಗುಣಾ ನ ಪರಿತ್ಯಜನ್ತಿ**" ಎಂದು ಕವಿಯು ಹೇಳಿರುವ ಹಾಗೆ ಪುನಃ ಪುನಃ ವಿಘ್ನಗಳೊದಗಿದರೂ ಹಿಡಿದು ಸಾಧಿಸುವ ಶಕ್ತಿಯು ಧೃತಿ ಎನ್ನಲ್ಪಡುತ್ತದೆ. ಅಂತಹ **ಧೃತಿವಾನ್** ಉತ್ತಮ ಪುರುಷನೆಂದು ಹೇಳಿಸಿಕೊಳ್ಳುವನು. **ಉತ್ಸಾಹಿಯು** ಉದ್ದೇಶಿಸಿದ ಕಾರ್ಯವನ್ನು ಸರ್ವಪ್ರಯತ್ನದಿಂದಲೂ ಚನ್ನಾಗಿ ನೆರವೇರಿಸುವನು ; ಇಂತಹ ಕಾರ್ಯದಕ್ಷನಲ್ಲಿಯೇ ಸರ್ವೇಶ್ವರನಿಗೆ ವಿಶೇಷಾನುರಾಗವು ; ಆತನಿಗೇ ಸರ್ವ ವ್ಯಾಪಾರದಲ್ಲೂ ಜಯವು ; ಶ್ರೀರಾಮಚಂದ್ರನು ಸೀತೆಯನ್ನು ಅರಣ್ಯದಲ್ಲಿ ಕಳೆದುಕೊಂಡು ಅತಿದೀನನಾಗಿ ನಿರುತ್ಸಾಹನಾಗಿರಲು ; ಆಗ ಲಕ್ಷ್ಮಣನು ಆತನನ್ನು ಕುರಿತು ಹೇಳುತ್ತಾನೇನೆಂದರೆ—"**ಶೋಕಂ ವಿಮುಂಚಾರ್ಯ ಧೃತಿಂ ಭಜಸ್ವ ಸೋತ್ಸಾಹತಾ ಚಾಽಸ್ತು ವಿಮಾರ್ಗಣೇಽಸ್ಯಾಃ । ಉತ್ಸಾಹವನ್ತೋ ಹಿ ನರಾ ನ ಲೋಕೇ ಸೀದನ್ತಿ ಕರ್ಮಸ್ವತಿದುಷ್ಕರೇಷು** ॥" (ರಾ. ಅರಣ್ಯ. ೬೩-೧೯) ಶೋಕವನ್ನು **ಬಿಡು**, ಧೃತಿಯನ್ನು ಹೊಂದು. ಈ ಸೀತೆಯನ್ನು ಹುಡುಕುವದರಲ್ಲಿ ಉತ್ಸಾಹವಿರಲಿ ; ಉತ್ಸಾಹವನ್ನು ಹೊಂದಿದ ಮನುಷ್ಯರು ತುಂಬಾ ಕಷ್ಟಸಾಧ್ಯ ಕರ್ಮದಲ್ಲೂ ಅಪಜಯವನ್ನು ಹೊಂದುವದಿಲ್ಲವು. ಇನ್ನೊಂದು ಕಡೆಯಲ್ಲೂ "**ಉತ್ಸಾಹೋ ಬಲವಾನಾರ್ಯ ನಾಸ್ತ್ಯುತ್ಸಾಹಾತ್ಪರಂ ಬಲಮ್ । ಉತ್ಸಾಹವಂತಃ ಪುರುಷಾ ನಾವಸೀದಂತಿ ಕರ್ಮಸು**" ಎಂದು ಹಾಗೆಯೇ

ಭಾ. ಮುಕ್ತಸಙ್ಗಃ . ಫಲಸಙ್ಗರಹಿತಃ ಅನಹಂವಾದೀ . ಕರ್ತೃತ್ವಾಭಿಮಾನರಹಿತಃ, ಧೃತ್ಯುತ್ಸಾಹ ಸಮನ್ವಿತಃ ಆರಬ್ಧೇ ಕರ್ಮಣಿ ಯಾವತ್ಕರ್ಮ ಸಮಾಪ್ತ್ಯವರ್ಜನೀಯ ದುಃಖಧಾರಣಂಧೃತಿಃ, ಉತ್ಸಾಹಃ ಉದ್ಯುಕ್ತಚೇತಸ್ತ್ವಂ, ತಾಭ್ಯಾಂ ಸಮನ್ವಿತಃ ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ - ಯುದ್ಧಾದೌ ಕರ್ಮಣಿ ಕ್ರಿಯಮಾಣೇ ತದುಪ ಕರಣ ಭೂತ ದ್ರವ್ಯಾರ್ಜನಾದಿಷು ಸಿದ್ಧ್ಯಸಿದ್ಧ್ಯೋ ರವಿಕೃತಚಿತ್ತಃ ಕರ್ತಾ ಸಾತ್ತ್ವಿಕ ಉಚ್ಯತೇ ||೨೬||

---

ಹೇಳಲ್ಪಟ್ಟಿರುತ್ತದೆ. ಉತ್ಸಾಹವಿಲ್ಲದಿರುವ ಅವಸ್ಥೆಗೆ ನಿರ್ವೇದ, ದೈನ್ಯವೆಂದು ಹೆಸರು. ಆಂಜ ನೇಯನೂ "**ಅನಿರ್ವೇದಶ್ಶ್ರಿಯೋ ಮೂಲಂ ಅನಿರ್ವೇದಃ ಪರಂಸುಖಮ್ | ಅನಿರ್ವೇದೋಹಿ ಸತತಂ ಸರ್ವಾರ್ಥೇಷು ಪ್ರವರ್ತಕಃ|ತಸ್ಮಾದನಿರ್ವೇದ ಕೃತಂ ಯತ್ನಂ ಚೇಷ್ಟೇಹ ಮುತ್ತ ಮಮ್**" ಉತ್ಸಾಹವೇ ಐಶ್ವರ್ಯಕ್ಕೆ ಮೂಲವು ; ಉತ್ಸಾಹವೇ ಸುಖಕ್ಕೆ ಕಾರಣವು ; ಉತ್ಸಾಹವೇ ಸರ್ವ ಶ್ರೇಯಸ್ಸನ್ನು ಹೊಂದಲು ಪ್ರವರ್ತಿಸುವಂತಾದ್ದು ; ಆದುದರಿಂದ ಸೀತಾ ನ್ವೇಷಣವನ್ನು ಸರ್ವೋತ್ಸಾಹದಿಂದ ಪ್ರಯತ್ನಮಾಡುವೆನು" ಎಂದು ಉತ್ಸಾಹವನ್ನು ಕೊಂಡಾ ಡಿರುತ್ತಾನೆ. (ರಾ. ಸುಂದರ ೧೨. ೧೦. ೧೧) ಹೀಗೆ ಈ ನಾಲ್ಕೂ ಕರ್ತಾವಿನಲ್ಲಿದ್ದರೆ ಆತನು **ಸಾತ್ತ್ವಿಕ** ಉಚ್ಯತೇ ಎಂದು ಹೇಳಲ್ಪಟ್ಟಿತು.

**ಭಾಷ್ಯಾರ್ಥವು**— ಸಾತ್ತ್ವಿಕ ಕರ್ತಾವಿನ ಧರ್ಮಗಳು ಹೇಳಲ್ಪಡುತ್ತವೆ.—**ಮುಕ್ತಸಙ್ಗಃ** ಎಂದರೆ **ಫಲಸಙ್ಗರಹಿತಃ** - ಫಲದಲ್ಲಿ ಸಂಗವಿಲ್ಲದವನಾಗಿಯೂ, ಫಲಸಙ್ಗರಹಿತನಾದುದರಿಂದ ಕರ್ಮದಲ್ಲೂ ಸ್ವಕೀಯತಾನುಸಂಧಾನವಿಲ್ಲವೆಂದೂ ಹೇಳಿದಂತಾಯಿತು;ಇದು ಸನ್ಯಾಸ, ತ್ಯಾಗಶಬ್ದ ಗಳ ಅರ್ಥನಿರೂಪಣೆಯಲ್ಲಿಯೇ ಹೇಳಲ್ಪಟ್ಟಿತು. ಹಿಂದೆಯೇ "**ಮಾಕರ್ಮ ಫಲಹೇತುರ್ಭೂಃ** (ಗೀ.೨-೪.೭) ಎಂಬಲ್ಲಿ ಹೇಳಿರುವ ಹಾಗೆ ಕರ್ಮದಲ್ಲೂ ಮಮತೆ ಬೇಡವೆಂದೂ ಹೇಳಿದಂತಾ ಯಿತು. ಯಾವಾಗ ಫಲದಲ್ಲಿ ಸಂಗ ಬೇಡವೋ, ಆಗ ಕರ್ಮದಲ್ಲೂ ಸಂಗ ಬೇಡವೆಂದು ಹೇಳು ವದಕ್ಕೂ ಉಪಲಕ್ಷಣವು, ಫಲದಲ್ಲೂ ಸಙ್ಗ ಕೂಡದೆಂದು ಹಿಂದೆಯೇ "**ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ**" ಎಂದು ಹೇಳಿರುವದಲ್ಲದೆ "**ಅಹಂಕಾರ ವಿಮೂಢಾತ್ಮಾ ಕರ್ತಾ ಹಮಿತಿ ಮನ್ಯತೇ**" (ಗೀ. ೩- ೧೭) ಎಂದು ಸಂಗಯುಕ್ತನು ನಿಂದಿಸಲ್ಪಟ್ಟಿರುತ್ತಾನೆ. **ಅನಹಂವಾದೀ** ಎಂದರೆ **ಕರ್ತೃತ್ವಾಭಿಮಾನರಹಿತಃ** - ತಾನು ಕರ್ತಾ, ತಾನು ಮಾಡಿದೆ ಎಂಬ ಅಹಂಕಾರ ರಹಿತನಾಗಿ, ಕರ್ತೃತ್ವವೇ ಇಲ್ಲವೆಂಬ ಭಾವವಲ್ಲವು, ಆದರೆ ಇತರ ನಾಲ್ಕರ ಸಹಾಯ ಬೇಕೆಂದು ಹೇಳಲ್ಪಟ್ಟಿತು ; ಅದು ಪರಮಾತ್ಮ ಸಙ್ಕಲ್ಪಾಧೀನವಾದುದರಿಂದ ತಾನು ಸ್ವತಂತ್ರ ಕರ್ತಾ ಅಲ್ಲವು. ಹಿಂದೆ (೧೮-೧೫) ರಲ್ಲಿ ನಿಪುಣತರವಾಗಿ ಇದು ಉಪಪಾದಿತವು. **ಧೃತ್ಯುತ್ಸಾಹ ಸಮ ನ್ವಿತಃ** ಎಂದರೆ **ಆರಬ್ಧೇಕರ್ಮಣಿ ಯಾವತ್ಕರ್ಮ ಸಮಾಪ್ತ್ಯ ವರ್ಜನೀಯ ದುಃಖಧಾರ ಣಂ ಧೃತಿಃ** - ಆರಂಭಿಸಿದ ಕರ್ಮದಲ್ಲಿ ಕರ್ಮವು ಪೂರೈಸುವವರೆಗೂ ತಪ್ಪಿದ್ದಲ್ಲವಾದ ಕ್ಲೇಶ ಗಳನ್ನು ಸಹಿಸಿಕೊಳ್ಳುವದೇ ಧೃತಿ ಎನಿಸುತ್ತದೆ : **ಉತ್ಸಾಹಃ** ಎಂದರೆ **ಉದ್ಯುಕ್ತ ಚೇತಸ್ತ್ವಂ** ಉದ್ದೇಶಿಸಿದುದನ್ನು ಹಿಡಿದು ನಡೆಸುವಿಕೆಯು, **ತಾಭ್ಯಾಂ ಸಮನ್ವಿತಃ** - ಇವೆರಡರಿಂದಲೂ ಕೂಡಿದವನು, ಆದುದರಿಂದ ಧೃತಿಗೂ ಉತ್ಸಾಹಕ್ಕೂವ್ಯತ್ಯಾಸವೇನೆಂದರೆ, ಕ್ಲೇಶಗಳ ಸಹ ನೆಯಿಂದ ವಿಘ್ನಗಳನ್ನೆಲ್ಲಾ ನಿವಾರಣೆಮಾಡಿಕ್ಕೊಳ್ಳುವದು ಧೃತಿಯು ; ಉತ್ಸಾಹವಾ ದರೋ ಕಾರ್ಯವನ್ನು ಪೂರೈಸಬೇಕೆಂಬ ಕುತೂಹಲವು ; ಇವೆರಡರಿಂದಲೂ ಸೇರಿದವನಾದ ಎಂಬರ್ಥವು. **ಸಿದ್ಧ್ಯಸಿದ್ಧ್ಯೋಃ ನಿರ್ವಿಕಾರಃ** - ಫಲಸಿದ್ಧಿಯಾಗಲಿ, ಸಿದ್ಧಿಸದೇ ಹೋಗಲಿ, ಹೀಗೆ ಎರಡು ಸಿದ್ಧ್ಯಸಿದ್ಧಿಗಳಲ್ಲಿ ನಿರ್ವಿಕಾರವಿರಬೇಕೆಂಬುವದನ್ನು ತಾನೇ

ರಾಮಾವತಾರಿಯಾಗಿ ಪ್ರಕಟಿಸಿರುತ್ತಾರೆ. ಯೌವ್ವರಾಜ್ಯಾಭಿಷೇಕವು ತಪ್ಪಿ ವನವಾಸ ಪ್ರಾಪ್ತವಾದಾಗ, **"ರಾಜ್ಯೋವಾ ವನವಾಸೋವಾ ವನವಾಸೋ ಮಹೋದಯಃ"** ಎಂದು ಹೇಳಿದ್ದಾರೆ. ತಾವು ನಿರ್ವಿಕಾರರಾಗಿ ಇದ್ದರೆಂಬುದನ್ನು ತ್ರಿಜಟನ ಇತಿಹಾಸದಿಂದಲೂ ಪ್ರಕಟಿಸಿರುತ್ತಾರೆ. ಶ್ರೀರಾಮಚಂದ್ರಪ್ರಭುವು ವನವಾಸಕ್ಕೆ ಹೊರಡಲು ಅವಸರದಿಂದಿರುವಾಗ, ಗರ್ಗವಂಶದಲ್ಲಿ ಹುಟ್ಟಿದ ಈ ಋಷಿಯು, ದಾರಿದ್ರ್ಯದಿಂದ ಪೀಡಿತನಾಗಿ ಮಕ್ಕಳಿಗೆ ಸರಿಯಾದ ಆಹಾರವಿಲ್ಲದೆ ಇರುವದರಿಂದ ಹೆಂಡತಿಯಿಂದ ಪ್ರೇರಿತನಾಗಿ ಶ್ರೀರಾಮಚಂದ್ರನಲ್ಲಿಗೆ **"ನಿರ್ಧನೋ ಬಹುಪುತ್ರೋಽಸ್ಮಿ"** ಎಂದು ಹೇಳಿಕೊಂಡು ಯಾಚಿಸಲು ; ಆಗ ಆತನನ್ನು ಕುರಿತು ಹೇಳುತ್ತಾರೇನೆಂದರೆ.— "**ತಮುವಾಚ ತತೋ ರಾಮಃ ಪರಿಹಾಸ ಸಮನ್ವಿತಮ್। ಗವಾಂ ಸಹಸ್ರಮಪ್ಯೇಕಂ ನತು ವಿಶ್ರಾಣಿತಂ ಮಯಾ । ಪರಿಕ್ಷಿಪಸಿ ದಂಡೇನ ಯಾವತ್ತಾವದವಾಪ್ಸ್ಯಸಿ"** ಹೀಗೆ ಹೇಳಿ, ನೀನು ಎಲ್ಲಿವರಿಗೆ ದಂಡವನ್ನೆಸೆಯುತ್ತೀಯೋ ಅಲ್ಲಿವರಿಗೆ ಇರುವ ಗೋವುಗಳೆಲ್ಲಾ ನಿನಗೇ, ಇವುಗಳಲ್ಲಿ ಒಂದು ಗೋವನ್ನು ಯಾರಿಗೂ ಕೊಟ್ಟಿಲ್ಲ ಎಂದು ಹೇಳಲು ; ಆಗ ಆತನು ಹರಕು ದೋತ್ರವನ್ನು ಸೊಂಟಕ್ಕೆ ಕಟ್ಟಿ ದಂಡವು ಬಹುದೂರ ಹೋಗಿ ಬೀಳುವ ಹಾಗೆ ಮಾಡಿ ಆ ಗೋವುಗಳನ್ನೆಲ್ಲಾ ಆ ಬಡಬ್ರಾಹ್ಮಣನಿಗೆ ಕೊಟ್ಟು ಆಮೇಲೆ ಆತನನ್ನು ಆಲಂಗಿಸಿ ಪುನಃ ಹೇಳುತ್ತಾರೆ.—**"ಮನ್ಯುರ್ನ ಖಲು ಕರ್ತವ್ಯಂ ಪರಿಹಾಸೋ ಹ್ಯಯಂ ಮಮ"** ಓ ಬ್ರಾಹ್ಮಣ ಶ್ರೇಷ್ಠರೇ ಈ ಪರಿಹಾಸಕ್ಕಾಗಿ ಕೋಪಿಸಬೇಡಿ" ಎಂದು ಹೇಳಿ. ಆತನನ್ನು ಆಲಂಗಿಸಿರುತ್ತಾರೆ. ವನಕ್ಕೆ ಹೋಗಬೇಕಾದ ಕಷ್ಟದೆಶೆಯಲ್ಲೂ ಕೂಡ ಲೀಲಾರೂಪವಾಗಿ ಪರಿಹಾಸ ಪ್ರವೃತ್ತಿ ಇದ್ದುದರಿಂದ ನಿರ್ವಿಕಾರರಾಗಿದ್ದರು ಎಂಬುದು ವ್ಯಕ್ತವು. ಹಾಗೆಯೇ **ಸಾತ್ವಿಕಕರ್ತಾ** ಇರತಕ್ಕದ್ದೆಂಬಭಾವವು. ಎಂತಹ ಸಂದರ್ಭದಲ್ಲೂ ವಿಕಾರ ಹೊಂದದಿರುವ ಚಿತ್ತವುಳ್ಳವನಾಗಿಯೂ ಎಂದರೆ ಸಿದ್ಧಿಸಿದರೆ ಹರ್ಷದಿಂದ ಹಿಗ್ಗದೆ, ಸಿದ್ಧಿಸದೇ ಹೋದರೆ ಶೋಕದಿಂದ ದೀನನಾಗದಿರುವವನಾಗಿಯೂ ಎಂಬರ್ಥವು. ಒಬ್ಬನು ಬಂದು "ಅಯ್ಯಾ ನಿಮ್ಮ ಮನೆಯು ಉರಿಯುತ್ತಿದೆ. ಬೇಗಹೋಗಿ" ಎಂದರೆ ಈತನು ಬೆಂಕಿಯು ನನ್ನನ್ನೇನೂ ಸುಡಲಿಲ್ಲವೆಂದು ಹೇಳುವಷ್ಟು ನಿರ್ವಿಕಾರತೆ ಇರತಕ್ಕದ್ದು. ಇದನ್ನೇ ವ್ಯಕ್ತಪಡಿಸುತ್ತಾರೆ.—**ಯುದ್ಧಾದೌ ಕರ್ಮಣಿ ತದುಪಕರಣ ಭೂತದ್ರವ್ಯಾರ್ಜನಾದಿಷು ಚ** - ಯುದ್ಧವೇ ಮೊದಲಾದ ಕರ್ಮದಲ್ಲೂ ಮತ್ತು ಅವುಗಳಿಗೆ ಸಾಧನಭೂತಗಳಾದ ದ್ರವ್ಯಸಂಪಾದನೆ ಮೊದಲಾದವುಗಳಲ್ಲೂ ಸಹ, **ಸಿದ್ಧ್ಯಸಿದ್ಧ್ಯೋಃ** - ಇಂತಹ ಸಿದ್ಧಿ ಮತ್ತು ಅಸಿದ್ಧಿಗಳಲ್ಲಿ, **ಅವಿಕೃತಚಿತ್ತಃ** - ಸಂತೋಷ ದುಃಖವೇ ಮೊದಲಾದವುಗಳಿಂದ ವಿಕಾರ ಹೊಂದದ ಚಿತ್ತವುಳ್ಳವನಾಗಿಯೂ ಇರುವ, **ಕರ್ತಾ** - ಕರ್ಮಾಧಿಕಾರಿಯು, **ಸಾತ್ವಿಕ ಉಚ್ಯತೇ** - ಸಾತ್ವಿಕನೆಂದು ಹೇಳಲ್ಪಡುತ್ತಾನೆ.—ಇಲ್ಲಿ **ಮುಕ್ತಸಙ್ಗಃ** ಎಂಬಲ್ಲಿ ಫಲಕರ್ತೃತ್ವಾದಿಗಳ ಸಙ್ಗವನ್ನು ತ್ಯಜಿಸಿದವನೆಂದು ಅರ್ಥಮಾಡಬಹುದಾಗಿದ್ದರೂ ಕರ್ತೃತ್ವಾಭಿಮಾನ ತ್ಯಾಗವು **ಅನಹಂವಾದೀ** ಎಂಬುದರಿಂದ ಹೇಳಲ್ಪಡುವದರಿಂದ **ಮುಕ್ತಸಙ್ಗಃ** ಎಂಬುದಕ್ಕೆ **ಫಲಸಙ್ಗರಹಿತಃ** ಎಂದಿಷ್ಟು ಮಾತ್ರವೇ ಸಙ್ಕೋಚಿಸಿ ಅರ್ಥಮಾಡಲ್ಪಟ್ಟಿತು ; ಫಲಸಂಗರಾಹಿತ್ಯವೇ ಯಾವಾಗ ಹೇಳಲ್ಪಟ್ಟಿತೋ ಕರ್ಮವು ತನ್ನದು ಎಂಬ ಸಂಗರಾಹಿತ್ಯವೂ ಹೇಳಲ್ಪಟ್ಟಿತೆಂಬುದು ಸೂಚಿತವು. **ಅಹಂವಾದಿಯು** ನಾನು ಕರ್ಮವನ್ನು ಮಾಡಿದವನೆಂದು ಹೇಳಿಕೊಳ್ಳುವನು ; ಅಂತವನಲ್ಲದವನು **ಅನಂಹವಾದಿಯು** ಎಂಬ ಭಾವವು. ಹೇಳಿಕೊಳ್ಳೋಣವು ಮನಃಪೂರ್ವಕವಾಗಿಯಾದುದರಿಂದ **ಅನಹಂವಾದಿ** ಎಂಬುದಕ್ಕೆ **ಕರ್ತೃತ್ವಾಭಿಮಾನರಹಿತಃ** ಎಂಬ ವ್ಯಾಖ್ಯಾನವು. ಯಾವಾಗ ಮುಕ್ತಸಙ್ಗನಾದನೋ ಆಗ ಸಿದ್ಧ್ಯಸಿದ್ಧಿಗಳಲ್ಲಿ ನಿರ್ವಿಕಾರತ್ವವು ತಾನೇ ಉಂಟಾಗುತ್ತದೆಂಬ ಭಾವವು ಇಲ್ಲಿ ತೋರಿಬರುತ್ತದೆ. ಆದರೆ ಈ ಸಂದರ್ಭದಲ್ಲಿ ಒಂದು ಪೂರ್ವಪಕ್ಷವು ಉಂಟಾಗಬಹುದು, ಏನೆಂದರೆ ಈತನು ಯಾವಾಗ

**ಮೂ. ರಾಗೀ ಕರ್ಮ ಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥೨೭॥**

---

ಮುಕ್ತಸಂಗನಾಗಿ ಸಿದ್ಧ್ಯಸಿದ್ಧಿಗಳಲ್ಲಿ ನಿರ್ವಿಕಾರನಾಗಿರುತ್ತಾನೋ, ಆಗ ಅವನಿಗೆ ಧೃತ್ಯುತ್ಸಾಹ ಸಮನ್ವಿತತ್ವವು ಏತಕ್ಕೆ ? ಲೋಕಾಭಿರಾಮನಾಗಿ ಸಾಧಾರಣ ಪ್ರಯತ್ನವಿದ್ದರೆ ಸಾಕು ; ಧೃತ್ಯುತ್ಸಾಹಗಳು ಏತಕ್ಕೆ ? ಎಂದರೆ ವಿಘ್ನಗಳು ಒದಗಿದರೆ ಒಬ್ಬನು ಸುಮ್ಮನಾಗಬಹುದು ; ಸಾಮಾನ್ಯವಾಗಿ ಪ್ರಯತ್ನಿಸಿ ಸಿದ್ಧಿಸಲಿಲ್ಲವು ಎಂದು ಸುಮ್ಮನಿರಬಹುದು ; ಫಲಾದಿಗಳ ಕಾಂಕ್ಷೆ ಇಲ್ಲದಿರುವಾಗ ಧೃತಿ ಉತ್ಸಾಹಗಳು ಏತಕ್ಕೆ ಎಂದೂ ಕೇಳಬಹುದು. ಸರ್ವೇಶ್ವರನ ಪ್ರೀತಿಗಾಗಿಯೂ ಆತನ ಅನುಗ್ರಹ ಸಂಪಾದನೆಗಾಗಿಯೂ ಇಂತಹ ವಿಹಿತಕರ್ಮವು ಪೂರ್ಣತೆಯನ್ನು ಹೊಂದಿ ಭೋಗ್ಯವಾಗಿ ಭಗವದನುಗ್ರಹ ಉಂಟಾಗುವದಕ್ಕೆ ಧೃತ್ಯುತ್ಸಾಹಗಳು ಅತ್ಯಾವಶ್ಯಕವೆಂಬುದು ಏರ್ಪಟ್ಟಿತು. ಭಗವದನುಗ್ರಹವನ್ನು ತಾನು ಮಾಡುವ ಕಾರ್ಯನಿರ್ವಾಹಕ್ಕೆ ಅಪೇಕ್ಷಿಸುವವನು, ತಾನು ಮಾಡತಕ್ಕ ಕಾರ್ಯವನ್ನೆಲ್ಲಾ ಧೃತ್ಯುತ್ಸಾಹಗಳಿಂದ ನೆರವೇರಿಸಿದರಲ್ಲವೇ ಅಂತಹ ಅನುಗ್ರಹವು ಉಂಟಾದೀತು. ಈ ಮುಮುಕ್ಷುವಾದ ಸಾತ್ವಿಕಾಧಿಕಾರಿಯು ಪ್ರಯೋಜನವಿಲ್ಲದೆ ಕೆಲಸಮಾಡುತ್ತಾ ಇಲ್ಲವು ; ಆತನಿಗೆ ಭಗವದನುಗ್ರಹವು ಬೇಕೇ ಬೇಕು ; ತಾನು ಮಾಡುವ ಕೆಲಸಗಳನ್ನು "**ಮಯಿಸರ್ವಾಣಿಕರ್ಮಾಣಿ ಸನ್ನ್ಯಸ್ಯ**" ಎಂದು ಹೇಳಿರುವ ಹಾಗೆ ಸಮರ್ಪಿಸಿದರೆ, ಈ ಅಧಿಕಾರಿಗೆ ಏನೊಂದೂ ಅಭಿಲಾಷೆಯಿಲ್ಲದೆ, ಭಗವತ್ಪ್ರೀತಿಗಾಗಿ ಮಾಡಿದರೆ, ಭಗವದನುಗ್ರಹವನ್ನು ಸಂಪಾದಿಸಿಕೊಳ್ಳುವನು, ಇದೇ ಈತನಿಗೆ ಮುಖ್ಯೋದ್ದೇಶವು. ಆದುದರಿಂದ ಯಾವ ಆಕ್ಷೇಪಣೆಗೂ ಅವಕಾಶವಿಲ್ಲವು ; ಸರ್ವವೂ ಸಮಂಜಸವು ॥೨೬॥

**ಮೂಲಕ್ಕೆ ಅರ್ಥವು**— ರಾಜಸ ಕರ್ಮಾಧಿಕಾರಿಯ ಲಕ್ಷಣವು ಈ ಶ್ಲೋಕದಲ್ಲಿ ಬೋಧಿಸಲ್ಪಡುತ್ತದೆ. ಇದರಿಂದ ಸಾತ್ವಿಕಾಧಿಕಾರಿಗೂ ಈತನಿಗೂ ಇರುವ ವ್ಯತ್ಯಾಸವನ್ನು ಗ್ರಹಿಸಬಹುದು. **ರಾಗೀ**–ಸಾತ್ವಿಕಾಧಿಕಾರಿಯು ಮುಕ್ತಸಙ್ಗನೆಂದು ಹೇಳಲ್ಪಟ್ಟಿತು, ಆತನು ಖ್ಯಾತಿಲಾಭಪೂಜೆಗಳಿಗಾಗಿ ವಿಹಿತಕರ್ಮಗಳನ್ನು ಎಸಗುವದಿಲ್ಲವು, ಈತನಾದರೋ **ರಾಗೀ**–ಖ್ಯಾತಿಪೂಜಾದಿಗಳಲ್ಲಿ ಅನುರಾಗವುಳ್ಳವನು, ರಾಗವುಳ್ಳವನುರಾಗಿಯು, **ಕರ್ಮಫಲಪ್ರೇಪ್ಸುಃ** - ಹಿಂದಿನವನು ಮುಕ್ತಸಙ್ಗನಾದುದರಿಂದ ಫಲಾಪೇಕ್ಷೆಯನ್ನು ಬಿಟ್ಟವನು, ಈತನಾದರೋ ತಾನು ಮಾಡುವ ಕರ್ಮದ ಫಲವನ್ನಪೇಕ್ಷಿಸುವನು ; ಆತನು ಪರಮ ಪುರುಷಪ್ರೀತಿಗಾಗಿ ಕರ್ಮವನ್ನಪೇಕ್ಷಿಸುವನು ; ಈತನಾದರೋ ತನ್ನ ಅಭಿಲಾಷೆಗಾಗಿಯೇ ಕರ್ಮವನ್ನು ಎಸಗುವನು ; **ಲುಬ್ಧಃ** - ಈತನು ಕರ್ಮಕ್ಕೆ ಬೇಕಾದ ದ್ರವ್ಯವನ್ನು ಖರ್ಚುಮಾಡಲು ಇಷ್ಟವಿಲ್ಲದ ಲೋಭಿಯು, ಆತನಾದರೋ ಕರ್ಮವು ನಿರ್ವಿಘ್ನವಾಗಿ ನಡೆದರೆ ಸಾಕೆಂದಿರುವವನಾದುದರಿಂದ ಆತನು ಲೋಭಿಯಲ್ಲವು, **ಹಿಂಸಾತ್ಮಕಃ**– ಈತನು ತನ್ನ ಕೆಲಸಕ್ಕಾಗಿ, ಯಾರಿಗೆ ಎಷ್ಟೇ ಹಿಂಸೆಯಾದರೂ ಚಿಂತೆಯಿಲ್ಲವೆಂದು ಭಾವಿಸುವನಾದುದರಿಂದ ಇತರರನ್ನು ಹಿಂಸಿಸುವ ಸ್ವಭಾವವುಳ್ಳವನು, ಸಾತ್ವಿಕಕರ್ತಾವಾದರೋ ಇತರರಿಗೆ ಎಲ್ಲಿ ಹಿಂಸೆಯುಂಟಾಗುತ್ತದೋ ಎಂದು ಭೀತನಾಗಿ ಜಾಗರೂಕನಾಗಿರುವನು. **ಅಶುಚಿಃ** - ಸಾತ್ವಿಕಾಧಿಕಾರಿಯು **ಆಹಾರಶುದ್ಧೌ ಸತ್ವಶುದ್ಧಿಃ** ಎಂದು ಹೇಳಿರುವ ಹಾಗೆ ಶುಚಿಯಾದ ಆಹಾರವನ್ನು ಸೇವಿಸುವದರಿಂದ ಶುಚಿಯಾಗಿರುವನು, ಎಂದರೆ ಮನೋನೈರ್ಮಲ್ಯವುಳ್ಳವನು, ಈತನಾದರೋ ಹಾಗಲ್ಲವು, ಸಾತ್ವಿಕವಲ್ಲದ ಆಹಾರ ಸೇವನೆಯಿಂದ ಮನಸ್ಸಿನಲ್ಲಿ ಮಲಗಳು ತೊಲಗದೆ ಅಪರಿಶುದ್ಧನಾಗಿರುವನು ; ಇಲ್ಲಿ ದೇಹದ ಬಾಹ್ಯ ಪಾರಿಶುದ್ಧ್ಯವು ಮಾತ್ರವೇ ಹೇಳಲ್ಪಡಲಿಲ್ಲವು ; ಅಂತರಿಂದ್ರಿಯವಾದ ಮನಸ್ಸಿನ ನೈರ್ಮಲ್ಯವೂ **ಶುಚಿ** ಶಬ್ದದಿಂದ ಬೋಧಿತವು, ಅದಿಲ್ಲದವನು, ಅಥವಾ ಕರ್ಮಸಿದ್ಧಿಗೆ ಬೇಕಾದ ಸ್ನಾನಮಡಿಗಳಿಲ್ಲದವನೆಂದೂ ಅರ್ಥಮಾಡ

ಭಾ. ರಾಗೀ - ಯಶೋರ್ಥೀ, ಕರ್ಮಫಲಪ್ರೇಪ್ಸುಃ- ಕರ್ಮಫಲಾರ್ಥೀ, ಲುಬ್ಧಃ-ಕರ್ಮಾಪೇಕ್ಷಿತ ದ್ರವ್ಯ ವ್ಯಯ ಸ್ವಭಾವರಹಿತಃ, ಹಿಂಸಾತ್ಮಕಃ-ಪರಾನ್ ಪೀಡಯಿತ್ವಾ ತೈಃ ಕರ್ಮ ಕುರ್ವಾಣಃ, ಅಶುಚಿಃ ಕರ್ಮಾಪೇಕ್ಷಿತ ಶುದ್ಧಿರಹಿತಃ, ಹರ್ಷಶೋಕಾನ್ವಿತಃ-ಯುದ್ಧಾದೌ ಕರ್ಮಣಿ ಜಯಾದಿ ಸಿದ್ಧ್ಯಸಿದ್ಧ್ಯೋರ್ಹರ್ಷ ಶೋಕಾನ್ವಿತಃ, ಕರ್ತಾ ರಾಜಸಃ ಪರಿಕೀರ್ತಿತಃ ॥೨೭॥

---

ಬಹುದು ; **ಹರ್ಷಶೋಕಾನ್ವಿತಃ** - ಸಾತ್ವಿಕನು ಸಿದ್ಧ್ಯಸಿದ್ಧಿಗಳಲ್ಲೂ ಹರ್ಷ ಶೋಕಗಳಾದ ವಿಕಾರವಿಲ್ಲದ ಚಿತ್ತವುಳ್ಳವನು ; ಈತನಾದರೋ ಕಾರ್ಯದ ಅಸಿದ್ಧಿಯಲ್ಲಿ ಶೋಕದಿಂದಲೂ ಕಾರ್ಯ ಸಿದ್ಧಿಯಲ್ಲಿ ಹರ್ಷದಿಂದಲೂಕೂಡಿರುವನು, ಇಂತಹ **ಕರ್ತಾ** - ಕಾರ್ಯವನ್ನು ಆರಂಭಿಸುವವನು **ರಾಜಸಃ ಪರಿಕೀರ್ತಿತಃ** - ರಾಜಸನೆಂದು ಹೇಳಲ್ಪಡುತ್ತಾನೆ. ಇಲ್ಲಿ **ಪರಿಕೀರ್ತಿತಃ** ಎಂದರೆ ಹೊಗಳಲ್ಪಡುವನೆಂದು ಅರ್ಥವಾಗುತ್ತದೆ ; ರಾಜಸಿಯಾಗಿ ಖ್ಯಾತಿಯಲ್ಲಿ ಮಮತೆಯುಳ್ಳವನಾ ದುದರಿಂದ ಹಾಗೆ ಪ್ರಯೋಗವೆಂಬ ಭಾವವು. ಸಾತ್ವಿಕಾಧಿಕಾರಿಗೆ ಅಂತಹ ದಂಭವು ಬೇಕಿಲ್ಲವಾದುದರಿಂದ ಹಿಂದಿನ ಶ್ಲೋಕದಲ್ಲಿ **ಕರ್ತಾ ಸಾತ್ವಿಕ ಉಚ್ಯತೇ** ಎಂದು ಸಾಮಾನ್ಯವಾಗಿ ಹೇಳಿ, ಇಲ್ಲಿ ರಾಜಸಿಯಾಗಿ ಯಶಸ್ಸಿನಲ್ಲಿ ಪ್ರೀತಿಯಾದುದರಿಂದ **ರಾಜಸಃ ಪರಿಕೀರ್ತಿತಃ** ಎಂಬ ಅಹಂಭಾವ ದ್ಯೋತಕವಾದ ಪ್ರಯೋಗವು.

**ಭಾಷ್ಯಾರ್ಥವು—ರಾಗೀ** ಎಂದರೆ **ಯಶೋರ್ಥೀ** - ಯಶಸ್ಸನ್ನು ಅಪೇಕ್ಷಿಸುವವನು, ಎಂತಹ ಮಹತ್ತಾದ ಕರ್ಮಾನುಷ್ಠಾನ ಮಾಡಿದವನು ಎಂದು ಇತರರು ಹೊಗಳಬೇಕು, ಅಂತಹ ಯಶಸ್ಸನ್ನು ಅಪೇಕ್ಷಿಸುವವನು, **ಕರ್ಮಫಲಪ್ರೇಪ್ಸುಃ** ಎಂದರೆ **ಕರ್ಮಫಲಾರ್ಥೀ** — ಕರ್ಮದ ಫಲವನ್ನು ಅಪೇಕ್ಷಿಸುವವನು, ರಾಗೀ ಎಂಬ ಶಬ್ದದಿಂದಲೇ **ಫಲಾರ್ಥೀ** ಎಂಬರ್ಥವೂ ತೋರಿ ಬರುವಾಗ **ಕರ್ಮಫಲಪ್ರೇಪ್ಸುಃ** ಎಂಬ ಬೇರೆ ಪ್ರಯೋಗವೇತಕ್ಕೆ ಎಂದರೆ, **ರಾಗೀ** ಎಂಬುದ ರಿಂದ ದೃಷ್ಟಫಲಾರ್ಥಿ ಎಂದೂ **ಕರ್ಮಫಲಪ್ರೇಪ್ಸುಃ** ಎಂಬುದರಿಂದ ಅದೃಷ್ಟವಾದ ಸ್ವರ್ಗಾದಿ ಫಲಾರ್ಥೀ ಎಂದೂ ಅರ್ಥಮಾಡುವದರಿಂದ ಆಕ್ಷೇಪಕ್ಕೇನೂ ಕಾರಣವಿರುವದಿಲ್ಲವು ; **ಲುಬ್ಧಃ** ಎಂದರೆ **ಕರ್ಮಾಪೇಕ್ಷಿತ ದ್ರವ್ಯವ್ಯಯಸ್ವಭಾವ ರಹಿತಃ** — ಕರ್ಮಕ್ಕೆ ಬೇಕಾದಷ್ಟು ಸತ್ಪಾತ್ರ ದಲ್ಲಿ ದ್ರವ್ಯವನ್ನು ಖರ್ಚುಮಾಡುವ ಸ್ವಭಾವವಿಲ್ಲದವನು ; **ಹಿಂಸಾತ್ಮಕಃ** ಎಂದರೆ **ಪರಾನ್ ಪೀಡಯಿತ್ವಾ ತೈಃ ಕರ್ಮಕುರ್ವಾಣಃ** - ತಾನು ಮಾಡುವ ಕರ್ಮಕ್ಕೆ ಬೇಕಾದ ಸಲಕರಣೆಗಳಿಗಾಗಿ ಭಾರ್ಯಾಪುತ್ರ ಮತ್ತು ಇತರರನ್ನು ಹಿಂಸಿಸಿ, ಅವರಿಂದ ಕರ್ಮವನ್ನು ಮಾಡುವವನು ಅಥವಾ ಮಾಡಿಸುವನು, ಆಪಸ್ತಂಭ ಧರ್ಮಶಾಸ್ತ್ರದಲ್ಲಿ "**ಕಾಮಮಾತ್ಮಾನಂ ಭಾರ್ಯಾಂ ಪುತ್ರಂ ವೋಪರುಂದ್ಧ್ಯಾನ್ನತ್ವೇವ ದಾಸಕರ್ಮಕರಮ್**" ಎಂಬಲ್ಲಿ ಹೇಳಿರುವ ತನ್ನನ್ನಾಗಲಿ ಹೆಂಡತಿ ಯನ್ನಾಗಲಿ ಪುತ್ರನನ್ನಾಗಲಿ ದಾಸಕರ್ಮಮಾಡಿಸಿ ಹಿಂಸಿಸತಕ್ಕದ್ದಲ್ಲವು ಎಂದು ಹೇಳಲ್ಪಟ್ಟಿರು ತ್ತದೆ. ಯಾವನ ಮನೆಯಲ್ಲಿ ಸ್ತ್ರೀಯಾದವಳು ಕ್ಲೇಶವನ್ನು ಹೊಂದಿ ಕಣ್ಣೀರನ್ನು ಸುರಿಸು ವಳೋ ಆ ಮನೆಗೆ ಲಕ್ಷ್ಮಿಯ ಅನುಗ್ರಹವಿಲ್ಲವೆಂಬು ಹೇಳಲ್ಪಟ್ಟಿರುತ್ತದೆ. ಪರಪೀಡೆಯಿಂದ ಸಂಪಾದಿಸಿದ ದ್ರವ್ಯದಿಂದ ಕರ್ಮವನ್ನು ಅನುಷ್ಠಿಸುವವನು ಎಂದಾಗಲಿ ಇಲ್ಲಿ ಬೋಧಿಸಲ್ಪಟ್ಟಿ ತೆಂದೂ ಭಾವಿಸಬಹುದು. **ಅಶುಚಿಃ** ಎಂದರೆ **ಕರ್ಮಾಪೇಕ್ಷಿತ ಶುದ್ಧಿರಹಿತಃ** - ಕರ್ಮಸಾದ್ಗುಣ್ಯಕ್ಕೆ ಬೇಕಾದ ಶುದ್ಧಿ ಇಲ್ಲದವನು ಎಂದರೆ ಧರ್ಮಾರ್ಜಿತ ದ್ರವ್ಯ, ಸಾತ್ವಿಕಾಹಾರ ಸೇವನೆ, ಸ್ನಾನಾದಿ ಗಳೇ ಇವೇ ಮೊದಲಾದವುಗಳಿಲ್ಲದವನು, **ಹರ್ಷಶೋಕಾನ್ವಿತಃ** ಎಂದರೆ **ಯುದ್ಧಾದೌ ಕರ್ಮಣಿ ಜಯಾದಿ ಸಿದ್ಧ್ಯಸಿದ್ಧ್ಯೋಃ ಹರ್ಷಶೋಕಾನ್ವಿತಃ** — ಯುದ್ಧವೇ ಮೊದಲಾದ ಕರ್ಮದಲ್ಲಿ ಜಯವೇ ಮೊದಲಾದ ಸಿದ್ಧಿ ಮತ್ತು ಅಸಿದ್ಧಿಯಲ್ಲಿ ಹರ್ಷಶೋಕಗಳಿಂದ ಕೂಡಿದವನು ;

ಇಂತಹ ಲಕ್ಷಣಗಳನ್ನು **ಕರ್ತಾ** – ಕರ್ಮಾಧಿಕಾರಿಯು, **ರಾಜಸಃ ಪರಿಕೀರ್ತಿತಃ** - ರಾಜಸಾಧಿಕಾರಿಯೆಂದು, ಪ್ರಸಿದ್ಧಿಯನ್ನು ಹೊಂದುವವನಾಗುತ್ತಾನೆ. ರಾಗೀ ಎಂಬಲ್ಲಿ **ಯಶೋಽರ್ಥೀ** ಎಂದು ಯಶಸ್ಸನ್ನು ಹೇಳಿದುದು ಇತರ ಐಹಿಕ ಪ್ರಯೋಜನಗಳಿಗೂ ಉಪಲಕ್ಷಣವಾಗಿ ಭಾವಿಸಬಹುದು. ಈ ರಾಜಸಿಯು ಭಗವತ್ಪ್ರೀತ್ಯರ್ಥವಾಗಿ ಕರ್ಮವನ್ನು ಮಾಡದಿರುವದರಿಂದ ಶ್ರೇಯಸ್ಸಾಧನಕ್ಕೆ ಅನುಕೂಲವಿಲ್ಲವೆಂದು ಭಾವಿಸತಕ್ಕದ್ದು. ಸಾಧಾರಣವಾಗಿ ಋಷಿಗಳೂ ಸನ್ಯಾಸಿಗಳೂ, ಬ್ರಾಹ್ಮಣರೂ, ಇವರುಗಳಲ್ಲಿ ಸಾತ್ವಿಕಾಧಿಕಾರಿಗಳು ಹೆಚ್ಚಾಗಿ ಉಂಟು. ಹಾಗೆಯೇ ಕ್ಷತ್ರಿಯರಲ್ಲಿ ರಾಜಸಾಧಿಕಾರಿಗಳೂ, ಶೂದ್ರರಲ್ಲಿ ತಾಮಸಾಧಿಕಾರಿಗಳೂ ಹೆಚ್ಚು. ಧೃತರಾಷ್ಟ್ರನು ಯದ್ಯಪಿ ಸ್ವಲ್ಪ ಮಟ್ಟಿಗೆ ಉತ್ತಮ ಕ್ಷತ್ರಿಯನು. ಆದರೂ ಆತನಲ್ಲಿ ರಾಜಸ ಲಕ್ಷಣವೇ ಹೆಚ್ಚಾಗಿತ್ತು ಎಂಬುದು ಸಂಜಯೋಕ್ತಿಯಿಂದ ವ್ಯಕ್ತವು. ಧೃತರಾಷ್ಟ್ರನು ಸಂಜಯರನ್ನು ಕೇಳುತ್ತಾನೇನೆಂದರೆ.—**"ಕಥಂತ್ವಂ ಮಾಧವಂವೇತ್ಥ ಸರ್ವಲೋಕ ಮಹೇಶ್ವರವ್ । ಕಥಮೇನಂ ನವೇದಾಹಂ ತನ್ಮಮಾಚಕ್ಷ್ವಸಂಜಯ"** ಎಂದರೆ ನೀವು ಶ್ರಿಯಃಪತಿಯಾದ ಸರ್ವಲೋಕನಾಯಕನನ್ನು ಸಾಕ್ಷಾತ್ಕರಿಸಿರುವ ಹಾಗೆ ಹೇಗೆ ತಿಳಿದಿರಿ? ನನಗೇಕೆ ಅಂತಹ ಜ್ಞಾನವು ಸಿದ್ಧಿಸಲಿಲ್ಲವೆಂದು ಪ್ರಶ್ನೆಯು. ಅದಕ್ಕೆ ಉತ್ತರವಾಗಿ ಸಂಜಯರು ಹೇಳುತ್ತಾರೆ. **"ಮಾಯಾಂ ನಸೇವೇ ಭದ್ರಂತೇ ನ ವೃಥಾ ಧರ್ಮಮಾಚರೇ । ಶುದ್ಧಭಾವಂ ಗತೋ ಭಕ್ತ್ಯಾ ಶಾಸ್ತ್ರಾದ್ವೇದ್ಮಿ ಜನಾರ್ದನವ್."** ಎಂದರೆ ಓ ಧೃತರಾಷ್ಟ್ರನೇ ನಿನಗೆ ಮಂಗಳವಾಗಲಿ, ನಾನು ಪ್ರಕೃತಿಭೋಗಗಳನ್ನು ಅನುಭವಿಸುವದಿಲ್ಲವು ; ಇದರಿಂದ ನೀನು **ರಾಗೀ** ಎಂದು ಹೇಳಿದಂತಾಯಿತು. **ನವೃಥಾ ಧರ್ಮಮಾಚರೇ** – ನಾನು ವ್ಯರ್ಥವಾಗಿ ನಿತ್ಯನೈಮಿತ್ತಿಕಗಳನ್ನು ಮಾಡುವದಿಲ್ಲವು. ಅವುಗಳಲ್ಲಿ ಫಲಕರ್ತೃತ್ವ ಮಮತೆಗಳನ್ನು ತ್ಯಾಗಮಾಡಿ, ಪರಮಪುರುಷಾರಾಧನವೆಂದು ಭಾವಿಸಿ ಆತನಲ್ಲಿ ಸಮರ್ಪಿಸಿ ಆತನ ಅನುಗ್ರಹವನ್ನು ಹೊಂದಿರುವೆನು; ನೀನಾದರೋ ಹಾಗಲ್ಲದೆ **ಕರ್ಮಫಲಪ್ರೇಪ್ಸುವು** ಎಂದು ಹೇಳಿದಂತಾಯಿತು ಪಾಂಡವರ ಸ್ವತ್ತನ್ನು ಅವರಿಗೆ ಕೊಡಿಸದೆ ಇರುವದರಿಂದ ಲೋಭಭಾವವೂ ಉಂಟು ಎಂದು ಹೇಳಿದಂತಾಯಿತು. ಹೀಗೆ ಕರ್ಮಯೋಗವನ್ನು ಅನುಷ್ಠಿಸಿ, ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪಗಳನ್ನು ಕಳೆದುಕೊಂಡು, **ಶುದ್ಧಭಾವಂಗತಃ** ಹೀಗೆ ಪರಿಶುದ್ಧನಾಗಿ **ಭಕ್ತ್ಯಾ** - ಪರಭಕ್ತ್ಯಾದಿಗಳ ಮೂಲಕ, ಜನಾರ್ದನನನ್ನು ಉಪಾಸಿಸಿ ಸಾಕ್ಷಾತ್ಕರಿಸಿರುವೆನು. ನೀನು ಹೀಗೆಲ್ಲಾ ಮಾಡಿಲ್ಲವಾದುದರಿಂದ ನೀನು ರಾಜಸಾಧಿಕಾರಿ ಎಂದು ಪರಮ ಭಾಗವತರಾದ ಸಂಜಯರು ಹೇಳಿದರು. (ಭಾರ. ಉದ್ಯೋ. ೬೮ವೆಯ ಅಧ್ಯಾಯ). ಆದುದರಿಂದ ಸಂಜಯರು ಸಾತ್ವಿಕ ಕರ್ತಾವಿಗೂ, ಧೃತರಾಷ್ಟ್ರನು ರಾಜಸ ಕರ್ತಾವಿಗೂ ನಿದರ್ಶನಗಳು. ವಿಶ್ವಾಮಿತ್ರರು ರಾಜಸಕರ್ತಾವಾಗಿ ರಾಜರ್ಷಿಯಾಗಿರುವ ತನಕ ಬ್ರಹ್ಮರ್ಷಿ ಎನಿಸುವದಕ್ಕೆ ಅನರ್ಹರಾಗಿದ್ದರು. ವಸಿಷ್ಠರು ಸಾತ್ವಿಕ ಕರ್ತಾವಾಗಿ ಬ್ರಹ್ಮರ್ಷಿಯು. ಸಾತ್ವಿಕ ಕರ್ತಾವಾದ ನಂತರ ವಿಶ್ವಾಮಿತ್ರರು ಬ್ರಹ್ಮರ್ಷಿಯಾದರು. ॥೨೭॥

**ಮೂಲಕ್ಕೆ ಅರ್ಥವು**—ಸಾತ್ವಿಕ ರಾಜಸ ಕರ್ತಾವಿನ ಲಕ್ಷಣಗಳನ್ನು ತಿಳಿಸಿ, ಈ ಶ್ಲೋಕದಲ್ಲಿ ತಾಮಸಕರ್ತಾವಿನ ಲಕ್ಷಣವನ್ನು ಹೇಳುತ್ತಾರೆ—

**ಅಯುಕ್ತಃ** - ಶಾಸ್ತ್ರದಲ್ಲಿ ಹೇಳಿರುವ ರೀತ್ಯಾ ತನ್ನ ವಿಹಿತಕರ್ಮಗಳನ್ನು ನಡೆಸಲು ಅಯೋಗ್ಯನಾಗಿಯೂ, ಇದರಿಂದ ಸಾತ್ವಿಕ ರಾಜಸರಿಂದ ವ್ಯಾವರ್ತಿಸಲ್ಪಟ್ಟನು, ಸಾತ್ವಿಕನು ಭಗವತ್ಪ್ರೀತ್ಯರ್ಥವಾಗಿ ವಿಹಿತಕರ್ಮಗಳನ್ನನುಷ್ಠಿಸುವವನು, ರಾಜಸಿಯು ದಂಭಕ್ಕಾಗಿ ಅನುಷ್ಠಿಸುವವನು. ತಾಮಸಿಗೆ ಶಾಸ್ತ್ರಕರ್ಮದಲ್ಲಿ ಇಷ್ಟವೇ ಇಲ್ಲವೆಂದು ಹೇಳಲ್ಪಟ್ಟಿತು ; **ಪ್ರಾಕೃತಃ** - ಜಡಸ್ವಭಾವನಾಗಿಯೂ, ಇದರಿಂದ ಚೇತನಧರ್ಮವಾದ ತನ್ನ ಮತ್ತು ಪರಮಾತ್ಮ ಸ್ವರೂಪ ಜ್ಞಾನವಿಲ್ಲದವನಾಗಿಯೂ,

ಮೂ. ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಕೃತಿಕೋಽಲಸಃ ।
ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮ ॥

ಭಾ. ಅಯುಕ್ತಃ – ಶಾಸ್ತ್ರೀಯಕರ್ಮಾಯೋಗ್ಯಃ, ವಿಕರ್ಮಸ್ಥಃ ಪ್ರಾಕೃತಃ - ಅನಧಿಗತ ವಿದ್ಯಃ, ಸ್ತಬ್ಧಃ - ಅನಾರಂಭಶೀಲಃ, ಶಠ - ಅಭಿಚಾರಾದಿಕರ್ಮರುಚಿಃ, ನೈಕೃತಿಕಃ–

---

ಬ್ರಹ್ಮವಿದ್ಯೆಯ ಜ್ಞಾನವಿಲ್ಲದವನೆಂದೂ, ಹೇಳಲ್ಪಟ್ಟಿತು ; ಸಾತ್ವಿಕನಾದರೋ ಇಂತಹ ಜ್ಞಾನದಲ್ಲಿ ಅಭಿಲಾಷೆಯುಳ್ಳವನೆಂಬ ಭಾವವು. ಸ್ತಬ್ಧಃ – ನಿರುತ್ಸಾಹನಾಗಿ ಕಾರ್ಯಾರಂಭ ಮಾಡಲು ಸೋಮಾರಿಯಾಗಿರುವವನು, ಹಿಂದೆ (೧೪೮) "ಆಲಸ್ಯ ನಿದ್ರಾಭಿಸ್ತನ್ನಿಬಧ್ನಾತಿ ಭಾರತ" ಎಂದು ಹೇಳಲ್ಪಟ್ಟಿರುತ್ತದೆ. ಪೂಜ್ಯರಲ್ಲಿ ಹೋಗಿ ಪ್ರಣಾಮಾದಿಗಳನ್ನೆಸಗಿ ಜ್ಞಾನ ಸಂಪಾದನೆಗಾಗಿ ಶಾಸ್ತ್ರಾರಂಭವನ್ನು ಮಾಡದಿರುವದು ಇಲ್ಲಿ ಸ್ತಬ್ಧ ಶಬ್ದದಿಂದ ಹೇಳಲ್ಪಟ್ಟಿ ತೆಂದು ಭಾವಿಸಬಹುದು. ಶಠಃ - ಸಾತ್ವಿಕ ಕರ್ಮಾಧಿಕಾರಿಯು ಹಿಂದೆ ರಾಗದ್ವೇಷಗಳಿಲ್ಲದ ಸಾತ್ವಿಕ ಕರ್ಮವನ್ನು ಮಾಡುತ್ತಾನೆಂದು ಹೇಳಲ್ಪಟ್ಟಿತು; ಈ ತಾಮಸಿಯಾದರೋ, ಶಠಃ - ಇತರ ರನ್ನು ದ್ವೇಷಿಸಿ ಹಿಂಸಿಸುವ ಸ್ವಭಾವವುಳ್ಳವನಾಗಿಯೂ, ನೈಕೃತಿಕಃ - ಪರರನ್ನು ವಂಚಿಸುವವ ನಾಗಿಯೂ, ಅಥವಾ ಋಜುಸ್ವಭಾವವಿಲ್ಲದವನಾಗಿಯೂ, ಆದರೆ ನೈಕೃತಿಕಃ ಎಂಬುದರಿಂದ ವಂಚಿಸುವವನೆಂಬರ್ಥ ಬರುವದರಿಂದ "ನಿಕೃತಸ್ತ್ವನೃಜುಶ್ಶಠಃ" ಎಂಬ ನಿಘಂಟುವನ್ನನು ಸರಿಸಿ, ಶಠ ಶಬ್ದಕ್ಕೆ ಇತರರನ್ನು ಹಿಂಸಿಸುವ ಸ್ವಭಾವವುಳ್ಳವನೆಂಬರ್ಥವೇ ಸಮಂ ಜಸವು. ಆಲಸಃ – ಕೆಲಸವನ್ನು ಆರಂಭಿಸಿದರೂ ಶ್ರದ್ಧಾಶೂನ್ಯನಾಗಿ ಉದಾಸೀನ ದಿಂದಿರುವವನಾಗಿಯೂ, ವಿಷಾದೀ - ನಿರುತ್ಸಾಹನಾಗಿ ತುಂಬಾ ದೈನ್ಯದಿಂದ ಕೂಡಿದವ ನಾಗಿಯೂ, ದೀರ್ಘಸೂತ್ರೀಚ – ಇತರರಿಗೆ ಕೇಡನ್ನುಂಟುಮಾಡಬೇಕೆಂಬ ದೀರ್ಘಾಲೋಚನೆ ಯುಳ್ಳವನಾಗಿಯೂ, ಎನಾದರೂ ಅಚಾತುರ್ಯವು ನಡೆದರೂ ಸಾತ್ವಿಕನು ಏನೋ ಪ್ರಾರಬ್ಧವು ಕಳೆಯಿತು ಎಂದು ಕ್ಷಮಿಸಿ ಬಿಡುವನೇ ವಿನಾ ದೀರ್ಘದ್ವೇಷವಿಲ್ಲವು ; ತಾಮಸಿಯು ಹಾಗಲ್ಲದೆ ದೀರ್ಘದ್ವೇಷವಿಟ್ಟು ಕೆಡಸಲು ಯತ್ನಿಸುವನಲ್ಲದೆ, ನಿಷ್ಕಾರಣವಾಗಿಯೂ ತನಗೆ ಇಷ್ಟವಿಲ್ಲದವರಿಗೆ ಮುಂದಕ್ಕೆ ತೊಂದರೆ ಉಂಟಾಗುವ ಹಾಗೆ ಈಗಲೇ ಆಲೋಚಿಸುವನೆಂದೂ ಅರ್ಥ ಹೇಳ ಬಹುದು. ಇಂತಹ ಕರ್ತಾ-ಕರ್ಮಾಧಿಕಾರಿಯು, ತಾಮಸ ಉಚ್ಯತೇ-ತಾಮಸಾಧಿಕಾರಿಯೆಂದು ಹೇಳಲ್ಪಡುವನು. ಮತದ್ವೇಷಿಗಳ ಹಿಂಸಾಪ್ರವೃತ್ತಿಗಳು ನಿದರ್ಶನವು. ||೨೮||

ಭಾಷ್ಯಾರ್ಥವು—ಅಯುಕ್ತಃ ಎಂದರೆ ಶಾಸ್ತ್ರೀಯ ಕರ್ಮಾಯೋಗ್ಯಃ-ಶಾಸ್ತ್ರದಲ್ಲಿ ವಿಧಿ ಸಿರುವ ಕರ್ಮಕ್ಕೆ ಯೋಗ್ಯನಲ್ಲದೆಯೂ, ತಾತ್ಪರ್ಯವೇನೆಂದರೆ ವಿಕರ್ಮಸ್ಥಃ-ವ್ಯತ್ಯಸ್ಥಕರ್ಮದಲ್ಲಿರುವವನು, ಪ್ರಾಕೃತಃ ಎಂದರೆ ಅನಧಿಗತವಿದ್ಯಃ–ಹೊಂದದೇ ಇರುವ ಬ್ರಹ್ಮವಿದ್ಯೆಯುಳ್ಳವನು. ಶಾಸ್ತ್ರಾ ಧ್ಯಯನ, ಆದರ ಅರ್ಥಗ್ರಹಣ ಇವುಗಳ ಉಪದೇಶದಿಂದುಂಟಾದ ಸಾತ್ವಿಕ ಕರ್ಮಾನುಷ್ಠಾನಕ್ಕೆ ಅನುಗುಣ ವಿಶೇಷವೇನೂ ಇಲ್ಲದಿರೋಣವು ಪ್ರಾಕೃತ ಶಬ್ದದಿಂದ ಹೇಳಲ್ಪಟ್ಟಿತು; ಆದುದರಿಂದಲೇ ಅನಧಿಗತವಿದಃ ಎಂಬ ವ್ಯಾಖ್ಯಾನವು ; ಜಡಪ್ರಕೃತಿಯ ಸ್ವಭಾವವುಳ್ಳವನೆಂಬ ಭಾವನೆಯಿಂದ ಪ್ರಾಕೃತಶಬ್ದಪ್ರಯೋಗವು. ಸ್ತಬ್ಧಃ – ಎಂದರೆ ಅನಾರಂಭಶೀಲಃ-ಕಾರ್ಯವನ್ನು ಆರಂಭಿಸದೇ ಇರುವ ಸ್ವಭಾವವುಳ್ಳವನು. ಅಭಿಪ್ರಾಯವೇನೆಂದರೆ, ಪೂಜ್ಯರಾದವರು ಆಕಸ್ಮಿಕವಾಗಿ ಬಂದರೆ ಅವರನ್ನು ಸ್ವಾಗತಿಸಿ ಪ್ರಣಾಮಾಭಿವಾದನಗಳನ್ನು ಒಡನೆ ಮಾಡದೆ ಸ್ತಬ್ಧನಾಗಿರುವ ಸ್ವಭಾವ ವುಳ್ಳವನು ಎಂಬರ್ಥವು. ಶಠಃ ಎಂದರೆ ಅಭಿಚಾರಾದಿ ಕರ್ಮರುಚಿಃ–ಇತರರಿಗೆ ತೊಂದರೆ ನಶ ಮುಂತಾದುವು ಉಂಟಾಗುವ ಹಾಗೆ ನಡೆಸುವ ಕರ್ಮದಲ್ಲಿ ಅಭಿರುಚಿಯುಳ್ಳವನು. ಶಠತ್ವವೆಂದರೆ ಗೂಢವಾಗಿ ಇನ್ನೊಬ್ಬರಿಗೆ ಅಪ್ರಿಯವಾದುದನ್ನು ಮಾಡುವಿಕೆಯು, ಪ್ರಕರಣಾನುಗುಣವಾಗಿ

**ವಂಚನಪರಃ ಅಲಸಃ - ಆರಬ್ಧೇಷ್ವಪಿ ಕರ್ಮಸು ಮನ್ದಪ್ರವೃತ್ತಿಃ, ವಿಷಾದೀ - ಅತಿಮಾತ್ರಾವಸಾದಶೀಲಃ, ದೀರ್ಘಸೂತ್ರೀ - ಅಭಿಚಾರಾದಿಕರ್ಮ ಕುರ್ವನ್ ಪರೇಷು ದೀರ್ಘಕಾಲವರ್ತ್ಯನರ್ಥಪರ್ಯಾಲೋಚನಶೀಲಃ, ಏವಂ ಭೂತೋ ಯಃ ಕರ್ತಾ ಸ ತಾಮಸಃ ॥ ೨೮ ॥**

---

ಶಾಸ್ತ್ರಗಳಲ್ಲಿ ಹೇಳಿರುವ ತಾಮಸಕರ್ಮವೆಂದು **ಅಭಿಚಾರಾದಿ ಕರ್ಮರುಚಿಃ** ಎಂದು ವ್ಯಾಖ್ಯಾನವು. **ನೈಕೃತಿಕಃ** ಎಂದರೆ ವಂಚ**ನಪರನು**; ನೈಕೃತಿಕತ್ವವೂ ಶಠತ್ವದಲ್ಲೇ ಸೇರಿದುದಾದುದರಿಂದ ಶಠತ್ವಕ್ಕೆ ಶಾಸ್ತ್ರೀಯವಾದ ಅಭಿಚಾರಾದಿ ಕರ್ಮವೆಂಬರ್ಥವನ್ನು ಹೇಳಿ, ನೈಕೃತಿಕತ್ವಕ್ಕೆ ಲೌಕಿಕ ಕರ್ಮದ್ವಾರಾ ವಂಚಿಸೋಣವೆಂದು ಅರ್ಥಮಾಡಿರುತ್ತಾರೆ. **ಅಲಸಃ** - ಆಲಸ್ಯದಿಂದ ಕರ್ಮಮಾಡುವವನು ; ಈ ಆಯುಸ್ಸು ನಿಯತವು, ಸಾತ್ವಿಕರು ಒಂದು ದಿನ ಕಳೆಗುಹೋದರೆ ವ್ಯರ್ಥವಾಗಿ ಹೋಗುತ್ತದೆಯೋ ಎಂಬ ಭಾವನೆಯಿಂದ **"ಶ್ವಃಕಾರ್ಯ ಮದ್ಯಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಾ । ನ ಹಿ ಪ್ರತೀಕ್ಷತೇ ಮೃತ್ಯುಃ ಕೃತ ಮಸ್ಯ ನವಾ ಕೃತಂ**"(ಭಾ. ಮೋ ೧೭೪-೧೫) "ನಾಳೇ ಕೆಲಸವನ್ನು ಈಗಲೂ, ಅಪರಾಹ್ಣದ ಕೆಲಸವನ್ನು ಪೂರ್ವಾಹ್ಣದಲ್ಲೂ, ಮಾಡು ; ಏಕೆಂದರೆ ಮೃತ್ಯುವು ಕೆಲಸವಾಯಿತೇ ಇಲ್ಲವೇ ಎಂಬುದನ್ನು ನಿರೀಕ್ಷಿಸುವುದಿಲ್ಲವು.'' ಎಂದು ಹೇಳಿರುವ ಹಾಗೆ, ಸಾತ್ವಿಕನು ತನ್ನ ಮುಂದಿನ ಮಾರ್ಗವನ್ನು ತ್ವರೆಯಿಂದ ನೋಡಿಕೊಳ್ಳುವನು ; ಈ ತಾಮಸಿಯಾದರೋ ಹಾಗಲ್ಲವು; ಈವತ್ತಿನ ಕೆಲಸವನ್ನು ಇನ್ನು ಎಂಟು ದಿನಗಳಮೇಲೆ ಆರಂಭಿಸಲು ಯತ್ನಿಸುವಂತವನು. ಎಂಬ ಭಾವವು; ಈತನಿಗೆ **ಋತೂನಾಂ ಪರಿವರ್ತೇನ ಪ್ರಾಣಿನಾಂ ಪ್ರಾಣಸಂಕ್ಷಯಃ** (ಶ್ರೀ. ರಾ. ) ಋತುಗಳು ಸುತ್ತುವದರಿಂದ ಪ್ರಾಣಿಗಳಿಗೆ ಆಯುಸ್ಸು ಕ್ಷೀಣವಾಗುತ್ತದೆ ಎಂಬ ಪರಿಜ್ಞಾನವಿಲ್ಲದೆ ಮಾಡತಕ್ಕ ಕೆಲಸವನ್ನು ಮಾಡದೆ ಅಲಸಸ್ವಭಾವದಿಂದಿರುವನೆಂಬ ಭಾವವು ; ಆದರೆ ಹೀಗೆ ಅರ್ಥ ಹೇಳಿದರೆ ಹಿಂದಿರುವ ಸ್ತಬ್ಧಃ— ಎಂಬುದರೊಂದಿಗೆ ಪುನರುಕ್ತಿ ಎಲ್ಲಿ ಆದೀತೋ ಎಂಬುದರಿಂದ, **ಆರಬ್ಧೇಷ್ವಪಿ ಕರ್ಮಸು ಮನ್ದಪ್ರವೃತ್ತಿಃ** - ಪ್ರಾರಂಭಿಸಲ್ಪಟ್ಟ ಕೆಲಸಗಳಲ್ಲೂ ಕೂಡ ಬಹು ಸಾವಕಾಶವಾದ ಪ್ರವೃತ್ತಿಯುಳ್ಳವನು ಎಂದು ಅರ್ಥಮಾಡಿರುತ್ತಾರೆ ; **ವಿಷಾದೀ** ಎಂದರೆ **ಅತಿಮಾತ್ರಾವಸಾದಶೀಲಃ** – ನಾನಾಕಾರಣಗಳಿಂದ ವಿಶೇಷ ದೈನ್ಯವನ್ನು ಹೊಂದುವದರಮೂಲಕ ಮನಸ್ಸಿಗೆ ಕ್ಲೇಶವನ್ನುಂಟುಮಾಡಿಕೊಳ್ಳುವ ಸ್ವಭಾವವುಳ್ಳವನು ; **ವಿಷಾದೀ** ಎಂಬಲ್ಲಿರುವ ಧಾತ್ವರ್ಥವೇ ಅವಸಾದವನ್ನು ಬೋಧಿಸುತ್ತದೆಯಾದುದರಿಂದಲೂ, ವಿ ಎಂಬ ಉಪಸರ್ಗದಿಂದಲೂ. **ಅತಿಮಾತ್ರಾವಸಾದಶೀಲ** ಎಂಬ ವ್ಯಾಖ್ಯಾನವು; ವಾಕ್ಯಕಾರರು ಅವಸಾದ ಶಬ್ದಕ್ಕೆ **"ದೇಶಕಾಲವೈಗುಣ್ಯಾ ಚ್ಛೋಕವಸ್ತ್ವಾದ್ಯನುಸ್ಮೃತೇಶ್ಚ ತಜ್ಜಂ ದೈನ್ಯಮಭಾಸ್ವರತ್ವಂ ಮನಸೋಽವಸಾದ ಇತಿ"** ಎಂಬದಾಗಿ ವ್ಯಾಖ್ಯಾನಮಾಡಿರುತ್ತಾರೆ. ದೇಶಕಾಲಗಳು ವಿಪರೀತವಾಗಿರುವದರಿಂದ, ಹಿಂದೆ ನಡೆದ ಧನನಾಶ ಪುತ್ರಮರಣಾದಿಗಳು ಶೋಕಕ್ಕೆ ಕಾರಣವಾಗಿ ಅವು ಜ್ಞಾಪಕಕ್ಕೆ ಬರುವದರಿಂದಲಾಗಲಿ, ಮುಂದೆ ಯಾವ ದುರ್ಗತಿ ಪ್ರಾಪ್ತವಾಗುತ್ತದೋ ಎಂಬ ಭಯದಿಂದಾಗಲಿ ಉಂಟಾಗುವ ಮನಸ್ಸಿನ ಹರ್ಷತೆ ಇಲ್ಲದ ದೈನ್ಯವು ಅವಸಾದವೆನಿಸುತ್ತದೆ. ಅಂತವನಿಗೆ **ವಿಷಾದೀ** ಎಂಬ ಹೆಸರು; ಸಾತ್ವಿಕನಾದರೋ **ಅನವಸಾದದಿಂದ** ಯುಕ್ತನಾಗಿ ಮನಸ್ಸಿನ ಅಭಾಸ್ವರತ್ವವಿಲ್ಲದೆ ಹರ್ಷಯುಕ್ತನಾಗಿ ಹಿಡಿದ ಕೆಲಸವನ್ನು ಪೂರೈಸುತ್ತಾನೆ. ಆದುದರಿಂದ **ಅನವಸಾದವು** ಸಾಧನಸಪ್ತಕದಲ್ಲಿ ಒಂದು ಗುಣವು. ಸಾಧನಸಪ್ತಕಗಳು ಉಪಾಸನಸಿದ್ಧಿಗೆ ಬೇಕಾದ ಏಳು ಗುಣಗಳು. ಅವು ಯಾವುವು ಎಂಬುದನ್ನು ತಿಳಿಯತಕ್ಕದ್ದು. ಪ್ರಥಮ ಸೂತ್ರದ ಭಾಷ್ಯದಲ್ಲಿ ನೋಡಿ. **ದೀರ್ಘಸೂತ್ರೀ** ಎಂದರೆ **ಅಭಿಚಾರಾದಿಕರ್ಮ ಕುರ್ವನ್ ಪರೇಷು ದೀರ್ಘಕಾಲ ವರ್ತ್ಯನರ್ಥಪರ್ಯಾಲೋಚನ ಶೀಲಃ-**

**ಭಾ. ಅವ. ಏವಂ ಕರ್ತವ್ಯಕರ್ಮವಿಷಯಜ್ಞಾನೇ, ಕರ್ತವ್ಯೇ ಚ ಕರ್ಮಣಿ, ಅನುಷ್ಠಾತರಿ ಚ, ಗುಣತಸ್ತ್ರೈವಿಧ್ಯಮುಕ್ತಮ್; ಇದಾನೀಂ ಸರ್ವತತ್ತ್ವಸರ್ವಪುರುಷಾರ್ಥನಿಶ್ಚಯರೂಪಾಯಾ ಬುದ್ಧೇ ಧೃತೇಶ್ಚ ಗುಣತಸ್ತ್ರೈವಿಧ್ಯಮಾಹ—**

---

ಇತರರಿಗೆ ಅಭಿಚಾರವೆಂದರೆ ಕೆಟ್ಟದು ಉಂಟಾಗುವದಕ್ಕಾಗಿ ಮಾಡುವ ಕರ್ಮ ಇವೇ ಮೊದಲಾದವನ್ನು ಮಾಡಿ, (ಇದು ಹಿಂದೆ ಶಠತ್ವದಲ್ಲೇ ಸೇರಿದುದರಿಂದ ಅದನ್ನು ವ್ಯಾವರ್ತಿಸಿ ಮುಂದೆ ಹೇಳುತ್ತಾರೆ.) ಬಹುಕಾಲದವರೆಗೂ ತೊಂದರೆಯನ್ನುಂಟುಮಾಡಬೇಕೆಂದು ಯೋಚಿಸಿರುವವನು, **ದೀರ್ಘಸೂತ್ರೀ** - ಬಹುಕಾಲ ನಿರೀಕ್ಷಣೆಯಿಂದ ಮಾಡುವನೆಂದು ಅರ್ಥಮಾಡಲು, ಹಿಂದೆ ಅಲಸಃ ಎಂಬಲ್ಲೇ ಅದು ಹೇಳಲ್ಪಟ್ಟಿದುದರಿಂದಲೂ, ಕೆಟ್ಟದ್ದು ಮಾಡುವುದಕ್ಕಾಗಿ ಅಭಿಚಾರಾದಿಗಳನ್ನು ಬಹುಕಾಲ ನಡೆಸುವನೆಂದು ಅರ್ಥಮಾಡಲು ಶಠಃ ಎಂಬ ಶಬ್ದದೊಂದಿಗೆ ಪುನರುಕ್ತಿಯುಂಟಾಗುವದರಿಂದಲೂ ಬಹುಕಾಲದವರೆಗೂ ಅನರ್ಥ ಉಂಟಾಗಲೆಂದು ಪರ್ಯಾಲೋಚಿಸುತ್ತಿರುವವನೆಂದು ಅರ್ಥಮಾಡಿರುತ್ತಾರೆ; **ದೀರ್ಘಸೂತ್ರೀ** ಎಂಬ ಪದಕ್ಕೆ ಅರ್ಥವೇನೆಂದರೆ—ಸೂತ್ರಶಬ್ದಕ್ಕೆ ಧಾತ್ವರ್ಥದ ಪ್ರಕಾರ ಚಿಂತನವೆಂಬರ್ಥವಾದುದರಿಂದ **ದೀರ್ಘಸೂತ್ರೀ** ಎಂದರೆ ಕೆಟ್ಟದ್ದು ಮಾಡುವದಕ್ಕಾಗಿಯೇ ದೀರ್ಘಾಲೋಚನೆಯುಳ್ಳವನೆಂಬರ್ಥವಾಗುತ್ತದೆ; ಶ್ರೀಮದಾನಂದತೀರ್ಥೀಯರು ದೀರ್ಘಸೂತ್ರೀ ಶಬ್ದಾರ್ಥಕ್ಕಾಗಿ "**ಪರೇಣ ಯಃ ಕೃತೋ ದೋಷೋ ದೀರ್ಘಕಾಲಕೃತೋಽಪಿ ವಾ - ಯಸ್ತಸ್ಯ ಸೂಚಕೋ ದೋಷಾದ್ದೀರ್ಘಸೂತ್ರೀ ಚ ಉಚ್ಯತೇ** ॥ ದೀರ್ಘಕಾಲದ ಹಿಂದೆ ಮಾಡಿದ ದೋಷವನ್ನೇ ಚಿಂತಿಸುತ್ತಾ ಅದನ್ನೇ ಸೂಚಿಸುತ್ತಾ ಇರುವವನು ಯಾರೋ ಅವನು **ದೀರ್ಘಸೂತ್ರೀ** ಎಂಬ ಪ್ರಮಾಣವನ್ನು ಉದಾಹರಿಸಿರುತ್ತಾರೆ. **ಏವಂಭೂತಃ ಯಃ ಕರ್ತಾ** ಹೀಗೆಲ್ಲಾ ಇರುವವನು ಯಾವ ಕರ್ಮಾಧಿಕಾರಿಯೋ, **ಸತಾಮಸಃ**. ಅಂತವನು ತಾಮಸಾಧಿಕಾರಿ ಎನಿಸುವನು. ॥ ೨೮ ॥

**ಭಾಷ್ಯಾವತಾರಿಕೆಯು**—ಹಿಂದೆ ಹೇಳಿದುದು ಏನು? ಮುಂದೆ ಹೇಳುವದೇನು? ಹೀಗೆ ಎರಡಕ್ಕೂ ಸಙ್ಗತಿಯನ್ನು ತೋರಿಸುವದಕ್ಕಾಗಿ ಅವತಾರಿಕೆಯನ್ನು ದಯಪಾಲಿಸುತ್ತಾರೆ-- **ಏವಂ**- ಹೀಗೆ ಹಿಂದಿನ ಒಂಬತ್ತು ಶ್ಲೋಕಗಳ ಮೂಲಕವಾಗಿ (೧) **ಕರ್ತವ್ಯಕರ್ಮವಿಷಯಜ್ಞಾನೇ** – ಮಾಡಬೇಕಾದ ಕರ್ಮವಿಷಯಕ ಜ್ಞಾನದಲ್ಲೂ, (೨) **ಕರ್ತವ್ಯೇ ಚ ಕರ್ಮಣಿ** – ಮಾಡಬೇಕಾದ ಕರ್ಮದಲ್ಲೂ (೩) **ಅನುಷ್ಠಾತರಿ ಚ** - ಆ ಕರ್ಮವನ್ನು ಮಾಡುವ ಕರ್ತಾವಿನಲ್ಲೂ ಸಹ, **ಗುಣತಃ** . ಸಾತ್ವಿಕ ರಾಜಸ ತಾಮಸ ಗುಣ ಭೇದದಿಂದ, **ತ್ರೈವಿಧ್ಯಮುಕ್ತಮ್** – ಮೂರು ಮೂರು ವಿಧವುಳ್ಳವೆಂಬುದು ಹೇಳಲ್ಪಟ್ಟಿತು, **ಇದಾನೀಂ** - ಈಗಲಾದರೋ ಎಂದರೆ ಇನ್ನು ಮುಂದೆ ಏಳು ಶ್ಲೋಕಗಳ ಮೂಲಕ, **ಬುದ್ಧೇಃ** – ವಿವೇಕಜ್ಞಾನದ ಮತ್ತು **ಧೃತೇಶ್ಚ** - ವಿಘ್ನಗಳಲ್ಲೂ ಕಾರ್ಯನಿರ್ವಾಹಕ ಶಕ್ತಿಗಳ, **ಗುಣತಸ್ತ್ರೈವಿಧಂ** - ಸತ್ವರಜಸ್ತಮೋಗುಣಗಳ ಮೂಲಕವಾಗಿ ಮೂರು ವಿಧವಾಗಿರೋಣವು, **ಆಹ** - ಹೇಳುತ್ತಾರೆ—ಇದರಿಂದ ಬುದ್ಧಿ ಮತ್ತು ಸ್ಥೈರ್ಯಗಳು ಆತ್ಮಗುಣಗಳೆಂದೂ, ಕರ್ಮವಾಸನಾನುಗುಣವಾಗಿ ಅವು ಸಾತ್ವಿಕರಾಜಸ ತಾಮಸಗಳಾಗುತ್ತವೆಂದೂ ಹೇಳಿದಂತಾಯಿತು. ಹಾಗಾದರೆ ಹಿಂದೆ ಜ್ಞಾನವು ಗುಣತಃ ಮೂರು ವಿಧವೆಂದು ಹೇಳಿದುದು ಯಾವುದು? ಮುಂದೆ ಬುದ್ಧಿಶಬ್ದದಿಂದ ಹೇಳುವದು ಯಾವುದು? ಎರಡಕ್ಕೂ ವ್ಯತ್ಯಾಸವೇನು? ಎಂದರೆ ಶ್ರೀ ಯತಿವರ್ಯರೇ ಈ ಪೂರ್ವಪಕ್ಷವು ಉದಿಸದಹಾಗೆ ತಾವೇ ಭಾಷ್ಯವನ್ನು ಬರೆದಿರುತ್ತಾರೆ. ಜ್ಞಾನವೆಂದರೆ **ಜ್ಞಾನ ಕರ್ತವ್ಯಕರ್ಮವಿಷಯಜ್ಞಾನವೆಂದು** ಹೇಳಿ, ಬುದ್ಧಿ ಎಂಬುದು **ಸರ್ವತತ್ವ ಸರ್ವಪುರುಷಾರ್ಥನಿಶ್ಚಯರೂಪವಾದುದು** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ತತ್ವ ವಿಷಯವಾಗಿಯೂ ಪುರುಷಾರ್ಥವಿಷಯವಾಗಿಯೂ ಪರಿಶೀಲಿಸಿ ತಿಳಿಯುವ ವಿವೇಕ ಜ್ಞಾನ

ಮೂ॥ ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।
ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯ ॥

ಭಾ॥ ಬುದ್ಧೇಃ–ವಿವೇಕಪೂರ್ವಕಂ ನಿಶ್ಚಯರೂಪಂ ಜ್ಞಾನಂ, ಧೃತೇಃ - ಆರಬ್ಧಾಯಾಃ ಕ್ರಿಯಾಯಾ ವಿಘ್ನೋಪನಿಪಾತೇಽಪಿ ಧಾರಣಂ, ತಯೋಃ ಸತ್ತ್ವಾದಿಗುಣತಸ್ತ್ರಿವಿಧಂ ಭೇದಂ ಪೃಥಕ್ತ್ವೇನ ಪ್ರೋಚ್ಯಮಾನಂ ಯಥಾವಚ್ಛೃಣು ॥೨೯॥

---

ವೆಂದು ಹೇಳಿರುತ್ತಾರೆ. ಆದುದರಿಂದ ಎರಡೂ ಭಿನ್ನಾರ್ಥವುಳ್ಳವುಗಳು ಎಂದು ಭಾವಿಸತಕ್ಕದ್ದು. ಬುದ್ಧಿಶಬ್ದಕ್ಕೆ ಯತಿವರ್ಯರು ಮುಂದೆ ವಿವೇಕಪೂರ್ವಕವಾದ ನಿಶ್ಚಯರೂಪಜ್ಞಾನವೆಂದು ವ್ಯಾಖ್ಯಾನ ಬರೆದಿರುತ್ತಾರೆ. ಇಲ್ಲಿ **ವಿವೇಕಪೂರ್ವಕಂ** ಎಂದು ಹೇಳಿರುವದರಿಂದ ಇತರಾಭಿಪ್ರಾಯಗಳು ಸರಿಹೊಗುವದಿಲ್ಲವೆಂದು ಸಕಾರಣವಾಗಿ, ಸಪ್ರಮಾಣವಾಗಿ, ನಿಷೇಧಿಸಿ ಯಥಾರ್ಥಾಭಿಪ್ರಾಯ ವನ್ನು ಸ್ಥಾಪಿಸತಕ್ಕದ್ದೇ ವಿವೇಕವೆಂಬ ಭಾವವು. ಇದೀಗ ಸಾತ್ವಿಕ ಧೃತಿಯಿಂದ ತೋರುವ ಭಾವವು. ಆದರೆ ಧೃತಿಯು ಸಾತ್ವಿಕ ರಾಜಸ ತಾಮಸರೂಪದಲ್ಲಿ ಮೂರು ವಿಧವಾದುದರಿಂದ ಮೂರಕ್ಕೂ ಸರಿಹೋಗುವ ಹಾಗೆ **ಆರಬ್ಧಾಯಾಃ ಕ್ರಿಯಾಯಾಃ** ಎಂದಾರಂಭಿಸಿ ಸಾಮಾನ್ಯ ವಾಗಿ ವ್ಯಾಖ್ಯಾನಮಾಡಿರುತ್ತಾರೆ. ಈ ಧೃತಿಯೂ ಕೂಡ ಸಙ್ಕಲ್ಪದಾರ್ಢ್ಯರೂಪವಾದ ಬುದ್ಧಿ ವಿಶೇಷವೇ.

**ಮೂಲಕ್ಕೆ ಅರ್ಥವು**—ಬುದ್ಧಿ ಮತ್ತು ಧೃತಿಗಳು ಸಾತ್ವಿಕ, ರಾಜಸ, ತಾಮಸ ಭೇದ ಗಳಿಂದ ಮೂರು ವಿಧಗಳು ಹೇಗೆಂಬುದನ್ನು ಹೇಳುತ್ತೇನೆ, ಸಾವಧಾನದಿಂದ ಕೇಳು ಎಂದು ಪ್ರತಿಜ್ಞಾವಾಕ್ಯವನ್ನು ಬೋಧಿಸುತ್ತಾರೆ—ಈ ಸಂದರ್ಭದಲ್ಲಿ ಬುದ್ಧಿಧೃತಿ ಗಳ ತ್ರೈವಿಧ್ಯ ಹೇಳಲು ಕಾರಣವೇನು ಎಂದು ಪ್ರಶ್ನಿಸಬಹುದು. ಕರ್ಮಾನುಷ್ಠಾನಕ್ಕೆ ಶಾಸ್ತ್ರಜನ್ಯಜ್ಞಾನವು ಆವಶ್ಯಕವು. ಆದುದರಿಂದ ಹಿಂದೆ ಇಂತಹ ಆಗಮದಿಂದುಂಟಾಗತಕ್ಕ ಜ್ಞಾನವು ಸಾತ್ವಿಕ, ರಾಜಸ, ತಾಮಸಾಧಿ ಕಾರಿಗಳಿಗೆ ಮೂರು ವಿಧವಾಗಿರುತ್ತದೆಂದು ಹೇಳಲ್ಪಟ್ಟಿತು. ಅಂತಹ ಜ್ಞಾನವನ್ನು ತನ್ನ ವಿವೇಕ ಮೂಲಕ ತಿಳಿಯುವದು ಬುದ್ಧಿಯಾಗಿ ಅದೂ ಮೂರು ವಿಧವೆಂದು ಹೇಳಲ್ಪಡುತ್ತದೆ. ಹಿಡಿದ ಕೆಲಸವನ್ನು ಪೂರೈಸುವದಕ್ಕೇ ಧೃತಿ ಎಂದು ಹೆಸರಾಗಿ ಅದೂ ಮೂರು ವಿಧವೆಂದು ಹೇಳುವದೂ ಪ್ರಕರಣಕ್ಕೆ ಬೇಕಾದುದೇ. ಆದುದರಿಂದಲೇ ಈ ಬುದ್ಧಿ ಧೃತಿಗಳ ತ್ರೈವಿಧ್ಯವನ್ನು ಬೋಧಿಸು ತ್ತಾರೆ.—**ಬುದ್ಧೇಃ** - ವಿವೇಕಪೂರ್ವಕವಾದ ನಿಶ್ಚಯಜ್ಞಾನದ ಮತ್ತು **ಧೃತೇಶ್ಚ** - ಪ್ರಾರಂಭಿಸಿದ ಕಾರ್ಯವು ನಿರ್ವಿಘ್ನವಾಗಿ ನಡೆಸುವ ಸಙ್ಕಲ್ಪದ **ಪೃಥಕ್ತ್ವೇನ ಗುಣತಸ್ತ್ರಿವಿಧಂ** - ಸಾತ್ವಿಕ ರಾಜಸ ತಾಮಸಗುಣಗಳ ಮೂಲಕ ಮೂರು ವಿಧವಾಗಿರುವದನ್ನು ಬೇರೆಬೇರೆಯಾಗಿರುವದಾಗಿ, **ಪ್ರೋಚ್ಯಮಾನಂ** – ಹೇಳಲ್ಪಡುವುವನ್ನು. **ಅಶೇಷೇಣ** - ಸಂಪೂರ್ಣವಾಗಿ. **ಶೃಣು** - ಕೇಳು. ಸಾವಧಾನದಿಂದ ಕೇಳು ಎಂಬ ಭಾವವು.

**ಭಾಷ್ಯಾರ್ಥವು**—ಬುದ್ಧಿ ಮತ್ತು ಧೃತಿಗಳು ಮೂರು ವಿಧಗಳೆಂದೂ ಅವುಗಳ ಲಕ್ಷಣಗಳು ಯಾವುವೆಂದೂ ವಿಶದವಾಗಿ ಸರಿಯಾಗಿ ಹೇಳುತ್ತೇನೆ. ಸಾವಧಾನದಿಂದ ಕೇಳು ಎನ್ನುತ್ತಾರೆ. ಬುದ್ಧೇಃ ಎಂದರೆ **ವಿವೇಕಪೂರ್ವಕಂ ನಿಶ್ಚಯರೂಪಂ ಜ್ಞಾನಂ**—ವಿವೇಕಪೂರ್ವಕ ವಾದ ನಿಶ್ಚಯವಾದ ಜ್ಞಾನವು, **ಧೃತೇಃ**-ಎಂದರೆ **ಆರಬ್ಧಾಯಾಃ ಕ್ರಿಯಾಯಾ ವಿಘ್ನೋಪನಿಪಾತೇಽಪಿ ಧಾರಣಂ**-ಪ್ರಾರಂಭಿಸಲ್ಪಟ್ಟ ಕ್ರಿಯೆಗೆ ವಿಘ್ನಗಳ ಹೊಡತವಿದ್ದರೂ ಕೂಡ ಹಿಡಿದು ನಿರ್ವಹಿ ಸೋಣವು. **ತಯೋಃ** - ಆ ಎರಡರ ಎಂದರೆ ಬುದ್ಧಿ ಧೃತಿಗಳ, **ಸತ್ತ್ವಾದಿಗುಣತಸ್ತ್ರಿವಿಧಂ ಭೇದಂ**-ಸತ್ತ್ವರಜಸ್ತಮೋಗುಣಗಳ ಮೂಲಕ ಮೂರು ವಿಧವಾದ ಭೇದವನ್ನು, **ಪೃಥಕ್ತ್ವೇನ** - ಬೇರೆಬೇರೆಯಾಗಿ, **ಪ್ರೋಚ್ಯಮಾನಂ** - ಚನ್ನಾಗಿ ಉಪಪಾದಿಸಿ ಹೇಳಲ್ಪಡುವದನ್ನು **ಯಥಾವ**

**ಮೂ. ಪ್ರವೃತ್ತಿಂಚ ನಿವೃತ್ತಿಂಚ ಕಾರ್ಯಾಕಾರ್ಯೇ ಭಯಾಭಯೇ ।**
**ಬನ್ಧಂ ಮೋಕ್ಷಂಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೦ ॥**

---

**ಶೃಣು** - ಯಥಾವತ್ತಾಗಿ ಕೇಳು, ಇದು **ಅವಿಶೇಷೇಣ ಶೃಣು** ಎಂಬುದರ ಅರ್ಥವು, ಸಾವಧಾನವಾಗಿ ಸಂಶಯ ವಿಪರ್ಯಯಗಳಿಲ್ಲದಹಾಗೆ ಶೃಣು ಎಂಬ ತಾತ್ಪರ್ಯವು. ಮೂಲದಲ್ಲಿ ಧನಂಜಯ ಎಂಬ ಸಂಬೋಧನೆಯಿಂದ ತೋರಿಬರುವ ಅರ್ಥವೇನೆಂದರೆ—ಅರ್ಜುನನೇ, ನೀನು ದಿಗ್ವಿಜಯ ಕಾಲದಲ್ಲಿ ದೇವತೆಗಳ ಮನುಷ್ಯರ ಸಂಪತ್ತನ್ನೇನೋ ಜಯಿಸಿ ಧನಂಜಯನೆಂಬುದು ಸರಿಯೇ. ಹಾಗೆಯೇ ಅಂತರಿಂದ್ರಿಯ ಬಾಹ್ಯೇಂದ್ರಿಯಗಳನ್ನು ಜಯಿಸಿ ಅವುಗಳ ಧನವಾದ ಶಮದಮಾದಿಗಳನ್ನು ಸಂಪಾದಿಸಿಕೊಂಡರೆ ಆಗ ನೀನು ನಿಶ್ಚಯವಾಗಿಯೂ ಧನಂಜಯನು ಎಂಬ ಭಾವವು.

**ಮೂಲಕ್ಕೆ ಅರ್ಥವು**—ಸಾತ್ತ್ವಿಕ ಬುದ್ಧಿಯು ಎಂತಾದ್ದು ಅದರ ಲಕ್ಷಣವೇನು ? ಎಂಬದನ್ನು ತಿಳಿಸುತ್ತಾರೆ.—ಸಾತ್ತ್ವಿಕ ಬುದ್ಧಿಯು ಏನೇನನ್ನು ವಿಮರ್ಶಿಸಿ ಯಥಾವತ್ತಾಗಿ ತಿಳಿಯುತ್ತದೆಂದರೆ ಹೇಳುತ್ತಾರೆ. **ಪ್ರವೃತ್ತಿಂಚ** - ಯಾವ ಧರ್ಮಗಳು ಐಹಿಕ ಶ್ರೇಯಸ್ಸಿಗೂ ಸ್ವರ್ಗಾದಿ ಶ್ರೇಯಸ್ಸುಗಳಿಗೂ ಸಾಧನಗಳು ಎಂಬುದನ್ನೂ, **ನಿವೃತ್ತಿಂಚ** - ಯಾವ ಕರ್ಮಗಳು ಮೋಕ್ಷಸಾಧನಗಳೆಂಬುದನ್ನೂ ಮತ್ತು **ಕಾರ್ಯಾಕಾರ್ಯೇ** - ಮೇಲೆ ಹೇಳಿದ ಪ್ರವೃತ್ತಿಧರ್ಮಗಳನ್ನಾಗಲಿ ನಿವೃತ್ತಿಧರ್ಮಗಳನ್ನಾಗಲಿ ಅನುಷ್ಠಿಸುವಾಗ ದೇಶಕಾಲಾವಸ್ಥಾನುಗುಣವಾಗಿ, ಇದು ಮಾಡತಕ್ಕದ್ದು ಇದು ಮಾಡತಕ್ಕದ್ದಲ್ಲವೆಂಬುವದನ್ನೂ. **ಭಯಾಭಯೇ**-ಇದು ಶಾಸ್ತ್ರವಿರುದ್ಧವಾಗಿ ಭಗವನ್ನಿಗ್ರಹ ಮೂಲಕ ದುಃಖವನ್ನುಂಟುಮಾಡತಕ್ಕದ್ದಾದುದರಿಂದ ಭಯರೂಪವಾದುದು ; ಇದು ಶಾಸ್ತ್ರಸಮ್ಮತವಾಗಿ ಭಗವದನುಗ್ರಹವನ್ನುಂಟುಮಾಡಿ ಸುಖಕ್ಕೆ ಕರವಾದುದು, **ಬನ್ಧಂ** – ಇದು ಪುನಃ ಪುನಃ ಸಂಸಾರಬಂಧಕ್ಕೆ ಹೇತುವಾದುದು, **ಮೋಕ್ಷಂಚ** - ಇದು ಮೋಕ್ಷಕ್ಕೆ ಹೇತುವಾದುದು, ಬಂಧವು ಎಂತಾದ್ದು, ಮೋಕ್ಷವೆಂತದ್ದು, ಇವುಗಳನ್ನೆಲ್ಲಾ, **ಯಾಬುದ್ಧಿಃ** - ಯಾವ ಬುದ್ಧಿಯು, **ವೇತ್ತಿ** - ವಿವೇಕಿಸಿ ಯಥಾವತ್ತಾಗಿ ತಿಳಿಯುತ್ತದೋ, **ಸಾ** - ಅದು, **ಪಾರ್ಥ** – ಓ ಅರ್ಜುನನೇ. **ಸಾತ್ತ್ವಿಕೀ** - ಸಾತ್ತ್ವಿಕವಾದುದೆನಿಸುತ್ತದೆ ಧರ್ಮಗಳು ಎಂದರೆ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ವಿಧಿನಿಷೇಧರೂಪದಲ್ಲಿರುವ ಕರ್ಮಗಳು; ಇವುಗಳು ಎರಡು ವಿಧವು ಪ್ರವೃತ್ತಿಧರ್ಮ ನಿವೃತ್ತಿಧರ್ಮವೆಂಬದಾಗಿ. ಪ್ರವೃತ್ತಿ ಧರ್ಮವು ಮೋಕ್ಷೇತರಗಳಾದ ಐಕ್ಯ ಐಹಿಕಸ್ವರ್ಗಾದಿ ಸುಖಗಳನ್ನು ಕೊಡತಕ್ಕವು. ಮೋಕ್ಷಸುಖವನ್ನುಂಟುಮಾಡುವವು ನಿವೃತ್ತಿಧರ್ಮಗಳು. ಹಾಗೆಯೇ **"ಪ್ರವೃತ್ತಿಃ ಪುನರಾವೃತ್ತಿ ರ್ನಿವೃತ್ತಿಃಪರಮಾಗತಿಃ"** ಪ್ರವೃತ್ತಿ ಧರ್ಮವು ಪುನಃಪುನಃ ಸಂಸಾರಬಂಧಕ್ಕೆ ಕಾರಣವಾದುವೆಂದೂ ನಿವೃತ್ತಿ ಧರ್ಮವು ಉತ್ಕೃಷ್ಟಗತಿಯಾದ ಮೋಕ್ಷಕ್ಕೆ ಹೇತುವಾದುದೆಂದು (ಭಾರ. ಶಾನ್ತಿ ೨೧೯.೪) ಹೇಳಲ್ಪಟ್ಟಿರುತ್ತದೆ. ಸಾತ್ತ್ವಿಕ ಬುದ್ಧಿಯು ಇದನ್ನು ಚೆನ್ನಾಗಿ ವಿಮರ್ಶಿಸಿ ಯಥಾರ್ಥವಾಗಿ ತಿಳಿಯತಕ್ಕದ್ದೆಂಬ ಭಾವವು. ಯಜ್ಞದಾನ ತಪಸ್ಸೇ ಮೊದಲಾದವುಗಳನ್ನು ಫಲಾಪೇಕ್ಷೆಯಿಂದ ಮಾಡಿದರೆ ಪ್ರವೃತ್ತಿಧರ್ಮಗಳಾಗುತ್ತವೆ. ಅವುಗಳನ್ನೇ ಕರ್ತೃತ್ವ ಮಮತಾಫಲತ್ಯಾಗಗಳ ಪೂರ್ವಕವಾಗಿ ಪರಮಪುರುಷಾರಾಧನಾ ರೂಪದಲ್ಲಿ ಅನುಷ್ಠಿಸಿದರೆ, ಅವುಗಳೇ ನಿವೃತ್ತಿಧರ್ಮಗಳಾಗಿ ಮೋಕ್ಷಕ್ಕೆ ಸಾಧಕಗಳಾಗುವುವು. ಗೀತೆಯಲ್ಲಿ ಹೇಳಿರುವ ಕರ್ಮಯೋಗಜ್ಞಾನಯೋಗ ಭಕ್ತಿಯೋಗಗಳೆಲ್ಲಾ ನಿವೃತ್ತಿ ಧರ್ಮಗಳೇ; ಆದುದರಿಂದ ಗೀತೋಪದೇಶವೂ ಮತ್ತುಉಪನಿಷತ್ತುಗಳ ಉಪದೇಶವೂ ಪ್ರವೃತ್ತಿಧರ್ಮದ ಅನುಪಾದೇಯತ್ವವನ್ನೂ ನಿವೃತ್ತಿಧರ್ಮಗಳ ಉಪಾದೇಯತ್ವವನ್ನೂ ಬೋಧಿಸುವಂತಾದ್ದು. ಅರ್ಜುನನಿಗೆ ಯುದ್ಧಮಾಡು ಎಂದು ಹೇಳಿರುವ ಉಪದೇಶವೂ ಸಹ ನಿವೃತ್ತಿರೂಪ ಧರ್ಮವೇ ; ಹೀಗೆ ವಿವೇಕಿಸಿ ತಿಳಿಯುವ ಬುದ್ಧಿಯು ಸಾತ್ತ್ವಿಕವಾದುದು. ಇಷ್ಟೇ ಅಲ್ಲದೆ ; ಇವುಗಳ ಕಾಲದೇಶಾವಸ್ಥೆಗಳಿಗೂ ತನ್ನ ವರ್ಣಾಶ್ರಮಾನುಗುಣವಾಗಿಯೂ ಇದನ್ನು

**ಭಾ. ಪ್ರವೃತ್ತಿಃ - ಅಭ್ಯುದಯ ಸಾಧನಭೂತೋ ಧರ್ಮಃ, ನಿವೃತ್ತಿಃ - ಮೋಕ್ಷಸಾಧನ ಭೂತಃ, ತಾ ವುಭೌ ಯಥಾವಸ್ಥಿತೌ ಯಾಬುದ್ಧಿರ್ವೇತ್ತಿ ; ಕಾರ್ಯಾಕಾರ್ಯೇ ಸರ್ವ ವರ್ಣಾನಾಂ ಪ್ರವೃತ್ತಿನಿವೃತ್ತಿ ಧರ್ಮಯೋ ರನ್ಯತರ ನಿಷ್ಠಾನಾಂ ದೇಶಕಾಲಾವಸ್ಥಾ ವಿಶೇಷೇಷು "ಇದಂ ಕಾರ್ಯಂ ಇದಮಕಾರ್ಯಂ" ಇತಿ ಯಾವೇತ್ತಿ ; ಭಯಾಭಯೇ**

---

ಮಾಡಬಹುದೇ ಮಾಡಕೂಡದೇ ಎಂದು ವಿವೇಕಿಸಿ ತಿಳಿಯುವ ಬುದ್ಧಿಯಾಗಿರಬೇಕು. ದೇಶಕ್ಕೆ ನಿದರ್ಶನವಾಗಿ ಪ್ರವೃತ್ತಿ ಧರ್ಮವಾದ ಯಜ್ಞವನ್ನು ಗಂಗಾತೀರದಲ್ಲಿ ಮಾಡುವದು ಕಾರ್ಯವು, ಕಟರಹಳ್ಳಿಯಲ್ಲಿ ಮಾಡುವದು ಅಕಾರ್ಯವೆಂದು ತಿಳಿದಿರಬೇಕು ; ನಿವೃತ್ತಿಧರ್ಮಾನುಷ್ಠಾನಕ್ಕೆ ಪ್ರದೇಶವು, **"ಶುಚೌ ದೇಶೇ"** (ಗೀ. ೬-೧೧) ಎಂದು ಹೇಳಿರುವಹಾಗೆ ಇರತಕ್ಕದ್ದು. ಅಶುಚಿ ಸ್ಥಳದಲ್ಲಿ ಕೂಡದು ಎಂದು ತಿಳಿದಿರಬೇಕು. ಹಾಗೆಯೇ ಪ್ರವೃತ್ತಿ ನಿವೃತ್ತಿ ಧರ್ಮಗಳ ಅನುಷ್ಠಾನಕ್ಕೂ ಕಾಲ ಮತ್ತು ಅವಸ್ಥೆಗಳ ನಿಯಮ ಉಂಟೆಂಬುದನ್ನು ಭಾವಿಸತಕ್ಕದ್ದು. ಹಾಗೆಯೇ ಯಾವ ಧರ್ಮಗಳಿಂದ ಭಗವನ್ನಿಗ್ರಹಾನುಗ್ರಹಗಳುಂಟಾಗುತ್ತದೆಂದೂ ವಿವೇಕಿಸಿ ತಿಳಿಯಬೇಕು ; ಮತ್ತು ಬಂಧದ ಲಕ್ಷಣವೇನು ? ಮೋಕ್ಷ ಲಕ್ಷಣವೇನು ? ಬಂಧದಿಂದ ಬಿಡಿಸಿಕೊಂಡು ಮೋಕ್ಷವನ್ನು ಹೊಂದುವ ಬಗೆ ಯಾವುದು ಎಂದು ವಿವೇಕಿಸಿ ಯಥಾರ್ಥವಾಗಿ ತಿಳಿಯತಕ್ಕದ್ದು. ಹೀಗೆ ಮೇಲೆ ಹೇಳಿದ ಎಲ್ಲವನ್ನೂ ವಿವೇಕಿಸಿ ಯಥಾರ್ಥವಾಗಿ ತಿಳಿಯುವ ಬುದ್ಧಿಯೇ ಸಾತ್ವಿಕ ಬುದ್ಧಿಯು.

ಭಾಷ್ಯಾರ್ಥವು—ಪ್ರವೃತ್ತಿ ಎಂದರೆ **ಅಭ್ಯುದಯಸಾಧನಭೂತೋ ಧರ್ಮಃ** - ಇಲ್ಲಿ ಅಭ್ಯುದಯ ಶಬ್ದದಿಂದ ಮೋಕ್ಷೇತರಗಳಾದ ಐಹಿಕ ಮತ್ತು ಸ್ವರ್ಗಾದಿ ಫಲಗಳು ಹೇಳಲ್ಪಟ್ಟವು. ಅಂತವುಗಳಿಗೆ ಸಾಧನಭೂತವಾದ ಶಾಸ್ತ್ರವಿಹಿತ ಕರ್ಮವು. **ನಿವೃತ್ತಿಃ** ಎಂದರೆ **ಮೋಕ್ಷಸಾಧನ ಭೂತಃ** ಧರ್ಮಃ ಎಂದು ಮುಂದೆ ಇಟ್ಟುಕೊಳ್ಳತಕ್ಕದ್ದು, ಮೋಕ್ಷಕ್ಕೆ ಸಾಧನಭೂತವಾದ ಧರ್ಮವು **ತಾವುಭೌ** - ಇವೆರಡನ್ನೂ. **ಯಥಾವಸ್ಥಿತೌ** - ಹೇಗೆ ಯಥಾವತ್ತಾಗಿವೆಯೋ ಹಾಗೆ, **ಯಾ ಬುದ್ಧಿರ್ವೇತ್ತಿ** - ಯಾವ ಬುದ್ಧಿಯು ತಿಳಿಯುತ್ತದೆಯೋ, ಅದು ಸಾತ್ವಿಕ ಬುದ್ಧಿಯು ಎಂಬ ಭಾವವು ; ಇಲ್ಲಿ **ಯಥಾವಸ್ಥಿತೌ** ಎಂದು ಮೂಲದಲ್ಲಿಲ್ಲದ ಭಾಷ್ಯವು ಹೇಗೆ ? ಎಂದರೆ, **ವೇತ್ತಿ** ಎಂದು ಹೇಳಿರುವದೇ ಯಥಾವತ್ತಾಗಿ ತಿಳಿಯೋಣವು. ಯಥಾವತ್ತಾಗಿ ತಿಳಿಯದಿರೋಣವು ರಾಜಸತಾಮಸ ಬುದ್ಧಿಗಳಿಂದ ಮುಂದೆ ಹೇಳಲ್ಪಡುವದರಿಂದಲೂ, ಹಾಗೆ ಭಾಷ್ಯವು. ಈ ಪ್ರವೃತ್ತಿ ಧರ್ಮಗಳನ್ನೂ ನಿವೃತ್ತಿ ಧರ್ಮಗಳನ್ನೂ ಯಥಾವತ್ತಾಗಿ ತಿಳಿಯೋಣವೆಂದರೇ ನೆಂದರೆ, ಪ್ರವೃತ್ತಿ ಧರ್ಮಗಳು ಅಲ್ಪಾಸ್ಥಿರ ಫಲಪ್ರದಗಳೆಂದೂ, ಅವು ಬಂಧಕಗಳೆಂದೂ, ನಿವೃತ್ತಿ ಧರ್ಮಗಳು ನಿರತಿಶಯ ಫಲಪ್ರದಗಳೆಂದೂ, ಬಂಧ ಮೋಚಕಗಳಾಗಿ ಮೋಕ್ಷಪ್ರದಗಳೆಂದೂ ವಿವೇಕಿಸಿ ತಿಳಿಯೋಣವು ; ಪ್ರವೃತ್ತಿ ಧರ್ಮಗಳನ್ನು ಚತುರ್ಮುಖನು ಉಪದೇಶಿಸಿದನೆಂದೂ, ನಿವೃತ್ತಿ ಧರ್ಮಗಳನ್ನು ಋಷಿಯಾದ ನಾರಾಯಣನು ಉಪದೇಶಿಸಿದನೆಂದೂ ಭಾರತ ಶಾನ್ತಿ ಪರ್ವದಲ್ಲಿ **"ಪ್ರವೃತ್ತಿ ಲಕ್ಷಣಂ ಧರ್ಮಂ ಪ್ರಜಾಪತಿರಥಾಬ್ರವೀತ್ । ನಿವೃತ್ತಿ ಲಕ್ಷಣಂ ಧರ್ಮಂ ಋಷಿರ್ನಾರಾಯಣೋಽಬ್ರವೀತ್"** ಎಂದು (೨೧೯-೩) ಹೇಳಲ್ಪಟ್ಟಿರುತ್ತದೆ ಆ ನಾರಾಯಣ ಋಷಿಯೇ ಶ್ರೀ ಕೃಷ್ಣ ಭಗವಾನರವರು; ಆದುದರಿಂದ ಈ ಗೀತೋಪದೇಶವೂ ನಿವೃತ್ತಿ ಧರ್ಮೋಪದೇಶವು **ಶ್ರೀ ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ** ಎಂದು ಹೇಳಿರುವದರಿಂದ ಈ ಯೋಗಶಾಸ್ತ್ರವೆಲ್ಲಾ ನಿವೃತ್ತಿ ಧರ್ಮೋಪದೇಶವೆಂದು ಭಾವಿಸತಕ್ಕದ್ದು. ರಾಜನೀತಿಶಾಸ್ತ್ರವಲ್ಲವೋ? ಎಂದರೆ ಇತರರ ರಾಜ್ಯಾಪಹಾರಕರು ಆಧರ್ಮಿಗಳೂ, ವಧ್ಯರೂ ಎಂದು ಹೇಳಿ, ಕ್ಷತ್ರಿಯನ ಇತಿಕರ್ತವ್ಯತೆಯು, ಅಂತವನನ್ನು ನಿರ್ಮೂಲ ಮಾಡಿ, ದೇಶಕ್ಕೆ ಕ್ಷೇಮವನ್ನೂ ಶಾನ್ತಿಯನ್ನೂ

**ಶಾಸ್ತ್ರಾತಿವೃತ್ತಿರ್ಭಯಸ್ಥಾನಂ, ತದನುವೃತ್ತಿಃ ಅಭಯಸ್ಥಾನಂ, ಬನ್ಧಂ ಮೋಕ್ಷಂ ಚ - ಸಂಸಾರ ಯಾಥಾತ್ಮ್ಯಂ ತನ್ನಿಗಮ ಯಾಥಾತ್ಮ್ಯಂ ಚ ಯಾ ವೇತ್ತಿ, ಸಾ ಸಾತ್ತ್ವಿಕೀ ಬುದ್ಧಿಃ ||೩೦||**

---

ಉಂಟುಮಾಡತಕ್ಕದ್ದೆಂಬುದು ಬೋಧಿತವು. ಜರ್ಮನಿ, ಇಟಲಿ, ಜಪಾನುಗಳ ಗತಿ ಏನಾಯಿ ತೆಂಬುದರಿಂದ ಸ್ವಾಮಿ ಸಙ್ಕಲ್ಪದ ಮಹಿಮೆಯನ್ನು ತಿಳಿಯಬಹುದು. ಕರ್ಮಯೋಗ ಜ್ಞಾನಯೋಗ ಭಕ್ತಿಯೋಗರೂಪೋಪಾಯಾನುಷ್ಠಾನಗಳೆಲ್ಲಾ ನಿವೃತ್ತಿರೂಪಧರ್ಮಾನುಷ್ಠಾನಗಳೇ. **ಕಾರ್ಯಾಕಾರ್ಯೇ** ಎಂದರೆ ಸರ್ವವರ್ಣಾನಾಂ ಪ್ರವೃತ್ತಿನಿವೃತ್ತಿ **ಧರ್ಮಯೋಃ** ರನ್ತರನಿಷ್ಠಾನಾಂ **ದೇಶಕಾಲಾವಸ್ಥಾವಿಶೇಷೇಷು ಇದಂಕಾರ್ಯಂ ಇದನುಕಾರ್ಯಂ** ಇತಿ **ಯೋವೇತ್ತಿ** – ಸಮಸ್ತ ವರ್ಣದವರೂ ಪ್ರವೃತ್ತಿನಿವೃತ್ತಿಧರ್ಮಗಳಲ್ಲೊಂದನ್ನು ಅನುಷ್ಠಿಸುವಂತವರು ದೇಶ, ಕಾಲ, ಅವಸ್ಥಾ ವಿಶೇಷಗಳಲ್ಲಿ ಇದು ಯುಕ್ತವಾದ ಕಾರ್ಯವು, ಇದು ಅಯುಕ್ತಕಾರ್ಯವೆಂದು, ಯಥಾವತ್ತಾಗಿ ಯಾವ ಬುದ್ಧಿಯು ತಿಳಿಯುತ್ತದೋ, ಅದು ಸಾತ್ವಿಕ ಬುದ್ಧಿಯು ಎಂಬ ಭಾವವು. ಇದರ ತಾತ್ಪರ್ಯವೇನೆಂದರೆ ಪ್ರತಿಯೊಂದು ವರ್ಣದವರಿಗೂ ಅವರವರಿಗೆ ಯೋಗ್ಯಗಳಾದ ಪ್ರವೃತ್ತಿನಿವೃತ್ತಿ ಧರ್ಮಗಳುಂಟು ; ಅವುಗಳಲ್ಲಿ ಯಾವುದಾದರೂ ಒಂದನ್ನು ಅವಲಂಬಿಸಿರುವಾಗ ತಾನು ದೇಶಕಾಲಾವಸ್ಥಾಗಳಿಗೆ ಅನು ಗುಣವಾಗಿ ಏನನ್ನು ಮಾಡುವದು ಉಚಿತವು ಉಚಿತವಲ್ಲವೆಂದು ವಿಮರ್ಶಿಸಿ ತಿಳಿಯುವ ಬುದ್ಧಿಯೇ ಸಾತ್ವಿಕ ಬುದ್ಧಿ ಎಂಬ ಭಾವವು. ಪ್ರವೃತ್ತಿ ನಿವೃತ್ತಿ ಧರ್ಮಗಳು ಬ್ರಾಹ್ಮಣಾದಿ ಗಳಿಗೆ ಬೇರೆ, ಶೂದ್ರಾದಿಗಳಿಗೇ ಬೇರೆ. ಬ್ರಾಹ್ಮಣಾದಿಗಳು ಉಪಾಸನರೂಪ ನಿವೃತ್ತಿಧರ್ಮವನ್ನು ಅವಲಂಬಿಸಬಹುದು ; ಅದು ಶೂದ್ರಾದಿಗಳಿಗೆ ಅಕಾರ್ಯವು, ಅವರುಗಳಿಗೆ ವಿಹಿತವಾದ ನಿವೃತ್ತಿ ಧರ್ಮವು ಭಾಗವತಃ ಸಂಶ್ರಯಣವು. ಯಾವ ದೇಶ ಕಾಲಾವಸ್ಥೆಗಳಲ್ಲಿ ಇವುಗಳನ್ನು ಅನುಷ್ಠಿಸ ಬಹುದೆಂದು ವಿವೇಕಿಸಿ ತಿಳಿಯುವ ಬುದ್ಧಿಯು ಸಾತ್ವಿಕ ಬುದ್ಧಿ ಎಂಬ ತಾತ್ಪರ್ಯವು. ಅಥವಾ ಕಾರ್ಯಾಕಾರ್ಯಶಬ್ದಗಳಿಂದ ತನಗೆ ಆ ಪ್ರವೃತ್ತಿ ನಿವೃತ್ತಿ ಧರ್ಮಗಳು ಶಕ್ಯವೇ ವಿಹಿತವೇ ಅಥವಾ ಅಶಕ್ಯವೇ ವಿಹಿತವಲ್ಲವೇ ಎಂಬ ಜ್ಞಾನವು ಬೋಧಿಸಲ್ಪಟ್ಟವೆಂದೂ ಭಾವಿಸಬಹುದು, "**ಶರೀರಂ ಬಲಮಾಯುಶ್ಚ ವಯಃ ಕಾಲಂ ಚ ಕರ್ಮ ಚ । ಸಮೀಕ್ಷ್ಯ ಧರ್ಮವಿದ್ಬುದ್ಧ್ಯಾ ಪ್ರಾಯಶ್ಚಿತ್ತಾನಿ ನಿರ್ದಿಶೇತ್**" ಎಂಬ ಸ್ಮೃತಿವಾಕ್ಯವು ಇಲ್ಲಿ ಅನುಸಂಧೇಯವು. ಮುಂದೆ **ಭಯಾಭಯೇ** ಎಂದರೆ ಏನೆಂಬುದನ್ನು ತಿಳಿಸುತ್ತಾರೆ—**ಶಾಸ್ತ್ರಾತಿವೃತ್ತಿಃ ಭಯಸ್ಥಾನಮ್** - ಶಾಸ್ತ್ರೋಲ್ಲಂಘನ ಮಾಡಿ ನಡೆಯೋಣವು ಪುನಃ ಪುನಃ ಬಂಧಕ್ಕೆ ಹೇತುವೆಂದಾಗಲಿ ಹೀಗೆ ಭಗವನ್ನಿಗ್ರಹಕ್ಕೆ ಕಾರಣವು. ಆದುದರಿಂದ ಇದು ಭಯಾವಹವು. **ತದನುವೃತ್ತಿಃ ಅಭಯಸ್ಥಾನಃ**—ಶಾಸ್ತ್ರವ ನ್ನನುಸರಿಸಿ ನಡೆಯೋಣವು ಭಗವದನುಗ್ರಹರೂಪವಾದ ಅಭಯಕ್ಕೆ ಕಾರಣವು, ಎಂದು ತಿಳಿಯು ವದೂ ಸಾತ್ವಕ ಬುದ್ಧಿಯು. ಹಾಗೆಯೇ **ಬನ್ಧಂ ಮೋಕ್ಷಂಚ** ಎಂದರೆ ಸಂಸಾರ**ಯಾಥಾತ್ಮ್ಯಂ** ಸಂಸಾರರೂಪ ಬಂಧದ ನಿಜವಾದ ಜ್ಞಾನವೂ ಮತ್ತು **ತನ್ನಿಗಮಯಾಥಾತ್ಮ್ಯಂಚ** – ಆ ಸಂಸಾರ ಬಂಧವು ಹೇಗೆ ಬಿಟ್ಟು ಹೋಗುತ್ತದೆಂಬುದರ ಯಥಾರ್ಥಜ್ಞಾನವೂ ಸಹ, **ಯಾವೇತ್ತಿ** - ಯಾವ ಬುದ್ಧಿಯು ಗ್ರಹಿಸುತ್ತದೋ, **ಸಾಸಾತ್ವಿಕೀ ಬುದ್ಧಿಃ** ಅಂತಹ ಬುದ್ಧಿಯು ಸಾತ್ವಿಕ ವೆಂದು ಹೇಳಲ್ಪಡುತ್ತದೆ. ಶಾಸ್ತ್ರವು ಭಗವಂತನ ಆಜ್ಞಾರೂಪವು. ಅದನ್ನು ಅತಿಕ್ರಮಿಸಿ ನಡೆದವನನ್ನು ಭಗವಂತನು ತನಗೆ ದ್ರೋಹಿ ಎಂದು ಭಾವಿಸುವನು. ಆದುದರಿಂದ ಶಾಸ್ತ್ರಾನು ಸಾರ ನಡೆಯೋಣದರಿಂದ ಅಭಯವು—ಭಯವಿಲ್ಲವು. ತದ್ವಿರೋಧವಾಗಿ ಅಕೃತ್ಯಕರಣ ಕೃತ್ಯಾಕರಣಗಳಿಂದ ಭಯವು. ಹಿಂದೆ "**ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯ ವ್ಯವಸ್ಥಿತೌ**" (೧೬-೨೪) ಎಂಬ ಉಪದೇಶವಿರುತ್ತದೆ. ಅದು ಇಲ್ಲಿ ಸ್ಮಾರಿತವು. ಹಿಂದೆ ಹೇಳ

**ಮೂ. ಯಯಾ ಧರ್ಮ ಮಧರ್ಮಂಚ ಕಾರ್ಯಂಚಾ ಕಾರ್ಯಮೇವ ಚ।**
**ಅಯಥಾವತ್ಪ್ರಜಾನಾತಿ ಬುದ್ಧಿ ಸ್ಸಾ ಪಾರ್ಥ ರಾಜಸೀ ॥೩೧॥**

---

ಲ್ಪಟ್ಟ ಕಾರ್ಯಾಕಾರ್ಯಗಳ ಜ್ಞಾನವು ಯಾವಾಗ ಉಂಟಾಯಿತೋ,ಆಗ ಭಯಾಭಯಗಳ ಜ್ಞಾನವೂ, ಬಂಧಮೋಕ್ಷಗಳ ನೈಜಸ್ಥಿತಿಯ ಜ್ಞಾನವೂ. ಉಂಟಾಗುತ್ತದೆಂಬ ಭಾವವು. ಈ ಸಾತ್ವಿಕ ಬುದ್ಧಿಗೆ ಇವೆಲ್ಲಾ ಜ್ಞಾನವೂ ಸಮುಚ್ಚಯ ರೂಪದಲ್ಲಿ ಅವಶ್ಯಕವು. ಪ್ರವೃತ್ತಿ ನಿವೃತ್ತಿ ಧರ್ಮಗಳ ಜ್ಞಾನ ದಿಂದ ಕಾರ್ಯಾಕಾರ್ಯಗಳ ಜ್ಞಾನವೂ, ಈ ಕಾರ್ಯಾಕಾರ್ಯಗಳ ಜ್ಞಾನದಿಂದ ಭಯಾಭಯಜ್ಞಾನವೂ, ಈ ಭಯಾಭಯಜ್ಞಾನದಿಂದ ಬಂಧಮೋಕ್ಷಗಳ ಜ್ಞಾನವೂ ಉಂಟಾಗುತ್ತದೆಂಬುದು ತಾತ್ಪರ್ಯವು. ಹೀಗೆ ವಿವೇಕಿಸಿ ತಿಳಿಯುವ ಬುದ್ಧಿಯೇ ಸಾತ್ವಿಕ ಬುದ್ಧಿಯು. ಭಯವು ಯಾವುದೆಂದರೆ ಯಾವುದ ರಿಂದ ನಾವು ಭಯಪಡತಕ್ಕದ್ದೋ ಅದು ; ಆದುದರಿಂದ ಶಾಸ್ತ್ರಾತಿವೃತ್ತಿಯು ಎಂದು ವ್ಯಾಖ್ಯಾನ ಮಾಡಲ್ಪಟ್ಟಿತು ; ಸರ್ವೇಶ್ವರನೇ ಇಷ್ಟಾನಿಷ್ಟ ಫಲದಾಯಕನಾದುದರಿಂದ ಆತನ ನಿಗ್ರಹವೇ ಭಯ ಸ್ಥಾನವು. ಅನುಗ್ರಹವೇ ಅಭಯಸ್ಥಾನವು ; ನಿರತಿಶಯವಾದ ಅನುಗ್ರಹವು ಮೋಕ್ಷವೇ ; ಆದುದ ರಿಂದ ಅಭಯ ಶಬ್ದವು ಎಂದಿಗೂ ಭಯವಿಲ್ಲದೇ ಇರುವ ಅಮೃತತ್ವವನ್ನು ಸೂಚಿಸುತ್ತದೆ. ಈ ಶ್ಲೋಕದಲ್ಲಿ **ಬಂಧಂಮೋಕ್ಷಂಚ ಯಾವೇತ್ತಿ** ಎಂದು ಹೇಳಿರುವದರಿಂದ ಬಂಧಮೋಕ್ಷಗಳ ಸದ್ಭಾವವು ಹೇಳಲ್ಪಟ್ಟಂತೆ ತೋರಿಬರುವದರಿಂದ, ಬಂಧಕ್ಕೆ ಮಿಥ್ಯಾತ್ವವಾದವು ಕೂಡುವ ದಿಲ್ಲವು. ಹಾಗೆಯೇ ಮೋಕ್ಷ ಶಬ್ದವು ಬಂಧಕ್ಕೆ ಪ್ರತಿದ್ವಂದ್ವಿಯಾಗಿ ಉಪಯೋಗಿಸಿರುವದರಿಂದ ಶ್ರೀ ಯತಿ ವರ್ಯರು **ತದ್ವಿಗಮ** ವೆಂದರೆ **ಬಂಧವಿಗಮ** ವೆಂದೇ ಭಾಷ್ಯವನ್ನು ಬರೆದಿರುತ್ತಾರೆ. ಆದುದರಿಂದ ಮೋಕ್ಷವೆಂದರೆ ಜೀವಾತ್ಮನಿಗೆ ಪ್ರಾಕೃತ ಶರೀರ ವಿಗಮವೂ ಅಪ್ರಾಕೃತ ಶರೀರ ಪ್ರಾಪ್ತಿಯೂ, ಮತ್ತು ಜ್ಞಾನ ತಿರೋಹಿತತ್ವ ವಿಗಮವೂ ಗುಣಾಷ್ಟಕ ಪ್ರಾಪ್ತಿಯೂ ಎಂಬ ಭಾವ ಗಳೂ ತೋರಿಬರುತ್ತವೆ. ಇದೇ ಪರಮಾತ್ಮ ಸಾಯುಜ್ಯವೂ, ಪರಿಪೂರ್ಣ ಪರಬ್ರಹ್ಮಾನುಭವ ಸ್ಥಿತಿಯು ; ಇದು ಹಿಂದೆಯೇ **"ಮಮಸಾಧರ್ಮ್ಯಮಾಗತಾಃ"** (ಗೀ. ೧೪-೨) ಎಂಬಲ್ಲಿಯೇ ಉಪದಿಷ್ಟವು. ಆದುದರಿಂದ ಇತರರು ಹೇಳುವ ಸ್ವರೂಪೈಕ್ಯ, ಪಾಷಾಣ ಸಮಾನಾವಸ್ಥೆ, ನಿತ್ಯ ವಿಭೂತಿಯ ಅಭಾವ ಇವೇ ಮೊದಲಾದ ನಾನಾವಿಧಗಳಾದ ಅಭಿಪ್ರಾಯಗಳೆಲ್ಲವೂ ಸಮಂಜಸವಲ್ಲವು. **ಯೋವೇತ್ತಿ** ಎಂದು ಹೇಳಿರುವದರಿಂದ ಮನುಷ್ಯವರ್ಗಕ್ಕೆ ಇವುಗಳನ್ನೆಲ್ಲಾ ವಿಮರ್ಶಿಸಿ ತಿಳಿಯುವ ವಿವೇಕಜ್ಞಾನವು ಸ್ವಾಮಿದತ್ತವಾಗಿ ಇವನಿಗೆ ಉಂಟೆಂಬುದೂ ಸೂಚಿತವು. ಇಂತಹ ಕೃಪಾನಿಧಿಯ ಅನುಗ್ರಹವು ಈ ಮನುಷ್ಯನಿಗೆ ಇಲ್ಲದಿದ್ದರೆ ಇವನು ತಿಳಿಯುವದೆಂಬುದು ಅಸಾಧ್ಯವು. ಇಂತಹ ತಿಳಿಯುವ ಶಕ್ತಿಯನ್ನೂ ಕೊಟ್ಟು ಸಾತ್ವಿಕ ಬುದ್ಧಿ ವೃದ್ಧಿಯಿಂದ ತಿಳಿ ಯದೇ ಹೋದರೆ ಅಂತವನೇ ದುರದೃಷ್ಟನೆಂಬುದೂ ಸೂಚಿತವು.

**ಮೂಲಕ್ಕೆ ಅರ್ಥವು**—ಹೀಗೆ ಸಾತ್ವಿಕ ಬುದ್ಧಿಯ ಲಕ್ಷಣವನ್ನು ತಿಳಿಸಿ, ಈ ಶ್ಲೋಕದಲ್ಲಿ ರಾಜಸ ಬುದ್ಧಿಯ ಲಕ್ಷಣವನ್ನು ಹೇಳಿ, ಸಾತ್ವಿಕ ಬುದ್ಧಿಗೂ ಇದಕ್ಕೂ ಇರುವ ವ್ಯತ್ಯಾಸವನ್ನು ವ್ಯಕ್ತಪಡಿಸುತ್ತಾರೆ.—**ಹೇ ಪಾರ್ಥ** - ಓ ಅರ್ಜುನನೇ ; **ಯಯಾ** – ಯಾವ ಬುದ್ಧಿಯಿಂದ, **ಧರ್ಮಂ** – ಶಾಸ್ತ್ರವಿಹಿತವಾದ ಕರ್ಮವನ್ನೂ ಅದು ಪ್ರವೃತ್ತಿ ಧರ್ಮವೇ ಆಗಲಿ ನಿವೃತ್ತಿ ಧರ್ಮವೇ ಆಗಲಿ **ಅಧರ್ಮಂಚ** - ಶಾಸ್ತ್ರದಲ್ಲಿ ನಿಷಿದ್ಧವಾಗಿ ಹೇಳಲ್ಪಟ್ಟಿದುದನ್ನೂ, **ಕಾರ್ಯಂಚ** - ಅವುಗಳಲ್ಲಿ ಅವಶ್ಯಕ ವಾಗಿ ಮಾಡತಕ್ಕದ್ದನ್ನೂ, ಹಾಗೆಯೇ **ಅಕಾರ್ಯಂಚ**– ಮಾಡಬಾರದುದನ್ನೂ, **ಅಯಥಾವತ್** - ಹೇಗಿದೆಯೋ ಹಾಗಲ್ಲದೆ ವ್ಯತ್ಯಸ್ತವಾಗಿ **ಪ್ರಜಾನಾತಿ** - ವಿಶೇಷಿಸಿ ತಿಳಿಯುತ್ತಾನೋ. ಶಾಸ್ತ್ರದ ವಿಧಿ ನಿಷೇಧ ವಾಕ್ಯಗಳನ್ನು ಸರಿಯಾಗಿ ಗ್ರಹಿಸದೇ ಇರೋಣವು ಹೇಳಲ್ಪಟ್ಟಿತು. **ಸಾ ಬುದ್ಧಿಃ**- ಅಂತಹ ಬುದ್ಧಿಯು, **ರಾಜಸೀ** - ರಾಜಸಬುದ್ಧಿ ಎಂದು ಹೇಳಲ್ಪಡುತ್ತದೆ. ಧರ್ಮಾಧರ್ಮಗಳು

**ಭಾ. ಯಯಾ ಪೂರ್ವೋಕ್ತಂ ದ್ವಿವಿಧಂ ಧರ್ಮಂ ತದ್ವಿಪರೀತಂಚ ತನ್ನಿಷ್ಠಾನಾಂ ದೇಶ ಕಾಲಾವಸ್ಥಾದಿಷು ಕಾರ್ಯಂಚಾಕಾರ್ಯಂಚ ಯಥಾವನ್ನಜಾನಾತಿ ಸಾ ರಾಜಸೀ ಬುದ್ಧಿಃ ॥ ೩೧ ॥**

**ಮೂ. ಅಧರ್ಮಂ ಧರ್ಮ ಮಿತಿ ಯಾ ಮನ್ಯತೇ ತಮಸಾ ವೃತಾ ।**
**ಸರ್ವಾರ್ಥಾ ವಿಪರೀತಾಂಶ್ಚ ಬುದ್ಧಿಸ್ಸಾ ಪಾರ್ಥ ತಾಮಸೀ ॥ ೩೨ ॥**

---

ಶಾಸ್ತ್ರದಲ್ಲಿ ಹೇಳಲ್ಪಟ್ಟಿವೆ. ಇಲ್ಲಿ ಧರ್ಮ ಶಬ್ದದಿಂದ ಪ್ರವೃತ್ತಿನಿವೃತ್ತಿರೂಪಗಳಾದ ಎರಡು ವಿಧ ಧರ್ಮಗಳೂ ಹೇಳಲ್ಪಟ್ಟವು. ನಿಷೇಧಿಸಿ ಹೇಳಲ್ಪಟ್ಟವು ಅಧರ್ಮಗಳು; ಪ್ರವೃತ್ತಿ ನಿವೃತ್ತಿ ಧರ್ಮಗಳು ವಿಧಿರೂಪದಲ್ಲೂ, ಅಧರ್ಮಗಳು ನಿಷೇಧರೂಪದಲ್ಲೂ, ಹೀಗೆ ವಿಧಿ ನಿಷೇಧರೂಪದಲ್ಲಿ ಹೇಳಲ್ಪಟ್ಟಿವೆ. ಹೇಗೆ ಇವುಗಳು ಹೇಳಲ್ಪಟ್ಟಿವೆಯೋ ಹಾಗೆ ತಿಳಿಯದೆ, ವ್ಯತ್ಯಸ್ತವಾಗಿ ತಿಳಿಯುವ ಬುದ್ಧಿಯು ರಾಜಸ ಬುದ್ಧಿ ಎಂದು ಹೇಳಲ್ಪಟ್ಟಿತು. ದುಷ್ಟರಾಗಿ ಸಾಧುಜನ ಕಂಟಕರಾಗಿರುವವರ ಹನನವು ಕ್ಷತ್ರಿಯನಿಗೆ ವಿಹಿತ ಧರ್ಮವೆಂದು ವಿವೇಕಿಸಿ ತಿಳಿಯದೇ, ವ್ಯತ್ಯಸ್ತವಾಗಿ ಅಧರವೆಂದು ಭಾವಿಸಿದ ನಿನ್ನ ಬುದ್ಧಿಯು, ಓ ಅರ್ಜುನನೇ ರಾಜಸ ಬುದ್ಧಿ ಎಂದು ಹೇಳಿದಂತಾಯಿತು. ಪ್ರಹ್ಲಾದನು ತನ್ನ ಮಗ ವಿರೋಚನ ಮತ್ತು ಬ್ರಾಹ್ಮಣ ವಿವಾದದಲ್ಲಿ ತನ್ನ ಮಗನೆಂದು ಪಕ್ಷಪಾತವಿಲ್ಲದೆ ಧರ್ಮಯುಕ್ತವಾದ ತೀರ್ಪನ್ನು ಕೊಟ್ಟಿದುದರಿಂದ, ಆತನ ಬುದ್ಧಿಯು ಸಾತ್ವಿಕವು. ಆದರೆ ಭೀಷ್ಮರು ದ್ರೌಪದಿ ಪ್ರಶ್ನೆಗೆ ಸರಿಯಾದ ಧರ್ಮಯುಕ್ತವಾದ ಉತ್ತರವನ್ನು ಹೇಳದೇ ಇದ್ದುದ್ದರಿಂದ ರಾಜಸೀ. ರಾಕ್ಷಸನು ಬಂದು ಅಗ್ನಿಯನ್ನು ಕುರಿತು ತಾನು ವರಿಸಿದ್ದ ಋಷಿಪುತ್ರಿಯನ್ನು ಋಷಿಯು ಯಾರಿಗೆ ಕೊಟ್ಟು ವಿವಾಹ ಮಾಡಿದನೆಂದು ಕೇಳಿದರೆ ಅನರ್ಥವುಂಟಾಗುತ್ತದೆಂಬ ವಿವೇಕವಿಲ್ಲದೆ ಯಥಾರ್ಥವನ್ನು ನುಡಿದುದು ರಾಜಸೀ ಬುದ್ಧಿಯು. ಇಂದ್ರನು ಋಷಿ ಕೊಟ್ಟ ಹಾರವನ್ನು ಆನೆಯ ಕೊರಳಲ್ಲಿ ಹಾಕಿದುದರಿಂದ ಅದು ಹಾರವನ್ನು ಸೊಂಡಲಿನಿಂದ ತೆಗೆದು ತುಳಿದುದು, ಭಾಗವತರು ಕೊಟ್ಟಿದುದನ್ನು ಶಿರಸಾವಹಿಸತಕ್ಕದ್ದೆಂಬ ಜ್ಞಾನಶೂನ್ಯತೆಯಿಂದ ಇಂದ್ರನ ಬುದ್ಧಿಯು ರಾಜಸೀ. ಹಾಗೆಯೇ ಸತ್ತ ಸರ್ಪವನ್ನು ಋಷಿಯು ಕೊರಳಿಗೆ ಪರೀಕ್ಷಿತ ರಾಜನು ಹಾಕಿದುದೂ ರಾಜಸಬುದ್ಧಿಯನ್ನೇ ಪ್ರಕಟಿಸುತ್ತದೆ. ॥ ೩೧ ॥

**ಭಾಷ್ಯಾರ್ಥವು—ಯಯಾ** – ಯಾವ ಬುದ್ಧಿಯಿಂದ, **ಪೂರ್ವೋಕ್ತಂ** - ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ, **ದ್ವಿವಿಧಂ ಧರ್ಮಂ** - ಪ್ರವೃತ್ತಿ ನಿವೃತ್ತಿ ರೂಪದಲ್ಲಿ ಎರಡು ವಿಧವಾದ ಧರ್ಮವನ್ನು **ತದ್ವಿಪರೀತಂಚ** - ಇದು ಮೂಲದ **ಅಧರ್ಮಂಚ** ಎಂಬುದರ ಅರ್ಥವು, ಧರ್ಮಕ್ಕೆ ವ್ಯತ್ಯಸ್ತವಾದುದನ್ನೂ ದೇಶಕಾಲಾವಸ್ಥಾದಿಗಳಲ್ಲಿ **ಕಾರ್ಯಂಚ** - ಅವಶ್ಯಕವಾಗಿ ಮಾಡತಕ್ಕ ಕಾರ್ಯವನ್ನೂ, **ಅಕಾರ್ಯಂಚ** - ಮಾಡಬಾರದುದನ್ನೂ, **ಯಥಾವತ್** - ಹೇಗಿದೆಯೋ ಹಾಗೆ, **ನಜಾನಾತಿ** - ತಿಳಿಯುವದಿಲ್ಲವೋ, **ಸಾ ರಾಜಸೀಬುದ್ಧಿಃ**-ಅದು ರಾಜಸಬುದ್ಧಿಯು, ಸಾತ್ವಿಕ ಬುದ್ಧಿಯು ಈ ಪ್ರವೃತ್ತಿ ನಿವೃತ್ತಿರೂಪ ಧರ್ಮಗಳಲ್ಲಿ ಕಾರ್ಯಾಕಾರ್ಯಗಳನ್ನೂ ಈ ಧರ್ಮಗಳ ಲಕ್ಷಣವನ್ನೂ, ಅಧರ್ಮಗಳ ಲಕ್ಷಣಗಳನ್ನೂ ವಿಮರ್ಶಿಸಿ, ಯಥಾವತ್ತಾಗಿ ತಿಳಿಯುತ್ತದೆ. ಹಾಗಲ್ಲದೆ ಭಿನ್ನವಾಗಿ ತಿಳಿಯುವದು ರಾಜಸಬುದ್ಧಿ ಎಂದು ಹೇಳಲ್ಪಟ್ಟಿತು.

**ಮೂಲಕ್ಕೆ ಅರ್ಥವು—**ಈ ಶ್ಲೋಕದಲ್ಲಿ ತಾಮಸಬುದ್ಧಿಯ ಲಕ್ಷಣವನ್ನು ಬೋಧಿಸುತ್ತಾರೆ.—ಹಾಗೆ ಬೋಧಿಸುವದರಲ್ಲಿ ತಾಮಸಬುದ್ಧಿಗೂ ರಾಜಸಬುದ್ಧಿಗೂ ಇರುವ ವ್ಯತ್ಯಾಸವನ್ನು ವ್ಯಕ್ತಪಡಿಸುತ್ತಾರೆ. ಎರಡೂ ಭ್ರಮಜ್ಞಾನಗಳೇ; ಯಥಾವಸ್ಥಿತವಾಗಿರುವ ಜ್ಞಾನಗಳಲ್ಲವು. ಆದರೂ ಅವುಗಳಿಗಿರುವ ವ್ಯತ್ಯಾಸವನ್ನೂ ತಿಳಿಸುತ್ತಾರೆ.—**ಹೇ ಪಾರ್ಥ** - ಓ ಅರ್ಜುನನೇ **ಯಾ ಬುದ್ಧಿಃ** - ಯಾವ ಬುದ್ಧಿಯಾದರೆ, **ತಮಸಾವೃತಾ** - ತಮೋಗುಣದಿಂದ ಆವರಿಸಲ್ಪಟ್ಟದು

ದಾಗಿ ಎಂದರೆ ತಮೋಗುಣಾಧಿಕ್ಯವುಳ್ಳದ್ದಾಗಿ, **ಅಧರ್ಮಂ ಧರ್ಮಂ** - ಅಧರ್ಮವನ್ನು ಧರ್ಮವನ್ನಾಗಿಯೂ, **ಧರ್ಮಂ ಅಧರ್ಮಂ ವಾ** - ಧರ್ಮವನ್ನು ಅಧರ್ಮವನ್ನಾಗಿಯೂ, ಹೀಗೆ **ಸರ್ವಾರ್ಥಾನ್ ವಿಪರೀತಾಂಶ್ಚ**–ಸಮಸ್ತ ವಸ್ತುಗಳನ್ನೂ ಅವಕ್ಕೆ ವಿಪರೀತವಾದವುಗಳಾಗಿಯೂ, **ಮನ್ಯತೇ** - ತಿಳಿಯುತ್ತದೋ, ಹೇಗೆಂದರೆ ಸತ್ಯವಾಗಿರುವದನ್ನು ಮಿಥ್ಯೆ ಎಂದೂ, ಸತ್ಯವಲ್ಲದುದನ್ನು ಸತ್ಯವೆಂದೂ, ಪರತತ್ವವನ್ನು ಅಪರತತ್ವವೆಂದೂ, ಅಪರತತ್ವವನ್ನು ತತ್ವವೆಂದೂ ಭಾವಿಸುವದೆಂಬ ಭಾವವು. ಇಲ್ಲಿ **ಅಧರ್ಮಂ** ಮತ್ತು **ಧರ್ಮಂ** ಎಂಬ ಎರಡು ಪದಗಳೂ ದ್ವಿತೀಯಾಂತದಲ್ಲಿರುವದರಿಂದ **ಅಧರ್ಮಂ ಧರ್ಮಂ** ಮನ್ಯತೇ ಎಂದೂ, **ಧರ್ಮಂ ಅಧರ್ಮಂ ಮನ್ಯತೇ** ಎಂದೂ ಅರ್ಥ ಮಾಡಬಹುದು.

ತಿಳುವಳಿಕೆಯಲ್ಲಿ ದೋಷವು ಮೂರು ವಿಧವಾಗಿರುತ್ತದೆ :—(೧) **ಅಜ್ಞಾನವು** - ಶಾಸ್ತ್ರಜ್ಞಾನವೇ ಇಲ್ಲದಿರುವಿಕೆಯು (೨) **ಅನ್ಯಥಾಜ್ಞಾನವು** ಇದು ಒಂದು ಧರ್ಮಿಯ ಧರ್ಮವನ್ನು ವ್ಯಕ್ತಸ್ತವಾಗಿ ತಿಳಿಯುತ್ತದೆ. ಕಾಮಾಲೆಯಿಂದ ಬೆಳ್ಳಗಿರುವ ಶಂಖವನ್ನು ಹಳದೀಬಣ್ಣದ್ದೆಂದು ತಿಳಿಯೋಣವು. ಅಸ್ವತಂತ್ರನಾದ ಜೀವನನ್ನು ಸ್ವತಂತ್ರನೆಂದು ಭಾವಿಸೋಣವು. ಸತ್ಯವಾದ ಜಗತ್ತನ್ನು ಮಿಥ್ಯೆ ಎಂದು ಭಾವಿಸುವದು. (೩) **ವಿಪರೀತಜ್ಞಾನವು**— ಒಂದು ವಸ್ತುವನ್ನೇ ಬೇರೊಂದು ವಸ್ತುವಾಗಿ ಭ್ರಮಿಸೋಣವು. ರಜ್ಜು ಸರ್ಪಭ್ರಮವು, ಶುಕ್ತಿ ರಜತಭ್ರಮವು ದೇಹಾತ್ಮಭ್ರಮವು, ಜೀವಾತ್ಮನೇ ಪರಮಾತ್ಮನೆಂಬ ಭ್ರಮವು. ಇಲ್ಲಿ ಒಂದನೆಯದಾದ ಅಜ್ಞಾನವು ಈ ಪ್ರಕರಣದಲ್ಲಿ ಹೇಳಲಿಲ್ಲವು. ವ್ಯತ್ಯಸ್ತವಾಗಿ ತಿಳಿಯುವ ಜ್ಞಾನವೇ ಹೇಳಲ್ಪಟ್ಟು, ಅನ್ಯಥಾ ಜ್ಞಾನವು ಅಯಥಾರ್ಥಜ್ಞಾನವಾದುದರಿಂದ, ರಾಜಸಬುದ್ಧಿ ಎಂದು ಹಿಂದಿನಶ್ಲೋಕದಲ್ಲಿ ಹೇಳಲ್ಪಟ್ಟಿತು. ವಿಪರೀತಜ್ಞಾನವು ಒಂದನ್ನು ಇನ್ನೊಂದಾಗಿ ಭ್ರಮಿಸುವ ಜ್ಞಾನವಾದುದರಿಂದ ತಾಮಸೀ ಬುದ್ಧಿ ಎಂದು ಈಶ್ಲೋಕದಲ್ಲಿಹೇಳಲ್ಪಟ್ಟಿತು. ಇದರಲ್ಲೇ ಸ್ವಭಾವವೈಪರೀತ್ಯವೂಸೇರಿತು.

ಚನ್ನಾಗಿ ವಿಮರ್ಶಿಸಿ ತಿಳಿಯಬೇಕೆಂಬ ಕುತೂಹಲವುಳ್ಳವರಿಗೆ ಇಲ್ಲಿ ಒಂದು ಪೂರ್ವಪಕ್ಷಕ್ಕೆ ಅವಕಾಶವಿರುವಹಾಗೆ ತೋರುತ್ತದೆ. ಹಿಂದೆ ದೈವಾಸುರವಿಭಾಗವನ್ನು ಉಪದೇಶಿಸಿದ ಕಾಲದಲ್ಲಿ ಅರ್ಜುನನು ದೈವೀಸಂಪತ್ತಿಗೆ ಸೇರಿದವನೇ ಅಥವಾ ಆಸುರಸ್ವಭಾವನೇ ಎಂಬ ಸಂದೇಹಕ್ಕೆ ಒಳಪಟ್ಟು ಮನಃಕ್ಲೇಶವನ್ನು ಹೊಂದಿರುವದನ್ನು ಕರುಣಾಮುಹೋದಧಿಯು ಸರ್ವಜ್ಞನಾದುದರಿಂದ ತಿಳಿದು **"ಮಾಶುಚ ಸ್ಸಂಪದಂ ದೈವೀಂ ಅಭಿಜಾತೋಸಿ ಪಾಂಡವ"** "ಓ ಪಾಂಡುಪುತ್ರನೇ ನೀನು ಶೋಕಿಸಲು ಕಾರಣವಿಲ್ಲವು, ನೀನು ದೈವೀ ಸಂಪತ್ತನ್ನು ಹೊಂದಿ ಜನಿಸಿರುವಿ" ಎಂದು ಸಮಾಧಾನವನ್ನು ಮಾಡಿದರು. ಆದರೆ ಅರ್ಜುನನು ತನಗೆ ಧರ್ಮವಾದ ಈ ಯುದ್ಧವನ್ನು ಅಧರ್ಮವೆಂದು ಭಾವಿಸಿ ಯುದ್ಧಮಾಡದಿರುವದರಿಂದ ಈ ಶ್ಲೋಕದ ಪ್ರಕಾರ ತಾಮಸೀ ಬುದ್ಧಿಯುಳ್ಳವನೆಂದಾಯಿತು. ಇದು ಪರಸ್ಪರವಿರುದ್ಧವಾಗಲಿಲ್ಲವೇ? ಎಂದರೆ, ಎಷ್ಟು ಸತ್ವಗುಣಾಧಿಕ್ಯವಿದ್ದು ದೈವಸ್ವಭಾವವುಳ್ಳವನಾಗಿದ್ದರೂ, ರಜೋಗುಣ ತಮೋಗುಣಗಳ ಅಂಶವೂ ಸ್ವಲ್ಪಮಟ್ಟಿಗೆ ಇರುವದರಿಂದ ಹೀಗೆ ತಾಮಸ ಬುದ್ಧಿಯ ಪ್ರೇರಣೆಯು ಸಮಯಗಳಲ್ಲಿ ಉಂಟಾಗಬಹುದು. ಹಾಗೆ ಉತ್ಪನ್ನವಾದ ಬುದ್ಧಿಯನ್ನು ವಿವೇಕದಿಂದ ನಿಗ್ರಹಿಸಿ, ಪುನಃ ಸಾತ್ವಿಕ ಬುದ್ಧಿಗೇನೇ ಅವಕಾಶವನ್ನು ಕೊಡತಕ್ಕದ್ದು ಪ್ರಾಜ್ಞನ ಕರ್ತವ್ಯವು. ಈಗ ಅರ್ಜುನನಿಗೆ ರಾಜಸಬುದ್ಧಿಪ್ರೇರಣೆಯುಂಟಾಗಿ ಯುದ್ಧವನ್ನು ತ್ಯಾಗಮಾಡಿದನು. ಈತನು ತಾಮಸಿ ಎಂದಿಗೂ ಆಗುವದಿಲ್ಲವು ಇದರಿಂದ ಈತನು ಆಸುರಸ್ವಭಾವನೆಂದು ಹೇಳಲು ಸಾಧ್ಯವಿಲ್ಲವು. ಅದು ಭ್ರಮಜ್ಞಾನವೆಂದು ಅರಿತವನಾಗಿ, ಆ ಭ್ರಮನಿವಾರಣೆಗಾಗಿ ಲೋಕಗುರುವಿನ ಸನ್ನಿಧಿಯಲ್ಲಿ ಶರಣಾಗತನಾಗಿ ಯಥಾರ್ಥವಾದ ಜ್ಞಾನೋಪದೇಶವನ್ನು ಪ್ರಾರ್ಥಿಸಿದವನಾಗಿ ಕಡೆಗೆ ತದನುಗುಣವಾದ ಪ್ರವೃತ್ತಿಯುಳ್ಳವನಾದುದರಿಂದ ದೈವಸಂಪತ್ತುಳ್ಳವನೇವಿನಾ, ಅಸುರೀ ಸಂಪತ್ತನ್ನುಳ್ಳವನಲ್ಲವೆಂದು ತೀರ್ಮಾನವು.

ಭಾ. ತಾಮಸೀತು ಬುದ್ಧಿಃ ತಮಸಾವೃತಾ ಸತೀ ಸರ್ವಾರ್ಥಾನ್ ವಿಪರೀತಾನ್ ಮನ್ಯತೇ, ಅಧರ್ಮಂ ಧರ್ಮಂ, ಧರ್ಮಂಚಾಧರ್ಮಂ, ಸನ್ತಂ ಚಾರ್ಥ ಮಸನ್ತಂ, ಅಸನ್ತಂ ಚಾರ್ಥಂಸನ್ತಂ, ಪರಂಚ ತತ್ವ ಮಪರಮ್ ಅಪರಂ ಚ ತತ್ವಂ ಪರಮ್, ಏವಂ ಸರ್ವಂ ವಿಪರೀತಂ ಮನ್ಯತ ಇತ್ಯರ್ಥಃ ॥ ೩೨ ॥

---

ಇಲ್ಲಿ ತಮಸಾವೃತಾ ಎಂಬ ಪ್ರಯೋಗದಿಂದ ತೋರಿಬರುವದೇನೆಂದರೆ ತಮೋಗುಣಾಧಿಕ್ಯವುಳ್ಳ ವನು ಅಂತಹ ವ್ಯಾಪಾರವನ್ನು ಬಹುವಾಗಿ ಕೈಕೊಳ್ಳುವನು. ಆದರೆ ಎಲ್ಲರಲ್ಲೂ ಮೂರು ಗುಣಗಳಿರುವದರಿಂದ ಈ ತಾಮಸಿಯು ಯಾವಾಗಲಾದರೂ ಒಂದು ಕಾಲದಲ್ಲಿ ಯತ್ಕಿಂಚಿತ್ ಸತ್ವಗುಣವಿರುವದರಿಂದ,ಬುದ್ಧಿಯು ಆಗ ತಮಸಾವೃತವಾಗದೆ ಸಾತ್ವಿಕವಾಗಿ, ಸಾತ್ವಿಕ ವ್ಯಾಪಾರ ದಲ್ಲಿ ಪ್ರವರ್ತಿಸಬಹುದು. ಆ ಸುಕೃತಮೂಲಕ ಶ್ರೇಯಃಪರಂಪರೆಗಳು ಪ್ರಾಪ್ತವಾಗಬಹುದು. ಇದೀಗ ನಮ್ಮ ಸಿದ್ಧಾಂತವು. ಎಂತಹ ಪಾಪಿಷ್ಠನಾಗಿದ್ದರೂ ಒಂದಾನೊಂದು ಕಾಲದಲ್ಲಿ ಸುಕೃತ ಪರಿಪಾಕದಿಂದ ಮುಕ್ತಿಯಾಗಬಹುದು. ಇದೇ "ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ । ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್" ಎಂದು ಹೇಳ ಲ್ಪಟ್ಟಿರುತ್ತದೆ. ಅಜಾಮಿಳೋಪಾಖ್ಯಾನವೂ ಇನ್ನೊಂದು ನಿದರ್ಶನವು. ಆದರೆ, ಕೆಲವರು ಪಾಪಿಯು ಪುನಃ ಪುನಃ ಪಾಪಿಷ್ಠನಾಗಿ ಅಧೋಗತಿಯನ್ನು ಹೊಂದುತ್ತಾ ನರಕವನ್ನೇ ಸೇರುವನು ಎಂದು ಹೇಳುವರು. ಈ ಅಭಿಪ್ರಾಯವು ಸರಿಯಲ್ಲವು. ಹಾಗೆಯೇ ಅದಕ್ಕೆ ವ್ಯತಿರಿಕ್ತವಾಗಿ, ಸಾತ್ವಿಕನಿಗೆ ಒಂದಾನೊಂದು ಕಾಲದಲ್ಲಿ ತಾಮಸಗುಣಕ್ಕೆ ವಶನಾಗಿ ಅಧರ್ಮವೆಂದು ಧರ್ಮವನ್ನು ಭಾವಿಸಬಹುದು. ಇದಕ್ಕೆ ದೈವೀ ಸಂಪತ್ತನ್ನುಳ್ಳ ಅರ್ಜುನನೇ ನಿದರ್ಶನವು. ಕೋಪವು ರಾಜಸ ತಾಮಸಗುಣಗಳ ಸಂಬಂಧದಿಂದ ಉಂಟಾಗುತ್ತದೆ. ಇದು ಸಾತ್ವಿಕನಿಗೂ ಉಂಟಾಗಬಹುದು. ಆದರೆ ಆತನು ಅದಕ್ಕೆ ವಶನಾಗುವದಿಲ್ಲವು. ರಾಜಸ ತಾಮಸಿಗಳು ಅದಕ್ಕೆ ವಶರಾಗುತ್ತಾರೆ. ಪ್ರಾಜ್ಞನಾದ ಅರ್ಜುನನಿಗೆ ಹೀಗೆ ರಾಜಸಬುದ್ಧಿ ಬಂದುದು ಸ್ವಾಮಿಪ್ರೇರಣೆಯಮೂಲಕವಾದುದು.

ಭಾಷ್ಯಾರ್ಥವು—ತಾಮಸಬುದ್ಧಿಯ ಲಕ್ಷಣವನ್ನು ಹೇಳುತ್ತಾರೆ. ರಾಜಸಬುದ್ಧಿಗಿಂತ ಭ್ರಮಾಧಿಕ್ಯವುಂಟೆಂದು ಹೇಳುತ್ತಾರೆ. ರಾಜಸಬುದ್ಧಿಯಹಾಗೆ ಧರ್ಮಿಯ ಗುಣವನ್ನು ವ್ಯತ್ಯಾಸ ವಾಗಿ ತಿಳಿಯುವದು ಮಾತ್ರವೇ ಅಲ್ಲದೆ ಒಂದು ಧರ್ಮಿಯನ್ನು ಇನ್ನೊಂದು ಧರ್ಮಿಯಾಗಿ ತಿಳಿಯುವ ವಿಪರೀತಜ್ಞಾನವುಳ್ಳದ್ದೆಂದು ಉಪದೇಶಿಸುತ್ತಾರೆ—

ತಾಮಸೀ ತು ಬುದ್ಧಿಃ - ತಾಮಸಬುದ್ಧಿಯಾದರೋ, ತು ಶಬ್ದವು ಹಿಂದಿನ ಎರಡು ವಿಧ ಬುದ್ಧಿಗಳನ್ನು ವ್ಯಾವರ್ತಿಸಿ ಹೇಳುತ್ತದೆ. ತಮಸಾವೃತಾಸತೀ - ತಮೋಗುಣಾಧಿಕ್ಯದಿಂದ ಆವರಿಸ ಲ್ಪಟ್ಟದುದಾಗಿ, ಸರ್ವಾರ್ಥಾನ್-ಎಲ್ಲಾ ಅಭಿಪ್ರಾಯಗಳನ್ನೂ, ಅಥವಾ ವಸ್ತುಗಳನ್ನೂ, ವಿಪರೀತಾನ್- ಸ್ವರೂಪಸ್ವಭಾವಗಳಿಂದ ಸಂಪೂರ್ಣ ವ್ಯತ್ಯಸ್ತವಾದವುಗಳನ್ನಾಗಿ, ಮನ್ಯತೇ - ತಿಳಿಯುತ್ತದೆ ; ಹೇಗೆಂದರೆ—ಅಧರ್ಮಂ ಧರ್ಮಂ-ಅಧರ್ಮವನ್ನು ಧರ್ಮವನ್ನಾಗಿಯೂ, ಧರ್ಮಂಚಾ ಧರ್ಮಂ-ಹಾಗೆಯೇ ಧರ್ಮವನ್ನು ಅಧರ್ಮವನ್ನಾಗಿಯೂ, ಅಸನ್ತಂ ಚಾರ್ಥಂ ಸನ್ತಂ— ಇಲ್ಲದಿರುವ ವಸ್ತುವನ್ನು ಇರುವದನ್ನಾಗಿಯೂ, ಹೇಗೆಂದರೆ ಹೇಯಗುಣರಹಿತನಾಗಿ ವಿಕಾರಶೂನ್ಯನಾಗಿರುವ ಪರಮಾತ್ಮನು ಅವಿದ್ಯಾಗೃಹೀತನೆಂಬದಾಗಿ, ಸನ್ತಂ ಚಾರ್ಥ ಮಸನ್ತಂ - ಇರುವದನ್ನು ಇಲ್ಲವೆಂಬದಾಗಿಯೂ, ಹೇಗೆಂದರೆ ಸತ್ಯವಾದ ಜಗತ್ತನ್ನು ಇಲ್ಲವೆಂಬದಾಗಿಯೂ, ಪರಂಚ ತತ್ವಂಮಪರಂ ಪರತತ್ವವಾದ ವಿಷ್ಣುವನ್ನು ಬೇರೆಯಾಗಿ ಅನ್ಯದೇವತೆಯೆಂದೂ, ಅಪರಂಚ ತತ್ವಪರಂ - ಅನ್ಯದೇವತೆಯನ್ನು ಪರತತ ವೆಂದೂ, ಹೇಗೆಂದರೆ ಪ್ರಳಯಾಧಿಪತಿಯೆಂದು ಸ್ವಾಮಿಯಿಂದ ನೇಮಿಸಲ್ಪಟ್ಟ ದೇವತೆ

ಯನ್ನೇ ಪರತತ್ತ್ವವೆಂದೂ, ಹೀಗೆ ಸರ್ವಂ - ಸಮಸ್ತವನ್ನೂ, ವಿಪರೀತಾ-ಭ್ರಮೆಯಿಂದ ವ್ಯತ್ಯಸ್ತವನ್ನಾಗಿ, ಮನ್ಯತ ಇತ್ಯರ್ಥಃ - ತಿಳಿಯುತ್ತದೆ ಎಂಬ ಅಭಿಪ್ರಾಯವು.

ಮೂಲದಲ್ಲಿ ಅಧರ್ಮಂ ಧರ್ಮಮಿತಿ ಎಂದಿರುವದಕ್ಕೆ ಧರ್ಮಂ ಅಧರ್ಮಮಿತಿ ಎಂದೂ ಅರ್ಥ ಮಾಡುವದು ಸಾಧ್ಯವಾದುದರಿಂದ ಎರಡು ವಿಧವಾಗಿಯೂ ಅರ್ಥಮಾಡಿರುತ್ತಾರೆ. ಹೀಗೆ ಎರಡು ವಿಧಗಳಿಂದ ಅರ್ಥಗಳನ್ನೂ ಮಾಡಲು ಸರ್ವಾರ್ಥಾನ್ ವಿಪರೀತಾನ್ ಎಂಬ ಪ್ರಯೋಗವು ಅವಕಾಶವನ್ನು ಕೊಡುತ್ತದೆ. ಎಲ್ಲಾ ಸರಿಯಾದ ಅಭಿಪ್ರಾಯಗಳಿಗೆಲ್ಲಾ ವ್ಯತ್ಯಸ್ತವಾದ ಅಭಿಪ್ರಾಯಗಳನ್ನೇ ತಾಮಸಬುದ್ಧಿಯು ಕೊಡುತ್ತದೆಂಬ ಭಾವವು. ಈ ಶ್ಲೋಕಾಭಿಪ್ರಾಯದ ಹಾಗೆಯೇ ಮನುವೂ ಹೇಳಿರುತ್ತಾರೆ—"ಯಾ ವೇದಬಾಹ್ಯಾಃ ಸ್ಮೃತಯಃ ಯಾಶ್ಚ ಕಾಶ್ಚ ಕುದೃಷ್ಟಯಃ । ಸರ್ವಾ ಸ್ತಾ ನಿಷ್ಫಲಾಃ ಪ್ರೇತ್ಯ ತಮೋನಿಷ್ಠಾಹಿತಾ ಸ್ಸ್ಮೃತಾಃ" ಎಂಬದಾಗಿ. ಇದರಿಂದ ವೇದಗಳು ಪ್ರಮಾಣವಲ್ಲವೆಂಬುದೂ, ವೇದವಾಕ್ಯಗಳಿಗೆ ವಿಪರೀತವಾಗಿ ಅರ್ಥ ಹೇಳೋಣವೂ ಸಹ, ತಮಸ್ಸಾವೃತವಾದ ಬುದ್ಧಿಯ ವಿಜೃಂಭಣೆ ಎಂದೇ ಹೇಳಿರುತ್ತಾರೆ. ಬಾಹ್ಯಕುದೃಷ್ಟಿ ಮತಗಳನ್ನು, ಶ್ರೀ ದೇಶಿಕವರ್ಯರು ಶ್ರೀಮದ್ರಹಸ್ಯತ್ರಯಸಾರದಲ್ಲಿ ಅನುಪಾದೇಯಗಳೆಂದು ಹೇಳಿರುತ್ತಾರೆ.

ಹಿಂದಿನ ಶ್ಲೋಕದಲ್ಲಿ ಹೇಳಿದ ರಾಜಸ ಬುದ್ಧಿಯ ಲಕ್ಷಣಕ್ಕೂ ಈ ಶ್ಲೋಕದಲ್ಲಿ ಹೇಳಿರುವ ತಾಮಸಬುದ್ಧಿ ಲಕ್ಷಣಕ್ಕೂ ಇರುವ ತಾರತಮ್ಯವೇನೆಂಬ ವಿಷಯದಲ್ಲಿ ಕೆಲವರು ರಾಜಸಬುದ್ಧಿಯಲ್ಲಿ ಸಂಪೂರ್ಣವಾಗಿ ತಿಳಿಯದೇ ಇರುವದರಿಂದ ಯಥಾವತ್ತಾಗಿ ತಿಳಿಯದಿರುವ ಬುದ್ಧಿ ಎಂದೂ, ಸಂಪೂರ್ಣವಾಗಿ ವ್ಯತ್ಯಸ್ತವಾಗಿ ತಿಳಿಯೋಣವು ತಾಮಸ ಬುದ್ಧಿ ಎಂದು ಅಭಿಪ್ರಾಯಪಡುವರು. ಇನ್ನು ಕೆಲವರು ಧರ್ಮಿಯ ಗುಣವನ್ನು ವ್ಯತ್ಯಸ್ತವಾಗಿ ತಿಳಿಯೋಣವು ರಾಜಸಬುದ್ಧಿ ಎಂದೂ ಒಂದು ಧರ್ಮಿಯನ್ನೇ ವ್ಯತ್ಯಸ್ತವಾಗಿ ಬೇರೆಯಾಗಿ ತಿಳಿಯೋಣವು ತಮೋಬುದ್ಧಿಯೆಂದೂ ಹೇಳುವರು. ಅಂತೂ ಎರಡು ಅಭಿಪ್ರಾಯಗಳಲ್ಲೂ ಧರ್ಮಿಯ ವಿಷಯಕವಾದ ಭ್ರಮಜ್ಞಾನವೇ ಆಗಿರುತ್ತದೆ. ರಾಜಸಬುದ್ಧಿಯಲ್ಲಿ ಅಯಥಾವತ್ಪ್ರಜಾನಾತಿ ಎಂದು ಹೇಳಿರುವದರಿಂದ ಧರ್ಮಿಯ ನಿರೂಪಿತ ಸ್ವರೂಪವಿಶೇಷಕ್ಕೆ ಧರ್ಮದಲ್ಲಿ ವ್ಯತ್ಯಸ್ತವು ತೋರಿಬರುತ್ತದೆ; ಹೇಗೆಂದರೆ, ಪಿತ್ತೋಪಹತನಿಗೆ ಬೆಳ್ಳಗಿರುವ ಶಂಖವು ಹಳದಿ ಬಣ್ಣವಾಗಿ ಹೇಗೆ ತೋರುತ್ತದೋ ಹಾಗೆ ತಾಮಸ ಬುದ್ಧಿಯ ವಿಷಯದಲ್ಲಿ ಸರ್ವಾರ್ಥಾನ್ ವಿಪರೀತಾನ್ ಎಂದು ಹೇಳಿರುವದರಿಂದ ಧರ್ಮಿಯ ಸ್ವರೂಪ ನಿರೂಪಕ ಧರ್ಮಗಳಲ್ಲೇ ವೈಪರೀತ್ಯವು ಎಂಬುದು ತೋರಿಬರುತ್ತದೆ. ಶುಕ್ತಿಯಲ್ಲಿ ರಜತವೆಂಬ ಭ್ರಮೆಯು. ಇದು ಸಾತ್ತ್ವಿಕ ಬುದ್ಧಿಗೆ ಉಂಟಾಗುವದೇ ಇಲ್ಲವು. ಶಂಖವನ್ನು ಪೀತವೆಂದು ತಿಳಿಯದೆ ಬೆಳ್ಳಗೆ ಇದೆಯೆಂದೂ, ಶುಕ್ತಿಯನ್ನು ಶುಕ್ತಿ ಎಂದೇ, ರಜತವನ್ನು ರಜತವೆಂದೇ ಯಥಾರ್ಥವಾಗಿ ತಿಳಿಯುವದರಿಂದ ಧರ್ಮಿಯ ಸ್ವರೂಪ ನಿರೂಪಕ ಧರ್ಮಗಳನ್ನೂ, ನಿರೂಪಿತ ಸ್ವರೂಪ ವಿಶೇಷಣಗಳನ್ನೂ ಯಥಾರ್ಥವಾಗಿಯೇ ತಿಳಿಯುತ್ತಾನೆಂಬ ಭಾವವು. ಯಾವ ಧರ್ಮಗಳಿಂದ ಒಂದು ಧರ್ಮಿಯ ಸ್ವರೂಪವನ್ನು ತಿಳಿಯಬಹುದೋ ಆ ಧರ್ಮಗಳು ಸ್ವರೂಪ ನಿರೂಪಕ ಧರ್ಮಗಳೆನಿಸುತ್ತವೆ; ಅವುಗಳಲ್ಲದ ಆ ಧರ್ಮಿಯ ಇತರ ಧರ್ಮಗಳು ನಿರೂಪಿತ ಸ್ವರೂಪ ವಿಶೇಷಣಗಳೆಂದು ಹೇಳಲ್ಪಡುವುವು. ಅಥವಾ ರಾಜಸಿಯಾದ ಬುದ್ಧಿಗೆ ವ್ಯತ್ಯಸ್ತವಾದ ಅಭಿಪ್ರಾಯಗಳು ಪ್ರವೃತ್ತಿ ನಿವೃತ್ತಿ ರೂಪಧರ್ಮಗಳ ತಿಳುವಳಿಕೆಯಲ್ಲಿ ಎಂದೂ, ತಾಮಸಿ ಬುದ್ಧಿಗಾದರೋ ಸರ್ವಾಭಿಪ್ರಾಯಗಳಲ್ಲೂ ತಿಳುವಳಿಕೆಯು ವ್ಯತ್ಯಸ್ತವಾದುದೆಂದೂ ಭಾವಿಸಬಹುದು. ಶ್ರೀ ದೇಶಿಕವರ್ಯರ ಅಭಿಪ್ರಾಯವೇನೆಂದರೆ ಸ್ವರೂಪ ಧರ್ಮದಲ್ಲೇ ವ್ಯತ್ಯಾಸವು ತಾಮಸ ಬುದ್ಧಿಗೆ; ನಿರೂಪಿತ ಸ್ವರೂಪ ವಿಶೇಷಣದಲ್ಲಿ ವ್ಯತ್ಯಾಸವು ರಾಜಸಬುದ್ಧಿಗೆ ಎಂಬುದು. ಪೀತ ಶಂಖ ಭ್ರಮವು ರಾಜಸಬುದ್ಧಿಯದು. ಶುಕ್ತಿ ರಜತ ಭ್ರಮವು ತಾಮಸಬುದ್ಧಿಯದು. ರಾಜಸದಲ್ಲಿ ಧರ್ಮಿಧರ್ಮ

**ಮೂ. ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇನ್ದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿ ಸ್ಸಾ ಪಾರ್ಥ ಸಾತ್ತ್ವಿಕೀ ॥ ೩೩ ॥**

---

ದಲ್ಲಿ ಭ್ರಮವು. ತಾಮಸದಲ್ಲಿ ಧರ್ಮಿಯಲ್ಲೇ ಭ್ರಮವಾಗಿ ಒಂದನ್ನು ಇನ್ನೊಂದು ವಸ್ತುವಾಗಿ ಭ್ರಮವು.

ಕಲ್ಯಾಣ ಗುಣಮಹೋದಧಿಯು ನಿರ್ಗುಣನೆಂಬ ಭ್ರಮಬುದ್ಧಿಯು ರಾಜಸಬುದ್ಧಿಯು. ಹೇಯನಾಗಿಯೂ ಪರಮಾತ್ಮನಿಗೆ ದಾಸನಾಗಿಯೂ ಇರುವವನಿಗೆ ತಾನೇ ಪರಮಾತ್ಮನೆಂಬ ಭ್ರಮ ಬುದ್ಧಿಯು ತಾಮಸಬುದ್ಧಿಯೆಂದು ತಿಳಿಯತಕ್ಕದ್ದು. ॥ ೩೨ ॥

**ಮೂಲಕ್ಕೆ ಅರ್ಥವು**—ಹಿಂದೆ ೨೯ನೆಯ ಶ್ಲೋಕದಲ್ಲಿ ಬುದ್ಧಿ ಮತ್ತು ಧೃತಿಗಳ **ತ್ರಿವಿಧ ಭೇದ** ಲಕ್ಷಣಗಳನ್ನು ಹೇಳುತ್ತೇನೆಂದು ಪ್ರತಿಜ್ಞಾವಾಕ್ಯವನ್ನು ಹೇಳಿ ೩೦, ೩೧, ೩೨ ಈ ಮೂರು **ಶ್ಲೋಕಗಳ** ಮೂಲಕ ಬುದ್ಧಿಯ ಸಾತ್ತ್ವಿಕ ರಾಜಸ ತಾಮಸ ಭೇದಗಳ ಲಕ್ಷಣವನ್ನು **ತಿಳಿಸಿ, ಈಗ** ಧೃತಿಯ ಸಾತ್ತ್ವಿಕ ರಾಜಸ ತಾಮಸಭೇದಗಳ ಲಕ್ಷಣಗಳನ್ನು ಮುಂದಿನ ಮೂರು ಶ್ಲೋಕಗಳಿಂದ **(೩೩, ೩೪, ೩೫)** ವ್ಯಕ್ತಪಡಿಸುತ್ತಾರೆ. ಧೃತಿ ಎಂದರೆ ಆರಂಭಿಸಿದ ಕರ್ಮಕ್ಕೆ ವಿಘ್ನೋಪಹತಿ ಯುಂಟಾದರೂ ಅದನ್ನು ಹಿಡಿದು ಸಾಧಿಸುವ ಶಕ್ತಿಯು, ಎಂದು ಹಿಂದೆಯೇ ವ್ಯಾಖ್ಯಾನ ಮಾಡಲ್ಪಟ್ಟಿತು. **ಸಾತ್ತ್ವಿಕಧೃತಿಯ** ಲಕ್ಷಣವನ್ನು ಹೇಳುತ್ತಾರೆ. **ಹೇ ಪಾರ್ಥ** – ಓ ಅರ್ಜುನನೇ **ಅವ್ಯಭಿಚಾರಿಣ್ಯಾ** – ಮನಸ್ಸು ಇತರ ಫಲಾಪೇಕ್ಷೆಯುಳ್ಳದ್ದಾದರೆ ಅದು ವ್ಯಭಿಚರಿತವಾಯಿತು ಎಂಬ ಭಾವವು. ಹಾಗಲ್ಲದ ಮನಸ್ಸು ಪರಮಾತ್ಮ ಸಾಕ್ಷಾತ್ಕಾರದಲ್ಲೇ ಸಕ್ತವಾಗಿದ್ದು ತೈಲಧಾರಾವತ್ ಚಿನ್ತನವಿದ್ದರೆ ಅವ್ಯಭಿಚರಿತವಾದುದೆಂದು ಹೇಳಲ್ಪಡುತ್ತದೆ. ಆದುದರಿಂದ **ಅವ್ಯಭಿಚಾರಿಣ್ಯಾ**–ಐಕಾನ್ತ್ಯದಿಂದ ಅನನ್ಯಪ್ರಯೋಜನವಾದ, **ಯೋಗೇನ** – ಭಗವದುಪಾಸನದಿಂದ, **ಮನಃ ಪ್ರಾಣೇನ್ದ್ರಿಯ ಕ್ರಿಯಾಃ** - ಮನಸ್ಸೂ, ಪ್ರಾಣ, ಇಂದ್ರಿಯಗಳಿಗೆ ಸಂಬಂಧಿಸಿರುವ ಕ್ರಿಯೆಗಳನ್ನು, **ಯಯಾಧೃತ್ಯಾ**-ಯಾವ ಧೃತಿಯಿಂದ ಪ್ರಾರಂಭಿಸಿದ ಕೆಲಸವನ್ನು ಮುಗಿಸಿಯೇ ತೀರಬೇಕೆಂಬ ಸಙ್ಕಲ್ಪದಿಂದ, **ಧಾರಯತೇ** - ಧರಿಸಲ್ಪಡುತ್ತದೋ ಎಂದರೆ ತನಗೆ ಅನುಕೂಲವಾಗಿ ಮಾಡಿಕೊಳ್ಳುತ್ತದೋ, **ಸಾ ಧೃತಿಃ** - ಅಂತಹ ಕಾರ್ಯನಿರ್ವಾಹಕ ಸಙ್ಕಲ್ಪವು, **ಸಾತ್ತ್ವಿಕೀ** – ಸಾತ್ತ್ವಿಕ ಧೃತಿ ಎಂದು ಹೇಳಲ್ಪಡುತ್ತದೆ. ಮೋಕ್ಷಸಾಧನಕ್ಕಾಗಿ ಅವ್ಯಭಿಚರಿತವಾದ ಯೋಗದಲ್ಲಿ ಪ್ರವರ್ತಿಸಿರುವ ಮನುಷ್ಯನು ಯಾವ ಧೃತಿಯಿಂದ, ಮನಸ್ಸು, ಪ್ರಾಣ, ಇಂದ್ರಿಯಗಳ ವ್ಯಾಪಾರಗಳನ್ನೆಲ್ಲಾ ಆ ಯೋಗಕ್ಕೆ ಅನುಕೂಲವಾಗಿ ಮಾಡಿಕೊಳ್ಳುತ್ತಾನೋ, ಅಂತವನ **ಧೃತಿಯು** ಸಾತ್ತ್ವಿಕವೆಂದು ಹೇಳಿದರು. **ಯೋಗೇನಾವ್ಯಭಿಚಾರಿಣ್ಯಾ** - ಎಂಬುದರಿಂದ ಭಕ್ತಿಯೋಗನಿಷ್ಠನ ಎಂದು ಇಟ್ಟುಕೊಳ್ಳಬೇಕಾಗುತ್ತದೆ. ಆದುದರಿಂದ **ಶ್ರೀ** ಯತಿವರ್ಯರು ಭಾಷ್ಯದಲ್ಲಿ **"ಪುರುಷಃ"** ಎಂದು ಇಟ್ಟುಕೊಂಡಿರುತ್ತಾರೆ. ಇಲ್ಲಿ **ಯೋಗೇನಾವ್ಯಭಿಚಾರಿಣ್ಯಾ** ಎಂಬುದಕ್ಕೆ ಮೋಕ್ಷಸಾಧನ ಭೂತವಾದ ಭಕ್ತಿಯೋಗವೆಂದು ಅರ್ಥಮಾಡಿದುದು ಹೇಗೆ? ಕರ್ಮಜ್ಞಾನ ಯೋಗಾದಿಗಳು ಏಕೆ ಆಗಕೂಡದು ಎಂದರೆ, ಮುಂದಿನ ಶ್ಲೋಕದಲ್ಲಿ ರಾಜಸಧೃತಿಯಲ್ಲಿ ಪುರುಷನು ಫಲಾಕಾಂಕ್ಷೀ ಎಂದೂ, ಆತನು ಧರ್ಮಾರ್ಥಕಾಮಗಳಲ್ಲಿ ಸ್ಪೃಹೆಯುಳ್ಳವನೆಂದೂ,ಹೇಳಿರುವದರಿಂದ ಇಲ್ಲಿ ಮೋಕ್ಷಾಭಿಲಾಷಿಯೇ ಹೇಳಲ್ಪಟ್ಟನು. ಅದೂ ಅಲ್ಲದೆ ಅವ್ಯಭಿಚರಿತವಾದುದು ಎಂದೂ ಹೇಳಿರುವದರಿಂದ ತೈಲಧಾರಾವದವಚ್ಛಿನ್ನಸ್ಮೃತಿ ಸಂತತಿ ರೂಪಯೋಗವಾದ ಉಪಾಸನೆಯೇ ಯೋಗ ಶಬ್ದದಿಂದ ಹೇಳಲ್ಪಟ್ಟಿದುದು. ಇದು ಹಿಂದೆ **"ಅನನ್ಯ ಚೇತಾ ಸ್ಸತತಂ ಯೋ ಮಾಂ ಸ್ಮರತಿ ನಿತ್ಯಶಃ। ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ**(ಗೀ.೮-೧೪) ಎಂಬಲ್ಲೂ ಮತ್ತು **"ಅನನ್ಯಾಶ್ಚಿಂತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ"**

**ಭಾ.** **ಯಯಾ ಧೃತ್ಯಾ ಯೋಗೇನಾವ್ಯಭಿಚಾರಿಣ್ಯಾ ಮನಃಪ್ರಾಣೇನ್ದ್ರಿಯಾಣಾಂ ಕ್ರಿಯಾಃ ಪುರುಷೋ ಧಾರಯತೇ ; ಯೋಗೋ-ಮೋಕ್ಷಸಾಧನ ಭೂತಂ ಭಗವ ದುಪಾಸನಂ ; ಯೋಗೇನ ಪ್ರಯೋಜನಭೂತೇನಾಽವ್ಯಭಿಚಾರಿಣ್ಯಾ ಯೋಗೋ ದ್ದೇಶೇನ ಪ್ರವೃತ್ತಾ ಸ್ತತ್ಸಾಧನಭೂತಾ ಮನಃಪ್ರಭೃತೀನಾಂ ಕ್ರಿಯಾಃ ಯಯಾ ಧೃತ್ಯಾಧಾರಯತೇ,** ಸಾ ಸಾತ್ವಿಕೀತ್ಯರ್ಥಃ ॥ ೩೩ ॥

---

(ಗೀ. ೮-೨೨) ಎಂಬಲ್ಲೂ ಹೇಳಲ್ಪಟ್ಟಿತು. ಹಾಗೆ ಧರಿಸಲ್ಪಡಬೇಕಾದ **ಮನಃಪ್ರಾಣೇಂದ್ರಿಯ ಕ್ರಿಯೆಗಳು** ಯಾವುವು ಎಂಬುದು ನ್ಯಾಯವಾದ ಪ್ರಶ್ನೆಯು. ಇವುಗಳು ಹಿಂದೆಯೇ ಹೇಳಲ್ಪಟ್ಟಿರುವದರಿಂದ ಇಲ್ಲಿ ಹೇಳಲಿಲ್ಲವು. ಮನಸ್ಸಿನ ಪ್ರವೃತ್ತಿಯು ಹೇಗೆ ಇರಬೇಕೆಂದರೆ **"ಮಯ್ಯೇವ ಮನ ಆಧತ್ಸ್ವ"** (ಗೀ. ೧೨-೮) ಎಂಬಲ್ಲಿ ಹೇಳಿರುವ ಹಾಗೆ ಸತತ ಪರಮಾತ್ಮನಲ್ಲೇ ಸಕ್ತವಾಗಿರಬೇಕು ; ಪ್ರಾಣವಾಯುವಿನ ವ್ಯಾಪಾರ ಹೇಗಿರಬೇಕೆಂದರೆ— **ಪ್ರಾಣಾಪಾನೌ ಸಮೌಕೃತ್ವಾ** ಎಂದು (ಗೀ, ೫-೨೭) ರಲ್ಲಿ ಹೇಳಿರುವ ಹಾಗೆ ಇರಬೇಕು ; ಇಂದ್ರಿಯಗಳ **ಕ್ರಿಯಾಃ** - ಹೇಗಿರಬೇಕು ಎಂದರೆ ಸರ್ವಲೋಕ ಶರಣ್ಯನ ದಿವ್ಯಮಙ್ಗಳ ವಿಗ್ರಹವನ್ನು ನೋಡುವದೇನು, ಆತನ ದಿವ್ಯ ಕಥಾಶ್ರವಣವೇನು, ವಾಕ್ಕಿನಿಂದ ಆತನನ್ನು ಸ್ತುತಿಸುವದೇನು, ಆತನನ್ನು ಅರ್ಚಿಸುವದೇನು, ಆತನ ದಿವ್ಯಾಲಯವನ್ನು ಕುರಿತು ಹೋಗುವದೇನು ಇತ್ಯಾದಿ ವ್ಯಾಪಾರಗಳಲ್ಲಿ ಸಕ್ತವಾಗಿರಬೇಕು. ಹೀಗೆ ಇಂತಹ ಮನಃಪ್ರಾಣೇನ್ದ್ರಿಯಗಳ ಕ್ರಿಯೆಗಳನ್ನು ಯಾವ ಧೃತಿಯಿಂದ ಪುರುಷನು ಧರಿಸುವನೋ, ಅಂತವನ ಧಾರಣಾಶಕ್ತಿಯು ಸಾತ್ವಿಕವೆನಿಸುತ್ತದೆ.

**ಭಾಷ್ಯಾರ್ಥವು**—ಮುಂದಿನ ಶ್ಲೋಕದಲ್ಲಿ ರಾಜಸಧೃತಿಯ ವಿಷಯವನ್ನು ಹೇಳುವಾಗ ತ್ರಿವರ್ಗ ಫಲಸಾಧನವು ಹೇಳಲ್ಪಡುವದರಿಂದ ಸಾತ್ವಿಕ ಧೃತಿಯು ಅಪವರ್ಗ ಸಾಧನಭೂತ ಯೋಗ ವಿಷಯವಾದುದೆಂದು ಭಾವಿಸತಕ್ಕದ್ದು. **ಯಯಾಧೃತ್ಯಾ** – ಯಾವ ಧೃತಿಯ ಮೂಲಕವಾಗಿ, **ಅವ್ಯಭಿಚಾರಿಣ್ಯಾ ಯೋಗೇನ** - ಇನ್ನು ಯಾವುದರಲ್ಲೂ ಸಕ್ತವಾಗದ ಮನಸ್ಸುಳ್ಳ ಪರಮಪುರುಷನ ಉಪಾಸನೆಯಿಂದ, **ಮನಃಪ್ರಾಣೇನ್ದ್ರಿಯ ಕ್ರಿಯಾಃ**-ಮನಸ್ಸು, ಪ್ರಾಣ, ಇಂದ್ರಿಯಗಳ ವ್ಯಾಪಾರಗಳನ್ನು, **ಪುರುಷನು, ಧಾರಯತೇ** - ಧರಿಸುತ್ತಾನೋ, ಇಲ್ಲಿ **ಯೋಗ** ವೆಂದರೆ **ಮೋಕ್ಷಸಾಧನಭೂತಂ ಭಗವದುಪಾಸನಮ್**—ಮೋಕ್ಷಕ್ಕೆ ಸಾಧನವಾದ ಭಗವಂತನ ಉಪಾಸನೆಯು. **ಪ್ರಯೋಜನಭೂತೇನ** – ಮೋಕ್ಷರೂಪ ಪ್ರಯೋಜನವುಳ್ಳ, ಅನ್ಯದೇವತಾ ವಿಷಯ ಮತ್ತು ಐಹಿಕಾದಿಗಳ ಸಂಬಂಧವಿಲ್ಲದ ಮನಸ್ಸಿನಿಂದ ಮಾಡಲ್ಪಟ್ಟ, **ಯೋಗೇನ** - ಉಪಾಸನೆಯಿಂದ, **ಯೋಗೋದ್ದೇಶೇನ ಪ್ರವೃತ್ತಾಃ** - ಯೋಗ ನಿಷ್ಪತ್ತಿಗಾಗಿ ಪ್ರವೃತ್ತಗಳಾದ, **ತತ್ಸಾಧನಭೂತಾಃ** - ಆ ಯೋಗಕ್ಕೆ ಸಾಧನಭೂತಗಳಾದ **ಮನಃಪ್ರಭೃತೀನಾಂ** - ಮನಸ್ಸೇ ಮೊದಲಾದವುಗಳ ಎಂದರೆ ಮನಸ್ಸು, ಪ್ರಾಣ, ಇಂದ್ರಿಯಗಳ **ಕ್ರಿಯಾಃ** – ವ್ಯಾಪಾರಗಳು, **ಯಯಾಧೃತ್ಯಾ** – ಯಾವ ಧೃತಿಯಿಂದ, **ಧಾರಯತೇ** - ಧರಿಸಲ್ಪಡುತ್ತದೋ, ನಿರ್ವಹಿಸಲ್ಪಡುತ್ತದೋ, **ಸಾ** - ಅಂತಹ ಧೃತಿಯು, **ಸಾತ್ವಿಕೀತ್ಯರ್ಥಃ** - ಸಾತ್ವಿಕವಾದುದು ಎಂಬ ಭಾವವು. ಇಲ್ಲಿ ಹೇಳಲ್ಪಟ್ಟ ಮನಃ ಪ್ರಾಣೇನ್ದ್ರಿಯಗಳ ವ್ಯಾಪಾರಗಳು ಎಂತವುಗಳೆಂದರೆ ಉಪಾಸನ ನಿಷ್ಪತ್ತಿಗೆ ಸಾಧನಭೂತವಾದ ವ್ಯಾಪಾರಗಳು. ಉಪಾಸನ ಕಾಲದಲ್ಲೂ ತದಿತರ ಕಾಲಗಳಲ್ಲೂ ಈ ಮನಃಪ್ರಾಣೇನ್ದ್ರಿಯಗಳಿಂದ ಆಗಬೇಕಾದ ವ್ಯಾಪಾರಗಳು. **ಅವ್ಯಭಿಚಾರಿಣ್ಯಾಯೋಗೇನ** ಎಂದಿರುವದರಿಂದ **ಯೋಗೋ ಮೋಕ್ಷಸಾಧನ ಭೂತಂ ಭಗವದುಪಾಸನಂ** ಎಂಬ ವ್ಯಾಖ್ಯಾನವು. **ಯೋಗ** ಶಬ್ದಕ್ಕೆ ಮೋಕ್ಷಸಾಧನ ಭೂತವಾದ ಉಪಾಸನವೆಂದು ಭಾಷ್ಯವನ್ನು ಬರೆಯುವಾಗ, ಶ್ರೀ ಪರಾಶರರ **ಯೋಗ** ಶಬ್ದಾರ್ಥ

ವನ್ನು ಮನಸ್ಸಿನಲ್ಲಿಟ್ಟು ಹಾಗೆ ವ್ಯಾಖ್ಯಾನಮಾಡಿರುವ ಹಾಗೆ ತೋರುತ್ತದೆ. "**ಆತ್ಮಪ್ರಯತ್ನಸಾಪೇಕ್ಷಾ ವಿಶಿಷ್ಟಾಯಾ ಮನೋಗತಿಃ । ತಸ್ಯಾ ಬ್ರಹ್ಮಣಿ ಸಂಯೋಗೋ ಯೋಗ ಇತ್ಯಭಿಧೀಯತೇ**" ಮನಸ್ಸಿನ ವ್ಯಾಪಾರವು ಪರಮಾತ್ಮನಲ್ಲೇ **ಸಂಯೋಗವನ್ನು** ತೈಲಧಾರೆಯಹಾಗೆ ಅವಿಚ್ಛಿನ್ನವಾಗಿ ಹೊಂದಿರುವದರಿಂದಲೇ ಭಗವದುಪಾಸನಕ್ಕೆ **ಯೋಗ** ವೆಂಬ ಹೆಸರು ಎಂದು ಹೇಳಲ್ಪಟ್ಟಿರುತ್ತದೆ. (ವಿ. ಪು. ೬-೭.೩೧) ಮೋಕ್ಷೇತರ ಫಲಕ್ಕಲ್ಲದ ಉಪಾಸನವು ಎಂದು ತಿಳಿಸುವದಕ್ಕಾಗಿ **ಅವ್ಯಭಿಚಾರಿಣ್ಯಾ** ಎಂಬ ಪ್ರಯೋಗವು. ಆದುದರಿಂದಲೇ ಮುಂದೆ **ಯೋಗೇನ ಪ್ರಯೋಜನಭೂತೇನ** ಎಂಬುದಾಗಿ ಭಾಷ್ಯವು. ಮಹಾನಂದ ರೂಪ ಫಲವನ್ನು ಕೊಡುವಂತಾದ್ದು; ಉಪಾಸನ ಕಾಲದಲ್ಲೂ ಮಹತ್ತಾದ ಆನಂದವು ; ಉಪಾಸನ ನಿಷ್ಪತ್ತಿಯಾದರೆ ದೇಹಾವಸಾನಾನಂತರವೂ ಮಹತ್ತಾದ ಆನಂದದಾಯಕವಾದುದು ಎಂಬ ಅಭಿಪ್ರಾಯವು. ಈ ಮನಃಪ್ರಾಣೇನ್ದ್ರಿಯ ಕ್ರಿಯೆಗಳು ಉಪಾಸನಕಾಲದಲ್ಲೂ, ಉಪಾಸನವನ್ನು ಬಿಟ್ಟ ಕಾಲದಲ್ಲೂ, ಸಹ ಉಪಾಸನಕ್ಕೆ ಸಹಕಾರಿಗಳು. ಉಪಾಸನ ಕಾಲದಲ್ಲಿ; "**ಮಯ್ಯೇವ ಮನ ಆಧತ್ಸ್ವ**" ಎಂಬಲ್ಲಿ ಹೇಳಿರುವ ಹಾಗೆ ಮನಸ್ಸಿನಿಂದ ನಿರನ್ತರ ಚಿನ್ತನವು. ಪರಮಾತ್ಮ ಸಾಕ್ಷಾತ್ಕಾರ ಪ್ರಯತ್ನವು. ಪ್ರಾಣದ ಪ್ರಾಣಾಯಾಮ ಪ್ರವೃತ್ತಿಗಳು ಉಪಾಸನಕ್ಕೆ ಸಹಾಯಭೂತವು. "**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಂ**" (ಗೀ. ೮-೧೨) ಎಂಬುದು ಅನುಸಂಧೇಯವು. ಹಾಗೆಯೇ ವಿಷ್ಣುಪುರಾಣದಲ್ಲೂ **ಪ್ರಾಣಾಖ್ಯಮನಿಲಂ ವಶ್ಯಂ ಅಭ್ಯಾಸಾತ್ಕುರುತೇ ತು ಯತ್ । ಪ್ರಾಣಾಯಾಮ ಸ್ಸ ವಿಜ್ಞೇಯಃ ಸಬೀಜೋಽಬೀಜ ಏವಚ । ಪರಸ್ಪರೇಣಾಭಿಭವಂ ಪ್ರಾಣಾಪಾನೌ ಯಥಾನಿಲೌ । ಕುರುತಸ್ಸದ್ವಿಧಾನೇನ ತೃತೀಯ ಸ್ಸಂಯಮಾತ್ತಯೋಃ ।** ಎಂದು ಈ ಮಹರ್ಷಿಯು ತಂದೆಗಳೇ ಹೇಳಿರುತ್ತಾರೆ-- ಏನೆಂದರೆ **ಸಬೀಜಃ** ಎಂದರೆ **ಸಗರ್ಭಃ** – ಭಗವನ್ಮೂರ್ತಿ ಧ್ಯಾನ ಮನ್ತ್ರ ಜಪಯುಕ್ತನೂ, **ಅಬೀಜಃ** - ಹಾಗೆ ಧ್ಯಾನ ಮಾಡದವನೂ, ಇಬ್ಬರೂ ಅಭ್ಯಾಸದಿಂದ **ಪ್ರಾಣವಾಯುವನ್ನು** ವಶಮಾಡಿಕೊಳ್ಳುವದೆಂಬುದು ಯಾವದುಂಟೋ ಅದು ಪ್ರಾಣಾಯಾಮವೆಂದೆನಿಸುತ್ತದೆ. **ಹೇಗೆಂದರೆ?** ಪ್ರಾಣವಾಯುವಿನಿಂದ ಅಪಾನವಾಯುವನ್ನು ನಿರೋಧಿಸೋಣವು ರೇಚಕವೆನಿಸುತ್ತದೆ. ಇದು ಪ್ರಥಮವು ; ಎರಡನೆಯದು ಅಪಾನವಾಯುವಿನಿಂದ ಪ್ರಾಣವಾಯುವಿನ ನಿರೋಧವು ; ಇದು ಪೂರಕವು ; ಅನಂತರ ಈ ಉಚ್ಛ್ವಾಸ ನಿಶ್ವಾಸಗಳನ್ನು ಏಕಕಾಲದಲ್ಲೇ ತಡೆಯೋಣವು ಕುಂಭಕವು. ಇವುಗಳು ಭಗವನ್ಮೂರ್ತಿಧ್ಯಾನ ಮನ್ತ್ರಜಪಗಳಿಂದ ಕೂಡಿದುದಾದರೆ ಸಬೀಜವು ಇಲ್ಲವಾದರೆ ಅಬೀಜವು. ಮೋಕ್ಷಾರ್ಥಿಯು ಸಬೀಜವಾಗಿ ಪ್ರಾಣಾಯಾಮಾದಿ ವ್ಯಾಪಾರಗಳುಳ್ಳವನಾಗಬೇಕೆಂದು ಇಲ್ಲಿ ಹೇಳಲ್ಪಟ್ಟಿತು. ಈ ಶ್ಲೋಕದ ಮೂಲಕ ಪ್ರಾಣಾಯಾಮ ಪ್ರತ್ಯಾಹಾರಗಳಾದ ವಾಯುವೂ, ಇಂದ್ರಿಯಗಳೂ, ವಶ್ಯಗಳಾಗಿ ಈ ಅಙ್ಗಗಳಿಂದ ಧಾರಣವು ಪ್ರಾಪ್ತಿಯುಂಟಾಗುವದೇ ಸಾತ್ವಿಕಧೃತಿಯಲ್ಲೇ ಸೇರಿತು. ಪ್ರತ್ಯಾಹಾರವೆಂದರೆ ಇಂದ್ರಿಯಗಳನ್ನು ವಶಮಾಡಿಕೊಳ್ಳುವದು, "**ಪ್ರಾಣಾಯಾಮೇನ ಪವನೇ ಪ್ರತ್ಯಾಹಾರೇಣ ಚೇಂದ್ರಿಯೇ । ವಶೀಕೃತೇ ತತಃ ಕುರ್ಯಾತ್ ಸ್ಥಿತಂ ಚೇತಶ್ಶುಭಾಶ್ರಯೇ** " ಎಂದು (ವಿ. ಪು. ೬-೭-೪೫) ಪರಾಶರ ಮಹರ್ಷಿಯಿಂದ ಹೇಳಲ್ಪಟ್ಟಿರುತ್ತದೆ. ಇಂದ್ರಿಯಗಳಿಗೆ ಬಾಹ್ಯಪ್ರವೃತ್ತಿ ನಿರೋಧವಿರಬೇಕು. ಉಪಾಸನವಿಲ್ಲದ ಕಾಲದಲ್ಲಿ "**ಸತತಂ ಕೀರ್ತಯನ್ತೋ ಮಾಂ ಯತನ್ತಶ್ಚ ದೃಢವ್ರತಾಃ । ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ**" ಎಂಬಲ್ಲಿ ಹೇಳಿರುವಹಾಗೆ ಇಂದ್ರಿಯ ಮನಸ್ಸುಗಳ ವ್ಯಾಪಾರವಿರಬೇಕೆಂದು ಹೇಳಿದಂತಾಯಿತು. ಈ ಸಂದರ್ಭದಲ್ಲಿ "**ವಾಣೀಗುಣಾನುಕಥನೇ ಶ್ರವಣಂ ಕಥಾಯಾಂ ಹಸ್ತೌಚ ಕರ್ಮಸು ಮನಸ್ತವ ಪಾದಯೋರ್ನಃ । ಸ್ಮೃತ್ಯಾಂ ಶಿರಸ್ತವ ನಿವಾಸಜಗತ್ಪ್ರಣಾಮೇ ದೃಷ್ಟಿಸ್ಸತಾಂ ದರ್ಶ,**

**ಮೂ. ಯಯಾತು ಧರ್ಮಕಾಮಾರ್ಥಾ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಙ್ಗೇನ ಫಲಾಕಾಂಕ್ಷೀ ಧೃತಿಸ್ಸಾ ಪಾರ್ಥ ರಾಜಸೀ ॥ ೩೪ ॥**

---

**ನೇಸ್ತು ಭವತ್ತನೂನಾಂ** " (ಭಾಗ. ೧೦-೧೦-೩೮) ಎಂಬ ಇಂದ್ರಿಯಗಳಿಗೆಲ್ಲಾ ಸಾರ್ಥಕ್ಯ ವನ್ನು ಹೇಳುವ ನಳಕೂಬರಸ್ತುತಿಯಲ್ಲಿರುವ ಮಹರ್ಷಿವಾಕ್ಯವು ಅನುಸಂಧೇಯವು. ನಳ ಕೂಬರರು ಉಲೂಖಲ ಬದ್ಧನಾದ ಶ್ರೀ ಕೃಷ್ಣನನ್ನು ಕುರಿತು ಪ್ರಾರ್ಥಿಸುತ್ತಾರೆ. ನಮ್ಮ ವಾಕ್ಕು ನಿನ್ನ ಕಲ್ಯಾಣ ಗುಣಗಳ ಸಂಕೀರ್ತನೆಯಲ್ಲೂ, ನಮ್ಮ ಕಿವಿಗಳು ನಿನ್ನ ದಿವ್ಯ ಚೇಷ್ಟಿತಗಳನ್ನು ಕೇಳುವದರಲ್ಲೂ, ಕೈಗಳು ನಿನ್ನ ಆರಾಧನಾರೂಪ ವೃತ್ತಿಯಲ್ಲೂ, ಮನಸ್ಸು ನಿನ್ನ ಪಾದಸ್ಮರಣ ದಲ್ಲೂ, ಶಿರಸ್ಸು ನಿನ್ನ ಪಾದಕಮಲಗಳಲ್ಲಿ ಪ್ರಣಾಮವನ್ನು ಎಸಗುವದರಲ್ಲೂ, ನಮ್ಮ ಕಣ್ಣಿನ ದೃಷ್ಟಿಯು ನಿನ್ನ ದಿವ್ಯಮಙ್ಗಳ ವಿಗ್ರಹಗಳಲ್ಲೂ, ಮತ್ತು ನಿನ್ನವರಾದ ಭಾಗವತೋತ್ತಮರಲ್ಲೂ, ಇರುವಹಾಗೆ ಅನುಗ್ರಹಿಸು ಎಂದು ಕೇಳಿಕೊಳ್ಳುತ್ತಾರೆ. ಹಾಗೆಯೇ ಪ್ರಸಿದ್ಧವಾದ **"ಜಿಹ್ವೇ ಕೀರ್ತಯ"** ಎಂಬ ಮುಕುಂದಮಾಲಾ ಸ್ತೋತ್ರವೂ (೧೬) ಸಹ ಅನುಸಂಧೇಯವು ಹೀಗೆ ಯೋಗಕ್ಕೆ ಸಹಕಾರಿಯಾಗಿರುವಹಾಗೆಯೇ ಉಪಾಸನಕಾಲದಲ್ಲೂ ತದಿತರಕಾಲದಲ್ಲೂ ಮನಃ ಪ್ರಾಣೇಂದ್ರಿಯ ಪ್ರವೃತ್ತಿಗಳಿದ್ದರೆ ಅಂತಹ **ಧೃತಿಯು ಸಾತ್ವಿಕೀ** ಎಂದು ಉಪದೇಶಿಸಲ್ಪಟ್ಟಿತು. ಇಲ್ಲಿ ಮನಸ್ಸಿನ ಕ್ರಿಯೆ ಯಾವುದು ? ಎಂದರೆ ಪರಮಾತ್ಮನನ್ನು ಸಾಕ್ಷಾತ್ಕರಿಸೋಣವು. ಹೀಗಿರುವವನಿಗೆ ಪ್ರಾಣವೂ,ಮನಸ್ಸನ್ನು ಅನುಸರಿಸಿದುದಾಗುತ್ತದೆ. **"ಯತ್ರಮನಸ್ತತ್ರವಾಯುಃ ಯತ್ರವಾಯುಸ್ತತ್ರಮನಃ"** ಎಂದೂ **"ಪುನರ್ವಾಯುಪಥಂ ಪ್ರಾಪ್ಯಮನೋಭ್ರಮತಿ ವಾಯುವತ್"** ಎಂದೂ ಹೇಳಲ್ಪಟ್ಟಿರುತ್ತದೆ. ಬಾಹ್ಯೇಂದ್ರಿಯಕ್ರಿಯಾ ಎಂತಾದ್ದಾಗಿರಬೇಕೆಂದರೆ **"ಸ್ವಾಧ್ಯಾಯ ಸಂಯಮಾಭ್ಯಾಂಸ ದೃಶ್ಯತೇ ಪುರುಷೋತ್ತಮಃ" "ಸ್ವಾಧ್ಯಾಯಾದ್ಯೋಗ ಮಾಸೀತ ಯೋಗಾತ್ಸ್ವಾಧ್ಯಾಯ ಮಾಮನೇತ್ । ಸ್ವಾಧ್ಯಾಯ ಯೋಗಸಂಪತ್ತ್ಯಾ ಪರಮಾತ್ಮಾ ಪ್ರಕಾಶತೇ"** (ವಿ. ಪು. ೬.೬.೨.) ಸಂಯಮ ದಿಂದ ಬಾಹ್ಯೇಂದ್ರಿಯ ನಿರೋ ಧವು ಹೇಳಲ್ಪಟ್ಟಿತು. **ಸ್ವಾಧ್ಯಾಯ** ವಾದರೋ ವೇದವೇದಾಂತದ್ವಾದಶಾಕ್ಷರ ಪ್ರಣವ ಮೊದ ಲಾದವುಗಳಾಗಿ ತತ್ತ್ವಪರಗಳಾದ ವಾಕ್ಯಗಳ ಪಠನವು. ॥ ೩೩ ॥

**ಮೂಲಕ್ಕೆ ಅರ್ಥವು**— ರಾಜಸ ಧೃತಿಯ ಲಕ್ಷಣವನ್ನು ಹೇಳುತ್ತಾರೆ. ಮೇಲಿನ ಸಾತ್ವಿಕ ಧೃತಿಗೂ ಇದಕ್ಕೂ ತುಂಬಾ ವ್ಯತ್ಯಾಸ ಉಂಟೆಂದು ತೋರಿಸುವದಕ್ಕಾಗಿ ಮೇಲಿನದನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ ತು ಶಬ್ದವು. **ಹೇ ಅರ್ಜುನ**—ಓ ಅರ್ಜುನನೇ, **ಫಲಾಕಾಂಕ್ಷೀ ಮೋಕ್ಷೇತರಗಳಾದ** ಅಲ್ಪಾಸ್ಥಿರಫಲಗಳನ್ನು ಅಪೇಕ್ಷಿಸುವ ಪುರುಷನು, ಇದರಿಂದ ಹಿಂದಿನ **ಸಾತ್ವಿಕ ಧೃತಿಯುಳ್ಳ ಅಧಿಕಾರಿಯು** ಮುಮುಕ್ಷುವು ; ಇಂತಹ ಫಲಾಕಾಂಕ್ಷಿಯಲ್ಲವು ; ಏಕೆಂದರೆ **ಆತನು ಅವ್ಯಭಿಚರಿತಯೋಗವನ್ನವಲಂಬಿಸಿರುವದರಿಂದ** ಶಾಶ್ವತವಾದ ಮಹತ್ತಾದ **ಮೋಕ್ಷ ವನ್ನು ಪ್ರಾರ್ಥಿಸುವನು ಎಂದು ಹೇಳಿದಂತಾಯಿತು ; ಯಯಾ ಧೃತ್ಯಾತು** – ಯಾವ **ಧೃತಿ ಯಿಂದಲಾದರೆ, ಧರ್ಮ ಕಾಮಾರ್ಥಾ - "ಧರ್ಮಾರ್ಥಕಾಮ್ಯೈ ರಲಮಲ್ಪಕಾಸ್ತೇ"** (ವಿ ಪು. ೧-೧೭.೯೧) ಎಂಬ ಮಹರ್ಷಿಯ ಉಕ್ತಿಗನುಸಾರವಾಗಿ ಅಲ್ಲದೆ, ಅಲ್ಪಾಸ್ಥಿರಗಳಾದ **ಧರ್ಮ ಕಾಮಾರ್ಥಗಳನ್ನು, ಪ್ರಸಙ್ಗೇನ**—ಆ ಧರ್ಮಕಾಮಾರ್ಥಗಳಲ್ಲಿ ವಿಶೇಷವಾದ ಉತ್ಕಟ ಸಂಗದಿಂದ **ಧಾರಯತೇ** - ಧರಿಸುತ್ತಾನೋ ಎಂದರೆ ಮನಃಪ್ರಾಣೇಂದ್ರಿಯಗಳ ವ್ಯಾಪಾರಗಳನ್ನುಳ್ಳವನಾಗು ವನೋ, **ಸಾಧೃತಿಃ** – ಅಂತಹ ಧೃತಿಯು, **ರಾಜಸೀ** - ರಾಜಸೀ ಎಂದು ಹೇಳಿಸಿಕೊಳ್ಳುತ್ತದೆ. ಧರ್ಮಕಾಮಾರ್ಥರೂಪ ಫಲಕಾಂಕ್ಷೆಯುಳ್ಳದು ರಾಜಸಧೃತಿ ಎಂದು ಹೇಳಿದುದರಿಂದ **ಸಾತ್ವಿಕ ಧೃತಿಗೆ ಈ ತ್ರೈವರ್ಗಿಕ ಫಲಾಕಾಂಕ್ಷೆಯಿಲ್ಲವೆಂದು** ಏರ್ಪಟ್ಟಿತು. ವಿಷಯೋಪಭೋಗಗಳಲ್ಲಿರುವ

ಭಾ. **ಫಲಾಕಾಂಕ್ಷೀ ಪುರುಷಃ ಪ್ರಕೃಷ್ಟ ಸಙ್ಗೇನ ಧರ್ಮಕಾಮಾರ್ಥಾ ಯಯಾಧೃತ್ಯಾ ಧಾರಯತೇ, ಸಾರಾಜಸೀ; ಧರ್ಮಕಾಮಾರ್ಥಶಬ್ದೇನ ತತ್ಸಾಧನ ಭೂತಾ ಮನಃ ಪ್ರಾಣೇನ್ದ್ರಿಯಕ್ರಿಯಾಃ ಲಕ್ಷ್ಯನ್ತೇ; ೨ ಫಲಾಕಾಂಕ್ಷೀ ಇತ್ಯತ್ರಾಪಿ ಫಲ ಶಬ್ದೇನ ರಾಜಸತ್ವಾದ್ಧರ್ಮ ಕಾಮಾರ್ಥಾ ಏವ ವಿವಕ್ಷಿತಾಃ; ಅತೋಧರ್ಮಕಾಮಾರ್ಥಾಪೇಕ್ಷಯಾಮನಃ ಪ್ರಭೃತೀನಾಂ ಕ್ರಿಯಾಯಯಾಧೃತ್ಯಾ ಧಾರಯತೇ ಸಾರಾಜಸೀತ್ಯುಕ್ತಂ ಭವತಿ. ||೩೪||**

---

ಮನಃ ಪ್ರಾಣೇನ್ದ್ರಿಯಗಳ ವ್ಯಾಪಾರಗಳು, ಬಲಿಷ್ಠವಾದವೆಂದು ತಿಳಿಸುವುದಕ್ಕಾಗಿ ಪ್ರಸಙ್ಗೇನ ಎಂಬಲ್ಲಿ ಪ್ರ-ಪ್ರಕರ್ಷೇಣ ಎಂಬ ಉಪಸರ್ಗವು. ಈ ಪ್ರ ಎಂಬ ಉಪಸರ್ಗವು ರಾಜಸಧೃತಿಯುಳ್ಳ ಐಹಿಕ ಫಲಾಕಾಂಕ್ಷಿಗಳಿಗೆ ಐಹಿಕೋಪಭೋಗಗಳಲ್ಲಿರುವ ಉತ್ಕಟೇಚ್ಛೆಯನ್ನು ಸೂಚಿಸುತ್ತದೆ **"ಯಾ ಪ್ರೀತಿ ರವಿವೇಕಾನಾಂ ವಿಷಯೇಷ್ವನಿವರ್ತಿನಾವ್"** ಎಂಬ (ವಿ. ಪು ೧. ೨೦. ೧೯) ಮಹರ್ಷಿ ವಾಕ್ಯವು ಅನುಸಂಧೇಯವು. || ೩೪ ||

**ಭಾಷಾರ್ಥವು—ಫಲಾಕಾಂಕ್ಷೀ ಪುರುಷಃ**-ಧರ್ಮಾರ್ಥ ಕಾಮಗಳಾಗಿ ಮೋಕ್ಷೇತರಗಳಾಗಿರುವ ಫಲಾಕಾಂಕ್ಷೆಯುಳ್ಳ ಪುರುಷನು, **ಪ್ರಕೃಷ್ಟ ಸಙ್ಗೇನ**-ವಿಶೇಷವಾದ ಸಙ್ಗದಿಂದ, ಇಲ್ಲಿ ಪ್ರಾಸಙ್ಗಿಕವಾಗಿ ಎಂಬ ಅರ್ಥವು ಕೂಡುವದಿಲ್ಲವು. **ಧರ್ಮಾರ್ಥ ಕಾಮಗಳನ್ನು, ಯಯಾಧೃತ್ಯಾ**-ಯಾವ ಧೃತಿಯಿಂದ, **ಧಾರಯತೇ**-ಧರಿಸುತ್ತಾನೋ, **ಸಾ**-ಅಂತಹ ಧೃತಿಯು, **ರಾಜಸೀ**-ರಾಜಸವಾದುದೆಂದು ಹೇಳಿಸಿಕೊಳ್ಳುವದು; ಇದರಿಂದ ಸಾತ್ವಿಕ ಧೃತಿಯುಳ್ಳ ಪುರುಷನಿಗೆ ಈ ತ್ರಿವರ್ಗಗಳಾದ ಧರ್ಮಾರ್ಥ ಕಾಮರೂಪ **ಪುರುಷಾರ್ಥಗಳಲ್ಲಿ** ಅಭಿಲಾಷೆಯು ಇಲ್ಲವೆಂದೂ, ರಾಜಸಿಗೆಯಾದರೋ ಅವುಗಳಲ್ಲಿ ಅಭಿಲಾಷೆ ಎಂದೂ, **ಹೇಳಿ**ದಂತಾಯಿತು. **ಧರ್ಮಾರ್ಥಕಾಮಾ ಧಾರಯತೇ** ಎಂದರೇನೆಂಬುದನ್ನು ವಿವರಿಸಿ **ಹೇಳು**ತ್ತಾರೆ—**ಧರ್ಮಕಾಮಾರ್ಥ ಶಬ್ದೇನ**-ಧರ್ಮಾರ್ಥಕಾಮಶಬ್ದದಿಂದ, **ತತ್ಸಾಧನಭೂತಾಃ**-ಅವುಗಳಿಗೆ ಕಾರಣಭೂತಗಳಾದ, **ಮನಃಪ್ರಾಣೇನ್ದ್ರಿಯ ಕ್ರಿಯಾಃ**-ಮನಸ್ಸೂ ಪ್ರಾಣ ಬಹಿರಿಂದ್ರಿಯಗಳ ವ್ಯಾಪಾರಗಳೂ. **ಲಕ್ಷ್ಯನ್ತೇ**-ಸೂಚಿಸಲ್ಪಟ್ಟವು, ಹೇಳಲ್ಪಟ್ಟವೆಂಬ ಭಾವವು. **ಫಲಾಕಾಂಕ್ಷೀ ಇತ್ಯತ್ರಾಪಿ**-ಫಲಾಕಾಂಕ್ಷೀ ಎಂಬಲ್ಲಿಯೂ ಕೂಡ, **ಫಲಶಬ್ದೇನ**-ಫಲಶಬ್ದದಿಂದ, **ರಾಜಸತ್ವಾತ್**-ರಾಜಸ ಗುಣದ ದೆಶೆಯಿಂದ, **ಧರ್ಮಕಾಮಾರ್ಥಾ ಏವ**-ಧರ್ಮಕಾಮಾರ್ಥಗಳೇ, **ವಿವಕ್ಷಿತಾಃ**-ಹೇಳಬೇಕಾದವು. **ಧರ್ಮಾರ್ಥಕಾಮಾ** ಎಂಬಲ್ಲಿ **ತತ್ಸಾಧನ ಭೂತ ಮನಃಪ್ರಾಣೇನ್ದ್ರಿಯಕ್ರಿಯಾಃ** ಎಂದು ಲಾಕ್ಷಣಿಕಾರ್ಥವನ್ನು ಹೇಳಿದುದರಿಂದ **ತೋ**ರಿಬರುವ ತಾತ್ಪರ್ಯಾರ್ಥವನ್ನು ತಿಳಿಸುವದು ಅವಶ್ಯಕವಾದುದರಿಂದ **ಅತಃ** ಎಂದಾರಂಭಿಸಿ ಅದನ್ನು ತಿಳಿಸುತ್ತಾರೆ—**ಅತಃ**-ಆ ಕಾರಣದಿಂದ, **ಧರ್ಮಕಾಮಾರ್ಥಾಪೇಕ್ಷಯಾ**-ಧರ್ಮಕಾಮಾರ್ಥಗಳ ಅಪೇಕ್ಷೆಯಿಂದ, ಮಾಡಲ್ಪಡುವ, **ಮನಃಪ್ರಭೃತೀನಾಂಕ್ರಿಯಾಃ**-ಮನಸ್ಸೇ ಮೊದಲಾದವುಗಳ ವ್ಯಾಪಾರಗಳು, **ಪ್ರಭೃತೀನಾಂ** ಎಂಬುದರಿಂದ ಪ್ರಾಣೇನ್ದ್ರಿಯಗಳ ವ್ಯಾಪಾರಗಳೂ ಹೇಳಲ್ಪಟ್ಟವು. **ಯಯಾಧೃತ್ಯಾ**-ಯಾವ ಧೃತಿಯಿಂದ **ಧಾರಯತೇ**-ಧರಿಸಲ್ಪಡುತ್ತದೋ, **ಸಾ**-ಅಂತಹಧೃತಿಯು, **ರಾಜಸೀತ್ಯುಕ್ತಂಭವತಿ**-ರಾಜಸೀ ಎಂದು ಹೇಳಲ್ಪಡುತ್ತದೆ. || ೩೪ ||

**ಮೂಲಕ್ಕೆ ಅರ್ಥವು—**ಹಿಂದಿನ ಎರಡು ಶ್ಲೋಕಗಳಿಂದ ಸಾತ್ವಿಕ ರಾಜಸಧೃತಿಗಳ ಲಕ್ಷಣವನ್ನೂ, ಮನಃ ಪ್ರಾಣೇನ್ದ್ರಿಯ ವ್ಯಾಪಾರಗಳು ಆ ಸಂದರ್ಭಗಳಲ್ಲಿ ಯಾವ ಫಲಗಳನ್ನು ಉಂಟುಮಾಡುವುವೆಂಬುದನ್ನೂ, ಹೇಳಿದರು. ಈ ಶ್ಲೋಕದಲ್ಲಿ ತಾಮಸಧೃತಿಯು ಮನಃ

**ಮೂ. ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವಚ ।**
**ನ ವಿಮುಞ್ಚತಿ ದುರ್ಮೇಧಾ ಧೃತಿಸ್ಸಾ ಪಾರ್ಥತಾಮಸೀ ॥ ೩೫ ॥**

---

ಪ್ರಾಣೇನ್ದ್ರಿಯ ವ್ಯಾಪಾರಗಳು ಸ್ವಪ್ನ ಭಯ ಶೋಕಾದಿಗಳನ್ನುಂಟುಮಾಡುವ ವಿಷಯ ಪ್ರಾಪ್ತಿಯನ್ನೂ ಮತ್ತು ಅವುಗಳಿಗೆ ಸಾಧನಭೂತವಾದವುಗಳನ್ನೂ; ಕುರಿತದ್ದೆಂದು ಹೇಳುತ್ತಾರೆ; ಆ ಕಾರಣದಿಂದ **ದುರ್ಮೇಧಾಃ**-ಅವಿವೇಕ ಜ್ಞಾನರೂಪವಾದುದು ಎಂದು ತಿಳಿಸುತ್ತಾರೆ—ಹೇ **ಪಾರ್ಥ**-ಓ ಅರ್ಜುನನೇ, **ಯಯಾ**-ಯಾವ ಧೃತಿಯಿಂದ-ಸ್ವಪ್ನಂ-ಸ್ವಪ್ನರೂಪವಾದ ನಿದ್ರೆಯನ್ನೂ, ಇದರಿಂದ ಉಪಲಕ್ಷಣ ರೂಪದಲ್ಲಿ ಸರ್ವೇಂದ್ರಿಯ ಮನೋಪರತಿರೂಪಸುಷುಪ್ತಿಯೂ ಸಹ ಹೇಳಲ್ಪಟ್ಟಿತು, **ಭಯಂ**-ಪರಿಣಾಮದಲ್ಲಿ ಉಂಟಾಗಬಹುದಾದ ಭಯವನ್ನೂ, **ಶೋಕಂ**-ಇಷ್ಟಪ್ರಾಪ್ತಿಯಿಲ್ಲದುದಕ್ಕಾಗಿ ಶೋಕವನ್ನೂ, **ವಿಷಾದಂ**-ಇಷ್ಟಪ್ರಾಪ್ತಿಗೆ ವಿರುದ್ಧ ಫಲ ವುಂಟಾದುದಕ್ಕಾಗಿ ವಿಷಾದವನ್ನೂ, **ಮದಮೇವಚ**-ವಿಷಯಾನುಭವದಿಂದಲಾಗಲಿ, ಅಥವಾ ತಾಮಸಾಹಾರಪಾನಾದಿಗಳ ಸೇವನೆಯಿಂದುಂಟಾದ ಮದವನ್ನಾಗಲಿ ಎಂದರೆ ಇಂತಹ ಫಲಗಳಿಗೆ ಸಾಧನ ಭೂತವಾದ ಮನಃ ಪ್ರಾಣೇನ್ದ್ರಿಯ ವ್ಯಾಪಾರಗಳನ್ನೂ, **ದುರ್ಮೇಧಾಃ**-ಇಂತಹ ಅನಿಷ್ಟ ಫಲಗಳನ್ನುಂಟುಮಾಡುವ ವ್ಯಾಪಾರಗಳನ್ನು ಹಿಡಿದು ಮಾಡುವ ಅವಿವೇಕಿಯು, **ನವಿಮುಂಚತಿ**-ಅನಿಷ್ಟ ಫಲ ಉಂಟಾದರೂ ಕೂಡ ಬಿಡದೇ ಧರಿಸುವನೋ **ಸಾ**-ಅಂತಹ, **ಧೃತಿಃ**-ಧೃತಿಯು, **ತಾಮಸೀ** ಎಂದು ತಿಳಿ ಎಂಬ ಭಾವವು. ಇಲ್ಲಿ ಸ್ವಪ್ನಂ ಎಂಬುದು ಸ್ವಪ್ನರೂಪ ಮತ್ತು ಸುಷುಪ್ತಿರೂಪ ನಿದ್ರೆಯನ್ನು ಬೋಧಿಸುತ್ತದೆಂದು ಹೇಳಲ್ಪಟ್ಟಿತು. ಸ್ವಪ್ನ ಸುಷುಪ್ತಿಗಳು ಸಾತ್ವಿಕ ರಾಜಸ ಧೃತ್ಯಧಿಕಾರಿಗಳಿಗೂ ಇಲ್ಲವೋ ? ಹಾಗಿದ್ದ ಪಕ್ಷದಲ್ಲಿ ತಾಮಸೀ ಧೃತಿಯನ್ನು ವಿಶೇಷಿಸಿ ಹೇಳಿದುದರ ಅಭಿಪ್ರಾಯವೇನು ಎಂದರೆ ಕ್ಲಿಪ್ತವಾಗಿ ವಿಹಿತ ಕಾಲದಲ್ಲಿ ನಿದ್ರೆಯು ಸಾತ್ವಿಕ ರಾಜಸ ಧೃತ್ಯಧಿಕಾರಿಗಳಿಗುಂಟು. ಈತನಗಾದರೋ, ನಿಷಿದ್ಧ ಕಾಲಗಳಲ್ಲೂ, ನಿದ್ರಾಕಾಲ ಪರಿಮಿತಿ ಎಷ್ಟೋ ಅಷ್ಟಿಲ್ಲದೆ ಹೆಚ್ಚಾಗಿ ಉದಯಾಸ್ತಮಯ ಮಧ್ಯಾಹ್ನ ಕಾಲಗಳಲ್ಲೂ ತೂಗಡಿಸುತ್ತಾ ಅಥವಾ ನಿದ್ರಿಸುತ್ತಾ ಇರೋಣವು ಇಲ್ಲಿ ನಿಂದಿಸಲ್ಪಟ್ಟಿತು. ಇದು. ನಿದ್ರೆಯನ್ನುಂಟುಮಾಡುವ ಪದಾರ್ಥಗಳಲ್ಲಿ ಅಭಿರುಚಿಯು ಹೆಚ್ಚಿ, ಅವುಗಳನ್ನು ಸೇವಿಸುವದರಿಂದ ಉಂಟಾಗಬಹುದು; ಆದುದರಿಂದ ಲಾಕ್ಷಣಿಕವಾಗಿ ಅರ್ಥಮಾಡಲ್ಪಟ್ಟಿತು. ಹಾಗೆಯೇ ಮದವೂ ಕೂಡ-ಆ ಪ್ರಕಾರವಾಗಿಯೇ ಮದ್ಯಪಾನಾದಿಗಳಿಂದ ಉಂಟಾಗಬಹುದು ಈ ತಾಮಸಧೃತಿಯು ಅಂತಹ ಫಲಗಳನ್ನುಂಟುಮಾಡುವ ಮನಃ ಪ್ರಾಣೇನ್ದ್ರಿಯಗಳ ವ್ಯಾಪಾರಗಳನ್ನು ಧರಿಸುತ್ತದೆ ಎಂದು ಹೇಳಲ್ಪಟ್ಟಿತು. ಹಿಂದಿನ ಎರಡು ಶ್ಲೋಕಗಳಲ್ಲಿ **ಧಾರಯತೇ** ಎಂದು ಹೇಳಿ, ಇಲ್ಲಿ ಮಾತ್ರ **ನವಿಮುಂಚತಿ** ಎಂದು ಹೇಳಲು ಕಾರಣವೇನೆಂದರೆ, ಹಿಂದಿನ ಎರಡು ಧೃತ್ಯಧಿಕಾರಿಗಳೂ, ಮನಃ ಪ್ರಾಣೇನ್ದ್ರಿಯ ವ್ಯಾಪಾರಗಳು ಅನಿಷ್ಟ ಫಲ ಹೇತುವೆಂದು ತೋರಿದರೆ ಅವುಗಳನ್ನು **ವಿಮುಂಚಂತಿ** ಬಿಟ್ಟು ಬಿಡುವರು. ಈ ತಾಮಸಧೃತ್ಯಧಿಕಾರಿಯಾದರೋ ವಿಷಮ ಫಲವೆಂದು ತೋರಿದರೂ ಒಂದು ಸಲ ವಿಷಮ ಫಲವೇ ಪ್ರಾಪ್ತವಾದರೂ, **ನವಿಮುಂಚತಿ**-ಬಿಟ್ಟುಬಿಡುವದಿಲ್ಲವು; ಅದನ್ನೇ ಪುನಃ ಪುನಃ ಹಿಡಿದು ಧರಿಸುವನು ಇಸ್ಪೀಟು ಆಡುವವನು ಕಾಲಹರಣ, ಧನವ್ಯಯ, ಮಿತ್ರರಲ್ಲಿ ಜಗಳ, ಉಂಟಾಗುತ್ತದೆಂದು ತಿಳಿದರೂ, ಇಸ್ಪೀಟು ಆಟವನ್ನು ಬಿಡನು. ಹಾಗೆಯೇ ಮಧ್ಯಪಾಯಿಯೂ ವೇಶ್ಯಾಸ್ತ್ರೀ ಸಙ್ಗವುಳ್ಳವನೂ ಭಂಗೀ ಕುಡಿಯುವನೂ, ಇತ್ಯಾದಿ ದುರ್ವ್ಯಸನಿಯವರೆಲ್ಲಾ ಇದಕ್ಕೆ ನಿದರ್ಶನವು; ಇಂತಹ ದುರ್ವ್ಯಾಪಾರಗಳು ಸ್ವಲ್ಪದರಲ್ಲಿ ಬಿಟ್ಟುಹೋಗತಕ್ಕದಿಲ್ಲವೆಂದು ತಿಳಿಸುವದಕ್ಕಾಗಿಯೇ ಮಹರ್ಷಿಯು ಮೇಲೆ ಹೇಳಿದ ಸಾತ್ವಿಕಾದಿ ಸಂದರ್ಭದಲ್ಲಿ ಪ್ರಯೋಗಿಸಿದ **ಧಾರಯತೇ** ಎಂಬ ಪ್ರಯೋಗಕ್ಕೆ ಬದಲಾಗಿ ಇಲ್ಲಿ **ನವಿಮುಞ್ಚತಿ** ಎಂಬ

**ಭಾಷ್ಯವು.** **ಯಯಾಧೃತ್ಯಾ, ಸ್ವಪ್ನಂ-ನಿದ್ರಾಂ, ಮದಂ-ವಿಷಯಾನು ಭವಜನಿತಂ ಮದಂ, ಸ್ವಪ್ನಮದಾ ವುದ್ದಿಶ್ಯ ಪ್ರವೃತ್ತಾ ಮನಃ ಪ್ರಾಣಾದೀನಾಂ ಕ್ರಿಯಾಃ, ದುರ್ಮೇಧಾ ನ ವಿಮುಂಚತಿ-ಧಾರಯತಿ, ಭಯ ಶೋಕ ವಿಷಾದ ಶಬ್ದಾಶ್ಚ ಭಯಶೋಕಾದಿದಾಯಿ ವಿಷಯಪರಾಃ, ತತ್ಸಾಧನ ಭೂತಾಶ್ಚ, ಮನಃಪ್ರಾಣಾದಿ ಕ್ರಿಯಾಃ, ಯಯಾ ಧಾರಯತೇ, ಸಾ ಧೃತಿಸ್ತಾಮಸೀ || ೩೫ ||**

---

ಸಾರ್ಥವತ್ತಾದ ಪ್ರಯೋಗವು. ಹಾಗೆಯೇ ಭಯ ಶೋಕ ವಿಷಾದಗಳು ಸಾತ್ವಿಕ ರಾಜಸ ಧೃತ್ಯಧಿಕಾರಿಗಳಿಗೆ ಒಂದು ವೇಳೆ ಪ್ರಾಪ್ತವಾಗಬಹುದೆಂದು ತೋರಿದರೆ, ಅವರು ಅಂತಹ ಪ್ರವೃತ್ತಿಯನ್ನು ಸಾತ್ವಿಕ ಧೃತ್ಯಧಿಕಾರಿಯು ಎಂದಿಗೂ ಅವಲಂಬಿಸನು; ರಾಜಸಿಯು ಒಂದು ವೇಳೆ ಪ್ರಾರಂಭಿಸಿದರೂ ಅದು ಭಯ ಶೋಕ ವಿಷಾದ ಪ್ರದಾಯಕವೆಂದು ತಿಳಿದು **ವಿಮುಂಚತಿ**-ಬಿಟ್ಟುಬಿಡುವನು. ಈತನು ಹಾಗಲ್ಲವು, **ನವಿಮುಂಚತಿ.** ಹೀಗಿರುವದರಿಂದಲೇ ಈ ಧೃತ್ಯಧಿಕಾರಿಯು **ದುರ್ಮೇಧಾಃ**-ಅವಿವೇಕ ಜ್ಞಾನವುಳ್ಳವನು ಎಂದು ನಿಂದಿಸಲ್ಪಟ್ಟನು. ಅವಿವೇಕವೆಲ್ಲಿ ಎಂದರೆ ಏನೋ ಸರಿಯಾದ ಜ್ಞಾನವಿಲ್ಲದೆ ಒಂದು ಸಲ ದುರ್ವ್ಯಾಪಾರವನ್ನು ಅವಲಂಬಿಸಿ ವಿಷಮ ಫಲವನ್ನನುಭವಿಸಿಯಾಯಿತು. ಮುಂದಕ್ಕಾದರೂ ಬಿಡಬಹುದೋ? ಎಂದರೂ ಪುನಃ **ನವಿಮುಂಚತಿ**-ಆದುದರಿಂದಲೇ **ದುರ್ಮೇಧಾಃ** ಎಂದು ನಿಂದಿಸಲ್ಪಟ್ಟನು. ಸಾತ್ವಿಕ ಧೃತ್ಯಧಿಕಾರಿಯು ಶ್ಲಾಘನೀಯನು; ಏಕೆಂದರೆ, ಆತನಿಗೆ ಅವ್ಯಭಿಚರಿತ ಯೋಗ ಪ್ರಾಪ್ತಿಯಲ್ಲಿ ಆಶೆಯಾಗಿ ಅದಕ್ಕನುಕೂಲಗಳಾದ ಪ್ರವೃತ್ತಿಯುಳ್ಳವನು. ರಾಜ ಸಧೃತ್ಯಧಿಕಾರಿಯ ಪ್ರವೃತ್ತಿಗಳು ಅಲ್ಪಾಸ್ಥಿರ ಫಲಗಳಿಗಾಗಿಯಾದುದರಿಂದ ಫಲಕಾಂಕ್ಷೀ ಎಂದು ಅಲ್ಪವಾಗಿ ಶ್ರೀ ಕೃಷ್ಣ ಭಗವಾನರವರು ನಿಂದಿಸಿದರು. ಈ ತಾಮಸಧೃತ್ಯಧಿಕಾರಿಯ ಪ್ರವೃತ್ತಿಗಳೆಲ್ಲಾ ದುರ್ವೃತ್ತಗಳಾಗಿ ದುಷ್ಟಫಲ ಪ್ರದಗಳಾದುದರಿಂದ ಆತನನ್ನು **ದುರ್ಮೇಧಾಃ** ಎಂದು ಪ್ರಬಲವಾಗಿ ನಿಂದಿಸಿದರು.

ಭಾಷ್ಯಾರ್ಥವು—ತಾಮಸಧೃತಿಯ ಲಕ್ಷಣವನ್ನೂ, ಅದು ಉಂಟುಮಾಡುವ ವಿಷಮ ಫಲಗಳನ್ನೂ, ತಿಳಿಸುತ್ತಾರೆ; ಹಾಗೆ ತಿಳಿಸುವದರಲ್ಲಿ ಇದಕ್ಕೂ ರಾಜಸ ಧೃತಿಗೂ ಇರುವ ವ್ಯತ್ಯಾಸವನ್ನು ತೋರ್ಪಡಿಸಿ, ಇಂತಹ ಧೃತ್ಯಧಿಕಾರಿಯು ದುರ್ವೃತ್ತನೆಂದು ಹೇಳುವದಕ್ಕಾಗಿ ಆತನು ಸಂಪೂರ್ಣವಾಗಿ ಅವಿವೇಕಿಯು ಎಂದು **ದುರ್ಮೇಧಾಃ** ಎಂಬ ಪ್ರಯೋಗದಿಂದ ಪ್ರಕಟಿಸುತ್ತಾರೆ—**ಯಯಾಧೃತ್ಯಾ**-ಯಾವ ಧೃತಿಯಿಂದ, ಹಿಡಿದು ಕೆಲಸ ಮಾಡಬೇಕೆಂಬ ಉದ್ದೇಶವೇ ಧೃತಿ ಎಂದು ಹಿಂದೆಯೇ ಹೇಳಲ್ಪಟ್ಟಿತು. ಆದುದರಿಂದಲೇ **ಧೃತ್ಯಾಧಾರಯತೇ** ಎಂದು ಹಿಂದೆ ಪ್ರಯೋಗವಿರುತ್ತದೆ. **ಧೃತಿರ್ಧಾರಣಧೈರ್ಯಯೋಃ** ಎಂದು ನಿಘಂಟು ಇರುತ್ತದೆ; ಧೈರ್ಯವೆಂಬರ್ಥಕ್ಕೆ ಈ ಮೂರು ಶ್ಲೋಕಗಳಲ್ಲೂ ಪ್ರಕರಣವಿಲ್ಲವಾದುದರಿಂದ ಇಲ್ಲೆಲ್ಲಾ **ಧಾರಣ**ವೆಂಬ ಅರ್ಥವೇ; ಯಾವ ಧೃತಿಯಿಂದ, **ಸ್ವಪ್ನಂ** ಎಂದರೆ **ನಿದ್ರಾಂ**-ನಿದ್ರೆಯನ್ನೂ, ಇದು ಸುಷುಪ್ತಿಗೂ ಉಪಲಕ್ಷಣವೆಂದು ಭಾವಿಸಿ **ನಿದ್ರಾಂ** ಎಂಬ ಭಾಷ್ಯವು, **ಮದಂ** ಎಂದರೆ **ವಿಷಯಾನುಭವಜನಿತಮದಂ**-ವಿಷಯಗಳ ಅನುಭವದಿಂದುಂಟಾದ ಮದವನ್ನೂ, ಹೀಗೆ ಹೇಳಿದುದರ ತಾತ್ಪರ್ಯವೇನೆಂಬುದನ್ನು ಉಪಪಾದಿಸುತ್ತಾರೆ—**ಸ್ವಪ್ನಮದಾ ವುದ್ದಿಶ್ಯ ಪ್ರವೃತ್ತಾಃ ಮನಃ ಪ್ರಾಣಾದೀನಾಂ ಕ್ರಿಯಾಃ**-ಸ್ವಪ್ನ ಮದಫಲಗಳನ್ನುದ್ದೇಶಿಸಿ ಪ್ರವರ್ತಿಸಲ್ಪಟ್ಟ ಮನಸ್ಸು, ಪ್ರಾಣ, ಇಂದ್ರಿಯಗಳ ವ್ಯಾಪಾರಗಳನ್ನು, **ದುರ್ಮೇಧಾಃ**-ಅವಿವೇಕಿಯಾದವನು, **ನವಿಮುಂಚತಿ**-ಬಿಡುವದಿಲ್ಲವೋ, ಎಂದರೆ **ಧಾರಯತಿ**-ಧರಿಸುವನೋ ಎಂದರೆ ಒಡಿದು ನಡೆಸುವನೋ, **ಸಾಧೃತಿಸ್ತಾಮಸೀ** ಎಂದು ವಾಕ್ಯ **ಪೂರಣವು** ಮುಂದೆ ಇರುತ್ತದೆ. ಮೂಲ

ಲ್ಲಿರುವ **ಸ್ವಪ್ನಂ ಮದಂ** ಇವೆರಡು ಪರಸ್ಪರ ಸಂಬಂಧವಿರುವ ಪದಗಳನ್ನು ಮಾತ್ರ ತೆಗೆದು ಕೊಂಡು ವ್ಯಾಖ್ಯಾನ ಮಾಡಿದರು. **ಭಯಂ ಶೋಕಂ ವಿಷಾದಂ** ಎಂಬ ಮೂರು ಪದಗಳು ಬಿಟ್ಟು ಹೋದವು. ಅವುಗಳ ತಾತ್ಪರ್ಯವನ್ನು ಮುಂದೆ ತಿಳಿಸುತ್ತಾರೆ—**ಭಯ ಶೋಕ ವಿಷಾದ ಶಬ್ದ**ಗಳಾದರೋ, **ಭಯ ಶೋಕ ವಿಷಾದದಾಯಿ ವಿಷಯಪರಾಃ**-ಭಯ ಶೋಕ ವಿಷಾದ ಗಳನ್ನು ಕೊಡುವ ವಸ್ತುಗಳನ್ನು ಬೋಧಿಸುತ್ತವೆ, ಮತ್ತು **ತತ್ಸಾಧನಭೂತಾಶ್ಚ**-ಅವುಗಳಿಗೆ ಹೇತು ಭೂತವಾದವುಗಳನ್ನೂ ಸಹ ಬೋಧಿಸ ತ್ತವೆ; ಆದುದರಿಂದ ಅಂತಹ **ಮನಃ ಪ್ರಾಣಾದಿ ಕ್ರಿಯಾಃ**-ಮನಸ್ಸು, ಪ್ರಾಣ, ಇಂದ್ರಿಯಗಳ ವ್ಯಾಪಾರಗಳನ್ನು, **ಯಯಾಧಾರಯತೇ**-ಯಾವ ಧೃತಿಯಿಂದ ಧರಿಸುವನೋ, ಹಿಡಿದು ನಡೆಸುವನೋ, **ಸಾಧೃತಿಃ**-ಅಂತಹ ಧಾರಣೆಯು, **ತಾಮಸೀ**-ತಾಮಸೀ ಎಂದು ಹೇಳಲ್ಪಡುತ್ತದೆ. ಇಲ್ಲಿ ಸ್ವಪ್ನಾದಿಗಳೆಲ್ಲಾ ಒಟ್ಟಿಗೆ ಹೇಳಿರು ವಾಗ, ಸ್ವಪ್ನ ಮದಗಳನ್ನು ಒಂದು ಸಲವೂ, ಅನಂತರ ಶೋಕಾದಿಗಳನ್ನು ಅನಂತರ ಬೇರೇ ವಿಧವಾಗಿಯೂ ವ್ಯಾಖ್ಯಾನಿಸಲು ಕಾರಣವೇನೆಂದು ಕೇಳುವದು ನ್ಯಾಯವಾದುದು. ತಮೋ ಗುಣಾಧಿಕ್ಯವುಳ್ಳ ಅಧಿಕಾರಿಯು ನಿದ್ರಾ ಮದಗಳ ಉದ್ದಿಶ್ಯವಾಗಿ ಮನಃ ಪ್ರಾಣೇನ್ದ್ರಿಯ ವ್ಯಾಪಾರಗಳಲ್ಲಿ ಪ್ರವೃತ್ತಿಯುಳ್ಳವನಾಗಬಹುದು ಏಕೆಂದರೆ, ಆತನು ಅವು ಸುಖರೂಪವೆಂದು ಭಾವಿಸಿ ಅವುಗಳಲ್ಲಿ ಅಭಿಮಾನವನ್ನಿಟ್ಟಿರುವನು. ಭಯ ಶೋಕ ವಿಷಾದಗಳ ಉದ್ದಿಶ್ಯವಾಗಿ ಪ್ರವೃತ್ತಿಯಿಲ್ಲವು; ಆದುದರಿಂದ ಭಯ ಶೋಕ ವಿಷಾದಗಳುಂಟಾಗುವ ಮನಃ ಪ್ರಾಣೇನ್ದ್ರಿಯ ವ್ಯಾಪಾರಗಳಲ್ಲಿ ನಿರತನಾಗುವನಾದುದರಿಂದ, ಹಾಗೆ ಎರಡಾಗಿ ಶ್ರೀ ಯತಿಪರ್ಯರು ವಿಂಗಡಿಸಿ ಕೊಂಡರೆಂದು ಭಾವಿಸಬಹುದು. ನಿದ್ರಾ ಮದಗಳು ಆತನಿಗೆ ಇಷ್ಟವು, ಇನ್ನು ಮೂರು ಇಷ್ಟವಿಲ್ಲವುವು. ಅಂತೂ ಆ ದುರ್ಮೇಧಾ ವಾದ ತಾಮಸಧೃತ್ಯಾಧಿಕಾರಿಯು ಮಾಡುವ ಮನಃ ಪ್ರಾಣೇನ್ದ್ರಿಯ ವ್ಯಾಪಾರಗಳೆಲ್ಲಾ ಈ ಐದು ಫಲಗಳನ್ನೂ ಉಂಟುಮಾಡುವುವು. ಎಂಬ ಭಾವವು. ಇದಕ್ಕೆ ನಿದರ್ಶನವಾಗಿ ರಾವಣನು ಪರಸ್ತ್ರೀ ಅಪಹಾರಗಳಿಗಾಗಿ ಪುನಃ ಪುನಃ ಪ್ರಯತ್ನಿಸಿ ನಡೆಸಿ ಕೊನೆಗೆ ಸೀತಾಪಹಾರಕ್ಕೂ ವಿಶೇಷ ಪ್ರಯತ್ನಮಾಡಿ, ಅದು ಸರಿ ಯಲ್ಲವೆಂದು ತನ್ನ ಸಾತ್ವಿಕ ತಮ್ಮ ಮೊದಲಾಗಿ ಅನೇಕರ ಬುದ್ಧಿ ವಾದಕ್ಕೂ ಗಮನಿಸದೇ ಕೆಟ್ಟನು. ಹಾಗೆಯೇ ದುರ್ಯೋಧನನೂ ಸಹ ತಾಮಸಧೃತಿಯಿಂದ ಕೆಟ್ಟನು. ||೩೫||

**ಮೂಲಕ್ಕೆ ಅರ್ಥವು**—ಇದುವರೆಗೂ ಜ್ಞಾನ ಕರ್ಮ, ಕರ್ತಾ, ಬುದ್ಧಿ, ಧೃತಿ, ಇವು ಗಳೆಲ್ಲಾ ಅಧಿಕಾರಿಯಲ್ಲಿರುವ ಸತ್ವರಜಸ್ತಮೋ ಗುಣಗಳ ಆಧಿಕ್ಯದಿಂದ ತ್ರಿವಿಧವೆಂದೂ ಅವುಗಳ ಲಕ್ಷಣಗಳನ್ನೂ ಫಲಗಳನ್ನೂ ಹೇಳಿ ಮುಗಿಸಿದರು. ಸಾಧಾರಣವಾಗಿ ಸರ್ವರೂ ಅಪೇಕ್ಷಿಸುವದು ಅನುಕೂಲಾವಸ್ಥೆಯು; ಇದಕ್ಕೆ ಸುಖವೆಂದು ಹೆಸರು. ಹೀಗೆ ಎಲ್ಲಾ ವಿಧ ಅನುಕೂಲ ಸ್ಥಿತಿಯೂ ಒಳ್ಳೆಯದು ಎಂದು ಭಾವಿಸತಕ್ಕದ್ದಲ್ಲವೆಂದು ಅದರಲ್ಲೂ ತಾರತಮ್ಯ ಉಂಟು, ಸಾತ್ವಿಕ ಸುಖವು ಉಪಾದೇಯವೇ ವಿನಾ ರಾಜಸ ತಾಮಸ ಸುಖಗಳಲ್ಲವು ಎಂದು ತಿಳಿಸುವದ ಕ್ಕಾಗಿ ಸುಖವೂ ಕೂಡ ಮೂರು ವಿಧವೆಂದು ಹೇಳಿ, ಅವುಗಳ ಲಕ್ಷಣವನ್ನು ತಿಳಿಸುವದಕ್ಕಾಗಿ ಈ ಶ್ಲೋಕಾರ್ಥವು ಪ್ರತಿಜ್ಞಾ ವಾಕ್ಯವು. ಎಲ್ಲಾ ವಿಧ ಸುಖಗಳೂ ಉಪಾದೇಯವಲ್ಲವು, ಅವುಗಳಲ್ಲೂ ತಾರತಮ್ಯ ಉಂಟೆಂದು ಹೇಳುವದಕ್ಕಾಗಿಯೂ ಮತ್ತು ಜ್ಞಾನ ಕರ್ಮ ಕರ್ತ್ರಾದಿ ಗಳು ಹೇಗೆ ಮೂರು ವಿಧವೋ ಹಾಗೆಯೇ ಸುಖವೂ ಸಹ ಎಂದು ತಿಳಿಸುವದಕ್ಕಾಗಿಯೂ, **ಸುಖಂತು** ಎಂಬ ವ್ಯಾಖ್ಯಾನವು. **ಹೇಭರತರ್ಷಭ**-ಓ ಭರತವಂಶ ಶ್ರೇಷ್ಠನಾದ ಅರ್ಜು ನನೇ, **ಇದಾನೀಂ**-ಈಗಲಾದರೋ, **ಸುಖಂತು**-ಸುಖವೂ ಕೂಡ, **ತ್ರಿವಿಧಂ**-ಸಾತ್ವಿಕ ರಾಜಸ ತಾಮಸ ಭೇದದಿಂದ ಮೂರು ವಿಧವನ್ನುಳ್ಳದ್ದನ್ನು, **ಮೇ**-ಪರಮಹಿತೈಷಿಯಾಗಿ ಪರಮ ಹಿತವನ್ನು ಬೋಧಿಸಿದ ನನ್ನಿಂದ, **ಶೃಣು**-ಮುಖ್ಯವಾಗಿ ಸಾವಧಾನದಿಂದ ಕೇಳು; ನಿನಗೆ ಹಿಂದೆ **ಜ್ಞಾನ, ಕರ್ಮ, ಕರ್ತಾ, ಬುದ್ಧಿ, ಧೃತಿ**ಗಳೆಲ್ಲಾ ಮೂರು ವಿಧಗಳೆಂದು ಹೇಳಿದುದಾ ಯಿತು, ಈಗಲಾದರೋ ಈ ತಾರತಮ್ಯ ಜ್ಞಾನದಿಂದ ನೀನು ಮುಖ್ಯವಾಗಿ ಹೊಂದತಕ್ಕದ್ದು

**ಮೂ. ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।**
**ಭಾ. ಪೂರ್ವೋಕ್ತಾ ಸ್ಸರ್ವೇ ಜ್ಞಾನಕರ್ಮ ಕರ್ತ್ರಾದಯೋ ಯಚ್ಛೇಷ ಭೂತಾಃ ತಚ್ಚ ಸುಖಂ ಗುಣತ ಸ್ತ್ರಿವಿಧ ಮಿದಾನೀಂಶೃಣು.**

---

ಯಾವುದೆಂದರೆ ಸುಖವು ; ಅದರ ವಿಷಯವು ನಿನಗೆ ಈಗ ಮುಖ್ಯವಾಗಿ ಹೇಳಬೇಕಾದುದರಿಂದ **ಇದಾನೀಂ** ಎಂಬ ಪ್ರಯೋಗವು ; ಎಲ್ಲಾ ಸುಖವೂ ನಿನಗೆ ಉಪಾದೇಯವಲ್ಲವು, ಸಾತ್ವಿಕ ಸುಖ ಮಾತ್ರವೇ ನಿನಗೆ ಉಪಾದೇಯುವು ಎಂದು ಉತ್ತರಾರ್ಧದಿಂದ ಪ್ರತಿಜ್ಞಾ ವಾಕ್ಯವಾಗಿ ತಿಳಿಸಿ, ಅದರ ಲಕ್ಷಣವನ್ನು ಮುಂದಿನ ಶ್ಲೋಕದಲ್ಲಿ ವ್ಯಕ್ತಗೊಳಿಸುತ್ತಾರೆ. ಹಿಂದಕ್ಕೂ ಮುಂದಕ್ಕೂ ಸಙ್ಗತಿಯು ಹೇಗೆಂದರೆ—ಹಿಂದೆ ಹೇಳಲ್ಪಟ್ಟ ಜ್ಞಾನಕ್ರಿಯಾ ಮೊದಲಾದವುಗಳು ಏತಕ್ಕಾಗಿ ಎಂದರೆ ಸುಖಕ್ಕಾಗಿ ; ಸುಖವೂ ಮೂರು ವಿಧವಾಗಿರುವುದರಿಂದ ಸರ್ವೋತ್ಕೃಷ್ಟ ಸಾತ್ವಿಕ ಸುಖವೇ ಗ್ರಾಹ್ಯವೆಂದು ತಿಳಿಸುವದೇ ಪ್ರಕರಣವೂ ಸಙ್ಗತಿಯೂ; ಶ್ರೀ ಯತಿವರ್ಯರು ಈ ಸಙ್ಗತಿಯನ್ನು ತಿಳಿಸುವದಕ್ಕಾಗಿ **ಜ್ಞಾನ ಕರ್ತ್ರಾದಯೋ ಯಚ್ಛೇಷಭೂತಾಃ** ಎಂದು ಪ್ರಯೋಗಿಸಿರುತ್ತಾರೆ. ಶ್ರೀ ಶಂಕರಾಚಾರ್ಯರವರೂ ಹೀಗೆಯೇ ಸಙ್ಗತಿಯನ್ನು "**ಅಥ ಇದಾನೀಂ** ಫಲಸ್ಯ ಸುಖಸ್ಯ ತ್ರಿವಿಧೋ ಭೇದ ಉಚ್ಯತೇ" ಎಂಬ ವಾಕ್ಯದಿಂದ **ವ್ಯಕ್ತಪಡಿ**ಸಿರುತ್ತಾರೆ. ||೩೬||

**ಭಾಷ್ಯಾರ್ಥವು—ಪೂರ್ವೋಕ್ತಾ ಸ್ಸರ್ವೇ**-ಹಿಂದೆ ಹೇಳಲ್ಪಟ್ಟ ಸಮಸ್ತಗಳಾದ, ಇದು ತು ಶಬ್ದಾರ್ಥವು, **ಜ್ಞಾನಕರ್ಮಕರ್ತ್ರಾ ದಯಃ**-ಜ್ಞಾನಕರ್ಮಕರ್ತ್ರಾ ಆದಿ ಪದದಿಂದ ಬುದ್ಧಿ ಧೃತಿಗಳೆಲ್ಲಾ, **ಯಚ್ಛೇಷಭೂತಾಃ**-ಯಾವ ಸುಖಕ್ಕೆ ಸಾಧನಭೂತಗಳಾಗಿರುವವೋ, ಆ ಕಾರಣದಿಂದ, **ತಚ್ಚ ಸುಖಂ**-ಆ ಸುಖವೂ ಕೂಡ, ಇಲ್ಲಿ ಮೂಲದ ಶಬ್ದವಾದ **ತು** ಶಬ್ದವು ವ್ಯಾವೃತ್ತ್ಯವಲ್ಲದೆ, ಸಮುಚ್ಚಯಾರ್ಥವುಳ್ಳದ್ದೆಂದು **ಸುಖಂತು** ಎಂಬುದಕ್ಕೆ **ತಚ್ಚ ಸುಖಂ** ಎಂದು ವ್ಯಾಖ್ಯಾನವು, **ಗುಣತಃ**-ಸತ್ವರಜಸ್ತಮೋ ಗುಣಗಳ ಮೂಲಕವಾಗಿ, **ತ್ರಿವಿಧಂ**-ಮೂರು ವಿಧವನ್ನು ಉಳ್ಳದು, **ಇದಾನೀಂ**-ಈಗ, ಎಂದರೆ ಹಿಂದೆ ಸಾಧನಗಳಾದ ಜ್ಞಾನ ಕ್ರಿಯಾದಿಗಳನ್ನು ಹೇಳಿದ ನಂತರ ಅವುಗಳಿಂದ ಸಾಧ್ಯವಾದ ಸುಖವನ್ನು ಕುರಿತು ಹೇಳುವದು ಸಙ್ಗತವಾದ ಈ ಸಮಯದಲ್ಲಿ, **ಶೃಣು**-ಆ ವಿಷಯವು ನಿನಗೆ ಪರಮಹಿತವಾದ ಪ್ರಯುಕ್ತ ಚನ್ನಾಗಿ ಮನಸ್ಸನ್ನಿಟ್ಟು ಕೇಳು ಎಂಬ ಭಾವವು. ಇಲ್ಲಿ **ಪೂರ್ವೋಕ್ತಾಸ್ಸರ್ವೇ ಜ್ಞಾನಕರ್ತ್ರಾದಯೋ ಯಚ್ಛೇಷಭೂತಾಃ ತಚ್ಚ ಸುಖಂ** ಎಂಬ ವ್ಯಾಖ್ಯಾನವು ಮೂಲದಲ್ಲಿರುವ ಬರೀ **ಸುಖಂ** ಎಂಬುದಕ್ಕೆ ಹೇಗೆ? ಎಂಬುದಾಗಿ ಪ್ರಶ್ನಿಸಬಹುದು. ಹಿಂದೆ ಹೇಳಿದುದಕ್ಕೂ ಮುಂದೆ ಹೇಳುವುದಕ್ಕೂ ಸಙ್ಗತಿಯನ್ನು ಸೂಚಿಸುವುದಕ್ಕಾಗಿ **ಇದಾನೀಂ** ಎಂಬ ಪದದಿಂದ ಅರ್ಥವಾಗಿ ತೋರುವ ಅಭಿಪ್ರಾಯವನ್ನು ಸ್ಪಷ್ಟಪಡಿಸಿರುತ್ತಾರೆ ಎಂಬುದು ಉತ್ತರವು. ಜ್ಞಾನಕರ್ತ್ರಾದಿಗಳೆಲ್ಲಾ ಏತಕ್ಕಾಗಿ ? ಎಂದರೆ ಸುಖಕ್ಕಾಗಿ ಎಂಬುದು ವ್ಯಕ್ತವು. ಅಂತಹ ಸುಖವೂ ಕೂಡ ಮೂರು ವಿಧವೆಂದು ಈಗ ಹೇಳುತ್ತೇನೆಂದು ಪ್ರತಿಜ್ಞಾ ವಾಕ್ಯವನ್ನು ದಯಪಾಲಿಸಿದರು. ಉತ್ಕೃಷ್ಟವಾದ ಸುಖವು ಯಾವುದು ಎಂಬುದನ್ನು ಮುಂದಿನ ೧|| ಶ್ಲೋಕಗಳಿಂದ ತಿಳಿಯಪಡಿಸಿ, ಅದೇ ಸಾತ್ವಿಕ ಸುಖವೆಂದು ಹೇಳಿಸಿಕೊಳ್ಳುತ್ತದೆಂದು ತಿಳಿಸುತ್ತಾರೆ—**ಪೂರ್ವೋಕ್ತಾಸ್ಸರ್ವೇ ಜ್ಞಾನಕರ್ತ್ರಾದಯಃ** ಎಂದು ಹೇಳಿದುದನ್ನು ಇಲ್ಲಿ ತಂದಿರುವದು, ಈಗ ಹೇಳುವ ಸುಖದ ವಿಷಯಕ್ಕೂ ಇರುವ ಸಙ್ಗತಿಯನ್ನು ಸೂಚಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು ; ಜ್ಞಾನಕರ್ತ್ರಾದಿಗಳಿಗೂ ಸುಖಕ್ಕೂ ಏನು ಸಂಬಂಧವು ? ಎಂದು ಪ್ರಶ್ನಿಸಿದರೆ ಅದಕ್ಕೆ ಉತ್ತರವಾಗಿ **ಯಚ್ಛೇಷಭೂತಾಃ**-ಯಾವ ಈಗ ಹೇಳಲ್ಪಡುವ ಸುಖಕ್ಕೆ ಅವು ಹೇತು ಭೂತಗಳೋ ಎಂದು ಹೀಗೆ ಸಙ್ಗತಿಯನ್ನು ತೋರಿಸಿರುತ್ತಾರೆ. ಯಾವುದು

**ಮೂ. ಅಭ್ಯಾಸಾದ್ರಮತೇ, ಯತ್ರ, ದುಃಖಾನ್ತಂಚ ನಿಗಚ್ಛತಿ || ೩೬ ||**

**ಭಾ. ಯಸ್ಮಿನ್ಸುಖೇ, ಚಿರಕಾಲಾಭ್ಯಾಸಾತ್ ಕ್ರಮೇಣ ನಿರತಿಶಯಾಂ ರತಿಂ ಪ್ರಾಪ್ನೋತಿ, ದುಃಖಾನ್ತಂಚ ನಿಗಚ್ಛತಿ-ನಿಖಿಲಸ್ಯ ಸಾಂಸಾರಿಕಸ್ಯ ದುಃಖಸ್ಯಾನ್ತಂ ನಿಗಚ್ಛತಿ || ೩೬ ||**

**ಅವ. ಅವ. ತದೇವ ವಿಶಿನಷ್ಟಿ—**

---

ಸರ್ವೋತ್ಕೃಷ್ಟ ಸುಖವೆಂಬುದನ್ನು ಉತ್ತರಾರ್ಧದಿಂದ ತಿಳಿಸುತ್ತಾರೆ. **ಭರತರ್ಷಭ** ಎಂಬ ಸಂಬೋಧನೆಯಿಂದ ಭರತಕುಲ ಶ್ರೇಷ್ಠನೆಂದು ಹೇಳಿರುವದು ಮುಂದೆ ಹೇಳುವ ಸಾತ್ವಿಕ ಸುಖಕ್ಕೇ ನೀನು ಅರ್ಹನೇ ವಿನಾ ರಾಜಸ ತಾಮಸಗಳಿಗೆ ಅಲ್ಲವೆಂದೂ, ಭರತನು ಹಿಂದೆ ಸಾತ್ವಿಕ ಸುಖಾಭಿಲಾಷಿಯಾಗಿಯೇ ಇದ್ದನೆಂದೂ, ಅದರ ಹಾಗೆ ನೀನೂ ಸಹ ಸಾತ್ವಿಕ ಜ್ಞಾನ, ಕರ್ಮಾದಿಗಳಿಂದ ಸಾತ್ವಿಕ ಸುಖಾಭಿಲಾಷಿಯಾಗಿಯೇ ಇರತಕ್ಕದೆಂಬುದು ಸೂಚಿತವು, ಇಲ್ಲಿ **ಮೇ** ಎಂಬುದರಿಂದ ಇತರರ್ಯಾರಾದರೂ ಉಪದೇಶಿಸಿದರೆ ಅಯಥಾರ್ಥವಾದುದನ್ನು ಪ್ರಶಂಸಿಸಿ ಹೇಳಬಹುದು. ಸರ್ವಜ್ಞನಾಗಿಯೂ ಸರ್ವಭೂತ ಹಿತಕ್ಕಾಗಿಯೇ **ವರ್ತ ಏವ ಚಕರ್ಮಣಿ** ಎಂದು ಹೇಳಿಕೊಂಡ ನನ್ನ ಉಪದೇಶದಲ್ಲಿ ನೀನು ಸಂಪೂರ್ಣ ನಂಬಿಕೆ ವಿಶ್ವಾಸಗಳನ್ನಿಟ್ಟು **ಶೃಣು** ಎಂದು ಹೇಳುತ್ತಾರೆ—

**ಮೂಲಕ್ಕೆ ಅರ್ಥವು-ಯತ್ರ**-ಯಾವ ಸುಖದಲ್ಲಿ, **ಅಭ್ಯಾಸಾತ್**-ಬಹುಕಾಲ ಸರ್ವೇಶ್ವರನ ದಿವ್ಯ ಮಙ್ಗಳ ವಿಗ್ರಹವನ್ನು ಕುರಿತು ಉಪಾಸಿಸುವದರ ಅನುಭವದಿಂದ, **ರಮತೇ**-ನಿರತಿಶಯಾನಂದದಲ್ಲಿ ರಮಿಸುವನೋ, ಮತ್ತು **ದುಃಖಾನ್ತಂಚ**-ಸಂಸಾರ ಬಂಧರೂಪದಲ್ಲುಂಟಾಗುವ ಜನ್ಮ ಜರಾಮರಣಾದಿ ಸಮಸ್ತ ದುಃಖಗಳ ಅನ್ತವನ್ನು ಸಹ ಎಂದರೆ ಎಂದೆಂದಿಗೂ ದುಃಖದ ಗಂಧವೇ ಇಲ್ಲದಿರುವ ಗತಿಯನ್ನು, **ನಿಗಚ್ಛತಿ**-ಸಂಪೂರ್ಣವಾಗಿ ಹೊಂದುವನೋ, ಇಲ್ಲಿ ವಾಕ್ಯವು ಪೂರಣವಿಲ್ಲವು. ಆದುದರಿಂದ ಮುಂದಿನ ಶ್ಲೋಕದೊಂದಿಗೆ ಈ ಉತ್ತರಾರ್ಧವನ್ನು ಅನ್ವಯಿಸತಕ್ಕದ್ದು; ಇಲ್ಲಿ **ಅಭ್ಯಾಸ** ಶಬ್ದವು ಸಾಧನಸಪ್ತಗಳಲ್ಲಿ ಒಂದಾದ ಅಭ್ಯಾಸವು ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. ಅಭ್ಯಾಸ **ಶಬ್ದಕ್ಕೆ** 'ಆರಂಭಣ ಸಂಶೀಲನಂ ಪುನಃ ಪುನರಭ್ಯಾಸಃ'' ಎಂಬದಾಗಿ ಭಾಷ್ಯವಿರುತ್ತದೆ. ಆರಂಭಣವೆಂದರೆ ಆಲಂಬನಂ ಶುಭಾಶ್ರಯವು ದಿವ್ಯಮಙ್ಗಳವಿಗ್ರಹವು, ಅದರ ಸಂಶೀಲನವು ಅಭ್ಯಾಸವು. ಇಂತಹ ದಿವ್ಯ ಮಙ್ಗಳ ವಿಗ್ರಹದ ನಿರಂತರ ಚಿನ್ತನದಲ್ಲೇ ರಮಿಸುತ್ತಿದ್ದರೆ ಅಂತಹ ಸುಖದಿಂದ ದುಃಖವಿಲ್ಲದೇನೇ ಇರುವ ಸ್ಥಿತಿಯು ಲಭಿಸುತ್ತದೆಂಬ ತಾತ್ಪರ್ಯವು.

**ಭಾಷ್ಯಾರ್ಥವು—ಯಸ್ಮಿನ್ಸುಖೇ**-ಇದು ಮೂಲದ **ಯತ್ರ** ಎಂಬ ಶಬ್ದದ ಅರ್ಥವು, ಯಾವ ಸುಖದಲ್ಲಿ, **ಚಿರಕಾಲಾಭ್ಯಾಸಾತ್**-ಇದು ಅಭ್ಯಾಸಾತ್ ಎಂಬುದರಿಂದ ಅರ್ಥವಾಗಿ ತೋರುವ ಅರ್ಥವು, ಬಹು ಕಾಲಾನುಭವಮಾಡಿದ ಅಭ್ಯಾಸದಿಂದ **ಕ್ರಮೇಣ-ಉತ್ತರೋತ್ತರ, ನಿರತಿಶಯಾಂ ರತಿಮಾಪ್ನೋತಿ**-ಇದು **ರಮತೇ** ಎಂಬ ಶಬ್ದದ ಅರ್ಥವು, ನಿರತಿಶಯಾನಂದವನ್ನು ಹೊಂದುತ್ತಾ ಜ್ಞಾನವಿಜ್ಞಾನಗಳ ಮೂಲಕ ರಮಿಸುತ್ತಾನೆಯೋ, ಆತ್ಮಸ್ವರೂಪ, ಪರಮಾತ್ಮ ಸ್ವರೂಪಯಾಥಾತ್ಮ್ಯಜ್ಞಾನಗಳಿಂದ ರಮಿಸುತ್ತಾನೆಯೋ, ಹಾಗೆ ರಮಿಸುವದರಿಂದ ಪರಮಾತ್ಮನನ್ನು ನಿರಂತರ ಧ್ಯಾನಿಸುವನಾಗಿ, **ದುಃಖಾನ್ತಂಚ ನಿಗಚ್ಛತಿ** ಎಂದರೆ **ನಿಖಿಲಸ್ಯ ಸಾಂಸಾರಿಕಸ್ಯ ದುಃಖಸ್ಯ ಅನ್ತಂ ನಿಗಚ್ಛತಿ**-ಸಮಸ್ತಗಳಾದ ಸಂಸಾರ ಸಂಬಂಧಗಳಾದ ದುಃಖಗಳ ಕೊನೆಯನ್ನು ಹೊಂದುವ ಅಂತಹ ಸುಖವು ಯಾವುದೋ, **ತತ್ಸುಖಂ ಸಾತ್ವಿಕಂ** ಎಂದು ಮುಂದಿನ ಶ್ಲೋಕದ ಉತ್ತರಾರ್ಧದಲ್ಲಿರುವದರೊಂದಿಗೆ ಅನ್ವಯವು. ಅಂತಹ ಉಪಾಸನ

ದಿಂದ ಮುಂದಕ್ಕೆ ಸಾಂಸಾರಿಕ ಕ್ಲೇಶಗಳು ಯಾವುವೂ ಇಲ್ಲದೆ, ಮೋಕ್ಷವನ್ನು ಹೊಂದುವ ನೆಂಬ ತಾತ್ಪರ್ಯವು. ಇಲ್ಲಿ **ಕ್ರಮೇಣ** ಎಂಬ ಪ್ರಯೋಗಕ್ಕೆ ಕಾರಣವೇನೆಂದರೆ, **ಅಭ್ಯಾಸಾತ್** ಎಂಬ ಪದದಿಂದಲೇ ತೋರಿಬರುತ್ತದೆ; ಮತ್ತು ಈ ಜನ್ಮದಲ್ಲೇ ಆಗಲಿ, ಅಥವಾ ಮುಂದಿನ ಪ್ರಾಪ್ತವಾಗುವ ಸುಕೃತ ಜನ್ಮದಲ್ಲಾಗಲಿ ಆ **ನಿರತಿಶಯ ರತಿಯು** ಉಂಟಾಗಬಹುದೆಂಬ ಭಾವವನ್ನು ಸೂಚಿಸುತ್ತದೆ. ಈ ಅಭಿಪ್ರಾಯವು ಹಿಂದೆ ೧೪ನೆಯ ಅಧ್ಯಾಯದಲ್ಲೇ **"ಸುಖ ಸಙ್ಗೇನ ಬಧ್ನಾತಿ ಜ್ಞಾನಸಙ್ಗೇನ ಚಾನಘ"** ಇಂತಹ ಸಾತ್ವಿಕಾಧಿಕ್ಯದಿಂದುಂಟಾದ ಬಂಧವೂ ಕೂಡ ಉತ್ತರೋತ್ತರ ಶ್ರೇಯಸ್ಕರವೇ. ಆದುದರಿಂದಲೇ **"ಶುಚೀನಾಂ ಶ್ರೀಮತಾಂಗೇಹೇ ಯೋಗಭ್ರಷ್ಟೋಭಿಜಾಯತೇ"** ಎಂದು ಹಿಂದೆಯೇ ಹೇಳಲ್ಪಟ್ಟಿರು ತ್ತದೆ. ಹಾಗೆಯೇ **"ಪಶು ರ್ಮನುಷ್ಯಃ ಪಕ್ಷೀವಾ ಯೇಚ ವೈಷ್ಣವಸಂಶ್ರಯಾಃ । ತೇನೈವ ತೇ ಪ್ರಯಾಸ್ಯಂತಿ ತದ್ವಿಷ್ಣೋಃ ಪರಮಂಪದಮ್"** ಎಂದೂ **"ತವ ದಾಸ್ಯ ಸುಖೈಕಸಙ್ಗಿನಾಂ ಭವನೇಷ್ವಸ್ತ್ವಪಿ ಕೀಟಜನ್ಮಮೇ"** (ಸ್ತೋತ್ರ ರತ್ನ. ೫೫ ಶ್ಲೋಕ) ಎಂದೂ, ಹೇಳಿರುವ ಪ್ರಮಾಣಗಳು **ಕ್ರಮೇಣ** ಎಂಬ ಶಬ್ದಾರ್ಥವನ್ನು ಉಪಪಾದಿಸುತ್ತವೆ. ಹೀಗೆ ಯೋಗಯುಕ್ತನು **ಕ್ರಮೇಣ** ಆನಂದಿಸುವದು ಇಲ್ಲಿಯೂ ಕೂಡ ಲಭಿಸಬಹುದು ಎಂಬುದು '' ತಮೇವಂ ವಿದ್ವಾನ್ ಅಮೃತ ಇಹ ಭವತಿ ' ಎಂಬಲ್ಲಿ ಪ್ರೋಕ್ತವು, ಇದೇ ಗ್ರಂಥ ದಲ್ಲೇ **"ತುಷ್ಯನ್ತಿಚ ರಮನ್ತಿಚ"** (೧೦. ೧೦. ೯) ಎಂದು ಹೇಳಲ್ಪಟ್ಟಿರುತ್ತದೆ. ಇದುವರೆಗೂ ಉಪದೇಶಿಸಿದ ತಾತ್ಪರ್ಯವೇನಾಯಿತು ಎಂದರೆ ಸತ್ವಾಹಾರ ಸಙ್ಗಾದಿಗಳಾದ ಸತ್ವವನ್ನು ವೃದ್ಧಿಗೊಳಿಸಿಕೊಳ್ಳುವನಿಗೆ, ಜ್ಞಾನವೂ ಸಾತ್ವಿಕವಾಗಿ, ಪ್ರವೃತ್ತಿಗಳೂ ಸಾತ್ವಿಕ ಗಳಾಗಿ, ತಾನೂ ಆ ಕಾರಣಗಳಿಂದ ಸಾತ್ವಿಕನೆನಿಸಿ, ಸಾತ್ವಿಕ ಬುದ್ಧಿ ಧೃತಿಗಳುಳ್ಳವನಾದರೆ ಸರ್ವೇಶ್ವರನನ್ನು ಅನನ್ಯಭಕ್ತಿಯಿಂದ ಧ್ಯಾನಿಸುವವನಾಗಿ, ಆತನ ಆರಾಧನಾರೂಪ ಫಲಾಭಿಸಂಧಿ ರಹಿತ ಕರ್ಮಗಳನ್ನೆಸಗುವವನಾಗಿ, ಆತನ ಪ್ರೀತಿಯನ್ನು ಸಂಪಾದಿಸುವನಾಗಿ ಸಂಸಾರ ಬಂಧವನ್ನು ನೀಗಿಕೊಂಡು ಆತನನ್ನೇ ಸೇರುವನು ಎಂದು ಹೇಳಿದಂತಾಯಿತು. ಆದುದರಿಂದ ರಜೋಗುಣ ತಮೋಗುಣಾಭಿವೃದ್ಧಿಗೆ ಈಷತ್ತೂ ಅವಕಾಶವನ್ನು ಕೊಡಕೂಡದೆಂಬುದೂ ಏರ್ಪಟ್ಟಿತು.

**ಭಾಷ್ಯಾವತಾರಿಕೆಯ ಅರ್ಥವು**-ಹಿಂದಿನ ಶ್ಲೋಕದ ಉತ್ತರಾರ್ಧದಲ್ಲಿ ಹೇಳಲ್ಪಟ್ಟ ಸುಖದ ಪರಾಕಾಷ್ಠಾದೆಶೆಗೆ ಹೇತುವಾದ ಸಾತ್ವಿಕ ಲಕ್ಷಣವೆಂತಾದ್ದೆಂದು ಮುಂದಿನ **ಶ್ಲೋಕ** ದಿಂದ ವಿಶೇಷಿಸಿ ಹೇಳಲ್ಪಡುತ್ತದೆಂದು, **ತದೇವವಿಶಿನಷ್ಟಿ**-ಆ ಅಭಿಪ್ರಾಯವನ್ನೇ ವಿಶೇಷಿಸಿ ಹೇಳುತ್ತಾರೆಂದು ಅವತಾರಿಕೆಯನ್ನು ದಯಪಾಲಿಸಿರುತ್ತಾರೆ—ಹಿಂದೆ ಹೇಳಿದುದು ಏನೆಂದರೆ, ಸುಲಭಸಾಧ್ಯವಲ್ಲದುದರಿಂದ ಅಭ್ಯಾಸದಿಂದ ಸಾಧ್ಯವೆಂದೂ, ದುಃಖಾನ್ತ ಉಳ್ಳದೆಂದೂ ಹೇಳಲ್ಪಟ್ಟಿತು. ಹಾಗೆ ಸುಲಭಸಾಧ್ಯವಲ್ಲದೆ ಕಷ್ಟತರವಾದುದರಿಂದ ಮೊದಲಿಗೆ ವಿಷದ ರೂಪದಲ್ಲೂ, ಅಂತ್ಯದಲ್ಲಿ ದುಃಖಾಂತವನ್ನುಂಟುಮಾಡುವದರಿಂದ ಅಮೃತೋಪಮವು ಸಾತ್ವಿಕ ಸುಖವೆಂದು ತಿಳಿಸುತ್ತಾರಾದುದರಿಂದ **ತದೇವ ವಿಶಿನಷ್ಟಿ** ಎಂಬ ಪ್ರಯೋಗವು, **ಇಲ್ಲಿ ಒಂದು ಪೂರ್ವಪಕ್ಷವು** ತೋರಬಹುದು ಹಿಂದಿನ ಶ್ಲೋಕವನ್ನು ಇತರರು ಒಟ್ಟಿಗೆ ಸೇರಿಸಿ **ಅರ್ಥ** ಮಾಡಿರುವಾಗ ಶ್ರೀಯತಿವರ್ಯರು **ಪೂರ್ವಾರ್ಧ** ಉತ್ತರಾರ್ಧಗಳನ್ನು ಪ್ರತ್ಯೇಕಿಸಿ **ಅರ್ಥಮಾಡಿದು ದೇಕೆ?** ಎಂಬುದು. ಉತ್ತರಾರ್ಧವನ್ನೂ **ಪೂರ್ವಾರ್ಧವನ್ನೂ** ಒಟ್ಟುಸೇರಿಸಿಯಲ್ಲವೇ **ಅರ್ಥ** ಮಾಡತಕ್ಕದ್ದು ? ಎಂದರೆ, ಹಾಗೆ ಅನ್ವಯಿಸಿದರೆ ಪರಸ್ಪರ ವಿರೋಧ ಉಂಟಾಗಿ ಅಸಾ ಮಂಜಸ್ಯಕ್ಕೆ ಕಾರಣವು, ಉತ್ತರಾರ್ಧದಲ್ಲಿ ಹೇಳಿರುವದು ಅಭ್ಯಾಸದಿಂದ ಸರ್ವದುಃಖಗಳ ನಾಶವು; ಇದು ಸುಖದ ತ್ರಿವಿಧದಲ್ಲಿ ಸಾತ್ವಿಕಕ್ಕೆ ಮಾತ್ರ ಉಂಟು. ರಾಜಸ ತಾಮಸ ಸುಖ ಗಳಿಗಿಲ್ಲವು, ಆದುದರಿಂದ ಮಹಾಪ್ರಾಜ್ಞ ಶಿಖಾಮಣಿಗಳು **ಪೂರ್ವಾರ್ಧವನ್ನು ಪ್ರತಿಜ್ಞಾ ವಾಕ್ಯ ವೆಂದು** ಪ್ರತ್ಯೇಕಿಸಿ ; **ಉತ್ತರಾರ್ಧದಲ್ಲಿ** ಹೇಳಿದ **ಪ್ರತಿಜ್ಞಾವಾಕ್ಯವು** ಮುಂದಿನ **ಶ್ಲೋಕದಲ್ಲಿ**

**ಮೂ. ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥ ೩೭ ॥**

ಉಪಪಾದಿಸುವ ನಿರತಿಶಯ ಸುಖಕ್ಕೆ ಅನ್ವಯಿಸುವದರಿಂದ, **ತದೇವ ವಿಶಿನಷ್ಟಿ** ಎಂಬ ಅವತಾರಿಕೆಯ ಮೂಲಕ ಅನ್ವಯಿಸಿರುತ್ತಾರೆ. ಅದೂ ಅಲ್ಲದೆ **ಅಭ್ಯಾಸಾದ್ರಮತೇ ಯತ್ರ** ಎಂದಾರಂಭಿಸಿ ಹೇಳುವದು ಸಾತ್ತ್ವಿಕ ಸುಖಲಕ್ಷಣದ ವಿವರವಾದುದರಿಂದ ಪ್ರತಿಜ್ಞಾ ವಾಕ್ಯದೊಂದಿಗೆ ಅನ್ವಯಿಸಲು ಸಾಧ್ಯವಿಲ್ಲವು.

**ಮೂಲಕ್ಕೆ ಅರ್ಥವು-ಯತ್ತತ್ಸುಖಂ**—ಸುಖವು ಕಷ್ಟತರವಾದ ಉಪಾಸನದಿಂದ ಬಹು ಕಾಲಾನಂತರ ಕ್ರಮೇಣ ಆನಂದದಾಯಕವಾದುದು ಯಾವುದೋ ಅಥವಾ ಶ್ರುತಿಗಳಲ್ಲಿ **ಯತ್‌ತತ್** ಎಂಬುದು ಪ್ರಸಿದ್ಧವಾಚಕವು ಅಂತಹ ಪ್ರಸಿದ್ಧವಾದ ಸುಖವು ಯಾವುದೋ ಎಂದಾದರೂ ಅರ್ಥಮಾಡಬಹುದು. ಅಗ್ರೇ-ಭಕ್ತಿ ಯೋಗಾರಂಭದಲ್ಲಿ, **ವಿಷಮಿವ**-ವಿಷವೋ ಎನ್ನುವ ಹಾಗೆ ಇರುವ ಹೆಚ್ಚಾದ ದೇಹಾಯಾಸ ಉಂಟಾಗುವದರಿಂದ, **ವಿಷಮಿವ** ಎಂಬುದರಿಂದ ಭೋಗ್ಯವಲ್ಲದಿರುವ ಭಾವವು ಹೇಳಲ್ಪಟ್ಟಿತು. ಇಲ್ಲಿ **ವಿಷಮಿವ** ಎಂಬುದರ ಅರ್ಥವು ಮುಂದೆ **ಅಮೃತೋಪಮಂ** ಎಂದಿರುವದರಿಂದ **ವಿಷೋಪಮಂ** ಎಂದೇ ತಿಳಿಯತಕ್ಕದ್ದಾಗಿರುತ್ತದೆ. ವಿಷವಲ್ಲವು, ವಿಷವೋ ಎನ್ನುವ ಹಾಗೆ ಮೇಲೆ ಮೇಲೆ ನೋಡಿದರೆ ತೋರುತ್ತದೆಂಬ ಭಾವವು. ಇದರಿಂದ ಮಂದಮತಿಗಳು ಬಹುಕ್ಲೇಶತರವಾದುವೆಂದು ಅಲ್ಲಿಗೆ ಕೈಬಿಡುವರೆಂಬುದು ಸೂಚಿತವು. ಯಾವ ಸುಖರೂಪವಾದ ವಸ್ತುವೂ ವಿಷಕ್ಕೂ ಅಮೃತಕ್ಕೂ ಹೀಗೆ ಎರಡಕ್ಕೂ ಸಮಾನವಾಗಿರುವುದಿಲ್ಲವು. ಅದನ್ನೇ ಮುಂದೆ ವಿವರಿಸಿ ಹೇಳುತ್ತಾರೆ— ಆತ್ಮಬುದ್ಧಿ ಪ್ರಸಾದಜಮ್ ಎಂಬದಾಗಿ; ಆಪಾತತಃ ಅಲ್ಲದೆ, ಸ್ವಲ್ಪ ವಿಮರ್ಶಿಸಿ ವಿವೇಕದಿಂದ ಪರಾಮರ್ಶಿಸಿದರೆ **ಆತ್ಮಬುದ್ಧಿ ಪ್ರಸಾದಜಮ್** ಎಂದು ಹೇಳಲ್ಪಟ್ಟಿರುತ್ತದೆ. **ಪರಿಣಾಮೇ**-ವಿಪಾಕದೆಶೆಯಲ್ಲಿ ಕೊನೆಗೆ, **ಅಮೃತೋಪಮಮ್**-ಅನುಕೂಲವಾಗಿ ಆನಂದವನ್ನುಂಟುಮಾಡುವದರಿಂದ ಅಮೃತಕ್ಕೆ ಸಮಾನವಾದುದೋ, ಅದಕ್ಕೆ ಕಾರಣವೇನೆಂದರೆ **ಆತ್ಮಬುದ್ಧಿ ಪ್ರಸಾದಜಮ್**-ಸಂಸಾರ ವಿಷಯದಲ್ಲಿಲ್ಲದೆ ಪ್ರಕೃತಿಗಿಂತ ವಿಲಕ್ಷಣವಾದುದು ಆತ್ಮನು ಎಂಬ ವಿಲಕ್ಷಣ ಜ್ಞಾನದಿಂದುಂಟಾದ ಮನಸ್ಸಿನ ಪ್ರಸನ್ನತೆಯಿಂದ ಉತ್ಪನ್ನವಾದುದು, ಆದುದರಿಂದ ಅಮೃತೋಪಮವಾದುದು ಯಾವ ಸುಖವೋ, **ತತ್ಸುಖಂ**-ಅಂತಹ ಸುಖವು, **ಸಾತ್ತ್ವಿಕಂ ಪ್ರೋಕ್ತಮ್**-ಸಾತ್ತ್ವಿಕವೆಂದು ಹೇಳಲ್ಪಟ್ಟಿತು ; ಯಾರಿಂದ ಎಂದರೆ ಶಾಸ್ತ್ರಜ್ಞರಿಂದ ಹೇಳಲ್ಪಟ್ಟಿತೆಂಬ ಭಾವವು. ಇಲ್ಲಿ **ಆತ್ಮಬುದ್ಧಿ ಪ್ರಸಾದಜಂ** ಎಂದು ಏಕೆ ಹೇಳಲ್ಪಟ್ಟಿತೆಂದರೆ ಸ್ವಸ್ವರೂಪದ ಮಾಹಾತ್ಮ್ಯೆಯು ಯಾವಾಗ ಉಂಟಾಯಿತೋ, ಆಗ ಮನಸ್ಸಿನ ಪಾರಿಶುದ್ಧ್ಯ ಉಂಟಾಗಿ ಮನಶ್ಶಾಂತತೆಯು ಪ್ರಾಪ್ತವಾಗುತ್ತದೆ; ಅಂತಹ ಸುಖಾನುಭವವು ಮನಸ್ಸಿನ ಮೂಲಕವಾಗಿಯೂ ಬುದ್ಧಿ ಎಂದರೆ ಆತ್ಮಾವಿನ ಧರ್ಮಭೂತಜ್ಞಾನ ಮೂಲಕವಾಗಿಯೂ; ಆದುದರಿಂದಲೇ, ಸುಖವು **ಆತ್ಮಬುದ್ಧಿ ಪ್ರಸಾದಜಂ** ಎಂದು ಹೇಳಲ್ಪಟ್ಟಿತು. ಬುದ್ಧಿಗೂ ಮನಸ್ಸಿಗೂ ಇರುವ ಸಂಬಂಧವೂ, ಮನಸ್ಸಿನ ಮೂಲಕವಾಗಿಯೇ ಧ್ಯಾನದ ಆನಂದವೂ, ಸಹ ಎಂಬುದು ಶ್ರುತಿಗಳಲ್ಲಿ ಪ್ರತಿಪಾದ್ಯವು. "**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ**" ಎಂಬ (ಗೀ) ಪ್ರಯೋಗದಿಂದಲೂ ಈ ಅಂಶವನ್ನು ಗ್ರಹಿಸಬಹುದು. ಅಂತಹ ಸುಖಾನುಭವ ಮಾಡುವವರನ್ನು **ಧೀರಾಃ** ಎಂದು (ಎಂದರೆ **ಧಿಯಾರಮನ್ತೇ** ಎಂಬ ವ್ಯುತ್ಪತ್ತಿ ಮೂಲಕ) ಶ್ರುತಿಯು ಕೊಂಡಾಡಿರುತ್ತದೆ. ಇಲ್ಲಿ ಸಾತ್ತ್ವಿಕ ಸುಖಕ್ಕೆ **ಆತ್ಮ ಬುದ್ಧಿ**ಯು ಹೇಳಲ್ಪಟ್ಟಿದುದು ಹೇಗೆ? ಎಂದರೆ ಜೀವಾತ್ಮಯಾಥಾತ್ಮ್ಯಜ್ಞಾನ ಉಂಟಾಗಿ ತನಗೆ ಸತ್ತಾ ಮೊದಲಾದವುಗಳೆಲ್ಲಾ ಯಾವಾಗ ಪರಮಾತ್ಮಾಧೀನವೆಂಬುದು ತೋರಿಬಂತೋ ಆಗ ಪರಮಾತ್ಮನಲ್ಲಿ ವಿಶೇಷವಾದ

**ಭಾ. ಯತ್ತತ್ಸುಖಂ, ಅಗ್ರೇ-ಯೋಗೋಪಕ್ರಮವೇಳಾಯಾಂ, ಬಹ್ವಾಯಾಸ ಸಾಧ್ಯತ್ವಾದ್ವಿವಿಕ್ತಸ್ವರೂಪಸ್ಯಾನನುಭೂತತ್ವಾಚ್ಚ, ವಿಷಮಿವ-ದುಃಖಮಿವ, ಭವತಿ; ಪರಿಣಾಮೇಽಮೃತೋಪಮಂ, ಪರಿಣಾಮೇ-ವಿಪಾಕೇ, ಅಭ್ಯಾಸ ಬಲೇನ ವಿವಿಕ್ತ ಸ್ವರೂಪಾವಿರ್ಭಾವೇ ಅಮೃತೋಪಮಂಭವತಿ; ತಚ್ಚಾತ್ಮ ಬುದ್ಧಿ**

---

ಅವ್ಯಭಿಚರಿತ ಭಕ್ತಿಯುಂಟಾಗಿ ಉಪಾಸನ ಮತ್ತು ಪರಮಾತ್ಮ ಸಾಕ್ಷಾತ್ಕಾರಗಳು ಉಂಟಾಗುತ್ತವೆಂಬ ತಾತ್ಪರ್ಯವು. ಇದರಿಂದಲೇ ಬ್ರಹ್ಮವಿದ್ಯೆಯು ಅಧ್ಯಾತ್ಮ ವಿದ್ಯೆಯೆಂದು ಹೇಳಿಸಿಕೊಂಡಿರುತ್ತದೆ. ಆತ್ಮಯಾಥಾತ್ಮ್ಯ ಜ್ಞಾನವಿಲ್ಲದೆ ಪರಮಾತ್ಮ ಜ್ಞಾನ ಉಂಟಾಗುವದಿಲ್ಲವು. ಇದನ್ನೇ ಶ್ರುತಿಯೂ "**ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ**" (ಕಠ ೨. ೧೨) ಎಂಬಲ್ಲಿ ಉಪದೇಶಿಸಿರುತ್ತದೆ. **ಅಧ್ಯಾತ್ಮಯೋಗಾಧಿಗಮೇನ**-"**ಯಚ್ಛೇದ್ವಾಙ್ಮನಸೀ ಪ್ರಾಜ್ಞಃ**" ಎಂದು ಹೇಳಿರುವ ಹಾಗೆ "ವಾಕ್ಕು ಮನಸ್ಸನ್ನು ವಿಷಯಗಳಿಂದ ತಿರುಗಿಸಿ, ಆತ್ಮವಿನಲ್ಲಿಡುವದೇ **ಅಧ್ಯಾತ್ಮಯೋಗ**ವೆನಿಸುತ್ತದೆ, ಎಂದರೆ ಜೀವಾತ್ಮನ ಯಾಥಾತ್ಮ್ಯ-ಜ್ಞಾನದ ಚಿಂತನೆಯು; ಅನ್ನ ಸತ್ತಾಸ್ಥಿತಿ ನಿಯಮನಾದಿಗಳೆಲ್ಲಾ ಪರಮಾತ್ಮನಿಂದೇ ಎಂಬ ನಿಶ್ಚಲಿತವಾದ ಜ್ಞಾನವು. ಇದು ಪರಮಾತ್ಮ ಜ್ಞಾನಕ್ಕೆ ಹೇತುವಾದುದರಿಂದ, ಅಂತಹ ಆತ್ಮಜ್ಞಾನದಿಂದ, ದೇದೀಪ್ಯಮಾನನಾದ ಪರಮಾತ್ಮನನ್ನು ಮತ್ವಾ-ಉಪಾಸನಮೂಲಕ ಸಾಕ್ಷಾತ್ಕರಿಸಿ, **ಧೀರಃ**-ಹೀಗೆ ಬ್ರಹ್ಮಜ್ಞಾನದಿಂದ ರಮಿಸುವ ಮೋಕ್ಷಾರ್ಥಿಯು, **ಹರ್ಷಶೋಕೌ ಜಹಾತಿ**-ಅಲ್ಪಾಸ್ಥಿರವಾದ ಹರ್ಷವನ್ನೂ ಶೋಕವನ್ನೂ ಬಿಟ್ಟುಬಿಡುತ್ತಾನೆ ಎಂದರೆ ಅವುಗಳಿಗೆ ಕಾರಣಭೂತ**ವಾ**ದ ಪ್ರಾಕೃತ ಶರೀರವನ್ನು ತ್ಯಜಿಸಿ ಮೋಕ್ಷವನ್ನು ಹೊಂದುತ್ತಾನೆ." ಎಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಸಾತ್ವಿಕ ಸುಖವು ಆತ್ಮಬುದ್ಧಿಗೆ ಹೇತುವು. ಯಾವಾಗ ಆತ್ಮಬುದ್ಧಿಯುಂಟಾಯಿತೋ, ಆಗ ಪರಮಾತ್ಮೋಪಾಸನೆಯ ನಿಷ್ಪತ್ತಿಯೂ ಪ್ರಾಪ್ಯ ಲಾಭವೂ ಸಿದ್ಧವೆಂದು ಹೇಳಿದಂತಾಯಿತು.

**ಭಾಷ್ಯಾರ್ಥವು**—ಹಿಂದಿನ ಶ್ಲೋಕಾರ್ಧದಲ್ಲಿ ಈ ಸಾತ್ವಿಕ ಸುಖವು ಅಭ್ಯಾಸದಿಂದ ಎಂದರೆ ಪ್ರಯಾಸದಿಂದ ಮಾಡಿದ ಉಪಾಸನೆಯಿಂದ ಲಬ್ಧವೆಂದೂ ಅದು ಕೊನೆಗೆ ಸರ್ವ ದುಃಖ ವಿನಾಶಕವೆಂದೂ ಹೇಳಲ್ಪಟ್ಟ ಅಭಿಪ್ರಾಯಗಳೇ ಈ ಶ್ಲೋಕದಲ್ಲೂ ಹೇಳಲ್ಪಡುತ್ತವೆ. ಹಿಂದಿನ ಶ್ಲೋಕದ ಉತ್ತರಾರ್ಧದಲ್ಲಿ ಯತ್ರ ಎಂದರೆ ಯಾವ ಸುಖದಲ್ಲಿ ಅಭ್ಯಾಸದಿಂದ ಆತ್ಮರತಿಯೂ, ಸಂಸಾರದುಃಖ ವಿನಾಶವೂ ಉಂಟೋ, **ತತ್**-ಅಂತಹ ಸುಖವೇ ಸಾತ್ವಿಕ ಸುಖವೆಂದು **ಈ ಶ್ಲೋಕ**ದಲ್ಲಿ ಹೇಳಿರುವದರಿಂದ ಆ ಉತ್ತರಾರ್ಧಕ್ಕೂ ಈ ಶ್ಲೋಕಕ್ಕೂ ಏಕಾನ್ವಯವು. **ಯತ್ತತ್ಸುಖಂ** ಯಾವ ಆ ಸುಖವು, **ಅಗ್ರೇ**-ಎಂದರೆ **ಯೋಗೋಪಕ್ರಮವೇಳಾಯಾಂ**-ಜೀವಾತ್ಮ ಸ್ವರೂಪವನ್ನು ತಿಳಿಯಬೇಕೆಂಬ ನಿಷ್ಕ್ರಮವನ್ನು ಪ್ರಾರಂಭಿಸುವ ಸಮಯದಲ್ಲಿ, **ಬಹ್ವಾಯಾಸ ಸಾಧ್ಯತ್ವಾತ್**-ತುಂಬಾ ಆಯಾಸದಿಂದ ಸಾಧ್ಯವಾದುದರಿಂದಲೂ, **ವಿವಿಕ್ತಸ್ವರೂಪಸ್ಯ ಅನನುಭೂತತ್ವಾಚ್ಚ**-ದೇಹಕ್ಕಿಂತ ವಿಲಕ್ಷಣವಾದ ಆತ್ಮಸ್ವರೂಪದ ಅನುಭವವಿಲ್ಲದುದರಿಂದಲೂ ಸಹ, **ವಿಷಮಿವ**-ವಿಷದ ಹಾಗೆ ಎಂದರೆ ವಿಷವನ್ನು ಪಾನಮಾಡುವ ಹಾಗೆ, **ದುಃಖಮಿವ ಭವತಿ**-ದುಃಖರೂಪವಾಗಿ ಮಂದಮತಿಗಳಿಗೆ ತೋರುತ್ತದೋ, ದುಃಖವೇನೂ ಅಲ್ಲವು ಹಾಗೆ ಸ್ಥಿರ ಮನಸ್ಸಿಲ್ಲದ ಅಲ್ಪಜ್ಞರಿಗೆ ತೋರುತ್ತದೆ ಎಂಬ ಭಾವವು. ಮತ್ತು **ಪರಿಣಾಮೇಽಮೃತೋಪಮಂ ಭವತಿ**-ಇದರರ್ಥವೇನೆಂದರೆ, **ಪರಿಣಾಮೇ** ಎಂದರೆ **ವಿಪಾಕೇ**-ಪರಿಹಾರವಾಗುವ ಕಾಲದಲ್ಲಿ, **ಅಭ್ಯಾಸ ಬಲೇನ**-ಪ್ರತಿ ನಿತ್ಯವೂ ಶುಭಾಶ್ರಯದ ಉಪಾಸನಾನುಷ್ಠಾನದ ಬಲದಿಂದ, **ವಿವಿಕ್ತ ಸ್ವರೂಪಾವಿರ್ಭಾವೇ** ಆತ್ಮನು ದೇಹಕ್ಕಿಂತ ವಿಲಕ್ಷಣನಾಗಿರುವ ನೈಜ ಸ್ವರೂಪದ ಜ್ಞಾನವು ಆವಿರ್ಭವಿಸಲಾಗಿ, **ಅಮೃತೋಪಮಂ ಭವತಿ**-ಆ ಉಪಾಸನವು ಅಮೃತ ಸದೃಶವಾದುದಾಗು

**ಪ್ರಸಾದಜಂ-ಆತ್ಮವಿಷಯಾಬುದ್ಧಿಃ-ಆತ್ಮಬುದ್ಧಿಃ, ತಸ್ಯಾಃ ನಿವೃತ್ತ ಸಕಲೇತರ ವಿಷಯತ್ವಂ-ಪ್ರಸಾದಃ, ನಿವೃತ್ತ ಸಕಲೇತರ ವಿಷಯ ಬುದ್ಧ್ಯಾ ವಿವಿಕ್ತ ಸ್ವಭಾವಾತ್ಮಾನುಭವಜನಿತಂ ಸುಖಮಮೃತೋಪಮಂ ಭವತಿ; ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮ್ ||೩೭||**

---

ತ್ತದೋ, ಪರಮಾನಂದ ರೂಪವಾಗುತ್ತದೋ ಎಂಬ ಭಾವವು. ಈ ಅಭಿಪ್ರಾಯವೇ ಮುಂದೆ ವಿಶದೀಕರಿಸಲ್ಪಡುತ್ತದೆ ಇಲ್ಲಿ ಅಮೃತತ್ವ ಹೇಗೆ? ಎಂದರೆ ತನಗೆ ಜರಾ ಮರಣಾದಿಗಳು ನಿವೃತ್ತಿಸಿದ ಭೋಗ್ಯತಮಾವಸ್ಥೆಯು ದೊರೆಯುತ್ತದೆ ಎಂಬ ಭಾವನೆಯಿಂದ ಆನಂದವನ್ನು ಹೊಂದೋಣವು. ಆದರೆ ವಿಷರೂಪವಾದ ಸುಖವು ಪ್ರಾತಿಕೂಲ್ಯವಾಗಿ ವಿಷದ ಹಾಗೂ ಅನುಕೂಲವಾಗಿ ಅಮೃತದ ಹಾಗೂ ಆಗುವದುಂಟೋ? ಎಂದರೆ ಮನಸ್ಸಿನ ಮೂಲಕ ಬುದ್ಧಿಯ ಭಾವನೆಗಳಿಂದ ಹಾಗೆ ಭಿನ್ನವಾಗಿ ತೋರುತ್ತದೇ ವಿನಾ ಆತ್ಮಯಾಥಾತ್ಮ್ಯ ಜ್ಞಾನಿಗೆ ಎಲ್ಲವೂ ಅನುಕೂಲವೇ. ಪ್ರತಿಕೂಲಭಾವನೆಯು ಆತ್ಮಯಾಥಾತ್ಮ್ಯ ಜ್ಞಾನವಿಲ್ಲದಿರುವ ಅವಸ್ಥೆಯಲ್ಲಿ ಮಾತ್ರವೇ ಎಂದು ತಿಳಿಯತಕ್ಕದ್ದು. ಮೋಕ್ಷದೆಶೆಯಲ್ಲೂ ಎಲ್ಲವೂ ಈತನಿಗೆ ಅನುಕೂಲವೇ. ಮಹಾ ಭಾಗವತೋತ್ತಮನಾದ ಪ್ರಹ್ಲಾದನಿಗೆ ತಂದೆಯ ಚಿತ್ರಹಿಂಸೆಗಳೆಲ್ಲಾ ಆತ್ಮಯಾಥಾತ್ಮ್ಯ ದೊಂದಿಗೆ ಪರಮಾತ್ಮನಲ್ಲಿ ಸಕ್ತವಾದ ಮನೋಬುದ್ಧಿಗಳುಳ್ಳವನಾದುದರಿಂದ ಅನುಕೂಲವಾಗಿಯೇ ಪರಿಣಮಿಸಿದವೆಂದು ಇತಿಹಾಸಗಳಲ್ಲಿ ಪ್ರತಿಪಾದಿತವು. "ತದೇವಂ ವಿದ್ವಾನ್ ಅಮೃತ ಇಹ ಭವತಿ" ಎಂಬುದು ಅನುಸಂಧೇಯವು. ತಾನು ಪರಮ ಪುರುಷನಿಗೆ ಶೇಷಭೂತವಾದ ಸ್ವರೂಪ ವುಳ್ಳವನೆಂಬ ಭಾವವು ತೋರುವ ಪರಿಶುದ್ಧಾವಸ್ಥೆಯು **"ಸ್ವೇನರೂಪೇಣಾಭಿ ನಿಷ್ಪದ್ಯತೇ"** ಎಂಬಲ್ಲಿ ಹೇಳಿರುವ ಹಾಗೆ ಆವಿರ್ಭವಿಸುತ್ತದೆ ಎಂಬ ಅನುಸಂಧಾನದಿಂದ ಆನಂದವು, ಇದು ಜೀವನ್ಮುಕ್ತಿಯಲ್ಲವು. ಅಂತಹ ಅನುಸಂಧಾನವಿಲ್ಲದ ಕಾಲದಲ್ಲಿ ಆ ಆನಂದವು ಇರುವದಿಲ್ಲ ವಾದುದರಿಂದ **ತಚ್ಚ**-ಅಂತಹ ಸುಖವಾದರೋ, **ಆತ್ಮಬುದ್ಧಿಪ್ರಸಾದಜಂ,** ಇದರರ್ಥವೇ ನೆಂದರೆ—**ಆತ್ಮ ವಿಷಯವಾದ ಬುದ್ಧಿಯೂ** ಯಾವುದೋ ಅದು **ಆತ್ಮಬುದ್ಧಿ**ಯು, **ತಸ್ಯಾಃ**-ಆ ಆತ್ಮಜ್ಞಾನದ, **ಪ್ರಸಾದವು** ಯಾವುದೆಂದರೆ **ನಿವೃತ್ತ ಸಕಲೇತರ ವಿಷಯತ್ವವು**-ಇತರಗ ಳಾದ ಸಮಸ್ತ ವಿಷಯಗಳಿಂದಲೂ ನಿವೃತ್ತಿಯನ್ನು ಹೊಂದಿರೋಣವೇ, ಮನಸ್ಸು ಯಾವಾ ಗಲೂ ಪರಿಶುದ್ಧಾತ್ಮ ಸ್ವರೂಪ ಚಿನ್ತನದಲ್ಲೇ ಇರೋಣವು, ಈಗ ತಾತ್ಪರ್ಯವೇನಾಯಿತು ಎಂದರೆ-**ನಿವೃತ್ತ ಸಕಲೇತರ ವಿಷಯಬುದ್ಧ್ಯಾ**-ಸಮಸ್ತಗಳಾದ ಐಹಿಕ ವಿಷಯಗಳಿಂದ ನಿವೃತ್ತಿಯನ್ನು ಹೊಂದಿದ ಬುದ್ಧಿಯಿಂದ ಎಂದರೆ ಜ್ಞಾನದಿಂದ, **ವಿವಿಕ್ತ ಸ್ವಭಾವಾತ್ಮಾನು ಭವ ಜನಿತಂ**-ದೇಹಕ್ಕಿಂತ ವಿಲಕ್ಷಣನಾದ ಸ್ವಭಾವವುಳ್ಳ ಜೀವಾತ್ಮನ ಉತ್ಕೃಷ್ಟಸ್ಥಿತಿಯ ಅನು ಭವದಿಂದುಂಟಾದ, **ಸುಖಂ**-ಸುಖವು **ಅಮೃತೋಪಮಂ ಭವತಿ**-ಅಮೃತಕ್ಕೆ ಸಮಾನವಾದು ದಾಗುವದು ಎಂದರೆ ಪರಮಾನಂದಕರವಾಗುವುದು ಎಂಬ ಭಾವವು; ಹೀಗೆ ಯಾವ ಸುಖವೋ, **ತತ್ಸುಖಂ**-ಅಂತಹ ಸುಖವು, **ಸಾತ್ತ್ವಿಕಂ ಪ್ರೋಕ್ತಮ್**-ಸಾತ್ವಿಕವೆಂದು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಹೇಳಿರುವ ವಿಷ ಮತ್ತು ಅಮೃತ ದೃಷ್ಟಾಂತದಿಂದ ಸಮುದ್ರ ಮಥನ ವೃತ್ತಾಂತವು ಜ್ಞಾಪಕಕ್ಕೆ ಬರುತ್ತದೆ. ಸಮುದ್ರ ಮಥನವು ಬಹ್ವಾಯಾಸ ಸಾಧ್ಯವಾದುದು ಎಂಬುದು ಸರ್ವವಿದಿತವೇ, ಆದು ಪ್ರಥಮತಃ ವಿಷವಾಗಿ ಪರಿಣಮಿಸಿ ಅನಂತರ ಪರಿಪಕ್ವದೆಶೆಯಲ್ಲಿ ಅಮೃತ ವನ್ನೇ ಕೊಟ್ಟಿರುವದು ಈ ಸಂದರ್ಭದಲ್ಲಿ ಅನುಸನ್ಧೇಯವು. ಪ್ರಕೃತದಲ್ಲಿ ವಿಷಾಮೃತ ಶಬ್ದಗಳು ಪ್ರಾತಿಕೂಲ್ಯಾನುಕೂಲ್ಯ ಭಾವಗಳನ್ನು ಬೋಧಿಸುತ್ತವೆಂದು ತಿಳಿಯತಕ್ಕದ್ದು. ಸಮಸ್ತವೂ ಅನುಕೂಲವಾಗಿ ತೋರುವ ಈ ಸ್ವಾತ್ಮಸ್ವರೂಪಾನುಸಂಧಾನರೂಪ ಸುಖಕ್ಕೆ ಅಮೃತ ಭಾವ

ನೆಯು ಹೇಗೆ? ಎಂದರೆ, ಹಾಗೆ ಅನುಸಂಧಾನಮಾಡುವ ಕಾಲದಲ್ಲಿನ ಆನಂದವು ನಿರತಿಶಯವಾದುದರಿಂದಲಾಗಲಿ ಅಂತಹ ಸ್ಥಿತಿಯನ್ನು ಸದ್ಯದಲ್ಲೇ ಹೊಂದುವನೆಂಬ ಆಶೆಯಿಂದ ಆ ಚಿನ್ತನವು ಬಹು ಭೋಗ್ಯವಾಗಿರುವದರಿಂದಲಾಗಲಿ, ಇದುವರೆಗೂ ಇಂತಹ ಆನಂದಕ್ಕೆ ವಿಘ್ನಕರವಾಗಿದ್ದ ಸಾಂಸಾರಿಕ ಸುಖವೂ ಜರಾ ಮರಣ ದೆಶೆಯೂ ತಪ್ಪಿಹೋಗುತ್ತದೆಂಬ ಸಂತೋಷದಿಂದಲಾಗಲಿ, ಅಮೃತೋಪಮವು ಎಂದು ಭಾವಿಸತಕ್ಕದ್ದಾಗಿರುತ್ತದೆ. ಇಂತಹ ಸುಖಾನುಭವಾವಸ್ಥೆಯು ಪ್ರಾಪ್ತವಾಗುವದಕ್ಕೆ ಮುಂದೆ ಬುದ್ಧಿಯು ವಿಷಯಗಳಿಂದ ನಿರೋಧಿಸಲ್ಪಟ್ಟು ಆತ್ಮಸ್ವರೂಪ ಚಿನ್ತನದಲ್ಲಿಡುವದು ಕಷ್ಟಸಾಧ್ಯವಾದುದರಿಂದ ವಿಷದ ಹಾಗೆ ಭಾವನೆಯು. ಭಾವನೆಯಿಂದಲೇ, ಅಮೃತ ವಿಷರೂಪವಾಗಿ ತೋರುವದು, ವಾಸ್ತವ್ಯವಾಗಿ ಅಲ್ಲವೆಂಬುದನ್ನು, ಮುಂದಿನ ಶ್ಲೋಕದಲ್ಲಿರುವ **ಅಗ್ರೇ ಅಮೃತೋಪಮವೆಂದೂ ಪರಿಣಾಮೇ ವಿಷವೆಂಬ** ಪ್ರಯೋಗದಿಂದಲೇ ಗ್ರಹಿಸಬಹುದಾಗಿರುತ್ತದೆ. ಸಾಂಸಾರಿಕ ಸುಖಾನುಭವರೂಪ ಪಿತ್ತೋಪಹತನಿಗೆ ಆತ್ಮಚಿನ್ತನ ಸುಖರೂಪ **ಹಾಲು** ಕಹಿಯು; ಆ ಪಿತ್ತೋಪಹತಿಯು ತೊಲಗಿದರೆ ಅದೇ ಹಾಲು ಅಮೃತೋಪಮವು ಎಂಬುದು ತಾತ್ಪರ್ಯವು. ಇಂತಹ ಆತ್ಮನ ನೈಜಸ್ವರೂಪ ಚಿನ್ತನವು ಯಾವಾಗ ಉಂಟಾಯಿತೋ, ಆಗ ತಾನು ಪರಮಾತ್ಮನಿಗೆ ಶೇಷಭೂತನು ಎಂಬ ಜ್ಞಾನದಿಂದ ಪರಮಾತ್ಮನೇ ತನ್ನಲ್ಲಿ, ಅಂತರ್ಯಾಮಿಯಾಗಿರುವದನ್ನು ತೀವು ಒಟ್ಟಿಯಲ್ಲಿ ಕಟ್ಟಿಟ್ಟ ವಜ್ರದ ಹಾಗೆ ಕಂಗೊಳಿಸುವ ರತ್ನವನ್ನು ಕಂಡಹಾಗೆ ಪರಮಾತ್ಮನನ್ನು ಕಾಣುವನು ಇದೇ ಪರಮಾತ್ಮ ಸಾಕ್ಷಾತ್ಕಾರವು, ಇದಕ್ಕೆ ಪರಜ್ಞಾನವೆಂದೂ ಹೆಸರು. ಈ ಉಪಮೆಯನ್ನು ಶ್ರೀ ದೇಶಿಕರವರ ಶ್ರೀಮದ್ರಹಸ್ಯತ್ರಯ ಸಾರದಲ್ಲೂ ಕಾಣಬಹುದು. ಹಾಗೆ ಅತನನ್ನು ಕಾಣುವದಕ್ಕೆ ಇಂತಹ ಆತ್ಮಾನುಭವವು ಕಾರಣವು. ಇಂತಹ ಆತ್ಮಾನುಭವಕ್ಕೆ ಕಾರಣವು, ಕರ್ಮಯೋಗದಿಂದ ಅನ್ತಃಕರಣದ ಜಯವುಂಟಾಗಿ ಆತ್ಮಾ ತನ್ನ ದೇಹಕ್ಕಿಂತ ವಿಲಕ್ಷಣನು. ಮತ್ತೂ ತಾನೇ ಆಧೇಯತ್ವ ವಿಧೇಯತ್ವ ಶೇಷತ್ವಗಳಿಂದ ಪರಮಾತ್ಮನಿಗೆ ಶರೀರವೆಂಬ ಜ್ಞಾನವು ಎಂದು ಅಲ್ಲಿ ಉಪದೇಶಿಸಿರುತ್ತಾರೆ. ಇಲ್ಲಿ **ಆತ್ಮಬುದ್ಧಿ ಪ್ರಸಾದಜಮ್** ಎಂಬುದರಿಂದ ದಿವ್ಯಾತ್ಮಸ್ವರೂಪ ಜ್ಞಾನವು ಯಾವಾಗ ಉಂಟಾಯಿತೋ, ಆಗ ಮನಸ್ಸೂ ಧರ್ಮಭೂತ ಜ್ಞಾನವೂ ನಿರ್ಮಲವಾಗಿ, ಮನಸ್ಸು ಐಹಿಕದಲ್ಲಿ ರಮಿಸುವ ಕಾಲುಷ್ಯವನ್ನೆಲ್ಲಾ ಕಳೆದುಕೊಂಡು ಪ್ರಸನ್ನತೆಯನ್ನು ಹೊಂದುತ್ತದೆ. ಇದನ್ನೇ ಮಹರ್ಷಿಯು (ರಾ.ಬಾಲ. ೨ ೩) ತಮಸಾ ನದಿಯ ನಿರ್ಮಲ ತೀರ್ಥವನ್ನು ವರ್ಣಿಸುವಾಗ **ಆತ್ಮಬುದ್ಧಿ ಪ್ರಸಾದಜನ** ಮನಸ್ಸಿಗೆ ಹೋಲಿಸಿರುತ್ತಾರೆ— **"ಅಕರ್ದಮ ಮಿದಂ ತೀರ್ಥಂ ಭರದ್ವಾಜ ನಿಶಾಮಯ! ರಮಣೀಯಂ ಪ್ರಸನ್ನಾಂಬು ಸನ್ಮನುಷ್ಯಮನೋಯಥಾ"** ಸ್ವಲ್ಪವೂ ಕೆಸರು ಇಲ್ಲದೆ ಇರುವ ಈ ತಮಸಾ ನದಿಯ ತೀರ್ಥವನ್ನು ಓ ಶಿಷ್ಯನಾದ ಭರದ್ವಾಜನೇ ಅವಲೋಕಿಸು. ವಿಷ್ಟು ರಮಣೀಯವಾಗಿ, ನಿರ್ಮಲವಾಗಿರುವದರಿಂದ ಸಾತ್ವಿಕ ಪುರುಷನ ಮನಸ್ಸಿನ ಹಾಗೆ ತೋರುತ್ತಿದೆ ನೋಡು ಎಂದು ವಾಲ್ಮೀಕಿ ಮಹರ್ಷಿಯು ಹೇಳಿರುತ್ತಾರೆ. ಇಲ್ಲಿ ಮನಸ್ಸಿನ ಪ್ರಸನ್ನತೆಯನ್ನು ಹೇಳಿದುದು ಅದಕ್ಕೆ ಸಂಬಂಧಿಸಿದ ಬುದ್ಧಿಯೂ ಸಾತ್ವಿಕವಾಗಿ, ಇವುಗಳಿಂದ ಸಾಧ್ಯವಾದ ಸುಖವೂ ಕೂಡ ಸಾತ್ವಿಕವೆಂದು ಹೇಳಿದಂತಾಯಿತು. ||೩೭||

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕದಲ್ಲಿ ಮೋಕ್ಷಪ್ರಾಪ್ತಿಗೆ ಹೇತುಭೂತವಾದ ಸಾತ್ವಿಕಸುಖದ ಲಕ್ಷಣವನ್ನು ತಿಳಿಸಿ, ಈ ಶ್ಲೋಕದಲ್ಲಿ ಬಂಧಕ್ಕೆ ಹೇತುಭೂತವಾದ ರಾಜಸಸುಖಲಕ್ಷಣವನ್ನು ಉಪದೇಶಿಸುತ್ತಾರೆ—ಸಾತ್ವಿಕ ಸುಖವು ಮೊದಲಿಗೆ ವಿಷದ ಹಾಗೆ ತೋರಿ, ಅನಂತರ ಅಮೃತರೂಪವು; ಈ ರಾಜಸವಾದರೋ ಮೊದಲಿಗೆ ಅಮೃತವಾಗಿ ತೋರಿ ಕೊನೆಯಲ್ಲಿ ವಿಷದ ಹಾಗೆ ಪರಿಣಮಿಸುತ್ತದೆಂದು ಹೇಳುತ್ತಾರೆ—**ಯತ್ತತ್**-ಯಾವ ಆ ಸುಖವು ಆತ್ಮಬುದ್ಧಿ ಪ್ರಸಾದಜವಲ್ಲದ **ವಿಷಯೇನ್ದ್ರಿಯ ಸಂಯೋಗಾತ್**-ವಿಷಯಗಳಿಗೂ ಇಂದ್ರಿಯಗಳಿಗೂ ಸಂಯೋಗದಿಂದುಂಟಾದ ಅನುಭವದ ಮೂಲಕ, **ಅಗ್ರೇ** ಮೊದಲು ಮೊದಲು

**ಮೂ. ವಿಷಯೇನ್ದ್ರಿಯ ಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥ ೩೮ ॥**

**ಭಾ. ಅಗ್ರೇ-ಅನುಭವ ವೇಲಾಯಾಂ, ವಿಷಯೇನ್ದ್ರಿಯಸಂಯೋಗಾತ್ ಯತ್ತದ ಮೃತ ಮಿವ ಭವತಿ, ಪರಿಣಾಮೇ-ವಿಪಾಕೇ, ವಿಷಯಾಣಾಂ ಸುಖತಾ ನಿಮಿತ್ತ**

---

ಅನುಭವಕಾಲದಲ್ಲಿ, **ಅಮೃತೋಪಮಮ್**-ಅಮೃತದ ಹಾಗೆ ಬಹು ಭೋಗ್ಯವಾಗಿ, ಹರ್ಷವನ್ನು ಕೊಡುವದಾಗಿಯೂ, **ಪರಿಣಾಮೇ**-ಅವುಗಳನ್ನನುಭವಿಸಿ ಕಾಮವು ತೀರಿದ ಉತ್ತರ ಕಾಲದಲ್ಲಿ, **ವಿಷಮಿವ**-ಅಂತಹ ಅನುಭವಗಳಿಂದುಂಟಾಗುವ ಫಲವು ವಿಷಪಾನ ಮಾಡಿದಷ್ಟು ದುಃಖಕರವಾಗುತ್ತದೋ **ತತ್ಸುಖಂ**-ಅಂತಹ ಸುಖವು, **ರಾಜಸಂ ಸ್ಮೃತಮ್**-ರಾಜಸವೆಂದು ಹೇಳಲ್ಪಟ್ಟಿರುತ್ತದೆ **ವಿಷಯೇನ್ದ್ರಿಯ ಸಂಯೋಗಾತ್** ಎಂದು ಹೇಳಿರುವದರಿಂದ ಶಬ್ದ ಸ್ಪರ್ಶಾದಿಗಳ ಅನುಭವ ಕ್ರಮವನ್ನು ಊಹಿಸಬಹುದು. ವಿಷಯಗಳ ಅನುಭವವು ಇಂದ್ರಿಯಗಳ ಮೂಲಕವಾಗಿಯೇ ಮನಸ್ಸಿನ ಮತ್ತು ಧರ್ಮಭೂತಜ್ಞಾನ ದ್ವಾರಾ ಆತ್ಮನಿಗೆ ಉಂಟಾಗುತ್ತದೆ. ಪೂರ್ವ ಕರ್ಮಾನುಗುಣವಾಗಿ ರಾಜಸ ಗುಣಾವಿಷ್ಟನಾದವನ ಧರ್ಮಭೂತ ಜ್ಞಾನವು ಸಾತ್ವಿಕ ಭಾವವನ್ನು ತೋರದು ಈ ಅನುಭವವು ನಶ್ವರವೆಂದು ಭಾವಿಸದೆ **ಅಮೃತೋಪಮ**ವಾಗಿ ಭಾವಿಸುತ್ತದೆ. ಅನಂತರ ಪರಿಣಾಮದಲ್ಲಿ ಆ ಅನುಭವದ ಫಲವಾಗಿ "**ಸುಖಸ್ಯಾನಂತರಂ ದುಃಖಂ**" ಎಂದು ವ್ಯಾಸ ಮಹರ್ಷಿಯು ಹೇಳಿರುವ ಹಾಗೆ ವಿಷಮಯವಾಗುತ್ತದೆಂಬ ಭಾವವು. ಎಳ್ಳು ಬೆಲ್ಲ ರುಚಿಯಾಗಿದೆ ಎಂದು ಮಿತಿಮೀರಿದರೆ ಪರಿಣಾಮದಲ್ಲಿ ಪಿತ್ತವಾಗಿ ವಮನವನ್ನುಂಟುಮಾಡಿ ಹೇಗೆ ವಿಷವಾಗಿ ತೋರುತ್ತದೋ ಹಾಗೆ. ಧನ ಸ್ತ್ರೀ ಮೊದಲಾದವುಗಳಲ್ಲಿ ವಿಶೇಷಾನುರಾಗವಿಟ್ಟವರ ಬಾಳೂ ಇಂತಾದ್ದೇ. ಹಿಂದಿನ ಶ್ಲೋಕದಲ್ಲಿ ಸಾತ್ವಿಕ ಸುಖಾಧಿಕಾರಿಗೆ ವಿಷಯ ಪ್ರಾವಣ್ಯವೇ ಇಲ್ಲದೆ ಪರಮಾತ್ಮ ಪ್ರಾಪ್ತಿಯಲ್ಲಿ ಅಭಿರುಚಿ ಇರುವದರಿಂದ ಅಲ್ಲಿ **ಅಗ್ರೇ** ಎಂದರೆ ತತ್ಪ್ರಾಪ್ತಿಗೆ ಸಾಧನ ಭೂತಗಳಾದ ಪ್ರವೃತ್ತಿಗಳ ಅನುಷ್ಠಾನಾರಂಭಕಾಲದಲ್ಲಿ ಎಂದು ಅರ್ಥ ಮಾಡಲ್ಪಟ್ಟಿತು. ಇಲ್ಲಿ ರಾಜಸ ಸುಖಾಧಿಕಾರಿಗೆ ವಿಷಯಾನುಭವವೂ ಆವಶ್ಯಕವಾಗಿ ಬೇಕಾದುದರಿಂದ, **ಅಗ್ರೇ** ಎಂದರೆ ಅನುಭವಾರಂಭಕಾಲದಲ್ಲಿ ಎಂದು ಅರ್ಥಮಾಡತಕ್ಕದ್ದಾಗಿರುತ್ತದೆ. ಈ ಸುಖ ರಾಜಸವೆಂದು ಹೇಳಿದುದರಿಂದ ಬಂಧಕವೆಂಬ ಅಭಿಪ್ರಾಯವು.

**ಭಾಷ್ಯಾರ್ಥವು**—ಸಾತ್ವಿಕ ಸುಖವು ನಿರತಿಶಯ ನಿಶ್ಶ್ರೇಯಸ್ಸಿಗೆ ಹೇತುವಾಗುತ್ತದೆಂದು ಹೇಳಿ, ರಾಜಸ ಸುಖವು ವಿಪರೀತ ಫಲಕ್ಕೆ ಹೇತುವಾಗುತ್ತದೆಂದು ಉಪದೇಶಿಸುತ್ತಾರೆ. **ಅಗ್ರೇ** ಎಂದರೆ **ಅನುಭವವೇಲಾಯಾಂ**-ಅನುಭವ ವೇಳೆಯಲ್ಲಿ, ಎಂದರೆ ಅನುಭವಿಸುತ್ತಿರುವ ಪ್ರಥಮ ದೆಶೆಯಲ್ಲಿ, **ವಿಷಯೇನ್ದ್ರಿಯ ಸಂಯೋಗಾತ್**-ವಿಷಯಗಳಿಗೂ ಇನ್ದ್ರಿಯಗಳಿಗೂ ಸಂಯೋಗ ಉಂಟಾಗುವದರಿಂದ ಎಂದರೆ ಅಂತಹ ಸಂಯೋಗದಿಂದ ವಿಷಯಗಳಲ್ಲಿ ವಿಶೇಷಾಭಿರುಚಿಯು ಹುಟ್ಟುವದರಿಂದ, **ಯತ್ತತ್**-ಯಾವ ಆ ಸುಖವಾದುದು, **ಅಮೃತಮಿವಭವತಿ**-ಅಮೃತದ ಹಾಗೆ ರುಚಿಕರವಾಗಿ ತೋರುತ್ತದೆಯೋ, ಅಮೃತವೇ ಎಂದಿಗೂ ಅಂತಹ ಕ್ಷುದ್ರ ಸುಖವು ಆಗಲಾರದುದರಿಂದ **ಅಮೃತಮಿವ**-ಎಂಬ ಪ್ರಯೋಗವು; ಈ ರಾಜಸಿಗೆ ಅಮೃತದ ಹಾಗೆ ಭಾವನೆಯುಂಟಾಗುತ್ತದೆಂಬ ಭಾವವು, ಅದೇ, ಪರಿಣಾಮೇ, ಎಂದರೆ **ವಿಪಾಕೇ**-ಅನಂತರದಲ್ಲಿ, ಫಲವನ್ನು ಕೊಡುವ ದೆಶೆಯಲ್ಲಿ, ಅದನ್ನೇ ವ್ಯಕ್ತಪಡಿಸಿ ಹೇಳುತ್ತಾರೆ. **ವಿಷಯಾಣಾಂ ಸುಖತಾ ನಿಮಿತ್ತ ಕ್ಷುದಾದೌ ನಿವೃತ್ತೇ**-ಅನ್ನಪಾನಾದಿ ವಿಷಯಗಳಲ್ಲಿ ಸುಖವುಂಟೆಂಬ ಭಾವನೆಗೆ ಕಾರಣವಾದ ಹಸಿವೇ ಮೊದಲಾದ ಆಹಾರಾದಿ ಆಸೆಗಳು ನಿವೃತ್ತಿಸಿ ಹೋಗಲಾಗಿ,

**ಕ್ಷುದಾದೌ ನಿವೃತ್ತೇ, ತಸ್ಯ ಚ ಸುಖಸ್ಯ ನಿರಯಾದಿ ನಿಮಿತ್ತತ್ವಾ ದ್ವಿಷ ಮಿವ ಪೀತಂ ಭವತಿ, ತತ್ಸುಖಂ ರಾಜಸಂ ಸ್ಮೃತವ್ ॥ ೩೮ ॥**

---

**ತಸ್ಯ ಚ ಸುಖಸ್ಯ ನಿರಯಾದಿ ನಿಮಿತ್ತತ್ವಾತ್**-ಆ ಸುಖವೇ ಕಡೆಗೆ ನರಕವೇ ಮೊದಲಾದವು ಗಳಿಗೆ ಕಾರಣಭೂತಗಳಾಗುವುದರಿಂದ, **ವಿಷಮಿವ ಪೀತಂ ಭವತಿ**-ವಿಷವನ್ನೇನಾದರೂ ಕುಡಿದರೆ ಹೇಗೋ ಹಾಗಾಗುತ್ತದೆ **ತತ್ಸುಖಂ**-ಅಂತಹ ಸುಖವು, **ರಾಜಸಂಸ್ಮೃತಂ**-ರಾಜಸವೆಂದು ಹೇಳಲ್ಪಟ್ಟಿರುತ್ತದೆ. **ತತ್ಸುಖಂ ರಾಜಸಂ** ಎಂದು ಹೇಳಿರುವುದರಿಂದ, ಇಲ್ಲಿ ಸುಖ ಶಬ್ದವು ವಿಷವಾಗಿ ಪರಿಣಮಿಸಿದ ದೆಶೆಯಲ್ಲಿ ಅನುಭವವ ಹೇಳಲ್ಪಡಲಿಲ್ಲವು; ಪ್ರಾಥಮಿಕ ಅನುಭವ ವೇಳೆಯಲ್ಲಿನ ಅನುಭವವೇ **ತತ್ಸುಖಂ** ಎಂದು ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. **ಇದಕ್ಕೆ** ನಿದರ್ಶನವಾಗಿ ಒಬ್ಬನು ಒಬ್ಬ ಸುಂದರಳಾದ ಸ್ತ್ರೀಯನ್ನು ನೋಡಿ ಮದುವೆಯನ್ನು ಮಾಡಿ ಕೊಳ್ಳಬೇಕೆಂಬ ಆಶೆಯುಂಟಾಗಿ ಅದಕ್ಕಾಗಿ ತುಂಬಾ ಶ್ರಮಪಟ್ಟು ಮದುವೆ ಮಾಡಿಕೊಂಡು ಸುಖಾನುಭವವನ್ನು ಹೊಂದಿದೆನೆಂದು ಭಾವಿಸುವನು ಆಗ ಸುಖವು ಅಮೃತೋಪಮವಾಗಿರ ಬಹುದು. ಆ ಸ್ತ್ರೀಯು ತನಗೆ ಪ್ರತಿಕೂಲಳಾಗಿಯಾಗಿಯಾಗಲಿ, ಎಷ್ಟು ಆಕೆಯು ಕೋರಿದ ಧನಕನಕ ವಸ್ತ್ರಗಳನ್ನು ಕೊಟ್ಟರೂ ತೃಪ್ತಿಹೊಂದದೆ ಕ್ಲೇಶಪಡಿಸುವಳಾಗಿಯಾಗಲಿ, ಅಥವಾ ಆಕೆಯಿಂದ ಹುಟ್ಟಿದ ಮಕ್ಕಳು ಆರೋಗ್ಯವಿಲ್ಲದವರಾಗಿ ನಾನಾ ವಿಧವಾಗಿ ತೊಂದರೆಯ ನ್ನುಂಟುಮಾಡುವುದರಿಂದಲಾಗಲಿ ಹೀಗೆಲ್ಲಾ ಅಸುಖಗಳುಂಟಾದಾಗ **ವಿಷಮಿವ ಪೀತಂ ಭವತಿ**-ವಿಷಪಾನ ಮಾಡಿದಂತಾಗಬಹುದು. ಹೀಗೆಯೇ ಇನ್ನೂ ಅನೇಕ ದೃಷ್ಟಾಂತಗಳನ್ನು ಭಾವಿಸ್ಬಬಹುದು. ಕ್ಷಣಿಕ ಸುಖಕ್ಕಾಗಿ ಅಹಲ್ಯೆಯೂ ಇಂದ್ರನೂ ಹೊಂದಿದ ದುರ್ದೆಶೆ ಯನ್ನು ಇಲ್ಲಿ ದೃಷ್ಟಾಂತವಾಗಿ ಭಾವಿಸಬಹುದು; ಕ್ಷಣಕಾಲದ ಸುಖವು ರಾಜಸ ಸುಖವು; ಅನಂತರ ಅವರುಗಳಿಗೆ ವಿಷವಾಗಿ ಪರಿಣಮಿಸಿತು. ಲಾಡು ಚಿರೋಟಿಗಳ ಸೇವನೆಯೂ ಬಹು ಸುಖಕರವಾಗಿ ತಿನ್ನುವಾಗ ತೋರಬಹುದು. ಆದರೆ ಮಿತಿ ಇಲ್ಲದ ಸೇವನೆಯಿಂದ ಅಜೀರ್ಣ ವಾಗಿ ಪರಿಣಮಿಸಿದಾಗ ವಿಷ ಪಾನದ ಹಾಗೆ ಬಹುಸಲ ಕಾಲಪ್ರವೃತ್ತಿಯಿಂದ ಬಹು ಕ್ಲೇಶಕ್ಕೆ ಕಾರಣವಾಗಬಹುದು. ಇಂತಹ ದೃಷ್ಟಾಂತಗಳನ್ನು ಮನಸ್ಸಿನಲ್ಲಿಟ್ಟೇ **ಕ್ಷುದಾದೌ** ಎಂಬ ಪ್ರಯೋಗವು. ಈ **ಆದಿ** ಶಬ್ದದಿಂದ ಇತರ ಸುಖಾನುಭವ ತೃಷ್ಣೆಯು ಬೋಧಿಸಲ್ಪಟ್ಟಿತು. ಈ ರಾಜಸ ಸುಖವು **ನಿರಯಾದಿ ನಿಮಿತ್ತತ್ವಾತ್**—ನರಕಾದಿ ವಿಷದ ಹಾಗೆ ಪರಿಣಮಿಸುತ್ತದೆಂದು ಹೇಳಲು ಕಾರಣವೇನೆಂದರೆ, ಕ್ಷೇತ್ರ, ಸ್ತ್ರೀ ಧನಗಳ ಆಶೆಯಿಂದ ಪ್ರಾಣಹತ್ಯಾದಿ ಮಹಾಪರಾಧ ಗಳನ್ನು ಮಾಡಿರುವ ವಿಷಯವು ಸರ್ವರಿಗೂ ವೇದ್ಯವಾದುದರಿಂದ **ನಿರಯಾದಿ ನಿಮಿತ್ತತ್ವಾತ್** ಎಂಬ ಪ್ರಯೋಗವು. ಹೀಗೆ ಅಲ್ಪಾಸ್ಥಿರಗಳಾದ ವಿಷಯ ಸುಖಗಳು ಪರಿಣಾಮದಲ್ಲಿ ಕ್ಲೇಶ ಗಳನ್ನುಂಟುಮಾಡುವುವಾದುದರಿಂದ ರಾಜಸ ಸುಖಗಳೆಂದು ಹೇಳಲ್ಪಟ್ಟವು. ಈ ರಾಜಸ ಸುಖದಲ್ಲಿ ಮೊದಲು ಅನುಕೂಲವಾಗಿ ತೋರುವಿಕೆಯೂ ಪರಿಣಾಮದಲ್ಲಿ ಪ್ರತಿಕೂಲವಾಗಿಯೂ ತೋರೋಣವೂ ಹೇಳಲ್ಪಟ್ಟಿತು. ಇದನ್ನೇ ಮಹಾ ಭಾಗವತನಾದ ಪ್ರಹ್ಲಾದನು ರಾಕ್ಷಸ ಬಾಲರಿಗೆ ಉಪದೇಶಿಸುತ್ತಾನೆ:—"**ಯಾವತಃ ಕುರುತೇ ಜನ್ತುಃ ಸಂಬಂಧಾನ್ಮನಸಃ ಪ್ರಿಯಾನ್ । ತಾವಂತೋಽಸ್ಯ ನಿಖನ್ಯಂತೇ ಹೃದಯೇ ಶೋಕ ಶಂಕವಃ**" ಯಾವ ಯಾವುವು ಸುಖವೆಂದು ಎಲ್ಲಿಯವರೆಗೂ ಮನಸ್ಸಿನಿಂದ ಭಾವಿಸುವನೋ ಅವೆಲ್ಲಾ ಈತನಿಗೆ ಹೃದಯದಲ್ಲಿ ಶೋಕವೆಂಬ ಗೂಟವನ್ನು ನೆಟ್ಟ ಹಾಗೆಯೇ ಎಂದು ಹೇಳಲ್ಪಟ್ಟಿರುತ್ತದೆ. ಪ್ರಥಮ ದಲ್ಲಿ ಸುಖವೆಂಬ ಭಾವನೆಯೂ ಬಾಲ ಬುದ್ಧಿಯಿಂದ ಹಾಗೆ ತೋರುತ್ತದೇ ವಿನಾ ನಿಜವಾ ಗಿಯೂ ಸುಖವಿಲ್ಲವೆಂದೂ ಹೇಳಲ್ಪಟ್ಟಿರುತ್ತದೆ—"**ಕ್ಷುತ್ತೃಷ್ಣೋಃ ಪಶಮಂ ತದ್ವಚ್ಛೀತಾ ದ್ಯುಪಶಮಂ ಸುಖವ್ । ಮನ್ಯತೇ ಬಾಲ ಬುದ್ಧಿತ್ವಾತ್ ದುಃಖ ಏವ ಹಿ ತತ್ಪುನಃ**".

**ಮೂ. ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥೩೯॥**

---

ಹಸಿವಿದ್ದರೆ ಅನ್ನ ಸೇವನೆಯು ಸುಖವೆಂದೂ, ಹಾಗೆಯೇ ಚಳಿಯಿದ್ದರೆ ಶೈತ್ಯೋಪಶಮನವು ಸುಖವೆಂದೂ ಬಾಲ ಬುದ್ಧಿಯಿಂದ ತಿಳಿಯುವರು. ಕ್ಷುತ್ತಿಲ್ಲದಿದ್ದರೆ ಆಹಾರ ಸೇವನೆಯೂ ಚಳಿಯಿಲ್ಲದೆ ಥಳಿಯಿದ್ದರೆ ಶೈತ್ಯೋಪಶಮನವೂ ದುಃಖವಾಗಿಯೇ ತೋರುತ್ತವೆ. ಹಾಗೆಯೇ ಶ್ರೀ ಪರಾಶರರೂ ಹೇಳಿರುತ್ತಾರೆ—"**ಅಗ್ನೇಶ್ಶೀತೇನ ತೋಯಸ್ಯತೃಷಾ ಭಕ್ತಸ್ಯಚ ಕ್ಷುದಾ । ಕ್ರಿಯತೇ ಸುಖಕರ್ತೃತ್ವಂ ತದ್ವಿಲೋಮಸ್ಯಚೇತರೈಃ**" (ವಿ. ಪು. ೧. ೧೭. ೭೪) ಇದು ದೈತ್ಯಸುತರಿಸ್ಸು ಕುರಿತ ಪ್ರಹ್ಲಾದೋಪದೇಶವು, ಇದರ ತಾತ್ಪರ್ಯವೇನೆಂದರೆ—ಅಗ್ನಿಯ ಮೂಲಕವಾಗಿ ಅದರ ಪ್ರತಿಯೋಗಿಯಾದ ಶೀತದಿಂದ ಸುಖಕರ್ತೃತ್ವಂ ಕ್ರಿಯತೇ ಎಂದರೆ ಸುಖವನ್ನುಂಟುಮಾಡೋಣವು ನಡೆಸಲ್ಪಡುತ್ತದೆ, ಹಾಗೆಯೇ ಬಾಯಾರಿಕೆಯ ಮೂಲಕ ನೀರಿಗೂ, ಹಸಿವಿನ ಮೂಲಕ ಅನ್ನಕ್ಕೂ ಸುಖದಾಯಿಕತ್ವ ಉಂಟು. ಹಾಗಲ್ಲದೆ ವಿಪರೀತಾವಸ್ಥೆಗಳಲ್ಲಿ ಈ ಸುಖದಾಯಿಗಳೇ ದುಃಖಪ್ರದಗಳಾಗುವುವು, ಆದುದರಿಂದ "**ತಸ್ಮಾದ್ದುಃಖಾತ್ಮಕಂ ನಾಸ್ತಿನಕಿಂಚಿತ್ ಸುಖಾತ್ಮಕಮ್**" ವಸ್ತುಗಳೇ ಸುಖ ಮತ್ತು ದುಃಖರೂಪಗಳಲ್ಲವು, ಮನಸ್ಸು ಬುದ್ಧಿ ಮೂಲಕವಾಗಿ ಆತ್ಮಾವಿನ ಭಾವನೆಯು ಸಮಗೆ ಬೇವಿನ ಸೊಪ್ಪು ಕಹಿಯಾಗಿ ಪ್ರತಿಕೂಲವು, ಅದೇ ಒಂಟೆಗೆ ರುಚಿಯಾಗಿ ಸುಖವು.

ತಾಮಸ ಸುಖಕ್ಕೆ ಮನಕೊಟ್ಟವರಲ್ಲಿ ಜರ್ಮನಿ ದೇಶದ ಹಿಟ್ಲರನೂ, ಇಟಲಿ ದೇಶದ ಮುಸಾಲನಿಯೂ ಜಪಾನ್ ದೇಶದ ಹಿರೋಹಿಟನೂ ನಿದರ್ಶನರು. ಇತಿಹಾಸಗಳಲ್ಲಿ ದುರ್ಯೋಧನನೂ ದುಶಾಸನನೂ ನಿದರ್ಶನರು. ಇವರುಗಳ ಗತಿ ಏನಾಯಿತು ಎಂಬುದು ಎಲ್ಲರಿಗೂ ವೇದ್ಯವಾದ ವಿಷಯವೇ. ॥೩೯॥

**ಮೂಲಕ್ಕೆ ಅರ್ಥವು**—ತಾಮಸ ಸುಖದ ಲಕ್ಷಣವನ್ನು ಬೋಧಿಸುತ್ತಾರೆ—**ಯತ್ಸುಖಂ**-ಯಾವ ಸುಖವು, **ಅಗ್ರೇ**-ವಿಷಯವನ್ನು ಅನುಭವಿಸುವ ಕಾಲದಲ್ಲೂ, **ಅನುಬಂಧೇಚ**-ಅದನ್ನನುಸರಿಸಿ ಬಂದ ಉತ್ತರ ಕಾಲದಲ್ಲೂ, ಪರಿಣಾಮದಲ್ಲೂ ಸಹ **ಆತ್ಮನಃ**-ತನಗೆ, **ಮೋಹನಂ**-ಮೋಹ ಬುದ್ಧಿಗೆ ಕಾರಣವೋ, ಮತ್ತು **ನಿದ್ರಾಲಸ್ಯ ಪ್ರಮಾದೊತ್ಥಂ**-ನಿದ್ರಾಲಸ್ಯ ಪ್ರಮಾದಗಳಿಂದುಂಟಾದದೋ, **ನಿದ್ರೆ** ಎಂದರೆ ತೂಕಡಿಸುವದು, **ಅಲಸ್ಯ**ವೆಂದರೆ ಕೆಲಸ ಮಾಡಬೇಕೆಂಬ ಚಟುವಟಿಕೆ ಇಲ್ಲದಿರೋಣವು, **ಪ್ರಮಾದ**ವೆಂದರೆ ವ್ಯಾಮರತಿರೋಣವು, ಇವುಗಳಿಂದ ಉತ್ಪನ್ನವಾದುದೋ, **ತತ್**-ಅಂತಹ ಸುಖವು, **ತಾಮಸ ಮುದಾಹೃತಮ್**-ತಾಮಸವೆಂದು ಹೇಳಲ್ಪಡುತ್ತದೆ. ಮದ್ಯಸೇವನೆ, ಭಂಗೀ ಕುಡಿಯುವದು, ನಶ್ಯವನ್ನು ಹಾಕುವದು, ಚುಟ್ಟಾ ಸೇದುವದು, ಇವೇ ಮೊದಲಾದವು ತಾಮಸ ಸುಖಗಳು, ಹಿಂದೆ ಸಾತ್ವಿಕ ರಾಜಸ ಸುಖಗಳ ವಿಷಯದಲ್ಲಿ ಅನುಭವ ವೇಳೆಯಲ್ಲಿ ಒಂದು ವಿಧವೂ ಪರಿಣಾಮ ಕಾಲದಲ್ಲಿ ಅದಕ್ಕೆ ವಿಪರೀತವಾಗಿ ಇರುತ್ತವೆಂದು ಹೇಳಲ್ಪಟ್ಟಿತು. ಈ ತಾಮಸ ಸುಖದಲ್ಲಾದರೋ ಅನುಭವ ವೇಳೆಯಲ್ಲೂ ತದನಂತರವೂ ಸಹ ಒಂದೇ ವಿಧವಾಗಿ ಮೋಹಜನಕವೆಂದು ಹೇಳಲ್ಪಟ್ಟಿತು. ಯಥಾರ್ಥ ಜ್ಞಾನವು ತಾಮಸ ಸುಖಾಧಿಕಾರಿಗೆ ಎಂದಿಗೂ ಇಲ್ಲವೆಂಬ ಭಾವವು. ರಾಜಸಿಗಾದರೋ ವಿಷದ ಹಾಗೆ ಪರಿಣಮಿಸಿದ ಕಾಲದಲ್ಲಾದರೂ ವಸ್ತುವು ಅಲ್ಪಾಸ್ಥಿರ ಸುಖದಾಯಕವೆಂಬುದು, ಮೊದಲು ಅನುಭವಾರಂಭದಲ್ಲಿ ಇಲ್ಲದಿದ್ದರೂ, ಕೊನೆಗೆ ಉಂಟಾಗುತ್ತದೆ. ತಾಮಸ ಸುಖಾಧಿಕಾರಿಗಾದರೋ ಯಾವಾಗಲೂ ಇಲ್ಲವು. ಮೊದಲಿಗೂ ಇಲ್ಲವು ಕೊನೆಗೂ ಇಲ್ಲವು. ಹಾಗಾಗಲು ಕಾರಣವೇನಂದರೆ ಆತನಿಗೆ ಉಂಟಾದ ಮೋಹಜ್ಞಾನವು, ನಿದ್ರಾಲಸ್ಯ ಪ್ರಮೋದ ಇವುಗಳಿಂದುಂಟಾದುದು. ಆದುದರಿಂದ ವಸ್ತು ಯಾಥಾತ್ಮ್ಯ ಜ್ಞಾನವು ಎಂದಿಗೂ

ಭಾ. **ಯತ್ಸುಖಮಗ್ರೇ ಚಾನುಬನ್ಧೇ ಚ-ಅನುಭವವೇಲಾಯಾಂ ವಿಪಾಕೇ ಚ ಆತ್ಮನಃ ಮೋಹನಂ-ಮೋಹ ಹೇತುರ್ಭವತಿ; ಮೋಹೋऽತ್ರ ಯಥಾವಸ್ಥಿತ ವಸ್ತ್ವಪ್ರಕಾಶೋऽಭಿಪ್ರೇತಃ, ನಿದ್ರಾಲಸ್ಯ ಪ್ರಮಾದೋತ್ಥಂ-ನಿದ್ರಾಲಸ್ಯ ಪ್ರಮಾದ ಜನಿತಂ, ನಿದ್ರಾದಯೋಹ್ಯನುಭವವೇಲಾಯಾಮಪಿ ಮೋಹಹೇತವಃ; ನಿದ್ರಾಯಾ ಮೋಹಹೇತುತ್ವಂ ಸ್ಪಷ್ಟಂ; ಆಲಸ್ಯಂ-ಇನ್ದ್ರಿಯ ವ್ಯಾಪಾರ ಮಾನ್ದ್ಯಂ**

---

ಉಂಟಾಗ-ವದಿಲ್ಲವು. ಕೆಟ್ಟ ಫಲಗಳುಂಟಾದರೂ ಕೂಡ ತಿದ್ದಿಕೊಳ್ಳುವ ಹಾಗಿಲ್ಲದ ದುಸ್ಥಿತಿಯಲ್ಲಿ ಈ ಅಧಿಕಾರಿಯು ಇರುತ್ತಾನೆಂಬ ಭಾವವು ಇಂತಹ ಅಧಿಕಾರಿಯು ನಿರತಿಶಯ ಸುಖ ಹೊಂದಲು ಸಾಧ್ಯವಿಲ್ಲದ ದುಸ್ಥಿತಿಯನ್ನು ಹೊಂದುತ್ತಾ ಹೋಗುವನು ಎಂಬ ಭಾವವು.

**ಭಾಷ್ಯಾರ್ಥವು. ಯತ್ಸುಖಂ**-ಯಾವ ಸುಖವು, **ಅಗ್ರೇಚಾನುಬನ್ಧೇ ಚ** ಎಂದರೆ **ಅನುಭವವೇಲಾಯಾಂ ವಿಪಾಕೇ ಚ**-ಅನುಭವ ವೇಳೆಯಲ್ಲೂ ಮತ್ತು ಪರಿಣಾಮದಲ್ಲೂ, **ಆತ್ಮನಃ**-ತನಗೆ, **ಮೋಹನಂ** ಎಂದರೆ **ಮೋಹಹೇತುಃ**-ಮೋಹಕ್ಕೆ ಕಾರಣವು, **ಭವತಿ**-ಆಗುತ್ತದೋ, **ಮೋಹೋऽತ್ರ ಯಥಾವಸ್ಥಿತ ವಸ್ತ್ವಪ್ರಕಾಶೋऽಭಿಪ್ರೇತಃ**-ಇಲ್ಲಿ ಮೋಹ ಶಬ್ದವು ಯಥಾರ್ಥವಾದ ವಸ್ತುವಿನ ಜ್ಞಾನವಿಲ್ಲದಿರುವಿಕೆ ಎಂಬ ತಾತ್ಪರ್ಯ ಉಳ್ಳದುದು, ಆ ಸುಖವು ಇನ್ನೂ ಎಂತಹದ್ದೆಂದರೆ ಹೇಳಲ್ಪಡುತ್ತದೆ **ನಿದ್ರಾಲಸ್ಯ ಪ್ರಮಾದೋತ್ಥಂ** ಎಂದರೆ ನಿದ್ರೆ ಆಲಸ್ಯ ಪ್ರಮಾದಗಳಿಂದ **ಜನಿತಂ**-ಹುಟ್ಟಿದುದು. ಹೀಗೆ ನಿದ್ರಾಲಸ್ಯ ಪ್ರಮಾದೋತ್ಥವಾಗಿರುವದರಿಂದಲೇ **ಮೋಹನವು**-ಮೋಹಾಭಿಪ್ರಾಯಕ್ಕೆ ಹೇತುವು, ಅದು ಹೇಗೆ ಎಂಬುದನ್ನು ವ್ಯಕ್ತಪಡಿಸುತ್ತಾರೆ-**ನಿದ್ರಾದಯೋಹಿ**-ಈ ನಿದ್ರಾ ಆಲಸ್ಯ ಪ್ರಮಾದಗಳಾದರೋ, **ಅನುಭವ ವೇಲಾಯಾಮಪಿ**-ಕೊನೆಗೆ ಮಾತ್ರವೇ ಅಲ್ಲದೆ ಅನುಭವ ವೇಳೆಯಲ್ಲೂ ಕೂಡ. **ಮೋಹ ಹೇತವಃ**-ಮೋಹ ಜ್ಞಾನಕ್ಕೆ ಕಾರಣಗಳಷ್ಟೇ; **ಹಿ** ಶಬ್ದವು ಈ ವಿಷಯದಲ್ಲಿ ನಿಸ್ಸಂದೇಹತ್ವವನ್ನು ಸೂಚಿಸುತ್ತದೆ; ಒಂದೊಂದಾಗಿ ಅವು ಹೇಗೆ ಮೋಹ ಹೇತುಗಳೆಂಬುದನ್ನು ವ್ಯಕ್ತಪಡಿಸುತ್ತಾರೆ—**ನಿದ್ರಾಯಾಃ ಮೋಹಹೇತುತ್ವಂ ಸ್ಪಷ್ಟವತ್**-ನಿದ್ರೆಯು ಮೋಹಜ್ಞಾನಕ್ಕೆ ಕಾರಣವೆಂಬುದು ಎಲ್ಲರಿಗೂ ಪ್ರತ್ಯಕ್ಷಸಿದ್ಧವು; ಇದನ್ನು ಅನುಮಾನ ಪ್ರಮಾಣದಿಂದಾಗಲಿ ಶಾಸ್ತ್ರಪ್ರಮಾಣದಿಂದಾಗಲಿ ಸಾಧಿಸಬೇಕಾದುದಿಲ್ಲವೆಂಬ ಭಾವವು; ಇಲ್ಲಿ ನಿದ್ರಾಶಬ್ದವು ಶಾಸ್ತ್ರವಿಹಿತವಾದ ಎರಡು ಯಾಮದ ದೇಹ ಸುಖಕ್ಕೆ ಆವಶ್ಯಕವಾದ ನಿದ್ರೆಯು ಹೇಳಲ್ಪಡಲಿಲ್ಲವು, ಇದು ದೇಹಾಯಾಸವನ್ನು ಪರಿಹರಿಸುವದಾಗಿ ಆವಶ್ಯಕವೇ. "**ಯಾಮದ್ವಯಂ ಶಯಾನಸ್ತು ಬ್ರಹ್ಮಭೂಯಾಯ ಕಲ್ಪತೇ**" ಎಂದೂ ಮತ್ತು "**ಅಕಾಲೇಷ್ವಪ್ರಸಜ್ಞಾಚ್ಚ ನಚ ನಿದ್ರಾನಿಷೇವಿತಾ || ಸುಖಾಯುಷೀ ಪರಾಕುರ್ಯಾತ್ಕಾಲ ರಾತ್ರಿರಿವಾಪರಾ**" ಎಂದೂ ಹೇಳಲ್ಪಟ್ಟಿರುತ್ತದೆ ಈ ನಿದ್ರೆಯು ಸುಖದಿಂದ ಯಾರಾದರೂ ವಿಚ್ಛೇದವನ್ನುಂಟುಮಾಡಿದರೆ ಕೋಪ ಉಂಟಾಗುವದರಿಂದ ನಿದ್ರೆಯು ಸುಖರೂಪವೆಂಬುದು ಸಿದ್ಧವು, ಆದುದರಿಂದ ಜ್ಞಾನಮಾಂದ್ಯವನ್ನುಂಟುಮಾಡುವ ನಿದ್ರೆಯು ಯಾವುದೆಂದರೆ—(೧) ಅಕಾಲ ನಿದ್ರೆಯು, ಮಧ್ಯಾಹ್ನ ನಿದ್ರೆಯು; ಮತ್ತು ಪರಿಮಿತಿಯನ್ನತಿಕ್ರಮಿಸಿ ೧೦-೧೨ ಘಂಟೆಗಳ ಕಾಲ ನಿದ್ರೆಯು, ಹಾಗೆಯೇ ಆಲಸ್ಯವೂ ಸಹ ದೇಹಾವಯವ ಮೊದಲಾದವುಗಳು ಉಂಟಾದಾಗ ಆವಶ್ಯಕವೇ. ಆದರೆ ಇಲ್ಲಿ ಹೇಳಿರುವ ಆಲಸ್ಯವು ಇಂದ್ರಿಯ ವ್ಯಾಪಾರಗಳ ಮಾಂದ್ಯವು. ಮುಂದೆ ಆಲಸ್ಯದಿಂದ ಯಥಾರ್ಥ ಜ್ಞಾನವಿಲ್ಲದೆ ಮೋಹ ಜ್ಞಾನವು ಹೇಗೆ ಉಂಟಾಗುತ್ತದೆಂಬುದನ್ನು ಸ್ಪಷ್ಟಪಡಿಸುತ್ತಾರೆ—**ಆಲಸ್ಯಂ** ಎಂದರೆ

**ಇನ್ದ್ರಿಯ ವ್ಯಾಪಾರ ಮಾನ್ದ್ಯೇಚ ಜ್ಞಾನಮಾನ್ದ್ಯಂ ಭವತ್ಯೇವ; ಪ್ರಮಾದಃ-ಕೃತ್ಯಾನವಧಾನರೂಪ ಇತಿ, ತತ್ರಾಪಿ ಜ್ಞಾನಮಾನ್ಯಂ ಭವತಿ; ತತಶ್ಚ ತಯೋರಪಿ ಮೋಹಹೇತುತ್ವಮ್; ತತ್ಸುಖಂ ತಾಮಸ ಮುದಾಹೃತಮ್; ಅತಃ ಮುಮುಕ್ಷುಣಾ ರಜಸ್ತಮಸೀ ಅಭಿಭೂಯ ಸತ್ವಮೇವೋಪಾದೇಯ ಮಿತ್ಯುಕ್ತಂ ಭವತಿ. ||೩೯||**

**ಮೂ. ನತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷುವಾ ಪುನಃ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿ ಸ್ಸ್ಯಾತ್ತ್ರಿಭಿರ್ಗುಣೈಃ ||೪೦||**

---

**ಇನ್ದ್ರಿಯ ವ್ಯಾಪಾರ ಮಾನ್ದ್ಯಮ್**-ಇಂದ್ರಿಯ ವ್ಯಾಪಾರಗಳಲ್ಲಿ ಕೊರತೆಯು; **ಇನ್ದ್ರಿಯ ವ್ಯಾಪಾರ ಮಾನ್ದ್ಯೇಚ**-ಹಾಗೆ ಇಂದ್ರಿಯ ವ್ಯಾಪಾರಗಳಲ್ಲಿ ನ್ಯೂನತೆ ಯಾವಾಗ ಉಂಟಾಯಿತೋ, ಆಗ, **ಜ್ಞಾನಮಾನ್ದ್ಯಂಭವತ್ಯೇವ**-ಜ್ಞಾನದಲ್ಲೂ ನ್ಯೂನತೆಯೂ ಉಂಟಾಗಲೇಬೇಕು. ಸರಿಯಾದ ಇಂದ್ರಿಯ ಪ್ರವೃತ್ತಿ ಇದ್ದು ಅನಂತರ ವಿಮರ್ಶಿಸಿ ತಿಳಿಯುವ ಯೋಗ್ಯತೆಯು ಇದ್ದರಲ್ಲವೇ ಯಥಾರ್ಥ ಜ್ಞಾನೋತ್ಪತ್ತಿಯು, ಅದು ಯಾವಾಗ ಇಲ್ಲವೋ ಇನ್ದ್ರಿಯ ವ್ಯಾಪಾರ ಮಾನ್ದ್ಯದಿಂದ ಜ್ಞಾನಮಾನ್ದ್ಯವು ಉಂಟಾಗಲೇಬೇಕೆಂಬ ತಾತ್ಪರ್ಯವು; ಪ್ರಮಾದದಿಂದ ಅಯಥಾರ್ಥ ಜ್ಞಾನ ಉಂಟಾಗುವದು ಹೇಗೆಂಬುದನ್ನು ತಿಳಿಸುತ್ತಾರೆ-**ಪ್ರಮಾದಮ್, ಕೃತ್ಯನವಧಾನರೂಪ ಇತಿ**-ಮಾಡುವ ಕಾರ್ಯದಲ್ಲಿ ಸರಿಯಾದ ಜ್ಞಾನವಿಲ್ಲದಿರುವಿಕೆಯಾದುದರಿಂದ, ಪ್ರಯಾಸಪಟ್ಟು ಜ್ಞಾನವನ್ನು ಒಂದುಕಲ್ಲ ನಿಲ್ಲಿಸೋಣವು ಅವಧಾನವು; ಇದಕ್ಕೆ ಏಕಾಗ್ರತೆ ಎಂದೂ ಹೆಸರು, ಹಾಗೆ ಇಡಲು ಸಾಧ್ಯವಿಲ್ಲದಿರುವ ಸ್ಥಿತಿಯು **ಅನವಧಾನವು;** ಮುಖ್ಯವಾಗಿ ಗಮನಿಸತಕ್ಕದರ ವಿಷಯದಲ್ಲೂ ಅಲಕ್ಷ್ಯದಿಂದಿರೋಣವು, **ತತ್ರಾಪಿ**-ಆ ಸಂದರ್ಭದಲ್ಲೂ ಸಹ, **ಜ್ಞಾನಮಾನ್ದ್ಯಂಭವತಿ**-ಜ್ಞಾನಮಾನ್ದ್ಯವೇ ಉಂಟಾಗುತ್ತದೆ, ಎಂದರೆ ಅಯಥಾರ್ಥವಾದ ಮೋಹಜ್ಞಾನವೇ ಉಂಟಾಗುತ್ತದೆಂಬ ಭಾವವು; **ತತಶ್ಚ**-ಆ ಕಾರಣದಿಂದಲೇ, **ತಯೋರಪಿ**-ಆ ಆಲಸ್ಯ ಪ್ರಮಾದವೆರಡಕ್ಕೂ, **ಮೋಹ ಹೇತುತ್ವಂ**-ಮೋಹಕ್ಕೆ ಕಾರಣವಾಗಿರುವದು ಉಂಟೇ ಉಂಟು. ನಿದ್ರೆಯ ವಿಷಯದಲ್ಲಿ ಮೋಹಹೇತುತ್ವವು ಸ್ಪಷ್ಟವಾದುದರಿಂದ ಅದನ್ನು ಬಿಟ್ಟು ಇನ್ನು ಆಲಸ್ಯ ಪ್ರಮಾದಗಳ ವಿಷಯದಲ್ಲಿ ಮೋಹ ಹೇತುತ್ವವನ್ನು ಉಪಪಾದಿಸಿ ಹೇಳಿದುದರಿಂದ **ತಯೋರಪಿ** ಎಂಬ ಪ್ರಯೋಗವು; ಹೀಗೆ ನಿದ್ರಾಲಸ್ಯ ಪ್ರಮಾದಗಳು ಮೂರೂ ಮೋಹಜ್ಞಾನಕ್ಕೆ ಕಾರಣಗಳು ಎಂದು ಹೇಳಲ್ಪಟ್ಟಿತು. ಹೀಗೆ ಸಾತ್ವಿಕ, ರಾಜಸ, ತಾಮಸ ಸುಖಲಕ್ಷಣಗಳನ್ನು ಇಲ್ಲಿ ಹೇಳಿರುವದರ ಅಭಿಪ್ರಾಯವೇನೆಂಬುದನ್ನು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ, ಮೂಲದಲ್ಲಿ ಇದು ವ್ಯಕ್ತವಲ್ಲದಿದ್ದರೂ, ಒಂದು ಸರ್ವಶ್ರೇಷ್ಠವೆಂದೂ ಇನ್ನೊಂದು ಅಧಮವೆಂದೂ, ಇನ್ನೊಂದು ಅಧಮಾಧಮವೆಂದೂ ಹೇಳಿಬಿಟ್ಟರೆ, ಸರ್ವಶ್ರೇಷ್ಠವಾದುದು ಉಪದೇಯವೆಂಬುದು ವ್ಯಕ್ತವು; **ಅತಃ**-ಆ ಕಾರಣದಿಂದ, **ಮುಮುಕ್ಷುಣಾ**-ಮೋಕ್ಷಾರ್ಥಿಯಿಂದ, **ರಜಸ್ತಮಸೀ ಅಭಿಭೂಯ**-ರಾಜಸ ತಾಮಸ ಸುಖಗಳನ್ನು ನಿರಾಕರಿಸಿ, **ಸತ್ವಮೇವ**-ಸಾತ್ವಿಕ ಸುಖವೇ, **ಉಪಾದೇಯಂ**-ಗ್ರಾಹ್ಯವು, **ಇತುಕ್ತಂಭವತಿ**-ಎಂದು ಹೇಳಿದಂತಾಯಿತು; **ಇತ್ಯುಕ್ತಂಭವತಿ**-ಎಂಬ ಪ್ರಯೋಗವೇ, ಮೂಲದಲ್ಲಿ ಈ ಅಭಿಪ್ರಾಯವು ಹೇಳಲ್ಪಡಲಿಲ್ಲವೆಂಬುದೂ ತಾತ್ಪರ್ಯೇಣ ತೋರಿಬರುತ್ತದೆಂಬುದೂ ಸೂಚಿತವು. ||೩೯||

**ಮೂಲಕ್ಕೆ ಅರ್ಥವು**—ಪ್ರಕೃತಿ ಸಂಬಂಧದಿಂದ ಪ್ರಾಪ್ತವಾಗುವ ಮೂರು ಗುಣಗಳ ವಿಷಯವನ್ನು ೧೪ನೆಯ ಅಧ್ಯಾಯದಲ್ಲೂ, ೧೭ನೆಯ ಅಧ್ಯಾಯದಲ್ಲೂ, ಈ ಅಧ್ಯಾಯದಲ್ಲೂ

ಹೇಳಿ, ಬದ್ಧಚೇತನನ ಪಾಪ ಪುಣ್ಯರೂಪ ಕರ್ಮಗಳಿಗನುಗುಣವಾಗಿ ಚೇತನರಲ್ಲಿ ಈ ಮೂರು ಗುಣಗಳ ತಾರತಮ್ಯದಿಂದ ವೈವಿಧ್ಯವನ್ನು ಹೇಳಿ, ದೈವೀ ಸಂಪತ್ತುಳ್ಳ ನೀನೂ ಇತರ ಮೋಕ್ಷಾರ್ಥಿಗಳೂ, ಸತ್ತ್ವಗುಣಾಭಿವೃದ್ಧಿಯನ್ನೇ ಮಾಡಿಕೊಳ್ಳತಕ್ಕದ್ದೆಂದೂ, ಹಾಗೆಯೇ ಇತರ ಮೋಕ್ಷಾರ್ಥಿಗಳು ಸತ್ತ್ವಗುಣಾಭಿವೃದ್ಧಿಯನ್ನು ಮಾಡಿಕೊಳ್ಳತಕ್ಕದ್ದೆಂದೂ ಹೇಳಿ ನಿಗಮನ ಮಾಡಿ ಹೇಳುವ ಸಂದರ್ಭದಲ್ಲಿ, ಈ ಮನುಷ್ಯ ಲೋಕದಲ್ಲೂ, ಹಾಗೆಯೇ ಸ್ವರ್ಗ ಲೋಕದಲ್ಲೂ, ಇರುವವರೆಲ್ಲರೂ ಅವರುಗಳಲ್ಲಿರುವ ಈ ತ್ರಿಗುಣಗಳ ವ್ಯತ್ಯಾಸಗಳಿಂದ ತಾರತಮ್ಯ ಉಳ್ಳವರೇ ವಿನಾ ಈ ಮೂರು ಗುಣಗಳು ಎಲ್ಲರಲ್ಲೂ ಇದ್ದೇ ಇರುತ್ತದೆ ಎಂದೂ, ಈ ಶ್ಲೋಕ ದಲ್ಲಿ ಹೇಳಿ, ಈ ಗುಣ ತಾರತಮ್ಯಗಳನ್ನು ಚಾತುರ್ವರ್ಣ್ಯದಲ್ಲಿ ಕಾಣಬಹುದೆಂದು ತಿಳಿಸುತ್ತಾರೆ- **ಪೃಥಿವ್ಯಾಂವಾ**-ಈ ಭೂಲೋಕದಲ್ಲಾಗಲಿ, ಮುಂದೆ **ದೇವೇಷು**-ಎಂದು ಇರುವದರಿಂದ, ಇಲ್ಲಿ **ಪ್ರಾಣಿಷು** ಎಂದು ಇಟ್ಟುಕೊಳ್ಳತಕ್ಕದ್ದು, ಆದುದರಿಂದ ಈ ಲೋಕದ ಪ್ರಾಣಿಗಳಲ್ಲಾಗಲಿ, ಮತ್ತು **ದಿವಿದೇವೇಷುವಾಪುನಃ**-ಸ್ವರ್ಗದಲ್ಲಿರುವ ದೇವತೆಗಳಲ್ಲಾಗಲಿ, ಎಂದರೆ ಚತುರ್ಮುಖ ಮೊದಲುಗೊಂಡು ಇಲ್ಲಿನ ಕ್ರಿಮಿಕೀಟದವರೆಗೂ ಇರುವ ಬದ್ಧಚೇತನದಲ್ಲಿ, **ಪ್ರಕೃತಿಜೈಃ**-ನೇಹಸಂಬಂಧದಿಂದುಂಟಾದ, **ಏಭಿಸ್ತ್ರಿಭಿರ್ಗುಣೈಃ**-ಸತ್ವರಜಸ್ತಮಸ್ಸುಗಳಾದ ಈ ಮೂರು ಗುಣಗಳಿಂದ, **ಯತ್ಸತ್ವಂ**-ಯಾವ ಪ್ರಾಣಿಯು, **ಮುಕ್ತಂಸ್ಯಾತ್**-ಬಿಡಲ್ಪಟ್ಟದು ಆಗುತ್ತದೋ, **ತತ್**-ಅಂತಹ ಪ್ರಾಣಿಯು, **ನಾಸ್ತಿ**-ಇಲ್ಲವು. ಸ್ವರ್ಗಲೋಕದಲ್ಲಾಗಲಿ, ಈ ಭೂಲೋಕದಲ್ಲಾ ಗಲಿ, ಪ್ರಕೃತಿಸಂಬಂಧವಿಲ್ಲದೆಯೂ ಆ ಕಾರಣದಿಂದ ಈ ಮೂರು ಗುಣಗಳಿಲ್ಲದೆಯೂ ಇರುವ ಪ್ರಾಣಿಯನ್ನು ಎಲ್ಲಿ ಹುಡುಕಿ ನೋಡಿದರೂ ಸಿಕ್ಕುವದಿಲ್ಲವು. ಎಲ್ಲಾ ಪ್ರಾಣಿಗಳೂ ಪ್ರಕೃತಿ ಸಂಬಂಧವನ್ನು ಹೊಂದಿ ಪೂರ್ವಕರ್ಮಾನುರೂಪ ಪ್ರಾಪ್ತವಾದ ದೇಹವುಳ್ಳವರಾದುದರಿಂದ ಎಲ್ಲ ರಲ್ಲೂ ಈ ಮೂರು ಗುಣಗಳೂ ತಾರತಮ್ಯ ರೂಪದಲ್ಲಿದ್ದು ನಾನಾ ವೈವಿಧ್ಯಕ್ಕೆ ಕಾರಣ ವಾಗಿವೆ ಎಂಬ ತಾತ್ಪರ್ಯವು. ಇದರಿಂದ ಚತುರ್ಮುಖ ರುದ್ರೇಂದ್ರಾದಿ ಸಮಸ್ತ ದೇವತೆ ಗಳೂ ನಮ್ಮ ಹಾಗೆಯೇ ಬದ್ಧಚೇತನರೇ ಎಂದು ಹೇಳಿದಂತಾಯಿತು. ಆದರೆ ಅವರುಗಳು ನಮಗಿಂತ ಹೆಚ್ಚಿನ ಸುಕೃತಿಗಳಾದುದರಿಂದ ಕೆಲವು ಕಾಲ ಹೆಚ್ಚು ಸುಖಾನುಭವಕ್ಕಾಗಿ ಸ್ವರ್ಗಲೋಕ ಪ್ರಾಪ್ತಿಯು. ಅದು ಮುಗಿದನಂತರ "**ಕ್ಷೀಣೇ ಪುಣ್ಯೇ ಮರ್ತ್ಯ ಲೋಕಂ ವಿಶನ್ತಿ**" ಎಂದು ಹೇಳಿರುವ ಹಾಗೆ, ಅಲ್ಲಿ ಉಪಾಯಾನುಷ್ಠಾನ ಮಾಡದೇ ಹೋದರೆ, ಇಲ್ಲಿಗೇ ಬರಬೇಕಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. ಈ ಮೂರು ಗುಣಗಳ ತಾರತಮ್ಯದಿಂದಲೇ ಲೋಕದಲ್ಲಿ ಮನುಷ್ಯ ಮನುಷ್ಯರಿಗೂ ವ್ಯತ್ಯಾಸವುಂಟು. ಈ ಲೀಲಾ ವಿಭೂತಿಯಲ್ಲಿ ಇರು ವವರೆಗೂ ಪ್ರಕೃತಿ ಸಂಬಂಧವೂ ತನ್ಮೂಲಕ ಗುಣಗಳ ತಾರತಮ್ಯವೂ ತಪ್ಪಿದ್ದಲ್ಲವು. ಮೋಕ್ಷ ಪ್ರಾಪ್ತಿಯಾಗುವಾಗ, ಪ್ರಕೃತಿ ಸಂಬಂಧವೂ, ಈ ಗುಣಗಳ ಸಂಬಂಧವೂ ಹೊರಟುಹೋಗು ತ್ತವೆ ಆಗೀಗ ವೈವಿಧ್ಯವು ತೊಲಗಿ ಸಾಮ್ಯಶ್ರುತ್ಯನುಸಾರವಾಗಿ ಎಲ್ಲರೂ ಸಮರು. ಇಲ್ಲಿಯೂ ದೇಹಸಂಬಂಧವಿರುವಾಗಲೇ ಎಲ್ಲರೂ ಸಮರೆಂಬ ಹೇಳಿಕೆಯು ಶಾಸ್ತ್ರಜ್ಞಾನ ಶೂನ್ಯ ತೆಯನ್ನು ತಿಳಿಸುತ್ತದೆ. ಹೀಗೆ ಜ್ಞಾನಶೂನ್ಯರೇ ದೇಹದೊಂದಿಗೇ ಎಲ್ಲರೂ ಸಮರೆಂದು ಹೇಳಿ ಕೊಳ್ಳುತ್ತಾ, ಆದರೆ ತಾವೇ ಒಂದು ಪಂಗಡದರಾಗಿ ಇನ್ನೊಂದು ಪಂಗಡದವರನ್ನು ದ್ವೇಷಿ ಸುತ್ತಾ, ಲೋಕದಲ್ಲೆಲ್ಲಾ ಅಶಾಂತತೆಯನ್ನು ಹರಡುತ್ತಿರುವರು. ಎಲ್ಲೆಲ್ಲೂ ಅಸಮತ್ವವೇ ವಿನಾ ಸಮತ್ವವು ಈ ದೇಹದೊಂದಿಗಿರುವಾಗ ಎಂದಿಗೂ ಇಲ್ಲವು. ದೇಹವು ಬಿಟ್ಟುಹೋದ ರೇನೇ ಆಗ ಸಮತ್ವವೆಂದು ಹಿಂದೆ "**ವಿದ್ಯಾವಿನಯ ಸಂಪನ್ನೇ**" ಎಂಬ ಶ್ಲೋಕದಲ್ಲಿ ವಿಶದ ವಾಗಿ ಉಪಪಾದಿಸಲ್ಪಟ್ಟಿತು. (ಗೀ. ೫-೧೮). ಇಲ್ಲಿರುವ ವ್ಯತ್ಯಾಸಗಳನ್ನು ಮನಸ್ಸಿನಲ್ಲಿಟ್ಟು ಮೋಕ್ಷಸ್ಥಿತಿಯಲ್ಲೂ ಹಾಗೆಯೇ ವ್ಯತ್ಯಾಸವೆಂಬ ಹೇಳಿಕೆಯೂ ಶಾಸ್ತ್ರಪಜ್ಞಗೆ ಅನುಗುಣ ವಾಗಿ ತೋರುವುದಿಲ್ಲವು. ಆಗಲಿ, ದೇವತೆಗಳು ಸುಕೃತಗಳನ್ನು ಮಾಡಿ ಅಂತಹ ಉತ್ಕೃಷ್ಟ ಪದವಿಯನ್ನು ಹೊಂದಿರುವದರಿಂದ ಅವರಲ್ಲಿ ಸಾತ್ವಿಕಾಂಶವು ಅಧಿಕವಾಗಿದೆ ಎಂದೇನೋ

**ಭಾ. ಪೃಥಿವ್ಯಾಂ ಮನುಷ್ಯಾದಿಷು, ದಿವಿದೇವೇಷುವಾ, ಪ್ರಕೃತಿ ಸಂಸೃಷ್ಟೇಷು ಬ್ರಹ್ಮಾದಿ ಸ್ಥಾವರಾಂತೇಷು ಪ್ರಕೃತಿಜೈರೇಭಿ ಸ್ತ್ರಿಭಿರ್ಗುಣೈರ್ಮುಕ್ತಂ ಯತ್ಸತ್ತ್ವಂ ಪ್ರಾಣಿಜಾತಂ ನತದಸ್ತಿ ॥ ४೦ ॥**

---

ಊಹಿಸಬಹುದು. ಅವರಲ್ಲೂ ರಾಜಸ ತಾಮಸಾಂಶಗಳುಂಟೋ ಎಂಬ ಸಂದೇಹವು ಕೆಲವರಿಗಿರಬಹುದು. ರುದ್ರನು ದಕ್ಷಬ್ರಹ್ಮನ ಯಾಗವನ್ನು ಧ್ವಂಸಮಾಡಿದುದೂ, ಇಂದ್ರನು ಗೌತಮ ಸತಿಯೊಂದಿಗೆ ರಮಿಸಿದುದೂ, ಮತ್ತು ಕಯಾಧುವೊಂದಿಗೆ ರಮಿಸಬೇಕೆಂದು ಪ್ರಯತ್ನಿಸಿದುದೂ, ದೂರ್ವಾಸಋಷಿಯಿಂದ ಕೊಟ್ಟಹಾರವನ್ನು ಸನ್ಮಾನಿಸದಿದ್ದುದೂ, ನಹುಷನು ಶಚಿಯ ಪತಿಯಾಗಿರಬೇಕೆಂದಪೇಕ್ಷಿಸಿದುದೂ, ಇವೆಲ್ಲವೂ ಅವರುಗಳಲ್ಲಿದ್ದ ರಾಜಸ ತಾಮಸಾಂಶಗಳಿಗೆ ನಿದರ್ಶನಗಳು. ॥ ४೦ ॥

**ಭಾಷ್ಯಾರ್ಥವು**—ಪ್ರಾಕೃತಗುಣಾತೀತದಿಂದಲ್ಲವೇ ಶುದ್ಧಸತ್ವಮಯವಾದ ದಿವ್ಯ ವೈಕುಂಠದಲ್ಲಿ ಭಗತ್ಪ್ರಾಪ್ತಿ ಲಕ್ಷಣರೂಪ ಮೋಕ್ಷವು; ಹೀಗಿರುವಾಗ ಸರ್ವ ಪ್ರಾಣಿಗಳಿಗೂ ಇಲ್ಲಿಯೂ ಸ್ವರ್ಗಾದಿ ಲೋಕಗಳಲ್ಲಿಯೂ ಈ ಮೂರು ಗುಣಗಳ ತಾರತಮ್ಯಭಾವದಿಂದ ಉತ್ಕೃಷ್ಟಾಪಕೃಷ್ಟ ಜನ್ಮ, ಗುಣ, ವ್ಯಾಪಾರ ತಾರತಮ್ಯಗಳೂ ಯಾವುವು ತಪ್ಪಿದ್ದಲ್ಲವೆಂದು ಹೇಳುತ್ತಾರೆ— **ದಿವಿದೇವೇಷುವಾ**-ಸ್ವರ್ಗದಲ್ಲಿ ದೇವತೆಗಳಲ್ಲೂ, **ಪೃಥಿವ್ಯಾಂ ಮನುಷ್ಯಾದಿಷುವಾ**-ಮೂಲದಲ್ಲಿ **ದೇವೇಷುವಾ**-ಎಂದಿರುವದರಿಂದ ಪೃಥಿವ್ಯಾಂ ಎಂಬುದರಿಂದ ಮನುಷ್ಯಾದಿಷುವಾ ಎಂದು ಸೇರಿಸಿ ವ್ಯಾಖ್ಯಾನಮಾಡಿರುತ್ತಾರೆ, ಭೂಮಿಯಲ್ಲಿ ಮನುಷ್ಯರೇ ಮೊದಲಾದ ಪ್ರಾಣಿಗಳಲ್ಲೂ, ಇಲ್ಲಿ **ವಾ** ಎಂಬುದು ಸಮುಚ್ಚಯಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ, ವಿಕಲ್ಪಾರ್ಥವಲ್ಲವು, ಹೀಗೆ **ಪ್ರಕೃತಿ ಸಂಸೃಷ್ಟೇಷು**-ಪ್ರಕೃತಿಯಿಂದ ಸೇರಿರುವ ಎಂದರೆ ದೇಹಗಳನ್ನು ಹೊಂದಿರುವ, **ಬ್ರಹ್ಮಾದಿಸ್ಥಾವರಾನ್ತೇಷು**-ಚತುರ್ಮುಖ ಮೊದಲುಗೊಂಡು, ಸ್ಥಾವರಗಳನ್ನೇ ಅಂತವಾಗಿರುವ ನಾಲ್ಕು ವಿಧಗಳಾದ ದೇವ, ಮನುಷ, ತಿರ್ಯಕ್‌ಸ್ಥಾವರಗಳಾದ ಪ್ರಾಣಿಗಳಲ್ಲಿ, **ಪ್ರಕೃತಿಜೈರೇಭಿ ಸ್ತ್ರಿಭಿರ್ಗುಣೈಃ**-ಪ್ರಕೃತಿಯಿಂದುಂಟಾದ ಈ ಮೂರುಗುಣಗಳಾದ ಸಾತ್ವಿಕ ರಾಜಸ ತಾಮಸ ಗುಣಗಳಿಂದ, **ಮುಕ್ತಂ**-ಬಿಡಲ್ಪಟ್ಟ, **ಯತ್ಸತ್ತ್ವಂ**-ಎಂದರೆ **ಪ್ರಾಣಿಜಾತಂ**-ಪ್ರಾಣಿಸಮೂಹವುಂಟೋ, **ನತದಸ್ತಿ**-ಅಂತಹ ಪ್ರಾಣಿವರ್ಗವು ಇಲ್ಲವೇ ಇಲ್ಲವು. ಇಲ್ಲಿ **ದಿವಿ** ಶಬ್ದದಿಂದ, ಭೂಮಿ ವ್ಯತಿರಿಕ್ತವಾದ ಭುವಃಸುವಃ ಮೊದಲಾದ ಮತ್ತು ಅಗ್ನಿ ವರುಣ ಕುಬೇರಾದಿ ಲೋಕಗಳೂ ಉಪಲಕ್ಷಣ ರೂಪದಲ್ಲಿ ಹೇಳಲ್ಪಟ್ಟವು. ಎಲ್ಲಾ ಚೇತನರಿಗೂ ದೇಹ ಮೂಲಕ ಪ್ರಕೃತಿ ಸಂಸರ್ಗವು ಇದ್ದೇ ಇರುತ್ತದೆ. ತನ್ಮೂಲಕ ಸತ್ವರಜೋಸ್ತಮೋಗುಣಗಳು ಪ್ರತಿಯೊಬ್ಬ ಪ್ರಾಣಿಯಲ್ಲೂ ಉಂಟೇ ಉಂಟು. ಆದರೆ ಮಹರ್ಷಿಗಳು ಜ್ಞಾನನಿಷ್ಠರೇ ಮೊದಲಾದವರುಗಳಲ್ಲಿ ಸಾತ್ವಿಕ ಗುಣವು ತುಂಬಾ ಹೆಚ್ಚು, ರಾಜಸ ತಾಮಸ ಗುಣಗಳು ಕಮ್ಮಿ, ಹೀಗೆ ಗುಣಗಳ ತಾರತಮ್ಯದಿಂದ ಪ್ರಾಣಿಗಳಲ್ಲೆಲ್ಲಾ ತಾರತಮ್ಯ ಉಂಟು. ಮಹಾಪ್ರಾಜ್ಞರಲ್ಲೂ ರಜಸ್ತಮೋಗುಣಗಳ ಕಾರ್ಯವೂ ಉಂಟೆಂಬುದನ್ನು, ವಸಿಷ್ಠ ವಿಶ್ವಾಮಿತ್ರರುಗಳಿಗಿದ್ದ ಪರಸ್ಪರ ಕ್ರೋಧಕಲಹಗಳಿಂದಲೂ, ವ್ಯಾಪಾರಗಳಿಂದಲೂ ತಿಳಿಯಬಹುದು. ಹಾಗೆಯೇ ಪರಾಶರರು ತಮ್ಮ ತಂದೆಯನ್ನು ರಾಕ್ಷಸನು ವಧಿಸಿದುದರಿಂದ ಸರ್ವರಾಕ್ಷಸ ನಾಶಕ್ಕಾಗಿ ಕೋಪದಿಂದ ಯಜ್ಞವನ್ನಾರಂಭಿಸಿದರು. ಆಂಜನೇಯನು ತನ್ನ ಬಾಲಕ್ಕೆ ಬೆಂಕಿಯನ್ನು ಹಚ್ಚಿದರಲ್ಲಾ ಎಂಬ ಕ್ರೋಧದಿಂದ ಸೀತೆಗೂ ಏನಾದರೂ ತೊಂದರೆಯಾದೀತೋ ಎಂಬ ಜ್ಞಾನಕೂಡವಿಲ್ಲದೆ ಲಂಕೆಯನ್ನೆಲ್ಲಾ ದಹಿಸಿಬಿಟ್ಟು, ಆಬಾಲವೃದ್ಧರನ್ನೆಲ್ಲಾ ಶೋಕಸಾಗರದಲ್ಲಿ ಮುಳಿಗಿಸಿ, ಕೊನೆಗೆ ಪರಿತಾಪದಿಂದ **"ಧನ್ಯಾಸ್ತೇ ಪುರುಷಶ್ರೇಷ್ಠಾಃ ಯೇಬುದ್ಧ್ಯಾ ಕೋಪ ಮುತ್ಥಿತಮ್ । ನಿರುಂಧಂತಿ ಮಹಾತ್ಮಾನೋ ದೀಪ್ತಮಗ್ನಿ ಮಿವಾಂಭಸಾ"**

**ಭಾ ಅವ.** (೧) **"ತ್ಯಾಗೇನೈಕೇ ಅಮೃತತ್ವಮಾನಶುಃ" ಇತ್ಯಾದಿಷು ಮೋಕ್ಷಸಾಧನತಯಾನಿರ್ದಿಷ್ಟಸ್ತ್ಯಾಗಃ ಸಂನ್ಯಾಸ ಶಬ್ದಾರ್ಥಾದನನ್ಯಃ; ಸ ಚ ಕ್ರಿಯಮಾಣೇಷ್ವೇವ ಕರ್ಮಸು ಕರ್ತೃತ್ವತ್ಯಾಗಮೂಲಃ; ಫಲಕರ್ಮಣೋಸ್ತ್ಯಾಗಃ**

---

ಎಂದಾರಂಭಿಸಿ ಕೋಪವನ್ನು ನಿಂದಿಸಿರುತ್ತಾರೆ. ಅರ್ಜುನನು ಒಂದು ಸಮಯದಲ್ಲಿ ತನ್ನ ಪಿತೃಸಮಾನನಾದ ಜ್ಯೇಷ್ಠ ಭ್ರಾತನನ್ನೇ ವಧಿಸಲು ಯತ್ನಿಸುವನು. ಹೀಗೆ ಅನೇಕ ನಿದರ್ಶನಗಳುಂಟು. ಈ ಶ್ಲೋಕದಲ್ಲಿ ಚತುರ್ಮುಖನೇ ಮೊದಲಾದ ಸಮಸ್ತ ದೇವತೆಗಳೂ ಕೂಡ ನಮ್ಮ ಹಾಗೆ ಬದ್ಧಚೇತನರೆಂಬುದಕ್ಕೆ **"ಬ್ರಹ್ಮಾದ್ಯಾಸ್ಸಕಲಾದೇವಾ ಮನುಷ್ಯಾಃ ಪಶವಸ್ತಥಾ। ವಿಷ್ಣುಮಾಯಾ ಮಹಾವರ್ತಮೋಹಾನ್ಧತಮಸಾವೃತಾಃ"** (ವಿ. ಪು. ೫ ೩೦.೧೭) ಮತ್ತು **"ಅಶುದ್ಧಾಸ್ತೇ ಸಮಸ್ತಾಸ್ತು ದೇವಾದ್ಯಾಃ ಕರ್ಮಯೋನಯಃ"** (ವಿ ಪು. ೬ ೭ ೭೭) ಪ್ರಕೃತಿ ಸಂಬಂಧಯುಕ್ತರಾದುದರಿಂದ ದೇವತೆಗಳೇ ಮೊದಲಾದವರೆಲ್ಲರೂ ಅಶುದ್ಧರು, ಕರ್ಮಮೂಲಕ ಜನಿಸಿದವರು ಎಂಬ ಶ್ರೀ ಪರಾಶರೋಕ್ತಿಯೂ, **"ಚಿನ್ತಯನ್ತೋ ಹಿ ಯಂ ನಿತ್ಯಂ ಬ್ರಹ್ಮೇಶಾನಾದಯಃ ಪ್ರಭುಮ್। ನಿಶ್ಚಯಂ ನಾಧಿಗಚ್ಛನ್ತಿ ತಮಸ್ಮಿ ಶರಣಂಗತಃ"** (ರಾ ಉತ್ತರ ೧೦೪.೭) **ಚತುರ್ಮುಖ ರುದ್ರರೂ** ಮೊದಲಾದ ದೇವತೆಗಳು ಸರ್ವೇಶ್ವರನನ್ನು ಧ್ಯಾನಿಸಿ ನಿಶ್ಚಯವನ್ನು ತಿಳಿಯದೇ ಹೋದರು ಎಂದು ಹೇಳಿರುವದರಿಂದ ಕರ್ಮವಶರಾಗಿ ಜ್ಞಾನತಿರೋಹಿತತ್ವ ಉಳ್ಳವರೆಂಬ ಶ್ರೀ ವಾಲ್ಮೀಕಿ ಮಹರ್ಷಿ ವಾಕ್ಯವು. ಹೀಗೆಯೇ ಮನು ವ್ಯಾಸ ಮೊದಲಾದ ಪ್ರಾಜ್ಞರ ಉಕ್ತಿಗಳಿವೆ **"ಆಬ್ರಹ್ಮಸ್ತಂಬ ಪರ್ಯನ್ತಾ ಜಗದನ್ತರ್ವ್ಯವಸ್ಥಿತಾಃ। ಪ್ರಾಣಿನಃ ಕರ್ಮಜನಿತ ಸಂಸಾರವಶವರ್ತಿನಃ"** ಎಂಬ ಪ್ರಮಾಣವೂ ಇರುತ್ತದೆ; ಆದುದರಿಂದಲೇ ಮೂಲದಲ್ಲಿ **ಪೃಥಿವ್ಯಾಂವಾ ದಿವಿದೇವೇಷುವಾ** ಎಂದು ಇರುವದಕ್ಕೆ ಒಟ್ಟು ಸೇರಿಸಿ **ಬ್ರಹ್ಮಾದಿ ಸ್ಥಾವರಾನ್ತೇಷು** ಎಂಬ ವ್ಯಾಖ್ಯಾನವು ಮೂಲದಲ್ಲಿರುವ **ಸತ್ವಂ** ಎಂಬುವುದಕ್ಕೆ, ಪ್ರಕರಣವು ಗುಣತ್ರಯ ಪ್ರಶಂಸೆಯಾದುದರಿಂದ, ಸಾತ್ವಿಕಗುಣವೆಂಬರ್ಥವೆಂಬ ಭ್ರಮೆಯು ಬಾರದಿರುವುದಕ್ಕಾಗಿ, **ಸತ್ವಂ** ಎಂಬುದಕ್ಕೆ **ಪ್ರಾಣಿಜಾತಂ** ಎಂದು ಅರ್ಥಮಾಡಿರುತ್ತಾರೆ; **ಸತ್ವಂ** ಎಂಬುವದರಿಂದ ಪ್ರಾಣಿವರ್ಗವೆಲ್ಲಾ ಹೇಳಲ್ಪಡುವುದರಿಂದ **ಪ್ರಾಣಿಜಾತಂ** ಎಂಬ ಪ್ರಯೋಗವು, ಗುಣತ್ರಯದಿಂದ ವೈವಿಧ್ಯವನ್ನು ಹೇಳುವ ಪ್ರಕರಣವು ಇಲ್ಲಿಗೆ ಮುಗಿಯಿತು ಎಂದು ಭಾವಿಸತಕ್ಕದ್ದಲ್ಲವು; ಏಕೆಂದರೆ ಮುಂದೆ **ಸ್ವಭಾವ ಪ್ರಭವೈರ್ಗುಣೈಃ** ಎಂದು ಮುಂದಿನ ಶ್ಲೋಕದಲ್ಲೇ ಹೇಳಲ್ಪಡುವುದರಿಂದ.

**ಭಾಷ್ಯಾವತಾರಿಕೆಯ ಅರ್ಥವು**—ಹಿಂದಿನ ಶ್ಲೋಕದಲ್ಲಿ ಈ ಗುಣತ್ರಯಗಳ ತಾರತಮ್ಯದಿಂದಲೇ ಸಮಸ್ತ ಬದ್ಧಚೇತನದಲ್ಲಿ ಎಲ್ಲಾ ವಿಧದಲ್ಲೂ ವೈವಿಧ್ಯವೂ ಎಂದು ಸ್ಪಷ್ಟವಾಗಿ ತಿಳಿಸಿ, ಮುಂದೆ ಅತಾರತಮ್ಯದಿಂದಲೇ ವರ್ಣಾಶ್ರಮಾದಿ ಅನೇಕ ವಿಭಾಗಗಳೂ ಮತ್ತು ಅವರುಗಳ ಸ್ವಭಾವ ಕಾರ್ಯಗಳಲ್ಲೂ ವ್ಯತ್ಯಾಸವು ಎಂದು ಹಿಂದೆ ಹೇಳಿದುದನ್ನೇ ಮುಂದೆ ಅನುವಾದಮಾಡಿ ಹೇಳಲ್ಪಡುತ್ತದೆಂದು ತಿಳಿಸುವ ಸಂದರ್ಭದಲ್ಲಿ ಅಧ್ಯಾಯ ಮೊದಲುಗೊಂಡು ಇದುವರೆಗೂ ಚರ್ಚಿಸಲ್ಪಟ್ಟ ವಿಷಯಗಳನ್ನು ಅನುವದಿಸಿ ಅವತಾರಿಕೆಯ ಮೂಲಕ ತಿಳಿಸುತ್ತಾರೆ-ತೈತ್ತರೀಯ ನಾರಾಯಣೀಯದಲ್ಲಿ **"ತ್ಯಾಗೇನೈಕೇ ಅಮೃತತ್ವ ಮಾನಶುಃ"** ಇತ್ಯಾದಿಷು ಎಂಬಿವೇ ಮೊದಲಾದ ಪ್ರಮಾಣಗಳಲ್ಲಿ **ಮೋಕ್ಷಸಾಧನತಯಾ ನಿರ್ದಿಷ್ಟಃ**—ಮೋಕ್ಷಕ್ಕೆ ಸಾಧನವೆಂಬದಾಗಿ ಹೇಳಲ್ಪಟ್ಟ, **ತ್ಯಾಗಃ**-ತ್ಯಾಗವೆಂಬುದು, **ಸಂನ್ಯಾಸ ಶಬ್ದಾತ್**-ಸಂನ್ಯಾಸ ಶಬ್ದಕ್ಕಿಂತಲೂ, **ಅನನ್ಯಃ**-ಬೇರೆಯಾದುದಲ್ಲವು, **ಸಚ**-ಆ ಸಂನ್ಯಾಸ ಅಥವಾ ತ್ಯಾಗವಾದರೋ, **ಕ್ರಿಯಮಾಣೇಷ್ವೇವ ಕರ್ಮಸು**-ವಿಹಿತ ಕರ್ಮಗಳಾದುದರಿಂದ ಮಾಡ

---

(೧) ತೈ. ನಾ. ೧೦.

**ಕರ್ತೃತ್ವತ್ಯಾಗಶ್ಚ ಪರಮಪುರುಷೇ ಕರ್ತೃತ್ವಾನು ಸಂಧಾನೇ ನೇತ್ಯುಕ್ತಮ್;**
**ಏತತ್ಸರ್ವಂ ಸತ್ತ್ವಗುಣವೃದ್ಧಿ ಕಾರ್ಯಮಿತಿ ಸತ್ತ್ವೋಪಾದೇಯತಾ ಜ್ಞಾಪನಾಯ**

---

ಬೇಕಾದ ಕರ್ಮಗಳಲ್ಲೇ, **ಕರ್ತೃತ್ವತ್ಯಾಗ ಮೂಲಃ**-ತನಗೆ ಕರ್ತೃತ್ವ ಉಂಟೆಂಬ ಅಭಿಮಾನ ತ್ಯಾಗವನ್ನೇ ಮುಖ್ಯವಾಗಿ ಉಳ್ಳದ್ದು. ಇಲ್ಲಿ ತ್ಯಾಗ ಅಥವಾ ಸಂನ್ಯಾಸ ಶಬ್ದವು, ಕರ್ತೃತ್ವ ತ್ಯಾಗವನ್ನು ಬೋಧಿಸುದುದು ಉಪಲಕ್ಷಣವಾಗಿ, **ಫಲಕರ್ಮಗಳ** ತ್ಯಾಗವನ್ನೂ ಬೋಧಿಸಿದಂತಾಯಿತು ಎಂದು ವ್ಯಾಖ್ಯಾನಮಾಡುತ್ತಾರೆ-**ಫಲಕರ್ಮಣೋಸ್ತ್ಯಾಗಃ**-ಕರ್ಮದಿಂದುಂಟಾಗುವ ಫಲದ ಮತ್ತು ತಾನುಮಾಡಿದ ಕರ್ಮವೆಂಬ ಮಮತಾ ತ್ಯಾಗವೂ, ಹಾಗೆಯೇ ಕರ್ತೃತ್ವ ತ್ಯಾಗಶ್ಚ—ಕರ್ತೃತ್ವ ತ್ಯಾಗವೂ ಸಹ, **ಪರಮ ಪುರುಷೇ**-ಪರಮ ಪುರುಷನಲ್ಲೇ, ಎಂದು, **ಕರ್ತೃತ್ವಾನು ಸಂಧಾನೇನೋಕ್ತಮ್**-ಆತನಲ್ಲಿ ಕರ್ತೃತ್ವವನ್ನು ಅನುಸಂಧಾನ ಮಾಡುವದರ ಮೂಲಕ ಉಂಟಾಗುತ್ತದೆಂದು ಹೇಳಲ್ಪಟ್ಟಿತು. ಎಲ್ಲಿ? ಎಂದರೆ ತ್ಯಾಗವೂ ಸಂನ್ಯಾಸವೂ ಒಂದೇ ಎಂದು ೧೨ ನೆಯ ಶ್ಲೋಕದಲ್ಲೂ, ಕರ್ಮಫಲಗಳ ತ್ಯಾಗವೇ ತ್ಯಾಗವೆಂದು ೨ ನೆಯ ಶ್ಲೋಕದಲ್ಲೂ, ಅಲ್ಲಿಯೇ ನ್ಯಾಸ ಸಂನ್ಯಾಸಗಳೆರಡೂ ಒಂದೇ ಎಂದೂ ಹೇಳಲ್ಪಟ್ಟಿವೆ ಹಾಗೆಯೇ ಕರ್ಮಫಲಗಳ ತ್ಯಾಗವೇ ತ್ಯಾಗವೆಂದು ೧೧ ನೆಯ ಶ್ಲೋಕದಲ್ಲೂ ೯ ನೆಯ ಶ್ಲೋಕದಲ್ಲೂ ಸಹ ಹೇಳಲ್ಪಟ್ಟಿರುತ್ತದೆ. ಇಲ್ಲ ಉದಾಹರಿಸಲ್ಪಟ್ಟ **"ತ್ಯಾಗೇನೈಕೇ ಅಮೃತತ್ವಮಾನಶುಃ"** ಎಂಬ ಪೂರಾವಾಕ್ಯವು ಯಾವುದೆಂದರೆ **"ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವ ಮಾನಶುಃ । ಪರೇಣನಾಕಂ ನಿಹಿತಂ ಗುಹಾಯಾಂ ವಿಭ್ರಾಜತೇ ಯದ್ಯಯತಯೋ ವಿಶನ್ತಿ ॥"** ಎಂಬುದು. ಇದರ ಅರ್ಥವು; **ಯದ್ಯತಯೋ ವಿಶನ್ತಿ**-ಯಾವುದನ್ನು ಯತಿಗಳು ಪ್ರವೇಶಿಸುವರೋ, ಆ ದಿವ್ಯ ಪ್ರದೇಶವು ಎಲ್ಲಿ ಇದೆ ಎಂದರೆ ಹೇಳಲ್ಪಡುತ್ತದೆ; **ಯಚ್ಚ ಅಮೃತತ್ವಂ**-ಯಾವ ಪರಮ ಪದದ ಪ್ರಾಪ್ತಿಯು, **ಪರೇಣನಾಕಂ ನಿಹಿತಂ ಗುಹಯಾಂ ವಿಭ್ರಾಜತೇ**-ಸ್ವರ್ಗಾದಿ ಲೋಕಗಳಿಗೂ ಮೇಲೆ ಗೋಪ್ಯವಾಗಿ ನಿತ್ಯವಿಭೂತಿ ಎನಿಸಿ ಪ್ರಕಾಶಿಸುತ್ತದೆಯೋ, **ತದಮೃತತ್ವಂ**-ಅಂತಹ ವೈಕುಂಠ ಪ್ರಾಪ್ತಿಯು, **ನಕರ್ಮಣಾ ನ ಪ್ರಜಯಾ ಧನೇನ**-ನಿಯತ ಕರ್ಮಗಳಿಂದಲೇಯಾಗಲಿ, ಪ್ರಜೆ, ಧನಗಳಿಂದಲೇಯಾಗಲಿ ಹೊಂದಲು ಸಾಧ್ಯವು. ಹಾಗಾದರೆ ಇನ್ನು ಏತರಿಂದ ಸಾಧ್ಯವು:—ಎಂದರೆ **ತ್ಯಾಗೇನೈಕೇ**-ತಾನು ಮಾಡತಕ್ಕ ಕರ್ಮಗಳನ್ನು ಅನುಷ್ಠಿಸಿ ಅವುಗಳಲ್ಲಿ ಕರ್ತೃತ್ವ ಮಮತಾ ಫಲಗಳನ್ನು ತ್ಯಜಿಸಿ, ಸರ್ವೇಶ್ವರನಲ್ಲಿ ಸಮರ್ಪಿಸಿ, ಆತನನ್ನು ಅಜ್ಗ ಅಥವಾ ಅಂಗಿ ಶರಣಾಗತಿಯ ಮೂಲಕ ಆಶ್ರಯಿಸಿದರೆ ಸಾಧ್ಯವೆಂಬ ಭಾವವು. ಮುಂದಿನ ಉಪನಿಷದ್ವಾಕ್ಯದಲ್ಲಿ ತ್ಯಾಗ ಶಬ್ದಕ್ಕೆ ಬದಲಾಗಿ **ಸಂನ್ಯಾಸ** ಶಬ್ದವು **ಸಂನ್ಯಾಸಯೋಗಾತ್ ಯತಯ ಶ್ಶುದ್ಧಸತ್ವಾಃ** ಎಂಬಲ್ಲಿ ಉಪಯೋಗಿಸಲ್ಪಟ್ಟಿರುತ್ತದೆ. **ತ್ಯಾಗ** ಅಥವಾ **ಸಂನ್ಯಾಸ**ದಿಂದ ಪ್ರಾಪ್ತವಾಗುವದು ಭಗವತ್ಪ್ರಾಪ್ತಿಗೆ ಹೇತುಭೂತವಾದ **ತಸ್ಯಚವಶೀಕರಣಂ ತಚ್ಛರಣಾಗತಿರೇವ** ಎಂದು ಹೇಳಿರುವ ಹಾಗೆ ಶರಣಾಗತಿಯ ಮೂಲಕ ಆಶ್ರಯಿಸೋಣವೇ. ಈ ಅಭಿಪ್ರಾಯವೇ **"ಸಂನ್ಯಾಸಸ್ತ್ಯಾಗ ಇತ್ಯುಕ್ತಶ್ಶರಣಾಗತಿರಿತ್ಯಪಿ"** ಎಂಬ ಪ್ರಮಾಣದಲ್ಲಿ ವ್ಯಕ್ತವು, ಆದುದರಿಂದಲೇ ಶ್ರೀ ಭಾಷ್ಯಕಾರರು ಗೀತಾಚಾರ್ಯರನ್ನನುಸರಿಸಿ **"ತ್ಯಾಗಃ ಸಂನ್ಯಾಸ ಶಬ್ದಾದನನ್ಯಃ"** ತ್ಯಾಗ ಶಬ್ದವು ಸಂನ್ಯಾಸ ಶಬ್ದಕ್ಕಿಂತ ಬೇರೆಯಾದುದಲ್ಲವು ಎಂದು ವ್ಯಾಖ್ಯಾನಮಾಡಿರುತ್ತಾರೆ, **ಏತತ್ಸರ್ವಂ**-ಇವೆಲ್ಲವೂ ಎಂದರೆ ವಿಹಿತಕರ್ಮಗಳನ್ನು ಅದರ ಕರ್ತೃತ್ವ ಫಲ, ಅದರಲ್ಲಿ ಮಮತೆ ಇವು ಮೂರನ್ನೂ ತ್ಯಾಗ ಮಾಡಿ, ಆ ಕರ್ಮಗಳನ್ನೆಲ್ಲಾ ಭಗವತ್ಪ್ರೀತಿಯಿಂದ ಆತನಲ್ಲಿ ಸಮರ್ಪಿಸಿ, ಆತನ ಅನುಗ್ರಹಮೂಲಕ ಆತನನ್ನು ಶರಣಾಗತಿಯ ಮೂಲಕ ಆಶ್ರಯಿಸುವದು, ಇವೆಲ್ಲವೂ ಎಂಬರ್ಥವು, **ಸತ್ತ್ವಗುಣವೃದ್ಧಿಕಾರ್ಯಂ**-ಸತ್ತ್ವಾಹಾರ ಸೇವನೆ, ಸಾತ್ವಿಕ ಸಂಭಾಷಣೆ ಮೊದಲಾದವುಗಳ ಮೂಲಕ

**ಸತ್ತ್ವರಜಸ್ತಮಸಾಂ ಕಾರ್ಯಭೇದಾಃ ಪ್ರಪಞ್ಚಿತಾಃ. ಇದಾನೀ ಮೇವಂಭೂತಸ್ಯ ಮೋಕ್ಷಸಾಧನತಯಾ ಕ್ರಿಯಮಾಣಸ್ಯ ಕರ್ಮಣಃ ಪರಮಪುರುಷಾರಾಧನ ವೇಷತಾಂ, ತಥಾನುಷ್ಠಿತಸ್ಯ ಚ ಕರ್ಮಣ ಸ್ತತ್ಪ್ರಾಪ್ತಿಲಕ್ಷಣಂ ಫಲಂ ಪ್ರತಿಪಾದಯಿತುಂ ಬ್ರಾಹ್ಮಣಾದ್ಯಧಿ ಕಾರಿಣಾಂ ಸ್ವಭಾವಾನುಬಂಧಿ ಸತ್ತ್ವಾದಿಗುಣ ಭೇದ ಭಿನ್ನಂ ವೃತ್ತ್ಯಾ ಸಹ ಕರ್ತವ್ಯ ಕರ್ಮಸ್ವರೂಪ ಮಾಹ.—**

---

ಸತ್ತ್ವಗುಣವನ್ನು ಅಭಿವೃದ್ಧಿಯನ್ನು ಮಾಡಿಕೊಂಡಿದ್ದರ ಕಾರ್ಯವು, **ಇತಿ**-ಎಂಬದಾಗಿ, **ಸತ್ತ್ವೋಪಾದೇಯ ಜ್ಞಾಪನಾಯ**-ಜ್ಞಾನ, ಕರ್ಮ, ಬುದ್ಧಿ, ಧೃತಿಯೇ ಮೊದಲಾದ ಎಲ್ಲವೂ ಸಾತ್ತ್ವಿಕವಾಗಿ ಸತ್ತ್ವವೇ ನಮಗೆ ಉಪಾದೇಯವೆಂಬುದನ್ನು ಜ್ಞಾಪಕಕ್ಕೆ ಕೊಡುವದಕ್ಕಾಗಿ **ಸತ್ತ್ವರಜಸ್ತಮಸಾಂ**-ಸತ್ತ್ವರಜಸ್ತಮಗಳ, ಎಂದರೆ ಅವುಗಳಿಂದುಂಟಾದ, **ಕಾರ್ಯಭೇದಾಃ ಪ್ರಪಞ್ಚಿತಾಃ**-ಪ್ರವೃತ್ತಿ ಮೊದಲಾದವುಗಳಲ್ಲಿನ ಭೇದಗಳು ವಿಸ್ತರಿಸಿ ಹೇಳಲ್ಪಟ್ಟವು. ಮುಂದೆ ಹೇಳುವದೇನು ಎಂಬುದನ್ನು ಮುಂದೆ ತಿಳಿಸುವದರ ಮೂಲಕ ಸಙ್ಗತಿಯನ್ನು ಪ್ರದರ್ಶಿಸುತ್ತಾರೆ- **ಇದಾನೀಂ**-ಈ ಮುಂದಿನ ಶ್ಲೋಕವನ್ನಾರಂಭಿಸಿ, ಈಗ, **ಏವಂ ಭೂತಸ್ಯ**-ಇಂತಹ ಎಂದರೆ, ಕರ್ತೃತ್ವ, ಮಮತಾ ಫಲತ್ಯಾಗಪೂರ್ವಕವಾದ, **ಮೋಕ್ಷಸಾಧನತಯಾ ಕ್ರಿಯಮಾಣಸ್ಯ**-ಮೋಕ್ಷಸಾಧನಕ್ಕಾಗಿ ಮಾಡಲ್ಪಟ್ಟ, **ಕರ್ಮಣಃ**-ಕರ್ಮಕ್ಕೆ, **ಪರಮ ಪುರುಷಾರಾಧನ ವೇಷತಾಂ**-ಪರಮ ಪುರುಷನ ಆರಾಧನಾ ರೂಪಭಾವವನ್ನು, **ತಥಾ ಅನುಷ್ಠಿತಸ್ಯ ಕರ್ಮಣಃ**-ಹಾಗೆ ಅನುಷ್ಠಿಸಲ್ಪಟ್ಟ ಕರ್ಮಕ್ಕೆ, **ತತ್ಪ್ರಾಪ್ತಿ ಲಕ್ಷಣಂ ಫಲಂ**-ಆ ಪರಮ ಪುರುಷನನ್ನು ಹೊಂದುವದೇ ಲಕ್ಷಣವಾಗಿಯುಳ್ಳ ಫಲವನ್ನೂ, **ಪ್ರತಿಪಾದಯಿತುಂ**-ಸಮರ್ಥಿಸಿ ಹೇಳುವದಕ್ಕಾಗಿ, **ಬ್ರಾಹ್ಮಣಾದ್ಯಧಿಕಾರಿಣಾಂ**-ಬ್ರಾಹ್ಮಣರೇ ಮೊದಲಾದ ಅಧಿಕಾರಿಗಳಿಗೆ, **ಆದಿ** ಪದದಿಂದ ಕ್ಷತ್ರಿಯ ವೈಶ್ಯಶೂದ್ರರು ಹೇಳಲ್ಪಟ್ಟರು, **ಸ್ವಭಾವಾನುಬಂಧಿ ಸತ್ತ್ವಾದಿಗುಣಭೇದಭಿನ್ನಂ**— ಸ್ವಭಾವವಾಗಿ ಸಂಬಂಧಿಸಿದ ಸಾತ್ತ್ವಿಕ ರಾಜಸ ತಾಮಸ ಗುಣಗಳ ಭೇದದಿಂದ ಬೇರೆ ಬೇರೆಯಾದ, **ವೃತ್ತ್ಯಾ ಸಹ**-ದೇಹಯಾತ್ರಾ ಮತ್ತು ಇತರ ಪ್ರವೃತ್ತಿಗಳೊಂದಿಗೆ, **ಕರ್ತವ್ಯ ಕರ್ಮಸ್ವರೂಪಮಾಹ**-ಶಾಸ್ತ್ರ ವಿಹಿತಗಳಾದ ಅವಶ್ಯಕವಾಗಿ ಮಾಡಬೇಕಾದ ನಿತ್ಯನೈಮಿತ್ತಿಕ ರೂಪ ಕರ್ಮಗಳ ಲಕ್ಷಣವನ್ನು ಹೇಳುತ್ತಾರೆ—ಈ ಸಾತ್ತ್ವಿಕ ರಾಜಸ ತಾಮಸ ಗುಣಗಳ ಆಧಿಕ್ಯ ನ್ಯೂನತೆಗಳಿಂದ ಬ್ರಾಹ್ಮಣಾದಿ ವರ್ಣಗಳು ಏರ್ಪಟ್ಟಿವೆ. ಆಯಾ ವರ್ಣಗಳಲ್ಲೇ ಇದ್ದುಕೊಂಡು, ಅವರವರುಗಳಿಗೆ ಏರ್ಪಟ್ಟ ವರ್ಣಾಶ್ರಮ ಧರ್ಮಗಳನ್ನು ಪರಮ ಪುರುಷಾರಾಧನ ರೂಪವಾಗಿ ಅನುಷ್ಠಿಸಿ, ಮೋಕ್ಷವನ್ನು ಹೊಂದಬಹುದು. ಅಂತಹ ನಿಯತಕರ್ಮಗಳು ಯಾವುವು, ಅವುಗಳ ಸ್ವರೂಪವೇನು ಎಂಬುದು ಹೇಳಲ್ಪಡುತ್ತದೆಂಬ ಭಾವವು. **ಇಲ್ಲಿವೃತ್ತ್ಯಾ ಸಹ**-ಎಂದು ಹೇಳಿರುವದರ ಅಭಿಪ್ರಾಯವೇನೆಂದರೆ ? ದೇಹಯಾತ್ರೆಗಾಗಿಯೂ, ಇತರರಿಗಾಗಿಯೂ ಮಾಡಬೇಕಾದ ಕೆಲವು ಪ್ರವೃತ್ತಿಗಳುಂಟು, ಅವುಗಳೂ ಮುಂದೆ ಹೇಳಲ್ಪಡುತ್ತವೆಂಬ ಭಾವವು. ಈ ಮುಂದಿನ ಶ್ಲೋಕ ವ್ಯಾಖ್ಯಾನದಲ್ಲಿ ಶ್ರೀಯತಿವರ್ಯರೇ ಸ್ಫುಟವಾಗಿ ಮುಂದೆ ಯಾವ ಯಾವ ವಿಷಯಗಳು ಹೇಳಲ್ಪಡುತ್ತವೆಂಬುದನ್ನು ವ್ಯಕ್ತಪಡಿಸುತ್ತಾರೆ—

**ಮೂಲಕ್ಕೆ ಅರ್ಥವು**—ಮುಂದೆ ಹೇಳುವ ದೇನೆಂಬುದನ್ನು ಈ ಪ್ರತಿಜ್ಞಾ ವಾಕ್ಯರೂಪದಲ್ಲಿ ತಿಳಿಸುತ್ತಾರೆ—ಹಿಂದಿನ ಶ್ಲೋಕದಲ್ಲಿ ಈ ಲೋಕದ ಪ್ರಾಣಿವರ್ಗವೆಲ್ಲಾ ಈ ಮೂರು ಗುಣಗಳನ್ನು ಅವರವರುಗಳ ಕರ್ಮಾನುಸಾರವಾಗಿ ಹೊಂದಿ ತಾರತಮ್ಯವನ್ನು ಹೊಂದಿರುತ್ತಾರೆ ಎಂದು ಹೇಳಿ, ಈ ಶ್ಲೋಕದಲ್ಲಿ ಆ ಗುಣಗಳ ತಾರತಮ್ಯವೇ, ಚಾತುರ್ವರ್ಣ್ಯಕ್ಕೂ ಅವರುಗಳಲ್ಲಿನ ಗುಣಭೇದಕ್ಕೂ, ಅವರ ಪ್ರವೃತ್ತಿಗೂ, ಅವರ ಇತಿ ಕರ್ತವ್ಯತಾ ಮೊದಲಾದವುಗಳಿಗೂ

**ಮೂ. ಬ್ರಾಹ್ಮಣ ಕ್ಷತ್ರಿಯ ವಿಶಾಂ ಶೂದ್ರಾಣಾಂಚ ಪರನ್ತಪ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈ ರ್ಗುಣೈಃ ॥೪೧॥**

---

ಕಾರಣವೆಂದು ತಿಳಿಸುವ ಸಂದರ್ಭದಲ್ಲಿ, ಹಿಂದೆ "**ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣ ಕರ್ಮವಿಭಾಗಶಃ**" ಎಂದು ಸಾಮಾನ್ಯವಾಗಿ ತಾವು ಹಿಂದೆ ಹೇಳಿದುದನ್ನು ಜ್ಞಾಪಕಕ್ಕೆ ತಂದು ಅದನ್ನೇ ವಿಸ್ತರಿಸಿ ತಿಳಿಸುತ್ತಾರೆ--**ಹೇಪರಂತಪ**-ಓ ಶತ್ರುನಾಶಕನಾದ ಅರ್ಜುನನೇ, **ಬ್ರಾಹ್ಮಣ ಕ್ಷತ್ರಿಯ ವಿಶಾಂ**-ವೇದಾಧ್ಯಯನಾದಿಗಳಿಗೂ ಈಗ ನಾನು ಉಪದೇಶಿಸುತ್ತಿರುವ ಬ್ರಹ್ಮ ವಿದ್ಯೆಗೂ ಸಹ ಅಧಿಕಾರಿಗಳಾದ ದ್ವಿಜ ಶಬ್ದದಿಂದ ಹೇಳಲ್ಪಡುವ ಬ್ರಾಹ್ಮಣ ಕ್ಷತ್ರಿಯ ವೈಶ್ಯ ರಿಗೂ, **ಶೂದ್ರಾಣಾಂಚ**-ಹಾಗೆ ಅಧಿಕಾರಿಗಳಲ್ಲದ ಶೂದ್ರರಿಗೂ ಸಹ, **ಸ್ವಭಾವ ಪ್ರಭಾವೈಃ**-ಅವರವರುಗಳಿಗೆ ಪ್ರಾಚೀನ ಕರ್ಮವಶಾತ್ ಪ್ರಾಪ್ತಗಳಾದ ಭಾವಗಳಿಂದುಂಟಾದ, **ಗುಣೈಃ**-ಸತ್ವರಜಸ್ತಮೋ ಗುಣಗಳ ಆಧಿಕ್ಯ ನ್ಯೂನತೆಗಳಿಂದ, **ಕರ್ಮಾಣಿ**-ಅ ರವರುಗಳ ದೇಹಯಾತ್ರೆಗಾಗಿ ಪ್ರವೃತ್ತಿಗಳೂ, ಇತಿಕರ್ತ ವ್ಯತಾರೂಪ ಕರ್ಮಗಳೂ ಎಲ್ಲವೂ, **ಪ್ರವಿಭಕ್ತಾನಿ**-ಬೇರೆ ಬೇರೆಯಾದವು. ಹೀಗೆ ಹೇಳಿದುದರಿಂದ ಹಾಗೆ ಬೇರೆ ಬೇರೆಯಾದವೆಂದು ನಿನಗೆ ಮುಂದೆ ತಿಳಿಸುತ್ತೇನೆ ಕೇಳು ಎಂಬ ಭಾವವು. ಇಲ್ಲಿ **ಪ್ರವಿಭಕ್ತಾನಿ**-ಎಂಬ ಪ್ರಯೋಗದಿಂದ ಹಿಂದೆಯೇ ವಿಭಾಗಿಸಿ ಹೇಳ ಲ್ಪಟ್ಟವುಗಳು ಎಂಬರ್ಥವು ತೋರಿಬರುವದರಿಂದ ಯಾರು ಹಾಗೆ ವಿಭಾಗಿಸಿದುದು ಎಂಬ ಅಪೇಕ್ಷೆಯಲ್ಲಿ, ತಾವು ಉಪದೇಶಿಸಿದುದೇ ಶ್ರುತಿ ಸ್ಮೃತಿ ಇತಿಹಾಸ ಪುರಾಣರೂಪ ಸರ್ವ ಶಾಸ್ತ್ರಗಳಲ್ಲೂ ವಿಭಾಗಿಸಿ ಹೇಳಲ್ಪಟ್ಟಿವೆ ಎಂಬ ಭಾವವು, ಹೀಗೆ ವಿಭಾಗ ಉಂಟೆಂಬದು ಸರ್ವರಿಗೂ ವ್ಯಕ್ತವೇ. ಏಕೆಂದರೆ ಅವರವರುಗಳಲ್ಲಿ ಪೂರ್ವಾರ್ಜಿತ ಕರ್ಮಾನ ಗುಣವಾಗಿ ಬಂದಿರುವದೆಲ್ಲಾ ಸಾತ್ವಿಕ ರಾಜಸ ತಾಮಸಗುಣಗಳ ತಾರತಮ್ಯದಿಂದಲೇ ಬಂದವು; ಮತ್ತೂ ಅವುಗಳಿಗನುಸಾರ ವಾಗಿಯೇ ಅವರಿಗೆ ಪ್ರಾಪ್ತವಾಗಿರುವ ವ್ಯಾಪಾರಗಳು. ಕೆಲವರು ಬೇಕಾದರೆ ಶ್ರಮಪಟ್ಟು ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಇರುವ ನಾಮ ಚಿನ್ಹೆ ಇವುಗಳನ್ನು ಕಿತ್ತುಹಾಕಬಹುದು, ಆದರೆ ಪೂರ್ವಾರ್ಜಿತ ಕರ್ಮಾನುಸಾರ ಬಂದ ಸ್ವಭಾವವು ಎಂದರೆ ತನಗೇನೇ ಅಸಾಧಾರಣವಾಗಿ ರುವ ಭಾವವನ್ನು ಮಾತ್ರ ಕಿತ್ತುಹಾಕಲು ಸಾಧ್ಯವೇ ಇಲ್ಲವು. ಅದುದರಿಂದ ಇದನ್ನು ವ್ಯವಸ್ಥೆ ಮಾಡಿ ಇಡುವದಕ್ಕಾಗಿ ಈ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾದಿ ಪಂಗಡಗಳಿಗೂ, ಅವರವರುಗಳಿಗೆ ವಿಹಿತ ಜೀವನೋಪಾಯಗಳೂ, ಅವರವರುಗಳಿಗೆ ಇತಿಕರ್ತವ್ಯತೆಗಳೂ ಎಲ್ಲವೂ ಏರ್ಪಟ್ಟವು. ಈ ಸಂದರ್ಭದಲ್ಲಿ ದಾಸನಿಗೆ ಈಸೋಪಿನ ಕಥೆಗಳಲ್ಲಿನ ಒಂದು ಕಥೆಯು ಜ್ಞಾಪ ಕಕ್ಕೆ ಬರುತ್ತದೆ. ಜ್ಯುಪಿಟರ್ ಮತ್ತು ಜ್ಯೂನೋ ಎಂದು ಇಬ್ಬರು ದೇವದಂಪತಿಗಳು. ಜ್ಯೂನೋ ಎಂಬುವಳು ತನ್ನ ಗಂಡನನ್ನು ಕುರಿತು ತನಗೆ ತಿರ್ಯಗ್ಜಂತುವನ್ನು ಮನುಷ್ಯ ನನ್ನಾಗಿ ಮಾಡುವ ಶಕ್ತಿಯುಂಟು ಎಂದಳು; ಅದಕ್ಕೆ ಗಂಡನು ಈ ಹೆಣ್ಣು ಬೆಕ್ಕನ್ನು ಸ್ತ್ರೀ ಯನ್ನಾಗಿ ಮಾಡಬಲ್ಲೆಯೋ ಎನ್ನಲು; ಅದಕ್ಕೆ ಆಕೆಯು ಅದನ್ನು ಒಳ್ಳೇ ಸುಂದರಳಾದ ಸ್ತ್ರೀ ಯನ್ನಾಗಿಮಾಡಿ ಒಳ್ಳೇ ಸೋಪಾದ ಮೇಲೆ ಕೂಡಿಸಿದಳು. ಗಂಡನು ನಿಶ್ಚಯವಾಗಿಯು ಮಾಡಿದ್ದಿಯೋ ಎಂದು ಪುನಃ ಕೇಳಲು; ಮಾಡಿದ್ದೇನೆ ನೋಡು ಎಂದು ತಿಳಿಸಿದಳು. ಇದನ್ನು ಪರೀಕ್ಷಿಸುವದಕ್ಕಾಗಿ ಗಂಡನು ಒಂದು ಇಲಿಯನ್ನು ಹಿಡತರಿಸಿ ಆ ಸ್ತ್ರೀಯ ಮುಂದೆ ಹರಿ ದಾಡುವ ಹಾಗೆ ಮಾಡಿದನು. ಆ ಸ್ತ್ರೀಯು ಫಕ್ಕನೆ ಹಾರಿ ಇಲಿಯನ್ನು ಹಿಡಿದುಕೊಂಡಳು. ಹೀಗೆಯೇ ಸೋಷಲ್ ರಿಫಾರ್ಮರುಗಳು ಎಲ್ಲರನ್ನೂ ಒಂದೇ ಜಾತೀಯರನ್ನಾಗಿ ಮಾಡುವ ಪ್ರಯತ್ನವೂ ಸಹ ಎಂದು ಭಾವಿಸಬಹುದು. ಆದುದರಿಂದ ಪ್ರಾಚೀನ ಕರ್ಮತಾರತಮ್ಯದಿಂದ ಗುಣ ಕರ್ಮತಾರತಮ್ಯವೂ ಎಂದಿಗೂ ತಪ್ಪಿದಲ್ಲವು. ಕೆಲವರು ಬ್ರಾಹ್ಮಣಾದಿ ಶಬ್ದಗಳನ್ನು ತೆಗದು ಹಾಕಬಹುದು; ಅಷ್ಟು ಮಾತ್ರವೇ ಅಲ್ಲದೆ, ಸಾತ್ವಿಕರಾಜಸ ತಾಮಸ ಗುಣಗಳಿಂದಲೂ,

ಅವರುಗಳು ಕೈಕೊಳ್ಳುವ ಕರ್ಮಗಳು ಇದ್ದೇ ಇರುತ್ತವೆ. ಇಂಗ್ಲೆಂಡಿನಲ್ಲಿ ಎಲ್ಲರೂ ಒಂದೇ ಪಂಗಡದವರಾಗಿದ್ದರೂ ಲೇಬರ್ ಟೋರಿ ಮೊದಲಾದ ಪಾರ್ಟಿ ತಾರತಮ್ಯವಿದ್ದೇ ಇರುತ್ತದೆ. ಚರ್ಚಿಲ್‌ರಿಗೂ, ಆಟ್ಲಿಯವರಿಗೂ, ಮತ್ತು ವೇವಲ್‌ರಿಗೂ ಅವರ ಹಿಂದೆ ವೈಸರಾಯ್‌ಗಳಿಗೂ ಈ ಗುಣ ತಾರತಮ್ಯದಿಂದ ಎಷ್ಟು ವ್ಯತ್ಯಾಸವೆಂಬುದನ್ನು ಸುಲಭವಾಗಿ ಊಹಿಸಬಹುದು. ಹಾಗೆಯೇ ಇಲ್ಲಿಯೂ ಹಿಂದೂ, ಮುಸಲ್ಮಾನ ಪರಸ್ಪರ ವೈಮನಸ್ಯವು ಈ ಗುಣ ತಾರತಮ್ಯದ ವ್ಯತ್ಯಾಸದಿಂದವೆಂಬುದನ್ನೂ ಊಹಿಸಬಹುದು. ಆದುದರಿಂದ ರಾಜ್ಯಾಡಳಿತವನ್ನು ಸಂಪಾದಿಸ ಬೇಕೆಂಬ ಕುತೂಹಲವು ಕೆಲವು ಪಂಗಡದವರಿಗೆ ಇದ್ದೇ ಇರುತ್ತದೆ. ಇದು, ಒಂದೇ ಮತ, ಸಹ ಪಙ್ತಿ ಭೋಜನ, ಮೊದಲಾದವುಗಳಿಂದ ದೂರೀಕೃತವಾಗಿ ದೇಶದ ನೆಮ್ಮದಿಗೆ ಕಾರಣವಾಗುತ್ತ ದೆಂಬ ಅಭಿಪ್ರಾಯವು ಭ್ರಮದಿಂದುಂಟಾದುದು. ಐರ್ಲಂಡಿನವರು ಇತರ ಬ್ರಿಟಿಷ್‌ನವರು ಒಂದೇ ಕ್ರಿಸ್ತಮತಕ್ಕೆ ಸೇರಿ ಒಟ್ಟಿಗೆ ಕೂತು ಊಟಮಾಡಲು ಅಭ್ಯಂತರವಿಲ್ಲದವರು. ಅವರವರು ಗಳಿಗೆ ಏತಕ್ಕೆ ಐಕಮತ್ಯವಿಲ್ಲವು? ಕಾಂಗ್ರೆಸ್ಸಿನ ಪಾರ್ಟಿಯವರಲ್ಲಿ ಕೆಲವರೂ, ಮುಸ್ಲಿಂ ಲೀಗಿ ನವರಲ್ಲಿ ಕೆಲವರೂ, ಒಟ್ಟಿಗೆ ಒಂದೇ ಟೇಬಲ್ ಮೇಲೆ ಕೂತು ಭೋಜನವನ್ನು ಈಗ ಸ್ವೀಕರಿ ಸುತ್ತಾರೆಂಬುದು ವಿದಿತವು. ಅವರುಗಳಿಗೆ ಪರಸ್ಪರ ಐಕಮತ್ಯವು ಏಕಿಲ್ಲವು? ಆದುದರಿಂದ ಕೆಲವರ ಅಭಿಪ್ರಾಯವು ಎಲ್ಲರೂ ಒಂದಾಗಬೇಕು, ಈ ಕ್ಯಾಸ್ಟ ಸಿಸ್ಟಮ್ ತೊಲಗಬೇಕು, ಇತ್ಯಾದಿಗಳು ಪ್ರಾಜ್ಞತೆಯಿಲ್ಲದವರ ಅಭಿಪ್ರಾಯಗಳು. ಇಂತಹ ಸೋಷಲ್ ರಿಫಾರ್ಮರುಗಳು ಗೀತೆ ಯನ್ನು ಶ್ಲಾಘಿಸುತ್ತಾ ಪಠಿಸುವರು. ಶ್ರೀ ಗೀತಾಚಾರ್ಯನ ಉಪದೇಶವು ಬಹು ಸ್ವಾದು ಎಂದು ಹೇಳುತ್ತಾ "ಚಾತುರ್ವರ್ಣ್ಯಂ ಮಯಾಸೃಷ್ಟಮ್" ಎಂದು ಹೇಳಿ, ಈ ಶ್ಲೋಕದಲ್ಲಿ ಬ್ರಾಹ್ಮಣಾದಿಗುಣ ಭೇದಗಳು ಸಾತ್ವಿಕ ರಾಜಸತಾಮಸ ಗುಣಭೇದಗಳಿಂದ ಎಂಬುದನ್ನು ಒಪ್ಪರು. ಶಾಸ್ತ್ರರೀತ್ಯಾ ಲೋಕದಲ್ಲೆಲ್ಲಾ ಪುರುಷ ಪುರುಷರಿಗೆ ಈ ಗುಣ ವೈಷಮ್ಯದಿಂದ ಬೇಧವೇ ಇರುವಾಗ ಎಲ್ಲರೂ ಸಮವೆಂದು ಹೇಳುವರು. ಆಚರಣೆಯಲ್ಲಿ ವ್ಯತ್ಯಾಸವನ್ನು ಎಲ್ಲರೂ ಸಮವೆಂದು ಹೇಳುವವರೇ ಪ್ರಕಟಿಸುತ್ತಾರೆ. ಎಲ್ಲರನ್ನೂ ಪ್ರೀತಿಸತಕ್ಕದ್ದು ಎಂದು ಬಾಯಲ್ಲಿ ಉಪದೇಶಿಸುತ್ತಾ ಅಂತಃದ್ವೇಷಿಸುವರು. ಹೀಗೆಯೇ ಲೋಕದಲ್ಲಿ ನೋಡುತ್ತಿರುತ್ತೇವೆ. ಆದುದರಿಂದ ಈ ಪ್ರತಿಜ್ಞಾ ವಾಕ್ಯವಾದ ಈ ಶ್ಲೋಕವೂ ಇದರ ಮುಂದಿನ ಮೂರು ಶ್ಲೋಕಗಳೂ ಕ್ಷತ್ರಿಯ ವೈಶ್ಯಾದಿ ಗಳಿಗೆ ರುಚಿಸದ ಶ್ಲೋಕಗಳಾಗಿರುತ್ತವೆ—

ಮುಖ್ಯವಾಗಿ ಅಭಿಜಾತ್ಯ, ಆಹಾರ, ಸಙ್ಗ, ಇವುಗಳ ಪಾರಿಶುದ್ಧ್ಯವು ಎಲ್ಲಿದೆಯೋ ಅಲ್ಲಿ ಸಾತ್ವಿಕಗುಣಾಧಿಕ್ಯವು ಉಂಟು. ಅಲ್ಲಿ ರಾಜಸ ತಾಮಸ ಗುಣಗಳ ವಿಲಾಸವು ತುಂಬಾ ಇಲ್ಲವು. ಇಂತಹ ನಿಯಮಗಳನ್ನು ಸರಿಯಾದ ಬ್ರಾಹ್ಮಣರೆಲ್ಲರೂ ಇಟ್ಟುಕೊಂಡಿರುವುದರಿಂದ, ಸಾತ್ವಿಕ ಗುಣಾಭಿವೃದ್ಧಿಯುಳ್ಳ ಜಾತಿಯು ಬ್ರಾಹ್ಮಣಜಾತಿ ಎಂದು ಹೇಳಲ್ಪಟ್ಟಿತು. ಹಾಗೆಯೇ ರಾಜಸಗುಣಾಭಿವೃದ್ಧಿಯಿಂದ ಕ್ಷತ್ರಿಯಜಾತಿ ಎಂಬುದಾಗಿ ಹೀಗೆಯೇ ವಿಭಾಗವು. ಇಂತಹ ಇತರ ಪಾಶ್ಚಾತ್ಯರು ಮಾಡಿಕೊಂಡಿಲ್ಲವಲ್ಲಾ, ಈ ಹಿಂದೂದೇಶದಲ್ಲಿ ಮಾತ್ರ ಬಹುಕಾಲದಿಂದ ಅನೇಕ ಇತರ ಮತದವರು ಹಿಂದೂಸ್ಥಾನವನ್ನು ಜಯಿಸಿ ತಮ್ಮ ವಶಮಾಡಿಕೊಂಡ ಅವಸ್ಥೆ ಯಲ್ಲೂ ಅನುಸರಿಸುತ್ತಾ ಬಂದಿರುವುದೇನು? ಹಿಂದೂಸ್ಥಾನಕ್ಕೆ ಇದು ಒಳ್ಳೆಯದೇ ಕೆಟ್ಟದ್ದೇ ಎಂಬ ಚರ್ಚೆಯು ಸಾಮಾನ್ಯ ಚರ್ಚೆಯಾಗುವದಿಲ್ಲವು. ಎರಡು ಕಡೆಯವರಿಗೂ ಸಾಧನರೂಪ ವಾದಗಳು ಉಂಟೇವುಂಟು. ಹಿಂದೆ ಇದ್ದ ಸ್ಥಿತಿಯಲ್ಲೇ ಈಗಲೂ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರವೃತ್ತಿಗಳು ಅವರವರಿಗೆ ಶಾಸ್ತ್ರವಿಹಿತ ಧರ್ಮಗಳಾಗಿದ್ದ ಪಕ್ಷದಲ್ಲಿ ಲೋಕದಲ್ಲಿ ಪರಸ್ಪರ ವೈರಗಳೂ ಈಗಿರುವ ಹಾಗೆ ಇಲ್ಲದೆ, ಜನರಲ್ಲಿ ಪರಸ್ಪರ ಮೈತ್ರಿಯೂ ಮನಶ್ಶಾಂತತೆಯೂ ಸುಖವೂ ಇರುತ್ತಿತ್ತು: ಏಕೆಂದರೆ ಆ ವೃತ್ತಿಗಳು ಎಂತವು ಎಂದರೆ ಪರಸ್ಪರ ಸಹಾಯಭೂತಗಳಾ ದವು. ಬ್ರಾಹ್ಮಣನು ತನ್ನ ಸಾತ್ವಿಕ ಧರ್ಮದ ಮೂಲಕ ಪ್ರಜೆಗಳಿಗೆ ಹಿತವಾಗುವ ಹಾಗೆ ಯಜ್ಞ ದಾನತಪಸ್ಸುಗಳನ್ನು ಭಗವದಾರಾಧನೆರೂಪದಲ್ಲಿಮಾಡಿ ಲೋಕಾಸ್ಸಮಸ್ತಾ ಸ್ಸುಖಿನೋಭವಂತು

ಎಂದು ಲೋಕಕ್ಕೆಲ್ಲಾ ಹಿತವನ್ನು ಪ್ರಾರ್ಥಿಸಿ, ಇನ್ನು ಮೂರು ಪಂಗಡದವರಿಗೂ ಧರ್ಮೋಪದೇಶಿಕನಾಗಿ ಶುಭಶೋಭನಾದಿಗಳಲ್ಲಿ ಬೇಕಾಗಿ, ಮೂರು ಪಂಗಡದಿಂದಲೂ ಸನ್ಮಾನಿಸಲು ಅರ್ಹನಾದವನು ಇಂತಹ ಸದ್ವೃತ್ತಿಯಲ್ಲಿರುವ ಬ್ರಾಹ್ಮಣರಿಗೆಲ್ಲಾ ವೃತ್ತಿಯನ್ನು ಕಲ್ಪಿಸುವುದು ರಾಜ್ಯಾಂಗಕ್ಕೆ ಸೇರಿದುದಾಗಿತ್ತು. ಕ್ಷತ್ರಿಯನು ರಾಜ್ಯ ಪರಿಪಾಲನಾಸಕ್ತನಾಗಿ ದುಷ್ಟರು ಸನ್ಮಾರ್ಗಿಗಳನ್ನು ಹಿಂಸಿಸದೆಹಾಗೆ ನೋಡಿಕೊಂಡು ಇನ್ನು ಮೂರು ಪಂಗಡದವರಿಗೂ ಸುಖದಾಯಕವಾದ ಏರ್ಪಾಡುಗಳನ್ನು ಮಾಡುತ್ತಿದ್ದನು. ಜಾನಶ್ರುತಿ ಜನಮೇಜಯರುಗಳು ತಮ್ಮ ರಾಜ್ಯದಲ್ಲಿ ಯಾವನೊಬ್ಬನೂ ದರಿದ್ರನಾಗಿ ಆಹಾರಕ್ಕೆ ಮಾರ್ಗವಿಲ್ಲದೆಯೂ, ಇರಲು ವಸತಿ ಇಲ್ಲದೆಯೂ, ಶೋಕಿಸುತ್ತಿರಕೂಡದೆಂದು ಶಪಥವನ್ನು ಮಾಡಿದ್ದರೆಂದು ಕೇಳಿರುವೆವು. ಹಾಗೆಯೇ ವೈಶ್ಯನು ತನ್ನ ವ್ಯಾಪಾರಾದಿಗಳಿಂದ ಇನ್ನು ಮೂರು ಪಂಗಡಕ್ಕೂ ಬೇಕಾದವನಾಗಬೇಕು. ಶೂದ್ರನೂ ಹಾಗೆಯೇ ತನ್ನ ದೇಹಮೂಲಕ ಇತರ ಮೂರು ಪಂಗಡದವರಿಗೂ ಶಿಲ್ಪವಿದ್ಯದ ಮೂಲಕ ಸಹಾಯಮಾಡಿ ಜೀವಿಸುತ್ತಾ ಮೂರು ಪಂಗಡದವರಿಗೂ ಬೇಕಾದವನಾಗಿದ್ದನು. ಹೀಗೆ ಪರಸ್ಪರ ಮೈತ್ರಿಯೂ, ಸುಖವೂ ಮನಸ್ಸಿನ ಶಾಂತತೆಯೂ ಎಲ್ಲಾ ಇತ್ತು. ಈಗ ಅಂತಹ ವೃತ್ತಿ ಬೇಧಗಳನ್ನು ನಾಲ್ಕು ವರ್ಣದವರು ತ್ಯಜಿಸಿರುವದರಿಂದ ಇವೆಲ್ಲವೂ ದೂರೀಕೃತಗಳಾಗಿರುತ್ತವೆ ಈ ದುರ್ದೆಶೆಯು ಬರಕೂಡದೆಂಬ ಅಭಿಪ್ರಾಯದಿಂದಲೇ ನಮ್ಮ ಸರ್ವ ಶಾಸ್ತ್ರಗಳೂ ಈ ಚಾತುರ್ವರ್ಣ್ಯ ವಿಭಾಗವನ್ನೂ ಅವರವರುಗಳ ಇತಿಕರ್ತವ್ಯತೆಗಳನ್ನೂ ಜೀವನೋಪಾಯ ಪ್ರವೃತ್ತಿಗಳನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಬೋಧಿಸಿರುವದರಿಂದಲೇ **ಪ್ರವಿಭಕ್ತಾನಿ** ಎಂದು ಇಲ್ಲಿ ಮೂಲದಲ್ಲಿ ಪ್ರಯೋಗವು. ಆದುದರಿಂದಲೇ ಈ ವಿಭಾಗವು ಈಗಿನ ಅನೇಕರಿಗೆ ಇಷ್ಟವಿಲ್ಲವಾಗಿರುತ್ತದೆ. ಇಷ್ಟವಿಲ್ಲದುದು ಹಾಗಿರಲಿ. ಪರಸ್ಪರ ದ್ವೇಷಾಸೂಯೆಗಳನ್ನುಳ್ಳವರಾಗಿ ವರ್ತಿಸುತ್ತಿರುತ್ತಾರೆ. ಇದು ತುಂಬಾ ಶೋಚನೀಯವಾದ ವಿಷಯವು. ಒಂದೇ ವರ್ಣಕ್ಕೆ ಎಲ್ಲರೂ ಸೇರಿಬಿಟ್ಟರೆ ಆಗ ಸುಖರಾಜ್ಯವಾಗುತ್ತದೆಂದು ಹೇಳುವರು. ಚೀಣಾದವರೂ, ಜಪಾನರೂ ಒಂದೇ ಪಂಗಡಕ್ಕೆ ಸೇರಿದ ಬೌದ್ಧರು; ಅವರಿಬ್ಬರಿಗೂ ಇಷ್ಟೆಂದು ವರ್ಣಿಸಲಸಾಧ್ಯವಾದ ಪರಸ್ಪರ ದ್ವೇಷವು ಬಹುಕಾಲದಿಂದಲೂ ನೆಲಗೊಂಡಿರುವದು ಏತಕ್ಕೆಂದು ಕೇಳುವೆವು. ಜರ್ಮನಿಯವರೂ ಇಂಗ್ಲೀಷಿನವರೂ ಕ್ರಿಶ್ಚಿಯನ್‌ರಾಗಿ ಒಂದು ವರ್ಣದವರು. ಅವರಿಬ್ಬರಿಗೂ ಬದ್ಧದ್ವೇಷಗಳು ಏತಕ್ಕೆಂದು ಕೇಳುವೆವು. ಪರಸ್ಪರ ದ್ವೇಷಾಸೂಯೆಗಳಿಗೆ, ಕ್ಷೇತ್ರ ಧನ ವ್ಯಾಪಾರಗಳ ಆಶೆಯೇ ಕಾರಣವಲ್ಲದೆ, ವರ್ಣಾಶ್ರಮಗಳೆಲ್ಲವು, ವರ್ಣಾಶ್ರಮ ತಾರತಮ್ಯವೇ ಕಾರಣವೆಂದು ಹೇಳುವದು ಅಜ್ಞಾನ ವೃಜಂಭಣೆಯು.

ಐದನೆಯ ವರ್ಣದವರು ಬಲಾತ್ಕಾರದಿಂದ ಇನ್ನು ನಾಲ್ಕು ವರ್ಣದವರ ದೇವಸ್ಥಾನಗಳಿಗೆ ಪ್ರವೇಶಿಸಿದರೆ ತುಂಬಾ ದೇಶಕ್ಕೆ ನೆಮ್ಮದಿ ಎನ್ನುವರು. ಈ ನಾಲ್ಕು ವರ್ಣದವರೂ ಸಮ್ಮತಿಸಿದರೆ ಆಗ ತೊಂದರೆಯಿಲ್ಲವು, ಇಲ್ಲದೆ ಬಲಾತ್ಕರಿಸಿ ಸರ್ಕಾರ ಬಲವನ್ನೂ ಹೊಂದಿ ಪ್ರವೇಶಿಸಿದರೆ ಐಕಮತ್ಯಕ್ಕೆ ಬದಲಾಗಿ ಇನ್ನೂ ಹೆಚ್ಚು ವೈಷಮ್ಯಕ್ಕೆ ಕಾರಣವಾಗುವುದಿಲ್ಲವೇ? ಆಗ ಇತರರು ಬೇರೆ ದೇವಸ್ಥಾನಗಳನ್ನು ನಿರ್ಮಿಸಿಕೊಳ್ಳುವ ಆವಶ್ಯಕತೆಯುಂಟಾಗಿ ತನ್ಮೂಲಕ ಪ್ರಾಪ್ತವಾಗುವ ಅಶಾಂತತೆಗಿಂತ, ಅವರುಗಳಿಗೆ ಎಂದರೆ ಪಂಚಮರಿಗೇ ಇನ್ನೂ ಹೆಚ್ಚು ಖರ್ಚಿನಿಂದ ದೇವಸ್ಥಾನವನ್ನು ಬೇರೆ ನಿರ್ಮಿಸಿಕೊಡುವದು ಯುಕ್ತವಲ್ಲವೇ? ಎಂದು ಕೇಳಬೇಕಾಗುತ್ತದೆ. ಒಂದೊಂದು ಪಂಗಡದವರೂ ಒಂದೊಂದು ದೇವಸ್ಥಾನವನ್ನು ಏರ್ಪಡಿಸಿಕೊಂಡು ನೆಮ್ಮದಿಯಿಂದ ವರ್ತಿಸುತಿದ್ದಾರೆ. ಈಗ ಇನ್ನೊಂದು ಕೂಗು ಹರಡಿಕೊಂಡಿರುತ್ತದೆ. ಎಲ್ಲರೂ ಒಂದೇ ಭಾಷೆಯನ್ನೇ ಅವಲಂಬಿಸಿದರೆ ಲೋಕಕ್ಕೆ ಕ್ಷೇಮವೆನ್ನುತ್ತಾರೆ. ಹಿಂದೂದೇಶದ ಅನೇಕ ಭಾಷೆಗಳಿಗೆಲ್ಲಾ ಸಂಸ್ಕೃತವು ಮಾತೃಭಾಷೆಯು. ಆ ಕಾರಣದಿಂದ ಎಲ್ಲರೂ ಸಂಸ್ಕೃತವನ್ನೇ ಕಲಿಯುವದು ನ್ಯಾಯವು. ಹಾಗಲ್ಲದೆ ಹಿಂದೀ ಭಾಷೆಯನ್ನು ಕಲಿಯಬೇಕೆಂದು ನಿರ್ಬಂಧಪಡಿಸುತ್ತದೆ. ಹಿಂದಿಯನ್ನು ಕಲಿಯುವುದೂ ಶ್ರಮಸಾಧ್ಯವು. ಹಾಗಿರುವಾಗ ಸಂಸ್ಕೃತತಾನೇ ಏಕೆ ಕೂಡದು?

**ಭಾ. ಬ್ರಾಹ್ಮಣ ಕ್ಷತ್ರಿಯ ವಿಶಾಂ, ಸ್ವಕೀಯೋಭಾವಃ-ಸ್ವಭಾವಃ, ಬ್ರಾಹ್ಮಣಾದಿ ಜನ್ಮಹೇತು ಭೂತಂ ಪ್ರಾಚೀನ ಕರ್ಮೇತ್ಯರ್ಥಃ; ತತ್ಪ್ರಭವಾ ಸ್ಸತ್ತ್ವಾದಯೋ ಗುಣಾಃ; ಬ್ರಾಹ್ಮಣಸ್ಯ ಸ್ವಭಾವ ಪ್ರಭವೋ ರಜಸ್ತಮೋಭಿ ಭವೇನೋ ದ್ಭೂತ ಸ್ಸತ್ತ್ವಗುಣಃ; ಕ್ಷತ್ರಿಯಸ್ಯ ಸ್ವಭಾವ ಪ್ರಭವ ಸ್ತಮ ಸ್ಸತ್ತ್ವಾಭಿಭವೇನೋ ದ್ಭೂತೋ ರಜೋಗುಣಃ; ವೈಶ್ಯಸ್ಯ ಸ್ವಭಾವ ಪ್ರಭವ ಸ್ಸತ್ತ್ವರಜೋಭಿಭವೇನಾ ಲ್ಪೋದ್ರಿಕ್ತ ಸ್ತಮೋಗುಣಃ; ಶೂದ್ರಸ್ಯ ಸ್ವಭಾವ ಪ್ರಭವಸ್ತು ರಜಸ್ಸತ್ತ್ವಾಭಿ ಭವೇನಾ ತ್ಯುದ್ರಿಕ್ತ ಸ್ತಮೋಗುಣಃ; ಏಭಿಃ ಸ್ವಭಾವ ಪ್ರಭವೈರ್ಗುಣೈಸ್ಸಹ**

---

ಎಂಬ ಪ್ರಶ್ನೆಯು ನಿರುತ್ತರವಾಗುತ್ತದೆ. ಹೀಗೆ ನಾನಾವಿಧ ಭ್ರಮೆಗಳು ಜನರಲ್ಲಿ ಉಂಟಾಗಿರುತ್ತವೆ. ಕಾಲದ ಮಹಿಮೆಯು.

**ಭಾಷ್ಯಾರ್ಥವು**—ಈ ತ್ರಿಗುಣಗಳ ತಾರತಮ್ಯದಿಂದಲೇ ಚಾತುರ್ವರ್ಣ್ಯ ವಿಭಾಗವೂ, ಅವರ ಗುಣಗಳೂ, ಅವರ ಪ್ರವೃತ್ತಿಗಳೂ, ಇತಿ ಕರ್ತವ್ಯತೆಗಳೂ ಎಲ್ಲವೂ ಎಂದು ಹೇಳಲು ಉಪಕ್ರಮಿಸುತ್ತಾರೆ. **ಬ್ರಾಹ್ಮಣ ಕ್ಷತ್ರಿಯ ವಿಶಾಂ**-ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ಇವರುಗಳ, **ಸ್ವಭಾವ ಪ್ರಭವೈರ್ಗುಣೈಃ** ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ—**ಸ್ವಭಾವಃ** ಎಂದರೆ **ಸ್ವಕೀಯಭಾವವು**-ಅವರವರುಗಳಿಗೆ ಸಂಬಂಧಪಟ್ಟ ಸ್ವಕೀಯಭಾವವು, ಅದು ಯಾವುದೆಂದರೆ, **ಜನ್ಮಹೇತು ಭೂತಂ ಪ್ರಾಚೀನ ಕರ್ಮೇತ್ಯರ್ಥಃ**-ಜನ್ಮಕ್ಕೆ ಕಾರಣವಾದ ಪ್ರಾಚೀನ ಕರ್ಮವೆಂಬರ್ಥವು, **ತತ್ಪ್ರಭವಾಃ**-ಅಂತಹ ಪ್ರಾಚೀನ ಕರ್ಮದಿಂದುಂಟಾದ, **ಸತ್ತ್ವಾದಯೋಗುಣಾಃ**-ಸಾತ್ವಿಕ ರಾಜಸ ತಾಮಸಗಳ ತಾರತಮ್ಯದಿಂದುಂಟಾದ ಗುಣಗಳು; ಈ ಗುಣಗಳು ಬ್ರಾಹ್ಮಣಾದಿ ಚಾತುರ್ವರ್ಣ್ಯದಲ್ಲಿ ಹೇಗೆ ಇರುತ್ತವೆ ಎಂಬುದನ್ನು ವ್ಯಕ್ತಪಡಿಸುತ್ತಾರೆ—**ಬ್ರಾಹ್ಮಣಸ್ಯ ಸ್ವಭಾವ ಪ್ರಭವಃ**-ಬ್ರಾಹ್ಮಣನ ಪ್ರಾಚೀನ ಕರ್ಮದ ಮೂಲಕ ಪ್ರಾಪ್ತವಾದುದು, **ರಜಸ್ತಮೋಭಿಭವೇನ**-ರಜಸ್ಸು ತಮಸ್ಸು ಗುಣಗಳು ಕಮ್ಮಿಯಾಗುವುದರ ಮೂಲಕ, **ಉದ್ಭೂತ ಸ್ಸತ್ತ್ವಗುಣಃ**-ತಲೆ ಎತ್ತಿದ ಸತ್ತ್ವ ಗುಣವು; **ಕ್ಷತ್ರಿಯಸ್ಯ ಸ್ವಭಾವ ಪ್ರಭವಃ**-ಕ್ಷತ್ರಿಯನ ಪ್ರಾಚೀನ ಕರ್ಮದಿಂದುಂಟಾದುದು, **ತಮಸ್ಸತ್ತ್ವಾಭಿಭವೇನೋದ್ಭೂತೋ ರಜೋಗುಣಃ**-ತಮಸ್ಸು ಮತ್ತು ಸತ್ತ್ವಗುಣಗಳ ಕ್ಷೀಣತೆಯಿಂದ ತಲೆ ಎತ್ತಿದ ರಜೋಗುಣವು, **ವೈಶ್ಯಸ್ಯ ಸ್ವಭಾವ ಪ್ರಭವಃ**-ವೈಶ್ಯನ ಪ್ರಾಚೀನ ಕರ್ಮದಿಂದುಂಟಾದುದು, **ಸತ್ತ್ವರಜೋಭಿಭವೇನ ಅಲ್ಪೋದ್ರಿಕ್ತ ತಮೋಗುಣಃ**-ಸತ್ತ್ವರಜೋಗುಣಗಳು ಕ್ಷೀಣತೆಯನ್ನು ಹೊಂದಿದುದರಿಂದ ಸ್ವಲ್ಪ ತಲೆ ಎತ್ತಿದ ತಮೋಗುಣವು, **ಶೂದ್ರಸ್ಯ ಸ್ವಭಾವ ಪ್ರಭವಸ್ತು**-ಶೂದ್ರನ ಪ್ರಾಚೀನ ಕರ್ಮದಿಂದುಂಟಾದುದಾದರೋ, **ರಜಸ್ಸತ್ತ್ವಾಭಿ ಭವೇನ ಅತ್ಯುದ್ರಿಕ್ತ ಸ್ತಮೋಗುಣಃ**-ರಜಸ್ತಮೋಗುಣಗಳು ಕ್ಷೀಣವಾಗುವುದರಿಂದ, **ಹೆಚ್ಚಾಗಿ** ಆಧಿಕ್ಯವನ್ನು ಹೊಂದಿದ ತಮೋಗುಣವು, **ಏಭಿಃ ಸ್ವಭಾವ ಪ್ರಭವೈರ್ಗುಣೈಸ್ಸಹ**-ಇಂತಹ ಪ್ರಾಚೀನ ಕರ್ಮಗಳಿಂದುಂಟಾದ ಗುಣಗಳೊಂದಿಗೆ, **ಪ್ರವಿಭಕ್ತಾನಿ ಕರ್ಮಾಣಿ**-ಹೀಗೆ ಗುಣ ತಾರತಮ್ಯದಿಂದ ಭಿನ್ನಭಿನ್ನಗಳಾದ ಕರ್ಮಗಳು, **ಶಾಸ್ತ್ರೈಃ ಪ್ರತಿಪಾದಿತಾನಿ**-ಶಾಸ್ತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿವೆ **ಬ್ರಾಹ್ಮಣಾದಯಃ**-ಬ್ರಾಹ್ಮಣರೇ ಮೊದಲಾದ ನಾಲ್ಕು ವರ್ಣದವರೂ, **ಏವಂ ಗುಣಕಾಃ**-ಇಂತಹ ಗುಣಗಳುಳ್ಳವರು, **ತೇಷಾಂ ಚೈತಾನಿ ಕರ್ಮಾಣಿ**-ಅವರುಗಳಿಗೆ ವಿಹಿತಗಳಾದ ಕರ್ಮಗಳು ಇವು; **ವೃತ್ತಯಶ್ಚೈತಾ ಇತಿ ಹಿ**-ಅವರುಗಳ ಜೀವನೋಪಾಯಾದಿ ಪ್ರವೃತ್ತಿಗಳು ಇಂತವು, ಎಂದಲ್ಲವೇ, **ವಿಭಜ್ಯ**-ವಿಭಾಗಿಸಿ, **ಶಾಸ್ತ್ರಾಣಿ**-ಶಾಸ್ತ್ರಗಳು, **ಪ್ರತಿಪಾದಯನ್ತಿ**-ಪ್ರತಿಪಾದಿಸುತ್ತವೆ. ಮೂಲದಲ್ಲಿ **ಪ್ರವಿಭಕ್ತಾನಿ** ಎಂದಿರುವದರಿಂದ, ಯಾರಿಂದ ವಿಭಕ್ತ

**ಪ್ರವಿಭಕ್ತಾನಿ ಕರ್ಮಾಣಿ ಶಾಸ್ತ್ರೈಃ ಪ್ರತಿಪಾದಿತಾನಿ; ಬ್ರಾಹ್ಮಣಾದಯ ಏವಂ ಗುಣಕಾಃ; ತೇಷಾಂ ಚೈತಾನಿ ಕರ್ಮಾಣಿ ವೃತ್ತಯಶ್ಚೈತಾ ಇತಿಹಿ ವಿಭಜ್ಯ ಪ್ರತಿಪಾದಯನ್ತಿ ಶಾಸ್ತ್ರಾಣಿ ॥ ೪೧ ॥**

---

ಗಳು ಎಂದು ಹೇಳಲ್ಪಡಲಿಲ್ಲವಾಗಿ **ಶಾಸ್ತ್ರೈಃ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಎಲ್ಲಿ ಹೇಳಲ್ಪಟ್ಟಿವೆ ಎಂದರೆ ಬ್ರಾಹ್ಮ ಪುರಾಣ ಮೊದಲಾದವುಗಳಲ್ಲಿ; ಅಲ್ಲಿ "**ತಮಶ್ಶೂದ್ರೇ ರಜಃ ಕ್ಷತ್ರೇ ಬ್ರಾಹ್ಮಣೇ ಸತ್ವಮುತ್ತಮಮ್**" ಎಂದು ಹೇಳಲ್ಪಟ್ಟಿರುತ್ತದೆ. ಈ ಶ್ಲೋಕದಲ್ಲಿ **ಉತ್ತಮಂ** ಎಂದರೆ ಪ್ರಾಚುರ್ಯವು ಎಂಬರ್ಥವು. **ಬ್ರಾಹ್ಮಣೇ ಸತ್ವಮುತ್ತಮಮ್**-ಸತ್ವ ಗುಣದ ಪ್ರಾಚುರ್ಯವು. ಈ **ಉತ್ತಮಮ್** ಎಂಬುದನ್ನು ಇನ್ನು ಎರಡಕ್ಕೂ ಅನ್ವಯಿಸ ತಕ್ಕದ್ದು. **ರಜಃಕ್ಷತ್ರೇ ಉತ್ತಮಮ್ ತಮಃಶೂದ್ರೇ ಉತ್ತಮಮ್** ಹೀಗೆ ಅನ್ವಯವು. ಹೀಗೆಯೇ ಶ್ರೀ ಯತಿವರ್ಯರು ಈ ಶ್ಲೋಕವನ್ನು ಅನುಸರಿಸಿ ಭಾಷ್ಯವನ್ನು ಬರೆದಿರು ತ್ತಾರೆ. ವೈಶ್ಯರ ವಿಷಯವನ್ನು ಈ ಶ್ಲೋಕದಲ್ಲಿ ಹೇಳದಿದ್ದರೂ ವೈಶ್ಯರಿಗೂ ಶೂದ್ರರಿಗೂ ತಾರತಮ್ಯ ಹೇಗೆ? ಎಂದರೆ ತಮಸ್ಸಿನ ಪ್ರಾಚುರ್ಯವು ವೈಶ್ಯರಲ್ಲಿ ಸ್ವಲ್ಪ ಕಮ್ಮಿಯಾಗಿಯೂ, ಶೂದ್ರರಲ್ಲಿ ಪ್ರಾಚುರ್ಯವು ಹೆಚ್ಚೆಂದೂ ವ್ಯಾಖ್ಯಾನ ಮಾಡಿರುತ್ತಾರೆ, "**ಅಲ್ಪೋದ್ರಿಕ್ತ**" "**ಅತ್ಯುದ್ರಿಕ್ತ**" ಪದಗಳಿಂದ ಹೀಗೆ ಉಪಪಾದಿಸಿ ಹೇಳಿರುವದು ತಾವಲ್ಲವು. ಶಾಸ್ತ್ರಗಳೇ ಎಲ್ಲಾ ಕಡೆಯಲ್ಲೂ ಶ್ರುತಿ ಸ್ಮೃತಿ ಇತಿಹಾಸ, ಪುರಾಣ ಭಗವಚ್ಛಾಸ್ತ್ರಾದಿಗಳೆಲ್ಲಾ ಆದುದ ರಿಂದ **ಶಾಸ್ತ್ರೈಃ ಪ್ರತಿಪಾದಿಯನ್ತಿ;** ಹಾಗೆಯೇ ಅವರುಗಳ ಕರ್ಮಗಳನ್ನು ಹೀಗೆ ವಿಭಾಗಿಸಿ, **ಶಾಸ್ತ್ರಾಣಿ ಪ್ರತಿಪಾದಯನ್ತಿ**-ಶಾಸ್ತ್ರಗಳೇ ಹೇಳುತ್ತವೆಂದು ಭಾಷ್ಯವನ್ನು ಬರೆದಿರುತ್ತಾರೆ; ಹೀಗೆಲ್ಲಾ ವಿಭಾಗಿಸಿಕೊಂಡಿದ್ದು ಬ್ರಾಹ್ಮಣನಲ್ಲವೆಂದೂ, ಬ್ರಾಹ್ಮಣನನ್ನು ಅನ್ಯಾಯವಾಗಿ ನಿಂದಿಸುವದೂ ಸರಿಯಲ್ಲವೆಂಬುದು ಇಲ್ಲಿ ವ್ಯಕ್ತಪಡುತ್ತದೆ; ಏಕೆಂದರೆ ಇಂತಹ ವಿಭಾಗಗಳೆಲ್ಲಾ ಶಾಸ್ತ್ರಪ್ರೋಕ್ತವಾದುದರಿಂದ. ಕರ್ಮವಶ್ಯನಾದುದರಿಂದಲೇ ಈ ಸಾತ್ವಿಕಾದಿಗಳ ಪ್ರಾಚುರ್ಯವೂ ತಾರತಮ್ಯವೂ. ಕರ್ಮವೆಲ್ಲಾ ಉಪಾಯಾನುಷ್ಠಾನದಿಂದ ಕಳೆದುಹೋದಾಗ ಈ ಗುಣಗಳು ಯಾವುವೂ ಇಲ್ಲವು. ಪರಸ್ಪರ ವ್ಯತ್ಯಾಸವೂ ಇಲ್ಲವು ಶಾಸ್ತ್ರವಶ್ಯತೆಯೂ ಬೇಕಿಲ್ಲವು. ಇನ್ನೂ ವಿಷ್ಣು ಪುರಾಣದಲ್ಲಿ ೩ನೆಯ ಅಂಶ ಅಷ್ಟಮಾಧ್ಯಾಯದಲ್ಲೂ, ಮಹಾಭಾರತದ ಶಾನ್ತಿಪರ್ವ ೧೨ನೆಯ ಅಧ್ಯಾಯ ದಲ್ಲೂ. ಹಾಗೆಯೇ ಭಾಗವತದಲ್ಲೂ ಉಪಪಾದಿತವಾಗಿವೆ ಈ ಶ್ಲೋಕದಲ್ಲಿ **ಬ್ರಾಹ್ಮಣ ಕ್ಷತ್ರಿಯ ವಿಶಾಂ** ಎಂದು ಸಮಾಸಪದವೂ ಶೂದ್ರಾಣಾಂಚ ಎಂದು ಬೇರೆಯಾಗಿ ಪ್ರತ್ಯೇಕಿಸಲ್ಪಟ್ಟ ಪದವೂ ಏತಕ್ಕಾಗಿ? ಎಂದರೆ ಮೊದಲು ಮೂರು ವರ್ಣದವರೂ ದ್ವಿಜರಾಗಿ ವೇದಾಧ್ಯಯನಾಧಿಕಾರವುಳ್ಳವರೆಂದೂ ಶೂದ್ರರಿಗೆ ಅಪಶೂದ್ರಾಧಿಕರಣದಲ್ಲಿ ಹೇಳಿರುವ ಹಾಗೆ ವೇದಾಧಿಕಾರವಿಲ್ಲವೆಂದೂ ತಿಳಿಸುವದಾಗಿ ಎಂದು ಭಾವಿಸತಕ್ಕದ್ದು. ಅದೂ ಅಲ್ಲದೆ ಈ ಮೂವರೂ ಉಪಾಸನಾಧಿಕಾರಿಗಳು, ಶೂದ್ರರಾದರೋ ಶರಣಾಗತಿಗೆ ಮಾತ್ರ ಅಧಿಕಾರಿಗಳು ಈ ಶ್ಲೋಕ ದಲ್ಲಿ **ಕರ್ಮಾಣಿ ಪ್ರವಿಭಕ್ತಾನಿ** ಎಂದು ಇಷ್ಟು ಮಾತ್ರವಿದ್ದರೂ, ಕರ್ಮಗಳು ಕರ್ತವ್ಯಕರ್ಮಗಳೆಂದೂ, ಜೀವನೋಪಾಯ ಕರ್ಮಗಳೆಂದೂ ಎರಡುವಿಧ ಕರ್ಮಗಳೂ ಬೇರೆ ಬೇರೆಯಾಗಿ ಆವಶ್ಯಕವಾದುದ ರಿಂದ **ವೃತ್ತಯಶ್ಚ** ಎಂದು ಭಾಷ್ಯದಲ್ಲಿ ಸೇರಿಸಿರುತ್ತಾರೆ. ಹಿಂದೂದೇಶದಲ್ಲಿ ಮಾತ್ರ ವೇದ ಪ್ರಮಾಣವನ್ನು ಒಪ್ಪುವವರಿಗೆ ಹೀಗೆ ಸತ್ವರಜಸ್ತಮೋಗುಣಗಳ ವ್ಯತ್ಯಾಸದಿಂದ ಬ್ರಾಹ್ಮಣಾದಿ ವರ್ಣಗಳು ಹೇಳಲ್ಪಟ್ಟವು. ಇತರ ಕಡೆಯಲ್ಲಿ ಇಂತಹ ವರ್ಣ ಪ್ರಭೇದಗಳ ಹೆಸರುಗಳಿಲ್ಲದೇನೆ ಸಾತ್ವಿಕ ರಾಜಸ ತಾಮಸ ಗುಣಾಧಿಕ್ಯಗಳುಳ್ಳ ಕುಲಗಳೂ ಜನರೂ ಇದ್ದೇ ಇರುತ್ತಾರೆ. ಈ ಆಧಿಕ್ಯವು ಪೂರ್ವ ಕರ್ಮಾನುಸಾರ ಪ್ರಾಪ್ತ ದೇಹಧರ್ಮಕ್ಕೆ ಸೇರಿದುದು. ॥ ೪೧ ॥

**ಮೂ. ಶಮೋ ದಮ ಸ್ತಪ ಶ್ಶೌಚಂ ಕ್ಷಾನ್ತಿ ರಾರ್ಜವ ಮೇವ ಚ ।**
**ಜ್ಞಾನಂ ವಿಜ್ಞಾನ ಮಾಸ್ತಿಕ್ಯಂ ಬ್ರಾಹ್ಮಂಕರ್ಮ ಸ್ವಭಾವಜಮ್ ॥೪೨॥**

---

**ಮೂಲಕ್ಕೆ ಅರ್ಥವು**—ಪ್ರಾಚೀನ ಕರ್ಮಗಳಿಂದ ಸುಕೃತಗಳಿಂದ ಸಾಧಾರಣವಾಗಿ ಬ್ರಾಹ್ಮಣಯೋನಿಯಲ್ಲಿ ಜನಿಸಿದ ಬ್ರಾಹ್ಮಣವೃತ್ತಿ ಲಕ್ಷಣಗಳು ಯಾವುವೆಂದರೆ ತಿಳಿಸುತ್ತಾರೆ— **ಶಮಃ**-ಬಾಹ್ಯೇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸದ ಹಾಗೆ ಅವುಗಳ ನಿಗ್ರಹವು, **ದಮಃ**-ಅಂತರಿಂದ್ರಿಯವಾದ ಮನಸ್ಸು ಬಾಹ್ಯೇಂದ್ರಿಯಗಳನ್ನು ವಿಷಯಗಳಲ್ಲಿ ಪ್ರವರ್ತಿಸದ ಹಾಗೆ ನಿಗ್ರಹಿಸೋಣವು ಅಂತರಿಂದ್ರಿಯ ಬಾಹ್ಯೇಂದ್ರಿಯಗಳ ನಿಗ್ರಹವಿಲ್ಲದವನು ಬ್ರಾಹ್ಮಣನೆಂದು ಹೇಳಿಸಿಕೊಳ್ಳಲು ಅನರ್ಹನು ಎಂದೂ, ಅತನು ಮುಮುಕ್ಷುವಾಗಲೂ, ಮತ್ತು ಕರ್ಮಯೋಗಾನುಷ್ಠಾನಕ್ಕೂ ಸಹ ಅನರ್ಹನೆಂದು ಹೇಳಿದಂತಾಯಿತು. **ತಪಃ**-ಭೋಗಗಳಲ್ಲಿ ಮನಸ್ಸು ಪ್ರವರ್ತಿಸದೇ ಇರುವದಕ್ಕಾಗಿ ಉಪವಾಸಾದಿಗಳಿಂದ ದೇಹವನ್ನು ದಂಡಿಸೋಣವು. **ಶೌಚಂ**-ಸ್ನಾನ ಸಂಧ್ಯಾವಂದನಾದಿಗಳಿಂದ ಕರ್ಮಕ್ಕೆ ಬೇಕಾದ ಪರಿಶುದ್ಧತೆಯು, ಬಾಹ್ಯಸ್ನಾನವು; **ಆಪೋಹಿಷ್ಠಾದಿ** ಮನ್ತ್ರದಿಂದ ಮನ್ತ್ರಸ್ನಾನವೂ, ಮತ್ತು **"ಸಂಧ್ಯಾಹೀನೋಽಶುಚಿರ್ನಿತ್ಯಂ ಅನರ್ಹಸ್ಸರ್ವ ಕರ್ಮಸು"** ಎಂದು ಹೇಳಿರುವ ಹಾಗೆ ಸಂಧ್ಯಾವಂದನೆಯೂ, ಇವುಗಳಿಂದ ಪರಿಶುದ್ಧತೆಯನ್ನು ಹೊಂದೋಣವು, **ಕ್ಷಾನ್ತಿಃ**-ಇತರರಿಂದ ಪ್ರಾಪ್ತವಾದ ತೊಂದರೆಗಳನ್ನು ಸಹಿಸಿಕೊಳ್ಳೋಣವು, **"ತಿಂದುಸ್ಸಹಂನು ಸಾಧೂನಾಂ"** (ಭಾಗ ೧೩, ೧, ೫೯) ಎಂದು ಭಾಗವತದಲ್ಲಿ ಹೇಳಿರುವ ಹಾಗೆ ಸಾತ್ವಿಕನಾದ ಬ್ರಾಹ್ಮಣ ಸೆಹಿಸುವದಕ್ಕೆ ಕ್ಷಾನ್ತಿಯು ಅವಶ್ಯಕವೆಂದು ಹೇಳಿದಂತಾಯಿತು; ಇತರರಿಂದ ತನಗೆ ತೊಂದರೆಗಳು ಪ್ರಾಪ್ತವಾದರೂ, ಪಸೋ ಜ್ಞಾನಶೂನ್ಯರಾಗಿ ನಡೆಸಿದರೆಂದು ಅವರ ವಿಷಯದಲ್ಲಿ ಪರಿತಾಪವೂ, ಅವರುಗಳು ಹೀಗೆ ತೊಂದರೆಯನ್ನು ಕೊಟ್ಟಿದುದು ನನಗೆ ತಿದ್ದಿಕೊಳ್ಳುವದಕ್ಕೆ ಒಂದು ಅವಕಾಶವನ್ನು ಕೊಟ್ಟರೆಂಬ ಕೃತಜ್ಞತಾ ಭಾವದಿಂದಾಗಲಿ, ಅಥವಾ ಹಾಗೆ ಅವರು ಮಾಡಿದುದರಿಂದ ಸರ್ವೇಶ್ವರನು ಅನುಗ್ರಹಿಸಿ ಈ ಅಲ್ಪವಾದ ತೊಂದರೆಯ ಮೂಲಕ ಮಹತ್ತಾದ ಪ್ರಾರಬ್ಧವು ಕಳೆಯುವ ಹಾಗೆ ಮಾಡಿದನೆಂದೂ ಪರಮಾತ್ಮನಲ್ಲಿ ನಿರತಿಶಯ ಭಕ್ತಿಯಿಂದಲಾಗಲಿ, ನಿಂದನೆ ಮೊದಲಾದ ಪರಿಭವಗಳನ್ನುಂಟು ಮಾಡಿದವನು ತನ್ನ ಶ್ರೇಯಸ್ಸನ್ನು ನನಗಿತ್ತು, ನನ್ನ ಪಾಪಗಳನ್ನು ತೆಗೆದುಕೊಂಡು ಹೋಗುವನು ಎಂಬ ಶಾಸ್ತ್ರ ಪಙ್ಕ್ತಿಯಿರುವದರಿಂದ ಅಂತವನು ಉಪಕಾರಮಾಡಿದನೆಂದು ಅತನಲ್ಲಿ ಕೃತಜ್ಞತಾ ಭಾವದಿಂದಾಗಲಿ **ಕ್ಷಾಂತಿಯು** ಇರಬೇಕೆಂಬ ಭಾವವು. **ಆರ್ಜವಂ** ಋಜುಭಾವವು, **ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ** ಎಂದು ಹೇಳಿರುವ ಹಾಗೆ ನಿಷ್ಕಾಪಟ್ಯವುಳ್ಳ ಪ್ರವೃತ್ತಿಯು, **ಜ್ಞಾನಂ**-ಆತ್ಮತತ್ತ್ವ ಪರತತ್ತ್ವಗಳ ಯಥಾರ್ಥವಾದ ಜ್ಞಾನವು, ಇವುಗಳು ಭ್ರಮಜ್ಞಾನ ನಿವರ್ತಕಗಳು, ದೇಹವೇ ಆತ್ಮಾ ಎಂಬ ಭ್ರಮೆ, ಮತ್ತು ತಾನು ಸ್ವತಂತ್ರನೆಂಬ ಭ್ರಮೆ, ತಾನೇ ಪರಮಾತ್ಮನೆಂಬ ಭ್ರಮೆ, ಈ ಮೂರು ಭ್ರಮ ನಿವಾರಕವಾದುದು ಯಾವುದೋ, ಅಂತಹಜ್ಞಾನವು ಇಲ್ಲಿ ವಿವಕ್ಷಿತವು, **ವಿಜ್ಞಾನಂ**-ತನಗೆ ನಿರತಿಶಯ ಶ್ರೇಯಸ್ಸಾಧಕನು ಪರಮಾತ್ಮನೆಂದೂ ಅಂತಹ ಶ್ರೇಯಸ್ಸನ್ನು ಹೊಂದುವ ಬಗೆ ಸಾಧ್ಯೋಪಾಯಗಳಾದ ಭಕ್ತಿಪ್ರಪತ್ತಿಗಳೆಂದೂ, ತಿಳಿಯೋಣವು, **ಆಸ್ತಿಕ್ಯಂ**-ಶಾಸ್ತ್ರ ಪ್ರಮಾಣದಲ್ಲಿ ಸಂಪೂರ್ಣ ನಂಬಿಕೆಯು; ತನಗೆ ಸತ್ತಾ ಸ್ಥಿತಿ ನಿಯಮನಾದಿಗಳಿಗೆ ಹೇತುವಾಗಿ ಒಬ್ಬ ಸರ್ವೇಶ್ವರನುಂಟು, ಶಾಸ್ತ್ರಗಳು ಆತನ ಆಜ್ಞೆಗಳೆಂಬ ಸಂಪೂರ್ಣ ನಂಬಿಕೆಯು, ಇವೆಲ್ಲವೂ **ಸ್ವಭಾವಜಂ**-ಸ್ವಾಭಾವಿಕವಾಗಿ ಒಂದ ಎಂದರೆ ತನ್ನ ಪ್ರಾಚೀನ ಕರ್ಮಗಳಿಂದ ಪ್ರಾಪ್ತವಾದ ಪುಣ್ಯ ಸಂಚಯದಿಂದ ಉತ್ಪನ್ನವಾದುದರಿಂದಲೂ ಆ ಕಾರಣದಿಂದ ಬ್ರಾಹ್ಮಣಯೋನಿಯಲ್ಲಿ ಜನಿಸಿದುದರಿಂದಲೂ ಸ್ವಭಾವದಿಂದುಂಟಾದುದು ಎಂಬ ಭಾವವು, **ಬ್ರಾಹ್ಮಂಕರ್ಮ**-ಸರಿಯಾದ ಬ್ರಾಹ್ಮಣನಿಗೆ ಸಂಬಂಧಿಸಿದ ಕರ್ಮವು. ಇಲ್ಲಿ ಆಸ್ತಿಕ್ಯ

ಬುದ್ಧಿಯು ತನ್ಮೂಲಕ ಪ್ರವೃತ್ತಿಯೂ ಕೊನೆಯಲ್ಲಿ ಹೇಳಿದುದು ಅದರ ಪ್ರಾಮುಖ್ಯತೆಯನ್ನು ಪ್ರದರ್ಶಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. **"ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯ ವ್ಯವಸ್ಥಿತೌ"** ಎಂದು ಹೇಳಿರುವ ಹಾಗೆ ಆಸ್ತಿಕ್ಯ ಬುದ್ಧಿಯುಳ್ಳವನು ಕೃತ್ಯಾಕರಣ ಅಕೃತ್ಯ ಕರಣಾದಿ ದೋಷಗಳಿಗೆ ಗುರಿಯಾಗುವುದಿಲ್ಲವು. ಜಗತ್ಕಾರಣನು ಪರಮಾತ್ಮನೆಂದೂ ಆತನು ತನಗೆ ಆತ್ಮವಾಗಿರುವನೆಂದೂ, ತನ್ನ ಸತ್ತಾ ಸ್ಥಿತಿ ನಿಯಮನಾದಿಗಳಿಗೆಲ್ಲಾ ಆತನೇ ಕಾರಣನೆಂದೂ, ತಾನು ಮಾಡುವ ಕರ್ಮಗಳೆಲ್ಲಾ ಆತನಿಗೆ ಸಮರ್ಪಿಸತಕ್ಕದೆಂದೂ, ಅದರಿಂದ ಆತನು ಪ್ರೀತನಾಗಿ ತಾನು ಮಾಡಿರುವ ಉಪಾಯಾನುಷ್ಠಾನ ರೀತ್ಯಾ ಚತುರ್ವಿಧ ಪುರುಷಾರ್ಥಗಳಿಗೂ ಆತನೇ ಕಾರಣವೆಂದೂ ತಿಳಿಯುವನು. ಇಂತಹ ಪ್ರವೃತ್ತಿಗಳೆಲ್ಲಾ ಯಾರಿಗೆ ಉಂಟಾಗುತ್ತದೆ ಎಂದರೆ ಸುಕೃತ ಪರಿಪಾಕವಿದ್ದು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವನಿಗೆ. ಹೀಗೆ **ಬ್ರಾಹ್ಮಂ**-ಎಂದು ಹೇಳಿರುವದರ ಅಭಿಪ್ರಾಯವು ಎಲ್ಲಾ ಬ್ರಾಹ್ಮಣರು ಇಂತಹ ಗುಣವುಳ್ಳವರೆಂಬ ತಾತ್ಪರ್ಯದಿಂದ ಅಲ್ಲವು. ಅನೇಕರು ಇಂತಹ ಗುಣಗಳಿಲ್ಲದವರೂ ಉಂಟು. ಇದನ್ನೇ **"ವಿದ್ಯಾ ವಿನಯ ಸಂಪನ್ನೇ ಬ್ರಾಹ್ಮಣೇ** ಎಂಬ (ಗೀ. ) ಶ್ಲೋಕದ ಬ್ರಾಹ್ಮಣ ಶಬ್ದದಲ್ಲಿ ವ್ಯಕ್ತಪಡಿಸಿರುತ್ತಾರೆ. ಇದೂ ಅಲ್ಲದೆ ಇತರ ವರ್ಣಗಳಲ್ಲಿ ಇಂತಹ ಗುಣಗಳಿರುವವರೂ ಉಂಟು. ಆದರೆ ಇಲ್ಲಿ ಗ್ರಹಿಸತಕ್ಕ ಅಭಿಪ್ರಾಯವೇನೆಂದರೆ ಬ್ರಾಹ್ಮಣ ಜಾತಿಯಲ್ಲಿ ಈ ಗುಣಗಳುಳ್ಳವರು ಇತರ ವರ್ಣಗಳಲ್ಲಿ ಸಿಕ್ಕುವದಕ್ಕಿಂತ ಹೆಚ್ಚಾಗಿ ದೊರೆಯುವರೆಂಬ ಭಾವವು, **"ವಿದ್ಯತೇ ಬ್ರಾಹ್ಮಣೇದಮಃ"** (ರಾ. ಯುದ್ಧ ೧೮) ಎಂಬ ಮಹರ್ಷಿಯ ಉಕ್ತಿಯಿಂದ ವ್ಯಕ್ತವು. ಪ್ರಾಚೀನ ಕರ್ಮ ಪರಿಪಾಕದಿಂದ ಸಾತ್ವಿಕ ಗುಣವು ಹೆಚ್ಚಿದರೆ, ಆಗ ಆತನು ಬ್ರಾಹ್ಮಣಯೋನಿಯಲ್ಲಿ ಜನಿಸಿ ಈ ಗುಣ ಪ್ರವೃತ್ತಿಗಳುಳ್ಳವನಾಗುವನೆಂಬುವದು ಮುಖ್ಯ ತಾತ್ಪರ್ಯವು. ಇತರ ವರ್ಣಗಳಲ್ಲೂ ಇಂತವರುಂಟೆಂಬ ಭಾವದಿಂದಲೇ **"ನಶೂದ್ರಾ ಭಗವದ್ಭಕ್ತಾ ವಿಪ್ರಾಭಾಗವತಾಸ್ಸ್ಮೃತಾಃ । ಸರ್ವವರ್ಣೇಷುತೇ ಶೂದ್ರಾಯೇಹ್ಯಭಕ್ತಾ ಜನಾರ್ದನೇ"** ಇತ್ಯಾದಿ ಪ್ರಮಾಣಗಳುಂಟು ಶೂದ್ರನಾದರೂ ಅಂತಹ ಪರಮಾತ್ಮನನ್ನು ಧ್ಯಾನಿಸುವವನು ಭಾಗವತನೆನಿಸುವನು; ಬ್ರಾಹ್ಮಣನು ಪರಮಾತ್ಮ ಭಕ್ತನಾದರೆ ಹೇಗೆ ಮಾನನೀಯನೋ, ಹಾಗೆಯೇ ಶೂದ್ರ ಭಾಗವತನೂ ಸಹ ಮರ್ಯಾದಾರ್ಹನು, ಎಷ್ಟರಮಟ್ಟಿಗೆ ಮಾನನೀಯನೆಂಬುದಕ್ಕೆ ವಿಹಗೇಂದ್ರ ಸಂಹಿತಾ ವಾಕ್ಯವಾದ ನಾರಾಯಣೈಕ ನಿಷ್ಠಸ್ಯ" ಎಂಬುದರ ವ್ಯಾಖ್ಯಾನವನ್ನು ಶ್ರೀಮದ್ರಹಸ್ಯತ್ರಯಸಾರದ ೨೫೫೫-೨೬೪೯ ನೇ ಪುಟಗಳನ್ನು ನೋಡಿ. ಆದರೆ ಈ ಶ್ಲೋಕದಲ್ಲಿ ಬ್ರಾಹ್ಮಣನಿಗೆ ವಿಹಿತ ನಿತ್ಯ ನೈಮಿತ್ತಿಕಗಳು ಯಾವುವು ಎಂಬುದೂ, ಮತ್ತು ಈತನು ಉದರ ಪೋಷಣೆಗೆ ಏನು ಮಾಡತಕ್ಕದ್ದೆಂಬುದು ಹೇಳಲ್ಪಡಲಿಲ್ಲವು. ಶ್ರೀಯುತಿವರ್ಯರು, ಈ ನಾಲ್ಕು ವರ್ಣದವರ ಕರ್ಮವನ್ನು ಹೇಳಿದನಂತರ ಇವುಗಳನ್ನು ಕುರಿತು ಸೂಕ್ಷ್ಮವಾಗಿ ತಿಳಿಸುತ್ತಾರೆ. ಆದರೆ ಅವುಗಳನ್ನು ನಾವು ಇಲ್ಲಿ ಗ್ರಹಿಸಬಹುದು. ನಿತ್ಯ ನೈಮಿತ್ತಿಕಾದಿಗಳ ರೂಪದಲ್ಲಿ ಸ್ನಾನ ಸಂಧ್ಯಾವಂದನಾದಿಗಳೂ ಪಂಚ ಮಹಾ ಯಜ್ಞಾದಿಗಳ ಅನುಷ್ಠಾನವನ್ನೂ, ಶಮ, ದಮ, ಶೌಚಾದಿಗಳಿಂದ ಗ್ರಹಿಸಬಹುದು; ಇವು ತ್ರಿವರ್ಣದವರಿಗೂ ಸಾಧಾರಣವು. ಈತನ ಜೀವನೋಪಾಯರೂಪವೃತ್ತಿ ಯಾವುದು ಎಂಬುದನ್ನು ಶ್ರೀಯತಿವರ್ಯರು ಮುಂದೆ ತಿಳಿಸುತ್ತಾರೇನೆಂದರೆ **ಯಾಜನಾಧ್ಯಾಪನ ಪ್ರತಿಗ್ರಹಾಃ** ಎಂದರೆ ಯಜ್ಞಾದಿಗಳನ್ನು ಮಾಡಿಸುವದು, ವೇದಾಧ್ಯಯನವನ್ನು ಹೇಳಿಕೊಡುವದು, ಶಿಷ್ಯರು ಕೊಟ್ಟಿದುದನ್ನೂ, ಬ್ರಾಹ್ಮಣ ಕ್ಷತ್ರಿಯರು ಕೊಟ್ಟ ದಾನವನ್ನೂ, ಪರಿಗ್ರಹಿಸುವದು, ಇತರರು ಕೊಟ್ಟ ದಾನವನ್ನು ಬ್ರಾಹ್ಮಣನು ಪರಿಗ್ರಹಿಸತಕ್ಕದಲ್ಲವು.

ಈ ಗುಣಗಳುಳ್ಳ ಕರ್ಮಗಳು ಹಿಂದೆಯೇ ಮುಮುಕ್ಷುವಿಗೆ ಆವಶ್ಯಕವೆಂದು ಹೇಳಿದ್ದರೂ, ಬ್ರಾಹ್ಮಣನಲ್ಲಿ ಇವು ಉಂಟೆಂದು ಹೇಳುವದು ಸಂಗತವಾದುದರಿಂದ ಪುನರುಕ್ತಿದೋಷವಿಲ್ಲವು.

**ಭಾ.** ಶಮಃ-ಬಾಹ್ಯೇನ್ದ್ರಿಯ ನಿಯಮನಂ, ದಮಃ-ಅನ್ತರಿನ್ದ್ರಿಯ ನಿಯಮನಂ, ತಪಃ-ಭೋಗನಿಯಮನರೂಪ ಶ್ಶಾಸ್ತ್ರಸಿದ್ಧಃ ಕಾಯಕ್ಲೇಶಃ, ಶೌಚಂ-ಶಾಸ್ತ್ರೀಯ ಕರ್ಮಯೋಗ್ಯತಾ, ಕ್ಷಾನ್ತಿಃ-ಪರೈಃ ಪೀಡ್ಯಮಾನಸ್ಯಾಪ್ಯ ವಿಕೃತ ಚಿತ್ತತಾ, ಆರ್ಜವಂ-ಪರೇಷು ಮನೋನುರೂಪಂ ಬಾಹ್ಯಚೇಷ್ಟಾಪ್ರಕಾಶನಂ, ಜ್ಞಾನಂ-ಪರಾವರ ತತ್ತ್ವಯಾಥಾತ್ಮ್ಯಜ್ಞಾನಂ, ವಿಜ್ಞಾನಂ-ಪರತತ್ತ್ವ ಗತಾಸಾಧಾರಣ ವಿಶೇಷ ವಿಷಯಂ ಜ್ಞಾನಂ, ಆಸ್ತಿಕ್ಯಂ-ವೈದಿಕಾರ್ಥಸ್ಯ ಕೃತ್ಸ್ನಸ್ಯ ಸತ್ಯತಾ ನಿಶ್ಚಯಃ ಪ್ರಕೃಷ್ಟಃ, ಕೇನಾಪಿಹೇತುನಾ ಚಾಲಯಿತು ಮಶಕ್ಯ ಇತ್ಯರ್ಥಃ; ಭಗವಾನ್ಪುರುಷೋತ್ತಮೋ

---

**ಭಾಷ್ಯಾರ್ಥವು**—ದಮವೆಂದರೆ **ಬಾಹ್ಯೇನ್ದ್ರಿಯ ನಿಯಮನಂ**-ಬಾಹ್ಯೇನ್ದ್ರಿಯಗಳನ್ನು ವಿಷಯಗಳಲ್ಲಿ ಪ್ರವರ್ತಿಸದ ಹಾಗೆನಿಗ್ರಹಿಸೋಣವು; **ದಮಃ** ಎಂದರೆ **ಅನ್ತರಿನ್ದ್ರಿಯ ನಿಯಮನಂ**-ಒಳಗಿರುವ ಇಂದ್ರಿಯವಾದ ಮನಸ್ಸು ಐಹಿಕ ಸುಖಾನುಭವರೂಪ ವ್ಯಾಪಾರಗಳಲ್ಲಿ ಪ್ರವರ್ತಿಸದ ಹಾಗೆ ನಿಗ್ರಹಿಸೋಣವು; **ತಪಃ** ಎಂದರೆ **ಭೋಗನಿಯಮನರೂಪಃ**—ಸುಖಾನುಭವವನ್ನು ತಿರಸ್ಕರಿಸುವ ರೂಪವಾದ, **ಶಾಸ್ತ್ರಸಿದ್ಧಃ ಕಾಯಕ್ಲೇಶಃ**-ಶಾಸ್ತ್ರದಲ್ಲಿ ವಿಹಿತವಾದ ಏಕಾದಶೀ ಉಪವಾಸ ಮೊದಲಾದ ದೇಹದಂಡನೆಯೂ; ಚಂಡಾಟವು ತಪಸ್ಸಲ್ಲವು. **ಶೌಚಂ** ಎಂದರೆ **ಶಾಸ್ತ್ರೀಯಕರ್ಮಯೋಗ್ಯತಾ**-ಶಾಸ್ತ್ರದಲ್ಲಿ ವಿಧಿಸಿರುವ ಕರ್ಮಾನುಷ್ಠಾನಕ್ಕೆ ಪಾರಿಶುದ್ಧ್ಯರೂಪವಾದ ಅರ್ಹತೆಯನ್ನು ಹೊಂದೋಣವು, ಬಾಹ್ಯಸ್ನಾನ, ಮಂತ್ರಸ್ನಾನ, ಸಂಧ್ಯಾವಂದನಾದಿಗಳಿಂದ ಶಾಸ್ತ್ರೀಯ ಕರ್ಮಾನುಷ್ಠಾನಕ್ಕೆ ಯೋಗ್ಯತೆಯನ್ನು ಸಂಪಾದಿಸೋಣವು; **ಕ್ಷಾನ್ತಿಃ** ಎಂದರೆ, **ಪರೈಃ ಪೀಡ್ಯಮಾನಸ್ಯಾಪ್ಯವಿಕೃತಚಿತ್ತತಾ**-ಇತರರುಗಳಿಂದ ತೊಂದರೆಗಳನ್ನು ಹೊಂದಿದರೂ ಸ್ವಲ್ಪವೂ ವಿಕಾರವನ್ನು ಹೊಂದದ ಮನಸ್ಸಿನ ಸ್ವಭಾವವುಳ್ಳೋಣವು, ಅವರುಗಳು ಏನೋ ಮಾಡಿಬಿಟ್ಟರು ಎಂದು ಹೇಳಿ, ಅವರುಗಳ ವಿಷಯದಲ್ಲಿ ಕ್ರೋಧ ವಾಕ್ಪಾರುಷ್ಯವೇ ಮೊದಲಾದವುಗಳನ್ನು ಮಾಡದೆ ಸಹಿಸಿಕೊಳ್ಳೋಣವೆಂಬ ಭಾವವು; **ಆರ್ಜವಂ** ಎಂದರೆ **ಪರೇಷು ಮನೋನುರೂಪಂ ಬಾಹ್ಯಚೇಷ್ಟಾಪ್ರಕಾಶನಂ**-ಇತರರ ವಿಷಯದಲ್ಲಿ ತನ್ನ ಮನಸ್ಸಿಗೆ ಅನುಗುಣವಾಗಿ ಬಾಹ್ಯ ಕರ್ಮ ಮೂಲಕ ಪ್ರವೃತ್ತಿಯುಳ್ಳೋಣವು, ಎಂದರೆ ಮನಸ್ಸಿನಲ್ಲಿ ಒಂದು, ಕಾರ್ಯತಃ ಒಂದು, ಹೀಗೆ ಬೇರೆಯಾಗಿ ಕಾಪಟ್ಯವಿಲ್ಲದೇ ಇರೋಣವು; ಮನಸ್ಸು ಪ್ರೇರಿಸಿದ ಹಾಗೆಯೇ ಬಾಯಲ್ಲೂ ಹೇಳುತ್ತಾ ಕರ್ಮಮೂಲಕವಾಗಿಯೂ ಮಾಡೋಣವು; ಇಂತಹ ನಿಷ್ಕಾಪಟ್ಯ ಪ್ರವೃತ್ತಿಯು ಆರ್ಜವವೆನಿಸುತ್ತದೆ. **ಜ್ಞಾನಂ** ಎಂದರೆ, **ಪರಾವರ ತತ್ತ್ವಯಾಥಾತ್ಮ್ಯ ಜ್ಞಾನಂ**-ಪರತತ್ತ್ವವು ಪರಮಾತ್ಮನು, ಅವರ ತತ್ತ್ವವು-ಜೀವಾತ್ಮನು, ಹೀಗೆ ಪರಮಾತ್ಮ ಜೀವಾತ್ಮರುಗಳ ಸ್ವರೂಪ ಸ್ವಭಾವಗಳ ಯಥಾರ್ಥ ಜ್ಞಾನವು, **ವಿಜ್ಞಾನಂ** ಎಂದರೆ **ರತತ್ತ್ವಗತಾಸಾಧಾರಣ ವಿಶೇಷ ವಿಷಯಂ ಜ್ಞಾನಂ**-ಪರಮಾತ್ಮನನ್ನು ಹೊಂದಿರುವ ಆತನಿಗೆ ಮಾತ್ರವೇ ಅಸಾಧಾರಣವಾಗಿರುವ ವಿಶೇಷಗಳನ್ನುಳ್ಳ ಜ್ಞಾನವು ಅವು ಯಾವುವು ಎಂದರೆ ಆತನೇ ಜಗತ್ತಿಗೆ ಕಾರಣನು, ವಿಶ್ವಶರೀರಕನು, ವಿಶ್ವನಿಯನ್ತಾ, ಇತ್ಯಾದಿ ವಿಶೇಷ ಜ್ಞಾನವು; **ಆಸ್ತಿಕ್ಯಂ**, ಎಂದರೆ **ವೈದಿಕಾರ್ಥಸ್ಯ ಕೃತ್ಸ್ನಸ್ಯ**-ಸಮಸ್ತಗಳಾದ ವೇದ ವೇದಾನ್ತಗಳಲ್ಲಿ ಹೇಳಿರುವ ಅಭಿಪ್ರಾಯಗಳ **ಸತ್ಯತಾ** ಸತ್ಯವೆಂಬ, **ಪ್ರಕೃಷ್ಟಃ ನಿಶ್ಚಯಃ**-ಅತಿಶಯವಾದ ನಿಷ್ಕರ್ಷೆಯು, **ಅಸ್ತಿ ಮತಿ ರಸ್ಯ** ಎಂಬ ವ್ಯುತ್ಪತ್ತಿಯಿಂದ ಈತನಿಗೆ ಸರಿಯಾದ ಯಥಾರ್ಥವಾದ ಶಾಸ್ತ್ರಜ್ಞಾನವಿರುವದು ಆಸ್ತಿಕ್ಯವೆನಿಸುತ್ತದೆ ಪ್ರತ್ಯಕ್ಷದಲ್ಲಿ ಸರಿಯಾದ ಜ್ಞಾನವಿರುವದು ಹೆಚ್ಚಲ್ಲವು. ಶಾಸ್ತ್ರೈಕಗಮ್ಯವಾದುದಲ್ಲಿ ಯಥಾರ್ಥ ಜ್ಞಾನವು ಇಲ್ಲಿ ಹೇಳಲ್ಪಟ್ಟಿತು. ಆ ಯಥಾರ್ಥವಾದ ಜೀವಾತ್ಮ ಪರಮಾತ್ಮ ಜ್ಞಾನಗಳು ಆವಶ್ಯಕವಾದುದರಿಂದ ಶ್ರೀಯತಿವರ್ಯರು

**ವಾಸುದೇವಃ, ಪರಬ್ರಹ್ಮ ಶಬ್ದಾಭಿಧೇಯೋ, ನಿರಸ್ತನಿಖಿಲ ದೋಷಗಂಧಃ, ಸ್ವಾಭಾವಿಕಾ ನವಧಿಕಾತಿಶಯ ಜ್ಞಾನಶಕ್ತ್ಯಾದ್ಯ ಸಂಖ್ಯೇಯ ಕಲ್ಯಾಣ ಗುಣ ಗಣೋ, ನಿಖಿಲವೇದ ವೇದಾಂತ ವೇದ್ಯಃ, ಸ ಏವ ನಿಖಿಲ ಜಗದೇಕ ಕಾರಣಂ, ನಿಖಿಲ ಜಗದಾಧಾರಭೂತಃ, ನಿಖಿಲಸ್ಯ ಸ ಏವ ಪ್ರವರ್ತಯಿತಾ; ತದಾರಾಧನ**

---

ಅದನ್ನು ಹೇಳಿ ತನ್ಮೂಲಕ ಅಯಥಾರ್ಥ ಜ್ಞಾನ ನಿರಾಸಕ್ಕಾಗಿ ವಿಸ್ತರವಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಕುದೃಷ್ಟಿಗಳ ಅಪಾರ್ಥವನ್ನು ನಿರಾಕರಿಸುವದಕ್ಕಾಗಿ ವೈದಿಕಾರ್ಥ ಕೃತ್ಸ್ನಸ್ಯ ಎಂಬ ಭಾಷ್ಯವು. ವೇದಗಳ ಯಥಾರ್ಥ ಜ್ಞಾನದಿಂದ ತತ್ತ್ವ ನಿರ್ದೇಶವು ವಿಜ್ಞಾನ ಶಬ್ದದಲ್ಲಿನ ಉಪಸರ್ಗದಿಂದ ಬೋಧಿಸಲ್ಪಟ್ಟಿದುದನ್ನು ಅವತಾರಿಕೆಯೇ ಮೊದಲಾದ ಸ್ಥಳಗಳಲ್ಲಿ ಹೇಳಿದ್ದರೂ ಇನ್ನೊಂದು ಸಲ ಇಲ್ಲಿ ಮುಂದೆ ಜ್ಞಾಪಕಕೊಡುತ್ತಾರೆ. ತಮ್ಮ ಸಿದ್ಧಾಂತದ ಮುಖ್ಯ ಪ್ರಕ್ರಿಯೆಯು ಸಂಗ್ರಹವಾಗಿ ಹೇಳಲ್ಪಡುತ್ತದೆ. **ಕೃತ್ಸ್ನನಿಶ್ಚಯಃ** ಎಂದು ಹೇಳಿದುದನ್ನೇ ಉಪಪಾದಿಸಿ ಹೇಳುತ್ತಾರೆ—**ಕೇನಾಪಿ ಹೇತುನಾ**-ಯಾವ ಕಾರಣದಿಂದಲಾಗಲಿ, **ಚಾಲಯಿತುಂ ಅಶಕ್ಯ ಇತ್ಯರ್ಥಃ**- ಆ ನಿಷ್ಕರ್ಷ ಜ್ಞಾನವನ್ನು ಕದಲಿಸಲು ಸಾಧ್ಯವಿಲ್ಲವೆಂಬರ್ಥವು; ಆಸ್ತಿಕ್ಯವು ಏನೇನನ್ನು ಗ್ರಹಿಸುತ್ತದೆ? ಯಾವ ಜ್ಞಾನಗಳಿದ್ದರೆ ಆಸ್ತಿಕ್ಯವೆಂದು ಹೇಳಬಹುದು ಎಂದರೆ ವಿಸ್ತರಿಸಿ ಹೇಳುತ್ತಾರೆ—ವೇದಗಳಲ್ಲಿ ಹೇಳಿರುವ ಜ್ಞಾನವೇ ಎಂದು ಹೇಳಿಕೊಂಡು ಅಪಾರ್ಥವನ್ನು ಅವುಗಳಿಗೆ ಕಲ್ಪಿಸಿ, ಅದೇ ಆಸ್ತಿಕ್ಯವೆಂದು ಕೆಲವರು ಅಭಿಪ್ರಾಯಪಡಬಹುದು; ಅಂತಹ ಅಪಾರ್ಥಗಳನ್ನು ನಿರಾಕರಿಸಿ ಸಮಂಜ ಸಾರ್ಥವನ್ನು ಹೇಳಿ, ಹೀಗೆ ತಿಳಿಯುವದೇ ಆಸ್ತಿಕ್ಯವು ಎಂದು ಮುಂದೆ ತಿಳಿಸುತ್ತಾರೆ. **ಭಗವಾನ್**-ಭಗವಂತನು. **ಪುರುಷೋತ್ತಮಃ**-ಇತರ ಆತ್ಮರುಗಳಿಗಿಂತ ವಿಲಕ್ಷಣನಾಗಿ ಶ್ರೇಷ್ಠನಾದವನು. **"ನತತ್ಸಮಶ್ಚಾಭ್ಯಧಿಕಶ್ಚದೃಶ್ಯತೇ"** (ಶ್ವೇ. ೪) ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಆತನಿಗೆ ಸಮರೂ ಇಲ್ಲವು ಅಧಿಕರಾದವರೂ ಇಲ್ಲವು, ಎಂದು ಹೇಳಲ್ಪಟ್ಟಿರುವದರಿಂದ, ಆತ್ಮವು ವಿಶ್ವದಲ್ಲೆಲ್ಲಾ ಇರುವದು ಒಂದೇ ಎಂದು ಹೇಳುವದು ಸಮಂಜಸವಲ್ಲವೆಂದು ಹೇಳಿದಂತಾಯಿತು; **ನಿರಸ್ತ ನಿಖಿಲದೋಷಗಂಧಃ**-ಸಮಸ್ತ ಹೇಯಗುಣಗಳ ಸಂಬಂಧವಿಲ್ಲದವನು, ಇದರಿಂದ ಅವಿದ್ಯಾಗೃಹೀತತ್ವವನ್ನು ಪರಮಾತ್ಮನಿಗೆ ಹೇಳುವದು ಶಾಸ್ತ್ರಸಮ್ಮತವಲ್ಲವೆಂಬ ಅಭಿಪ್ರಾಯವನ್ನು ಸೂಚಿಸುವದಕ್ಕಾಗಿ ಹಾಗೆ ಪ್ರಯೋಗವು **ಸ್ವಾಭಾವಿಕಾನವಧಿಕಾತಿಶಯ ಜ್ಞಾನಶಕ್ತಿಯೇ** ಮೊದಲಾದ-ಇವುಗಳ ಅರ್ಥಕ್ಕೆ **೪ ನೆಯ ಪುಟನೋಡಿ**, **ಅಸಂಖ್ಯೇಯ ಕಲ್ಯಾಣ ಗುಣಗಣಃ**-ಲೆಖ್ಖ ಮಾಡಲು ಸಾಧ್ಯವಿಲ್ಲದಷ್ಟು ಕಲ್ಯಾಣಗುಣಗಳ ಸಮೂಹವನ್ನುಳ್ಳವನು, ಇದರಿಂದ ನಿರ್ಗುಣನು ಪರಬ್ರಹ್ಮವು ಎಂಬ ವಾದವು ಶಾಸ್ತ್ರಾನುಮತಿಯಿಲ್ಲದೆಂಬುದು ಸೂಚಿತವು, ಇಂತಹ ಪರಬ್ರಹ್ಮನು ಮೇಲೆ ಹೇಳಿದ ಹಾಗೆ ಸವಿಶೇಷನಾದುದರಿಂದಲೇ **ನಿಖಿಲವೇದ ವೇದಾಂತವೇದ್ಯಃ**-ಸಮಸ್ತ ವೇದಗಳಿಂದಲೂ ಉಪನಿಷತ್ತುಗಳಿಂದಲೂ ತಿಳಿಯಲು ಸಾಧ್ಯನು. ಇತರರು ಹೇಳುವ ಹಾಗೆ ಪರಬ್ರಹ್ಮವು ನಿರ್ವಿಶೇಷವೆಂದರೆ, ವೇದವೇದಾಂತಗಳು ಆತನನ್ನು ಬೋಧಿಸಲಾರವು, ಸ್ವರೂಪಶೋಧಕ ವಾಕ್ಯಗಳೇ ಶಾಸ್ತ್ರಗಳಲ್ಲಿ ಇರಲಾರವು; ಶಾಸ್ತ್ರವು ಪರಬ್ರಹ್ಮವನ್ನು ಬೋಧಿಸಿದರೆ ಆತನು ಸವಿಶೇಷಣನೇ ಆಗಿರಬೇಕೆಂಬುದನ್ನು ತಿಳಿಸುವದಕ್ಕಾಗಿ **ನಿಖಿಲವೇದಾಂತವೇದ್ಯಃ** ಎಂಬ ಪ್ರಯೋಗವು, **ಸ ಏವ**-ಅಂತಹ ಪರಮಾತ್ಮನೇ, **ನಿಖಿಲ ಜಗದೇಕಕಾರಣಂ**-ಸಮಸ್ತ ಜಗತ್ತಿಗೂ ಮುಖ್ಯನಾದ ಉಪಾದಾನ ನಿಮಿತ್ತಾದಿ ಕಾರಣನು; ಉಪಾದಾನ ಕಾರಣನಲ್ಲವೆಂಬ ಎಂಬ ಹೇಳಿಕೆಯು **"ಯಥೋರ್ಣನಾಭಿಸ್ಸೃಜತೇ ಗೃಹ್ಣತೇಚ"** (ಮುಂ. ೧ ೧.) ಎಂಬ **ಶ್ರುತಿವಾಕ್ಯದ** ಸಾಮಂಜಸ್ಯಕ್ಕೆ ಅನುಕೂಲವಿಲ್ಲವು, **ನಿಖಿಲ ಜಗದಾಧಾರಭೂತಃ**-**ಸಮಸ್ತ** ಜಗತ್ತಿಗೂ

**ಭೂತಂ ಚವೈದಿಕಂ ಕೃತ್ಸ್ನಂ ಕರ್ಮಭಿಸ್ತೈ ರಾರಾಧಿತೋ ಧರ್ಮಾರ್ಥ ಕಾಮ ಮೋಕ್ಷಾಖ್ಯಂ ಫಲಂ ಪ್ರಯಚ್ಛತೀತ್ಯ ಸ್ಯಾರ್ಥಸ್ಯ ಸತ್ಯತಾ ನಿಶ್ಚಯ ಆಸ್ತಿಕ್ಯಮ್; (೧) "ವೇದೈಶ್ಚ ಸರ್ವೈರಹ ಮೇವ ವೇದ್ಯಃ" (೨) "ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ" (೩) "ಮಯಿಸರ್ವಮಿದಂ ಪ್ರೋತಮ್"**

---

ಆಧಾರಭೂತನು ನಾರಾಯಣನೆಂದು ಹೇಳಲ್ಪಟ್ಟಿತು, ಇದರಿಂದ ಸಮಸ್ತ ಜಗತ್ತೂ ಈತನಿಗೆ ಶರೀರವಾಗಿ, ಈತನು ಅದಕ್ಕೆ ಆತ್ಮವಾಗಿರುವದರಿಂದ ಜಗತ್ತೆಲ್ಲಾ ಈತನಿಗೆ ಶೇಷಭೂತವಾಗಿ ನಿಯಾಮ್ಯವಿಭೂತಿ ಎಂದು ಹೇಳಲ್ಪಟ್ಟಿತು ಆದುದರಿಂದಲೇ **ನಿಖಿಲಸ್ಯ**-ಸಮಸ್ತ ಜಗತ್ತಿಗೂ **ಸಏವ**-ಆ ಪರಮಾತ್ಮನೇ, **ಪ್ರವರ್ತಯಿತಾ**-ಪ್ರವೃತ್ತಿಯನ್ನುಂಟುಮಾಡುವನು ಎಂದರೆ ನಿಯಾಮಕನು; ಇದರಿಂದ ವಿಕಾರಯುಕ್ತವಾಗಿದ್ದರೂ ಲೀಲಾ ವಿಭೂತಿಯೆಲ್ಲಾ ಭಗವಂತನಿಗೆ ಶರೀರವಾಗಿ, ಆಧೇಯವಾಗಿ, ನಿಯಾಮ್ಯವಾಗಿರುವದರಿಂದ ಅವೆಲ್ಲಾ ಸತ್ಯವೇವಿನಾ ಮಿಥ್ಯೆಯಲ್ಲವೆಂಬ ಭಾವವು ಹೇಳಲ್ಪಟ್ಟಿತು, ಮತ್ತು **ಕೃತ್ಸ್ನಂ ವೈದಿಕಂಕರ್ಮ**-ಸಮಸ್ತ ವೇದಗಳಲ್ಲಿ ವಿಹಿತವಾದ ಕರ್ಮವೆಲ್ಲಾ, **ತದಾರಾಧನಭೂತಂ**-ಪರಮಾತ್ಮನ ಆರಾಧನಾರೂಪವಾದುದು, **ತೈಸ್ತೈಃ**-ಸ್ವವರ್ಣ ಶ್ರಮೋಚಿತ ಕರ್ಮಗಳಿಂದ **ಆರಾಧಿತಃ**-ಆರಾಧಿಸಲ್ಪಟ್ಟ ಪರಮಪುರುಷನು, **ಧರ್ಮಾರ್ಥ ಕಾಮ ಮೋಕ್ಷ**ವೆಂದು ಹೇಳಿಸಿಕೊಳ್ಳುವ, **ಫಲಂ**-ಚತುರ್ವಿಧ ಪುರುಷಾರ್ಥವನ್ನು, **ಪ್ರಯಚ್ಛತಿ**-ಕೊಡುವನು, ಇದರಿಂದ ವಾಕ್ಯವಾಕ್ಯವಿಸ ಅಭೇದವನ್ನು ಹೇಳುವುದು ಸಮಂಜಸವಾಗುವದಿಲ್ಲವೆಂಬ ಭಾವವು ಸೂಚಿತವು **ಅಸ್ಯ ಅರ್ಥಸ್ಯ**-ಈಗ ತಾವು ಉಪಪಾದಿಸಿದ ಅರ್ಥದ **ಸತ್ಯತಾ ನಿಶ್ಚಯಃ**-ಸತ್ಯವಾದುದೆಂಬ ನಿಶ್ಚಯವೇ, **ಆಸ್ತಿಕ್ಯವು**-ಅಂದರೆ ತಾವು ಹೇಳಿದುದೇ ಸತ್ಯವು, ಇತರರು ಮಾಡಿರುವ ಅರ್ಥವಲ್ಲವೆಂದು ಹೇಳಿದರಲ್ಲಾ ಅದು ಹೇಗೆ? ಎಂದು ಯಾರಾದರೂ ಆಕ್ಷೇಪಿಸಬಹುದೆಂದು ಯೋಚಿಸಿ, ಈ ಮುಂದಿನ ಪ್ರಮಾಣ ಒಳಗಳಿಂದ ಈಗ ತಾವು ಪ್ರತಿಪಾದಿಸಿದ ಅರ್ಥವೇ ಸಮಂಜಸವಾದುದೆಂದು ಅವುಗಳನ್ನು ಉದಾಹರಿಸುತ್ತಾರೆ—ಆ ಪ್ರಮಾಣಗಳಿಂದ ತಾವು ಹೇಳಿರುವ ಅರ್ಥಗಳೇ ಸುಸ್ಪಷ್ಟವೆಂಬ ಅಭಿಪ್ರಾಯವು ವ್ಯಕ್ತವು, ಉಪನಿಷದರ್ಥಗಳೇ ಈ ಗೀತಾ ಶಾಸ್ತ್ರದಲ್ಲಿ ಉಪಪಾದಿಸಲ್ಪಟ್ಟಿರುವುವು, ಆದುದರಿಂದ ಗೀತಾ ಪ್ರಮಾಣಗಳನ್ನೇ ಉದಾಹರಿಸುತ್ತಾರೆ.

(೧) **"ವೇದೈಶ್ಚ ಸರ್ವೈರಹಮೇವ ವೇದ್ಯಃ"**-ಸಮಸ್ತ ವೇದವೇದಾಂತಗಳಿಂದಲೂ ತಿಳಿಯಲ್ಪಡತಕ್ಕವನೇ ನಾನು; ವೇದೋಕ್ತ ಕರ್ಮಗಳಲ್ಲೆಲ್ಲಾ ಸೋಮ, ಅಗ್ನಿ, ಇಂದ್ರಾದಿ ದೇವತೆಗಳಿಗೆ ಆತ್ಮವಾಗಿ ಹೇಳಲ್ಪಟ್ಟಿರುವವನು ನಾನೇ, ಸರ್ವಸಾಮಾನಾಧಿಕರಣ್ಯ ರೂಪದಲ್ಲಿ ಹೇಳಲ್ಪಟ್ಟಿರುವನೇ ನಾನು; ಅಥವಾ ಸಕಲ ವೇದ ವೇದಾಂತಗಳಲ್ಲೂ ಹೇಳಲ್ಪಟ್ಟ ಬ್ರಹ್ಮವಿದ್ಯೆಗಳಿಂದ ಉಪಾಸನ ಮೂಲಕ ಸಾಕ್ಷಾತ್ಕರಿಸಲ್ಪಡುವನೇ ನಾನು ಎಂದೂ ಅರ್ಥ ಹೇಳಬಹುದು. ಈ ಅರ್ಥಕ್ಕೆ ಭಾಷ್ಯದಲ್ಲಿ **"ನಿಖಿಲ ವೇದ ವೇದಾಂತ ವೇದ್ಯಃ"** ಎಂಬುದಕ್ಕೆ ಪ್ರಮಾಣವು; ಇದರಿಂದ ವೇದ್ಯನಾಗಬೇಕಾದರೆ ಸವಿಶೇಷನೇ ವಿನಾ ನಿರ್ವಿಶೇಷನಲ್ಲವು ಎಂದು ಹೇಳಿದಂತಾಯಿತು

(೨) **ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ**-ಇದರರ್ಥಕ್ಕೆ ಗೀ. ೧೦-೮ನೆಯ ಶ್ಲೋಕವನ್ನು ನೋಡಿ; ಇಲ್ಲಿ ಭಾಷ್ಯದ **ನಿಖಿಲ ಜಗದೇಕ ಕಾರಣಂ** ಎಂಬುದಕ್ಕೂ ಮತ್ತು **ನಿಖಿಲಸ್ಯ ಸ ಏವ ಪ್ರವರ್ತಯಿತಾ**, ಎಂಬುದಕ್ಕೂ ಪ್ರಮಾಣವು; **ಅಹಂ ಸರ್ವಸ್ಯ ಪ್ರಭವಃ** ಎಂಬುದರಿಂದ ಸರ್ವಕಾರಣನೂ, ಉಪಾದಾನ ನಿಮಿತ್ತ ಕಾರಣನೂ ತಾನೇ ಎಂದು ಹೇಳಿದಂತಾಯಿತು; ಮಿಥ್ಯಾವಾದಕ್ಕೂ ಅನುಕೂಲವಲ್ಲವು.

---

(೧) ಗೀ. ೧೫-೧೫. (೨) ಗೀ. ೧೦-೮. (೩) ಗೀ. ೭-೭.

(೪) "ಭೋಕ್ತಾರಂ ಯಜ್ಞತಪಸಾಂ....ಜ್ಞಾತ್ವಾಮಾಂ ಶಾನ್ತಿಮೃಚ್ಛತಿ" (೫) "ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ" (೬) "ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂತತಮ್ । ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ" (೭) "ಯೋ ಮಾ ಮಜ ಮನಾದಿಂಚ ವೇತ್ತಿ ಲೋಕಮಹೇಶ್ವರಮ್" ಇತಿ ಹ್ಯುಚ್ಯತೇ? ತದೇತ ದ್ಬ್ರಾಹ್ಮಣಸ್ಯ ಸ್ವಭಾವಜಂ ಕರ್ಮ. ॥ ೪೨ ॥

---

(೩) ಮಯಿ ಸರ್ವಮಿದಂ ಪ್ರೋತಂ-ಗೀತಾ ೭-೭ ನೆಯ ಶ್ಲೋಕವನ್ನು ನೋಡಿ ಇದು ಭಾಷ್ಯದ "ನಿಖಿಲ ಜಗದಾಧಾರ ಭೂತಂ" ಎಂಬುದಕ್ಕೆ ಪ್ರಮಾಣವು; ಮಿಥ್ಯೆಯಾದುದಕ್ಕೆ ಆಧಾರನು ಎಂದು ಹೇಳುವದು ಸಮಂಜಸವಾಗುವದಿಲ್ಲವು.

(೪) ಭೋಕ್ತಾರಂ ಯಜ್ಞತಪಸಾಂ....ಜ್ಞಾತ್ವಾಮಾಂ ಶಾನ್ತಿ ಮೃಚ್ಛತಿ ಇದರರ್ಥವು ಹಿಂದೆಯೇ ಉಪಪಾದಿತವು; ಇದು ಭಾಷ್ಯದ "ತದಾರಾಧನ ಭೂತಂ ಚ ಕೃತ್ಸ್ನಂ ವೈದಿಕಂ ಕರ್ಮ" ಎಂಬುದಕ್ಕೂ ತೈಸ್ತೈರಾರಾಧಿತೋ ಧರ್ಮಾರ್ಥ ಕಾಮಮೋಕ್ಷಾಖ್ಯಂ ಫಲಂ ಪ್ರಯಚ್ಛತಿ ಎಂಬುದಕ್ಕೂ ಪ್ರಮಾಣವು ಇಲ್ಲಿ ಜ್ಞಾತ್ವಾಮಾಂ ಶಾನ್ತಿ ಮೃಚ್ಛತಿ-ತಾನು ಸರ್ವಸುಹೃತ್ತಾದುದರಿಂದ ತನ್ನನ್ನು ಕರ್ಮಗಳಿಂದ ಆರಾಧಿಸಿ ಆಶ್ರಯಿಸುವನು ಸರ್ವವಿಧ ಪುರುಷಾರ್ಥಗಳನ್ನು ಹೊಂದುವದರ ಮೂಲಕ ಸರ್ವವಿಧ ಸುಖವನ್ನೂ ಹೊಂದುವನೆಂಬರ್ಥವಾದುದರಿಂದ ಧರ್ಮಾರ್ಥ ಮೋಕ್ಷಾಖ್ಯಂ ಫಲಂ ಪ್ರಯಚ್ಛತಿ ಎಂಬುದಕ್ಕೆ ಪ್ರಮಾಣವಾಗಿ ಭಾವಿಸಬಹುದು.

(೫) "ಮತ್ತಃ ಪರತರಂನಾಸ್ತಿ ಕಿಂಚಿದಸ್ತಿ ಧನಂಜಯ" ಇದು ನಿಸ್ಸಮಾಭ್ಯಧಿಕತ್ವವನ್ನು ಬೋಧಿಸುವ ಶ್ರುತ್ಯರ್ಥವು; ಭಾಷ್ಯದ ಪುರುಷೋತ್ತಮ ಶಬ್ದಕ್ಕೆ ಪ್ರಮಾಣವು ಇರುವದು ಒಂದೇ ಆತ್ಮಾ ಎಂಬ ಅಭಿಪ್ರಾಯಕ್ಕೆ ವಿರೋಧವು.

(೬) "ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ । ಸ್ವಕರ ಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ" ಇಲ್ಲಿ ಪೂರ್ವಾರ್ಧವು-ನಿಖಿಲಸ್ಯ ಸ ಏವ ಪ್ರವರ್ತಯಿತಾ ಎಂಬುದಕ್ಕೆ ಪ್ರಮಾಣವು; ಉತ್ತರಾರ್ಧವು, ತದಾರಾಧನ ಭೂತಂ ಚ ಕೃತ್ಸ್ನಂ ವೈದಿಕಂ ಕರ್ಮ, ತೈಸ್ತೈರಾರಾಧಿತೋ ಧರ್ಮಾರ್ಥ ಕಾಮಮೋಕ್ಷಾಖ್ಯಂ ಫಲಂ ಪ್ರಯಚ್ಛತಿ ಎಂಬುದಕ್ಕೆ ಪ್ರಮಾಣವು ಇದರಿಂದ ಸರ್ವೇಶ್ವರನಲ್ಲಿ ಆರಾಧಿಸುವವನ ಇಷ್ಟಾರ್ಥವನ್ನು ಸಲ್ಲಿಸುವ ಕಲ್ಯಾಣಗುಣಗಳುಂಟೆಂಬುದು ವ್ಯಕ್ತವು. ದಯಾ, ಸೌಲಭ್ಯ, ಸೌಶೀಲ್ಯ, ಸರ್ವಜ್ಞತ್ವ, ಸತ್ಯಸಙ್ಕಲ್ಪತ್ವ ಪೂರ್ಣ ಕಾಮತ್ವಾದಿ ಗುಣಗಳಿದ್ದರಲ್ಲವೇ ಭಕ್ತಾಭೀಷ್ಟಗಳನ್ನು ಸಲ್ಲಿಸಬಹುದು. ಇದು ಕಲ್ಯಾಣ ಗುಣಾಕರತ್ವಕ್ಕೂ ಪ್ರಮಾಣವು.

(೭) "ಯೋ ಮಾ ಮಜ ಮನಾದಿಂಚವೇತ್ತಿ ಲೋಕ ಮಹೇಶ್ವರಮ್" ಇದೂ ಸರ್ವಶೇಷಿತ್ವ ನಿಯಮನತ್ವಾದಿಗಳಿಗೆ ಪ್ರಮಾಣವು. ಹೀಗೆ ಗೀತಾ ಪ್ರಮಾಣಗಳಿಂದಲೇ ಸರಿಯಾದ ಶಾಸ್ತ್ರಾರ್ಥವನ್ನು ಬೋಧಿಸಿ, ಹೀಗೆ ತಿಳಿಯುವುದೇ ಆಸ್ತಿಕ್ಯವೆಂದು ಉಪದೇಶಿಸಿದರು. ಇಂತಹ ಆಸ್ತಿಕ್ಯರೂಪ ಜ್ಞಾನಸಕ್ಕಿಂತ ಭಿನ್ನವಾಗಿ ಶಾಸ್ತ್ರಪ್ರಮಾಣವನ್ನು ಒಪ್ಪದವರು ವೇದ ಬಾಹ್ಯರು. ವೇದವಚನಗಳನ್ನು ಒಪ್ಪಿಕೊಂಡು ಈ ಅಭಿಪ್ರಾಯಗಳಿಗೆ ವ್ಯತ್ಯಸ್ತವಾಗಿ ಅರ್ಥ ಮಾಡುವವರು ಕುದೃಷ್ಟಿಗಳೆಂದು ಹೇಳಲ್ಪಡುವರೆಂದು ಸೂಚಿತವು. ಇಂತಹ ಪರಸ್ಪರ ವಿರುದ್ಧ

---

(೪) ಗೀ. ೫-೨೯. (೫) ಗೀ. ೭-೭ (೬) ೧೮-೪೬ (೭) ಗೀ. ೧೦-೩.

ಗಳಾದ ಅಪಾರ್ಥಗಳನ್ನು ಎಲ್ಲಿ ಹೇಳುವರೋ ಎಂದು "**ಬಿಭೇತ್ಯಲ್ಪ ಶ್ರುತಾದ್ವೇದೋ ಮಾಮಯಂ ಪ್ರತರಿಷ್ಯತಿ**" ವೇದವು ನಡಗುತ್ತದೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಮಹರ್ಷಿಗಳು ತುಂಬಾ ಶ್ರಮಪಟ್ಟು ವೇದವಾಕ್ಯಗಳಿಗೆ ಸರ್ವಸಮಂಜಸಾರ್ಥಗಳನ್ನು ಪ್ರದರ್ಶಿಸುವದಕ್ಕಾಗಿ "**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್**" ಎಂಬಲ್ಲಿ ಹೇಳಿರುವಹಾಗೆ ಇತಿಹಾಸಾದಿಗಳಲ್ಲಿ ಉಪಬ್ರಹ್ಮಣ ಮಾಡಿರುತ್ತಾರೆ, ಅದರ ಸಾರತಮಾರ್ಥಗಳನ್ನೆಲ್ಲಾ ಈ ಗೀತೆಯಲ್ಲೇ ಸಂಗ್ರಹಿಸಬಹುದೆಂದೂ ಈ ಇಷ್ಟು ಮಾತ್ರಪ್ರಮಾಣಗಳೇ ಸರಿಯಾದ ಜ್ಞಾನ ವಿಜ್ಞಾನಗಳನ್ನು ಕೊಡುತ್ತವೆ ಎಂಬ ಭಾವನೆಯಿಂದ ಶ್ರೀ ಯತಿವರ್ಯರು ಉದಾಹರಿಸುತ್ತಾರೆ. ಇದಕ್ಕೆ ವ್ಯತ್ಯಸ್ತ ಭಾವವು ಆಸ್ತಿಕ್ಯವಾಗುವದಿಲ್ಲವೆಂಬುದು ಸೂಚಿತವು. **ಇತಿಹಿ ಉಚ್ಯತೇ** - ಹೀಗಲ್ಲವೇ ಶ್ರೀ ಕೃಷ್ಣಭಗವಾನರವರಿಂದಲೇ ಈ ಗೀತೋಪನಿಷತ್ತಿನಲ್ಲೇ ಹೇಳಿರುವದು ? **ತದೇತತ್** - ಹಾಗೆ ದಮವೆಂದಾರಂಭಿಸಿ ಆಸ್ತಿಕ್ಯದವರೆಗೂ ಹೇಳಿರುವದೆಲ್ಲಾ, **ಬ್ರಾಹ್ಮಣಸ್ಯ ಸ್ವಭಾವಜಂಕರ್ಮ** - ಸುಕೃತಿಯಾದ ಬ್ರಾಹ್ಮಣನಿಂದುಂಟಾಗುವ ಕರ್ಮವು; ಅಥವಾ ಬ್ರಾಹ್ಮಣನಿಗೆ ಸುಕೃತ ಪರಿಪಾಕದಿಂದುಂಟಾಗುವ ಕರ್ಮವು. ಹೀಗೆ ಹೇಳಿದುದರಿಂದ ಸುಕೃತ ಪರಿಪಾಕವು ಎರಡನ್ನು ಉಂಟುಮಾಡಬೇಕು; ಬ್ರಾಹ್ಮಣಯೋನಿಯಲ್ಲಿ ಜನ್ಮಕ್ಕೂ ಕಾರಣವಾಗಬೇಕು ; ಸತ್ವವಿವೃದ್ಧಿಯನ್ನುಂಟುಮಾಡಿ ಇಂತಹ ಗುಣಕರ್ಮಗಳಿಗೂ ಹೇತುವಾಗಬೇಕು; ಕೆಲವರ ಸುಕೃತವು ಬ್ರಾಹ್ಮಣಯೋನಿಯಲ್ಲಿ ಜನ್ಮಕ್ಕೆ ಮಾತ್ರವೇ ಹೇತುವಾಗಿ ಈ ಗುಣಕರ್ಮಗಳಿಲ್ಲದಿರಬಹುದು; ಇನ್ನೂ ಕೆಲವರಿಗೆ ಬ್ರಾಹ್ಮಣಯೋನಿಯಲ್ಲಿ ಹುಟ್ಟುವ ಸುಕೃತವಿಲ್ಲದೆ, ಇತರವರ್ಣದಲ್ಲಿ ಜನ್ಮವಿದ್ದರೂ ಸತ್ವವೃದ್ಧಿ ಇರಬಹುದು, ಆದುದರಿಂದ **ಬ್ರಾಹ್ಮಂ ಕರ್ಮ ಸ್ವಭಾವಜಂ** ಎಂದು ಹೇಳಿರುವದರ ಅಭಿಪ್ರಾಯವೇನೆಂದರೆ ಸಾಧಾರಣವಾಗಿ ಸುಕೃತ ಪರಿಪಾಕದಿಂದ ಬ್ರಾಹ್ಮಣಯೋನಿಯಲ್ಲಿ ಹುಟ್ಟಿದವರಲ್ಲಿ ಈ ಗುಣಕರ್ಮಗಳು ಇರುವದು ಹೆಚ್ಚು ಎಂಬಭಾವನೇ ವಿನಾ ಎಲ್ಲಾ ಬ್ರಾಹ್ಮಣರಲ್ಲೂ ಉಂಟೆಂದು ಇಲ್ಲಿ ಹೇಳಲ್ಪಡಲಿಲ್ಲವು.

**ಶಮೋದಮಸ್ತಪಶ್ಶೌಚಂ** ಇತ್ಯಾದಿಗಳೇನೋ **ಕರ್ಮಸ್ವಭಾವಜಂ** ಎಂಬಲ್ಲಿ ಸಹಜಕರ್ಮಗಳೆಂದೇನೋ ಒಪ್ಪಬಹುದು. ಆದರೆ **ಜ್ಞಾನಂ ವಿಜ್ಞಾನಂ** ಇವುಗಳು ಕರ್ಮ ಹೇಗೆಎಂದಾಕ್ಷೇಪಿಸಬಹುದು. ತಿಳಿಯುವದೂಕೂಡ ಮನೋ ಪ್ರವೃತ್ತಿದ್ವಾರಾ ಆದುರಿಂದಲಾಗಲಿ, ಅಥವಾ ಜ್ಞಾನವು ಮನಸ್ಸಿನ ಧರ್ಮವಾಗಿ ಪ್ರವೃತ್ತಿಗೆ ಹೇತುವಾಗುವದರಿಂದಾಗಲಿ,ಹಾಗೆ ಪ್ರಯೋಗವೆಂದು ಭಾವಿಸಬಹುದು. ಜ್ಞಾನವು ಯಾವುದೆಂಬುದನ್ನು ೧೩ನೆಯ ಅಧ್ಯಾಯದಲ್ಲಿ ೭ - ೧೧ ಶ್ಲೋಕಗಳಲ್ಲಿ ವಿಶದವಾಗಿ ತಿಳಿಸಿ, ಕೊನೆಯಲ್ಲಿ "ಏತಜ್ಜ್ಞಾನಮಿತಿಪ್ರೋಕ್ತಂ **ಅಜ್ಞಾನಂ ಯದತೋಽನ್ಯಥಾ** ಎಂದು ಉಪಸಂಹಾರಮಾಡಿರುತ್ತಾರೆ. ಹಾಗೆಯೇ ಶಮದಮಾದಿಗಳೂ ಪ್ರೋಕ್ತವು. ಹೀಗಿರುವಲ್ಲಿ ಪುನಃ ಇಲ್ಲಿ ಹೇಳೋಣವೇತಕ್ಕೆ ? ಎಂದರೆ ಕರ್ಮದಲ್ಲೂ ಇವುಗಳು ಸೇರಿದವೆಂದು ತೋರ್ಪಡಿಸುವದಕ್ಕಾಗಿಯೂ, ಭಗವಂತನ ನಿಯಮನಾನುಸಾರೇಣ ಸಾತ್ವಿಕ ಪೂರ್ವಕರ್ಮಫಲವಾಗಿ ಪುರುಷನು ಅನುಷ್ಠಿಸುವನೆಂದು ತೋರುವದಕ್ಕಾಗಿಯೂ, ಮತ್ತು ಈ ಅಧ್ಯಾಯವು ಹಿಂದೆ ಹೇಳಿದುವರ ಅನುವಾದವೆಂದು ತೋರಿಸುವದಕ್ಕಾಗಿಯೂ ಇಲ್ಲಿ ಉಪಾತ್ತವೆಂದು ಭಾವಿಸತಕ್ಕದ್ದು. ಆದುದರಿಂದ ಬ್ರಾಹ್ಮಂ ಕರ್ಮ ಈ ತೆರನಾದುದೆಂದು ಉಪದೇಶವು. ॥ ೪೨ ॥

**ಮೂಲಕ್ಕೆ ಅರ್ಥವು**— ಪೂರ್ವಕರ್ಮಾನುಗುಣವಾಗಿ ಸಾಧಾರಣವಾಗಿ ಕ್ಷತ್ರಿಯನಾಗಿ ಜನಿಸಿರುವವನಿಗೆ ಉಂಟಾಗುವ ಗುಣಕರ್ಮಗಳು ಯಾವುವು ಎಂಬುದನ್ನು ತಿಳಿಸುತ್ತಾರೆ— **ಶೌರ್ಯಂ** – ಯುದ್ಧದಲ್ಲಿ ನಿರ್ಭಯವಾಗಿ ನಿಲ್ಲುವ ಪರಾಕ್ರಮವು, **ತೇಜಃ** – ಯುದ್ಧದಲ್ಲಿ ಶತೃಗಳಿಂದ ಅಪಜಯವನ್ನು ಹೊಂದದೆ ಇರುವಿಕೆಯು, **ಧೃತಿಃ** - ಹಿಡಿದ ಕೆಲಸಕ್ಕೆ ವಿಘ್ನಗಳುಬಂದರೂ ಅದನ್ನು ನಿರ್ವಹಿಸಿ ಪೂರೈಸುವ ಸಾಮರ್ಥ್ಯವು. **ದಾಕ್ಷ್ಯಂ** - ಶಾಸ್ತ್ರವಿಹಿತವಾದ ಎಲ್ಲಾ ಕೆಲಸಗಳನ್ನೂ

ಮೂ. ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥ ೪೩ ॥

ಭಾ. ಶೌರ್ಯಂ - ಯುದ್ಧೇ ನಿರ್ಭಯ ಪ್ರವೇಶಸಾಮರ್ಥ್ಯಮ್, ತೇಜಃ - ಪರೈ ರನಭಿಭವನೀಯತಾ, ಧೃತಿಃ – ಆರಬ್ಧೇ ಕರ್ಮಣಿ ವಿಘ್ನೋಪನಿಪಾತೇಽಪಿ ತತ್ಸಮಾಪನ ಸಾಮರ್ಥ್ಯಮ್, ದಾಕ್ಷ್ಯಂ - ಸರ್ವಕ್ರಿಯಾ ನಿರ್ವೃತ್ತಿ ಸಾಮರ್ಥ್ಯಮ್, ಯುದ್ಧೇ ಚಾಪ್ಯ ಪಲಾಯನಮ್ - ಯುದ್ಧೇಚಾತ್ಮಮರಣ ನಿಶ್ಚಯೇಽಪ್ಯನಿವರ್ತನಮ್, ದಾನಂ- ಆತ್ಮೀಯಸ್ಯ ಧನಸ್ಯ ಪರಸ್ವತ್ವಾಪಾದನ ಪರ್ಯನ್ತಸ್ತ್ಯಾಗಃ, ಈಶ್ವರಭಾವಃ-

---

ಮತ್ತು ರಾಜ್ಯಾಡಳಿತಕ್ಕೆ ಸಂಬಂಧಪಟ್ಟವನ್ನೆಲ್ಲಾ ನಿರ್ವಹಿಸುವ ದಕ್ಷತೆಯು,ಶಕ್ತಿಯು,ಯುದ್ಧೇಚ-ಮತ್ತು ಯುದ್ಧದಲ್ಲಿ ಅಥವಾ ಯುದ್ಧದಲ್ಲಾದರೋ ಅಪಲಾಯನಂ – ಶತ್ರುಭಯದಿಂದ ಓಡಿಹೋಗದಿರೋಣವು, ದಾನಂ - ಸತ್ಪಾತ್ರದಲ್ಲಿ ಧನ ಮೊದಲಾದವನ್ನು ತ್ಯಾಗ ಮಾಡೋಣವು, ಈಶ್ವರಭಾವಶ್ಚ - ತನ್ನ ವಶ್ಯವರ್ಗವನ್ನು ಚನ್ನಾಗಿ ನಿಯಮಿಸಿ ಅಧೀನದಲ್ಲಿಟ್ಟುಕೊಳ್ಳುವ ಶಕ್ತಿಯು, ಇವೆಲ್ಲಾ, ಕ್ಷಾತ್ರಂಕರ್ಮ ಸ್ವಭಾವಜಂ–ಕ್ಷತ್ರಿಯನಿಗೆ ಸಂಬಂಧಪಟ್ಟು ಆತನಿಗೆ ಕರ್ಮ ಮೂಲಕ ಪ್ರಾಪ್ತವಾದ ಸ್ವಾಭಾವಿಕವಾದ ಕರ್ಮವು. ಕ್ಷತ್ರಿಯನ ಇತಿಕರ್ತವ್ಯತೆಗಳು ಯಾವುವು ಎಂಬುದನ್ನೂ, ಆತನ ಜೀವನೋಪಾಯಗಳಾಗಿ ವಿಹಿತಕರ್ಮಗಳು ಯಾವುವು ಎಂಬುದನ್ನೂ ಇಲ್ಲಿ ಊಹಿಸತಕ್ಕದಾಗಿರುತ್ತದೆ.

ಭಾಷ್ಯಾರ್ಥವು—ಶೌರ್ಯವೆಂದರೆ ಯುದ್ಧೇ ನಿರ್ಭಯ ಪ್ರವೇಶ ಸಾಮರ್ಥ್ಯಮ್ - ಯುದ್ಧದಲ್ಲಿ ಸೈನ್ಯದ ಎದುರಿಗೆ ನಿರ್ಭಯವಾಗಿ ಪ್ರವೇಶಿಸುವ ಸಾಮರ್ಥ್ಯವು ; "ಶೂರಂ ಭೀರುಂ" ಎಂದಿರುವುದರಿಂದ, ಯುದ್ಧದಲ್ಲಿ ಓಡಿಹೋಗುವವನು ಭೀರುವು, ಹಾಗಲ್ಲದವನು ಶೂರನು, ಆದುದರಿಂದ ಶೌರ್ಯವೆಂದರೆ ನಿರ್ಭಯವಾಗಿ ಸೈನ್ಯವನ್ನು ಪ್ರವೇಶಿಸಿ ಯುದ್ಧಮಾಡುವ ಸಾಮರ್ಥ್ಯವೆಂದು ಭಾವವು. ಯುದ್ಧಕ್ಕೆ ನೋಡುವ ಧೈರ್ಯದಿಂದ ನುಗ್ಗಿ ಶತ್ರುವಿನ ಎದುರಿಗೆ ನಿಲ್ಲಬಹುದು, ಆದರೆ ಅವನ ಪರಾಭವವು ಕೂಡದಾದುದರಿಂದ, ತೇಜಃ ಪರೈರನಭಿಭವನೀಯತಾ – ಶತ್ರುಗಳಿಂದ ಪರಾಭವವನ್ನು ಹೊಂದದಿರುವಿಕೆಯು ; ಧೃತಿಃ – ಎಂದರೆ ಆರಬ್ಧೇ ಕರ್ಮಣಿ- ಪ್ರಾರಂಭಿಸಿದ ಕಾರ್ಯದಲ್ಲಿ, ವಿಘ್ನೋಪನಿಪಾತೇಽಪಿ – ವಿಘ್ನಗಳು ಬಂದು ಮೇಲೆ ಬಿದ್ದರೂ, ತತ್ಸಮಾಪನ ಸಾಮರ್ಥ್ಯಮ್ ಹಿಡಿದ ಕೆಲಸವನ್ನು ಮುಗಿಸುವ ಸಾಮರ್ಥ್ಯವು, ದಾಕ್ಷ್ಯಂ – ಎಂದರೆ ಸರ್ವಕ್ರಿಯಾ ನಿರ್ವೃತ್ತಿಸಾಮರ್ಥ್ಯಮ್ – ಎಲ್ಲಾ ಕ್ರಿಯೆಗಳನ್ನು ನಿರ್ವಹಿಸುವ ಸಾಮರ್ಥ್ಯವು; ಹಾಗಾದರೆ ಧೃತಿಗೂ ದಾಕ್ಷ್ಯಕ್ಕೂ ಏನು ವ್ಯತ್ಯಾಸವೆಂದು ಕೇಳಬಹುದು; ಧೃತಿಯಲ್ಲಿ ವಿಘ್ನಗಳು ಬಂದಗಿದ್ದರೂ, ಅವುಗಳನ್ನು ನಿವಾರಣೆಮಾಡಿ ಪ್ರಾರಂಭಿಸಿದುದನ್ನು ಮುಗಿಸೋಣವು, ಸಮಸ್ತ ಕ್ರಿಯೆಗಳನ್ನು ನಿರ್ವಹಿಸುವ ಶಕ್ತಿಯು ದಾಕ್ಷ್ಯವೆನಿಸುತ್ತದೆಂಬ ಭಾವವು. ಯುದ್ಧೇ ಚಾಪ್ಯಪಲಾಯನಮ್ – ಎಂದರೆ ಯುದ್ಧೇಚಾತ್ಮ ಮರಣ ನಿಶ್ಚಯೇಽಪಿ - ಯುದ್ಧದಲ್ಲಿ ಶತ್ರುವಿನಿಂದ ತನಗೆ ಮರಣವು ಸಿದ್ಧವೆಂದು ತಿಳಿದಿದ್ದರೂ ಕೂಡ, ಅನಿವರ್ತನಂ-ಹಿಂತಿರುಗಿ ಓಡಿಹೋಗದಿರೋಣವು, ದಾನಂ - ಎಂದರೆ ಆತ್ಮೀಯಸ್ಯ ಧನಸ್ಯ – ಧರ್ಮದಿಂದ ಗಳಿಸಿದ ತನ್ನ ಧನದ, ಇಲ್ಲಿ ಧನಶಬ್ದವು ದಾನಮಾಡಲು ವಿಹಿತವಾದವುಗಳಿಗೆಲ್ಲಾ ಉಪಲಕ್ಷಣವು, ಗೃಹಕ್ಷೇತ್ರ ಗೋ ಮೊದಲಾದುವು, ಪರಸ್ವತ್ವಾಪಾದನ ಪರ್ಯನ್ತಸ್ತ್ಯಾಗಃ:- ಮುಂದಕ್ಕೆ ತನಗೆ ಏನೂ ಸಂಬಂಧವಿಲ್ಲದಹಾಗೆ ಇತರರಸ್ವತ್ತಾಗಿ ಮಾಡುವವರೆಗೂ ತ್ಯಾಗವು ಎಂದರೆ ಕೊಟ್ಟುಬಿಡೋಣವು, ಈಶ್ವರಭಾವವೆಂದರೆ ಸ್ವವ್ಯತಿರಿಕ್ತ ಸಕಲಜನ ನಿಯಮನ ಸಾಮರ್ಥ್ಯಮ್ - ತನಗಿಂತಲೂ ಬೇರೆಯಾಗಿ ತನಗೆ ಅಧೀನರಾಗಿರುವ ಸಮಸ್ತಜನವನ್ನೂ ನಿಯಮಿಸುವ ಸಾಮರ್ಥ್ಯವು; ದುಷ್ಟ

**ಸ್ವವ್ಯತಿರಿಕ್ತ ಸಕಲ ಜನ ನಿಯಮನ ಸಾಮರ್ಥ್ಯಂ ವಾ, ಏತತ್ ಕ್ಷತ್ರಿಯಸ್ಯ ಸ್ವಭಾವಜಂ ಕರ್ಮ ॥ ೪೩ ॥**

**ಮೂ. ಕೃಷಿ ಗೋರಕ್ಷ್ಯ ವಾಣಿಜ್ಯಂ ವೈಶ್ಯಂ ಕರ್ಮ ಸ್ವಭಾವಜಮ್ ।**

**ಭಾ. ಕೃಷಿಃ - ಸಸ್ಯೋತ್ಪಾದನಂ ಕರ್ಷಣಂ ಗೋರಕ್ಷ್ಯಂ – ಪಶುಪಾಲನ ಮಿತ್ಯರ್ಥಃ, ವಾಣಿಜ್ಯಂ - ಧನಸಂಚಯ ಹೇತುಭೂತಂ ಕ್ರಯವಿಕ್ರಯಾತ್ಮಕಂ ಕರ್ಮ, ಏತದ್ವೈಶ್ಯಸ್ಯ ಸ್ವಭಾವಜಂ ಕರ್ಮ ॥ ೪೪ ॥**

---

ನಿಗ್ರಹ ಶಿಷ್ಟ ಪರಿಪಾಲನಾರೂಪನಿಯಮನವು ಇಲ್ಲಿ ವಿವಕ್ಷಿತವು; ಇಲ್ಲಿ ಸಕಲಜನ ಶಬ್ದದಿಂದ ತನಗೆ ಅಧೀನರಾಗಿರುವ ಸಕಲಜನವು ಹೇಳಲ್ಪಟ್ಟಿತು, **ಏತತ್** - ಇವೆಲ್ಲವೂ, **ಕ್ಷತ್ರಿಯಸ್ಯ ಸ್ವಭಾವಜಂ ಕರ್ಮ** - ತನ್ನ ಪ್ರಾಚೀನ ಕರ್ಮದಿಂದ ಕ್ಷತ್ರಿಯಯೋನಿಯಲ್ಲಿ ಜನಿಸಿದವನ ಕರ್ಮವು; ಮೂಲದಲ್ಲಿರುವ **ಕ್ಷಾತ್ರಂಕರ್ಮ** ಎಂಬುದಕ್ಕೆ ಕ್ಷತ್ರಿಯಸ್ಯ ಕರ್ಮವೆಂದು ಅರ್ಥಮಾಡಿರುತ್ತಾರೆ. ಈ ಮೇಲೆ ಹೇಳಿರುವ ಗುಣಕರ್ಮಗಳೆಲ್ಲಾ ರಜೋಗುಣಮೂಲವಾದುವಾದರೂ, ಇವು ಈತನಿಗೆ ವಿಹಿತ ವೃತ್ತಿಗಳಾದುದರಿಂದ ಇವುಗಳನ್ನು ಆತನು ಕರ್ಮ ಕರ್ತೃತ್ವಫಲ ಸಂಗಗಳನ್ನು ತೊರೆದು ಭಗವತ್ಪ್ರೀತಿಗಾಗಿ ಧರ್ಮ ಯುದ್ಧವನ್ನು ಮಾಡಿದರೆ ಅವು ಆತನಿಗೆ ಪರಮ ಶ್ರೇಯಸ್ಸಿಗೆ ಹೇತುವಾಗುವದರಲ್ಲಿ ಸಂದೇಹವಿಲ್ಲವು ಎಂಬ ಭಾವವು. ಇದೂ ಹಿಂದೆಯೇ ಹೇಳಲ್ಪಟ್ಟಿದೆ.

**ಮೂಲಕ್ಕೆ ಅರ್ಥವು**—ವೈಶ್ಯನಾಗಿ ಜನಿಸಿದವನಿಗೆ ಪೂರ್ವಕರ್ಮ ವಾಸನಾನುಸಾರ ಪ್ರಾಪ್ತವಾದ ಕರ್ಮಗಳು ಯಾವುವೆಂದರೆ; **ಕೃಷಿ ಗೋರಕ್ಷ್ಯ ವಾಣಿಜ್ಯಂ, ಕೃಷಿ** - ವ್ಯವಸಾಯ ಮಾಡಿ ಕಾಲದಲ್ಲಿ ಬಿತ್ತಿ ಫಸಲನ್ನು ಪಡೆಯುವದು, **ಗೋರಕ್ಷ್ಯ** - ಗೋವುಗಳನ್ನು ಸಂರಕ್ಷಿಸಿ ಅದರ ಹಾಲು ಮುಂತಾದ್ದನ್ನು ವಿಕ್ರಯಿಸಿ ಜೀವನ ಮಾಡುವದು, **ವಾಣಿಜ್ಯಂ** - ವಸ್ತುಗಳ ಕ್ರಯ ವಿಕ್ರಯಗಳಿಂದ ಜೀವನಮಾಡುವದು ಇವು, **ವೈಶ್ಯಂ ಕರ್ಮ ಸ್ವಭಾವಜಂ** - ವೈಶ್ಯನಿಗೆ ಕರ್ಮಗಳ ಮೂಲಕ ಸ್ವಭಾವವಾಗಿ ಪ್ರಾಪ್ತವಾದವುಗಳು. ಇದು ಬಡ್ಡಿ, ಪಶು ... ಧಾನ್ಯಗಳ ವಿಕ್ರಯ ಮೊದಲಾದುವುಗಳಿಗೂ ಉಪಲಕ್ಷಣವು.

**ಭಾಷ್ಯಾರ್ಥವು—ಕೃಷಿಃ** ಎಂದರೆ **ಸಸ್ಯೋತ್ಪಾದನಂ** ಕರ್ಷಣಂ-ಭೂಮಿಯನ್ನು ಉಳುಮೆಮಾಡಿ ಸಸಿಯನ್ನು ನೆಟ್ಟೋ ಬೆಳೆಯನ್ನುಂಟುಮಾಡಿ ಅದನ್ನು ಫಲಿಸುವಂತೆ ಮಾಡುವದೂ, ಬೆಳೆಸುವದೂ ಎಂಬರ್ಥವು, **ಗೋರಕ್ಷ್ಯಂ** ಎಂದರೆ **ಪಶುಪಾಲನ ಮಿತ್ಯರ್ಥಃ** - ಗೋವುಗಳನ್ನು ಪಾಲಿಸುವದು ಎನ್ನೋಣವು; **ಪಶು** ಶಬ್ದವು ಎಮ್ಮೆಗಳ ರಕ್ಷಣೆಗೂ ಉಪಲಕ್ಷಣವು; ಗೋವುಗಳ ಪಾಲನೆ ಎಂಬುದರಿಂದ ಈತನ ಜೀವನೋಪಾಯವು ಹೇಳಲ್ಪಟ್ಟಿರುವದರಿಂದ. ಹಾಲು, ಬೆಣ್ಣೆ, ತುಪ್ಪಗಳನ್ನು ಮಾರಿ ಜೀವನವೂ ಹೇಳಲ್ಪಟ್ಟಿತು. ಹಾಗೆಯೇ ಎತ್ತುಗಳನ್ನು ಬಾಡಿಗೆಗೆ ಕೊಡುವದನ್ನು ಮಾಡುವದೂ, ಅದರಲ್ಲೇ ಸೇರಿತು, **ವಾಣಿಜ್ಯಂ**—ವಣಿಕ್ಕಿನ ಕರ್ಮವು ಎಂದರೆ ಧನಸಂಚಯದ **ಹೇತುಭೂತಂ ಕ್ರಯವಿಕ್ರಯಾತ್ಮಕಂ ಕರ್ಮ** - ಧನಸಂಪಾದನೆಗೆ ಕಾರಣಭೂತವಾದ ವಸ್ತು ಮೊದಲಾದವುಗಳನ್ನು ಕೊಳ್ಳೋಣವೂ ಮಾರೋಣವೂ, **ಏತತ್** - ಇದು, **ವೈಶ್ಯಸ್ಯ ಸ್ವಭಾವಜಂ ಕರ್ಮ** - ವೈಶ್ಯ ಯೋನಿಯಲ್ಲಿ ಹುಟ್ಟಿದವನಿಗೆ ಪ್ರಾರಬ್ಧ ಮೂಲಕ ಪ್ರಾಪ್ತವಾದ ಕರ್ಮವು. ಪಂಚಮಹಾ ಯಜ್ಞಾದಿ ನಿತ್ಯನೈಮಿತ್ತಿಕ ಕರ್ಮಗಳು ಇಲ್ಲಿ ಈ ತ್ರಿವರ್ಣದವರಿಗೂ ಏಕೆ ವಿಧಿಸಲಿಲ್ಲವೆಂದು ಕೇಳಬಹುದು. ಇವು ವೃತ್ತಿಧರ್ಮಗಳಿಗೆ ಸೇರದುದಿಲ್ಲವಾಗಿ ಹೇಳಲಿಲ್ಲವು. ಇವು ಆಜ್ಞಾ ಕೈಂಕರ್ಯಗಳಾಗಿ ಆವಶ್ಯಕವಾಗಿ ಮಾಡತಕ್ಕವು. ಆದುದರಿಂದ ಇವುಗಳನ್ನು ಮುಂದೆ **ಸ್ವೇಸ್ವೇಕರ್ಮಣ್ಯಭಿರತಃ** ಎಂಬಲ್ಲಿ ಹೇಳಿರುವದಾದುದರಿಂದಲೂ ಇಲ್ಲಿ ಹೇಳಲಿಲ್ಲವು. ಹಿಂದೆಯೂ **"ಯಜ್ಞೋದಾನತಪಶ್ಚೈವ ಪಾವನಾನಿ ಮನೀಷಿಣಾಂ" ... ಕಾರ್ಯಮೇವತತ್"** ಎಂಬಲ್ಲಿಯೂ ಹೇಳಿರುತ್ತಾರೆ.

**ಮೂ. ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥ ೪೪ ॥**

**ಭಾ. ಪೂರ್ವವರ್ಣತ್ರಯ ಪರಿಚರ್ಯಾರೂಪಂ ಶೂದ್ರಸ್ಯ ಸ್ವಭಾವಜಂ ಕರ್ಮ, ತದೇತಚ್ಚತುರ್ಣಾಂ ವರ್ಣಾನಾಂ ವೃತ್ತಿಭಿಸ್ಸಹಕರ್ತವ್ಯಾನಾಂ ಶಾಸ್ತ್ರವಿಹಿತಾನಾಂ ಯಜ್ಞಾದಿಕರ್ಮಣಾಂ ಪ್ರದರ್ಶನಾರ್ಥಮುಕ್ತಮ್. ಯಜ್ಞಾದಯೋಹಿ ತ್ರಯಾಣಾಂ ವರ್ಣಾ**

ಮೂಲಕ್ಕೆ ಅರ್ಥವು—ಶೂದ್ರ ಯೋನಿಯಲ್ಲಿ ಹುಟ್ಟಿದವನಿಗೆ ಆತನ ಕರ್ಮವಾಸನಾಮೂಲಕವಾದ ಜೀವನೋಪಾಯ ಕರ್ಮವು ಯಾವುದೆಂದು ಹೇಳುತ್ತಾರೆ.—**ಪರಿಚರ್ಯಾತ್ಮಕಂ** - ಈ ಮೇಲೆ ಹೇಳಿದ ಬ್ರಾಹ್ಮಣಕ್ಷತ್ರಿಯ ವೈಶ್ಯರಿಗೆ ಆವಶ್ಯಕವಾದ ಕರ್ಮಗಳಲ್ಲಿ ಸಹಾಯಮಾಡುವ ದೇಹಶ್ರಮ ರೂಪ ಕರ್ಮವು, ಅವರುಗಳ ಶುಶ್ರೂಷಾರೂಪವಾದುದು, ಮತ್ತು ಸಮಸ್ತ ವಿಧವಾದ ಕೂಲಿಕೆಲಸವು ಇದರಲ್ಲಿ ಸೇರಿತು. **ಶೂದ್ರಸ್ಯಾಪಿ** - ಶೂದ್ರನಿಗೆ ಕೂಡ, **ಸ್ವಭಾವಜಂ ಕರ್ಮ** - ಜನ್ಮಸ್ವಭಾವದಿಂದ ಪ್ರಾಪ್ತವಾದ ಕರ್ಮವು. ಹೀಗೆ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರುಗಳಿಗೆ ಅವರವರುಗಳಲ್ಲಿ ಪ್ರಾಚೀನಕರ್ಮಗಳಮೂಲಕ ಪ್ರಾಪ್ತಗಳಾದ ಸಾತ್ವಿಕ ರಾಜಸ ತಾಮಸಾಧಿಕ್ಯ ಗುಣಗಳಿಗನುಸಾರವಾಗಿ ಅವರುಗಳ ಜೀವನೋಪಾಯ ಕರ್ಮಗಳು ಹೇಳಲ್ಪಟ್ಟವು. ಹೀಗೆ ವಿಹಿತ ಜೀವನೋಪಾಯ ಧರ್ಮಗಳನ್ನು ಅವರುಗಳು ನಡೆಸುತ್ತಾ ಬಂದರೆ ಲೋಕದಲ್ಲಿ ಈಗ ಇರುವಹಾಗೆ ಪರಸ್ಪರಾಸೂಯೆಗಳು ಎಂದಿಗೂ ಇರುತ್ತಿರಲಿಲ್ಲವು. ಪ್ರತಿಯೊಬ್ಬ ವರ್ಣದವನು, ಇನ್ನು ಮೂರು ವರ್ಣದವರಿಗೂ ತಂಬಾ ಬೇಕಾದವನಾಗುವದರಿಂದ ಪರಸ್ಪರ ಪ್ರೀತಿಯು ಹಿಂದೆ ಇತ್ತು. ಈಗ ವರ್ಣಾಶ್ರಮ ಧರ್ಮಗಳೂ ಅವರಿಗೆ ವಿಹಿತ ವೃತ್ತಿಗಳೂ ಎಲ್ಲಾ ತೊರೆದುಹೋಗಿರುವದರಿಂದ, ಪರಸ್ಪರ ದ್ವೇಷಾಸೂಯೆಗಳಿಗೆ ಕಾರಣವಾಗುತ್ತಿದೆ. ಎಲ್ಲಾ ಶಾಸ್ತ್ರಗಳಲ್ಲೂ ಈ ವಿಧವಾದ ವೃತ್ತಿಭೇದಗಳೇ ಉಪಪಾದಿತಗಳಾಗಿವೆ:- ಶ್ರೀಮದ್ರಾಮಾಯಣದಲ್ಲಿ ಅವರುಗಳಿಗಿರುವ ಪರಸ್ಪರಾನುರಾಗವು ಉಪಪಾದಿತವು:- "ಕ್ಷತ್ರಂ ಬ್ರಹ್ಮ ಮುಖಂಚಾಸೀತ್ **ವೈಶ್ಯಾಃಕ್ಷತ್ರ** ಮನುವ್ರತಾಃ । **ಶೂದ್ರಾಸ್ಸ್ವಧರ್ಮ** ನಿರತಾ ಸ್ತ್ರೀನ್ ವರ್ಣಾನುಪಚಾರಿಣಃ ( ಬಾಲ ೬,೧೯ ) ಹಾಗೆಯೇ ಮಹಾ ಭಾರತದಲ್ಲಿ ಶಾನ್ತಿಪರ್ವ ೧೮೭ನೆಯ ಅಧ್ಯಾಯದಲ್ಲೂ ವರ್ಣಧರ್ಮಗಳು ಉಪಪಾದಿತವು. ಇಲ್ಲಿ ಮೂಲದಲ್ಲಿ **ಪರಿಚರ್ಯಾತ್ಮಕಂ** ಎಂದು ಇಷ್ಟೇ ಇರುವಾಗ, ಮೂರುವರ್ಣದವರಿಗೂ ಪರಿಚರ್ಯವೆಂಬ ಭಾಷ್ಯವು ಹೇಗೆ ? ಎಂದರೆ ಅದು ಅರ್ಥವಾಗಿಯೇ ಶೂದ್ರನು ಶೂದ್ರೇತರರಿಗೆ ಮಾಡುವ ಪರಿಚರ್ಯೆ ಎಂಬುದು ತೋರಿಬರುತ್ತದೆಂದು ಭಾವಿಸಬಹುದು, ಅಥವಾ ಇಲ್ಲಿ ಸೂಕ್ಷ್ಮವಾಗಿ ಹೇಳಿದ್ದರೂ, ವರ್ಣಾಶ್ರಮಧರ್ಮಗಳನ್ನು ವಿಸ್ತರಿಸಿ ಹೇಳುವ ಸ್ಮೃತ್ಯಾದಿಗಳಿಂದಲೂ ಇದು ವ್ಯಕ್ತವೆಂದಾಗಲಿ ಭಾವಿಸಬಹುದು. ॥ ೪೪ ॥

**ಭಾಷ್ಯಾರ್ಥವು**—ಶೂದ್ರನ **ಸ್ವಭಾವಜಂ ಕರ್ಮ** ಯಾವುದೆಂದರೆ ಹೇಳುತ್ತಾರೆ :. **ಪೂರ್ವವರ್ಣತ್ರಯ ಪರಿಚರ್ಯಾರೂಪಂ** - ಮೊದಲಿನ ಮೂರು ವರ್ಣದವರಾದ **ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ** ಶುಶ್ರೂಷಾದಿಗಳಾಗಿ ಅವರುಗಳಿಂದ ಹೇಳಲ್ಪಟ್ಟ ಕರ್ಮಗಳಾಗಿ **ಪರಿಚರ್ಯಾರೂಪವಾದುದು, ಶೂದ್ರಸ್ಯ ಸ್ವಭಾವಜಂ ಕರ್ಮ** - ಶೂದ್ರಯೋನಿಯಲ್ಲಿ ಹುಟ್ಟಿದವನಿಗೆ **ಪ್ರಾಪ್ತವಾದ** ಕರ್ಮವು ಈ ದೇಹಯಾತ್ರೆಗಾಗಿ ಒದಗಿದ ಪರಿಚರ್ಯಕ್ರಮವನ್ನು ಶೂದ್ರನು ಪರಮ ಭಾಗವತೋತ್ತಮನನ್ನು ಆಶ್ರಯಿಸಿ ಪರಿಚರ್ಯೆಯನ್ನು ಶ್ರದ್ಧಾಭಕ್ತಿಗಳಿಂದ ನಡೆಸಿದರೆ, ಆ ಭಾಗವತರು ಪ್ರೀತರಾಗಿ ಅವರು ಮಾಡುವ ಶರಣಾಗತಿಯಿಂದಲೇ ಮೋಕ್ಷವು. ಹಾಗೆಯೇ ಸ್ತ್ರೀಯು ಪತಿಯು ಜೀವಂತನಾಗಿದ್ದರೆ, ಪತಿಶುಶ್ರೂಷೆಯನ್ನು ನಿತ್ಯನೈಮಿತ್ತಿಕ ಕರ್ಮವೆಂದು ಭಾವಿಸಿ ನಡೆಸುತ್ತಾ ಬಂದರೆ ಪತಿಯೊಡನೆ ಆಕೆಗೂ ಮೋಕ್ಷವು. (ರಾ. ಅಯೋಧ್ಯಾ೨೪-೨೫) ಶ್ಲೋಕಗಳನ್ನು ಪರಾಂಬರಿಸಿ. ಪತಿಯು ಇಲ್ಲದ ಪಕ್ಷದಲ್ಲಿ ಪರಮಭಾಗವತ ಶುಶ್ರೂಷೆಯೇ ಮೋಕ್ಷ

**ನಾಮ್ ಸಾಧಾರಣಾಃ, ಶಮಾದಯೋಽಪಿ ತ್ರಯಾಣಾಂ ವರ್ಣಾನಾಂ ಮುಮುಕ್ಷೂಣಾಮ್ ಸಾಧಾರಣಾಃ, ಬ್ರಾಹ್ಮಣಸ್ಯತು ಸತ್ತ್ವೋದ್ರೇಕಸ್ಯ ಸ್ವಾಭಾವಿಕತ್ವೇನ ಶಮದಮಾದಯು ಸ್ಸುಖೋಪಾದಾನಾ ಇತಿ ಕೃತ್ವಾ ತಸ್ಯ ಶಮಾದಯಃ ಸ್ವಭಾವಜಂ ಕರ್ಮೇತ್ಯುಕ್ತಮ್ ; ಕ್ಷತ್ರಿಯ ವೈಶ್ಯಯೋಸ್ತು ಸ್ವತೋ ರಜಸ್ತಮಃ ಪ್ರಧಾನತ್ವೇನ**

---

ದಾಯಕವು. ಹೀಗೆ ನಾಲ್ಕು ವರ್ಣದವರ ಸ್ವಭಾವದಿಂದುಂಟಾದ ಕರ್ಮವನ್ನು ಹೇಳಿದುದರಿಂದ ಗ್ರಹಿಸತಕ್ಕ ಕೆಲವು ವಿಷಯಗಳುಂಟೆಂದು ತಿಳಿಸುತ್ತಾರೆ. ಬ್ರಾಹ್ಮಣನಿಗೆ ಹೇಳಲ್ಪಟ್ಟ ಶಮದಮಾದಿ ವೃತ್ತಿಗಳು ಮೋಕ್ಷಾರ್ಥಿಗಳಾದವರೆಲ್ಲರಿಗೂ ಬೇಡವೋ ? ಹಾಗೆ ಎಲ್ಲರಿಗೂ ಬೇಕಾದ ಪಕ್ಷದಲ್ಲಿ ಬ್ರಾಹ್ಮಣನಿಗೆ ಮಾತ್ರ ಹೇಳಿ ಕ್ಷತ್ರಿಯ ವೈಶ್ಯಾದಿಗಳಿಗೆ ಹೇಳದಿರುವದು ಏಕೆ ? ಎಂದರೆ ವೈಶ್ಯ ಶೂದ್ರರ ದೇಹಯಾತ್ರೆಗೆ ಬೇಕಾದ ವೃತ್ತಿಯು ಹೇಳಲ್ಪಟ್ಟಿತು ; ಹಾಗಾದರೆ ಬ್ರಾಹ್ಮಣ ಕ್ಷತ್ರಿಯರ ಅಂತಹ ವೃತ್ತಿಗಳು ಯಾವುವು ? ಇತ್ಯಾದಿ ಪ್ರಶ್ನೆಗಳಿಗೆ ಸಮಾಧಾನವನ್ನು ಹೇಳುತ್ತಾರೆ.

**ತದೇತತ್** – ಆ ಎಲ್ಲಾ, **ಚತುರ್ಣಾಂ ವರ್ಣಾನಾಂ ವೃತ್ತಿಭಿಸ್ಸಹ**-ಮೇಲೆ ಹೇಳಲ್ಪಟ್ಟ ನಾಲ್ಕು ವರ್ಣದವರ ವೃತ್ತಿಗಳೊಂದಿಗೆ, **ಕರ್ತವ್ಯಾನಾಂ ಶಾಸ್ತ್ರವಿಹಿತಾನಾಂ** – ಅವಶ್ಯಕವಾಗಿ ಮಾಡಬೇಕಾಗಿ ಶಾಸ್ತ್ರದಲ್ಲಿ ಹೇಳಿರುವ, **ಯಜ್ಞಾದಿ ಕರ್ಮಣಾಂ** ಯಜ್ಞವೇ ಮೊದಲಾದ ಕರ್ಮಗಳನ್ನು ಕುರಿತು, **ಪ್ರದರ್ಶನಾರ್ಥಮ್** - ಉಪಲಕ್ಷಣವೆಂದು ಸೂಚಿಸುವದಕ್ಕಾಗಿ **ಉಕ್ತಂ** – ಹೇಳಲ್ಪಟ್ಟಿತು. ಹೀಗೆ ಊಹಿಸತಕ್ಕವು ಯಾವುವೆಂದರೆ ಸಕಾರಣವಾಗಿ ತಿಳಿಸುತ್ತಾರೆ. **ಯಜ್ಞಾದಯೋಹಿ** - ಯಜ್ಞವೇ ಮೊದಲಾದವುಗಳಾದರೋ, **ತ್ರಯಾಣಾಂ ವರ್ಣಾನಾ ಸಾಧಾರಣಾಃ**-ಮೂರು ವರ್ಣದವರಾದ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೂ ಸಮನಾದವು ; **ಶಮಾದಯೋಽಪಿ** - ಶಮದಮ, ಆದಿಪದದಿಂದ ತಪಸ್ಸು ಶೌಚಾದಿಗಳು ಹೇಳಲ್ಪಟ್ಟವು, ಇವೆಲ್ಲವೂ ಕೂಡ, **ತ್ರಯಾಣಾಂ ವರ್ಣಾನಾಂ ಮುಮುಕ್ಷೂಣಾಂ** - ಮೂರು ವರ್ಣದವರಾಗಿ ಮೋಕ್ಷಾರ್ಥಿಗಳಾಗಿರುವವರಿಗೂ, **ಸಾಧಾರಣಾಃ**-ಸಾಧಾರಣಗಳಾದ ಪ್ರವೃತ್ತಿಗಳು; ಆದರೆ ಹೀಗೆ ತ್ರಿವರ್ಣದವರಿಗೂ ಸಮಾನವಾಗಿದ್ದರೂ ಬ್ರಾಹ್ಮಣನನ್ನು ಮಾತ್ರ ಕುರಿತು ಹೇಳಿದುದು ಹೇಗೆ ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ. ಅಲ್ಲಿ ಶಮದಮಾದಿಗಳು ಬ್ರಾಹ್ಮಕರ್ಮವೆಂದು ಹೇಳುವಾಗ **ಸ್ವಭಾವಜಂ** ಎಂಬ ಪ್ರಯೋಗದಿಂದುಂಟಾಗುವ ಅರ್ಥವನ್ನು ವ್ಯಕ್ತಪಡಿಸುತ್ತಾರೆ. ಸತ್ತ್ವೋದ್ರೇಕವುಳ್ಳ ಬ್ರಾಹ್ಮಣನಿಗೀಗ ಸುಕರವಾದುದರಿಂದ **ಸ್ವಭಾವಜಂ** ಎಂದು ಹೇಳಲ್ಪಟ್ಟಿತೆಂದೂ, ಕ್ಷತ್ರಿಯ ವೈಶ್ಯರಲ್ಲಿ ರಜಸ್ತಮೋಗುಣಗಳ ಆಧಿಕ್ಯವಿರುವದರಿಂದ ಹೇಳಲ್ಪಡಲಿಲ್ಲವೆಂದೂ ತಿಳಿಸುತ್ತಾರೆ. **ಬ್ರಾಹ್ಮಣಸ್ಯತು** – ಬ್ರಾಹ್ಮಣನಿಗಾದರೋ, **ಸತ್ತ್ವೋದ್ರೇಕಸ್ಯ** - ಸತ್ವಗುಣಾಧಿಕ್ಯವಿರುವದರಿಂದ, **ಸ್ವಾಭಾವಿಕತ್ವೇನ** - ಸ್ವಾಭಾವಿಕವಾಗಿಯೇ **ಶಮದಮಾದಿಗಳು ಸುಖೋಪಾದಾನಾ ಇತಿ ಕೃತ್ವಾ** – ಸುಕರವಾಗಿ ಉಂಟಾಗುವುವೆಂದು ಭಾವಿಸಿ, **ತಸ್ಯ** – ಬ್ರಾಹ್ಮಣನಿಗೆ, **ಶಮಾದಯಃ** – ಶಮಾದಿಗಳು, ಸ್ವಭಾವಜಂ **ಕರ್ಮೇತ್ಯುಕ್ತಮ್** - ಸ್ವಭಾವದಿಂದುಂಟಾಗುವ ಕರ್ಮವೆಂದು ಹೇಳಲ್ಪಟ್ಟಿತು ; **ಕ್ಷತ್ರಿಯ ವೈಶ್ಯಯೋಸ್ತು** – ಕ್ಷತ್ರಿಯರು ವೈಶ್ಯರಿಗಾದರೋ, **ಸ್ವತಃ ರಜಸ್ತಮಃ ಪ್ರಧಾನತ್ವೇನ** - ಸಾಧಾರಣವಾಗಿ ರಜಸ್ತಮೋಗುಣಗಳು ಪ್ರಧಾನವಾಗಿ ಅವುಗಳ ಆಧಿಕ್ಯವಿರುವದರಿಂದ **ಶಮದಮಾದಿಗಳು, ದುಃಖೋಪಾದಾನಾ ಇತಿಕೃತ್ವಾ** - ತುಂಬಾ ಕಷ್ಟದಿಂದ, ಉಂಟಾಗುವುವೆಂದು ಭಾವಿಸಿ, **ನತತ್ಕರ್ಮೇತ್ಯುಕ್ತಮ್** - ಆ ಕ್ಷತ್ರಿಯ ವೈಶ್ಯರಿಗೆ ಸಹಜವಾದ ಕರ್ಮವೆಂದು ಹೇಳಲ್ಪಡಲಿಲ್ಲವು. **ಬ್ರಾಹ್ಮಣಸ್ಯ ತು ವೃತ್ತಿ** - ಬ್ರಾಹ್ಮಣನಿಗೆ ವೃತ್ತಿಯಾದರೋ,**ಯಾಜನಾಧ್ಯಾಪನ ಪ್ರತಿಗ್ರಹಾಃ**–ಯಜ್ಞಯಾಗಾದಿಗಳನ್ನು ಮಾಡಿಸುವದು,

**ಶಮದಮಾದಯೋ ದುಃಖೋಪಾದಾನಾ ಇತಿ ಕೃತ್ವಾ ನ ತತ್ಕರ್ಮೇತ್ಯುಕ್ತಮ್. ಬ್ರಾಹ್ಮಣಸ್ಯ ತು ವೃತ್ತಿರ್ಯಾಜನ ಯಾಜನಾಧ್ಯಾಪನ ಪ್ರತಿಗ್ರಹಾಃ ಕ್ಷತ್ರಿಯಸ್ಯ ಜನಪದ ಪರಿಪಾಲನಮ್. ; ವೈಶ್ಯಸ್ಯ ಕೃಷ್ಯಾದಯೋ ಯಥೋಕ್ತಾ ; ಶೂದ್ರಸ್ಯ ತು ಕರ್ತವ್ಯಂ ವೃತ್ತಿಶ್ಚ ಪೂರ್ವವರ್ಣತ್ರಯ ಪರಿಚರ್ಯೈವ ॥ ೪೪ ॥**

ವೇದಾಧ್ಯಯನ ಮಾಡಿಸುವದು, ದಾನ ಕೊಡಲು ಅರ್ಹನಾದವನು ಕೊಟ್ಟದುದನ್ನು ಪರಿಗ್ರಹಿಸುವದು, ಇವುಗಳು. **ಕ್ಷತ್ರಿಯಸ್ಯ** - ಕ್ಷತ್ರಿಯನ ವೃತ್ತಿಯಾದರೋ **ಜನಪದಪರಿಪಾಲನಮ್** ದೇಶದ ರಕ್ಷಣೆಯು ; **ವೈಶ್ಯಸ್ಯಚ** - ವೈಶ್ಯನ ವೃತ್ತಿಯಾದರೋ **ಕೃಷ್ಯಾದಯೋಯಥೋಕ್ತಾಃ** – ಮೇಲೆ ಹೇಳಿದ ಕೃಷಿ, ಗೋರಕ್ಷೆ, ವಾಣಿಜ್ಯ ಮೊದಲಾದವು, **ಶೂದ್ರಸ್ಯತು ಕರ್ತವ್ಯಂ** - ಶೂದ್ರನ ಕರ್ತವ್ಯ ವೃತ್ತಿಯಾದರೋ, **ಪೂರ್ವವರ್ಣತ್ರಯ ಪರಿಚರ್ಯೈವ** - ಮೇಲೆ ಹೇಳಿದ ಮೂರು ವರ್ಣದವರ ಪರಿಚರ್ಯವೇ. ಯಾಜ್ಞವಲ್ಕ್ಯ ಸ್ಮೃತಿಯಲ್ಲೂ ಶೂದ್ರನಿಗೆ ವೃತ್ತಿಯು **ದ್ವಿಜಶುಶ್ರೂಷಾ** ಎಂದೆ ಹೇಳಿರುತ್ತದೆ. " (೧) "**ಶೂದ್ರಸ್ಯ ದ್ವಿಜಶುಶ್ರೂಷಾ ತಯಾ ಜೀವನ್ವಣಿಗ್ಭವೇತ್ । ಶಿಲ್ಪೈರ್ವಾ ವಿವಿಧೈರ್ಜೀವೇದ್ ದ್ವಿಜಾತಿ ಹಿತಮಾಚರೇತ್**" ಹಾಗೆಯೇ ಮನುವೂ (೨) "**ವಿಪ್ರಸ್ಯೇವೈವ ಶೂದ್ರಸ್ಯ ವಿಶಿಷ್ಟಂ ಕರ್ಮಕೀರ್ತ್ಯತೇ**" ಎಂದು ವಿಧಿಸಿರುತ್ತಾರೆ. ಹೀಗೆ ಹೇಳಿರುವದರಿಂದ ಶೂದ್ರನಿಗೆ ಮೋಕ್ಷಸಾಧನವಾದ ಕರ್ತ್ತವ್ಯವೂ, ವೃತ್ತಿಯೂ ಎರಡೂ ಒಂದೇ ಎಂಬ ಅಭಿಪ್ರಾಯದಿಂದ ಭಾಷ್ಯದಲ್ಲಿ "**ಕರ್ತವ್ಯಂ ವೃತ್ತಿಶ್ಚ**"ಎಂದು ಹೇಳಲ್ಪಟ್ಟಿರುತ್ತದೆ. ಶೂದ್ರನು ತಮೋಗುಣಾಧಿಕ್ಯವುಳ್ಳವನಾದುದರಿಂದ ಇದಕ್ಕಿಂತ ಉತ್ತಮ ಕೆಲಸಕ್ಕೆ ಅನರ್ಹನೆಂದು ಹೇಳಲ್ಪಟ್ಟಿತು. ಆದರೆ ಸತ್ವವೃದ್ಧಿಯನ್ನು ಮಾಡಿಕೊಂಡರೆ ಉತ್ತಮಸ್ಥಿತಿಯನ್ನೇ ಹೊಂದುವನೆಂದು (೩) "**ನ ಶೂದ್ರಾ ಭಗವದ್ಭಕ್ತಾ ವಿಪ್ರಾ ಭಾಗವತಾಸ್ಸ್ಮೃತಾಃ**"ಎಂಬಲ್ಲಿ ಹೇಳಿರುತ್ತದೆ. ಹಾಗೆಯೇ ಭಗವದ್ಭಕ್ತನಲ್ಲದ ಉತ್ತಮವರ್ಣದವನನ್ನು "**ಸರ್ವವರ್ಣೇಷು ತೇ ಶೂದ್ರಾ ಯೇ ಹ್ಯಭಕ್ತಾ ಜನಾರ್ದನೇ**" ಶೂದ್ರರೆಂದು ಹೇಳಲ್ಪಟ್ಟಿರುತ್ತದೆ ಸತ್ವವೃದ್ಧಿಯನ್ನು ಮಾಡಿಕೊಂಡು ಪ್ರಸನ್ನನಾಗಿ ಭಾಗವತ ಬ್ರಾಹ್ಮಣಾದಿ ಸೇವೆಯಲ್ಲಿರುವವನನ್ನು ಬ್ರಾಹ್ಮಣನಿಗೆ ಸಮಾನವೆಂದು ಹೊಗಳಿರುವದರಿಂದ ಬ್ರಾಹ್ಮಣನೇ ಆದನೆಂದು ಭಾವಿಸಿ, ಸಹಪಙ್ಕ್ತಿ ಭೋಜನ ನಿಮಂತ್ರಣ ನಮಸ್ಕಾರ, ಹೆಣ್ಣು ಕೊಟ್ಟು ತರೋಣ ಇವುಗಳಿಗೆ ಅರ್ಹನಾದನೆಂದು ಭಾವಿಸತಕ್ಕದ್ದಲ್ಲವು. ಈ ನಾಲ್ಕು ವರ್ಣದ ಆಚಾರವೃತ್ತಿಗಳೆಲ್ಲಾ ಬೇರೆಬೇರೆಯಾಗಿ ದೇಹವಿರುವತನಕ ತಪ್ಪಿದ್ದಲ್ಲವಾಗಿ ಸದಾಚಾರ ಭ್ರಷ್ಟನಾಗಿ ಆತ್ಮನಾಶವನ್ನು ಮಾಡಿಕೊಳ್ಳಕೂಡದು. ಇಂತಹ ಚಾತುರ್ವರ್ಣ್ಯ ಧರ್ಮಗಳ ಸಂಸ್ಥಾಪನೆಗಾಗಿಯೇ ಈ ಲೀಲಾ ವಿಭೂತಿಯಲ್ಲಿ ಪರಮಾದರವುಳ್ಳ ಸರ್ವೇಶ್ವರನು ತನ್ನ ಅವತಾರ ಕಾಲದಲ್ಲಿ ತನ್ನ ಇತಿಕರ್ತ್ತವ್ಯತೆಯಾಗಿ ಭಾವಿಸಿ ನಡೆಸಿರುತ್ತಾನೆ. ಸರ್ವೇಶ್ವರನೇ ಧರ್ಮಗಳಿಗೆ ಯಜಮಾನನಾದುದರಿಂದ ಆತನು ತನ್ನಿಂದ ಪ್ರೋಕ್ತವಾದ ಧರ್ಮಗಳಿಗೆ ವಿರುದ್ಧವಾಗಿ ನಡೆಯಲು ಸ್ವಾತಂತ್ರ್ಯವುಳ್ಳವನೆಂದು ಹೇಳುವರು. ಈ ಅಭಿಪ್ರಾಯವು ತುಂಬಾ ಅನ್ಯಾಯವಾದುದು. ಯಾವನು ಶಾಸನವನ್ನು ನಿರ್ಮಿಸುವನೋ ಆತನೇ ತನ್ನ ಶಾಸನಗಳಿಗೆ ಅನುಗುಣವಾಗಿ ಮುಖ್ಯವಾಗಿ ನಡೆಯತಕ್ಕದ್ದು. ಹಾಗಿಲ್ಲದಿದ್ದರೆ ಅಂತವನು ಹೇಗೆ ಅಂತಹ ಧರ್ಮಗಳ ಉಪದೇಶಕನಾಗುವನು ? ಆಚಾರ್ಯನು ತಾನೇ ತನ್ನ ಉಪದೇಶಕ್ಕನುಗುಣವಾಗಿ ಅನುಷ್ಠಿಸದಿದ್ದರೆ ಆಚಾರ್ಯನು ಹೇಗೆ ಆಗುವನು. ಪರಮೇಶ್ವರನು ಪರಮಾಚಾರ್ಯನು, ಲೋಕಗುರುವು ತನ್ನ ಧರ್ಮಗಳನ್ನು ತಾನು ಅತಿಕ್ರಮಿಸುವದಿಲ್ಲವೆಂದು ದುರ್ಯೋಧನನ ಸಭೆಯಲ್ಲಿ ಶಪಥವನ್ನು ಮಾಡಿರುತ್ತಾನೆ.—ಹೇಗಂದರೆ "**ನಾಹಂ ಕಾಮಾನ್ನ ಸಂರಂಭಾನ್ನ ದ್ವೇಷಾನ್ನಾರ್ಥಕಾರಣಾತ್**

---

(೧) ಯಾಜ್ಞಸ್ಮೃತಿ ೧-೫-೧೨೧ (೨) ಮನು (೩) ವಿಹಗೇನ್ದ್ರ ಸಂಹಿತಾ.

**ನಹೇತುವಾದಾಲ್ಲೋಭಾದ್ವಾ ಧರ್ಮಂ ಜಹ್ಯಾಂ ಕಥಂಚನ**" (ಭಾರತ ಉದ್ಯೋಗ ೯೧) ಹೀಗೆ ಯಾವ ಕಾರಣದಿಂದಲೂ ನನ್ನ ಆಜ್ಞೆಗಳಾದ ಧರ್ಮಗಳನ್ನು ಅತಿಕ್ರಮಿಸುವದಿಲ್ಲವೆಂಬ ಪ್ರತಿಜ್ಞೆಯನ್ನು ಮಾಡಿರುತ್ತಾರೆ. ಹೀಗಿದ್ದರೂ ಕೃಷ್ಣಾವತಾರಿಯಾಗಿ ಕ್ಷತ್ರಿಯನಾಗಿದ್ದರೂ ಶೂದ್ರನಾದ ವಿದುರನ ಅನ್ನವನ್ನು ಸ್ವೀಕರಿಸಿದರು; ರಾಮಾವತಾರಿಯಾಗಿ ಶೂದ್ರಳಾದ ಶಬರಿಯು ಎಂಜಲನ್ನುಂಡರು ಎಂದೂ, ಹಾಗೆಯೇ ವಿದುರರು ತಮಗೆ ಬೇಕಾದವರಾದುದರಿಂದ ಅವರು ತಮಗೆ ಅಧಿಕಾರವಿಲ್ಲದ ಉಪಾಸನೆಯನ್ನು ನಡೆಸಿದರೂ ಅದನ್ನು ಅನುಮೋದಿಸಿದರು ಎಂದೂ ಹೀಗೆಲ್ಲಾ ಹೇಳಿ, ತಮ್ಮ ಅವಿಜ್ಞತೆಯನ್ನು ಕೆಲವು ಮಹನೀಯರೂ ಕೂಡ ಪ್ರಕಟಿಸುವರು. ಶಾಸ್ತ್ರಪಙ್ತಿಗಳನ್ನು ಸರಿಯಾಗಿ ಪರಿಶೀಲಿಸದ ಅಭಿಪ್ರಾಯಗಳಾಗಿರುತ್ತವೆ. ವಿದುರಾನ್ನವನ್ನು ಸ್ವೀಕರಿಸಿದರು ಎಂದು ಹೇಳುವ ಸಂದರ್ಭದಲ್ಲಿ "**ಭುಕ್ತವತ್ಸುದ್ವಿಜಾಗ್ರ್ಯೇಷು ನಿಷಣ್ಣಃ ಪರಮಾಸನೇ। ವಿದುರಾನ್ನಾನಿ ಬುಭುಜೇ ಶುಚೀನಿ ಗುಣವಂತಿಚ** ಎಂದು ಪ್ರಾಜ್ಞರಾದ ಮಹರ್ಷಿಯೋಕ್ತಿಯು ಇರುತ್ತದೆ. ಇಲ್ಲಿ ಕ್ಷತ್ರಿಯನಾದ ಶ್ರೀಕೃಷ್ಣನಿಗೆ **ದ್ವಿಜಾಗ್ರ್ಯರು** ಬ್ರಾಹ್ಮಣರೇ. ಬ್ರಾಹ್ಮಣರಿಗೆಲ್ಲಾ ಊಟವಾಯಿತೇ ಎಂದು ವಿಚಾರಿಸಿ, ಅವರಿಗೆಲ್ಲಾ ಆದ ನಂತರ ತಾನು ಭದ್ರಾಸನದಲ್ಲಿ ಕುಳಿತು ಪರಮಭಾಗವತರಾದ ಶ್ರೀವಿದುರರ ಆತಿಥ್ಯವನ್ನು ಸ್ವೀಕರಿಸಿದರು ಎಂದು ಹೇಳಲ್ಪಟ್ಟಿರುತ್ತದೆ. ಹಾಗೆ ಪರಮಭಾಗವತರಾದ ಬ್ರಾಹ್ಮಣರಿಗೆ ಗ್ರಾಹ್ಯವಾಗಬೇಕಾದರೆ, ಆ ಅನ್ನವು ಬ್ರಾಹ್ಮಣರಿಂದಲೇ ಮಾಡಲ್ಪಟ್ಟು ದೇವರಿಗೆ ನಿವೇದನ ಪಾಕಮಾಡಲ್ಪಟ್ಟದ್ದಾಗಿರಬೇಕು. ಆದುದರಿಂದಲೇ **ವಿದುರಾನ್ನಾನಿ** ಎಂದು ಹೇಳಲ್ಪಟ್ಟಿತು. ವಿದುರರೇ ಅಡಿಗೆಮಾಡಿ ಬಡಿಸಿದುದು ಎಂಬರ್ಥವಲ್ಲವು. ಏಕೆಂದರೆ ಶ್ರೀ ಗೀತೆಯಲ್ಲಿ ಶ್ರೀಕೃಷ್ಣಭಗವಾನರವರು ವರ್ಣಸಾಂಕರ್ಯವನ್ನು "**ವರ್ಣಸಂಕರ ಕರ್ತಾಸ್ಯಾಂಉಪಹನ್ಯಾಮಿಮಾಃಪ್ರಜಾಃ**" ಎಂದು ನಿಂದಿಸಿರುವಾಗ ತಾವೇ ಶೂದ್ರಾನ್ನವನ್ನು ಸ್ವೀಕರಿಸುವರೇ? ಅವರ ಉಪದೇಶಕ್ಕೆ ವಿರುದ್ಧವಾಗಿ ಅವರೇ ನಡೆಯುತ್ತಾರೆಯೇ ?

ಹಾಗೆಯೇ ಶ್ರೀರಾಮಚಂದ್ರಪ್ರಭುವು ಧರ್ಮವೇ ಮೂರ್ತಿಭವಿಸಿತೋ ಎನೋ ಎಂದಿರುವವರು ಶೂದ್ರಳಾದ ಶಬರಿಯು ಎಂಜಲನ್ನು ಆಕೆಯ ಭಕ್ತಿ ವಿಶ್ವಾಸಗಳಿಗೆ ಮೆಚ್ಚಿ ತಿಂದರು ಎಂದು ಕೆಲವರು ಹೇಳುವರು. ಅಂತಹ ಶೂದ್ರ ಸ್ತ್ರೀ ಎಂಜಲನ್ನು ಸ್ವೀಕರಿಸಿ ಚಾತುರ್ವರ್ಣ್ಯ ಧರ್ಮಕ್ಕೆ ಎಂದಿಗಾದರೂ ಲೋಪವನ್ನು ತಾವೇ ತರುವರೇ? ಶ್ರೀ ವಾಲ್ಮೀಕಿ ರಾಮಾಯಣದಲ್ಲಿ ಅಂತಹ ಸಂದೇಹಕ್ಕೆ ಅವಕಾಶವೇ ಇಲ್ಲವು. "**ವ ಯಾತುವಿವಿಧಂ ವನ್ಯಂ ಸಂಚಿತಂ ಪುರುಷರ್ಷಭ। ತವಾರ್ಥೇ ಪುರುಷವ್ಯಾಘ್ರ ಪಂಪಾಯಾಸ್ತೀರಸಂಭವಮ್**" ಎಂದು ಇಷ್ಟುಮಾತ್ರವೇ ಶಬರಿಯು ಹೇಳಿಕೊಂಡಿರುತ್ತಾಳೆ. (ರಾ, ಅರಣ್ಯ ೭೪ ೧೭) ಓ ಪುರುಷಶ್ರೇಷ್ಠನೇ, ನನ್ನ ಗುರುವಾದ ಮತಂಗ ಮಹರ್ಷಿಯು ನೀನು ಇಲ್ಲಿಗೆ ದಯಮಾಡುತ್ತೀ, ಆಗ ನಿನ್ನನ್ನು ಚೆನ್ನಾಗಿ ಭಕ್ತಿ ವಿಶ್ವಾಸದಿಂದ ಉಪಚರಿಸತಕ್ಕದ್ದೆಂದು ಆಜ್ಞಾಪಿಸಿರುದರಿಂದ, ಪಂಪಾತೀರದಲ್ಲಿ ಬೆಳದ ವಿವಿಧ ಫಲಾದಿಗಳನ್ನು ಸಂಪಾದಿಸಿಟ್ಟಿರುವೆನು; ನೀನು ಕೃಪೆಯಿಟ್ಟು ಸ್ವೀಕರಿಸತಕ್ಕದ್ದೆಂದು ಶಬರಿಯು ಪ್ರಾರ್ಥಿಸುತ್ತಾಳೆ. ಆದರೆ ಪಾದ್ಮ ಪುರಾಣದಲ್ಲಾದರೋ '**ಫಲಾನಿಚ ಸುಪಕ್ವಾನಿ ಮೂಲಾನಿಮಧುರಾಣಿಚ। ಸ್ವಯಮಾಸ್ವಾದ್ಯಮಾಧುರ್ಯಂಪರೀಕ್ಷ್ಯ ಪರಿಭಕ್ಷ್ಯಚ।ಪಶ್ಚಾನ್ನಿವೇದಯಾಮಾಸ ರಾಘವಾಭ್ಯಾಂ ದೃಢವ್ರತಾ। ಫಲಾನಾಸ್ವಾದ್ಯ ಕಾಕುತ್ಸ್ಥಸ್ತಸ್ಯೈ ಮುಕ್ತಿಂ ಪರಾಂದದೌ** ॥ ಎಂದು ಇದೆ. ಇಲ್ಲಿ ಫಲಗಳನ್ನು ಆಕೆಯು ಮಧುರವಾಗಿದೆಯೇ ಎಂದು ತಾನೇ ಮೊದಲು ಚೆನ್ನಾಗಿ ಪರೀಕ್ಷಿಸಿ' ಅನಂತರ ಅಂತಹ ಬೇರೆ ಫಲಗಳನ್ನು ಆರಿಸಿಟ್ಟು ಶ್ರೀರಾಮ ಲಕ್ಷ್ಮಣರುಗಳಿಗೆ ಸಮರ್ಪಿಸಿದಳೆಂದು ಇರುವದರಿಂದ ಕೆಲವರು ವಿಪರೀತಾರ್ಥವನ್ನು ಎಂಜಲುಮಾಡಿದ ಹಣ್ಣನ್ನು ಸಮರ್ಪಿಸಿದಳು ಎಂದು ಮಾಡಿರುತ್ತಾರೆ. ಇದು ಅಜ್ಞಾನ ವಿಜೃಂಭಣೆಯು. ಶಬರಿಯು ಶ್ರೀ ಮತಂಗ ಋಷಿಯ ಶಿಷ್ಯಳಾಗಿ ವಿವೇಕಿಯಾಗಿ ಇಂತಹ

ಹೇಯಾಪರಾಧವನ್ನು ಎಂದಿಗೂ ಮಾಡಲಾರಳು. ಧರ್ಮಸಂಸ್ಥಾಪನಕ್ಕಾಗಿ ಅವತರಿಸಿದವನು ಶ್ರೀರಾಮಚಂದ್ರ ಪ್ರಭುವು. ಸ್ತ್ರೀಯಾಗಿಯೂ ಶಬರಳಾಗಿಯೂ ಇರುವ ಶೂದ್ರಳ ಎಂಜಲನ್ನು ತಿಂದು ಧರ್ಮಾತಿಕ್ರಮವನ್ನು ಎಂದಿಗಾದರೂ ನಡೆಸುವರೇ ? ಶ್ರೀರಾಮಚಂದ್ರಪ್ರಭುವು ಮೋಕ್ಷವನ್ನು ಕೊಡಲು ಕಾರಣವೇನೆಂದರೆ ಶೂದ್ರ ಸ್ತ್ರೀಯಾದವಳಿಗೆ ಹೇಳಿರುವ ಉಪಾಯಾನುಷ್ಠಾನವಾದ ಭಾಗವತ ಸಂಶ್ರಯಣವನ್ನು ಮಾಡಿದುದಾಗಿ ಆಕೆಯೇ ಶ್ರೀರಾಮನಲ್ಲಿ ಅರಿಕೆ ಮಾಡಿಕೊಂಡಿರುತ್ತಾಳೆ. - " "ಮುನೀನಾಂ ಪಾತ್ರಪೋಷೇಯೇಷಾಮುಹಂಚ ಪರಿಚಾರಿಣೀ", ನಾನು ಮತಂಗ ಮಹರ್ಷಿಗೆ ಶಿಷ್ಯಳಾಗಿ ಆ ಭಾಗವತೋತ್ತಮರ ಪರಿಚರ್ಯ ವೃತ್ತಿಯಲ್ಲಿದ್ದವಳು. ಬ್ರಾಹ್ಮಣಾದಿಗಳಿಗೆ ನಿತ್ಯ ನೈಮಿತ್ತಿಕದೊಂದಿಗೆ ಉಪಾಸನ ಶರಣಾಗತಿಗಳು ಹೇಗೆ ಉಪಾಯವೋ, ಹಾಗೆಯೇ ಸ್ತ್ರೀ ಶೂದ್ರಾದಿಗಳಿಗೆ ಗುರು ಶುಶ್ರೂಷೆಯಿಂದ ಪ್ರೀತರಾಗಿ ಗುರುವು ಇವರಿಗಾಗಿ ಮಾಡುವ ಶರಣಾಗತಿಯಿಂದ ಮೋಕ್ಷವು.

ಶೂದ್ರನು ಭಗವದಾರಾಧನೆಯನ್ನು ಮಾಡಬಹುದೋ ? ಎಂಬ ವಿಷಯದಲ್ಲಿ ಅನುಮತಿಯನ್ನು ಶಾಸ್ತ್ರವು ಕೊಟ್ಟಿರುತ್ತದೆ. ಅವರುಗಳಿಗೆ ಸಂಸ್ಕಾರಾದಿಗಳು ಆಗಬಹುದು ಎಂದು "ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚ ಕೃತಲಕ್ಷಣೈಃ ।ಅರ್ಚನೀಯಶ್ಚ ಸೇವ್ಯಶ್ಚ ನಿತ್ಯಯುಕ್ತೈಃ ಸ್ವಕರ್ಮಸು" ( ಭಾರ, ಭೀಷ್ಮ ೬೬ ೩೯, ೪೦) ಎಂಬಲ್ಲಿ ಕೃತಲಕ್ಷಣೈಃ ಎಂಬುದರಿಂದ ಚಕ್ರಾಂಕನ ಮೊದಲಾದವುಗಳಿಗೂ, ಅರ್ಚನೀಯಃ ಎಂಬುದರಿಂದ ಭಗವದಾರಾಧನೆಗಳಿಗೂ, ಅರ್ಹತೆಯುಂಟೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ವಿಷ್ಣುಧರ್ಮದಲ್ಲೂ "ಬ್ರಾಹ್ಮಣಾಃ ಕ್ಷತ್ರಿಯಾವೈಶ್ಯಾಃ ಶೂದ್ರಾಶ್ಚ ಕೃತಲಕ್ಷಣಾಃ। ಕೃತೇಯುಗೇ ಸಮಭವನ್ ಸ್ವಕರ್ಮನಿರತಾಸ್ಸದಾ" ಎಂಬುದರಿಂದ ಪಂಚಸಂಸ್ಕಾರಾರ್ಹತೆಯನ್ನು ಹೇಳಿ ಮುಂದೆ "ಅಕಾಮಫಲಸಂಯೋಗಾತ್ ಪ್ರಾಪ್ನುವಂತಿ ಪರಾಂಗತಿಮ್" ಹಾಗೆಯೇ ಅವರಿಗೂ ಮೋಕ್ಷವುಂಟೆಂದು ಹೇಳಲ್ಪಟ್ಟಿರುತ್ತದೆ. ನಮ್ಮಲ್ಲೇ ಒಂದು ಪಂಗಡದವರು ಇದಕ್ಕೆ ವಿರುದ್ಧವಾಗಿ ಶೂದ್ರಾದಿಗಳಿಗೆ ಮೋಕ್ಷವಿಲ್ಲವೆಂದು ಹೇಳುವ ವಾದವು ಗುಹ ಶಬರಿ ವೃತ್ತಾಂತಗಳಿಂದಲೂ ನಿರಸ್ತವು. ಶ್ರೀಸಾತ್ವತದಲ್ಲಿ ವ್ರತೋಪವಾಸಾದಿಗಳೂ ತ್ರಿವರ್ಣದವರಹಾಗೆ ಶೂದ್ರನಿಗೂ ವಿಹಿತವೆಂದುಹೇಳಲ್ಪಟ್ಟಿರುತ್ತದೆ. ಅಷ್ಟಾಕ್ಷರ ಮನ್ತ್ರಕ್ಕೆ ಅರ್ಹತೆಯುಂಟೇ ಎಂಬ ವಿಷಯದಲ್ಲಿ ನಾರದೀಯಾಷ್ಟಾಕ್ಷರ ಕಲ್ಪದಲ್ಲಿ ನಸ್ವರಃ ಪ್ರಣವೋಙ್ಗಾನಿನಾಪ್ಯನ್ಯವಿಧಯಸ್ತಥಾ । ಸ್ತ್ರೀಣಾಂತು ಶೂದ್ರ ಜಾತೀನಾಂ ಮನ್ತ್ರಮಾತ್ರೋಕ್ತಿರಿಷ್ಯತೇ " ಮಂತ್ರ ಮಾತ್ರ ಉಪದೇಶಿಸಬಹುದೆಂದು ಅನುಮತಿ ಇರುತ್ತದೆ. ಆದರೆ ಇನ್ನೊಂದು ಕಡೆಯಲ್ಲಿ ಸ್ತ್ರೀ ಶೂದ್ರಾದಿಗಳಿಗೆ ೬ರಲ್ಲಿ ಅಧಿಕಾರವಿಲ್ಲವೆಂದು ಹೇಳುತ್ತದೆ. ಅವು ಯಾವುದೆಂದರೆ - " ಜಪಸ್ತಪಸ್ತೀರ್ಥಯಾತ್ರಾ ಪ್ರವ್ರಜ್ಯಾ ಮನ್ತ್ರ ಸಾಧನಮ್ । ದೇವತಾರಾಧನಂ ಚೈವ ಸ್ತ್ರೀಶೂದ್ರ ಪತನಾನಿ ಷಟ್ " ಎಂಬಲ್ಲಿ ಇವು ಆರೂ ನಿಷೇಧಿಸಲ್ಪಟ್ಟಿವೆ. ಹೀಗಿರುವಾಗ ಸಿದ್ಧಾನ್ತವು ಹೇಗೆ ? ಶ್ರೀ ಯತಿವರ್ಯರವರ ಭಾಷ್ಯದಲ್ಲಿ " ಶೂದ್ರಸ್ಯ ತು ಕರ್ತವ್ಯ ವೃತ್ತಿಶ್ಚ ಪೂರ್ವವರ್ಣತ್ರಯ ಪರಿಚರ್ಯೈವ " ಎಂದು ಅವಧಾರಣದೊಂದಿಗೆ ಹೇಳಿರುವದು ಹೇಗೆ ? ಎಂದರೆ ಅದಕ್ಕೆ ಶ್ರೀ ನಿಗಮಾನ್ತ ದೇಶಿಕರವರು ಸಮಾಧಾನವನ್ನು ಹೇಳುತ್ತಾರೇನೆಂದರೆ – ಇಲ್ಲಿ ಮುಖ್ಯವಾದ ಶೂದ್ರ ಕರ್ತವ್ಯಗಳು ವರ್ಣತ್ರಯರಿಗೆ ಪರಿಚರ್ಯೆಯೇ. ಆ ವಿಹಿತ ಕರ್ಮಕ್ಕೆ ಅವಿರೋಧೇನ ಮಿಕ್ಕವಿಹಿತ ಕರ್ಮಗಳನ್ನು ಮಾಡಬಹುದು. ಆದುದರಿಂದ ಮೂಲದಲ್ಲಿ ಪರಿಚರ್ಯಾತ್ಮಕಂ ಕರ್ಮ ಎಂದು ಇಷ್ಟುಮಾತ್ರವೇ ಹೇಳಿದೆಯೇ ವಿನಾ ಪರಿಚರ್ಯೈವ ಎಂದು ಹೇಳಲಿಲ್ಲವು. ಶ್ರೀ ಭಾಷ್ಯಕಾರರ ಏವ ಶಬ್ದದಿಂದ ನಾವು ಗ್ರಹಿಸತಕ್ಕದ್ದೇನೆಂದರೆ ಅದು ಶೂದ್ರನಿಗೆ ಮುಖ್ಯವಾದ ಸಹಜವಾದ ವೃತ್ತಿ ಎಂಬುದು. ಆಗಲಿ "ನ ಶೂದ್ರಾ ಭಗವದ್ಭಕ್ತಾಃ"ಎಂಬ ಹೇಳಿಕೆ ಇದೆಯಲ್ಲವೇ ಎಂದರೆ ಆ ಶೂದ್ರಭಾಗವತನೂ ಬ್ರಾಹ್ಮಣಪರಿಚರ್ಯೆಯನ್ನು

ಬಿಟ್ಟಿರುವನೆಂದು ಭಾವಿಸತಕ್ಕದ್ದಲ್ಲವು. ಆತನು ಭಾಗವತ ಸಂಶ್ರಯಣದಿಂದಲೇ ಭಗವದ್ಭಕ್ತನು ಎಂಬ ಭಾವವು. ಹೀಗೆ ಯೋಗ್ಯವಾದ ಪರಿಚರ್ಯವಾದುದರಿಂದ ಆ ಪರಿಚರ್ಯಮೂಲಕವಾಗಿಯೇ ಶೂದ್ರನಿಗೆ ಮೋಕ್ಷ ಪ್ರಾಪ್ತಿಯು. ಆದುದರಿಂದ ಶಬರಿಯ ದೃಷ್ಟಾಂತವು. ಇದನ್ನು ಮನಸ್ಸಿನಲ್ಲಿಟ್ಟೇ ಶ್ರೀ ಪರಾಶರರು ಹೇಳುತ್ತಾರೆ-"**ಮಗ್ನೋಥ ಜಾಹ್ನವೀತೋಯಾತ್ ಉತ್ಥಾಯಾಹ ಸುತೋಮಮ । ಶೂದ್ರಸ್ಸಾಧುಃ ಕಲಿಸ್ಸಾಧುರಿತ್ಯೇವಂ ಶೃಣ್ವತಾಂ ವಚಃ । ಸಾಧು ಸಾಧ್ವಿತಿ ಚೋತ್ಥಾಯ ಶೂದ್ರಧನ್ಯೋಸಿ ಚಾ ಬ್ರವೀತ್ । ಯೋಷಿತ ಸ್ಸಾಧು ಧನ್ಯಾಸ್ತಾಭ್ಯೋ ಧನ್ಯತರೋಸ್ತಿಕಃ**" ಗಂಗಾನದಿಯಲ್ಲಿ ಸ್ನಾನಮಾಡಿ ಬಂದು ನನ್ನ ಮಗನಾದ ಪ್ರಾಜ್ಞನಾದ ವ್ಯಾಸ ಮಹರ್ಷಿಯು ಹೇಳಿದುದೇನೆಂದರೆ - ಕಲಿಯುಗವು ಧನ್ಯವಾದುದು, ಶೂದ್ರನೂ ಧನ್ಯನು ಸ್ತ್ರೀಯರು ಧನ್ಯರು ಎಂದು ಹೇಳಿದರು; ಶಾಸ್ತ್ರಗಳಲ್ಲಿ ವಿಹಿತಕರ್ಮಾನುಷ್ಠಾನವೇ ಕ್ರಮೇಣ ಮೋಕ್ಷಕ್ಕೆ ಹೇತುವಾದುದರಿಂದ ಶೂದ್ರನು ತನ್ನ ಇತಿಕರ್ತವ್ಯತಾರೂಪವಾದ ಪರಮ ಭಾಗವತರಾದ ಬ್ರಾಹ್ಮಣನ ಶುಶ್ರೂಷೆಯಿಂದಲೇ ಮೋಕ್ಷವನ್ನು ಹೊಂದುವನು; ಬ್ರಾಹ್ಮಣನು ಮಾಡುವ ಉಪಾಯಾನುಷ್ಠಾನದಿಂದಲೇ ಈತನಿಗೆ ಸದ್ಗತಿಯು; ಆದುದರಿಂದಲೇ **ಶೂದ್ರಸ್ಸಾಧುಃ** ಎಂಬ ಮಹರ್ಷಿಯ ಉಕ್ತಿಯು; ಹಾಗೆಯೇ ಸಾಧ್ವಿಯಾದ ಸ್ತ್ರೀಗೂ ಸಹ ತನ್ನ ಭರ್ತಾವಿನ ಶುಶ್ರೂಷೆಯೇ ಮೋಕ್ಷದಾಯಕವು ; ಹಾಗೆಯೇ ಮಹರ್ಷಿ ಹೇಳಿರುತ್ತಾರೆ. (೫)**ಭರ್ತೃಶುಶ್ರೂಷಯಾ ನಾರೀ ಲಭತೇ ಸ್ವರ್ಗಮುತ್ತಮಂ । ಅಪಿಯಾನಿರ್ನಮಸ್ಕಾರಾ ನಿವೃತ್ತಾ ದೇವಪೂಜನಾತ್॥** ಇಲ್ಲಿ **ಸ್ವರ್ಗಮುತ್ತಮಂ** ಎಂಬುದರಿಂದ ಮೋಕ್ಷವು ಹೇಳಲ್ಪಟ್ಟಿತು; ಭರ್ತೃ ಶುಶ್ರೂಷೆಯಿಂದಲೇ ಸ್ತ್ರೀಗೆ ಮೋಕ್ಷವು; ಆಕೆಯು ಒಂದುವೇಳೆ ದೇವ ಭಾಗವತ ಪೂಜೆಯಲ್ಲಿ ನಿರತಳಾಗದೇ ಇದ್ದರೂ ಚಿಂತೆಯಿಲ್ಲವೆಂದು ಹೇಳುತ್ತದೆ. ಹಾಗಲ್ಲದೆ ದೇವ ಪೂಜಾ ಮತ್ತು ವ್ರತೋಪಾಸಗಳು ಎಷ್ಟಿದ್ದರೂ ಭರ್ತೃಶುಶ್ರೂಷಾ ಇಲ್ಲದಿದ್ದರೆ ಆಕೆಯು ನಷ್ಟಳಾಗುವಳೆಂದು ವ್ಯತಿರೇಕರೂಪದಲ್ಲಿ (೬) "**ಪ್ರೋಷಿತಾ** **ಪವಾಸ** ನಿರತಾ ಯಾ ನಾರೀ ಪರಮೋತ್ತಮಾ। ಭರ್ತಾರಂ **ನಾನುವರ್ತೇತ ಸಾಚ ಪಾಪಗತಿರ್ಭವೇತ್**" ಎಂಬುದಾಗಿ ಹೇಳಲ್ಪಟ್ಟಿರುತ್ತದೆ. ಒಂದುವೇಳೆ ಸ್ತ್ರೀಗೆ ಪತಿಯಿಲ್ಲದಿದ್ದರೆ ಆಕೆಯು ಮೋಕ್ಷಾರ್ಥಿಯಾಗಿದ್ದ ಪಕ್ಷದಲ್ಲಿ ಪರಮ ಭಾಗವತಾಶ್ರಯಣವನ್ನು, ಶಬರಿಯು ಮತಂಗ ಮಹರ್ಷಿಯನ್ನು ಆಶ್ರಯಿಸಿದ ತೆರದಿ, ಆಶ್ರಯಿಸತಕ್ಕದ್ದಾಗಿರುತ್ತದೆ ಆದುದರಿಂದ ಸ್ತ್ರೀಗೂ ಮತ್ತು ಶೂದ್ರರಿಗೂ ವಿಹಿತ ಕರ್ಮಗಳೇ ಮೋಕ್ಷದಾಯಕವು; ಹಾಗೆಯೇ ವೈಶ್ಯ ಕ್ಷತ್ರಿಯ ಬ್ರಾಹ್ಮಣರಿಗೂ ಅವರವರ ವಿಹಿತಕರ್ಮಗಳನ್ನು ಅನುಷ್ಠಿಸುವದೇ ಮೋಕ್ಷಪ್ರಾಪ್ತಿಗೆ ಹೇತುವು. ಮೂರನೆಯ ಅಧ್ಯಾಯದಲ್ಲಿ ಬಹು ಚೆನ್ನಾಗಿ ಉಪಪಾದಿತವಾದ ಈ ಅರ್ಥವೇ ಮುಂದಿನ ಶ್ಲೋಕದಲ್ಲಿ ಉಪಪಾದಿಸಲ್ಪಡುತ್ತದೆ. ಭಕ್ತಿಯೋಗದಲ್ಲಿ ತ್ರಿವರ್ಣದವರಿಗೆ ಮಾತ್ರವೇ ಅಧಿಕಾರವಾದುದರಿಂದ ಸ್ತ್ರೀ ಶೂದ್ರಾದಿಗಳ ಮೋಕ್ಷೋಪಾಯವು ಇಲ್ಲಿ ಹೇಳಲಿಲ್ಲವು. ಆದರೆ (೭) "**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ । ಸ್ತ್ರಿಯೋವೈಶ್ಯಾಸ್ತಥಾಶೂದ್ರಾಃ ತೇಽಪಿಯಾನ್ತಿ ಪರಾಂಗತಿಮ್**" ಎಂಬಲ್ಲಿ (೯. ೩೨) ಭಾಗವತ ಸಂಶ್ರಯಣವೇ ಪರಾಗತಿಯೆಂದು ಸೂಚಿತವು; ಆ ಶ್ಲೋಕ ವ್ಯಾಖ್ಯಾನವನ್ನು ಪರಾಂಬರಿಸಿ. ಇವರಿಗಾಗಿ ಆಚಾರ್ಯನು ಅನುಷ್ಠಿಸುವ ಶರಣಾಗತಿಯಿಂದಲೇ ಮೋಕ್ಷವು. ವಿಭೀಷಣನು ಪರಮಭಾಗವತನು. ಆದುದರಿಂದ ಇವನನ್ನು ಆಶ್ರಯಿಸಿದ ನಾಲ್ಕು ಮಂದಿ ರಾಕ್ಷಸರೂ ವಿಭೀಷಣನ ಶರಣಾಗತಿಯಲ್ಲೇ ಅಂತರ್ಗತರಾಗಿ, ವಿಭೀಷಣನೊಂದಿಗೆ ಅವರಿಗೂ ಸದ್ಗತಿಯು. **ರಾಘವೇಣಾಭಯೇದತ್ತೇ ಸನ್ನತೋ ರಾವಣಾನುಜಃ । ವಿಭೀಷಣೋ ಮಹಾಪ್ರಾಜ್ಞೋ ಭೂಮಿಂ ಸಮವಲೋಕಯನ್ । ಖಾತ್ಪಪಾತಾವನಿಂ ಹೃಷ್ಟೋಭಕ್ತೈರನುಚರೈಸ್ಸಹ । ಸತುರಾಮಸ್ಯ ಧರ್ಮಾತ್ಮಾ ನಿಪಪಾತ ವಿಭೀಷಣಃ ।**

(೫) ರಾ. ಅಯೋಧ್ಯಾ ೨೪-೨೭ (೬) ರಾಮಾ ಅಯೋಧ್ಯಾ ೨೪-೨೫. (೭) ಗೀ. ೯-೩೨.

**ಪಾದಯೋಃ ಶರಣಾನ್ವೇಷೀ ಚತುರ್ಭಿಸ್ಸಹ ರಾಕ್ಷಸೈಃ**" ಎಂಬ ಮಹರ್ಷಿ ಸೂಕ್ತಿಯು ಅನುಸಂಧೇಯವು. (ರಾ. ಯುದ್ಧ ೧೮ )

ಕರುಣಾಸಾಗರನು, ಸೇವಾವೃತ್ತಿಯಲ್ಲಿರುವವರಿಗೆ ವಿಶೇಷವಾಗಿ ನಿತ್ಯನೈಮಿತ್ತಿಕಾದಿಗಳ ಅನುಷ್ಠಾನವಿಧಿಯು ಸರಿಯಿಲ್ಲವೆಂದು ಭಾವಿಸಿ, ಲಘುವಾದ ಇತಿಕರ್ತವ್ಯತೆಯಿಂದ ಮಹತ್ತಾದ ಮೋಕ್ಷರೂಪ ಫಲವನ್ನು ಏರ್ಪಡಿಸಿದ್ದರೂ, ಶಾಸ್ತ್ರಜ್ಞಾನವಿಲ್ಲದೆ ಬ್ರಾಹ್ಮಣರು ಶೂದ್ರಾದಿಗಳನ್ನು ಹೀನಾವಸ್ಥೆಯಲ್ಲಿರುವ ಹಾಗೆ ಏರ್ಪಡಿಸುವರೆಂಬ ಕೆಲವು ಬ್ರಾಹ್ಮಣೇತರರು ನಿಂದಿಸುವರು. ಎಲ್ಲರೂ ಆಂದೋಳನದಲ್ಲೇ ಕೂತುಕೊಂಡರೆ ಹೊರುವರು ಬೇಕಷ್ಟೆ; ಅಂತೂ ಕೆಲವರು ಪರಿಚರ್ಯವೃತ್ತಿಯನ್ನು ಅವಲಂಬಿಸಲೇಬೇಕು, ತಪ್ಪಿದ್ದಲ್ಲವು. ಜನ್ಮತಃ ಪರಿಚರ್ಯವೃತ್ತಿಯನ್ನು ಸ್ವಾಮಿಯು ಏರ್ಪಡಿಸುವದರಲ್ಲಿ ಸುಖವು. ಹಾಗಿಲ್ಲವಾದರೆ ಲೋಕದಲ್ಲಿ ತೊಂದರೆಯು ತಪ್ಪದು. ಹೀಗೆ ಶೂದ್ರವೃತ್ತಿಯನ್ನು ಏರ್ಪಡಿಸಿದವನು ಬ್ರಾಹ್ಮಣನಲ್ಲವು. ಸರ್ವೇಶ್ವರನೂ ಸ್ವತಂತ್ರಿಸಿ ಏರ್ಪಡಿಸಿದಲ್ಲವು. ಈ ಶೂದ್ರನ ಪೂರ್ವಕರ್ಮಾನುಸಾರ ಸರ್ವೇಶ್ವರನ ಶಿಕ್ಷಾಕ್ರಮವು. ಅದುದ ರಿಂದ ಹಿಂದಿನ ಜನ್ಮದಲ್ಲಿ ಸತ್ವರಜಸ್ತಮೋಗುಣಗಳ ಪ್ರಾಚುರ್ಯದಿಂದ ನಡೆಸಿದ ಸುಕೃತದುಷ್ಕೃತ ಗಳಿಗನುಸಾರವಾಗಿ ದಯಪಾಲಿಸಿದ ಬ್ರಾಹ್ಮಣಾದಿ ಯೋನಿಗಳಲ್ಲಿ ಜನ್ಮವೆಂದು ಭಾವಿಸತಕ್ಕದ್ದು. ಈ ಜನ್ಮದಲ್ಲಿ ಬ್ರಾಹ್ಮಣರು ತಮ್ಮ ವೃತ್ತಿಗನುಸಾರವಾಗಿ ನಡೆಯದೇ ಇರುವದನ್ನು ನೋಡಿ ಬ್ರಾಹ್ಮಣೇತರರು ಅಸೂಯೆಯನ್ನು ತೋರಿಸುತ್ತಿರುವರು. ಇದಕ್ಕೆ ಮುಖ್ಯಕಾರಣವು ಸಂಸ್ಕೃತ ಜ್ಞಾನದ ಮತ್ತು ಶಾಸ್ತ್ರಪರಿಚಯದ ಅಭಾವರೂಪ ದುರದೃಷ್ಟವು. ತನಗೆ ಮಾಡಿದ ಅಪರಾಧ ವಾದ ಚಾತುರ್ವರ್ಣ್ಯ ವಿಭಾಗದ ತಿರಸ್ಕಾರವನ್ನೂ ವರ್ಣಸಾಂಕರ್ಯವನ್ನೂ ಒಂದುವೇಳೆ ಭಗವಂತನು ಸಹಿಸಿಕೊಳ್ಳಬಹುದು. ಅನೇಕ ಮಹರ್ಷಿಗಳೆಲ್ಲಾ ಈ ಚಾತುರ್ವರ್ಣ್ಯವಿಭಾಗವನ್ನು ಕೊಂಡಾಡಿರುವಾಗ ಅವರೆನ್ನೆಲ್ಲಾ ನಿಂದಿಸಿ ತದೀಯರಾದ ಭಾಗವತೋತ್ತಮರಲ್ಲಿ ದ್ವೇಷಾಸೂಯೆಯನ್ನು ಈಗಿನವರು ಪ್ರದರ್ಶಿಸುತ್ತಿರುವದನ್ನು ಶ್ರೀ ಕೃಷ್ಣಭಗವಾನರವರು ಸಹಿಸಲಾರರೆಂದು ತೋರುತ್ತದೆ. . ಈ ಸಂದರ್ಭದಲ್ಲಿ ಆದಿಭರತರಿಗೆತನ್ನ ಆಂದೋಳನವನ್ನು ಹೊರುವಹಾಗೆಮಾಡಿದ್ದಲ್ಲದೆ, ಅವರ ವಿಷಯ ದಲ್ಲಿ ಆಡಿದ ಪರುಷೋಕ್ತಿಗಾಗಿ ರಾಜನಾದ ರಹೋಗುಣನು ಪರಿತಾಪದಿಂದ ಹೇಳಿದ ಉಕ್ತಿಯು ಈ ಸಂದರ್ಭದಲ್ಲಿ ಅನುಸಂಧೇಯವು. "**ನಾಹಂ ವಿಶಂಕೇ ಸುರರಾಜವಜ್ರಾನ್ನತ್ರ್ಯಕ್ಷ ಶೂಲಾನ್ನಯಮಸ್ಯ ಪಾಶಾತ್ । ನಾಗ್ನ್ಯರ್ಕಸೋಮಾನಿಲವಿತ್ತಪಾಸ್ತ್ರಾಚ್ಛಂಕೇಭೃಶಂ ಬ್ರಹ್ಮಕುಲಾವಮಾನಾತ್ ॥**" ನಾನು ಇಂದ್ರನ ವಜ್ರಾಯುಧಕ್ಕೂ ಅಂಜುವನಲ್ಲವು. ಹಾಗೆಯೇ ರುದ್ರನ ತ್ರಿಶೂಲಕ್ಕೂ ಯಮನ ಪಾಶಕ್ಕೂ ಸೂರ್ಯಚಂದ್ರ ಅಗ್ನಿವಾಯು, ಕುಬೇರ ಇವರುಗಳ ಅಸ್ತ್ರಗಳಿಗೂ ಭಯಪಡುವನಲ್ಲವು; ಆದರೆ ಬ್ರಹ್ಮವಿತ್ತಿನ ಕುಲಕ್ಕೆ ಮಾಡಿದ ಅಪರಾಧಕ್ಕೆ ಮಾತ್ರ ತೀವ್ರವಾಗಿ ನಡಗುತ್ತೇನೆಂದು ರಹೋಗಣರಾಜನು ಹೇಳಿರುತ್ತಾನೆ. ಹಾಗೆಯೇ ಬ್ರಾಹ್ಮಣರೂ ಕೂಡ ಯೋಗ್ಯರಾದ ಭಾಗವತೋತ್ತಮರಾದ ಶೂದ್ರಾದಿಗಳನ್ನು ವಿಶೇಷ ಸನ್ಮಾನಿಸತಕ್ಕದ್ದು. "**ಚಂಡಾಲಮಪಿ ವೃತ್ತಸ್ಥಂ ತಂದೇವಾ ಬ್ರಾಹ್ಮಣಂ ವಿದುಃ**" "**ಏತೈಸ್ಸಮೇತಶ್ಶೂದ್ರೋಪಿ ವಾರ್ಧಕೇಮಾನ ಮರ್ಹತಿ**" "**ಭಕ್ತಿರಷ್ಟವಿಧಾಹ್ಯೇಷಾ ಯಸ್ಮಿನ್ ಮ್ಲೇಚ್ಛೇಪಿ ವರ್ತತೇ । ತಸ್ಮೈದೇಯಂ ತತೋಗ್ರಾಹ್ಯಂ ಸಚಪೂಜ್ಯೋ ಯಥಾಹ್ಯಯಮ್** ( ಗಾರುಡ ಪುರಾಣ) ಎಂಬೀ ಪ್ರಮಾಣಗಳು ಆತನು ಪೂಜಾರ್ಹನೆಂದು ಹೇಳುತ್ತವೆ. ಮುಂದೆ **ತಸ್ಮೈದೇಯಂ ತತೋಗ್ರಾಹ್ಯಂ** ಎಂದಿರುತ್ತದೆ. ಇದಕ್ಕೆ ಕೆಲವರು ಅಂತಹ ಭಾಗವತ ಶೂದ್ರನಿಗೆ ಹೆಣ್ಣು ಕೊಟ್ಟು ಹೆಣ್ಣನ್ನು ಪರಿಗ್ರಹಿಸಬಹುದು ಎಂಬರ್ಥವಲ್ಲವು. ಅಂತಹವನಿಗೆ ಉಪದೇಶವನ್ನು ಕೊಟ್ಟೂ ಉಪದೇಶವನ್ನು ಅಂತವನಿಂದ ಹೊಂದಬಹುದು ಎಂಬರ್ಥವು.॥

ಈ ಬ್ರಾಹ್ಮಣಾದಿ ವೃತ್ತಿ ನಿಯಮವು ಜೀವಾತ್ಮನಿಗೆ ಜನ್ಮತಃ ಬಂದ ಶರೀರವನ್ನು ಅನುಸರಿಸಿದುದು ; ಆದುದರಿಂದ ಆ ದೇಹವಿರುವವರೆಗೂ ಆ ವೃತ್ತಿನಿಯಮವು ಅಂಟಿದುದು. ಅದು ಜೀವಾತ್ಮನಿಗೆ ಸೇರಿದುದಲ್ಲವೆಂಬ ಭಾವವನ್ನೂ ಇಲ್ಲಿ ಗ್ರಹಿಸತಕ್ಕದ್ದಾಗಿರುತ್ತದೆ.

ಈ ಬ್ರಾಹ್ಮಣಾದಿ ಸಂಬಂಧವು " ಗುಣಕರ್ಮವಿಭಾಗಶಃ ಎಂದು ಸ್ವಾಮಿ ಶ್ರೀ ಕೃಷ್ಣ ಭಗವಾನರವರು ಹೇಳಿದುದು, ಪೂರ್ವ ಜನ್ಮದ ಕರ್ಮ ಮತ್ತು ಸಾತ್ವಿಕಾದಿ ಗುಣಗಳಿಗನುಗುಣವಾಗಿ ಉಂಟಾದ ಜನ್ಮವಾದುದರಿಂದ ಸಾತ್ವಿಕನು ಬ್ರಾಹ್ಮಣಯೋನಿಯಲ್ಲೂ ರಾಜಸಿಯು ಕ್ಷತ್ರಿಯ ಕುಲದಲ್ಲೂ ಹೀಗೆ ಜನಿಸುವನು ಎಂದು ಹೇಳಲ್ಪಟ್ಟಿತು. ಇದರ ಮೇಲೆ ಆಕ್ಷೇಪಿಸಬಹುದೇನೆಂದರೆ ಬ್ರಾಹ್ಮಣ ಕುಲದಲ್ಲಿ ಹುಟ್ಟಿದವನೂ ಕೂಡ ರಾಜಸ ತಾಮಸ ವೃತ್ತಿಯನ್ನು ಅವಲಂಬಿಸಿರುವದನ್ನು ನಾವು ಕಣ್ಣಾರ ನೋಡಿರುವೆವಲ್ಲವೇ ಎಂದರೆ ಇದಕ್ಕೆ ಸಮಾಧಾನವನ್ನು ಹೇಳುವೆವು. ಪೂರ್ವ ಜನ್ಮ ಸುಕೃತ ಸಾತ್ವಿಕ ಭಾವದಿಂದ ಬ್ರಾಹ್ಮಣ ಜನ್ಮವು. ಈಗ ಆತನ ಪ್ರವೃತ್ತಿಗಳನ್ನು ಸಾತ್ವಿಕವಾಗಿಟ್ಟುಕೊಳ್ಳದೆ ರಾಜಸಿ ತಾಮಸಿಯಾಗಿ ಪ್ರವೃತ್ತಿ ಇರುವದರಿಂದ ಮುಂದೆ ಕ್ಷತ್ರಿಯ ಶೂದ್ರ ಜನ್ಮವುಂಟೆಂಬುದು ವ್ಯಕ್ತವು. ಬ್ರಾಹ್ಮಣಾದಿ ಜನ್ಮಭೇದವಿಲ್ಲದ ಪಂಗಡದವರಲ್ಲಿ ಹೇಗೆ ಎಂದು ಕೇಳಬಹುದು. ಹಿಂದೆ ಸಾತ್ವಿಕನಾದವನು ಸಾತ್ವಿಕಕುಲದಲ್ಲೇ ಹುಟ್ಟುವನು. ತಾಮಸಿಯು ತಾಮಸಿಯ ಕುಲದಲ್ಲೇ ಜನಿಸುವನು ಎಂಬುದು ಸಮಾಧಾನವು. ಶೂದ್ರನೂ ಕೂಡ ಈ ಜನ್ಮದಲ್ಲಿ ಸಾತ್ವಿಕ ವೃತ್ತಿಯನ್ನು ಅವಲಂಬಿಸಿದರೆ ಸಮ್ಮಾನಾರ್ಹನೆಂದು ಹಿಂದೆಯೇ ಉಪಪಾದಿಸಲ್ಪಟ್ಟಿರುತ್ತದೆ.

**ಮೂಲಕ್ಕೆ ಅವತಾರಿಕೆಯು**—ಹಿಂದಿನ ಶ್ಲೋಕಗಳಲ್ಲಿ ಚಾತುರ್ವರ್ಣ್ಯದ ಗುಣಕರ್ಮ ವಿಭಾಗಗಳು ಹೇಳಲ್ಪಟ್ಟವು; ಹಾಗೆಯೇ ಅವರವರುಗಳಿಗೆ ಶಾಸ್ತ್ರವಿಹಿತ ಕರ್ಮಗಳೂ ಹೇಳಲ್ಪಟ್ಟವು. ಈಗ ಈ ಶ್ಲೋಕದಲ್ಲಿ ಈ ನಾಲ್ಕು ವರ್ಣದವರೂ ಅವರವರಿಗೆ ಶಾಸ್ತ್ರದಲ್ಲಿ ವಿಹಿತವಾಗಿರುವ ಕರ್ಮಗಳನ್ನು ಅನುಷ್ಠಿಸಿ,ಆ ಕರ್ಮಗಳಲ್ಲಿ. ಕರ್ತೃತ್ವಮಮತಾ ಫಲಗಳನ್ನು ತ್ಯಾಗಮಾಡಿ, ಪರಮ ಪುರಷಾರಾಧನೆಯ ರೂಪದಲ್ಲಿ ಪರಮಾತ್ಮನಲ್ಲಿ ಸಮರ್ಪಿಸಿದರೆ, ಈ ಕರ್ಮಾನುಷ್ಠಾನವೇ ಕ್ರಮೇಣ ಮೋಕ್ಷದಾಯಕವೆಂದು ಈ ಶ್ಲೋಕದ ಪೂರ್ವಾರ್ಧದಿಂದ ಪ್ರತಿಜ್ಞಾವಾಕ್ಯವಾಗಿ ಹೇಳಿದುದನ್ನೆ ಮುಂದೆ ೫೬ನೆಯ ಶ್ಲೋಕದ ಉತ್ತರಾರ್ಧದಲ್ಲಿ "ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ" ಎಂದು ನಿಗಮನ ಮಾಡಿಹೇಳುತ್ತಾರೆ. ಹೀಗೆ ಹಿಂದೆಯೂ "ನಿಯತಂ ಕುರು ಕರ್ಮ ತ್ವಂ"(ಗೀ. ೩-೮)ಎಂದು ಹೇಳಿರುವಹಾಗೆ ಸ್ವಕರ್ಮನಿರತನಾಗಿ ಆ ಕರ್ಮಗಳನ್ನು ಪರಮಾತ್ಮನ್ನಿಗೆ ಸಮರ್ಪಿಸಿದರೆ, ಅದು ಹೇಗೆ ಮೋಕ್ಷದಾಯಕವಾಗುತ್ತದೆಂಬುದನ್ನು ತಿಳಿಸುತ್ತೇನೆಂದು ಉತ್ತರಾರ್ಧದಿಂದ ಆರಂಭಿಸಿ ೫೬ನೆಯ ಶ್ಲೋಕದಲ್ಲಿ ಮುಗಿಸುತ್ತಾರೆ. ಈ ಶ್ಲೋಕದ ಉತ್ತರಾರ್ಧದಲ್ಲಿ ಹೇಳಲ್ಪಡುವದು ಏನು ? ಎಂದರೆ ಕರ್ಮಯೋಗವು ತನ್ನಿಂದುಂಟಾಗುವ ಸಿದ್ಧಿಯಾದ ಆತ್ಮಾವಲೋಕನವನ್ನು ಹೇಗೆ ಉಂಟುಮಾಡುತ್ತದೆಂಬುದನ್ನು ಹೇಳುತ್ತೇನೆ ಕೇಳು ಎಂದು ಹೇಳಿದರು. ಈ ವಿಷಯವೂ ಹಿಂದೆಯೇ ಉಪಪಾದಿತವು; ಆದರೂ ನಿಗಮನಾಧ್ಯಾಯವಾದುದರಿಂದ ಪುನಃ ಹೇಳುತ್ತಾರೆ. ಜ್ಞಾನಯೋಗದ ಆವಶ್ಯಕತೆ ಇಲ್ಲದೇನೆ, ಅದರ ಫಲವಾದ ಆತ್ಮಾವಲೋಕನ ಸಿದ್ಧಿಯು ಹೇಗೆ ಉಂಟಾಗುತ್ತದೆಂಬುದನ್ನು ತಿಳಿಸುತ್ತಾರೆ-ಇದನ್ನು ಮುಂದಿನ ೪೯ನೆಯ ಶ್ಲೋಕದಲ್ಲಿ ಹೇಳಿ ಮುಗಿಸುತ್ತಾರೆ - ಕರ್ಮ ಯೋಗದಿಂದಲೇ ಜ್ಞಾನಯೋಗದ ಸಿದ್ಧಿಯಾದ ಆತ್ಮಾವಲೋಕನವೂ ಲಭಿಸುತ್ತದೆಂದು ಹೇಳಲುಪಕ್ರಮಿಸುತ್ತಾರೆ.

**ಅರ್ಥವು—ಸ್ವೇಸ್ವೇಕರ್ಮಣ್ಯಭಿರತಃ**-ಚಾತುರ್ವರ್ಣ್ಯದವರೂ ಅವರವರಿಗೆ ನಿಯತವಾದ ಕರ್ಮಗಳಲ್ಲಿ ಶ್ರದ್ಧೆಯುಳ್ಳವರಾದರೆ, **ನರಃ**-**ಐಹಿಕ ಭೋಗೇ ನರಮತೀತಿ**-ನರಃ ಎಂಬ ವ್ಯುತ್ಪತ್ತಿಯ ಮೂಲಕ ಐಹಿಕ ಸುಖಗಳಲ್ಲಿ ರಮಿಸದೇ ಇದ್ದರೆ ಎಂದರೆ, ಮಾಡಿದ ಕರ್ಮಗಳನ್ನು ಪರಮಾತ್ಮನಲ್ಲಿ

**ಮೂ. ಸ್ವೇಸ್ವೇ ಕರ್ಮಣ್ಯಭಿರತಸ್ಸಂಸಿದ್ಧಿಂ ಲಭತೇ ನರಃ।**
**ಸ್ವಕರ್ಮನಿರತಸ್ಸಿದ್ಧಿಂ ಯಥಾವಿನ್ದತಿ ತಚ್ಛೃಣು ॥ ೪೫ ॥**

---

ಸಮರ್ಪಿಸುವ ವೈರಾಗ್ಯವುಳ್ಳ ಪುರುಷನು, ಸಂಸಿದ್ಧಿಂ-ಕ್ರಮೇಣ ಪರಮ ಪದವನ್ನು, **ಲಭತೇ** - ಹೊಂದುವನು; ಇದರಲ್ಲಿ ಸಂಶಯವು ಬೇಕಿಲ್ಲವು. ಇದೇ ಮುಖ್ಯವಾದ ಗೀತೋಪದೇಶವು ಪ್ರತಿಯೊಬ್ಬನು ತನ್ನ ಇತಿಕರ್ತವ್ಯತೆಯನ್ನು ಅನುಷ್ಠಿಸಿ,ಅವುಗಳಲ್ಲಿ ಫಲಮಮತಾದಿಗಳನ್ನು ತೊರೆದು ಭಗವಂತನಲ್ಲಿ ಸಮರ್ಪಿಸಿಬಿಟ್ಟರೆ ಕರುಣಾಸಾಗರನು ಅಂತವನ ವಿಷಯದಲ್ಲಿ ಅನುಗ್ರಹವನ್ನು ತೋರಿಸಿ,ಆತನಿಗೆ ವಿಹಿತವಾದ ಉಪಾಯಾನುಷ್ಠಾನವನ್ನು ಮಾಡುವ ಹಾಗೆ ಸಿದ್ಧೋಪಾಯನಾಗಿ ಪ್ರೇರಿಸಿ, ಆತನಿಗೆ ಮೋಕ್ಷವನ್ನು ಕೊಡುವದರಲ್ಲಿ ಸಂದೇಹವಿಲ್ಲವು. ಇದಕ್ಕೆ ಜಾನುಶ್ರುತಿ ಜನಮೇಜಯ, ಯುಧಿಷ್ಠಿರಾದಿಗಳೆಲ್ಲಾ ನಿದರ್ಶನವು. ಇವರುಗಳೆಲ್ಲಾ, ತಾವು ಮಾಡತಕ್ಕ ಕರ್ಮಗಳನ್ನು ಸರ್ವೇಶ್ವರನು ಮೆಚ್ಚುವಹಾಗೆ ಮಾಡಿ ಭಗವಂತನಲ್ಲಿ ಸಮರ್ಪಿಸಿದವರು. ಅಂತವರಿಗೆ ಸರ್ವೇಶ್ವರನೇ ಪರಮ ಕೃಪೆಯನ್ನೂ, ತನ್ನನ್ನು ಹೊಂದುವ ಉಪಾಯವನ್ನೂ, ತೋರಿಸಿ,ಆ ಉಪಾಯಾನುಷ್ಠಾನದಿಂದ ಪ್ರೀತನಾಗಿ ಅವರು ತನ್ನನ್ನು ಹೊಂದುವಹಾಗೆ ಮಾಡಿಕೊಳ್ಳುವನು. ಈ ಅಭಿಪ್ರಾಯವನ್ನೇ ದ್ವಿತೀಯಸ್ಕಂಧ ಭಾಗವತದ ಸಪ್ತಮಾಧ್ಯಾಯದಲ್ಲಿ ಉಪಪಾದಿತವಾಗಿ, ಹಾಗೆ ಆಶ್ರಯಿಸಿದ ಕಾಲದಲ್ಲಿ ಸ್ವಲ್ಪವ್ಯತ್ಯಾಸದಿಂದ ಸ್ತ್ರೀ ಶೂದ್ರ ತಿರ್ಯಗ್ಜನ್ಮವು ಪ್ರಾಪ್ತವಾದರೂ,ಆಗಲೂ ಭಾಗವತಾಶ್ರಯಣರೂಪವಾದ ಉಪಾಯಮೂಲಕ ಸರ್ವೇಶ್ವರನು ಮುಕ್ತಿಯನ್ನು ದಯಪಾಲಿಸಿಸುವ ಅನೇಕ ನಿದರ್ಶನಗಳುಂಟೆಂದು ಚತುರ್ಮುಖನು ಶ್ರೀನಾರದನಿಗೆ ಉಪದೇಶಿಸುತ್ತಾನೆ.--**ವೇದಾಹ ಮಙ್ಗ ಪರಮಸ್ಯಹಿ ಯೋಗಮಾಯಾಂ ಯೂಯಂ ಭವಶ್ಚ ಭಗವಾ ನಥ ದೈತ್ಯವರ್ಯಃ। ಪತ್ನೀಮನೋಸ್ಸಚ ಮನುಶ್ಚ ತದಾತ್ಮಜಾಶ್ಚ ಪ್ರಾಚೀನಬರ್ಹಿರಭುರಙ್ಗ ಉತಧ್ರುವಶ್ಚ ॥ ಇಕ್ಷ್ವಾಕುರೈಳಮುಚುಕುಂದ ವಿದೇಹ ಗಾಧಿರಘ್ವಂಬರೀಷ ಸಗರಾ ಗಯ ನಾಹುಷಾದ್ಯಾಃ। ಮಾಂಧಾತ್ರಲರ್ಕಶತಧನ್ವನ್ ರನ್ತಿದೇವಾ ದೇವವ್ರತೋ ಬಲಿರಮೂರ್ತರಯೋದಿಲೀಪಃ ಸೌಭರ್ಯುದಙ್ಕ ಶಿಬಿದೇವ ಪಿಪ್ಪಲಾದ ಸ್ಸಾರಸ್ವತೋದ್ಧವಪರಾಶರ ಭೂರಿಷೇಣಾಃ। ಯೇನ್ಯೇ ವಿಭೀಷಣ ಹನುಮದುಪೇನ್ದ್ರ ದತ್ತ ಪಾರ್ಥಾರ್ಷ್ಟಿಷೇಣ ವಿದುರಶ್ರುತದೇವವರ್ಯಾಃ। ತೇವೈ ವಿದನ್ತ್ಯತಿತರನ್ತಿ ಚ ದೇವಮಾಯಾಂ ಸ್ತ್ರೀಶೂದ್ರ ಹೂಣಶಬರಾ ಅಪಿ ಪಾಪಜೀವಾಃ। ಯದ್ಯದ್ಭುತಕ್ರಮ ಪರಾಯಣಶೀಲ ಶಿಕ್ಷಾಸ್ತಿರ್ಯಗ್ಜನಾ ಅಪಿಕಿಮುಶ್ರುತಧಾರಣಾಯೇ ॥** ಈ ಕೊನೆಯ ಶ್ಲೋಕಾರ್ಥವೇ“**ಪಶುರ್ಮನುಷ್ಯಃ ಪಕ್ಷೀವಾಯೇಚ ವೈಷ್ಣವಸಂಶ್ರಯಾಃ ತೇನೈವ ತೇ ಪ್ರಯಾಸ್ಯನ್ತೇ ತದ್ವಿಷ್ಣೋಃ ಪರಮಂ ಪದಮ್** ॥” ಎಂಬಲ್ಲೂ **ಉಪಪಾದಿತವು.**

ಈ ಸಂದರ್ಭದಲ್ಲಿ ಒಂದು ಪೂರ್ವಪಕ್ಷವು ಉಂಟಾಗಬಹುದು. ಈ ಕರ್ಮಯೋಗಾದಿಗಳ ಮೂಲಕ ಉಪಾಸನವೇ ಮೋಕ್ಷೋಪಾಯವಾಗಿ ಈ ಗೀತೆಯಲ್ಲಿ ಮುಖ್ಯವಾಗಿ ಹೇಳಿರುವಾಗ ಆ ಮೋಕ್ಷೋಪಾಯದಲ್ಲಿ ಶ್ರೀ ವ್ಯಾಸ ಸೂತ್ರದ ಅಪಶೂದ್ರಾಧಿಕರಣದಲ್ಲಿ ಹೇಳಿರುವಹಾಗೆ, ಶೂದ್ರನಿಗೆ ಅಧಿಕಾರವೇ ಇಲ್ಲದಿರುವಾಗ,ಚಾತುರ್ವರ್ಣ್ಯದಲ್ಲಿ ಶೂದ್ರಾದಿ ವಿಹಿತಕರ್ಮಪ್ರಶಂಸೆಯು ಏತಕ್ಕೆ? ಅಂತವರಿಗೂ ಕೂಡ ಅನ್ವಯಿಸದೇ ಇರುವಹಾಗೆ **ಸ್ವೇಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ದ್ವಿಜಃ** ಎಂದು ಹೇಳದೆ, ನರಃ ಎಂದು ಸಾಮಾನ್ಯವಾಗಿ ಹೇಳಲ್ಪಟ್ಟ ಕಾರಣವೇನು ? **ದ್ವಿಜಃ** ಎಂದು **ಹೇಳಿಬಿಟ್ಟಿದ್ದರೆ** ತೊಂದರೆಯೇ ಇರುತ್ತಿರಲಿಲ್ಲವಲ್ಲಾ ? ಎಂದರೆ ಗೀತೆಯು ಗುರೂಪಾಯವಾಗಿ ಬ್ರಾಹ್ಮಣಕ್ಷತ್ರಿಯ ವೈಶ್ಯರಿಗೆ ಮಾತ್ರ ಅಧಿಕಾರವುಳ್ಳ ಉಪಾಸನೆಯನ್ನು ಮಾತ್ರವೇ ಬೋಧಿಸಲಿಲ್ಲವು. ಲಘೂಪಾಯವಾಗಿ ಶೂದ್ರಾದಿಗಳಿಗೂ, ಅಶಕ್ತರಾದ ದ್ವಿಜರಿಗೂ, ಅಧಿಕಾರವಿರುವ

ಶರಣಾಗತಿಯನ್ನೂ ಕೂಡ ಉಪಪಾದಿಸಿಸುತ್ತದೆ. ಪ್ರಾಪ್ತ 'ಸ್ಥಳಗಲ್ಲಿ ಪ್ರದರ್ಶಿಸಿರುತ್ತೇವೆ.' ನರಃ ಎಂಬ ಶಬ್ದಕ್ಕೆ ಮೋಕ್ಷಾರ್ಥಿ ಎಂದು ಹೇಳಬಹುದು, ಅಥವಾ ಮೇಲಿನ ಶ್ಲೋಕವಾದ, ಪಕುರ್ಮನುಷ್ಯಃ ಪಕ್ಷೀವಾ ಎಂದು ಸಾಮಾನ್ಯವಾಗಿ ಜೀವಾತ್ಮನು ಎಂದು ಅರ್ಥ ಮಾಡ ಬಹುದು ಹೇಗೆಂದರೆ ರೀಙ್ ಕ್ಷಯೇ ಎಂಬ ಧಾತುವಿನ ಪ್ರಕಾರ ಎಂದರೆ ನಾಶವುಳ್ಳದ್ದು ಎಂಬರ್ಥವು, ನರಃ ಎಂದರೆ ನಾಶರಹಿತವಾದುದು ಸಾಮಾನ್ಯವಾಗಿ ಎಲ್ಲಾ ಜೀವಾತ್ಮರೂ ನರ ಶಬ್ದದಿಂದ ಹೇಳಲ್ಪಟ್ಟರು. ಈ ಅರ್ಥವು ಪ್ರಕೃತಕ್ಕೆ ಹೇಗೆ ಉಪಯುಕ್ತವೆಂದರೆ - ಹೀಗೆ ಕರ್ಮಯೋಗ ಉಪಾಸನಗಳನ್ನು ಅನುಷ್ಠಿಸುತ್ತಿರುವಾಗ ಪ್ರಾರಬ್ಧವು ತೊಲಗುವದಕ್ಕೆ ಮುಂಚಿತ ವಾಗಿಯೇ ಕಾರಣಾಂತರದಿಂದ ವಿದುರಾದಿಗಳಹಾಗೆ ಶೂದ್ರ ತಿರ್ಯಗಾದಿ ಜನ್ಮಗಳು ಪ್ರಾಪ್ತವಾದರೂ ಭಾಗವತ ಸಂಶ್ರಯಣಾದಿ ಶರಣಾಗತಿ ರೂಪ ಉಪಾಯಾನುಷ್ಠಾನದಿಂದಲೇ ಅವರುಗಳಿಗೂ ಮುಕ್ತಿಯುಂಟೆಂದು ತಿಳಿಸುವದಕ್ಕಾಗಿ ಈ ಶೂದ್ರಾದಿ ಇತಿಕರ್ತವ್ಯತಾಗ್ರಹಣವೆಂದು ಭಾವಿಸತಕ್ಕದ್ದು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟೇ ಹಿಂದೆ "ಮಾಂ ಹಿ ಪಾರ್ಥವ್ಯಪಾಶ್ರಿತ್ಯ ಯೇಽಪಿ ಸ್ಯುಃ, ಪಾಪಯೋನಯಃ। ಸ್ತ್ರಿಯೋ ವೈಶ್ಯಾ ಸ್ತಥಾ ಶೂದ್ರಾಸ್ತೇಽಪಿಯಾನ್ತಿ ಪರಾಂಗತಿಮ್"( ಗೀ ೯-೩೨) ಎಂದು ಹೇಳಲ್ಪಟ್ಟಿತು. ಈ ಸಂದರ್ಭದಲ್ಲೇ ಚರ್ಚಿಸತಕ್ಕ ಒಂದು ವಿಷಯವುಂಟು, ಏನೆಂದರೆ? ಶ್ರೀವಿದುರರು ಪೂರ್ವಜನ್ಮದಲ್ಲಿ ಭಗವದುಪಾಸಕರಾಗಿ ಕಾರಣಾಂತರದಿಂದ ಶೂದ್ರಯೋನಿ ಯಲ್ಲಿ ಹುಟ್ಟಿದವರು, ಹಾಗೆಯೇ ಶಬರಿಯೂ ಸಹ. ಹೀಗಿರುವಾಗ ಅವರೂ ಶಬರಿಯೂ ಸಹ ಶೂದ್ರರಾಗಿದ್ದರೂ ಪೂರ್ವಜನ್ಮದ ಸಂಸ್ಕಾರ ಮಹಿಮೆಯಿಂದ ಉಪಾಸನಕ್ಕೆ ಅರ್ಹತೆ ಇತ್ತೆಂದೂ ಆ ಕಾರಣದಿಂದ ಭಗವದುಪಾಸನವನ್ನು ಮಾಡಿದುದರಿಂದ ಮೋಕ್ಷವನ್ನು ಹೊಂದಿದರೆಂದೂ, ಕೆಲವರು ಅಶಾಸ್ತ್ರೀಯ ವಾದವನ್ನು ಹೇಳುತ್ತಾರೆ. ಶ್ರೀ ವಿದುರರು ಈ ಶ್ಲೋಕವಲ್ಲಿ ಹೇಳಿರುವ ಸ್ವಧರ್ಮ ನಿಷ್ಠೆಗೆ ತುಂಬಾ ಪ್ರಾಮುಖ್ಯತೆಯನ್ನು ಕೊಟ್ಟವರು. ವಿವಾಹಾದಿಗಳನ್ನು ಸ್ವವರ್ಣ ದಲ್ಲೇ ನಡೆಸಿದವರು. ಧೃತರಾಷ್ಟ್ರನು ಬ್ರಹ್ಮವಿದ್ಯೆಯ ವಿಷಯದಲ್ಲಿ ಉಪದೇಶಿಸು ಎಂದು ಪ್ರಾರ್ಥಿಸಿದರೆ, ಶೂದ್ರನಾಗಿರುವದರಿಂದ ತನಗೆ ಸಂಸ್ಕಾರಮೂಲಕವಾಗಿ ಜ್ಞಾನವಿದ್ದರೂ "ಶೂದ್ರ ಯೋನಾ ವಹಂಜಾತೋನಾತೋನ್ಯದ್ವಕ್ತು ಮುತ್ಸಹೇ" ಎಂದು ಹೇಳಿ ತಾವು ಉಪದೇ ಶಿಸದೆ, ಉಪದೇಶವನ್ನು ಹೇಳಿಸಿದ,ಮತ್ತು ವರ್ಣಾಶ್ರಮಧರ್ಮವನ್ನು ಉಲ್ಲಂಘಿಸಲು ಇಷ್ಟವಿರದ ಮಹನೀಯರು. ಶೂದ್ರನಿಗೆ ಉಪಾಸನವು ಅಪಶೂದ್ರಾಧಿಕರಣದಲ್ಲಿ ನಿಷೇಧಿಸಲ್ಪಟ್ಟಿದ್ದರೂ ಉಪಾಸನವನ್ನು ಅನುಷ್ಠಿಸುವರೇ? ಶೂದ್ರನಿಗೆ ಬಹುಸುಲಭವಾದ ಭಾಗವತ ಸಂಶ್ರಯಣಮಾರ್ಗವು ವಿಧಿಸಲ್ಪಟ್ಟಿರುವಾಗ ಲಘುಮಾರ್ಗವನ್ನು ತ್ಯಜಿಸಿ ಭಗವನ್ನಿಗ್ರಹ ರೂಪದಲ್ಲಿ ಅಪಾಯಕರವಾದ ಗುರುಮಾರ್ಗವನ್ನು ಅವಲಂಬಿಸುವರೇ ? ಎಂದಿಗೂ ಇಲ್ಲವು. ಹಾಗೆ ಉಪಾಸನ ಮಾಡಿದರೆಂದು ಹೇಳುವವರಿಗೆ ಅಗಾಧವಾದ ಭಾರತದಲ್ಲಿ ಎಲ್ಲಿ ಪ್ರಮಾಣವಿದೆಯೋ ದಾಸನಿಗೆ ತಿಳಿಯದು. ಶಬರಿಯಾದರೋ ಉಪಾಸನೆಯನ್ನು ಮಾಡಲಿಲ್ಲವು. ಭಾಗವತ ಸಂಶ್ರಯಣವನ್ನೇ ಅವಲಂಬಿಸಿ ದಳು ಎಂಬುದಕ್ಕೆ ತೇಷಾಂ ಮಿಚ್ಛಾಮ್ಯಹಂ ಗನ್ತುಂ ಸಮೀಪಂ ಭಾವಿತಾತ್ಮನಾಂ। ಮುನೀನಾ ಮಾಶ್ರಮೋ ಯೇಷಾ ಮಹಂಚ ಪರಿಚಾರಿಣೀ (ಅರ ೭೪ ೨೯) ಎಂಬಲ್ಲಿ ಪ್ರಮಾ ಣವಾಗಿ ಅಹಂಚ ಪರಿಚಾರಿಣೀ ಎಂದು ಹೇಳಲ್ಪಟ್ಟಿರುತ್ತದೆ, ಒಂದು ವೇಳೆ ಶ್ರೀವಿದುರಾದಿ ಗಳು ತಮ್ಮ ಈಗಿನ ಜನ್ಮಕ್ಕನುಗುಣವಾದ ಮೋಕ್ಷೋಪಾಯವನ್ನು ಅವಲಂಬಿಸದಿದ್ದರೂ,ಹಿಂದಿನ ಜನ್ಮದಲ್ಲಿ ಮಾಡಿದ ಉಪಾಸನಾರೂಪವಾದ ಉಪಾಯಾನುಷ್ಠಾನವೇ ಸಾಕಾಗಿ ಪ್ರಾರಬ್ಧಮಾತ್ರ ಕಳೆಯದೇ ಇದ್ದುದರಿಂದ ಶೂದ್ರ ಜನ್ಮವು ಪ್ರಾಪ್ತವಾಗಿ ಈ ದೇಹಾವಸಾನದ ಒಡನೆಯೇ ಹಿಂದಿನ ಉಪಾಸನವೇ ಫಲವನ್ನುಂಟುಮಾಡಬಹುದು. ಹಾಗೆಯೇ ವಿಷ್ಣು ಧರ್ಮ ಪ್ರಮಾಣವಿರುತ್ತದೆ, ಧರ್ಮವ್ಯಾಧಾದಯೋಽಪ್ಯನ್ಯೇ ಪೂರ್ವಾಭ್ಯಾಸಾಜ್ಜುಗುಪ್ಸಿತೇ । ವರ್ಣಾವರತ್ವೇ ಸಂಪ್ರಾಪ್ತಾ

**ಧಾ. ಸ್ವೇಸ್ವೇ - ಯಥೋದಿತೇ ಕರ್ಮಣ್ಯಭಿರತೋ ನರಃ, ಸಂಸಿದ್ಧಿಂ-ಪರಮಪದಪ್ರಾಪ್ತಿಂ ಲಭತೇ ; ಸ್ವಕರ್ಮನಿರತೋ ಯಥಾ ಸಿದ್ಧಿಂ - ಪರಮಪದಂ ಪ್ರಾಪ್ನೋತಿ ತಥಾಶೃಣು.**

---

ಸ್ಸಂಸಿದ್ಧಿಂ ಶ್ರಮಣೀಯಥಾ" ( ವಿ.ಧ. ೧೦೨. ೩೦ ) ಅನ್ಯೇ ಧರ್ಮವ್ಯಾಧಾದಯೋಪಿ ಇತರರಾದ ಧರ್ಮವ್ಯಾಧರೇ ಮೊದಲಾದವರೂ ಕೂಡ, **ಜಗುಪ್ಸಿತೇ** - ಮನಸ್ಸಿಗೆ ಅಸಹ್ಯವಾದ, **ವರ್ಣಾವರತ್ವೇಸತಿ** - ಹೀಗೆ ವರ್ಣದ ಜನ್ಮ ಉಂಟಾದರೂ, **ಪೂರ್ವಾಭ್ಯಾಸಾತ್**-ಹಿಂದಿನ ಜನ್ಮದ ಉಪಾಸನಾಬಲದಿಂದ, **ಸಂಸಿದ್ಧಿಂ** - ಮೋಕ್ಷವನ್ನು, **ಸಂಪ್ರಾಪ್ತಾಃ** - ಹೊಂದಿದರು. ಹೀಗೆ ಹೇಳಿರುವದರಿಂದ ಶ್ರೀವಿದುರ ಧರ್ಮವ್ಯಾಧರೇ ಮೊದಲಾದವರುಗಳಿಗೆ ಹಿಂದಿನ ಜನ್ಮದಲ್ಲಿ ಮಾಡಿದ ಉಪಾಸನವೇ ಮೋಕ್ಷಕ್ಕೆ ಕಾರಣವೆಂದು ಹೇಳಿರುವದರಿಂದ, ಹೀನವಾದ ವರ್ಣವನ್ನು ಹೊಂದಿದ ಈ ಜನ್ಮದಲ್ಲಿ ಶಾಸ್ತ್ರವಿರುದ್ಧವಾಗಿ ಉಪಾಸನಾದಿಗಳನ್ನು ಅವಲಂಬಿಸಲಿಲ್ಲವೆಂಬುದು ವ್ಯಕ್ತವು. ಇದು ಅನುಮತಿ ವಾಕ್ಯವು ; ಹೇತುವು **ಪೂರ್ವಾಭ್ಯಾಸಾತ್** ಎಂಬುದು; ದೃಷ್ಟಾಂತವು **ಶ್ರಮಣೀಯಥಾ** - ಶಬರಿಯು ಹಾಗೆ, ಶಬರಿಗೆ ಉಪಾಸನದಲ್ಲಿ ಅಧಿಕಾರವಿಲ್ಲವು ಎರಡು ಕಾರಣಗಳಿಂದ; ಶಬರಿಯು ಶೂದ್ರಳು, ಮತ್ತು ಸ್ತ್ರೀಯು. ಹೀಗೆ ಉಪಾಸನಕ್ಕೆ ಅನರ್ಹಳಾದುದರಿಂದ, ಆಕೆಯು ಪರಮ ಭಾಗವತರಾದ ಮತಂಗ ಮಹರ್ಷಿಯನ್ನು ಆಶ್ರಯಿಸಿ ತತ್ಫಲವಾಗಿ ಹೇಗೆ ಮುಕ್ತಿಯನ್ನು ಹೊಂದಿದಳೋ, ಹಾಗೆಯೇ ಶ್ರೀವಿದುರರೂ, ಧರ್ಮವ್ಯಾಧಾದಿಗಳೂ ಎಂಬುದು ಶ್ಲೋಕಾಭಿಪ್ರಾಯವು. ಹೀಗೆ ಅರ್ಥಹೇಳದೆ ಅನೇಕರು ಈ ಶ್ಲೋಕಕ್ಕೆ ಅಪಾರ್ಥವನ್ನು ಈ ಜನ್ಮದಲ್ಲೂ ಉಪಾಸನೆಯನ್ನು ಮಾಡಿದರೆಂದು ಶಾಸ್ತ್ರ ವಿರುದ್ಧವಾಗಿ ಕಲ್ಪಿಸಿರುತ್ತಾರೆ, ಅದೂ ಅಲ್ಲವೆ ಪೂರ್ವಸಂಸ್ಕಾರ ಬಲದಿಂದ ವಿದುರರು ಪರಬ್ರಹ್ಮವನ್ನು ತಿಳಿದವರಾದರೂ ಧೃತರಾಷ್ಟ್ರನಿಂದ ಬ್ರಹ್ಮವನ್ನು ತಿಳಿಯುವರೀತಿಯನ್ನು ಉಪದೇಶಿಸು ಎಂದು ಪ್ರಾರ್ಥಿಸಲ್ಪಟ್ಟರೂ, ಶೂದ್ರಯೋನಿಯಲ್ಲಿ ತಾವು ಜನಿಸಿರುವದರಿಂದ ಬ್ರಹ್ಮವಿದ್ಯೆಯನ್ನು ಉಪದೇಶಿಸಲು ತಾವು ಅನರ್ಹರೆಂದು "**ಶೂದ್ರಯೋನಾವಹಂಜಾತಃ ನಾತೋಽನ್ಯದ್ವಕ್ತುಮುತ್ಸಹೇ**" ಎಂಬಲ್ಲಿ ತಿಳಿಸಿರುತ್ತಾರೆ. ಅದೂ ಅಲ್ಲದೆ ಈ ಉತ್ತರದಲ್ಲಿ ಇನ್ನೊಂದು ಸ್ವಾರಸ್ಯವೂ ಉಂಟು. ಬ್ರಹ್ಮವಿದ್ಯೆಯೆಂದು **ಬಾಯಲ್ಲಿ** ಉಚ್ಚರಿಸಲು ಇಷ್ಟವಿಲ್ಲದೆ, **ಅನ್ಯತ್** - ಇನ್ನೊಂದನ್ನು ಹೇಳು ಎಂದು ಕೇಳಿದರಲ್ಲಾ ಅದನ್ನು ನಾನು ಹೇಳಲು ಅನರ್ಹನು ಎಂದು ಪ್ರತ್ಯುತ್ತರವನ್ನು ಕೊಟ್ಟು ದೃತರಾಷ್ಟ್ರರನ್ನು ಸನತ್ಸುಜಾತರಲ್ಲಿಗೆ ಕರೆದುಕೊಂಡು ಹೋಗಿ ಅವರಿಂದ ಉಪದೇಶವನ್ನು ಹೊಂದುವಹಾಗೆ ಮಾಡಿದರು. ಬಾಯಲ್ಲಿ ಹೇಳುವದಕ್ಕೆ ಒಪ್ಪದವರು ಅದನ್ನು ಎಲ್ಲಿಯಾದರೂ ಅನುಷ್ಠಿಸುವರೇ. ಅದೂ ಹಾಗಿರಲಿ, ರಾಮಾವತಾರಿಯಾಗಿ ಶೂದ್ರನಾದ ಶಂಭಕನು ಉಪಾಸನವನ್ನು ಅತಿಕ್ರಮಿಸಿ ನಡೆಸಿದನೆಂದೂ ಶಿರಚ್ಛೇದನವನ್ನೂ ಮಾಡಿ, ಕೃಷ್ಣಾವತಾರಿಯಾಗಿ ವಿದುರರು ಉಪಾಸನೆಯನ್ನು ಮಾಡಿದರೂ ಅದು ಒಪ್ಪಿಗೆಯಾಗಿ ಆತನ ಆತಿಥ್ಯವನ್ನು ಸ್ವೀಕರಿಸಿದರು ಎಂದರೆ ಸರ್ವೇಶ್ವರನಿಗೆ ವೈಷಮ್ಯನೈರ್ಘೃಣ್ಯ ದೋಷಗಳನ್ನು ಆರೋಪಿಸಿದ ಹಾಗಾಗುವದಿಲ್ಲವೇ ? ಆದುದರಿಂದ "**ಸ್ವೇಸ್ವೇಕರ್ಮಣ್ಯಭಿರತಃ**" ಎಂದು ಹೇಳುವ ಮಹನೀಯರು ಮನುಷ್ಯಾವತಾರಿಯಾಗಿರುವದರಿಂದ ಶಾಸ್ತ್ರವಶ್ಯರೇ ಆಗಿ ಹೇಗೆ ಶಾಸ್ತ್ರಾತಿಕ್ರಮ ಕೂಡದೋ ಹಾಗೆಯೇ ವಿದುರಾದಿಗಳೂ ಕೂಡ ಶಾಸ್ತ್ರಾತಿಕ್ರಮ ಮಾಡಿದವರಲ್ಲವು ಸ್ವಾಮಿ ಶ್ರೀಕೃಷ್ಣ ಭಗವಾನರವರು ತಾವು ಎಳ್ಳಷ್ಟೂ ಕೂಡ ಶಾಸ್ತ್ರಾತಿಕ್ರಮ ಮಾಡುವದಿಲ್ಲವೆಂದು ದುರ್ಯೋಧನ ಸಭೆಯಲ್ಲಿ ಪ್ರತಿಜ್ಞೆಯನ್ನು ಮಾಡಿರುತ್ತಾರೆ. ಉದ್ಯೋಗಪರ್ವದ (೯೧-೨೫)ನೆಯ ಶ್ಲೋಕವನ್ನು ಪರಾಂಬರಿಸಿ.

**ಭಾಷ್ಯಾರ್ಥವು**—ಹಿಂದೆ ಹೇಳಿದ ವರ್ಣಾಶ್ರಮಗಳಿಗೆ ವಿಹಿತಗಳಾದ ಧರ್ಮವಿಭಾಗಗಳನ್ನು

ಹೇಳಲು ಕಾರಣವೇನು? ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರವು ದೊರಕುತ್ತದೆ. ಅವರುಗಳಿಗೆ ವಿಹಿತಕರ್ಮಗಳ ಅನುಷ್ಠಾನವು ಮೋಕ್ಷಪ್ರಾಪ್ತಿಗೆ ಪ್ರಥಮಸಾಧನವೆಂದು ಹೇಳುತ್ತಾರೆ ವಿಹಿತಕರ್ಮಗಳನ್ನು ಮಾಡದೇ ಇದ್ದರೂ, ವ್ಯತ್ಯಸ್ತವಾಗಿ ಮಾಡಿದರೂ, ಭಗವನ್ನಿಗ್ರಹಕ್ಕೆ ಸರ್ವರೂ ಪಾತ್ರರಾಗುವರು. ವಿಹಿತಕರ್ಮಗಳನ್ನು ಅನುಷ್ಠಿಸಿದರೆ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪಗಳು ತೊಲಗುವವರ ಮೂಲಕವಾಗಿ ಆರೋಗ್ಯಭಾಗ್ಯವನ್ನೂ ಹೊಂದುವದಲ್ಲದೆ, ಭಗವದನುಗ್ರಹಕ್ಕೆ ಪಾತ್ರರಾಗಿ, ಉಪಾಯವು ಕೈಗೂಡಿ ಮೋಕ್ಷವು ಲಭಿಸುತ್ತದೆ. ಈ ಶ್ಲೋಕದ ಪೂರ್ವಾರ್ಧದಿಂದ ಫಲವಾದ ಮೋಕ್ಷಪ್ರಾಪ್ತಿ ಎಂದು ಪ್ರತಿಜ್ಞಾವಾಕ್ಯವನ್ನು ಹೇಳಿ, ಉತ್ತರಾರ್ಧದಿಂದ, ಅದು ಲಭಿಸುವ ಕ್ರಮವು ಹೇಗೆ ಎಂದರೆ ತಿಳಿಸುತ್ತೇನೆ ಕೇಳು ಎನ್ನುತ್ತಾರೆ. **ಸ್ವೇಸ್ವೇ** ಎಂದರೆ **ಯಥೋದಿತೇ** - ಶಾಸ್ತ್ರಗಳಲ್ಲಿ ಈ ನಾಲ್ಕು ವರ್ಣದವರಿಗೂ ಅವರವರುಗಳಿಗೆ ವಿಧಿಸಿರುವ; **ಕರ್ಮಣಿ** ಕರ್ಮದಲ್ಲಿ, **ಅಭಿರತಃ** - ಆಸಕ್ತಿಯಿಂದ ಅನುಷ್ಠಿಸುವ **ನರಃ** - ಮೋಕ್ಷಾರ್ಥಿಯು, **ಸಂಸಿದ್ಧಿಂ** - ಪರಮಪದ ಪ್ರಾಪ್ತಿಯನ್ನು, **ಲಭತೇ** – ಹೊಂದುವನು, **ಸ್ವಕರ್ಮನಿರತಃ** – ತನಗೆ ವಿಹಿತವಾಗಿ ಸ್ವಂತವಾದ ಕರ್ಮದಲ್ಲಿ ಆಸಕ್ತಿ ಇರುವವನು, **ಯಥಾ** – ಹೇಗೆ, **ಸಿದ್ಧಿಂ** - ಆ ಪರಮಪದ ಪ್ರಾಪ್ತಿಯನ್ನು, **ಪ್ರಾಪ್ನೋತಿ** - ಹೊಂದುವನೋ, ಇದು ಮೂಲದ ವಿಂದತಿ ಎಂಬುದರ ಭಾಷ್ಯವು, **ತಥಾ**-ಹಾಗೆ ಎಂದರೆ ಆ ಕ್ರಮವನ್ನು, **ಶೃಣು** ಸಾವಧಾನದಿಂದ ಕೇಳು. ಇಲ್ಲಿ **ಸಂಸಿದ್ಧಿ** ಎಂಬ ಶಬ್ದಕ್ಕೆ ಪರಮಪದವೆಂಬ ಅರ್ಥವು ಹೇಗೆ? ಎಂದರೆ, ನಿಗಮನದಲ್ಲಿ ೫೬ನೆಯ ಶ್ಲೋಕದಲ್ಲಿ "**ಮತ್ಪ್ರಸಾದ ವಾಪ್ನೋತಿ ಶಾಶ್ವತಂ ಪದ ವ ವ್ಯಯಮ್**" ಎಂದು ಈ ಸಂಸಿದ್ಧಿ ಪದವು ವ್ಯಾಖ್ಯಾತವಾಗಿರುವದರಿಂದ ಹಾಗೆವ್ಯಾಖ್ಯಾನವು. ಹಾಗಾದರೆ **ಸ್ವೇಸ್ವೇ ಕರ್ಮಣಿ ಅಭಿರತಿ**ಯು ಸಾಕ್ಷಾತ್ತಾಗಿ ಉಪಾಯವೋ ಎಂದರೆ ಉತ್ತರಾರ್ಧದಿಂದಲೇ ವ್ಯಕ್ತವು. ಸಾಕ್ಷಾತ್ತಾಗಿಯಲ್ಲವೆಂದು ದ್ವಿತೀಯಾಧ್ಯಾಯದ ಕೊನೆಯ ಶ್ಲೋಕದ ಮತ್ತು **ಕರ್ಮಣೈವಹಿಸಂಸಿದ್ಧಿ ಮಾಸ್ಥಿತಾ ಜನಕಾದಯಃ** (೩. ೨೦) ಎಂಬ ಶ್ಲೋಕದ ವ್ಯಾಖ್ಯಾನದಲ್ಲೂ ನಿಪುಣತರವಾಗಿ ವ್ಯಾಖ್ಯಾತವು. ಆದುದರಿಂದ ಸಾಕ್ಷಾತ್ತಾಗಿ ಉಪಾಯವಿಲ್ಲದೆ ಕ್ರಮೇಣ ಉಪಾಯವು. ಶಾಸ್ತ್ರಜ್ಞರು ಇದನ್ನು **ಅವ್ಯವಹಿತೋಪಾಯ**ವೆಂದು ಭಾವಿಸುವದಿಲ್ಲವು. ವ್ಯವಹಿತೋಪಾಯವೆಂದು ಭಾವಿಸುವರು. ಶ್ರೀ ದೇಶಿಕರವರು ಇದನ್ನು **ಸದ್ವಾರಕೋಪಾಯ**ವೆಂದೂ **ಅದ್ವಾರಕ**ವಲ್ಲವೆಂದೂ, ಕೇವಲ **ಸ್ವೇಸ್ವೇಕರ್ಮಣ್ಯಭಿರತಿ**ಯು ಮೋಕ್ಷದಾಯಕವಲ್ಲವೆಂದೂ ತಾವು ಅನುಗ್ರಹಿಸಿರುವ ನ್ಯಾಯಸಿದ್ಧಾಂಜನದಲ್ಲಿ "**ನಕೇವಲಂ ಕರ್ಮ ಜ್ಞಾನಸಮುಚ್ಚಿತೋಽಪಿ ಮೋಕ್ಷಹೇತುಃ**" ಎಂದು ತಿಳಿಸಿರುತ್ತಾರೆ. ಹಿಂದೆ "**ನಾಹಂ ವೇದೈಃ**" ಎಂಬ (೧೧. ೧೧ ) ಶ್ಲೋಕದಲ್ಲೂ ಈ **ಅಭಿಪ್ರಾಯ**ವೇ ಉಪಪಾದಿಸಲ್ಪಟ್ಟಿತು. ವರ್ಣತ್ರಯದವರಿಗೆ ಅವರವರಿಗೆ ವಿಹಿತ ನಿತ್ಯ ನೈಮಿತ್ತಿಕಾದಿಗಳೇನೋ ಉಂಟು; ಅವುಗಳನ್ನು ಅನುಷ್ಠಿಸುವದರಿಂದ ಭಗವದನುಗ್ರಹವು ದೊರೆತು, ಉಪಾಯಾನುಷ್ಠಾನವು ಲಭಿಸಿ ಮೋಕ್ಷಪ್ರಾಪ್ತಿಗೇನೋ ಹೇತುವಾಗಬಹುದು. ಸ್ವಕರ್ಮ ನಿರತನಾದ ಶೂದ್ರನಿಗೂ ದಿವ್ಯ ವೈಕುಂಠಪ್ರಾಪ್ತಿಯನ್ನು ಹೇಳಿದುದು ಹೇಗೆ ಸಮಂಜಸವು? ಆತನಿಗೆ ಸ್ನಾನ ಸಂಧ್ಯಾವಂದನಾದಿ ನಿತ್ಯ ಕರ್ಮಾನುಷ್ಠಾನಗಳು ಇಲ್ಲವಲ್ಲಾ? ಮೋಕ್ಷಹೇತುವಾದ ಸ್ವಕರ್ಮವು ಯಾವುದು? ಬ್ರಹ್ಮವಿದ್ಯೆಗೆ ಅಧಿಕಾರವಿಲ್ಲವೆಂದು ಅಪಶೂದ್ರಾಧಿಕಾರಣವು ಸಾರುತ್ತಿದೆ. ಹಾಗಾದರೆ ಭಕ್ತಿಯೋಗವನ್ನು ಉಪದೇಶಿಸುವ ಈ ಗೀತೆಯಲ್ಲಿ ಹೇಳಲು ಕಾರಣವೇನು ಎಂಬುದು (೧)ನೆಯ ಪ್ರಶ್ನೆಯು (೨) ಶೂದ್ರಾದಿಗಳಿಗೆ ಮೋಕ್ಷವಿಲ್ಲವೇ? ಎಂಬುದು (೨) ನೆಯ ಪ್ರಶ್ನೆಯು, ಮೊದಲನೆಯದಕ್ಕೆ ಉತ್ತರವೇನೆಂದರೆ ಗೀತೆಯು ಮೂರು ವರ್ಣದವರಿಗೆ ಮಾತ್ರವೇ ಉಪಾಯವನ್ನು ಉಪದೇಶಿಸಿರುವದು ಎಂಬುದು ಬಾಲ ಭಾಷಣೆಯು. ನಾಲ್ಕು ವರ್ಣದವರಿಗೂ ಉಪಾಯಗಳನ್ನು ಗೀತೆಯಲ್ಲಿ ಹೇಳಿದೆ

ಎಂಬುದು, ವಿಮರ್ಶಿಸಿ ಚನ್ನಾಗಿ ತಿಳಿಯುವವನಿಗೆ ವೇದ್ಯವು, ಗುರೂಪಾಯವಾದ ಉಪಾಸನೆಯೂ ಶಕ್ತರಾದ ವರ್ಣತ್ರಯರಿಗೆ ಮಾತ್ರವೇ. ಅಶಕ್ತರಾದ ಸರ್ವರಿಗೂ ಲಘೂಪಾಯವಾದ ಶರಣಾಗತಿಯು. ಆದರೆ **ಬ್ರಹ್ಮವಿದ್ಯಾಯಾಂ** ಎಂದು ಪ್ರತಿಯೊಂದು ಅಧ್ಯಾಯಾಂತ್ಯದಲ್ಲಿ ಹೇಳಿದೆಯಲ್ಲಾ ಎಂದರೆ ಬ್ರಹ್ಮಪ್ರಾಪ್ತಿವಿದ್ಯೆ ಎಂಬರ್ಥವು. ಶೂದ್ರನಿಗೂ ಬ್ರಹ್ಮಪ್ರಾಪ್ತಿಯುಂಟು. ಶೂದ್ರನು ಪರಮಭಾಗವತನನ್ನು ಆಶ್ರಯಿಸಿ, ಆತನಿಗೆ ಪರಿಚರ್ಯೆಯನ್ನು ಮಾಡಿ, ಆತನ ಪ್ರೀತಿಯನ್ನು ಹೊಂದಿ, ಆತನು ಈತನಿಗಾಗಿ ಮಾಡುವ ಶರಣಾಗತಿಯಿಂದಲೇ ಮೋಕ್ಷವು. ಇಲ್ಲದಿದ್ದರೆ **ಸ್ತ್ರಿಯೋವೈಶ್ಯಾಸ್ತಥಾಶೂದ್ರಾಃ ತೇಽಪಿ ಯಾನ್ತಿ ಪರಾಂಗತಿಮ್**" ಎಂಬ ವಾಕ್ಯಕ್ಕೆ ಗೀತೆಯಲ್ಲಿ ಅವಕಾಶವು ಹೇಗೆ? **ಭಾಗವತ** ಸಂಶ್ರಯಣವು ಶೂದ್ರನಿಗೆ ಎಲ್ಲಿ ಹೇಳಿರುತ್ತದೆ? ಎಂದರೆ ವರ್ಣಾಶ್ರಮದಲ್ಲಿ ಬ್ರಾಹ್ಮಣ ಪರಿಚರ್ಯದಲ್ಲಿ ಇದು ಅಂತರ್ಗತವು. ಗೀತೆಯು ಸಂಕ್ಷೇಪ ಗ್ರಂಥವು, ಯುದ್ಧಕಾಲದಲ್ಲಿ ಹೇಳಲ್ಪಟ್ಟಿದುದು. ಈ ಗೀತಾತಾತ್ಪರ್ಯವನ್ನೆಲ್ಲಾ ವಿಸ್ತರಿಸಿ ಶ್ರೀಕೃಷ್ಣಭಗವಾನರವರೇ ಉದ್ಧವರಿಗೆ ಉಪದೇಶಿಸಿರುತ್ತಾರೆ. ಅಲ್ಲಿ ವ್ಯಕ್ತವಾಗಿ ಭಾಗವತ ಸಂಶ್ರಯಣವನ್ನು ಉಪಾಯವಾಗಿ ಉಪದೇಶಿಸಿರುತ್ತಾರೆ - ಗೀತೆಯಲ್ಲಿ ಹೇಳಿರುವದು ಎರಡು ಉಪಾಯಗಳು; (೧) ಭಕ್ತಿಯೋಗವು ಇದಕ್ಕೆ ಅಧಿಕಾರಿಗಳು ವರ್ಣತ್ರಯವು. (೨) ಶರಣಾಗತಿಯು; ಇದಕ್ಕೆ ಅಧಿಕಾರವು ಸರ್ವರಿಗೂ ಜಾತಿಕುಲದ ತಾರತಮ್ಯವೇನೂ ಇಲ್ಲದೆ ಉಂಟು. ಎರಡಕ್ಕೂ ಭಾಗವತ ಸಂಶ್ರಯಣವು ಬೇಕು. ಈ ಲಘೂಪಾಯವು ಸಾರ್ವತ್ರಿಕವಾದುದರಿಂದ ಸ್ತ್ರೀ ಶೂದ್ರಾದಿಗಳಿಗೂ ಇದರಲ್ಲಿ ಅಧಿಕಾರ ಉಂಟು. ಅರ್ಜುನನು ಈ ಗುರುವಾದ ಉಪಾಯವಾದ ಭಕ್ತಿಯೋಗಕ್ಕೆ ತಾನು ಮನಸ್ಸಿನ ಚಾಂಚಲ್ಯದಿಂದ ಅಶಕ್ತನೇ ಎಂದು ಶೋಕಿಸಿಸುದಕ್ಕೆ ಕರುಣಾಸಾಗರನು ಚರಮಶ್ಲೋಕದಲ್ಲಿಲಘೂಪಾಯವನ್ನು ಉಪದೇಶಿಸಿದನೆಂಬ ಇತಿಹಾಸಕ್ಕನುಗುಣವಾಗಿಯೇ, ಉದ್ಧವರೂ ಕೂಡ ಭಕ್ತಿಯೋಗದ ದುಸ್ತರತ್ವದಿಂದ ಚಿಂತಾಕ್ರಾಂತರಾಗಿರುವಾಗ ಶ್ರೀಕೃಷ್ಣಭಗವಾನರವರು ಹೇಳುತ್ತಾರೇನೆಂದರೆ - "**ಪ್ರಾಯೇಣ ಭಕ್ತಿ ಯೋಗೇನ ಸತ್ಸಙ್ಗೇನ ವಿನೋದ್ಧವ। ನೋಪಾಯೋ ವಿದ್ಯತೇ ಸಮ್ಯಕ್ಪ್ರಾಯಣಂಹಿ ಸತಾಮಹಮ್**" (ಭಾಗ ೧೧. ೧೧. ೪೮). ಇದರ ಅರ್ಥವು, ಪ್ರಾಯಶಃ ಭಕ್ತಿಯೋಗದಿಂದಲೂ ಆಚಾರ್ಯ ಸಂಶ್ರಯಣದಿಂದಲೂ ಮೋಕ್ಷವೇ ವಿನಾ ಬೇರೆ ಉಪಾಯವೇ ಇಲ್ಲವೆಂದು ಹೇಳಿ ಭಕ್ತಿಯೋಗವು ಬಹುಕಾಲ ಸಾಧ್ಯವಾಗಿ ಸುದುಷ್ಕರವಾದ ಉಪಾಯವೇ, ಅದನ್ನು ಅವಲಂಬಿಸವದು ಹೇಗೆ ಎಂದು ಚಿನ್ತಿಸುತ್ತಿದ್ದ ಉದ್ಧವರನ್ನು ಶ್ರೀಕೃಷ್ಣಭಗವಾನರವರು ಸಮಾಧಾನ ಮಾಡಿ ಅಂತಹ **ಸತ್ಸಂಗವು** ಎಂದರೆ ಗುರುವಿನ ಸಂಬಂಧವು ಹೇಗೆ ಶ್ರೇಯಸ್ಕರವು ಎಂಬಲ್ಲಿ ಹೇಳುತ್ತಾರೇನೆಂದರೆ "**ಪ್ರಾಯಣಂ ಹಿ ಸತಾಮಹಮ್**" ಅಂತಹ ಗುರುಗಳಿಗೆ ನಾನು ವಶನು, ತಮ್ಮ ಶಿಷ್ಯನಿಗೆ ಮೋಕ್ಷವನ್ನು ಕೊಡು ಎಂದು ಪ್ರಾರ್ಥಿಸಿದರೆ ಒಡನೇ ಕೊಡತಕ್ಕವನೆಂದು **ಪ್ರಾಯಣಂ ಹಿ** ಎಂಬುದರಿಂದ ತಿಳಿಸುತ್ತಾರೆ. **ಪ್ರಕರ್ಷೇಣ ಅಯನವಲ್ಲವೇ** - ಅವರಿಗೆ ನಾನು ಗತಿ ಅಲ್ಲವೇ ವಶ್ಯನಲ್ಲವೇ ಎಂದು ಹೇಳಿ, ಅನಂತರ ಮುಂದಿನ ಅಧ್ಯಾಯದಲ್ಲಿ ಅವರುಗಳು ಮಾಡುವ ಆತ್ಮನಿಕ್ಷೇಪ ರೂಪವಾದ ನ್ಯಾಸ ಅಥವಾ ಶರಣಾಗತಿಯೂ ಉಪಾಯವೆಂದು ಹೇಳಿ, ಅದರ ಪ್ರಾಮುಖ್ಯತೆಯನ್ನು ಮುಂದಿನ ವಾಕ್ಯದಲ್ಲಿ ವ್ಯಕ್ತಪಡಿಸಿರುತ್ತಾರೆ. "**ಅಥೈತತ್ಪರಮಂ ಗುಹ್ಯಂ ಶೃಣು ಮೇ ಯದುನಂದನ। ಸುಗೋಪ್ಯಮಪಿ ವಕ್ಷ್ಯಾಮಿ ತ್ವಂ ಮೇ ಭೃತ್ಯಸ್ಸುಹೃತ್ಸಖಾ**" (ಭಾಗ-೧-೧೧-೪೯) ಇಲ್ಲಿ ಪರಮಂಗುಹ್ಯಂ ಎಂದು ಭರನ್ಯಾಸವು ಶ್ಲಾಘಿಸಲ್ಪಟ್ಟಿರುತ್ತದೆ. ಈ ಸತ್ಸಂಗದ ಮಾಹಾತ್ಮೆಯನ್ನು ಮುಂದಿನ ಶ್ಲೋಕದಲ್ಲಿ ಉಪಪಾದಿಸುತ್ತಾರೆ. ತಾವು ಬರೀ ಯಜ್ಞದಾನ ತಪಸ್ಸುಗಳಿಂದ ವಶ್ಯನಲ್ಲವೆಂದು ಪ್ರಥಮತಃ ಹೇಳಿ, ಆ ಸತ್ಸಂಗದ ಮಾಹಾತ್ಮ್ಯೆಯಿಂದ ಅನೇಕರು ಮುಕ್ತಿ ಹೊಂದಿರುತ್ತಾರೆಂದು ಅವರುಗಳ ಹೆಸರುಗಳನ್ನೆಲ್ಲಾ ಹೇಳುತ್ತಾರೆ. "**ಸತ್ಸಂಗೇನ ಹಿ ದೈತೇಯಾಃ**"

ಎಂದಾರಂಭಿಸಿ **ವಿದ್ಯಾಧರಾಮನುಷ್ಯೇಷುವೈಶ್ಯಾಶ್ಶೂದ್ರಾಸ್ತ್ರಿಯೋನ್ತ್ಯಜಾಃ!" ಪಂಚವಾದಿ ಸಮಸ್ತರೂ ಮೋಕ್ಷವನ್ನು ಹೊಂದಿದ್ದಾರೆಂದು ಮುಂದಿನ ಕೆಲವು ಶ್ಲೋಕಗಳಿಂದ ಹೇಳಿರು**ತ್ತಾರೆ. ಆದುದರಿಂದ ಅನ್ತ್ಯಜಾದಿ ಶೂದ್ರರಿಗೂ ಮೋಕ್ಷವುಂಟೆಂಬುದು ಸತ್ಯವು. ಆ ನ್ಯಾಸ ವಿದ್ಯೆಯೂ ಈ ಭಗವದ್ಗೀತೆಯಲ್ಲೇ ಹೇಳಿರುತ್ತದೆಂಬುದೂ ಸತ್ಯವು. ಹೀಗೀಗ ಎರಡು ಆಕ್ಷೇಪ ಗಳಿಗೂ ಸಮಾಧಾನವು. ಈ ಶ್ಲೋಕದಲ್ಲಿರುವ **ನರಃ** ಎಂಬ ಪ್ರಯೋಗವನ್ನು ಮುಖ್ಯವಾಗಿ ಗಮನಿಸತಕ್ಕದ್ದಾಗಿರುತ್ತದೆ. ಉಪಾಸನ ಮಾತ್ರವೇ ಉಪಾಯವಾಗಿದ್ದ ಪಕ್ಷದಲ್ಲಿ **ದ್ವಿಜಃ** ಎಂದೂ ಪ್ರಯೋಗಿಸುತ್ತಿದ್ದರು; ಸರ್ವ ವರ್ಣದ ಮೋಕ್ಷಾರ್ಥಿಗಳಿಗೂ ಮತ್ತು ಎರಡು ವಿಧ ಉಪಾಯನಿಷ್ಠರಿಗೂ, ಅನ್ವಯಿಸುವ ಹಾಗೆ ನರ ಶಬ್ದವು.

ಈ ಶ್ಲೋಕದ ಪೂರ್ವಾರ್ಧದಲ್ಲಿ **ಸಂಸಿದ್ಧಿಂ** ಎಂದೂ ಉತ್ತರಾರ್ಧದಲ್ಲಿ ಆ ಪದವನ್ನೇ ಉಪಯೋಗಿಸದೇ **ಸಿದ್ಧಿಂ** ಎಂದೂ, ಉಪಯೋಗಿಸಿರುವದು ಏತಕ್ಕೆ? ಎಂಬುದು ನ್ಯಾಯವಾದ ಪ್ರಶ್ನೆಯು. ಇದಕ್ಕೆ ಉತ್ತರವೇನೆಂದರೆ—ಸ್ವಕರ್ಮನಿರತರಾಗಿ ಫಲಕರ್ತೃತ್ವಮಮತಾತ್ಯಾಗಳಿಂದ ಉಂಟಾಗುವದು ಆತ್ಮಾವಲೋಕನವೂ, ಉಪಾಸನಕ್ಕೆ ಪ್ರತಿಬಂಧಕ ಪಾಪನಿವೃತ್ತಿಯೂ. ಇದೇ **ಸಿದ್ಧಿಯು**. ಇದರಿಂದ ಸಾಧ್ಯವಾದುದು ಭಕ್ತಿಯೋಗವು. ಅದರ ಫಲವಾಗಿ ಪರಮಾತ್ಮ ಸಾಕ್ಷಾತ್ಕಾರವೂ ದೇಹಾವಸಾನಾನಂತರ ಮೋಕ್ಷವೂ, ಇದೇ ಸಂಸಿದ್ಧಿಯು. ಈ ಸಂಸಿದ್ಧಿಗೆ ಸಿದ್ಧಿಯು ಯಾವುದೆಂದರೆ ಕರ್ಮಯೋಗಾದಿಸಾಧನವೆಂದು ತಿಳಿಯತಕ್ಕದ್ದು. ಆದುದರಿಂದ ಸಂಸಿದ್ಧಿ ಸಿದ್ಧಿ ಎಂಬ ವ್ಯತ್ಯಸ್ತವಾದ ಪ್ರಯೋಗವು. ಮುಂದಿನ ಶ್ಲೋಕಗಳಲ್ಲಿ ಸಿದ್ಧಿಯು ಹೇಗೆ ಕ್ರಮೇಣ ಲಭಿಸುತ್ತದೆಂಬುದನ್ನು ತಿಳಿಸಿ ಅನಂತರ ೫೦ನೆಯ ಶ್ಲೋಕದಲ್ಲಿ ಈ ಸಿದ್ಧಿಯಿಂದ ಸಂಸಿದ್ಧಿಯು ಹೇಗೆ ಲಭಿಸುತ್ತದೆಂಬುದನ್ನು ತಿಳಿಸುವೆನು ಎಂದು ಪ್ರತಿಜ್ಞಾವಾಕ್ಯವನ್ನು ಹೇಳಿ, ೫೪ನೆಯ ಶ್ಲೋಕದಲ್ಲಿ ಅದರಿಂದ ಭಕ್ತಿಯೋಗವು ಹೇಗೆ ಲಭಿಸುತ್ತದೆಂದು ತಿಳಿಸಿ, ೫೫ನೆಯ ಶ್ಲೋಕದಲ್ಲಿ ಪರಬ್ರಹ್ಮ ಪ್ರಾಪ್ತಿರೂಪಸಂಸಿದ್ಧಿಯು ಸಿದ್ಧಿಸುತ್ತದೆಂದು ಉಪದೇಶಿಸುತ್ತಾರೆ. ಆದುದರಿಂದ ಪೂರ್ವಾರ್ಧದಲ್ಲಿ ಕೊನೆಗೆ ಪ್ರಾಪ್ತವಾಗುವ ಫಲದ ಉದ್ದೇಶ್ಯದಿಂದ **ಸಂಸಿದ್ಧಿ** ಎಂದರೆ ಪರಮಪದ ಪ್ರಾಪ್ತಿಯೆಂದು ವ್ಯಾಖ್ಯಾನಮಾಡಲ್ಪಟ್ಟಿತು. ಅದು ಸಾಕ್ಷಾತ್ತಾಗಿ ಉಂಟಾಗುವದಿಲ್ಲವು. ಕ್ರಮೇಣ ಪ್ರಾಪ್ತವಾಗುತ್ತದೆಂದು ತಿಳಿಸುವದಕ್ಕಾಗಿ ಉತ್ತರಾರ್ಧದಲ್ಲಿ **ಸಿದ್ಧಿಂ** ಎಂಬ ಪ್ರಯೋಗವು. ಆದುದರಿಂದಲೇ ಶ್ರೀನಿಗಮಾನ್ತದೇಶಿಕರವರು **ನೈಷ್ಕರ್ಮ್ಯಪ್ರಾಪ್ತಿಯೆಂದು** ವ್ಯಾಖ್ಯಾನ ಮಾಡಿದರು. ಆದರೆ ಶ್ರೀ ಯತಿವರ್ಯರು **ಸಿದ್ಧಿ** ಶಬ್ದಕ್ಕೂ ಮೋಕ್ಷವೆಂದೇ ಅರ್ಥಮಾಡಿರುತ್ತಾರೆ. ಕ್ರಮೇಣವೆಂಬುದೂ ಅರ್ಥಾತ್ಸಿದ್ಧವಾದುದರಿಂದ ಇಬ್ಬರ ಅಭಿಪ್ರಾಯಕ್ಕೂ ಏನೊಂದು ವ್ಯತ್ಯಾಸವಿಲ್ಲವು. ಆತ್ಮಾವಲೋಕನಪ್ರಾಪ್ತಿಯೇ ನೈಷ್ಕರ್ಮ್ಯವು. ॥ ೪೫ ॥

**ಮೂಲಕ್ಕೆ ಅವತಾರಿಕೆಯು**—ಹಿಂದಿನ ಶ್ಲೋಕದಲ್ಲಿ ಪ್ರತಿಜ್ಞಾ ವಾಕ್ಯರೂಪದಲ್ಲಿ ಆಯಾ ವರ್ಣದವರಿಗೆ ವಿಹಿತಕರ್ಮಗಳ ಅನುಷ್ಠಾನವು ಕ್ರಮೇಣ ಮೋಕ್ಷಪ್ರಾಪ್ತಿಗೆ ಹೇತುವೆಂದು ಹೇಳಲ್ಪಟ್ಟಿತು. ಅದು ಹೇಗೆ ಎಂಬುದು ಹಿಂದೆ ಹೇಳಲ್ಪಟ್ಟಿದ್ದರೂ, ಅನುವಾದರೂಪದಲ್ಲಿ ತಿಳಿಸಲು ಆರಂಭಿಸಿ, ಇಂತಹ ಕರ್ಮಾನುಷ್ಠಾನವು ನೈಷ್ಕರ್ಮ್ಯಸಿದ್ಧಿಗೆ ಎಂದರೆ ಜ್ಞಾನಯೋಗಾವಾಪ್ತಿಗೂ ಕೂಡ ಹೇತುವಾಗುತ್ತದೆಂದುತಿಳಿಸಿ, ಅನಂತರ ಧ್ಯಾನಯೋಗಪರನಾಗಿಯೂ ಆತ್ಮಾನುಭವ ಪರನಾಗಿಯೂ ಆಗುವನೆಂದು ೫೦-೫೩ನೆಯ ಶ್ಲೋಕಗಳಲ್ಲಿ ಹೇಳಿ, ಅದರಿಂದ ಭಕ್ತಿಯೋಗ ನಿಷ್ಠೆಯುಂಟಾಗಿ ತನ್ಮೂಲಕ ಮೋಕ್ಷಪ್ರಾಪ್ತಿ ಎಂದು ಉಪದೇಶಿಸುತ್ತಾರೆ. ಹೀಗೀಗ ಪರಂಪರಯಾ ಪ್ರಾಪ್ತವಾಗುವ ಸಿದ್ಧಿಗಳು. ಈ ೪೬ನೆಯ ಶ್ಲೋಕದಲ್ಲಿ ಹೇಳಲ್ಪಡುವದೇನೆಂದರೆ ಈ ವಿಹಿತ ಕರ್ಮಗಳನ್ನು ಆಯಾ ವರ್ಣದವರು ಅನುಷ್ಠಿಸಿದರೂ, ತನ್ಮೂಲಕ ಇತರ ದೇವತೆಗಳು ಆರಾಧಿಸಲ್ಪಟ್ಟರೂ, ಫಲಕರ್ತೃತ್ವಮಮತಾತ್ಯಾಗದಿಂದ ಅವು ನಡೆಸಲ್ಪಡುವದರಿಂದ ಭಗವದಾರಾಧನಾ

**ಮೂ. ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪೬ ॥**

---

ರೂಪವಾಗಿ ಪರಿಣಮಿಸಿ, ಸರ್ವಕರ್ಮಾರಾಧ್ಯನಾದ ಭಗವಂತನೇ ಸಿದ್ಧಿಯನ್ನು ಹೊಂದಿಸುವನೆಂದು ಹೇಳಲ್ಪಡುತ್ತದೆ. ಈ ಸಿಷ್ಕಾಮ ವಿಹಿತಕರ್ಮದಿಂದ ಲೋಕದ ಸರ್ವ ಪ್ರವೃತ್ತಿಗಳಿಗೂ ಹೇತುವಾದ ಸರ್ವೇಶ್ವರನಾದ ತಾನೇ ಆರಾಧಿಸಲ್ಪಡುವನಾದುದರಿಂದ, ತಾನು ಪ್ರೀತನಾಗಿ ಆಗುವನೆಂದು ಉಪದೇಶಿಸುತ್ತಾರೆ.

**ಭೂತಾನಾಂ** - ಈ ಎಲ್ಲಾ ಲೋಕದ ಪ್ರಾಣಿಗಳ, **ಪ್ರವೃತ್ತಿಃ** - ಸಮಸ್ತ ವ್ಯಾಪಾರಗಳೂ, **ಯತಃ** - ಜಗತ್ಕಾರಣ ಭೂತನಾದ ಯಾವನಿಂದಲೋ, ಮತ್ತು **ಯೇನ**-ಯಾವ ಜಗದೀಶ್ವರನಿಂದ, **ಇದಂ**-ಈ ವಿಶ್ವವೆಲ್ಲಾ, **ತತಂ** - "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ವ್ಯಾಪ್ತವೋ, ತಂ - ಅಂತಹ ಸರ್ವೇಶ್ವರನನ್ನು ಸೂರ್ಯ, ಅಗ್ನಿ, ಇಂದ್ರಾದಿ ದೇವತೆಗಳಿಗೂ ಕೂಡ ಅಂತರಾತ್ಮವಾಗಿ ನಿಯಾಮಕನಾಗಿರುವ ಸರ್ವೇಶ್ವರನನ್ನು, ಅಂತಹ ಸರ್ವೇಶ್ವರನು ತಾನೇ ಎಂಬಭಾವವು,**ಸ್ವಕರ್ಮಣಾ**-ಅವರವರಿಗೆ ವಿಹಿತಗಳಾದ ಕರ್ಮಗಳಿಂದ, **ತಂ**-ಅಂತಹ ಪ್ರಸಿದ್ಧ ಮಹಾಪುರುಷನನ್ನು **ಅಭ್ಯರ್ಚ್ಯ** - ಆರಾಧಿಸಿ ಎಂದರೆ ಆರಾಧಿಸಿದುದಾದರೆ ಎಂಬ ಭಾವವು,**ಸಿದ್ಧಿಂ**-ಅದರಿಂದುಂಟಾಗುವ ಫಲವನ್ನು ಅದು ಯಾವುದೆಂದರೆ ಮೊದಲು ನೈಷ್ಕರ್ಮ್ಯ ಸಿದ್ಧಿಯನ್ನೂ, ಅನಂತರ ಭಕ್ತಿಯೋಗ ನಿಷ್ಪತ್ತಿಯನ್ನೂ ಹೀಗೆ ಆತ್ಮಾನುಭವದೊಂದಿಗೆ ಮೋಕ್ಷವನ್ನೂ ಸಹ, **ಮಾನವಃ**-ಮನುಷ್ಯನು, ಎಂತಹ ಮನುಷ್ಯನು ಎಂದರೆ ಸ್ವಧರ್ಮವನ್ನು ಕರ್ತೃತ್ವ ಫಲಮಮತೆಗಳ ತ್ಯಾಗ ಮೂಲಕ ಮಾಡಿ ಪರಮ ಪುರುಷಾರಾಧನ ರೂಪದಲ್ಲಿ ಅನುಷ್ಠಿಸುವ ಮನುಷ್ಯನು, ವಿನ್ದತಿ-ಹೊಂದುವನು. ಸರ್ವೇಶ್ವರನಾದ ತನ್ನನ್ನು ಸ್ವಕರ್ಮದಿಂದ ಆರಾಧಿಸುವದಕ್ಕೆ ಹೇತುವಾಗಿ **ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂತತಮ್** ಎಂದು ಹೇಳಲು ಕಾರಣವೇನು ? ಎಂದು ಪ್ರಶ್ನಿಸುವದು ನ್ಯಾಯವು. ಸರ್ವೇಶ್ವರನು ಸಮಸ್ತ ಪ್ರಾಣಿಗಳ ಸೃಷ್ಟ್ಯಾದಿಗಳಿಗೂ, ಸತ್ತಾಸ್ಥಿತಿನಿಯಮನಾದಿಗಳಿಗೂ, ಕಾರಣಭೂತನಾಗಿ ಇರುವದರಿಂದ, ಈ ಮೋಕ್ಷಾರ್ಥಿಗಳು ಮಾಡುವ ಸ್ವಧರ್ಮಾನುಷ್ಠಾನಗಳಿಗೂ ತಾನೇ ಹೇತುವಾದವನು, ಮತ್ತು ಈ ಸ್ವಧರ್ಮಗಳಾದ ನಿತ್ಯನೈಮಿತ್ತಿಕಗಳಲ್ಲಿ ಕರ್ತೃತ್ವ ಮಮತಾ ಫಲಗಳಿಲ್ಲದೆ ಆರಾಧಿಸಲ್ಪಡುವ ದೇವತೆಗಳಿಗೆಲ್ಲಾ ತಾನೇ ಆತ್ಮವಾಗಿರುವದರಿಂದ ತದನ್ತರ್ಯಾಮಿಯಾಗಿ ತಾನೇ ಅಭ್ಯರ್ಚಿಸಲ್ಪಡುವನು, ಆರಾಧಿಸಲ್ಪಡುವನು. ಅದು ಹೇಗೆ ಎಂದರೆ ತತ್ತಚ್ಛರೀರಕ ಪರಮಾತ್ಮನೇ ಅಂತಹ ಕರ್ಮಗಳಿಂದ ಆರಾಧಿಸಲ್ಪಡುವನೆಂದು ಬ್ರಹ್ಮ ಸೂತ್ರದ ವೈಶ್ವಾನರಾಧಿಕರಣದಲ್ಲೂ ಮತ್ತೂ ಇಲ್ಲಿಯೇ "ಅಹಂ ವೈಶ್ವಾನರೋ ಭೂತ್ವಾ" ಎಂಬಲ್ಲೂ ಸ್ಥಾಪಿತವು. ನಿತ್ಯನೈಮಿತ್ತಿಕಗಳಲ್ಲಿ ಬರುವ ಸೂರ್ಯ, ಅಗ್ನಿ ಇಂದ್ರಾದಿಪದಗಳಿಗೆ ಸಾಕ್ಷಾತ್ತಾಗಿ ವ್ಯುತ್ಪತ್ತಿಮೂಲಕವಾಗಿಯೂ ಪರಮಾತ್ಮಪರಗಳೆಂದು ಜೈಮಿನ್ಯಾಚಾರ್ಯರು ಅಭಿಪ್ರಾಯಪಡುವರೆಂದು "ಸಾಕ್ಷಾದಪ್ಯವಿರೋಧಂ ಜೈಮಿನಿಃ" (೧.೨.೨೮) ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿತವು. ಇಂತಹ ಇತರ ದೇವತೆಗಳನ್ನು ಕುರಿತು ಮಾಡುವ ಕರ್ಮಗಳು ಬಂಧಕವಲ್ಲವೋ ಎಂದರೆ ಅಲ್ಲವು. ಏಕೆಂದರೆ ಫಲಕರ್ತೃತ್ವತ್ಯಾಗಗಳ ಮೂಲಕ ಸಾತ್ವಿಕ ತ್ಯಾಗದ್ವಾರಾ ನಡೆಯುವದರಿಂದ ಬಂಧಕವಲ್ಲವು. ಹಾಗೆಯೇ ಶ್ರುತಿಯಲ್ಲೂ "ನಕರ್ಮ ಲಿಪ್ಯತೇ ನರೇ" ಎಂಬಲ್ಲಿ ಪ್ರಪನ್ನನ ನಿತ್ಯನೈಮಿತ್ತಿಕ ಕರ್ಮಾನುಷ್ಠಾನಗಳು ಎಂದಿಗೂ ಬಂಧಕವಲ್ಲವು. ಉಪಾಯಾನುಷ್ಠಾನಕ್ಕೆ ಸಾಧನವು. ಇವುಗಳನ್ನೆಲ್ಲಾ ಮನಸ್ಸಿನಲ್ಲಿಟ್ಟೇ **ಯೇನಸರ್ವಮಿದಂ ತತಮ್** ಎಂಬ ಪ್ರಯೋಗವು. **ಇಲ್ಲಿ ಸ್ವಕರ್ಮಣಾ ತಮಭ್ಯರ್ಚ್ಯ** ಎಂದಿರುವದರಿಂದ, ಅವರುಗಳ ವಿಹಿತ ಕರ್ಮಗಳಿಂದ ಸರ್ವೇಶ್ವರನು ಆರಾಧಿಸಲ್ಪಡುವವನೇ

**ಭಾ** **ಯತೋ ಭೂತಾನಾಮುತ್ಪತ್ತ್ಯಾದಿಕಾ ಪ್ರವೃತ್ತಿಃ, ಯೇನ ಚ ಸರ್ವಮಿದಂ ತತಮ್, ಸ್ವಕರ್ಮಣಾ, ತಂ-ಮಾಮಿನ್ದ್ರಾದ್ಯನ್ತರಾತ್ಮತಯಾವಸ್ಥಿತಮಭ್ಯರ್ಚ್ಯ ಮತ್ಪ್ರಸಾದಾತ್ ಮತ್ಪ್ರಾಪ್ತಿರೂಪಂ ಸಿದ್ಧಿಂ ವಿನ್ದತಿ ಮಾನವಃ; ಮತ್ತಸ್ಸರ್ವಮುತ್ಪದ್ಯತೇ,ಮಯಾ ಚ ಸರ್ವಮಿದಂ ತತಮಿತಿ ಪೂರ್ವಮೇವೋಕ್ತಮ್; (೧) "ಅಹಂ ಕೃತ್ಸ್ನಸ್ಯ ಜಗತಃ**

---

ವಿನಾ ಸ್ವಕರ್ಮತ್ಯಾಗದಿಂದಾಗಲಿ, ಇತರ ವರ್ಣಾಶ್ರಮ ಕರ್ಮಗಳನ್ನು ಅವಲಂಬಿಸುವದರಿಂದಾಗಲಿ ಆತನು ಆರಾಧಿಸಲ್ಪಡುವದಿಲ್ಲವೆಂಬ ಭಾವವೂ ಇದರಿಂದವ್ಯಕ್ತವು. ಬ್ರಾಹ್ಮಣಾದಿಗಳು ತಮ್ಮ ನಿತ್ಯನೈಮಿತ್ತಿಕಗಳನ್ನು ತ್ಯಾಗಮಾಡುವದರಿಂದಲೂ ಶೂದ್ರರು ಬ್ರಾಹ್ಮಣಾದಿಕರ್ಮಗಳನ್ನು ಅವಲಂಬಿಸುವದರಿಂದಲೂ, ಕೃತ್ಯಾಕರಣ ಅಕೃತ್ಯಕರಣ ದೋಷಗಳಿಗೆ ಗುರಿಯಾಗಿ ಭಗವನ್ನಿಗ್ರಹಕ್ಕೆ ಗುರಿಯಾಗುವರು ಎಂಬ ಭಾವಗಳನ್ನೂ ಇದರಿಂದ ಗ್ರಹಿಸಬಹುದು. ತ್ರಿವರ್ಣದವರಿಗೇನೋ ಈ ಶ್ಲೋಕವು ಅನ್ವಯಿಸುತ್ತದೆ. ಶೂದ್ರಾದಿಗಳಿಗೂ ಇದು ಅನ್ವಯಿಸುತ್ತದೆಯೇ? ಎಂಬ ಪ್ರಶ್ನೆಗೆ ಉತ್ತರವಾಗಿ ಮಾನವಃ ಎಂದ. ಹೇಳಿರುವದರಿಂದ ಎಲ್ಲರಿಗೂ ಅನ್ವಯಿಸಲೇಬೇಕು. ಆತನ ನಿಯತಕರ್ಮವು ಪರಿಚರ್ಯವು ಸಾತ್ವಿಕ ಬ್ರಾಹ್ಮಣನನ್ನು ಆಶ್ರಯಿಸುವದು ಆತನ ವಿಹಿತಕರ್ಮವಾಗಿ ಅದರಿಂದಲೇ ಆತನಿಗೆ ಸಿದ್ಧಿಯುಂಟು ಎಂದು ಇಲ್ಲಿ ಹೇಳಲ್ಪಟ್ಟಿತು.

ಮೂಲದಲ್ಲಿ **ತಮಭ್ಯರ್ಚ್ಯ** ಎಂಬಲ್ಲಿ ಪ್ರಥಮ ಪುರುಷ ಪ್ರಯೋಗವು ಹೇಗೆ? **ಶ್ರೀಕೃಷ್ಣ** ಭಗವಾನರವರೇ ಪರತತ್ತ್ವವಾಗಿರುವಾಗ ಮಾಂ ಅಭ್ಯರ್ಚ್ಯ ಎಂದಲ್ಲವೇ ಇರಬೇಕು; ಎಂದರೆ **ಯತಃ ಯೇನ** ಪದಗಳು ತಚ್ಛಬ್ದವನ್ನು ಅಪೇಕ್ಷಿಸುವದರಿಂದ ಹಾಗೆ ಪ್ರಯೋಗವೆಂದು ಭಾವಿಸ ತಕ್ಕದ್ದಾಗಿರುತ್ತದೆ. ಮತ್ತು ಯತ್ ತತ್‌ಶಬ್ದಗಳು ಪ್ರಸಿದ್ಧಿ ವಾಚಕಗಳು. || ೪೬ ||

**ಭಾಷ್ಯಾರ್ಥವು**—ತಾನು ಸಮಸ್ತಕ್ಕೂ ಕಾರಣಭೂತನು, ಸರ್ವಾಂತರ್ಯಾಮಿಯಾದ ಪರಮಾತ್ಮನು; ತನ್ನಿಂದ ಸೃಷ್ಟಿಸಲ್ಪಟ್ಟ ಸಮಸ್ತವೂ ತನಗೆ ಶರೀರವಾಗಿ ತಾನು ಆತ್ಮಾವಾಗಿರುವದರಿಂದ, ನಿತ್ಯ ನೈಮಿತ್ತಿಕಾದಿಗಳಲ್ಲಿ ಹೇಳಲ್ಪಡುವ ಸೂರ್ಯ, ಅಗ್ನಿ, ಇಂದ್ರ ಮೊದಲಾದ ಶಬ್ದಗಳಿಂದ ತತ್ತಚ್ಛರೀರಕ ಪರಮಾತ್ಮನಾದ ತಾನೇ ಹೇಳಲ್ಪಟ್ಟು, ಅಂತಹ ಕರ್ಮಾನುಷ್ಠಾನಗಳಿಂದ ತಾನೇ ಅರ್ಚಿಸಲ್ಪಡುವದರಿಂದ, ವರ್ಣಾಶ್ರಮಧರ್ಮಗಳು ಕ್ರಮೇಣ ಮೋಕ್ಷಸಾಧನವೆಂಬ ಅಭಿಪ್ರಾಯದಿಂದ ಹೇಳುತ್ತಾರೆ,—**ಯತಃ** - ಯಾವಕಾರಣದಿಂದ ಎಂದರೆ ಯಾವ ಪರಮಾತ್ಮನಮೂಲಕವಾಗಿ,ಇಲ್ಲಿ ಪ್ರವೃತ್ತಿಶಬ್ದವು ಚೇಷ್ಟಾಮಾತ್ರ ಪರವಲ್ಲವೆಂದು ತಿಳಿಸುವದಕ್ಕಾಗಿ **ಉತ್ಪತ್ತ್ಯಾದಿಕಾ** ಎಂದು ವ್ಯಾಖ್ಯಾನಮಾಡಲ್ಪಟ್ಟಿತು. **ಭೂತಾನಾಂ ಪ್ರವೃತ್ತಿಃ** ಎಂಬಲ್ಲಿ ಭೂತಶಬ್ದವು ಅಚಿತ್ತೊಂದಿಗೆ ಸೇರಿದ ಚಿತ್ತುಗಳ ಏನೊಂದೂ ವಿಶೇಷವಿಲ್ಲದೆ ಸರ್ವವಿಧ ವ್ಯಾಪಾರಗಳೆಂಬ ಭಾವವು. **ಭೂತಾನಾಂ** - ಜಡ ಮತ್ತು ಅಜಡವಸ್ತುಗಳ ಮತ್ತು ಇವುಗಳ ಸಮ್ಮೇಳನವುಳ್ಳ ಪ್ರಾಣಿಗಳ **ಉತ್ಪತ್ತ್ಯಾದಿಕಾ ಪ್ರವೃತ್ತಿಃ**—ಉತ್ಪತ್ತಿಯೇ ಮೊದಲಾದ ಪ್ರವೃತ್ತಿಯುಂಟಾಯಿತೋ **ಯೇನ ಚ ಸರ್ವಮಿದಂತತಂ** – ಯಾವ ಪರಮಾತ್ಮನಿಂದ 'ಇವೆಲ್ಲವೂ, ಈ ಚಿದಚಿದಾತ್ಮಕವಾದ ಜಗತ್ತೆಲ್ಲವೂ ವ್ಯಾಪ್ತವೋ, ಇದರಿಂದ ಅವುಗಳ ನಿಯಮನತ್ವವು ಸೂಚಿತವು. **ಸ್ವಕರ್ಮಣಾ** – ತನಗೆ ಶಾಸ್ತ್ರದಲ್ಲಿ ವಿಹಿತವಾದ ಕರ್ಮದಿಂದ, **ತಂ** - ಅಂತಹಪರಮಾತ್ಮನನ್ನು, ಅದು ಯಾರೆಂದರೆ **ಮಾಮಿನ್ದ್ರಾದ್ಯನ್ತರಾತ್ಮತಯಾವಸ್ಥಿತಂ** – ಇಂದ್ರನೇ ಮೊದಲಾದ ಸರ್ವ ದೇವತೆಗಳಿಗೂ ಅಂತರಾತ್ಮವಾಗಿರುವ ಶ್ರೀಕೃಷ್ಣಭಗವಾನ್ ಆದ ನನ್ನನ್ನು, **ಅಭ್ಯರ್ಚ್ಯ** – ಆರಾಧಿಸಿ, **ಮತ್ಪ್ರಸಾದಾತ್** - ನನ್ನ ಅನುಗ್ರಹದಿಂದ, **ಮತ್ಪ್ರಾಪ್ತಿರೂಪಂ ಸಿದ್ಧಿಂ** - ನನ್ನನ್ನು ಹೊಂದುವ ರೂಪ ಫಲವನ್ನು, **ವಿನ್ದತಿ ಮಾನವಃ**—ಮನುಷ್ಯನು ಹೊಂದುವನು. **ಮತ್ತ ಏವ ಸರ್ವಮುತ್ಪದ್ಯತೇ**—ನನ್ನಿಂದಲೇ ಈ ಜಗತ್ಸಮಸ್ತವೂ ಉಂಟಾಗುತ್ತದೆಂದೂ **ಮಯಾ ಚ ಸರ್ವಮಿದಂ ತತಮಿತಿ**

**ಪ್ರಭವಃ ಪ್ರಲಯಸ್ತಥಾ" "ಮತ್ತಃಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ" (೨) "ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ" (೩) "ಮಯಾಧ್ಯಕ್ಷೇಣ ಪ್ರಕೃತಿಸ್ಸೂಯತೇ ಸಚರಾಚರಮ್" (೪) "ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ" ಇತ್ಯಾದಿಷು || ೪೬ ||**

---

ನನ್ನಿಂದಲೇ ಈ ಸಮಸ್ತವೂ ವ್ಯಾಪ್ತವೆಂದು, ಸಹ **ಪೂರ್ವಮೇವೋಕ್ತಮ್** - ಹಿಂದೆಯೂ ಹೇಳಲ್ಪಟ್ಟಿರುತ್ತದೆ:-ಹಿಂದಿನ ಗೀತಾ ಪ್ರಮಾಣಗಳನ್ನೇ ಉದಾಹರಿಸುತ್ತಾರೆ (೧) ಈ ಪ್ರಮಾಣಗಳಿಗೆ ಹಿಂದೆಯೇ ಅರ್ಥವು ಬರೆಯಲ್ಪಟ್ಟಿರುತ್ತದೆ. ಈ ಶ್ಲೋಕದಿಂದ ತನ್ನ ಎರಡು ವಿಧ ಪ್ರಕೃತಿಗಳಾದ ಅಚಿತ್ತುಚಿತ್ತುಗಳಿಗೂ ಅವುಗಳೆರಡೂ ಸೇರಿರುವ ಸರ್ವಪ್ರಾಣಿವರ್ಗವುಳ್ಳ ಈ ಸಮಸ್ತ ಜಗತ್ತಿನ ಉತ್ಪತ್ತಿಲಯಾದಿಗಳಿಗೂ ತಾನೇ ಕಾರಣನು ಎಂದು ಹೇಳಿ, "ಮತ್ತಃ ಪರತರಂ" ಎಂಬುದರಿಂದ ತನಗಿಂತಲೂ ಸಮವಾದುದಾಗಲಿ ಉತ್ಕೃಷ್ಟವಾದುದಾಗಲಿ ಇಲ್ಲವೆಂದು ನಿಸ್ಸಮಾಭ್ಯಧಿಕತ್ವವು ಸ್ಥಾಪಿಸಸಲ್ಪಟ್ಟಿತು. (೨) ಈ ಶ್ಲೋಕದಿಂದ ಸಮಸ್ತ ಚಿದಚಿತ್ತುಗಳಿಂದ ಕೂಡಿದ ಜಗತ್ತಿಗೂ ಆತ್ಮವಾಗಿ ವ್ಯಾಪಿಸಿರುತ್ತೇನೆಂದು ಹೇಳಲ್ಪಟ್ಟಿರುತ್ತದೆ. ಇದರಿಂದ ಸರ್ವೇಶ್ವರನಿಗೆ ಸಮಸ್ತ ಜಗತ್ತು ಶರೀರವಾಗಿ, ಅವುಗಳಿಗೆಲ್ಲಾ ಆತನು ಆತ್ಮವಾಗಿದ್ದಾನೆಂದು ಹೇಳಲ್ಪಟ್ಟಿತು. (೩)ಈ ಶ್ಲೋಕದ ಮೂಲಕ ತಾನೇ ಈ ಜಗತ್ತಿಗೆ ಸರ್ವಕಾರಣನೆಂದು ಹೇಳಲ್ಪಡುತ್ತದೆ. ಈ ಜಗತ್ತಿಗೆಲ್ಲಾ ಯಜಮಾನನಾದ ನನ್ನ ಸಂಕಲ್ಪಾನುಸಾರವಾಗಿ ಜೀವಾತ್ಮರುಗಳ ಪುಣ್ಯಪಾಪರೂಪಕರ್ಮಗಳಿಗನುಸಾರವಾಗಿ, ನನ್ನ ಶರೀರವಾಗಿ ನನಗೆ ಶೇಷಭೂತವಾಗಿರುವ ಪ್ರಕೃತಿಯು ಈ ಜಗತ್ತಿನ ಎಲ್ಲಾ ವಸ್ತುಗಳನ್ನೂ ಉಂಟುಮಾಡುತ್ತದೆ ಎಂದರೆ ನಾನೇ ಅವುಗಳ ಮೂಲಕ ಉಂಟು ಮಾಡುವನೆಂಬ ಭಾವವು. (೪) ಈ ಶ್ಲೋಕದಲ್ಲಿ ಜಗತ್ಕಾರಣವೂ ಜಗನ್ನಿಯಮನತ್ವವೂ ಹೇಳಲ್ಪಡುತ್ತವೆ. ಈ ಆಶ್ಚರ್ಯವಾಗಿಯೂ ವಿವಿಧವಾಗಿಯೂ ಇರುವ ಈ ಜಗತ್ತಿನ ಸಮಸ್ತಕ್ಕೂ ನಾನೇ ಕಾರಣಭೂತನು; ಜಗತ್ತಿನಲ್ಲಿ ಕಾಣುವ ಸಮಸ್ತ ಪ್ರವೃತ್ತಿಗಳಿಗೂ ನಾನೇ ಕಾರಣನೆಂಬ ಭಾವವು. **ಇತ್ಯಾದಿಷು** ಇವೇ ಮೊದಲಾದ ಪ್ರಮಾಣಗಳಲ್ಲಿ ತೋರಿ ಬರುತ್ತವೆ ಎಂಬ ಭಾವವು. ಈ ಲೋಕದಲ್ಲಿರುವ ಸಮಸ್ತ ಪ್ರವೃತ್ತಿಗಳಿಗೂ ತಾನೇ ಕಾರಣನೆಂದು **ಯತಃ ಪ್ರವೃತ್ತಿರ್ಭೂತಾನಾಂ** ಎಂದು ಹೇಳಿದರು; ಇವಕ್ಕೆ ಕಾರಣವೇನೆಂದರೆ **ಯೇನಸರ್ವಮಿದಂ ತತಮ್** - ಸರ್ವೇಶ್ವರನಿಗೆ ಈ ಜಗತ್ತಿನ ಎಲ್ಲಾ ವಸ್ತುಗಳೂ ಶರೀರಗಳು; ಅವುಗಳಿಗೆಲ್ಲಾ ಆತ್ಮಾವಾಗಿ ಈ ಪರಮಾತ್ಮನಿದ್ದಾನೆಂದು ಹೇಳಲ್ಪಟ್ಟಿತು. ಹೀಗೆ ಎಲ್ಲಕ್ಕೂ ಸರ್ವೇಶ್ವರನು ಆತ್ಮಾವಾಗಿರುವದರಿಂದ ಸರ್ವಕ್ಕೂ ನಿಯಾಮಕನಾಗಿ ಸಮಸ್ತ ಪ್ರವೃತ್ತಿಗಳೂ ಉಂಟಾಗುತ್ತವೆ ಎಂಬಭಾವವು. ಈ ಜ್ಞಾನವು ಯಾವಾಗ ಉಂಟಾಯಿತೋ ಆಗ ಸೂರ್ಯ ಇಂದ್ರ ದೇವತೆಗಳನ್ನು ನಿತ್ಯನೈಮಿತ್ತಿಕಗಳಿಂದ ಆರಾಧಿಸುವವರಿಂದ ಸರ್ವೇಶ್ವರನೇ ಆರಾಧಿಸಲ್ಪಡುವನು ಎಂಬ ಜ್ಞಾನವೂ ಉಂಟಾಗುತ್ತದೆ. ಇದನ್ನು ನಮ್ಮ ಆತ್ಮಾದೇಹಗಳ ನಿದರ್ಶನದಿಂದ ಗ್ರಹಿಸಬಹುದು, ನಮ್ಮ ಆತ್ಮಾ ನಮ್ಮ ದೇಹವನ್ನೆಲ್ಲಾ ಧರ್ಮಭೂತ ಜ್ಞಾನದ್ವಾರಾ ವ್ಯಾಪಿಸಿರುವದರಿಂದ, ನಮ್ಮ ದೇಹದಲ್ಲಿನ ವ್ಯಾಪಾರಗಳಿಗೆಲ್ಲಾ ನಮ್ಮ ಆತ್ಮಾ ಹೇತುವು. ಮತ್ತು ನಮ್ಮ ಕುತ್ತಿಗೆಗೆ ಮರ್ಯಾದಾರ್ಥವಾಗಿ ಒಂದು ಹಾರವನ್ನು ಯಾರಾದರೂ ಸಮರ್ಪಿಸಿದರೆ ಅದರಿಂದ ಶರೀರಕ್ಕೆ ಆತ್ಮಾವಾಗಿರುವ ಈ ಜೀವಾತ್ಮನೇ ಹೇಗೆ ಅರ್ಚಿಸಲ್ಪಡುವನೋ, ಪ್ರೀತನಾಗುವನೋ, ಹಾಗೆಯೇ ಸರ್ವೇಶ್ವರನೂ ಎಂದು ಭಾವಿಸತಕ್ಕದ್ದು. ಹೀಗೆ ಸರ್ವೇಶ್ವರನು ಜಗತ್ಕಾರಣನಾಗಿ, ಸರ್ವಾಧಿಕನಾಗಿ, ಸರ್ವವ್ಯಾಪಿಯಾಗಿ ಸರ್ವನಿಯನ್ತಾವಾಗಿರುವದರಿಂದಲೇ ನಿತ್ಯನೈಮಿತ್ತಿಕಗಳ ರೂಪದಲ್ಲಿ ಮಾಡುವ

---

(೧) ಗೀ. ೭-೬. (೨) ಗೀ ೯-೪. (೩) ಗೀ ೯-೧೦. (೪) ಗೀ ೧೦-೮.

ಮೂ. ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ || ೪೭|| ||

ಸಮಸ್ತ ಕೈಂಕರ್ಯದಿಂದಲೂ ಸರ್ವೇಶ್ವರನೇ ಆರಾಧಿಸಲ್ಪಡುವನು ಎಂದು ಇಲ್ಲಿ ಹೇಳಲ್ಪಟ್ಟಿತು. ಮುಂದೆ "ಕಾರಣಂ ತು ಧ್ಯೇಯಃ" ಜಗತ್ಕಾರಣನೇ ಧ್ಯೇಯವಸ್ತು ಎಂದು ಹೇಳಿರುವ ಹಾಗೆ ಅಂತವನೇ ಉಪಾಸಿಸಲು ಯೋಗ್ಯನೆಂದು ಹೇಳಿ, ಅಂತವನನ್ನು ಉಪಾಸಿಸಿದರೆ "ತತೋ ಮಾಂ ತತ್ವತೋ ಜ್ಞಾತ್ವಾ ವಿಶತೇ ತದನಂತರಂ" (ಗೀ. ೫೫) ಪರಮ ಪದವನ್ನು ಹೊಂದುವನೆಂದು ಮುಂದೆ ಹೇಳಲ್ಪಡುತ್ತದೆ. ಈ ಶ್ಲೋಕದಲ್ಲಿ ಹೇಳಿರುವ ಅರ್ಥವು ಹಿಂದೆ ೩ನೆಯ ಅಧ್ಯಾಯದ ೩೦ನೆಯ ಶ್ಲೋಕನಾದ ಮಯಿ ಸರ್ವಾಣಿ ಕರ್ಮಾಣಿ ಸನ್ಯಸ್ಯಾಧ್ಯಾತ್ಮ ಚೇತಸಾ ಎಂಬುದರ ಅನುವಾದವೆಂದು ತೋರುತ್ತದೆ. ಹೀಗೀಗ ಕರ್ಮ ಯೋಗವನ್ನು ನಡೆಸತಕ್ಕದ್ದೆಂದು ಹಿಂದೆ ಹೇಳಿದುದನ್ನು ಜ್ಞಾಪಿಸುತ್ತಾರೆ. || ೪೬ ||

ಮೂಲಕ್ಕೆ ಅರ್ಥವು—ಹೀಗೆ ಪ್ರತಿಯೊಬ್ಬನಿಗೂ ವಿಹಿತಗಳಾದ ನಿತ್ಯನೈಮಿತ್ತಿಕಗಳನ್ನು ಫಲಕರ್ತೃತ್ವ ಮಮತಾತ್ಯಾಗ ಪೂರ್ವಕವಾಗಿ ಭಗವದಾರಾಧನೆಯು ರೂಪವಲ್ಲಿ ಅನುಷ್ಠಿಸಿದರು ಮೋಕ್ಷದಾಯಕವಾಗುವದರಲ್ಲಿ ಸಂದೇಹವಿಲ್ಲವೆಂದೂ, ಅದು ಹೇಗೆ ಮೋಕ್ಷದಾಯಕವಾಗುತ್ತದೆಂಬದನ್ನೂ ಹೇಳಲುಹೋಟು, ಹಿಂದೆ ಅರ್ಜುನನಿಗೆ ಮೂರನೆಯ ಅಧ್ಯಾಯದಲ್ಲಿ ಜ್ಞಾನಯೋಗನಿರಪೇಕ್ಷವಾಗಿಯೇ ಅನುಷ್ಠಿಸಿ ಭಕ್ತಿಯೋಗವನ್ನವಲಂಬಿಸಬಹುದೆಂಬ ಅರ್ಥವನ್ನು ಜ್ಞಾಪಿಸುತ್ತಾರಾದುದರಿಂದ ಮೂರನೆಯ ಅಧ್ಯಾಯದ ೩೫ನೆಯ ಶ್ಲೋಕವನ್ನು ಸ್ವಲ್ಪವೂ ವ್ಯತ್ಯಾಸವಿಲ್ಲದೆ ಆದನ್ನೇ ಇಲ್ಲಿ ಜ್ಞಾಪಕಕ್ಕೆ ತರುತ್ತಾರೆ. ಅಭಿಪ್ರಾಯವೇನೆಂದರೆ ಕರ್ಮಯೋಗಾನಂತರ ಜ್ಞಾನಯೋಗವನ್ನು ಅನುಷ್ಠಿಸುವದು, ಸರ್ವೇಂದ್ರಿಯೋಪರತಿಯು ಬೇಕಾಗಿ ತುಂಬಾ ಕಷ್ಟವು, ಸಪ್ರಮಾದವಾದುದು; ಆದುದರಿಂದ ಅದು ಶಕ್ತನಿಗೇ ವಿನಾ, ನೀನು ಕರ್ಮಯೋಗದಿಂದಲೇ ಸಿದ್ಧಿಯನ್ನು ಪಡೆದು ಭಕ್ತಿಯೋಗನಿಷ್ಠೆಯನ್ನು ಹೊಂದಬಹುದು, ಎಂಬೀ ಅರ್ಥವನ್ನು ಪುನಃ ಅರ್ಜುನನ ಅವಗಾಹನೆಗೆ ತರುತ್ತಾರೆ. ಇದರಿಂದ ಜ್ಞಾನಯೋಗವೂ ಸಹ ಕರ್ಮಯೋಗವನ್ನೇ ಅಂಗವಾಗಿ ಉಳ್ಳದು ಎಂದು ಏರ್ಪಟ್ಟಿತು. ಆದರೆ ಸರ್ವೇಂದ್ರಿಯಗಳ ಉಪರತಿಯು ಜ್ಞಾನಯೋಗಕ್ಕೆ ಅತ್ಯಾವಶ್ಯಕವಾದುದರಿಂದ ಅಂತಹ ವೈರಾಗ್ಯವನ್ನು ಹೊಂದುವದು ತುಂಬಾ ಕಷ್ಟವಾದುದರಿಂದ ಅದು ನಿನಗೆ ಅವಶ್ಯಕವಿಲ್ಲವು ; ಆದುದರಿಂದ ನೀನು ಭಕ್ತಿಯೋಗವನ್ನೇ ಜ್ಞಾನಯೋಗ ನಿರಪೇಕ್ಷವಾಗಿ ಅವಲಂಬಿಸಬಹುದೆಂದು ಉಪದೇಶಿಸುವ ಪ್ರಕರಣವು. **ಪರಧರ್ಮಾತ್ಸ್ವನುಷ್ಠಿತಾತ್** - ಸ್ವಧರ್ಮವು ಕರ್ಮಯೋಗವು, ಪರಧರ್ಮವು ಯಾವುದು ಎಂದರೆ ಇಂದ್ರಿಯ ವ್ಯಾಪಾರಗಳನ್ನೆಲ್ಲಾ ಅಡಗಿಸಿಕೊಂಡು ಆಚರಿಸುವ ಜ್ಞಾನಯೋಗವು, ಹೀಗೆ ಎಲ್ಲೋ ಕೆಲವರಿಂದ, ಸಮರ್ಥರಾದವರಿಂದ ಮಾತ್ರ ಜ್ಞಾನಯೋಗವು ಸಾಧ್ಯವು. ಆದುದರಿಂದ **ಸ್ವಧರ್ಮಃ** . ಪ್ರಕೃತಿ ಸಂಬಂಧದಿಂದ ತನಗಾಗಿಯೇ ಏರ್ಪಟ್ಟಿರುವ ಕರ್ಮಯೋಗವೇ ಅಥವಾ ತನಗೆ ವಿಹಿತಗಳಾಗಿರುವ ವರ್ಣಾಶ್ರಮ ಧರ್ಮಗಳನ್ನು ಅನುಷ್ಠಿಸಿ ಪರಮ ಪುರುಷನಲ್ಲಿ ಸಮರ್ಪಿಸುವದೇ. **ಶ್ರೇಯಾನ್** - ಶ್ರೇಯಃ ಪ್ರಾಪ್ತಿಗೆ ತುಂಬಾ ಅನುಕೂಲವಾಗಿ ಉತ್ಕೃಷ್ಟವಾದುದು; ಏಕೆಂದರೆ **ವಿಗುಣಃ** - ೩ನೆಯ ಅಧ್ಯಾಯದಲ್ಲಿ ಹೇಳಿರುವಹಾಗೆ ಹತ್ತು ಕಾರಣಗಳಿಂದ ವಿಶೇಷ ಗುಣವುಳ್ಳದ್ದು; ಸಹಜತ್ವ, ಸುಕರತ್ವ, ಪ್ರಮಾದರಹಿತತ್ವ, ದೇಹಯಾತ್ರೋಪಯೋಗಿತ್ವ, ಲೋಕಸಙ್ಗ್ರಹತ್ವ, ಇವೇ ಮೊದಲಾದ ವಿಶೇಷಗುಣಗಳುಳ್ಳದು. ಅಥವಾ **ವಿಗುಣೋಪಿ** - ಜ್ಞಾನಯೋಗಕ್ಕಿಂತ ಕಮ್ಮಿಗುಣವುಳ್ಳದುದಾದರೂ **ಶ್ರೇಯಾನ್** - ನಿನಗೆ ಹಿತವಾದುದು, ಎಂದೂ ಅರ್ಥ ಮಾಡಬಹುದು. ಶ್ರೀ ಯತಿವರ್ಯರು ಹೀಗೆಯೇ ಅರ್ಥ ಮಾಡಿರುತ್ತಾರೆ. ಈ

ಭಾ. ಏವಂ ತ್ಯಕ್ತ ಕರ್ತೃತ್ವಾದಿಕೋ ಮದಾರಾಧನ ರೂಪಸ್ಸ್ವಧರ್ಮಃ - ಸ್ವೇನೈವೋಪಾದಾತುಂ ಯೋಗ್ಯೋಧರ್ಮಃ; ಪ್ರಕೃತಿ ಸಂಸೃಷ್ಟೇನ ಹಿ ಪುರುಷೇಣೇನ್ದ್ರಿಯ ವ್ಯಾಪಾರರೂಪಃ ಕರ್ಮಯೋಗಾತ್ಮಕೋ ಧರ್ಮ ಸ್ಸುಕರೋಭವತಿ ; ಅತಃ ಕರ್ಮ ಯೋಗಾಖ್ಯಃ ಸ್ವಧರ್ಮೋ ವಿಗುಣೋಽಪಿ, ಪರಧರ್ಮಾತ್ - ಇನ್ದ್ರಿಯ ಜಯ ನಿಪುಣ

---

ಅರ್ಥದಲ್ಲಿ ವಿಗುಣವೆಂದರೆ ವಿಗತಗುಣೋಽಪಿ - ನಿಕೃಷ್ಟಗುಣವುಳ್ಳದ್ದಾದರೂ ಎಂಬ ಭಾವವು. ಅಪಿ ಶಬ್ದವಿಲ್ಲದಿದ್ದರೂ, ವಿಗುಣ ಶಬ್ದವು ಅಪಿ ಶಬ್ದಾರ್ಥವನ್ನು ಸೂಚಿಸುತ್ತದೆ.

ಆದರೆ ವಿಗುಣ ಶಬ್ದಕ್ಕೆ ರೂಢಿಯಾದ ಅರ್ಥವನ್ನು ಬಿಟ್ಟು ವಿಶೇಷ ಗುಣ ಉಳ್ಳದ್ದೆಂದು ಅರ್ಥ ಮಾಡಬಹುದೋ ? ಎಂದರೆ ಶ್ರೀ ವ್ಯಾಸಮಹರ್ಷಿಯ, ಅನೇಕ ಸಂದರ್ಭಗಳಲ್ಲಿ ಹಾಗೆಯೇ ಪ್ರಯೋಗವುಂಟು. ವಿಕರ್ಮ ಶಬ್ದಕ್ಕೆ ವಿವಿಧವಾದ ಕರ್ಮವೆಂದು (ನೆಯ) ಶ್ಲೋಕದಲ್ಲಿ ಅರ್ಥಮಾಡುವದು ನ್ಯಾಯವಾದರೆ ಸುಮ್ಮನೆ ವಿಗುಣಃ ಎಂದರೆ ೩ನೆಯ ಅಧ್ಯಾಯದಲ್ಲೆಲ್ಲಾ ಹೇಳಲ್ಪಟ್ಟುದುದನ್ನೆಲ್ಲಾ ಮನಸ್ಸಿನಲ್ಲಿ ಇಟ್ಟು ವಿಶೇಷ ಗುಣವುಳ್ಳದು ಎಂದು ಅರ್ಥಮಾಡುವದರಲ್ಲಿ ಸ್ವಾರಸ್ಯಕ್ಕೇನೂ ಭಂಗವಿಲ್ಲವು ಎಂದು ಹಿಂದೆಯೇ ಉಪಪಾದಿಸಿರುವೆವು. || ೪೭ ||

**ಭಾಷ್ಯಾರ್ಥವು**—ಹಿಂದೆ ವರ್ಣಾಶ್ರಮ ಧರ್ಮಗಳು ಸ್ವರೂಪತಃ ಅಪರಿತ್ಯಾಜ್ಯವೆಂದೂ ಆದರೆ ಅವುಗಳ ಕರ್ತೃತ್ವಫಲ ಮಮತೆಗಳು ಪರಿತ್ಯಾಜ್ಯವೆಂದೂ, ಹಾಗೆ ಅನುಷ್ಠಿಸಿದರೆ ಪರಮ ಪದ ಪ್ರಾಪ್ತಿಗೆ ಕ್ರಮೇಣ ಹೇತುವಾಗುತ್ತದೆಂದು ಉಪದೇಶಿಸಲ್ಪಟ್ಟಿತು; ಮತ್ತು ಮೋಕ್ಷ ಪ್ರಾಪ್ತಿಗೆ ಹೇತುವಾದ ಭಕ್ತಿಯೋಗಕ್ಕೆ ಸಾಧನವಾದದ್ದು ಕರ್ಮ ಯೋಗವೆಂದೂ, ಅದಕ್ಕೆ ನಿತ್ಯನೈಮಿತ್ತಿಕಗಳು ಅಂಗವೆಂದೂ, ಹೇಳಲ್ಪಟ್ಟಿತು. ಇಂತಹ ಕರ್ಮಯೋಗವು ಜ್ಞಾನ ಯೋಗಕ್ಕೂ ಕೂಡ ಅಂಗವೆಂದೂ, ಜ್ಞಾನಯೋಗಕ್ಕೆ ಸರ್ವೇಂದ್ರಿಯಗಳ ಉಪರತಿಯು ಆತ್ಯಾವಶ್ಯಕವಾಗಿ ತುಂಬಾ ಕಷ್ಟಸಾಧ್ಯವಾದುದರಿಂದ, ಜ್ಞಾನಯೋಗವನ್ನು ತ್ಯಜಿಸಿ ಕರ್ಮಯೋಗವನ್ನೇ ಅವಲಂಬಿಸು, ಅದರಿಂದಲೇ ನಿನಗೆ ಆತ್ಮಾವಲೋಕನ ಭಕ್ತಿಯೋಗಾರಂಭದೆಶೆಗಳು ಪ್ರಾಪ್ತವಾಗುತ್ತವೆಂದು ಹೇಳಿದ್ದರು, ಅವನ್ನೇ ಪುನಃ ಅನುವಾದ ರೂಪದಲ್ಲಿ ಜ್ಞಾಪಿಸುತ್ತಾರೆ. – ಏವಂ - ಹಿಂದೆ ೬ನೆಯ ಶ್ಲೋಕದಲ್ಲಿ ಹೇಳಿರುವಹಾಗೆ, ತ್ಯಕ್ತ ಕರ್ತೃತ್ವಾದಿಕಃ :- ಬಿಡಲ್ಪಟ್ಟ ಕರ್ತೃತ್ವ ಆದಿ ಪದದಿಂದಫಲಮಮತೆಗಳು ಹೇಳಲ್ಪಟ್ಟವು,ಬಿಡಲ್ಪಟ್ಟ ಈ ಮೂರನ್ನುಳ್ಳ ಮದಾರಾಧನರೂಪಸ್ಸ್ವಧರ್ಮಃ – ನನ್ನ ಆರಾಧನ ರೂಪವಾಗಿರುವ ಸ್ವಧರ್ಮವು ಎಂದರೆ ಸ್ವೇನೈವ ಉಪಾದಾತುಂ ಯೋಗ್ಯೋಧರ್ಮಃ - ಶರೀರ ಸಹಾಯವನ್ನು ಹೊಂದಿದ ತನ್ನಿಂದಲೇನೇ ಸುಕರವಾಗಿಯೂ ಪ್ರಮಾದರಹಿತವಾಗಿಯೂ ಅನುಷ್ಠಿಸಲು ಯೋಗ್ಯವಾದುದು. ಅದು ಹೇಗೆಂದರೆ – ಶರೀರ ಪ್ರಾಣೇಂದ್ರಿಯಗಳಿಂದ ಕೂಡಿರುವವನಿಗೆ ಕರ್ಮವನ್ನು ಎಸಗುವದು ಸಹಜವಾದುದರಿಂದ ಸ್ವಧರ್ಮವು ಕರ್ಮಯೋಗವು. ಹಾಗೆ ಸುಕರವಲ್ಲದೆಯೂ ಪ್ರಮಾದ ಯುಕ್ತವಾಗಿಯೂ, ಸರ್ವೇಂದ್ರಿಯೋಪರತಿಯು ಆವಶ್ಯಕವಾಗಿ ದುಸ್ತರವಾದುದರಿಂದಲೂ ಜ್ಞಾನಯೋಗವು ಪರಧರ್ಮವೆಂದು ಇಲ್ಲಿ ಹೇಳಲ್ಪಟ್ಟಿತು. ಇದನ್ನೇ ಮುಂದೆ ಉಪಪಾದಿಸತ್ತಾರೆ. ಪ್ರಕೃತಿಸಂಸೃಷ್ಟೇನ ಹಿ - ಶರೀರದಿಂದ ಕೂಡಿರುವ ಐದುವರಿಂದಲ್ಲವೇ, ಪುರುಷೇಣ - ಪುರುಷನಿಂದ, ಪುರುಷ ಶಬ್ದವೇ ದೇಹೀ ಎಂಬರ್ಥವುಳ್ಳದ್ದಾಗಿ ದೇಹವೆಂಬ ಪುರದಲ್ಲಿ ಶಯನಿಸಿರುವವನು ಎಂಬ ಭಾವವು ತೋರಿಬರುತ್ತದೆ, ಇನ್ದ್ರಿಯ ವ್ಯಾಪಾರರೂಪ - ಇಂದ್ರಿಯಗಳ ವ್ಯಾಪಾರರೂಪವಾದ ಕರ್ಮಯೋಗಾತ್ಮಕೋ ಧರ್ಮಃ - ಕರ್ಮಯೋಗವೆನಿಸುವ ಧರ್ಮವು, ಸುಕರೋ ಭವತಿ - ಸುಕರವಾದುದಾಗುತ್ತದೆ. ಹೀಗೆ ಸ್ವಧರ್ಮ ಶಬ್ದಕ್ಕೆ ಅರ್ಥಮಾಡು

**ಪುರುಷ ಧರ್ಮಾತ್ ಜ್ಞಾನಯೋಗಾತ್ ಸಕಲೇನ್ದ್ರಿಯ ನಿಯಮನ ರೂಪತಯಾ ಸಪ್ರಮಾದಾತ್ ಕದಾಚಿತ್ಸ್ವನುಷ್ಠಿತಾತ್ ಶ್ರೇಯಾನ್ ॥ ೪೭॥ ॥**

---

ವದೇ ಸರಿ ಎಂಬುದು ಮುಂದಿನ ಶ್ಲೋಕಾರ್ಧದಲ್ಲಿ **ಸ್ವಭಾವನಿಯತಂ** ಕರ್ಮ ಎಂಬ ಪ್ರಯೋಗದಿಂದಲೇ ಸುವ್ಯಕ್ತವು. ಕರಣ ಕಳೇಬರಾದಿಗಳನ್ನುಳ್ಳವನಿಗೆ ಕರ್ಮಗಳನ್ನೆಸಗುವದೇ ಸ್ವಭಾವ ನಿಯತವು ; ಹಾಗೆ ಇಂದ್ರಿಯ ವ್ಯಾಪಾರಗಳಿಂದ ಕೂಡಿದ ಕರ್ಮಯೋಗಾನುಷ್ಠಾನವೇ ಸ್ವಧರ್ಮವು ಎಂಬರ್ಥನೇ ಸಮಂಜಸವು. **ಅತಃ** - ಆಕಾರಣದಿಂದ, **ಕರ್ಮಯೋಗಾಖ್ಯಃ ಸ್ವಧರ್ಮಃ** ಕರ್ಮಯೋಗವೆಂದು ಹೇಳಿಸಿಕೊಳ್ಳುವ ಸ್ವಧರ್ಮವು, **ವಿಗುಣೋಪಿ** – ಜ್ಞಾನಯೋಗಕ್ಕೆ ಹೋಲಿಸಿದರೆ ಮಾಹಾತ್ಮೆಯಲ್ಲಿ ಸ್ವಲ್ಪ ಕಮ್ಮಿಯಾದರೂ **ಕೂಡ** ಏಕೆಂದರೆ ಸರ್ವೇಂದ್ರಿಯೋಪರತಿ ಇದ್ದು ಸಂಪೂರ್ಣ ವೈರಾಗ್ಯವುಂಟಾಗಿ ಆತ್ಮಜ್ಞಾನದ ಧ್ಯಾನವಿರುವದರಿಂದ ಎಂಬ ಭಾವವು, **ಅಪಿ** ಶಬ್ದವು ಮೂಲದಲ್ಲಿಲ್ಲವು, ಇಟ್ಟುಕೊಳ್ಳತಕ್ಕದ್ದು **ಪರಧರ್ಮಾತ್** ಎಂದರೆ ಇನ್ದ್ರಿಯ **ಜಯ ನಿಪುಣ ಪುರುಷ ಧರ್ಮಾತ್** - ಇಂದ್ರಿಯಗಳನ್ನು ನಿಗ್ರಹಿಸುವದರಲ್ಲಿ ಶಕ್ತನಾಗಿರುವ ಪುರುಷನ ಧರ್ಮವಾದ ಮತ್ತು ಕರ್ಮಯೋಗಕ್ಕಿಂತ **ಬೇರೆಯಾದ ಜ್ಞಾನಯೋಗಾತ್** ಜ್ಞಾನಯೋಗಕ್ಕಿಂತಲೂ **ಸಕಲೇನ್ದ್ರಿಯ ನಿಯಮನರೂಪತಯಾ ಸಪ್ರಮಾದಾತ್**-ಸಮಸ್ತ ಇಂದ್ರಿಯಗಳನ್ನು ನಿರೋಧಿಸಿ ಅನುಷ್ಠಿಸ ಬೇಕಾದ ·ಕಷ್ಟದಿಂದ **ಜ್ಞಾನ** ಯೋಗವು ಪ್ರಮಾದಯುಕ್ತವಾದುದರಿಂದ ಪ್ರಮಾದ ಹೇಗೆ ಎಂದರೆ ಏನಾದರೂ ಸ್ವಲ್ಪ ವಿಷಯದಲ್ಲಿ ಮನಸ್ಸು ಸಕ್ತವಾಗಿ ಬಿಟ್ಟರೆ ಪತನಕ್ಕೆ ಹೇತುವಾಗುವದರ ಮೂಲಕ ಪ್ರಮಾದಯುಕ್ತವಾದುದೆಂಬ ಭಾವವು, **ಕದಾಚಿತ್ಸ್ವನುಷ್ಠಿತಾತ್** - ಎಲ್ಲಿಯೋ ಸ್ವಲ್ಪಕಾಲ ಚನ್ನಾಗಿ ಇಂದ್ರಿಯ ನಿಗ್ರಹ ಮೂಲಕ ಅನುಷ್ಠಿಸಲ್ಪಟ್ಟಿದ್ದರೂ ಕೂಡ, **ಶ್ರೇಯಾನ್**–ನಿನಗೆ ಹಿತಕರವಾದುದಾಗಿ **ಶ್ರೇಷ್ಠವು.** ಮೂರನೆಯ ಅಧ್ಯಾಯದಲ್ಲಿ ಬಹು ವಿಸ್ತಾರವಾಗಿ ಉಪಪಾದಿಸಿದ ಅರ್ಥವು ಇಲ್ಲಿ **ಜ್ಞಾಪಕಕ್ಕೆ ತರಲ್ಪಟ್ಟಿತು.** ಇಲ್ಲಿ **ಸ್ವಧರ್ಮ** ಶಬ್ದವು **ವರ್ಣಾಶ್ರಮ** ನಿಯತ ಧರ್ಮವನ್ನು **ಬೋಧಿಸುವದಿಲ್ಲವು,** ಪರಧರ್ಮ ಶಬ್ದವೂ ಇತರರ ವರ್ಣಾಶ್ರಮ ನಿಯತ ಧರ್ಮವನ್ನು **ಬೋಧಿಸುವದಿಲ್ಲವು.** ಹಾಗೆ ಅರ್ಥಮಾಡಿದರೆ ಅವನವನಿಗೆ ವಿಧಿಸಿರುವ ವರ್ಣಾಶ್ರಮಧರ್ಮಗಳೇ ಅವನವನಿಗೆ ಶ್ರೇಷ್ಠವಾಗಿರುವಾಗಇಲ್ಲಿ ಉಪದೇಶಿಸಬೇಕಾದುದೇನೂ ಇರುವದಿಲ್ಲವು. ಅವನವನ ಧರ್ಮವು, ಅವನಿಗೇನೇ ಶ್ರೇಷ್ಠನೆಂದಾದನಂತರ **ವಿಗುಣ** ವಾದುದು ಹೇಗೆ? **ಶೂದ್ರನ ಧರ್ಮವು ಶೂದ್ರನಿಗೆ** ಶ್ರೇಷ್ಠವೇ. ಆಗ ವಿಗುಣತ್ವ ತಾನೇ ಎಲ್ಲಿಯದು**?** ಬ್ರಾಹ್ಮಣಧರ್ಮಕ್ಕಿಂತ **ಶೂದ್ರನ** ಧರ್ಮವು ವಿಗುಣವೆಂದು ಹೇಳುತ್ತೇವೆ ಎಂದರೆ ಬಹು ಸುಲಭವಾದ ಧರ್ಮವಾಗಿ **ಶ್ರೀ ವ್ಯಾಸ** ಮಹರ್ಷಿಯು ಅಂತಹ ಲಘುಧರ್ಮವನ್ನು ಮನಸ್ಸಿನಲ್ಲಿಟ್ಟು **ಶೂದ್ರಸ್ಸಾಧುಃ** ಎಂದು **ಕೊಂಡಾಡಿರುವಾಗ ಹೇಗೆ** ವಿಗುಣವಾದಿತು? ಬ್ರಾಹ್ಮಣನ ಆಚಾರಗಳು **ಶ್ಲಾಘ್ಯವಾದುವು, ಅದುದರಿಂದ ಶೂದ್ರನ** ವಿಹಿತ ಧರ್ಮಗಳು ವಿಗುಣವಾದುವೆಂದೇ **ಹೇಳುವೆವು** ಎಂದರೆ **ಬ್ರಾಹ್ಮಣ ಧರ್ಮವು** ವಿಗುಣವಾದರೂ ಶೂದ್ರನ ಧರ್ಮಕ್ಕಿಂತ ಉತ್ಕೃಷ್ಟವು ಎಂಬ ವಾಕ್ಯವು **ಅರ್ಥವೇ ಆಗುವದಿಲ್ಲವು.** ಆದುದರಿಂದ ಸ್ವಧರ್ಮ ಪರಧರ್ಮ ಶಬ್ದಗಳು **ವರ್ಣಾಶ್ರಮ** ಧರ್ಮಗಳನ್ನು **ಬೋಧಿಸುತ್ತವೆಂದು** ಅರ್ಥಮಾಡಿದರೆ **ಅಸಾಮಂಜಸ್ಯಕ್ಕೆ ಕಾರಣವಾಗುತ್ತದೆ.** ಪರಧರ್ಮವೆಂದರೆ **ಅವೈದಿಕಧರ್ಮವೆಂದೂ ಸ್ವಧರ್ಮವೆಂದರೆ ವೈದಿಕಧರ್ಮವೆಂದೂ** ಅರ್ಥ ಹೇಳಿ **ಅವೈದಿಕಧರ್ಮಕ್ಕಿಂತ ವೈದಿಕ ಧರ್ಮವು ಉತ್ತಮವೆಂದರೆ, ಭಿಕ್ಷಾಟನೆಯೂ ವೈದಿಕ ಕರ್ಮವೇ;** ಕ್ಷತ್ರಿಯನಾದ **ಅರ್ಜುನನು ತನಗೆ** ನಿಂದಿತವಾದ **ಭಿಕ್ಷಾಟನವನ್ನು** ಅವಲಂಬಿಸಬಹುದು ಎಂದು **ಆಗುವುದಿಲ್ಲವೇ? ಆದುದರಿಂದ ಸ್ವಧರ್ಮ ಪರಧರ್ಮಗಳೆರಡೂ ಶಿಷ್ಯನಾದ** ಅರ್ಜುನನಿಗೇನೇ **ಅನುಷ್ಠೇಯಗಳಾಗಿಯೇ ಇರ**

**ಭಾ. ಅವ. ತದೇವೋಪಪಾದಯತಿ—**

**ಮೂ. ಸ್ವಭಾವ ನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೪೭ ॥**

---

ಬೇಕೆಂದು ಇದರಿಂದ ಏರ್ಪಟ್ಟಿತು. ಕ್ಷೇತ್ರಜ್ಞನಿಗೆ ಇಂದ್ರಿಯವ್ಯಾಪಾರಗಳನ್ನು ಒಳಗೊಂಡ ಧರ್ಮವಾದ ಕರ್ಮಯೋಗವೇ **ಸ್ವ**ಧರ್ಮವು. ಇದು ಇಲ್ಲದಿರುವ ಸರ್ವೇಂದ್ರಿಯೋಪರತಿ ಇರುವದು ಜ್ಞಾನಯೋಗವು. ಅವಶ್ಯಕವಾದ ಧರ್ಮವಾದ ಕರ್ಮಯೋಗವೇ ಸ್ವಧರ್ಮವು. ಜ್ಞಾನಯೋಗಕ್ಕಿಂತ ಕರ್ಮಯೋಗವೇ ನಿನಗೆ ಸುಖಕರವಾಗಿ ಪ್ರಮಾದರಹಿತವಾಗಿ ಉಪಾಯಾನುಷ್ಠಾನವನ್ನು ಒದಗಿಸಿಕೊಡುವಂತಾದ್ದುದರಿಂದ ನಿನಗೆ ಪರಮಹಿತವಾದುದು ಎಂಬಭಾವವು.

ಹಿಂದೆ ಮೂರನೆಯ ಅಧ್ಯಾಯದಲ್ಲಿ ಕರ್ಮಯೋಗವನ್ನು ಅನುಷ್ಠಿಸಬೇಕೇ? ಜ್ಞಾನಯೋಗವನ್ನು ಅನುಷ್ಠಿಸಬೇಕೇ? ಎಂದು ಅರ್ಜುನನು ಪ್ರಶ್ನಿಸಲು, ಕರ್ಮಯೋಗವೇ ಅನುಷ್ಠಿಸತಕ್ಕದ್ದು, ಜ್ಞಾನಯೋಗವೂಕೂಡ ಕರ್ಮಯೋಗವಿಲ್ಲದೆ ಸಿದ್ಧಿಸುವದಿಲ್ಲವೆಂದು ಹೇಳಿದನು. ಅದನ್ನೇ ಶ್ರೀನಿಗಮಾಂತದೇಶಿಕರವರು ಈ ಶ್ಲೋಕವ್ಯಾಖ್ಯಾನಕ್ಕೆ ಅವತಾರಿಕೆಯಲ್ಲಿ ಹೇಳಿರುತ್ತಾರೇನೆಂದರೆ **ಕರ್ಮಯೋಗಾನ್ತರ್ಭೂತಾನಾಂ ಜ್ಞಾನಯೋಗಾಧಿಕಾರಿಣಾ ಮಪ್ಯ ಪರಿತ್ಯಾಜ್ಯತ್ವಂ ಪ್ರಾಗುಕ್ತಂ ಪ್ರತ್ಯಭಿಜ್ಞಾಪ್ಯತೇ "ಶ್ರೇಯಾನ್ಸ್ವಧರ್ಮಃ" ಇತ್ಯಾದಿಭಿಃ** ಎಂಬುದಾಗಿ ಇಲ್ಲಿಯೂ ಇದರಿಂದ ಕರ್ಮಯೋಗವು ಜ್ಞಾನಯೋಗಕ್ಕೂ ಅಙ್ಗವೆಂದೇ ಹೇಳಲ್ಪಟ್ಟಿತೆಂಬುದು ಸಿದ್ಧವು. ಹೀಗಾದ ನಂತರ ಜ್ಞಾನಯೋಗಕ್ಕಿಂತ ಕರ್ಮಯೋಗವೇ ನಿನಗೆ ಹಿತಕರವಾದುದು ಎಂದು ಹೇಳುವದರ ಅಭಿಪ್ರಾಯವೇನೆಂದು ಪ್ರಶ್ನಿಸಬಹುದು. ಇದಕ್ಕೆ ಉತ್ತರವೇನೆಂದರೆ-ಹಿಂದೆ ಮೂರನೆಯ ಅಧ್ಯಾಯದಲ್ಲಿ ಅರ್ಜುನನ ಪ್ರಶ್ನೆಗೆ ಉತ್ತರವನ್ನು ಹೇಳುವ ಸಂದರ್ಭದಲ್ಲಿ, ಉಪಾಸನಾರೂಪವಾದ ಉಪಾಯನಿಷ್ಠೆಗೆ ಸಾಧಕವಾದ ಮಾರ್ಗವು ಎರಡೆಂದೂ, ಒಂದು ಸಮರ್ಥರಾದವರಿಗೆ ಜ್ಞಾನಯೋಗ ನಿಷ್ಠೆಯಮೂಲಕವೆಂದೂ, ಅಸಮರ್ಥರಾದ ಅರ್ಜುನಾದಿಗಳಿಗೆ ಜ್ಞಾನಯೋಗದ ಅಪೇಕ್ಷೆಯೇ ಇಲ್ಲದೆ ಬರೀ ಕರ್ಮಯೋಗಮೂಲಕವೇ ಎಂದೂ ಹೇಳಿದ್ದನು. ಅದನ್ನೇ ಈಗ ಪುನಃ ಅರ್ಜುನನ ಅವಗಾಹನೆಗೆ ತರುತ್ತಾರೆ. ಆದುದರಿಂದ ಆ ಅಧ್ಯಾಯದ ಅರ್ಧ ಶ್ಲೋಕವೇ ಏನೊಂದೂ ವ್ಯತ್ಯಾಸವಿಲ್ಲದೆ ಪುನಃ ಇಲ್ಲಿ ಹೇಳಲ್ಪಟ್ಟಿರವದು. ಅಶಕ್ತನು ಜ್ಞಾನಯೋಗವನ್ನು ಬಿಡಬಹುದು; ಕರ್ಮಯೋಗವನ್ನು ಬಿಡಲು ಎಂದಿಗೂ ಸಾಧ್ಯವಿಲ್ಲವೆಂಬ ಭಾವವು. ॥ ೪೭ ॥

**ಭಾಷ್ಯಾವತಾರಿಕೆಯ ಅರ್ಥವು**—ಜ್ಞಾನಯೋಗಕ್ಕೆ ಶಕ್ತಿಯಿಲ್ಲದ ನೀನಾದರೋ, ಅದನ್ನು ತ್ಯಜಿಸಿ, ಕರ್ಮಯೋಗವೇ ಸುಕರವಾಗಿ ಪ್ರಮಾದರಹಿತವಾಗಿ ಉಪಾಯವನ್ನು ಸಾಧಿಸಿಕೊಡುವದರಿಂದ, ಅದೇ ನಿನಗೆ ಹಿತಕರವಾಗಿ ಉತ್ತಮವಾದುದೆಂದು ಮೇಲಿನ ಅರ್ಧಶ್ಲೋಕದಲ್ಲಿ ಹೇಳಿದುದನ್ನೇ ಉತ್ತರಾರ್ಧದಿಂದ ಉಪಪಾದಿಸುತ್ತಾರೆಂದು, **ತದೇವ ಉಪಪಾದಯತಿ** - ಅದನ್ನೇ ಉಪಪಾದಿಸಿ ಹೇಳುತ್ತಾರೆಂದು ಅವತಾರಿಕೆಯು. ತದೇವ ಎಂದರೆ ಕರ್ಮಯೋಗವನ್ನು ಅನುಷ್ಠಿಸುವದೇ ನಿನಗೆ ಯೋಗ್ಯವು, ಶ್ರೇಯಸ್ಕರವು, ಬಂಧಕವಲ್ಲವೆಂಬುದನ್ನೇ ಎಂಬರ್ಥವು ಏಕೆಂದರೆ ಕರ್ಮಯೋಗದಲ್ಲಿ ಪ್ರಮಾದವಿಲ್ಲವು. ಜ್ಞಾನಯೋಗದಲ್ಲಾದರೋ ಪ್ರಮಾದವುಂಟು, ಎಂದು ಹಿಂದೆ ಹೇಳಿದುದನ್ನೇ ಅನುವಾದಮಾಡಿ ಹೇಳುತ್ತಾರೆ. ಕರ್ಮಯೋಗವನ್ನು ಫಲಾಭಿಸಂಧಿ ಮೊದಲಾದವಿಲ್ಲದೆ ಅನುಷ್ಠಿಸುವದರಿಂದ ಬಂಧಕವಲ್ಲವು. ಜ್ಞಾನಯೋಗದಲ್ಲಾದರೋ ಸರ್ವೇಂದ್ರಿಯ ನಿಯಮನವು ಸಿದ್ಧಿಸದೇ ಹೋಗಿ ಅನಿಷ್ಟವಾದ ಪುನಸ್ಸಂಸಾರಕ್ಕೆ ಹೇತುವಾಗಬಹುದೆಂಬ ಭಾವವು.

**ಮೂಲಕ್ಕೆ ಅರ್ಥವು**—ಓ ಅರ್ಜುನನೇ ನಿನಗೆ ಹಿಂದೆ "**ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮೋಭಯಾವಹಃ** (ಗೀ ೩-೩೫) ಎಂದು ಹೇಳಿದುದು ಜ್ಞಾಪಕದಲ್ಲಿರಬಹುದು. ಅದನ್ನೇ

ಪುನಃ ನಿನ್ನ ಸ್ಮೃತಿಪಥಕ್ಕೆ ತರುವೆನು ಎಂದು ಹೇಳುವಸಂದರ್ಭವು. **ಸ್ವಭಾವನಿಯತಂಕರ್ಮ**-ಶರೀರೇಂದ್ರಿಯಗಳನ್ನು ಹೊಂದಿರುವ ನಿನಗೆ ಸ್ವಾಭಾವಿಕವಾಗಿ ಪ್ರಾಪ್ತವಾದ ಕರ್ಮವನ್ನು, ಶಾಸ್ತ್ರವಿಹಿತವಾಗಿ, ವರ್ಣಾಶ್ರಮಗಳಿಗೆ ನಿಯತವಾದ ಕರ್ಮವನ್ನು, ಶರೀರೇಂದ್ರಿಯಗಳ ಮೂಲಕ ಶಾಸ್ತ್ರ ವಿಹಿತವಾದ ಕರ್ಮವನ್ನು ಎಂಬ ಭಾವವು, **ಕುರ್ವನ್** - ನಾನು ನಿನಗೆ ಹಿಂದೆ ಉಪದೇಶಿಸಿದಹಾಗೆ ಫಲಕರ್ತೃತ್ವಮಮತಾತ್ಯಾಗಪೂರ್ವಕವಾಗಿಮಾಡಿ ಅದನ್ನು ನನಗೆ ಸಮರ್ಪಿಸು ವವನಾದರೆ, **ಕಿಲ್ಬಿಷಂ** - ಪುನಃ ಸಂಸಾರಹೊಂದುವ ದೋಷವನ್ನು, **ನಾಪ್ನೋತಿ** - ಹೊಂದುವ ದಿಲ್ಲವು, ಎಂದರೆ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪವು ತೊಲಗಿ ಭಕ್ತಿಯೋಗವು ಕೈಗೂಡುತ್ತದೆಂಬ ಭಾವವು. ಕರ್ಮಯೋಗಾನುಷ್ಠಾನದಲ್ಲಿ ಆತ್ಮನಾಶಕ್ಕೆ ಅವಕಾಶವಿಲ್ಲವು; ಏಕೆಂದರೆ ಅದು ಸುಕರವಾಗಿ ಪ್ರಮಾದ ರಹಿತವಾಗಿ ಇಂದ್ರಿಯವ್ಯಾಪಾರಗಳನ್ನೊಳಗೊಂಡದಾ ಗಿರುವದರಿಂದ. ಹೀಗೆ ಹೇಳಿದುದರಿಂದ ಜ್ಞಾನಯೋಗವು ಸ್ವಭಾವನಿಯತವಲ್ಲದುದಾಗಿ, ಸರ್ವೇಂದ್ರಿಯ ವ್ಯಾಪಾರೋಪರತಿ ಬೇಕಾದುದಾಗಿ ಅಕಾರಣದಿಂದ ಚ್ಯವನ ಧರ್ಮವುಳ್ಳದ್ದಾಗಿ ದುಷ್ಕರವಾದುದೆಂದು ಹೇಳಿದಂತಾಯಿತು. **"ನಿರಾಶೀರ್ಯತ ಚಿತ್ತಾತ್ಮಾ ತ್ಯಕ್ತ ಸರ್ವ ಪರಿಗ್ರಹಃ। ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್"** (೧೪-೨೧) ಎಂಬುದು ಈ ಸಂದರ್ಭದಲ್ಲಿ ಅನುಸಂಧೇಯವು. ಆತ್ಮ ಯಾಥಾತ್ಮ್ಯ ಜ್ಞಾನದೊಂದಿಗೆ ಯಾವಾಗ ಕರ್ಮ ಯೋಗವು ಫಲಸಂಗ ಕರ್ತೃತ್ವಗಳನ್ನು ತ್ಯಾಗಮಾಡಿ ಪರಮಪುರುಷನಲ್ಲಿ ಸಮರ್ಪಿಸಲ್ಪಟ್ಟಿತೋ, ಆಗ ಕೇವಲಂ ಶಾರೀರಂ ಕರ್ಮಕುರ್ವನ್ನಪಿ, ಪಾಪ ಪುಣ್ಯರೂಪಕರ್ಮಲೇಪವಿಲ್ಲವು. ಜ್ಞಾನ ಯೋಗದ ಅವಶ್ಯಕವಿಲ್ಲದೆಯೇ ಭಕ್ತಿಯೋಗಕ್ಕೆ ಅಧಿಕಾರಿಯಾಗುವನು. ಜ್ಞಾನಯೋಗ ದಿಂದುಟಾಗುವ ಆತ್ಮಾವಲೋಕನ ಸಿದ್ಧಿಯು, ಈ ಕರ್ಮಯೋಗದಿಂದಲೇ ಲಭಿಸುತ್ತದೆ. ಕರ್ಮಯೋ ಗವು ಅಂತಹ ಮಾಹಾತ್ಮ್ಯಯನ್ನುಳ್ಳದ್ದೆಂದು ೩ನೆಯ ಅಧ್ಯಾಯದಲ್ಲೆಲ್ಲಾ ಉಪದೇಶಿಸುವದನ್ನು ಈ ೪೭ನೆಯ ಶ್ಲೋಕದ ಪೂರ್ವಾರ್ಧ ಉತ್ತರಾರ್ಧಗಳಿಂದ ಜ್ಞಾಪಕಕ್ಕೆ ತರುತ್ತಾರೆ. ಹಿಂದೆ ಹೇಳಿದುದರ ಉಪಪಾದನೆಯೂ ಸಮರ್ಥನೆಯೂ ಸಹ ಈ ೧೮ನೆಯ ಅಧ್ಯಾಯದಲ್ಲಿ ಹೇಳಿರುವದ ರಿಂದ ಹಿಂದೆ ಮೂರನೆಯ ಮತ್ತು ನಾಲ್ಕನೆಯ ಅಧ್ಯಾಯಾರ್ಥಗಳ ಅನುಸಂಧಾನವು ಇಲ್ಲಿ ಮಾಡಲ್ಪಟ್ಟಿತು. ಆದುದರಿಂದ ಅಲ್ಲಿ ಹೇಳಿದ ಶ್ಲೋಕಾರ್ಥವನ್ನೇ ಏನೊಂದು ವ್ಯತ್ಯಾಸವಿಲ್ಲದೆ **"ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್"** ಎಂದು ಹೇಳಲ್ಪಟ್ಟಿರುತ್ತದೆ. ಹಾಗೆ ಹಿಂದಿನ ಶ್ಲೋಕವನ್ನೇ ವ್ಯತ್ಯಾಸವಿಲ್ಲದೆ ಇಲ್ಲಿ ಪ್ರಯೋಗಿಸಿರುವದರಿಂದ ಈ ೧೮ನೆಯ ಅಧ್ಯಾಯವೆಲ್ಲಾ ಹಿಂದೆ ಹೇಳಿದುದರ ಅನುಸಂಧಾನವೆಂದು ಭಾವಿಸತಕ್ಕದ್ದು. ಆದುದರಿಂದ ಹಿಂದಿನ ಅಭಿಪ್ರಾಯಗಳ ಅನುವಾದವು, ಪುನರುಕ್ತಿದೋಷಕ್ಕೆ ಗುರಿಯಾಗುವದಿಲ್ಲವು. ಮೂಲ ದಲ್ಲಿ ವಿಗುಣಃ ಎಂದಿಷ್ಟುಮಾತ್ರವಿರುವಾಗ ವಿಗುಣೋಪಿ ಎಂದು ಅಪಿ ಸೇರಿಸಿ ಅರ್ಥಮಾಡಿದುದು ಹೇಗೆ? ಎಂದರೆ ಅರ್ಥವಾಗಿ ಪ್ರವೃತ್ತಿ ಧರ್ಮವೆಂದು ಹೇಳಬಹುದೆಂದೂ ಅದು ಪ್ರಸನ್ನಯೋಗ್ಯ ವಲ್ಲವಲ್ಲಾ ಎಂಬ ಆಕ್ಷೇಪಬಂದೀತಾಗಿ ವಿಗುಣವು. ಅದು ವಾಸ್ತವವಾಗಿ ವಿಗುಣವಲ್ಲವು ಏಕೆಂದರೆ ಫಲಕರ್ತೃತ್ವಮಮತೆಗಳನ್ನು ತ್ಯಾಗಮಾಡಿ ಭಗವಂತನಲ್ಲಿ ಸಮರ್ಪಿಸುವದರಿಂದ ನಿವೃತ್ತಿ ಧರ್ಮವು. ಅಪಿ ಶಬ್ದವು ಮೂಲದಲ್ಲಿಲ್ಲವಾದುದರಿಂದ ನಾವು ಒಪ್ಪುವದಿಲ್ಲವು ಎಂದರೆ ವಿ ಎಂಬುದಕ್ಕೆ ವಿಶೇಷವೆಂದು ಅರ್ಥಮಾಡಿ ಸ್ವಧರ್ಮವಾದ ಕರ್ಮಯೋಗವು, ಹಿಂದೆ ೧೦ ಕಾರಣ ಗಳಿಂದ ವಿಶೇಷ ಗುಣವುಳ್ಳದು ಎಂದೂ ಅರ್ಥಮಾಡಬಹುದು.

**ಭಾಷ್ಯಾರ್ಥವು**—ಹಿಂದೆ ಅವರವರ ವರ್ಣಾಶ್ರಮ ಧರ್ಮಗಳನ್ನು ತ್ಯಾಗಮಾಡತಕ್ಕದ್ದಲ್ಲ ವೆಂದೂ, ಅವುಗಳನ್ನು ಅಗತ್ಯ ಅನುಷ್ಠಿಸಿ ಪರಮಾತ್ಮನಲ್ಲಿಸಮರ್ಪಿಸಿದರೆ, ಪರಪ್ರಾಪ್ತಿಗೆ ಸಹಾಯ ವಾಗುತ್ತದೆಂದು ಹೇಳಲ್ಪಟ್ಟಿತು. ಈಗ ಅಂತಹ ಕರ್ಮನಿಷ್ಠೆಯೇ ಜ್ಞಾನಯೋಗಕ್ಕೂ ಕೂಡ

**ಭಾ. ಪ್ರಕೃತಿ ಸಂಸೃಷ್ಟಸ್ಯ ಇನ್ದ್ರಿಯವ್ಯಾಪಾರರೂಪತಯಾ ಸ್ವಭಾವತ ಏವ ನಿಯತತ್ವಾತ್ಕರ್ಮಣಃ ಕರ್ಮಕುರ್ವ್ನ ಕಿಲ್ಬಿಷಂ–ಸಂಸಾರಂ, ನಪ್ರಾಪ್ನೋತಿ, ಅಪ್ರಮಾದತ್ವಾತ್ಕರ್ಮಣಃ; ಜ್ಞಾನಯೋಗಸ್ಯ ಸಕಲೇನ್ದ್ರಿಯ ನಿಯಮನ ಸಾಧ್ಯತಯಾ**

---

ಅವಶ್ಯಕವೆಂದು ಅವುಗಳ ವಿಧಾನವನ್ನು **"ದೈವ ಮೇವಾ ಪರೇ ಯಜ್ಞಂ"** ಎಂದು ಹಿಂದೆ ಹೇಳಿದುದನ್ನು ಜ್ಞಾಪಿಸಿ, ಜ್ಞಾನಾಗ್ರೇಸರನಾಗಿ ಜ್ಞಾನಯೋಗ ಯೋಗ್ಯತೆ ಇದ್ದರೂ ಕೂಡ, ಈ ಸುಕರವಾದ ಕರ್ಮಯೋಗವನ್ನು ತ್ಯಾಗಮಾಡದೆ ಅನುಷ್ಠಿಸಿದುದಾದರೆ, ಈತನಿಗೆ ಸಂಸಾರ ನಿವೃತ್ತಿಯುಂಟಾಗುತ್ತದೆಂದು ಹೇಳುತ್ತಾರೆ. ಈ ಉತ್ತರಾರ್ಧದಲ್ಲಿ ಹೇಳಿರುವದು ಪೂರ್ವಾರ್ಧದಲ್ಲಿ ಹೇಳಿದ ವರ್ಣಾಶ್ರಮಧರ್ಮಪರವಲ್ಲವಾದುದರಿಂದ, ಪೂರ್ವಾರ್ಧಉತ್ತರಾರ್ಧಗಳನ್ನು ಪ್ರತ್ಯೇಕಿಸಿ ಅರ್ಥಮಾಡಿರುತ್ತಾರೆ. ಈ ಉತ್ತರಾರ್ಧದಲ್ಲಿ ಕಿಲ್ಬಿಷವೆಂದರೆ ಪಾಪವು; ಅದಕ್ಕಿಂತ ಪುಣ್ಯವು ಲೇಸು ಎಂಬರ್ಥವೂ ಅಲ್ಲವು, ಅವೈದಿಕ ಧರ್ಮಕ್ಕಿಂತ ವೈದಿಕ ಧರ್ಮವು ಲೇಸು ಎಂಬರ್ಥವೂ ಅಲ್ಲವು. ಆದುದರಿಂದ **ಸ್ವಭಾವನಿಯತಂ** ಕರ್ಮವೆಂದರೇನೆಂಬುವದನ್ನು ಭಾಷ್ಯದಲ್ಲಿ ತಿಳಿಸುತ್ತಾರೆ. **ಪ್ರಕೃತಿ ಸಂಸೃಷ್ಟಸ್ಯ** - ಶರೀರದಿಂದಕೂಡಿರುವ ಬದ್ಧಾತ್ಮನಿಗೆ, **ಇನ್ದ್ರಿಯವ್ಯಾಪಾರ ರೂಪತಯಾ** - ಏಕಾದಶೇಂದ್ರಿಯಗಳ ವ್ಯಾಪಾರರೂಪದಿಂದ, **ಕರ್ಮಣಃ ನಿಯತತ್ವಾತ್** - ಕರ್ಮಮಾಡುವದೆಂಬುವದು ನಿಯತವಾದುದರಿಂದ, **ಕರ್ಮ ಕುರ್ವ್ನ** - ಶರೀರೇಂದ್ರಿಯಗಳ ಸಹಾಯದಿಂದ ನಡೆಸುವ ವಿಹಿತ ಕರ್ಮಯೋಗವನ್ನು ಅನುಷ್ಠಿಸುವವನಾಗಿ, **ಕಿಲ್ಬಿಷಂ** - ಸಂಸಾರವನ್ನು, **ನ ಪ್ರಾಪ್ನೋತಿ** - ಹೊಂದುವದಿಲ್ಲವು. ಏಕೆಂದರೆ **ಅಪ್ರಮಾದತ್ವಾತ್ ಕರ್ಮಣಃ** - ಕರ್ಮಯೋಗದಲ್ಲಿ ಪ್ರಮಾದಕ್ಕೇನೂ ಕಾರಣವಿಲ್ಲದುದರಿಂದ. ಉಪಾಯಾನುಷ್ಠಾನಕ್ಕೆ ಶರೀರಿಗೆ ಶರೀರೇಂದ್ರಿಯಗಳ ಮೂಲಕ ಕರ್ಮವನ್ನು ಮಾಡುವದೇ **ಸಹಜ**ವಾದ ಧರ್ಮವು. ಕರ್ಮಯೋಗವು ಅಂತಹ ಶರೀರೇಂದ್ರಿಯಗಳ ಪ್ರವೃತ್ತಿಯುಳ್ಳದಾದುದರಿಂದ ಸುಕರವಾಗಿ ಏನೊಂದೂ ಪ್ರಮಾದವಿಲ್ಲದೆ ಸಿದ್ಧಿಸುವದರಿಂದ ಉಪಾಯಾನುಷ್ಠಾನದ ಮೂಲಕ ಸಂಸಾರ ಬಂಧವು ಕಳೆದುಹೋಗುತ್ತದೆಂಬ ಭಾವವು. ಇಲ್ಲಿ ಸ್ವಭಾವನಿಯತವೆಂದು ಹೇಳಿರುವದು ಜಾತ್ಯಾದಿಗಳಿಗೆ ನಿಯತವಾದ ಧರ್ಮವಲ್ಲವೆಂದು ಹೇಳುವದಕ್ಕಾಗಿಯೇ, **ತದೇವ ಉಪಪಾದಯತಿ** ಎಂಬ ಅವತಾರಿಕೆಯು. ಹಾಗೆ ಜಾತ್ಯಾದಿ ಧರ್ಮವೆಂದು ಏಕೆ ಅರ್ಥಮಾಡಕೂಡದು ?ಎಂದಾಪೇಕ್ಷಿಸಿದರೆ, ಪ್ರಕರಣವು ಜ್ಞಾನಯೋಗಕ್ಕಿಂತ ನಿನಗೆ ಕರ್ಮಯೋಗವೇ ಪರಮಹಿತಕರವಾದುದಾಗಿ ಶ್ರೇಯಸ್ಕರವೆಂದು ಮೂರನೆಯ ಅಧ್ಯಾಯದಲ್ಲಿ ಹೇಳಿರುವದರ ಸಮರ್ಥನೆಯಾದುದರಿಂದ ಅಂತಹ ಪ್ರಕರಣಕ್ಕೆ ಸರಿಹೋಗುವದಿಲ್ಲವು. ಇಲ್ಲಿ ಶರೀರೇಂದ್ರಿಯ ಪ್ರವೃತ್ತಿಗಳು ಶ್ಲಾಘಿಸಲ್ಪಟ್ಟವು, ಸರ್ವೇಂದ್ರಿಯೋಪರತಿಯು ನಿಂದಿಸಲ್ಪಟ್ಟಿತೆಂದು ಸರ್ವಾತ್ಮನಾ ಭಾವಿಸತಕ್ಕದ್ದಲ್ಲವು. ಕರ್ಮಯೋಗವು ಶರೀರೇಂದ್ರಿಯ ಪ್ರವೃತ್ತಿಗಳಾಗಿ, ಆ ಪ್ರವೃತ್ತಿಗಳು ಆತ್ಮಜ್ಞಾನದೊಂದಿಗೆ ಪರಮಪುರುಷಾರಾಧನ ರೂಪದಲ್ಲಿ ಫಲಕರ್ತೃತ್ವ ಮಮತೆಗಳಿಲ್ಲದೆ ಮಾಡಲ್ಪಡುವದರಿಂದ ಭಗವದನುಗ್ರಹವೇ ಉಂಟಾಗಿ ಶ್ರೇಯಸ್ಸನ್ನುಂಟುಮಾಡುವದರಿಂದ, ಶರೀರೇಂದ್ರಿಯಗಳ ಪ್ರವೃತ್ತಿರೂಪವ ದರೂ ಸ್ವಲ್ಪ ಕಾಯ ಕ್ಲೇಶಉಂಟಾದರೂ, ನಿಂದಿತವಲ್ಲವಾದುದರಿಂದ, ಕರ್ಮಯೋಗವೇ ನಿನಗೆ ಶ್ರೇಯಸ್ಕರವಾದುದೆಂದು ಹಿಂದೆ ಹೇಳಿದುದನ್ನೇ ನಿಗಮನದಲ್ಲಿ ಪುನಃ ಉಪಪಾದಿಸಿ ಜ್ಞಾಪಿಸುವ ಪ್ರಕರಣವು. ಆದುದರಿಂದ ಜಾತ್ಯಾದಿಧರ್ಮವೆಂದು ಅರ್ಥಮಾಡಲು ಸಾಧ್ಯವೇ ಇಲ್ಲವಾಗಿ ಶರೀರೇಂದ್ರಿಯಗಳುಳ್ಳ ಸ್ವಭಾವಕ್ಕೆ ನಿಯತಂ ಎಂದೇ ಅರ್ಥವನ್ನು ಹೇಳಬೇಕಾಗಿರುತ್ತದೆ, ಹೇಗೆಂದರೆ, ವಿಷತರುವಿನಲ್ಲೂ ಬೇವಿನವೃಕ್ಷದಲ್ಲೂ ಇರುವ ಕ್ರಿಮಿಗೆ ಅದರ ಆಹಾರವೇ ಹೇಗೆ ಸ್ವಭಾವ ನಿಯತವೋ, ಹಾಗೆಯೇ ಶರೀರೇಂದ್ರಿಯಗಳುಳ್ಳವ

**ಸಪ್ರಮಾದತ್ವಾತ್ ತನ್ನಿಷ್ಠಸ್ತು ಪ್ರಮಾದಾತ್ಕಿಲ್ಬಿಷಂ ಪ್ರತಿಪದ್ಯೇತಾಪಿ ಅತಃ ಕರ್ಮನಿಷ್ಠೈವ ಜ್ಯಾಯಸೀತಿ ತೃತೀಯಾಧ್ಯಾಯೋಕ್ತಂ ಸ್ಮಾರಯತಿ ॥ ೪೭ ॥**

---

ನಿಗೆ ಸ್ವಭಾವ ನಿಯತವು ಕರ್ಮ ಮಾಡುವದೆಂಬ ಭಾವವು. ಇಲ್ಲಿ ಕಿಲ್ಬಿಷವೆಂದರೆ ಪಾಪವೆಂಬರ್ಥವಾಗುವಾಗ ಸಂಸಾರವೆಂಬ ವ್ಯಾಖ್ಯಾನವು ಹೇಗೆ? ಎಂದರೆ ಕರ್ಮಯೋಗಾನುಷ್ಠಾತೃವಿಗೆ ಪಾಪಗಳು ನಷ್ಟವಾಗುತ್ತವೆ; ಆತನು ಈಗ ಮಾಡುವ ಕರ್ಮಗಳು ಪರಮಾತ್ಮನಲ್ಲಿ ಸಮರ್ಪಿಸಲ್ಪಟ್ಟವಾದುದರಿಂದ ಬಂಧಕಗಳಾಗುವದಿಲ್ಲವು; ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪಗಳು ತೊಲಗುವದರಿಂದ, ಉಪಾಯಾನುಷ್ಠಾನಾರಂಭಕ್ಕೂ ಉಪಾಯನಿಷ್ಪತ್ತಿಗೂ ಹೇತುವಾಗುವದರಿಂದ **ಕಿಲ್ಬಿಷಂನಾಪ್ನೋತಿ** ಎಂದರೆ **ಪುನಃಸಂಸಾರಂನಪ್ರಾಪ್ನೋತಿ** ಎಂಬ ವ್ಯಾಖ್ಯಾನವು. ಕರ್ಮಯೋಗವೇ ನಿನಗೆ ಶ್ರೇಯಸ್ಕರವಾದುದು ಎಂದು ಹೇಳಿದುದರಿಂದ ಹಿಂದೆ ಮೂರನೆಯ ಅಧ್ಯಾಯದಲ್ಲಿ ಪ್ರತಿಪಾದಿಸಲ್ಪಟ್ಟ ಜ್ಞಾನಯೋಗಕ್ಕೆ ಸರ್ವೇಂದ್ರಿಯೋಪರತಿಯು ಆವಶ್ಯಕವಾದುದರಿಂದ ಅದು ದುಷ್ಕರವೆಂದೂ ಸಪ್ರಮಾದವೆಂದೂ ಹೇಳಿದುದನ್ನು ಜ್ಞಾಪಕಕ್ಕೆ ತರಲ್ಪಟ್ಟಿತೆಂದು ವ್ಯಾಖ್ಯಾನ ಮಾಡಿರುತ್ತಾರೆ. **ಜ್ಞಾನಯೋಗಸ್ಯ** - ಜ್ಞಾನಯೋಗಕ್ಕೆ, **ಸಕಲೇನ್ದ್ರಿಯ ನಿಯಮನ ಸಾಧ್ಯತಯಾ** - ಅದು ಸಕಲೇಂದ್ರಿಯಗಳ ನಿಗ್ರಹದಿಂದ ಸಾಧಿಸಲ್ಪಡುವಂತಹದ್ದಾದುದರಿಂದ, **ಸಪ್ರಮಾದತ್ವಾತ್** - ಪ್ರಮಾದವುಳ್ಳ ಭಾವವಿರುವದರಿಂದ, **ತನ್ನಿಷ್ಠಸ್ತು** - ಆ ಜ್ಞಾನಯೋಗನಿಷ್ಠನಾದರೋ, **ಪ್ರಮಾದಾತ್**-ಪ್ರಮಾದದಿಂದ **ಕಿಲ್ಬಿಷಮಪಿ** - ಸಂಸಾರವನ್ನೂ ಕೂಡ **ಪ್ರತಿಪದ್ಯೇತ** - ಹೊಂದಿದರೂ ಹೊಂದುವ ಸಂಭವವೂ ಉಂಟು; **ಅತಃ** - ಆ ಕಾರಣದಿಂದ, **ಕರ್ಮನಿಷ್ಠೈವ ಜ್ಯಾಯಸೀತಿ** - ಈ ಶ್ಲೋಕದ ಪೂರ್ವಾರ್ಧದಲ್ಲಿ ಹೇಳಿದಹಾಗೆ ಕರ್ಮನಿಷ್ಠೆಯೇ ನಿನಗೆ ಶ್ರೇಯಸ್ಕರವಾದುದೆಂದು **ತೃತೀಯಾಧ್ಯಾಯೋಕ್ತಂ** - ಮೂರನೆಯ ಅಧ್ಯಾಯದಲ್ಲಿ ಉಪದೇಶಿಸಲ್ಪಟ್ಟ ಅಭಿಪ್ರಾಯವನ್ನು, **ಸ್ಮಾರಯತಿ** - ಜ್ಞಾಪಕಕ್ಕೆ ಕೊಟ್ಟಿರುತ್ತಾರೆ, ಸ್ಮರಿಸುವ ಹಾಗೆ ಮಾಡಿರುತ್ತಾರೆಂಬ ಭಾವವು. ಇದು ಪುನರುಕ್ತಿಯೇನೂ ಅಲ್ಲವು. ಹಿಂದೆ ಹೇಳಿದುದನ್ನೆಲ್ಲಾ ಸಮರ್ಥನೆಯನ್ನು ಮಾಡಿ ಹೇಳುವ ಪ್ರಸಂಗವೆಂದು ಸೂಚಿಸುವದಕ್ಕಾಗಿ **ತೃತೀಯಾಧ್ಯಾಯೋಕ್ತಂ ಸ್ಮಾರಯತಿ** ಎಂಬ ವ್ಯಾಖ್ಯಾನವು ಹಿಂದೆ ಹೇಳಿದುದರ ಅನುಸಂಧಾನವು. ಈ ಶ್ಲೋಕಕ್ಕೆ ಇತರರು ಬೇರೇ ವಿಧವಾಗಿ ಅರ್ಥ ಮಾಡುವದು ಸರಿಯಲ್ಲವೆಂದು ತೋರುವದಕ್ಕಾಗಿಯೂ; ಕರ್ಮಯೋಗವೇ ಅರ್ಜುನನಿಗೆ ಉಪದೇಶಿಸಲ್ಪಟ್ಟಿತು ಎಂದು ತಿಳಿಸುವದಕ್ಕಾಗಿಯೂ, ಪುನರುಕ್ತಿಯಲ್ಲದೆ ಹಿಂದೆ ಹೇಳಿದುದರ ಅನುವಾದವೆಂದು ಸೂಚಿಸುವದಕ್ಕಾಗಿಯೂ, **ತೃತೀಯಾಧ್ಯಾಯೋಕ್ತಂ** ಎಂಬ ವ್ಯಾಖ್ಯಾನವು.

**ಮೂಲಕ್ಕೆ ಅರ್ಥವು**—ಮೂರನೆಯ ಅಧ್ಯಾಯದಲ್ಲಿ ಕರ್ಮಯೋಗವೇ ಸುಕರವಾಗಿ ಪ್ರಮಾದರಹಿತವಾಗಿ ಇರುವದರಿಂದ ನಿನಗೆ ಹಿತಕರವಾದುದೆಂದು ಹೇಳಿದುದನ್ನೇ ಪುನಃ ಇಲ್ಲಿ ಅನುವಾದ ಮಾಡಿ ತಿಳಿಸುತ್ತಾರೆ. ಜ್ಞಾನಯೋಗವು ದುಷ್ಕರವು ಸಪ್ರಮಾದವಾದುದು. ಅದುದರಿಂದ ನೀನು ಕರ್ಮಯೋಗವನ್ನೇ ಮಾಡು, ಉಪಾಯಸಿದ್ಧಿಯುಂಟಾಗುತ್ತದೆಂದು ಹೇಳಿದುದನ್ನೇ ಪುನಃ ಜ್ಞಾಪಕಕ್ಕೆ ಕೊಡುತ್ತಾರೆ. ಕರ್ಮಯೋಗದಲ್ಲಿ ನಿತ್ಯನೈಮಿತ್ತಿಕಾದಿ ಪಂಚ ಮಹಾಯಜ್ಞಗಳು ಇವುಗಳೆಲ್ಲಾ ಇರುವದರಿಂದ ಇವುಗಳ ಅನುಷ್ಠಾನವು ಕ್ಲೇಶಕರವಲ್ಲವೇ ಎಂದು ಅರ್ಜುನನು ಆಕ್ಷೇಪಿಸಬಹುದೆಂದು ನೆನಸಿ, ಹಾಗಾದರೆ ಯಾವ ಅನುಷ್ಠಾನ ತಾನೇ ಕ್ಲೇಶಕರವಲ್ಲವು; ಜ್ಞಾನಯೋಗಕೂಡ ಕರ್ಮಯೋಗಕ್ಕಿಂತ ಕ್ಲೇಶಕರವು, ಅದುದರಿಂದ ಈ ಎಲ್ಲಾ ಅನುಷ್ಠಾನಗಳೂ ಕ್ಲೇಶಕರವಾದವುಗಳೇ. ಏಕೆಂದರೆ ಇವೆಲ್ಲಾ ಪ್ರವೃತ್ತಿಗಳಿಗೂ ಕಾಯ ಕ್ಲೇಶಾದಿಗಳುಂಟು. ಅಷ್ಟು ಮಾತ್ರದಿಂದಲೇ ವಿಗುಣವೆಂದೂ ಸದೋಷವೆಂದೂ ಹೇಳಲ್ಪಟ್ಟವು.

**ಮೂ. ಸಹಜಂ ಕರ್ಮ ಕೌನ್ತೇಯ ಸದೋಷಮಪಿ ನತ್ಯಜೇತ್ ।**
**ಸರ್ವಾರಂಭಾಹಿ ದೋಷೇಣ ಧೂಮೇನಾಗ್ನಿ ರಿವಾವೃತಾಃ ॥ ೪೮ ॥**

---

ಸ್ವಲ್ಪಮಾತ್ರ ದೋಷವಿರುವದರಿಂದಲೂ, ಪರಮಾತ್ಮನಲ್ಲಿ ಸಮರ್ಪಿಸತಕ್ಕವುಗಳಾದುದರಿಂದಲೂ **ಉಪಾಯಾವಲಂಬನಕ್ಕೆ** ಹೇತುವಾಗಿರುವದರಿಂದಲೂ **ನತ್ಯಜೇತ್** ಎಂಬುದಾಗಿ ಉಪದೇಶವು.

**ಸಹಜಂಕರ್ಮ** - ಕರ್ಮವಾಸನೆಯಿಂದ ಪ್ರಾಪ್ತವಾದ ಶರೀರೇಂದ್ರಿಯಗಳಿಗೆ ಸಹಜವಾದ ಕರ್ಮಯೋಗವನ್ನು, **ಹೇ ಕೌನ್ತೇಯ**-ಓ ಅರ್ಜುನನೇ, **ಸದೋಷಮಪಿ** - ಅನುಷ್ಠಾನವು ಶರೀರಾಯಾಸರೂಪವಾಗಿ ಇಂದ್ರಿಯಗಳಿಗೆ ವಶವಾಗಿ ಕ್ಲೇಶಕರವಾಗಿದ್ದರೂ ಕೂಡ, **ನತ್ಯಜೇತ್** - ಬಿಡತಕ್ಕದ್ದಲ್ಲವು. ಇದು ಈ ಅಧ್ಯಾಯದಲ್ಲೇ ಹಿಂದೆ **"ಯಜ್ಞದಾನ ತಪಃಕರ್ಮ ನತ್ಯಾಜ್ಯಂ ಕಾರ್ಯಮೇವತತ್"**(ಗೀ ೧೮ ೫), ಎಂಬಲ್ಲಿ **"ನಿಯತಸ್ಯತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ"** (ಗೀ ೧೮ ೭)ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಶ್ರುತಿಯಲ್ಲಿ ಹಾಗೆಯೇ **"ಕುರ್ವನ್ನೇವೇಹಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ । ಏವಂ ತ್ವಯಿ ನಾನ್ಯಥೇ ತೋಸ್ತಿ"** (ಈಶಾ ೨) ಎಂದು ಉಪಪಾದಿತವು. ಹಾಗೆ ಕ್ಲೇಶಕರವಾದರೂ ಮಾಡಿಯೇ ತೀರಬೇಕೋ? ಎಂದರೆ ಬೇರೆ ಮಾರ್ಗವಿಲ್ಲವು. ಹಾಗೆ ಕರ್ಮಯೋಗವು ನಿನಗೆ ಕ್ಲೇಶಕರವಾದರೆ **ಸರ್ವಾರಂಭಾಹಿ**-ಸಮಸ್ತ ಪ್ರವೃತ್ತಿಗಳೂ, **ದೋಷೇಣ** - ಕ್ಲೇಶದಿಂದ, **ಆವೃತಃ** - ಆವರಿಸಲ್ಪಟ್ಟವುಗಳೇ ಹೇಗೆಂದರೆ **ಅಗ್ನಿಃ** - ಅಗ್ನಿಯು, **ಧೂಮೇನ** - ಹೊಗೆಯಿಂದ, ಹೇಗೆ, **ಆವೃತಃ** - ಸುತ್ತಲ್ಪಟ್ಟಿರುತ್ತದೋ ಹಾಗೆ ಎಂಬ ಭಾವವು; ಅಗ್ನಿಗೆ ಧೂಮವ್ಯಾಪ್ತಿಯು ಹೇಗೆ ಸಹಜವೋ, ಹಾಗೆಯೇ ಕರ್ಮಾರಂಭವು ಶರೀರಪ್ರವೃತ್ತಿಯಿಂದ ಸದೋಷವಾಗಿರುವದು ಎಂದರೆ ಕಾಯಕ್ಲೇಶದಿಂದ ಕೂಡಿರುವದು ತಪ್ಪಿದ್ದಲ್ಲವು ಎಂಬ ಭಾವವು ಸೂಚಿತವು. ಅಗ್ನಿಯು ಪ್ರವೃದ್ಧವಾದರೆ ಹೇಗೆ ಧೂಮವು ತೋರುವದಿಲ್ಲವೋ ಹಾಗೆಯೇ ಕರ್ಮಯೋಗವನ್ನು ಅನುಷ್ಠಿಸುತ್ತಾ ಬಂದರೆ ದೇಹಾಯಾಸಾದಿ ಕ್ಲೇಶಗಳೂ ತೊಲಗಿ ಸುಲಭಸಾಧ್ಯವಾಗಿ ತೋರುವದರಲ್ಲಿ ಸಂದೇಹವಿಲ್ಲವೆಂಬ ತಾತ್ಪರ್ಯವು. ಇಲ್ಲಿರುವ **ಸಹಜಂಕರ್ಮ**ಎಂಬ ಪ್ರಯೋಗವೂ **ಸ್ವಧರ್ಮಃ** ಮತ್ತು **ಸ್ವಭಾವನಿಯತಂ ಕರ್ಮ** ಎಂಬ ೪೭ನೇ ಶ್ಲೋಕದಲ್ಲಿನ ಪ್ರಯೋಗಗಳೂ ಸಮಾನಾರ್ಥಕಗಳೆಂದು ಭಾವಿಸತಕ್ಕದ್ದು. ಹಾಗೆ ಹೇಳಿದುದರಿಂದ ಸಹಜವಲ್ಲದ ಪ್ರವೃತ್ತಿಯನ್ನು ಹೊಂದಿರುವ ಜ್ಞಾನಯೋಗಾರಂಭವೂ ಇನ್ನೂ ಕ್ಲೇಶಕರವಾಗಿ ಸದೋಷವೆಂಬುದು ಕೈಮುತಿಕನ್ಯಾಯ ಸಿದ್ಧವೆಂಬ ಭಾವವು. ಇಂದ್ರಿಯ ಪ್ರವೃತ್ತಿಗಳನ್ನು ನಿರೋಧಿಸುವದು ಇನ್ನೂ ಕ್ಲೇಶಕರವೆಂಬುದು ಸಿದ್ಧವು. ಹೋಗಲಿ ದೇಹಾಯಾಸ ವಿಷಯದಲ್ಲಿ ಎರಡೂ ಸಮವಾದರೂ, ಕರ್ಮಯೋಗವು ಸುಕರವಾಗಿ ಪ್ರಮಾದರಹಿತವಾಗಿಯೂ ಜ್ಞಾನಯೋಗವು ದುಷ್ಕರವಾಗಿ ಸಪ್ರಮಾದವಾಗಿಯೂ ಇರುವದರಿಂದ ನಿನಗೆ ಕರ್ಮಯೋಗವೇ ಹಿತಕರವಾದುದು. ಕಾಯಕ್ಲೇಶಭಯದಿಂದ ಬಿಡ ಕೂಡದೆಂದು ಹಿತೋಪದೇಶವನ್ನು ಮಾಡಿದ್ದಾರೆ ಎಂದಾಗಲಿ ಭಾವಿಸಬಹುದು. ಇಲ್ಲಿ **ಸರ್ವಾರಂಭಾಃ** ಎಂಬಲ್ಲಿ ಸರ್ವಶಬ್ದವಿದ್ದರೂ ಮೋಕ್ಷಾರ್ಥಿಯ ವಿಷಯವಾದುದರಿಂದ ಸರ್ವಶಬ್ದವು,ಮೋಕ್ಷಾರ್ಥಿಯ ಪ್ರವೃತ್ತಿಗಳಾಗಿ ಉಪಾಯಕ್ಕೆ ಅಙ್ಗಗಳಾದ ಕರ್ಮಯೋಗ ಜ್ಞಾನಯೋಗಗಳ ಆರಂಭಗಳೇ ವಿವಕ್ಷಿತಗಳು; ಆದುದರಿಂದ ಇಲ್ಲಿಯೂ ಸರ್ವಶಬ್ದವು ಸಂಕೋಚಾರ್ಥವನ್ನೇ ಉಳ್ಳದು. ಇವನ್ನು ಇನ್ನೂ ಇತರಸ್ಥಳಗಳಲ್ಲೂ ಪ್ರದರ್ಶಿಸಿರುವೆವು. ಈಗ ಅರ್ಜುನನನ್ನು ಕುರಿತು **ಸಹಜಂಕರ್ಮ ಕೌಂತೇಯ ಸದೋಷಮಪಿ ನತ್ಯಜೇತ್"** ಎಂದು ಹೇಳಿದುದರಿಂದ ನಿನ್ನ ಹಿಂದಿನ ಕರ್ಮವಾಸನಾನುಗುಣವಾಗಿ ಕ್ಷೇತ್ರಜ್ಞನಾಗಿ ಕ್ಷತ್ರಿಯಯೋನಿಯಲ್ಲಿ ಜನಿಸಿರುತ್ತೀಯೇ. ಆದುದರಿಂದ ದುಷ್ಟನಿಗ್ರಹ

**ಭಾ.** **ಅತ ಸ್ಸಹಜತ್ವೇನ ಸುಕರ ಮಪ್ರಮಾದಂಚ ಕರ್ಮಸದೋಷಂ - ಸದುಃಖಮಪಿ ನತ್ಯಜೇತ್ ; ಜ್ಞಾನಯೋಗಯೋಗ್ಯೋಽಪಿ ಕರ್ಮಯೋಗಮೇವ ಕುರ್ವೀತೇತ್ಯರ್ಥಃ; ಸರ್ವಾರಂಭಾಃ – ಕರ್ಮಾರಂಭಾಃ ಜ್ಞಾನಾರಂಭಾಶ್ಚ ಹಿ ದೋಷೇಣ - ದುಃಖೇನ**

---

ರೂಪವಾದ ಯುದ್ಧಾದಿ ಕರ್ಮವು ನಿನಗೆ ಸಹಜವಾದ ಕರ್ಮವು. ಅದು ಕಾಯಕ್ಲೇಶಾದಿದೋಷವುಳ್ಳದೆಂದು ಭಾವಿಸಿ ನೀನು ಅದನ್ನು ತ್ಯಜಿಸಲು ಸಾಧ್ಯವಿಲ್ಲವೆಂಬ ಗೂಢಾರ್ಥವೂ ಸೂಚಿತವು.

**ಭಾಷ್ಯಾರ್ಥವು**—ಹಿಂದಿನ ಶ್ಲೋಕದ ಭಾಷ್ಯಾಂತ್ಯದಲ್ಲಿರುವ "**ಅತಃ ಕರ್ಮನಿಷ್ಠೈವ ಜ್ಯಾಯಸೀತಿ ತೃತೀಯಾಧ್ಯಾಯೋಕ್ತಂ ಸ್ಮಾರಯತಿ**" ಎಂಬ ವಾಕ್ಯವನ್ನು, ಕೆಲವು ಕೋಶಗಳಲ್ಲಿ ಈ "**ಸಹಜಂ ಕರ್ಮ**" ಎಂಬ ಶ್ಲೋಕಕ್ಕೆ ಅವತಾರಿಕೆಯಾಗಿ ಮುದ್ರಿಸಿರುತ್ತಾರೆ. ಆದರೆ ಹಿಂದಿನ ವಾಕ್ಯವು **ಅಪಿ** ಎಂಬ ಪದದಿಂದ ಮುಗಿಯುವದರಿಂದ, ವಾಕ್ಯಪೂರಣವಾಗಲಿಲ್ಲವೆಂದು ಕೆಲವರು ಭಾವಿಸುವರು. ಆ ವಾಕ್ಯವು ಇದಕ್ಕೆ ಅವತಾರಿಕೆಯಾದರೂ ಏನೊಂದೂ ಅಭ್ಯಂತರವಿಲ್ಲವು. **ಅತಃ** - ಆ ಕಾರಣದಿಂದ ಎಂದರೆ ಸ್ವಭಾವ ನಿಯತವಾದದ್ದರ ಅನುಷ್ಠಾನವು ಸಂಸಾರ ಬಂಧವನ್ನು ಹೊಂದಿಸುವದಿಲ್ಲವಾದುದರಿಂದ, **ಸಹಜತ್ವೇನ** - ಶರೀರೇಂದ್ರಿಯಗಳನ್ನು ಹೊಂದಿರುವ ಕ್ಷೇತ್ರಜ್ಞನಿಗೆ ಸಹಜವಾಗಿರುವದರಿಂದ, **ಸುಕರವಾಗಿಯೂ, ಅಪ್ರಮಾದಂಚ** ಪ್ರಮಾದ ರಹಿತವಾಗಿಯೂ ಇರುವ, **ಕರ್ಮ** - ಕರ್ಮಯೋಗವನ್ನೇ, **ಸದೋಷಂ** - ಎಂದರೆ **ಸದುಃಖಮಪಿ** - ಕಾಯಕ್ಲೇಶಾದಿ ದುಃಖಯುಕ್ತವಾಗಿದ್ದರೂ ಕೂಡ, **ನತ್ಯಜೇತ್** - **ಬಿಡತಕ್ಕದ್ದಲ್ಲವು.** ಕರ್ಮಯೋಗವು ಎಂದಿಗೂ ಬಿಡತಕ್ಕದ್ದಲ್ಲವು ಎಂದು ಹೇಳಿದರೆ **ಜ್ಞಾನಯೋಗದ ವಿಷಯ** ಹೇಗೆ? ಎಂಬುದು ನ್ಯಾಯವಾದ ಪ್ರಶ್ನೆಯಾಗುತ್ತ**ದೆ.** ಅಂತಹ ಪ್ರಶ್ನೆಗೆ ಸಮಾಧಾನವಾಗಿ ಉತ್ತರಾರ್ಧವು ಹೇಳಲ್ಪಡುವದರಿಂದ ಅದನ್ನು ಮನಸ್ಸಿನಲ್ಲಿಟ್ಟು **ಹೇಳುತ್ತಾರೆ—ಏನೆಂದರೆ ಜ್ಞಾನಯೋಗಯೋಗ್ಯೋಽಪಿ** - ಜ್ಞಾನಯೋಗಕ್ಕೆ ತಕ್ಕ ಧರ್ಮವಾದ **ಅಧಿಕಾರಿಯಾಗಿದ್ದರೂ ಕೂಡ, ಕರ್ಮಯೋಗಮೇವ ಕುರ್ವೀತೇತ್ಯರ್ಥಃ**-ಕರ್ಮಯೋಗವನ್ನೇ ಮಾಡತಕ್ಕದ್ದು ಎಂಬ **ಭಾವವು.** ಈ ಭಾಷ್ಯ ವಾಕ್ಯಾಭಿಪ್ರಾಯವು ಹಿಂದೆಯೇ ಮೂರನೆಯ ಅಧ್ಯಾಯದಲ್ಲಿ "**ಕರ್ಮಣೈವ ಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ**" ಎಂಬಲ್ಲೂ ಉಪಪಾದಿತವು. ಅದಕ್ಕೆ ಕಾರಣವನ್ನು **ತಿಳಿಸುತ್ತಾರಾದುದರಿಂದ ಹಿ** ಶಬ್ದವು. **ಸರ್ವಾರಂಭಾಃ** - ಎಂದರೆ **ಕರ್ಮಾರಂಭಾಃ ಜ್ಞಾನಾರಂಭಾಶ್ಚ**-ಕರ್ಮಯೋಗದ ಪ್ರವೃತ್ತಿಗಳೂ, ಜ್ಞಾನಯೋಗದ ಪ್ರವೃತ್ತಿಗಳೂ ಸಹ, **ದೋಷೇಣ** ಎಂದರೆ **ದುಃಖೇನ** - ಕಾಯಕ್ಲೇಶ ರೂಪ ದುಃಖದಿಂದ, **ಧೂಮೇನಾಗ್ನಿ ರಿವಾವೃತಾಃ** ಅಗ್ನಿಯು ಹೇಗೆ ಹೊಗೆಯಿಂದ ಆವರಿಸಲ್ಪಟ್ಟಿರುತ್ತದೋ, ಹಾಗೆ ಇವುಗಳೂ ಆವರಿಸಲ್ಪಟ್ಟಿವೆ; ಹಾಗಾದರೆ ಕರ್ಮಯೋಗದಲ್ಲೂ ದೇಹಾಯಾಸರೂಪ ಕ್ಲೇಶ ಉಂಟು; ಹಾಗೆಯೇ ಜ್ಞಾನಯೋಗದಲ್ಲೂ ಅದೇ ಕ್ಲೇಶವೇ ಉಂಟು; ಹೀಗಿರುವಾಗ ಜ್ಞಾನಯೋಗ ಸಮರ್ಥನಿಗೂ ಕರ್ಮಯೋಗವನ್ನೇ ವಿಧಿಸಿದುದು ಹೇಗೆ? ಎಂದರೆ ಕರ್ಮಯೋಗಕ್ಕಿರುವ ವೈಲಕ್ಷಣ್ಯವನ್ನು ತಿಳಿಸುತ್ತಾರೆ.— **ಇಯಾಂಸ್ತು ವಿಶೇಷಃ** - ಎಂಟಕ್ಕೂ ಇರುವ ವ್ಯತ್ಯಾಸವು ಇಷ್ಟೇ;ಏನೆಂದರೆ—**ಕರ್ಮಯೋಗವು ಸುಕರವು, ಅಪ್ರಮಾದಶ್ಚ** - ಪ್ರಮಾದವಿಲ್ಲದುದು, **ಜ್ಞಾನಯೋಗವಾದರೋ, ತದ್ವಿಪರೀತಃ** ಅದಕ್ಕೆ ವ್ಯತ್ಯಸ್ತವಾದುದು ಎಂದರೆ ದುಷ್ಕರವಾದುದೂ ಮತ್ತು ಸಪ್ರಮಾದವಾದುದೂ, **ಇತಿ** ಎಂಬುದೇ ವ್ಯತ್ಯಾಸವು. ಈ ಶ್ಲೋಕದಲ್ಲಿ **ಸದೋಷಮಪಿ** ಎಂಬಲ್ಲಿರುವ ದೋಷಶಬ್ದವು ಪಾಪವೆಂಬ ಅರ್ಥದಲ್ಲಿ ಉಪಯೋಗಿಸಿಲ್ಲವು; ವಿಹಿತವಾದ ಕರ್ಮಯೋಗವು ಪಾಪರೂಪವಾದುದು ಹೇಗಾದೀತು? ಹಾಗೆ ಪಾಪರೂಪವಾಗಿದ್ದರೆ **ನತ್ಯಜೇತ್** ಎಂಬ ಉಪದೇಶವು ಹೇಗೆ ಕೂಡುತ್ತದೆ? ಆದುದರಿಂದ ದೋಷವೆಂದರೆ ದುಃಖವೆಂದು ವ್ಯಾಖ್ಯಾನಮಾಡಲ್ಪಟ್ಟಿತು; ದುಃಖವು

**ಧೂಮೇನಾಗ್ನಿ ರಿವಾವೃತಾಃ; ಇಯಾಂಸ್ತು ವಿಶೇಷಃ - ಕರ್ಮಯೋಗಸ್ಸುಕರೋಽ ಪ್ರಮಾದಶ್ಚ, ಜ್ಞಾನಯೋಗಸ್ತದ್ವಿಪರೀತಃ ಇತಿ. ॥ ೪೮ ॥**

**ಮೂ. ಅಸಕ್ತಬುದ್ಧಿ ಸ್ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸನ್ಯಾಸೇನಾಧಿಗಚ್ಛತಿ ॥ ೪೯ ॥**

ಯಾವುದೆಂದರೆ ಕಾಮಕ್ರೋಧರೂಪವಾಗಿ ದುಃಖವು ಎಂಬ ತಾತ್ಪರ್ಯವು. ಆದುದರಿಂದಲೇ ಉತ್ತರಾರ್ಧದಲ್ಲಿ ಅಂತಹ ದೇಹಯಾತ್ರೆಯು ಯಾವ ಆರಂಭಗಳಲ್ಲಿಲ್ಲವು ? ಎಲ್ಲಾ ಕರ್ಮಜ್ಞಾನಾ ರಂಭಗಳಲ್ಲೂ ಉಂಟು ಎಂದು ಹೇಳಿ, ಅಗ್ನಿಗೆ ಹೇಗೆ ಧೂಮವು ತಪ್ಪಿದ್ದಲ್ಲವೋ ಹಾಗೆಯೇ ಎಲ್ಲಾ ಆರಂಭಗಳಲ್ಲೂ ದೇಹಯಾತ್ರೆಯು, ಇದ್ದೇ ಇರುತ್ತದೆ ಎಂದು ಹೇಳಲ್ಪಟ್ಟಿತು. ಹೀಗೆ **ಸಮಾಧಾನವನ್ನು** ಹೇಳಿದರೆ, ಕಾಮಕ್ರೋಧಾದಿಗಳು, ಕರ್ಮಯೋಗವು ಜ್ಞಾನಯೋಗಕ್ಕೂ ಬೇಕಾಗಿ ಎರಡರಲ್ಲೂ ಇದ್ದರೆ, ಕರ್ಮಯೋಗವನ್ನೇ ಅನುಷ್ಠಿಸು ಎಂದು ಏಕೆ ಚೋದನವು? ಎಂದರೆ **ಇಯಾಂಸ್ತು ವಿಶೇಷಃ** ಎಂದು ಕರ್ಮಯೋಗಕ್ಕಿರುವ ವೈಲಕ್ಷಣ್ಯವನ್ನು ತಿಳಿಸುತ್ತಾರೆ. ಜ್ಞಾನಯೋಗಿಯು, ಇಂದ್ರಿಯಗಳಿಗೆ ವಿಷಯೋಪಭೋಗಗಳಲ್ಲಿರುವ ಪ್ರಾವಣ್ಯದಿಂದ ಪ್ರಮಾದಾವಸ್ಥೆಯಲ್ಲಿರುವನು; ಕರ್ಮಯೋಗವು ಆದುದರಿಂದ ಅಪ್ರಮಾದವಾದುದು. ಜ್ಞಾನಯೋಗವು ಸಪ್ರಮಾದವಾದುದು. ಜ್ಞಾನಯೋಗವು ಸರ್ವೇಂದ್ರಿಯೋಪರತಿ ಬೇಕಾಗಿ ದುಷ್ಕರವು, ಕರ್ಮಯೋಗವು ಸುಕರವು ಎಂದು ವೈಲಕ್ಷಣ್ಯವು ಉಪದಿಷ್ಟವು. ಮುಮುಕ್ಷುವಾದವನು ಇಂತಹ ದೇಹಯಾತ್ರೆಗೆ ಅಂಜತಕ್ಕದ್ದಲ್ಲವು; ಆದುದರಿಂದ ಕರ್ಮಯೋಗವೇ ಅರ್ಜುನನಾದ ನಿನಗೂ ಇತರರಿಗೂ ಜ್ಞಾನಯೋಗಕ್ಕೆ ಅಧಿಕಾರಿಗಳಾಗಿದ್ದರೂ ಶ್ರೇಯಸ್ಕರವಾದುದು ಎಂಬ ಭಾವವು. ಶಾಸ್ತ್ರೀಯ ಕರ್ಮಯೋಗವು ಬ್ರಹ್ಮವಿದ್ಯೆಗೆ ಅಙ್ಗವಾದುದರಿಂದ ಅದನ್ನು ಬಿಡಲಾಗದೆಂಬ ಭಾವವನ್ನು ಸೂಚಿಸುವುದಕ್ಕಾಗಿ **ಕರ್ಮ ನ ತ್ಯಜೇತ್** ಎಂಬ ವಿಧಿ ವಾಕ್ಯವು. ಹಾಗೆಯೇ ಭಾಷ್ಯದಲ್ಲೂ **"ಜ್ಞಾನಯೋಗಯೋಗ್ಯೋಽಪಿ ಕರ್ಮಯೋಗಮೇವ ಕುರ್ವೀತ"** ಎಂದು ಹೇಳಿರುವುದೂ ವಿಧಿವಾಕ್ಯವೇ. ಶಾಸ್ತ್ರವಿಧಿಗಳೆಲ್ಲಾ ನಮಗೆ ಅನುಕೂಲವಾಗಿಯೇ ಹೇಳುತ್ತವೆಯಾದುದರಿಂದ ಹಾಗೆ ಶಾಸ್ತ್ರವು ಬೋಧಿಸಿತು. ಏತಕ್ಕೆಂದರೆ ಕರ್ಮಯೋಗವು ಸುಕರವಾಗಿಯೂ ಪ್ರಮಾದರಹಿತವಾಗಿಯೂ, ಫಲಕರ್ತೃತ್ವ ಮಮತಾಶೂನ್ಯವಾಗಿ ಆಚರಿಸುವುದರಿಂದ ಭಗವದಾರಾಧನರೂಪವಾಗಿ, ತತ್ಪ್ರೀತಿಜನಕವಾಗಿಯೂ, ಈತನ ದೇಹಯಾತ್ರಾದಿ ಕರ್ಮಗಳಿಗೆ ಅನುಕೂಲವಾಗಿಯೂ ಇರುವುದರಿಂದ ಕರ್ಮಯೋಗವೇ ಹಿತಕರವಾದುದು.; ಆದುದರಿಂದ ಜ್ಞಾನಯೋಗದ ಆವಶ್ಯಕತೆಯಿಲ್ಲದೆ ಭಕ್ತಿಯೋಗಾರಂಭವೂ ತನ್ನಿಷ್ಪತ್ತಿಯೂ ಸಿದ್ಧಿಸುತ್ತವೆ ಎಂಬುದು ತಾತ್ಪರ್ಯವು. ಜ್ಞಾನಯೋಗವಲ್ಲಾದರೋ ಈ ಅನುಕೂಲಗಳಿಲ್ಲವು; ಅದು ದುಷ್ಕರವು, ಅದು ಪ್ರಮಾದದಿಂದ ಸೇರಿದುದು; ದೇಹಯಾತ್ರಾದಿ ಪ್ರವೃತ್ತಿಗಳಿಗೆ ಅನುಕೂಲವಿಲ್ಲವೆಂಬ ಭಾವವು.

**ಮೂಲಕ್ಕೆ ಅರ್ಥವು**—ಜ್ಞಾನಯೋಗ ನಿರಪೇಕ್ಷವಾಗಿಯೇ ಮೇಲೆ ಹೇಳಿದ ರೀತಿಯಲ್ಲಿ ಆತ್ಮಯಾಥಾತ್ಮ್ಯಜ್ಞಾನಪೂರ್ವಕವಾಗಿ ಕರ್ಮಯೋಗವನ್ನು ಅನುಷ್ಠಿಸುವನಿಗೆ ಭಕ್ತಿಯೋಗ ಸಿದ್ಧಿಯ ಮೂಲಕ ಪರಮಪದಪ್ರಾಪ್ತಿಯುಂಟಾಗುತ್ತದೆಂದು ಹೇಳಿದರು. ಆದರೆ ಜ್ಞಾನಯೋಗದಿಂದುಂಟಾಗುವ ಫಲವಾದ ಆತ್ಮಾವಲೋಕನವು ಮೋಕ್ಷಪ್ರಾಪ್ತಿಗೆ ಆವಶ್ಯಕವಾಗಿರುವಾಗ ಜ್ಞಾನಯೋಗ ನಿರಪೇಕ್ಷವಾಗಿಯೇ ಉಪಾಯಾನುಷ್ಠಾನವು ಲಭಿಸುತ್ತದೆಂದು ಹೇಳಿದುದು ಹೇಗೆ? ಎಂದರೆ ಆ ಆತ್ಮಾವಲೋಕನವೂ ಸಹ ಈ ಪರಮಪುರುಷಾರಾಧನರೂಪವಾದ ಕರ್ಮಯೋಗದ ಮಾಹಾತ್ಮ್ಯದಿಂದಲೇ, ಜ್ಞಾನಯೋಗದ ಫಲವೇ, ಕರ್ಮಯೋಗದಿಂದ ಭಕ್ತಿಯೋಗದಲ್ಲೇ ಸಿದ್ಧಿಸುತ್ತದೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ.—**ಸರ್ವತ್ರ ಅಸಕ್ತ ಬುದ್ಧಿಃ - ಕರ್ಮ**

ಭಾ. ಸರ್ವತ್ರ – ಫಲಾದಿಷು, ಅಸಕ್ತಬುದ್ಧಿಃ, ಜಿತಾತ್ಮಾ – ಜಿತಮನಾಃ, ಪರಮಪುರುಷ ಕರ್ತೃತ್ವಾನುಸಂಧಾನೇನಾತ್ಮಕರ್ತೃತ್ವೇ ವಿಗತಸ್ಪೃಹಃ, ಏವಂ ತ್ಯಾಗಾದನನ್ಯತ್ವೇನ ನಿರ್ಣೀತೇನ ಸನ್ನ್ಯಾಸೇನಯುಕ್ತಃ, ಕರ್ಮ ಕುರ್ವನ್, ಪರಮಾಂ ನೈಷ್ಕರ್ಮ್ಯ

---

ಯೋಗನಿಷ್ಠನು, ಸರ್ವತ್ರವೆಂದರೆ ಎಲ್ಲಾ ಕರ್ಮಗಳಲ್ಲೂ ಫಲಕರ್ತೃತ್ವ, ಮಮತೆ ಮುಂತಾದ ಎಲ್ಲಾದರಲ್ಲೂ ಸಙ್ಗವಿಲ್ಲದ ಬುದ್ಧಿಯುಳ್ಳವನಾಗಿದ್ದುದರಿಂದ, ಜಿತಾತ್ಮಾ – ಜಯಿಸಲ್ಪಟ್ಟ ಮನಸ್ಸುಳ್ಳವನಾಗಿ, ಎಂದರೆ ಮನಸ್ಸು ವಿಷಯಗಳಲ್ಲಿ ಪ್ರವರ್ತಿಸದಹಾಗೆ ತಡೆಯುವವನಾಗಿ, ವಿಗತಸ್ಪೃಹಃ - ಆದುದರಿಂದಲೇ ಅಲ್ಪಾಸ್ಥಿರಗಳಾದ ಐಹಿಕ ಸುಖಾದಿಗಳಲ್ಲಿ ಹೋಗಲ್ಪಟ್ಟ ಆಶೆಯುಳ್ಳವನು, ಶಾಶ್ವತವಾದ ಆತ್ಮಸ್ವರೂಪ ಸ್ವಭಾವಾದಿಗಳಲ್ಲಿ ಸಕ್ತವಾದ ಮನಸ್ಸುಳ್ಳವನಾದುದರಿಂದ ಅಶಾಶ್ವತಗಳಾದ ಐಹಿಕಗಳಲ್ಲಿ ಆಶಾರಹಿತನಾಗಿರುವುದರಿಂದಲೇ, ಸನ್ನ್ಯಾಸೇನ – ಫಲಕರ್ತೃತ್ವ ಮಮತಾತ್ಯಾಗಪೂರ್ವಕವಾಗಿ ಅನುಷ್ಠಿಸಿದ ಕರ್ಮಯೋಗದಿಂದಲೇ ಪರಮಾಂ - ಅದಕ್ಕಿಂತಲೂ ಉತ್ಕೃಷ್ಟವಾದುದು ಇಲ್ಲದ ಎಂದರೆ ಸರ್ವೋತ್ಕೃಷ್ಟವಾದ, ನೈಷ್ಕರ್ಮ್ಯಸಿದ್ಧಿಂ- ಜ್ಞಾನಯೋಗವನ್ನು ಅನುಷ್ಠಿಸದೇ ಅದರಿಂದುಂಟಾಗುವ ಫಲಸಿದ್ಧಿಯನ್ನೇ ಅದು ಯಾವುದೆಂದರೆ ಭಕ್ತಿಯೋಗಾರ್ಹತೆಯನ್ನು, ಅಧಿಗಚ್ಛತಿ - ಹೊಂದುವನು. ಇದು ಹಿಂದೆಯೇ "ಕರ್ಮ ಜ್ಯಾಯೋಹ್ಯ ಕರ್ಮಣಃ" (ಗೀ. ೩-೮) ಎಂಬಲ್ಲಿಯೂ, "ಕರ್ಮಣೈವಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ" ಎಂಬಲ್ಲೂ ಸಹ ಹೇಳಲ್ಪಟ್ಟಿತು. ಅದನ್ನೇ ಪುನಃ ಇಲ್ಲಿ ಅನುವಾದಮಾಡಿ ಜ್ಞಾಪಕಕ್ಕೆ ಕೊಟ್ಟಿರುತ್ತಾರೆ. ಈ ಶ್ಲೋಕದಲ್ಲಿರುವ ಸನ್ನ್ಯಾಸಶಬ್ದವೂ ತ್ಯಾಗ ಶಬ್ದವೂ ಸಮಾನಾರ್ಥಕಗಳೆಂದೂ ಅವು ಕರ್ಮಾನುಷ್ಠಾನದಲ್ಲಿ ಫಲಕರ್ತೃತ್ವ ಮಮತಾತ್ಯಾಗವನ್ನು ಬೋಧಿಸುತ್ತವೆಂದೂ ಈ ಅಧ್ಯಾಯದ ಮೊದಲನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟಿರುತ್ತದೆ. ಜ್ಞಾನಯೋಗದಿಂದ ಲಭಿಸುವದು (೧) ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪಗಳ ನಿವಾರಣೆಯೂ, (೨) ಆತ್ಮಸ್ವರೂಪಜ್ಞಾನವೂ, (೩) ಐಹಿಕ ಭೋಗಗಳಲ್ಲಿ ಜಿಹಾಸೆಯೂ (೪) ಉಪಾಸನಾರೂಪವಾದ ಭಕ್ತಿಯೋಗಕ್ಕೆ ಅರ್ಹತೆಯೂ ; ಇವುಗಳು ಜ್ಞಾನಯೋಗದ ಆವಶ್ಯಕತೆ ಇಲ್ಲದೆ ಕರ್ಮಸನ್ನ್ಯಾಸಪೂರ್ವಕವಾಗಿ ಅನುಷ್ಠಿಸಲ್ಪಟ್ಟ ಕರ್ಮಯೋಗದಿಂದಲೇ ಸಿದ್ಧಿಸುತ್ತದೆಂದು ಹೇಳಲ್ಪಟ್ಟಿತು. ಆದುದರಿಂದ ನಿನಗೆ ಜ್ಞಾನಯೋಗವು ಬೇಕಿಲ್ಲವು. ಕರ್ಮಯೋಗವನ್ನೇ ಅನುಷ್ಠಿಸು ಎಂದು ಉಪದೇಶಿಸಿದುದನ್ನು ಇಲ್ಲಿ ಅನುವಾದಮಾಡಿ ಹೇಳಿದರು.

ಭಾಷ್ಯಾರ್ಥವು—ಸರ್ವತ್ರ ಎಂದರೆ ಫಲಾದಿಷು . ಎಲ್ಲಾ ಕರ್ಮಗಳಿಂದಲೂ ಉಂಟಾಗುವ ಫಲಾದಿಗಳಲ್ಲಿ, ಅಸಕ್ತಬುದ್ಧಿಃ - ಸಂಬಂಧಿಸದೇ ಇರುವ ಬುದ್ಧಿಯುಳ್ಳವನು, ಜಿತಾತ್ಮಾ-ಎಂದರೆ ಜಿತಮನಾಃ - ಜಯಿಸಲ್ಪಟ್ಟ, ನಿಗ್ರಹಿಸಲ್ಪಟ್ಟ ಮನಸ್ಸುಳ್ಳವನು, ಪರಮಪುರುಷ ಕರ್ತೃತ್ವಾನುಸಂಧಾನೇನ, ಆತ್ಮಕರ್ತೃತ್ವೇ ವಿಗತಸ್ಪೃಹಃ - ಪರಮಪುರುಷನಿಗೇನೇ ಕರ್ತೃತ್ವವು ಎಂಬ ಅನುಸಂಧಾನದಿಂದ ತನ್ನ ಕರ್ತೃತ್ವದಲ್ಲಿ ಬಿಡಲ್ಪಟ್ಟ ಆಶೆಯುಳ್ಳವನು ಇಲ್ಲಿ ಅಸಕ್ತಬುದ್ಧಿಃ - ಮತ್ತು ವಿಗತಸ್ಪೃಹಃ ಎರಡೂ ಸಮಾನಾರ್ಥವುಳ್ಳದೆಂದು ಹೇಳಿದರೆ ಪುನರುಕ್ತಿದೋಷವುಂಟಾಗುವದರಿಂದ ತನ್ನಿವಾರಣಾರ್ಥವಾಗಿ ಅಸಕ್ತಬುದ್ಧಿಃ ಎಂಬುದಕ್ಕೆ ಫಲಾದಿಗಳಲ್ಲಿ ಸಕ್ತವಾಗದ ಬುದ್ಧಿಯುಳ್ಳವನೆಂದೂ, ತಾನು ಅಸ್ವತಂತ್ರನಾದುದರಿಂದ ತನ್ನ ಕರ್ತೃತ್ವದಲ್ಲಿ ಹೋಗಲ್ಪಟ್ಟ ಆಶೆಯುಳ್ಳವನೆಂದೂ ಅರ್ಥಮಾಡಿರುತ್ತಾರೆ. ಇಂತಹ ಕರ್ಮಯೋಗನಿಷ್ಠನು, ಏವಂತ್ಯಾಗಾದನನ್ಯತ್ವೇನ ನಿರ್ಣೀತೇನ ಸನ್ನ್ಯಾಸೇನಯುಕ್ತಃ-ಇದು ಸನ್ನ್ಯಾಸೇನ-ಎಂಬುದರ ಅರ್ಥವಿವರಣವು, ಹೀಗೆ ಕರ್ತೃತ್ವವನ್ನು ಫಲವನ್ನು ಮಮತೆಯನ್ನು ತ್ಯಾಗಮಾಡುವ ಸನ್ನ್ಯಾಸವೂ ತ್ಯಾಗವೂ ಸಹ ಸಮಾನಾರ್ಥಕಗಳೆಂದು ನಿರ್ಣಯಿಸಲ್ಪಟ್ಟದುದರಿಂದ, ಅಂತಹ ಸನ್ನ್ಯಾಸದಿಂದ ಸೇರಿ,

**ಸಿದ್ಧಿಮಧಿಗಚ್ಛತಿ - ಪರಮಾಂ ಧ್ಯಾನನಿಷ್ಠಾಂ ಜ್ಞಾನಯೋಗಸ್ಯಾಪಿ ಫಲಭೂತಾಮಧಿಗಚ್ಛತೀತ್ಯರ್ಥಃ ; ವಕ್ಷ್ಯಮಾಣ ಧ್ಯಾನಯೋಗಾವಾಪ್ತಿಂ ಸರ್ವೇನ್ದ್ರಿಯ ಕರ್ಮೋಪರತಿರೂಪಾಮಧಿಗಚ್ಛತಿ. ॥ ೪೯ ॥**

---

ಕರ್ಮಕೃರ್ದ್ವ - ಕರ್ಮಯೋಗವನ್ನು ಅನುಷ್ಠಿಸುವವನು, ನೈಷ್ಕರ್ಮ್ಯಸಿದ್ಧಿಂ ಅಧಿಗಚ್ಛತಿ ಎಂದರೆ ಪರಮಾಂ ಧ್ಯಾನನಿಷ್ಠಾಂ ಜ್ಞಾನಯೋಗಸ್ಯಾಪಿ ಫಲಭೂತಾಮಧಿಗಚ್ಛತಿ - ಸರ್ವೋತ್ಕೃಷ್ಟವಾದ ಭಕ್ತಿಯೋಗದಲ್ಲಿ ಎಂದರೆ ಉಪಾಸನದಲ್ಲಿ ನಿಷ್ಠೆಯನ್ನು ಅಧಿಗಚ್ಛತಿ – ಹೊಂದುವನು. ಆ ಉಪಾಸನೆ ನಿಷ್ಠೆಯು ಎಂತಹದ್ದೆಂದರೆ ಜ್ಞಾನಯೋಗಸ್ಯಾಪಿ ಫಲಭೂತಾಂ-ಜ್ಞಾನಯೋಗದಿಂದಲೂ ಕೂಡ ಫಲರೂಪವಲ್ಲಿ ಉಂಟಾಗುವಂತಹದ್ದು ; ಅಂತಹ ಭಕ್ತಿಯೋಗನಿಷ್ಠೆಯನ್ನೇ ಹೊಂದುವನು ಎಂಬ ಭಾವವು. ಸನ್ನ್ಯಾಸೇನಾಧಿಗಚ್ಛತಿ ಎಂದರೆ ಕೆಲವರು ಜ್ಞಾನಯೋಗದಿಂದ ಹೊಂದುತ್ತಾನೆಂದು ಅರ್ಥಮಾಡಿರುತ್ತಾರೆ. ಹಿಂದೆಯೂ ಕೂಡ ಕುರು ಕರ್ಮೈವ ತಸ್ಮಾತ್ತ್ವಂ ಎಂದೂ "ಕರ್ಮಜ್ಯಾಯೋ ಹ್ಯಕರ್ಮಣಃ" ಎಂದೂ "ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ" "ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್" ಎಂದೂ ಹೇಳಿರುವದಕ್ಕೆಲ್ಲಾ ವಿರುದ್ಧವಾದ ಅಭಿಪ್ರಾಯವಾಗುತ್ತದೆ. ಸನ್ನ್ಯಾಸ ತ್ಯಾಗಶಬ್ದಗಳಿಗೆ ಹಿಂದೆ ವಿಮರ್ಶಿಸಿ ಹೇಳಿದ ಶಾಸ್ತ್ರಾರ್ಥಕ್ಕೂ ವಿರುದ್ಧವಾಗುತ್ತದೆ. ಕರ್ಮಯೋಗಕ್ಕಾಗಲಿ, ಜ್ಞಾನಯೋಗಕ್ಕಾಗಲಿ ಫಲವೇನೋ ಒಂದೇ. ಭಕ್ತಿಯೋಗನಿಷ್ಠಾಪ್ರಾಪ್ತಿಯೇ ಫಲವು ಎಂಬ ಭಾವವು. ಹಾಗೆ ಉಂಟಾಗುವ ಫಲವು ಯಾವುದು ಎಂಬುದನ್ನು ವ್ಯಕ್ತಪಡಿಸುತ್ತಾರೆ. – ವಕ್ಷ್ಯಮಾಣಧ್ಯಾನಯೋಗಾವಾಪ್ತಿಂ - ಮುಂದೆ ಹೇಳಲ್ಪಡುವ ಭಕ್ತಿಯೋಗಪ್ರಾಪ್ತಿಯನ್ನು, ಅಧಿಗಚ್ಛತಿ - ಕರ್ಮಯೋಗನಿಷ್ಠನೂ ಜ್ಞಾನಯೋಗನಿಷ್ಠನಹಾಗೆಯೇ ಹೊಂದುತ್ತಾನೆ. ಆ ಉಪಾಸನಕ್ಕೆ ಅರ್ಹತೆಯು ಏತರಿಂದ ಉಂಟಾಗುತ್ತದೆ ಎಂದರೆ ಹೇಳುತ್ತಾರೆ. ಸರ್ವೇನ್ದ್ರಿಯ ಕರ್ಮೋಪರತಿರೂಪಾಂ-ಸಮಸ್ತಗಳಾದ ಇಂದ್ರಿಯಗಳ ಉಪರತಿರೂಪವಾದ ಭಕ್ತಿಯೋಗನಿಷ್ಠೆಯನ್ನು ಹೊಂದುತ್ತಾನೆಂಬ ತಾತ್ಪರ್ಯವು. ಐಹಿಕದಲ್ಲಿ ಜಿಹಾಸೆಯೂ ಪರಮಾತ್ಮನಲ್ಲಿ ಐಕಾನ್ತ್ಯ ಭಕ್ತಿಯೂ ಧ್ಯಾನಯೋಗಕ್ಕೆ ಆವಶ್ಯಕವು ; ಇವೆರಡೂ ಕರ್ಮಯೋಗದಲ್ಲೇ ಸಿದ್ಧಿಸುವವರಿಂದ ಇದಕ್ಕಾಗಿ ದುಷ್ಕರವಾದ ಸಪ್ರಮಾದವಾದ ಜ್ಞಾನಯೋಗವನ್ನು ಅವಲಂಬಿಸಬೇಕಾದುದಿಲ್ಲವೆಂಬ ತಾತ್ಪರ್ಯವು. ಹೀಗೆ ಭಕ್ತಿಯೋಗವಾದ ಉಪಾಯವನ್ನವಲಂಬಿಸುವದಕ್ಕೆ ಎರಡು ನಿಷ್ಠೆಗಳೆಂದು ೩ನೆಯ ಅಧ್ಯಾಯದ ೩ನೆಯ ಶ್ಲೋಕದಲ್ಲಿ "ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ" ಎಂದು ಹೇಳಿ, ಇವೆರಡರಲ್ಲಿ ಜ್ಞಾನಯೋಗವು ಸಮರ್ಥನಿಗೆ ಮಾತ್ರವೇ ಆದುದರಿಂದ, ಇತರರಿಗೆ ಕರ್ಮಯೋಗವೇ ಶ್ರೇಯಸ್ಕರವಾದುದು ಎಂದು ೩೫ನೇ ಶ್ಲೋಕದಲ್ಲಿ ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ಎಂಬುದರಲ್ಲಿ ಹೇಳಲ್ಪಟ್ಟ ಅಭಿಪ್ರಾಯವೇ ಇಲ್ಲಿಯೂ ಸಮರ್ಥನೆಯನ್ನು ಮಾಡಿ ಹೇಳಲ್ಪಟ್ಟಿತು. ಈ ಶ್ಲೋಕದ ನೈಷ್ಕರ್ಮ್ಯಸಿದ್ಧಿ ಎಂಬುದರಿಂದ ಮೋಕ್ಷಸಿದ್ಧಿಯು ಹೇಳಲ್ಪಡಲಿಲ್ಲವು; ಏಕೆಂದರೆ ಮುಂದಿನ ಶ್ಲೋಕದಲ್ಲಿ ಈ ಸಿದ್ಧಿಯನ್ನು ಹೊಂದುವವನು ಹೇಗೆ ಬ್ರಹ್ಮಪ್ರಾಪ್ತಿಯನ್ನು ಹೊಂದುವನೆಂಬುದನ್ನು ಹೇಳುತ್ತೇನೆ ಕೇಳು ಎಂದು ತಿಳಿಸುವವರಿಂದ, ಈ ನೈಷ್ಕರ್ಮ್ಯ ಸಿದ್ಧಿಯುಂಟಾದನಂತರವೂ ಪುನಃಸಾಧಿಸತಕ್ಕ ಕರ್ತವ್ಯವು ಹೇಳಲ್ಪಡುವದರಿಂದ ನೈಷ್ಕರ್ಮ್ಯ ಸಿದ್ಧಿ ಎಂಬುದರಿಂದ ಜ್ಞಾನಯೋಗ ವಿಷಯ ಮಾತ್ರವೂ ಹೇಳಲ್ಪಡಲಿಲ್ಲವು, ಹಾಗಾದರೆ ಏನು ಹೇಳಲ್ಪಟ್ಟಿತೆಂದರೆ ಧ್ಯಾನನಿಷ್ಠಾಫಲಪ್ರಾಪ್ತಿಯ ಆರಂಭ ದಶೆಯು. ಅದು ಉಂಟಾಗುತ್ತದೆಂದು ತಿಳಿಸುವದಕ್ಕಾಗಿ ಪರಮಾಂ ಧ್ಯಾನನಿಷ್ಠಾಂ ಎಂಬ ಭಾಷ್ಯವು. ಭಕ್ತಿಯೋಗದಲ್ಲಿ ಅಭಿನಿವೇಶವೇ ನೈಷ್ಕರ್ಮ್ಯ ಸಿದ್ಧಿಯು. ಇಂತಹ ಭಕ್ತಿ

**ಮೂ. ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌನ್ತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦ ॥**

---

ಯೋಗಾರಂಭಾರ್ಹತೆಯು ಏತರಿಂದುಂಟಾಗುತ್ತದೆಂದರೆ ? ಸರ್ವೇಂದ್ರಿಯ ಕರ್ಮೋಪರತಿರೂಪವೆಂದು ಹೇಳಲ್ಪಟ್ಟಿತು. ಆದರೆ ಇದು ಮೂಲದಲ್ಲಿ ಎಲ್ಲಿ ಹೇಳಲ್ಪಟ್ಟಿದೆ ಎಂದರೆ **ನೈಷ್ಕರ್ಮ್ಯ** ಶಬ್ದದಿಂದಲೇ ವ್ಯಕ್ತವೆಂಬ ಭಾವವು. ಹೇಗೆಂದರೆ ? **ನಿರ್ಗತ ಕರ್ಮಾ ನಿಷ್ಕರ್ಮಾ ತಸ್ಯ ಭಾವೋನೈಷ್ಕರ್ಮ್ಯಂ** ಎಂಬ ವ್ಯುತ್ಪತ್ತಿಯ ಮೂಲಕ ಸರ್ವೇನ್ದ್ರಿಯ **ಕರ್ಮೋಪರತಿ** ರೂಪವೆಂದು ವ್ಯಾಖ್ಯಾನಮಾಡಲ್ಪಟ್ಟಿತು. ಆದುದರಿಂದ **ನೈಷ್ಕರ್ಮ್ಯ ಸಿದ್ಧಿ ಪರಮಾಂ** ಎಂಬುದರಿಂದ **ವಕ್ಷ್ಯಮಾಣಧ್ಯಾನ ಯೋಗ ವಾಪ್ತಿಂ** ಎಂದು ತಾತ್ಪರ್ಯಾರ್ಥವನ್ನು ಅಪ್ಪಣೆ ಕೊಡಿಸಿರುತ್ತಾರೆ.

**ಮೂಲಕ್ಕೆ ಅರ್ಥವು**—ಹಿಂದೆ ಕರ್ಮಯೋಗವನ್ನು ಫಲಸಙ್ಗಕರ್ತೃತ್ವತ್ಯಾಗ ಪೂರ್ವಕವಾಗಿ ಪರಮಪುರುಷಾರಾಧನಾರೂಪದಲ್ಲಿ ಆತ್ಮಯಾಥಾತ್ಮ್ಯಜ್ಞಾನ ಪೂರ್ವಕವಾಗಿ ಅನುಷ್ಠಿಸುವದರಿಂದ, ಭಕ್ತಿಯೋಗಾರಂಭಕ್ಕೆ ಎಂದರೆ ಪರಮಪುರುಷನ ಉಪಾಸನಾರಂಭಕ್ಕೆ ವಿರೋಧಿಗಳಾದ ಪಾಪಗಳೆಲ್ಲಾ ತೊಲಗುವದರಿಂದ ಐಕಾನ್ತ್ಯದಿಂದ ಉಪಾಸಿಸುವ ಶಕ್ತಿಯು ದೊರೆಯುತ್ತದೆಂದು ಹೇಳಲ್ಪಟ್ಟಿತು. ಇಂತಹ ನೈಷ್ಕರ್ಮ್ಯ ಸಿದ್ಧಿಯುಂಟಾದವನಿಗೆ ಪರಭಕ್ತಿಯುಂಟಾಗುವದಕ್ಕೆ ಬೇಕಾದ ಜ್ಞಾನವು ಲಭಿಸುತ್ತದೆಂದು ಇಲ್ಲಿ ಉಪದೇಶಿಸುತ್ತಾರೆ. ಇದೇ ಕರ್ಮಯೋಗದಿಂದುಂಟಾಗುವ ಮುಖ್ಯವಾದ ಸಿದ್ಧಿಯು. ಇಂತಹ **ಸಿದ್ಧಿಂ ಪ್ರಾಪ್ತಃ**-ಸಿದ್ಧಿಯನ್ನು ಹೊಂದುವವನು, ಹೇಗೆ ಆತ್ಮಸಾಕ್ಷಾತ್ಕಾರವನ್ನು ಹೊಂದುವದರ ಮೂಲಕ ಕ್ರಮೇಣ **ಸಂಸಿದ್ಧಿ** ಎಂದು ಹೇಳಿಸಿಕೊಳ್ಳುವ ಮುಕ್ತಿಯನ್ನು ಹೊಂದುವನೆಂಬುದನ್ನು ಮುಂದೆ ಹೇಳುತ್ತಾರೆ.—ಜ್ಞಾನಯೋಗದಿಂದುಂಟಾಗುವ ಸಿದ್ಧಿಯು ಆತ್ಮಸಾಕ್ಷಾತ್ಕಾರವು; ಅದು ಕರ್ಮಯೋಗದಿಂದಲೇ ಜ್ಞಾನಯೋಗದ ಆವಶ್ಯಕತೆಯಿಲ್ಲದೆ ಉಂಟಾಗುತ್ತದೆಂದು ಹಿಂದೆ ಹೇಳಲ್ಪಟ್ಟಿತ್ತು (೪೨ನೆಯ ಶ್ಲೋಕವು) ಆ ಆತ್ಮಸಾಕ್ಷಾತ್ಕಾರವು ಹೇಗೆ ಕರ್ಮಯೋಗದಿಂದ ಅನುಗೃಹೀತವಾದ ಉಪಾಸನ ಕಾಲದಲ್ಲೇ ಲಭಿಸುತ್ತದೆ ಎಂಬುದನ್ನು ಹಿಂದೆ ಆರನೆಯ ಅಧ್ಯಾಯದಲ್ಲೂ ವಿಶದವಾಗಿ ಹೇಳಿದುದನ್ನೇ ಈ ಶ್ಲೋಕದಲ್ಲೂ ಸಙ್ಗ್ರಹವಾಗಿ ಹೇಳುತ್ತೇನೆಂದು ಪ್ರತಿಜ್ಞಾ ವಾಕ್ಯರೂಪದಲ್ಲಿ ತಿಳಿಸಿ ಅದನ್ನೇ ಮುಂದಿನ ಮೂರು ಶ್ಲೋಕಗಳಿಂದ ಅನುವಾದ ಮಾಡಿ ಹೇಳುತ್ತಾರೆ. **ಹೇ ಕೌನ್ತೇಯ** - ಓ ಅರ್ಜುನನೇ, **ಸಿದ್ಧಿಂ ಪ್ರಾಪ್ತಃ** - ಮೇಲೆ ಹೇಳಿದ ರೀತಿಯಲ್ಲಿ ಕರ್ಮಯೋಗವನ್ನು ಅನುಷ್ಠಿಸುತ್ತಾ ಉಪಾಸನಾರಂಭರೂಪ ಸಿದ್ಧಿಯನ್ನು ಹೊಂದಿದ ಮಹಾನುಭಾವನು, **ಯಥಾ** - ಯಾವರೀತಿಯಲ್ಲಿರುವವನಾಗಿ, **ಬ್ರಹ್ಮ** - ತನ್ನ ನೈಜವಾದ ಪ್ರಕೃತಿವಿಯುಕ್ತ ದೆಶೆಯಲ್ಲಿನ ಸ್ವರೂಪದ ಸಾಕ್ಷಾತ್ಕಾರವನ್ನು, **ಅಪ್ನೋತಿ** - ಹೊಂದುವನೋ, **ತಥಾ**-ಆ ಪ್ರಕಾರವಾಗಿಯೇ, ಹೇಳುವೆನು; **ಮೇ** ಎಂದರೆ ಮತ್ತಃ-ನನ್ನ ಮೂಲಕವಾಗಿ, **ಸಮಾಸೇನ** – ಹಿಂದೆ ೬ನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿರುವದರಿಂದ ಇಲ್ಲಿ ಸಙ್ಗ್ರಹವಾಗಿ **ನಿಬೋಧ** - ಕೇಳಿತಿಳಿ. ಈ ಪರಿಶುದ್ಧಾತ್ಮ ಸ್ವರೂಪದ ಅವಲೋಕನವೇ ಪರಮಾತ್ಮಧ್ಯಾನದಿಂದುಂಟಾಗುವ ಪರಮ ಪ್ರಯೋಜನವೆಂದು ಉತ್ತರಾರ್ಧದಿಂದ ತಿಳಿಸುತ್ತಾರೆ - **ಜ್ಞಾನಸ್ಯ** – ಮುಂದೆ ಹೇಳಲ್ಪಡುವ ಪರಮಾತ್ಮೋಪಾಸನಾರೂಪವಾದ ಜ್ಞಾನಕ್ಕೆ, **ಯಾ ಪರಾ ನಿಷ್ಠಾ** - ಯಾವ ಆತ್ಮ ಸಾಕ್ಷಾತ್ಕಾರವೇ ಪರಮ ಪ್ರಯೋಜನವೋ, ಆ ಕಾರಣದಿಂದ ನಿನಗೆ ಆತ್ಮಸಾಕ್ಷಾತ್ಕಾರವು ಹೇಗೆ ಉಂಟಾಗುತ್ತದೆಂಬುದನ್ನು ಸಙ್ಗ್ರಹವಾಗಿ ಹೇಳುವೆನು ಎಂಬ ತಾತ್ಪರ್ಯವು. ಕರ್ಮಯೋಗಾನುಷ್ಠಾನದ ಫಲರೂಪ ಸಿದ್ಧಿಯು ಯಾವುದೆಂದರೆ ಐಕಾನ್ತ್ಯದಿಂದ ಪರಮಾತ್ಮನನ್ನು ಉಪಾಸಿಸುವ ಶಕ್ತಿಯು. ಇಂತಹ ಉಪಾಸನದಿಂದ ಆಂತರಾಳಿಕ ಪ್ರಯೋಜನವಾಗಿ ಲಭಿಸುವದೆಂಬುದನ್ನು ಸಂಕ್ಷೇಪವಾಗಿ (ಮುಂದೆ ಮೂರು ಶ್ಲೋಕಗಳಿಂದ)

ಹೇಳುವೆನು. ಸಾವಧಾನದಿಂದ ಕೇಳು ಎಂಬುದು ಈ ಶ್ಲೋಕಾಭಿಪ್ರಾಯವು. ಈ ಶ್ಲೋಕಕ್ಕೆ ಅರ್ಥವನ್ನು ಇತರರು ನಾನಾವಿಧವಾಗಿ ಮಾಡಿರುತ್ತಾರೆ. ಕೆಲವರು **"ಬ್ರಹ್ಮ ಆಪ್ನೋತಿ"** ಪರಬ್ರಹ್ಮವನ್ನು ಹೊಂದುತ್ತಾರೆಂದು ಅರ್ಥಮಾಡಿರುತ್ತಾರೆ. ಇದೇ ಮೋಕ್ಷವಾದನಂತರ ಮುಂದೆ ಅವಸ್ಥಾಂತರವಿಲ್ಲವೆಂದು ಹೇಳಬೇಕಾಗಿತ್ತು; ಮುಂದೆ ೫೪ನೆಯ ಶ್ಲೋಕದಲ್ಲಿ ಹೀಗೆ **ಬ್ರಹ್ಮ ಭೂತ**ನಾದವನು **"ಮದ್ಭಕ್ತಿಂ ಲಭತೇ ಪರಾಂ** ಎಂಬುದರಿಂದ ಭಕ್ತಿಯೋಗದ ಪರಿಪಕ್ವಾವಸ್ಥೆಯನ್ನು ಹೊಂದುವನೆಂಬ ಉತ್ತರಾವಸ್ಥೆಯು ಹೇಳಲ್ಪಟ್ಟಿರುವದರಿಂದ ಬ್ರಹ್ಮ ಶಬ್ದಕ್ಕೆ ಪರಬ್ರಹ್ಮವೆಂಬ ಅರ್ಥವು ಸರಿಹೋಗುವದಿಲ್ಲವು. ಇನ್ನೂ ಕೆಲವರು ಬ್ರಹ್ಮ ಶಬ್ದಕ್ಕೆ ಲಕ್ಷ್ಮೀ ಎಂದು ಅರ್ಥಮಾಡಿರುತ್ತಾರೆ. ಅದು ಹೇಗೋ ತಿಳಿಯದು. ಅದೂ ಅಲ್ಲದೆ ಅಪ್ರಸ್ತುತವು. ಆದುದರಿಂದ ಬ್ರಹ್ಮ ಶಬ್ದಕ್ಕೆ ಇತರ ಅನೇಕ ಕಡೆಗಳಲ್ಲಿ ಪ್ರಯೋಗಿಸಿರುವಹಾಗೆ ಪ್ರಕೃತಿವಿಯುಕ್ತ ಜೀವಾತ್ಮ ಸ್ವರೂಪವೆಂಬ ಅರ್ಥವೇ ಸಮಂಜಸವಾದುದು. ಕರ್ಮ ಜ್ಞಾನಯೋಗಗಳಿಂದುಟಾಗುವ ಸಿದ್ಧಿಯೇ ಆತ್ಮ ಸಾಕ್ಷಾತ್ಕಾರವು; ಇದು ಜ್ಞಾನಯೋಗದ ಆವಶ್ಯಕತೆಯೇ ಇಲ್ಲದೆ ಕರ್ಮಯೋಗದ ಮೂಲಕವೇ ಭಕ್ತಿಯೋಗದಲ್ಲೇ ಲಭಿಸುತ್ತದೆಂದು ಹೇಳುವ ಪ್ರಕರಣವಾಗಿರುವದರಿಂದ **ಬ್ರಹ್ಮ ಶಬ್ದವು** ಜೀವಾತ್ಮನ ದಿವ್ಯಸ್ವರೂಪವನ್ನೇ ಬೋಧಿಸುತ್ತದೆ. ಹಿಂದೆ ಅನೇಕ ಸ್ಥಳಗಳಲ್ಲಿ ಬ್ರಹ್ಮ ಶಬ್ದಕ್ಕೆ ಇದೇ ಅರ್ಥವೆಂದು ಉಪಪಾದಿಸಲ್ಪಟ್ಟಿರುತ್ತದೆ—೨ನೆಯ ಅಧ್ಯಾಯದ ಕೊನೆಯ ಶ್ಲೋಕವು. ಗೀ ೫-೧೯ ೫-೨೦. ೫-೨೪ ಮುಂದೆ ೫೩ ೫೪ನೆಯ ಶ್ಲೋಕಗಳಲ್ಲೂ ಬ್ರಹ್ಮ ಶಬ್ದಕ್ಕೆ ಇದೇ ಅರ್ಥವು. ಇಲ್ಲಿ **ಜ್ಞಾನಸ್ಯ** ಎಂದರೆ ಉಪಾಸನಕ್ಕೆ ಎಂಬರ್ಥವು ಹೇಗೆ? **ಎಂದರೆ "ಮಯ್ಯೇವ ಮನಆಧತ್ಸ್ವಮಯಿಂ ಬುದ್ಧಿಂ ನಿವೇಶಯ"** (ಗೀ. ೧೨-೮) ಎಂಬಲ್ಲಿ ಹೇಳಿರುವ ಹಾಗೆ ತೈಲಧಾರೆಯ ಹಾಗೆ ನಿರಂತರ ಚಿನ್ತನರೂಪವು ಉಪಾಸನೆಯಾದುದರಿಂದ ಜ್ಞಾನರೂಪವಾದುದು; ಪರಮಾತ್ಮನ ಸಾಕ್ಷಾತ್ಕಾರವು ಜ್ಞಾನರೂಪವಲ್ಲವೇ ? ಶ್ರೀ ದೇಶಿಕರವರು **ಭಕ್ತಿಯೋಗವಾವುದು** ಎಂಬುದಕ್ಕೆ ಉತ್ತರವಾಗಿ ಶ್ರೀ ಮದ್ರಹಸ್ಯತ್ರಯಸಾರದ ಉಪಾಯ ವಿಭಾಗಾಧಿಕಾರದಲ್ಲಿ "ಅದು ತಾನ್ **ತೈಲಧಾರೈಯೈಪ್ಪೋಲೆ ನಿರನ್ತರಮಾನ ಸ್ಮೃತಿರೂಪಮಾಯ್ । ಸಾಕ್ಷಾತ್ಕಾರತುಲ್ಯಮಾನ ವೈಶದ್ಯತ್ತೈಯುಡೈತ್ತಾಯ್ .... ಅನ್ತಿಮ ಪ್ರತ್ಯಯಾವಧಿಯಾನ ಜ್ಞಾನಸನ್ತತಿ ವಿಶೇಷಮ್"** (೮೭೭ನೆಯ ಪುಟ) ಎಂದು ಅಪ್ಪಣೆ ಕೊಡಿಸಿರುತ್ತಾರೆ. ಹಾಗೆಯೇ ಶ್ರೀ ಯತಿವರ್ಯರೂ ಶ್ರೀ ಭಾಷ್ಯದಮಙ್ಗಳ ಶ್ಲೋಕದಲ್ಲಿ **"ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ"** ಭಕ್ತಿರೂಪಾ ಎಂಬುದರಿಂದ ಸಾಧ್ಯೋಪಾಯವಾದ್ದು ಭಕ್ತಿಯೋಗವೆಂದುಹೇಳಿ,**ಶೇಮುಷೀ ಭವತು** ಎಂಬ ಪ್ರಯೋಗದಿಂದ **ಜ್ಞಾನರೂಪವಾದುದೆಂದು** ಉಪದೇಶಿಸಿರುತ್ತಾರೆ. ಅದ್ವೈತಿಗಳು **ಜ್ಞಾನಾನ್ಮೋಕ್ಷಃ** ಎಂದು ಹೇಗೆ ಹೇಳುತ್ತಾರೆಯೋ ಹಾಗೆಯೇ ನಾವೂ ಹೇಳುವೆವು. ಆದರೆ ಅವರುಗಳು ಹೇಳುವಹಾಗೆ, ಕರ್ಮವು ಅಙ್ಗವಲ್ಲದೆ ಬರೀ ವಾಕ್ಯಾರ್ಥಜನ್ಯ ಜ್ಞಾನ ಮಾತ್ರವಾದ **"ತತ್ತ್ವಮಸಿ"** ಎಂಬ ವಾಕ್ಯ ಜ್ಞಾನದಿಂದ ಮೋಕ್ಷವೆಂಬ ವಾದವು **"ಮಯ್ಯೇವ ಮನಆಧತ್ಸ್ವ ಮಯಿಬುದ್ಧಿಂ ನಿವೇಶಯ" "ಕುರ್ವನ್ನೇವೇಹ ಕರ್ಮಾಣಿ" ಸ್ವೇಸ್ವೇಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ"** (ಗೀ ೧೮ ೪೫) ಇತ್ಯಾದಿ ಪ್ರಮಾಣಗಳಿಂದ ನಿರಸ್ತವು. ಮತ್ತು ಮೋಕ್ಷಪ್ರಾಪ್ತಿಗೆ **"ಶೇಮುಷೀಭಕ್ತಿರೂಪಾ"** ಆವಶ್ಯಕವೆಂದು ಹೇಳಿರುವದರಿಂದ,ಜ್ಞಾನಯೋಗ ಕರ್ಮಯೋಗಗಳೂ ಸಾಕ್ಷಾತ್ತಾಗಿ ಉಪಾಯವೆಂಬ ವಾದವೂ ಸಹ ನಿರಸ್ತವೆಂದು ಶ್ರುತ ಪ್ರಕಾಶಿಕೆಯಲ್ಲೇ ಸುವ್ಯಕ್ತವು. ಇಲ್ಲಿಯೇ ಶ್ರೀ ಯತಿವರ್ಯರು **ಕರ್ಮಯೋಗ ನಿಷ್ಪಾದ್ಯಧ್ಯಾನಯೋಗ** ವೆಂಬುದರಿಂದಲೂ ನಿರಸ್ತವು. ಮತ್ತು ಈ ಶ್ಲೋಕದಲ್ಲಿ ಜ್ಞಾನಯೋಗ ಲಕ್ಷಣಾರೂಪವಾದ,ಸಿದ್ಧಿಯು ಹೇಳಲ್ಪಟ್ಟಿತೆಂಬ ಅಭಿಪ್ರಾಯವೂ ನಿರಸ್ತವು. ಜ್ಞಾನವು ಧ್ಯಾನಾತ್ಮಕವೆಂದು **"ಇದಂತು ತೇ ಗುಹ್ಯತಮಂ ವಕ್ಷ್ಯಾಮ್ಯನಸೂಯವೇ। ಜ್ಞಾನಂ ವಿಜ್ಞಾನ**

ಭಾ. **ಸಿದ್ಧಿಂ ಪ್ರಾಪ್ತಃ - ಆಪ್ರಯಾಣಾ ದಹರಹರನುಷ್ಠೀಯಮಾನ ಕರ್ಮಯೋಗ ನಿಷ್ಪಾದ್ಯ ಧ್ಯಾನಸಿದ್ಧಿಂ ಪ್ರಾಪ್ತಃ, ಯಥಾ - ಯೇನ ಪ್ರಕಾರೇಣ ವರ್ತಮಾನೋ ಬ್ರಹ್ಮಪ್ರಾಪ್ನೋತಿ, ತಥಾ ಸಮಾಸೇನ ಮೇ ನಿಬೋಧ . ತದೇವ ಬ್ರಹ್ಮವಿಶೇಷ್ಯತೇ ನಿಷ್ಠಾಜ್ಞಾನಸ್ಯ ಯಾಪರೇತಿ. ಜ್ಞಾನಸ್ಯ ಧ್ಯಾನಾತ್ಮಕಸ್ಯ ಯಾಪರಾನಿಷ್ಠಾ -ಪರಮಪ್ರಾಪ್ಯ ಮಿತ್ಯರ್ಥಃ || ೫೦ ||**

---

ಸಹಿತಂ **ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್** (೧೪ ೯. ೧) ರಲ್ಲಿ ಹೇಳಲ್ಪಟ್ಟಿರುತ್ತದೆ. **(೧೪. ೧೧-೫೩)** ನೆಯ ಶ್ಲೋಕವಾದ **"ನಾಹಂ ವೇದೈರ್ನತಪಸಾ"**ಎಂಬ ಭಗವದುಕ್ತಿಯಿಂದಲೇ ಕೇವಲ ಕರ್ಮಯೋಗವೇ ಮೋಕ್ಷೋಪಾಯವಲ್ಲವೆಂದು ಮೋಕ್ಷೋಪಾಯಕ್ಕೆ ಸಾಧನ ಮಾತ್ರ ವೆಂದೂ ಹೇಳಲ್ಪಟ್ಟಿತು. **ಕಷಾಯೇ ಕರ್ಮಭಿಃ ಪಕ್ವೇತತೋ** ಜ್ಞಾನಂಪ್ರವರ್ತತೇಎಂಬಲ್ಲಿ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪಗಳು ಕರ್ಮಯೋಗದಿಂದ ಕಳೆದುಹೋದರೆ, ಅನಂತರ ಉಪಾಸನೆಯಲ್ಲಿ ಪ್ರವೃತ್ತಿಯುಂಟಾಗುತ್ತದೆ ಎಂಬಲ್ಲಿ ಜ್ಞಾನಶಬ್ದವು ಉಪಾಸನ ಪರವು. ಇಂತಹ ಪರಮಾತ್ಮ ಸಕ್ಷಾತ್ಕಾರಕ್ಕೂ ಈ ಆತ್ಮಯಾಥಾತ್ಮ್ಯ ಸ್ವರೂಪ ಚಿನ್ತನವೂ ಕೂಡ ಮುಖ್ಯ ಸಾಧನ ವಾಗಿ **ಪರಾನಿಷ್ಠಾ** ವೆಂದು ಹೇಳಲ್ಪಟ್ಟಿತು. ಇಲ್ಲಿ ನಿಷ್ಠಾ ಎಂದರೆ ಉತ್ಕೃಷ್ಟಫಲಸಾಧನೆಗಾಗಿ ಅಭ್ಯಾಸರೂಪದಲ್ಲಿ ಮಾಡುವ ಪ್ರವೃತ್ತಿಯು.

**ಭಾಷ್ಯಾರ್ಥವು**—ಈ ಶ್ಲೋಕದ ಪೂರ್ವಾರ್ಧದಲ್ಲಿ ಕರ್ಮಯೋಗಾದಿಗಳಿಂದುಂಟಾಗುವದು ಪ್ರಕೃತಿವಿಯುಕ್ತದೆಶೆಯಲ್ಲಿ ಈ ಚೇತನನು ಎಂತಹ ಉತ್ಕೃಷ್ಟದೆಶೆಯನ್ನು ಹೇಗೆ ಹೊಂದುವ ನೆಂಬುದನ್ನು ಸಙ್ಗ್ರಹವಾಗಿ ತಿಳಿಸುವೆನೆಂದು ಪ್ರತಿಜ್ಞಾವಾಕ್ಯವನ್ನು ಹೇಳಿ, ಉತ್ತರಾರ್ಧದಲ್ಲಿ ಅಂತಹ ಪ್ರಕೃತಿ ವಿಯುಕ್ತ ಆತ್ಮಸ್ವರೂಪ ಜ್ಞಾನಪ್ರಾಪ್ತಿಯು ಧ್ಯಾನಯೋಗದ ಪರಾ ಕಾಷ್ಠಾದಶೆಯೆಂದು ಹೇಳುತ್ತಾರೆ.—

**ಸಿದ್ಧಿಂ ಪ್ರಾಪ್ತಃ** ಎಂದರೆ **ಆಪ್ರಯಾಣಾದಹರಹರನುಷ್ಠೀಯಮಾನ** ಕರ್ಮ**ಯೋಗ ನಿಷ್ಪಾದ್ಯಧ್ಯಾನ ಸಿದ್ಧಿಂ** ಪ್ರಾಪ್ತಃ-ದೇಹಾವಸಾನ ಉಂಟಾಗುವವರೆಗೂ ಪ್ರತಿದಿನದಲ್ಲೂ ಅನುಷ್ಠಿ ಸಲು ಯೋಗ್ಯವಾದ ಕರ್ಮಯೋಗದಿಂದ ಉಂಟಾದ ಉಪಾಸನ ಸಿದ್ಧಿಯನ್ನು ಹೊಂದಿದ ಅಧಿ ಕಾರಿಯು, **ಯಥಾ** ಎಂದರೆ **ಯೇನ** ಪ್ರಕಾರೇಣ – ಯಾವ ರೀತಿಯಲ್ಲಿ, ವರ್ತಮಾನಃ - ಇರು ವವನಾಗಿ, **ಬ್ರಹ್ಮಾಪ್ನೋತಿ** – ಪುನಃ ಸಂಸಾರವಿಲ್ಲದ ಪ್ರಕೃತಿವಿಯುಕ್ತ ಆತ್ಮಸ್ವರೂಪವನ್ನು ಹೊಂದುವನೋ, **ತಥಾ** – ಅಂತಹ ಪ್ರಕಾರವನ್ನು, **ಸಮಾಸೇನ** . ಸಙ್ಗ್ರಹವಾಗಿ, **ಮೇ** – ನಿಸ್ಸಂಶವಾಗಿಯೂ ಯಥಾರ್ಥವಾಗಿಯೂ ಉಪದೇಶಿಸುವ ನನ್ನ ದೆಶೆಯಿಂದ, **ನಿಬೋಧ** – ತಿಳಿ. **ತದೇವ ಬ್ರಹ್ಮ** - ಅಂತಹ ಮಹಿಮೆಯುಳ್ಳ ಪ್ರಕೃತಿವಿಯುಕ್ತ ದಿವ್ಯಾತ್ಮ ಸ್ವರೂಪವೇ, **ವಿಶೇಷ್ಯತೇ** - ವಿಲಕ್ಷಣವಾದುದೆಂದು ವಿಶೇಷಿಸಿ ಹೇಳಲ್ಪಡುತ್ತದೆ. ಹೇಗೆಂದರೆ **"ನಿಷ್ಠಾಜ್ಞಾನಸ್ಯ ಯಾಪರಾ** ಇತಿ-ಎಂಬದಾಗಿ; **ಜ್ಞಾನಸ್ಯ** ಎಂದರೆ **ಧ್ಯಾನಾತ್ಮಕಸ್ಯ** – ಪರಮಪುರುಷ ಸಾಕ್ಷಾತ್ಕಾರ ರೂಪವಾದ ಉಪಾಸನಕ್ಕೆ **ಯಾ ಪರಾನಿಷ್ಠಾ** - ಯಾವುದು ಶ್ರೇಷ್ಠವಾದ ನಿಷ್ಠೆಯೋ; ಅಭಿಪ್ರಾಯವೇನೆಂದರೆ, **ಪರಮಂ ಪ್ರಾಪ್ಯ ಮಿತ್ಯರ್ಥಃ** - ಶ್ರೇಷ್ಠವಾದ ಪ್ರಾಪ್ತಿರೂಪ ಫಲವೋ ಎಂಬರ್ಥವು; ಅಂತಹ ಉತ್ಕೃಷ್ಟದೆಶೆಯು ಯಾವಪ್ರಕಾರವಾಗಿ ಉಂಟಾಗುತ್ತದೆಂಬದನ್ನು ಸಂಕ್ಷೇಪವಾಗಿ ತಿಳಿಸುವೆನು ಕೇಳು ಎಂಬ ಅಭಿಪ್ರಾಯವು. ಕರ್ಮಯೋಗದ ಸಿದ್ಧಿಯು ಹೇಗೆ ಉಂಟಾಗುತ್ತದೆಂಬುದನ್ನು ಸಿದ್ಧಿಂಪ್ರಾಪ್ತಃ ಎಂಬ ಪ್ರಯೋಗದ ವಿವರಣವಾಗಿ **ಆಪ್ರಯಾಣಾತ್ ಅಹರಹರನುಷ್ಠೀಯಮಾನ ಕರ್ಮಯೋಗ ನಿಷ್ಪಾದ್ಯ ಧ್ಯಾನಸಿದ್ಧಿಂ ಪ್ರಾಪ್ತಃ** ಎಂದು ಹೇಳಿರುವದರಿಂದ ನಿತ್ಯನೈಮತ್ತಿಕಾನುಷ್ಠಾನದಿಂದ ಕೂಡಿದ ಕರ್ಮಯೋಗವು ಎಲ್ಲಿವರೆಗೆ ಅನುಷ್ಠಿಸ

ತಕ್ಕದ್ದೆಂಬ ಸಂದರ್ಭದಲ್ಲಿ **ಆಪ್ರಯಾಣಾತ್**, ನಿರ್ಯಾಣ ಪ್ರಾಪ್ತಿ ಉಂಟಾಗುವವರೆಗೂ ಅನುಷ್ಠಿಸತಕ್ಕದ್ದೆಂದು ಹೇಳಲ್ಪಟ್ಟಿತು; ನಿತ್ಯನೈಮಿತ್ತಿಕಾದಿಗಳು ಅಂಗವು; ಅಂಗಿ ನಿಷ್ಪತ್ತಿಗೆ ಅಂಗಾಂಗಗಳ ಸಮುಚ್ಚಯವು ಆವಶ್ಯಕವೆಂಬುದು ಇಲ್ಲಿ ಉಪದಿಷ್ಟವು. ಹೋದ ಜನ್ಮದಲ್ಲಿ ಅಂಗಾನುಷ್ಠಾನವಿದ್ದರೆ ಈಗ ಆ ಅಂಗದ ಆವಶ್ಯಕತೆ ಇಲ್ಲದೆ ಅಂಗಿಮಾತ್ರದ ಅನುಷ್ಠಾನವು ಸಾಕು ಎಂಬ ಅಶಾಸ್ತ್ರೀಯವಾದವಾದವು ಇದರಿಂದ ನಿರಸ್ತವು. ಆಗಲಿ, ಹಿಂದಿನ ಜನ್ಮದ ಅಂಗದ ಅನುಷ್ಠಾನವು ನಿರರ್ಥವೋ? ಎಂದರೆ ಹಾಗಲ್ಲವು, ಅದರಿಂದ ಪ್ರಾಪ್ತವಾದ ವಾಸನಾ ಬಲದಿಂದ ಈ ಜನ್ಮದಲ್ಲಿ ಅಂಗ ನಿಷ್ಪತ್ತಿಯು ಶೀಘ್ರವಾಗಿ ಬಲವತ್ತರವಾಗಿಯೂ ಲಭಿಸುತ್ತದೆಂದು ತಿಳಿಯತಕ್ಕದ್ದು. ಈ ಅಭಿಪ್ರಾಯವು ಬ್ರಹ್ಮಸೂತ್ರಗಳಾದ **ಸರ್ವಾಪೇಕ್ಷಾಚ ಯಜ್ಞಾದಿ ಶ್ರುತೇ ರಶ್ವವತ್**" (೩. ೪. ೨೬) ಮತ್ತು "**ಆವೃತ್ತಿರಸಕೃದುಪದೇಶಾತ್**" ಎಂಬುವಗಳಿಂದ ಉಪಾಸನವೂ ತದಂಗವಾದ ನಿತ್ಯನೈಮಿತ್ತಿಕಾದಿಗಳೂ, **ಆಪ್ರಯಾಣಾತ್** ಅನುಷ್ಠಿಸತಕ್ಕವುಗಳೆಂಬುದು **ಸೂಚಿತವು**- ಅಲ್ಲಿ ಶ್ರೀ ಯತಿವರ್ಯರು "ಏವಂ **ರೂಪಂ ಧ್ಯಾನಮಹರಹರನುಷ್ಠೀಯಮಾನೈರ್ನಿತ್ಯ ನೈಮಿತ್ತಿಕ ಕರ್ಮಭಿಃ ಪರಮಪುರುಷಾರಾಧನ ರೂಪೈಃ ಪರಮಪುರುಷ ಪ್ರಸಾದ ದ್ವಾರೇಣ ಜಾಯತೇ**" ಎಂದು ಭಾಷ್ಯವನ್ನು ಬರೆದಿರುತ್ತಾರೆ. (೩. ೪. ೨೬) ಗೀತೆಯಲ್ಲೂ, ಆದುದರಿಂದಲೇ "**ಯಜ್ಞೋದಾನಂ** ತಪಶ್ಚೈವ **ನತ್ಯಾಜ್ಯಂ ಕಾರ್ಯಮೇವತತ್**" (೧೮ ೫) ಎಂದು ಹೇಳಲ್ಪಟ್ಟಿತು. ಇಲ್ಲಿ **ಕಾರ್ಯಮೇವ** ಎಂದು ಎಲ್ಲಿವರೆಗೂ ಕಾರ್ಯಂ ಎಂದರೆ **ಆಪ್ರಯಾಣಾತ್** ಎಂಬ ಭಾವವು. ಹಾಗೆಯೇ ಶ್ರೀವಿದುರರೂ ಧೃತರಾಷ್ಟ್ರನಿಗೆ ಬ್ರಹ್ಮ ವಿದ್ಯೆಯನ್ನು ಅಂಗದೊಂದಿಗೆ "**ಯಾವಜ್ಜೀವಂತು ತತ್ಕುರ್ಯಾದ್ಯೇನ ಪ್ರೇತ್ಯಸುಖಂವಸೇತ್**" ಇಲ್ಲಿ ಸುಖ ಶಬ್ದದಿಂದ ಮೋಕ್ಷ ಸುಖವು ವಿವಕ್ಷಿತವು. ಇಲ್ಲಿ **ಬ್ರಹ್ಮ ಆಪ್ನೋತಿ** – **ಪರಮಾತ್ಮಾನಂ ಆಪ್ನೋತಿ** ಎಂದು ಕೆಲವರು ಮಾಡಿರುವ ಅರ್ಥವು ಅಸಂಗತವು. ಏಕೆಂದರೆ ಮುಂದೆ ಹೇಗೆ **ಬ್ರಹ್ಮಭೂತ**ನಾಗುತ್ತಾನೆಂಬುದನ್ನು ವಿಶದವಾಗಿ ತಿಳಿಸಿ, ಅನಂತರ "**ಮದ್ಭಕ್ತಿಂ ಲಭತೇಪರಾಂ**" ಎಂದು ಹೇಳಿ, "**ತದನಂತರಂ ಮಾಂ ವಿಶತೇ**" ಎಂದು ೫೫ನೆಯ ಶ್ಲೋಕದಲ್ಲಿ ಹೇಳಿರುವದರಿಂದ. ಹಿಂದೆ ಇದನ್ನೆಲ್ಲಾ ವಿಸ್ತರಿಸಿ ಹೇಳಿಮದರ ಅನುವಾದವಾದುದರಿಂದ **ಸಮಾಸೇನ** ಸಂಗ್ರಹವಾಗಿ ಮುಂದಿನ ಐದು ಶ್ಲೋಕಗಳಿಂದ ತಿಳಿಸುವೆನೆಂಬ ಭಾವವು. ಇಲ್ಲಿ ಜ್ಞಾನ ಶಬ್ದದಿಂದ ಉಪಾಸನವು ಹೇಳಲ್ಪಟ್ಟಿತು. ಆದುದರಿಂದಲೇ **ಧ್ಯಾನಾತ್ಮಕಸ್ಯ** ಎಂಬ ಭಾಷ್ಯವು. "**ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ**" ಎಂಬಲ್ಲೂ ಮತ್ತು "**ಕಷಾಯಪಕ್ತಿಃ ಕರ್ಮಾಣಿ ಜ್ಞಾನಂತು ಪರಮಾಗತಿಃ**" ಎಂಬಲ್ಲೂ ಜ್ಞಾನ ಶಬ್ದವು **ವೇದನ ಧ್ಯಾನ ಉಪಾಸನಾ** ಶಬ್ದಗಳೊಂದಿಗೆ ಪರ್ಯಾಯಪದವು. ಹೀಗೆ ಉಪಾಸನದ ಮಾಹಾತ್ಮ್ಯೆಯಿಂದಲೂ ಪ್ರಕೃತಿವಿಯುಕ್ತದಿವ್ಯಾತ್ಮ ಸ್ವರೂಪವೂ ಲಭಿಸುತ್ತದೆಂಬ ಭಾವವು. ॥ ೫೦ ॥

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕದಲ್ಲಿ "**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧಮೇ**" ಪ್ರತಿನಿತ್ಯವೂ ಕರ್ಮಯೋಗದ ಕರ್ಮಗಳನ್ನೆಲ್ಲಾ ಫಲ ಕರ್ತೃತ್ವ ಸಙ್ಗಗಳನ್ನು ತ್ಯಾಗಮಾಡಿದವನಾಗಿ ಆತ್ಮಯಾಥಾತ್ಮ್ಯ ಜ್ಞಾನದೊಂದಿಗೆ ಪರಮಪುರುಷಾರಾಧನಾ ರೂಪದಲ್ಲಿ ಯಾವನು ಅನುಷ್ಠಿಸುತ್ತಾನೋ, ಅದರಿಂದ ಪ್ರೀತನಾದ ಶ್ರೀನಿವಾಸನ ದಯೆಯಿಂದ ಭಕ್ತಿಯೋಗವನ್ನು ಅವಲಂಬಿಸಲು ಶಕ್ತಿಯುಂಟಾಗುತ್ತದೆಂದೂ ತನ್ಮೂಲಕವಾಗಿ ಜ್ಞಾನ ಯೋಗದ ಆವಶ್ಯಕತೆಯಿಲ್ಲದೆ ಭಕ್ತಿಯೋಗದಲ್ಲಿಳಿದರೆ ಆತ್ಮ ಸಾಕ್ಷಾತ್ಕಾರದ ಪ್ರಾಪ್ತಿಯೂ ಉಂಟಾಗುತ್ತದೆಂದೂ ಹೇಳಿ, ಅದು ಉಂಟಾಗುವ ಪ್ರಕಾರವನ್ನು ಈ ಮೂರು ಶ್ಲೋಕಗಳಿಂದ ಉಪದೇಶಿಸುತ್ತಾರೆ. ಆಕಾರಣದಿಂದ ಈ ಮೂರು ಶ್ಲೋಕಗಳಿಗೂ ಒಟ್ಟಿಗೆ ಭಾಷ್ಯವು. ಎಲ್ಲಾ ಉಪಾಸನರೂಪ ಪರವಿದ್ಯೆಗಳಿಗೂ ಅಙ್ಗಭೂತವಾಗಿ ಪ್ರತ್ಯಗಾತ್ಮದರ್ಶನವು ಹೇಳಲ್ಪಟ್ಟಿರುತ್ತದೆ.

ಮೂ. ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।
ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧ ॥
ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯ ಮಾನಸಃ ।
ಧ್ಯಾನಯೋಗ ಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥
ಅಹಙ್ಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।
ವಿಮುಚ್ಯ ನಿರ್ಮಮ ಶ್ಶಾನ್ತೋ ಬ್ರಹ್ಮಭೂಯಾಯ ಕಲ್ಪತೇ ॥ ೫೩ ॥

---

ಅದು ಹೇಗೆ ಪ್ರಾಪ್ತವಾಗುತ್ತವೆಂಬುದು ಈ ಮೂರು ಶ್ಲೋಕಗಳಿಂದ ಉಪದೇಶಿಸಲ್ಪಡುತ್ತದೆ. ಬ್ರಹ್ಮವಿದ್ಯೆಗೆ ಇದು ಅಙ್ಗವೆಂಬ ಭಾವವನ್ನು ಮರೆತು, **ಬ್ರಹ್ಮಭೂಯಾಯ ಕಲ್ಪತೇ** ಎಂಬಲ್ಲಿನ ಬ್ರಹ್ಮ ಶಬ್ದಕ್ಕೆ ವಿಶುದ್ಧವಾದ ಯಥಾವಸ್ಥಿತ ಆತ್ಮಸ್ವರೂಪವೆಂದು ಅರ್ಥಮಾಡಿ ಅಂತಹ ಆತ್ಮ ದರ್ಶನ ಪ್ರಾಪ್ತಿಯುಂಟಾಗುತ್ತದೆಂದು ಅರ್ಥಮಾಡದೆ, ನಾನಾವಿಧವಾಗಿ ಅರ್ಥಮಾಡಿರುತ್ತಾರೆ. ಮುಕ್ತಿಯನ್ನು ಹೊಂದುತ್ತಾರೆಂಬ ಅರ್ಥವು ಸರ್ವಾತ್ಮನಾ ಅಲ್ಲವೆಂಬುದು ಮುಂದಿನ ಶ್ಲೋಕದಲ್ಲಿ **ಬ್ರಹ್ಮಭೂತಃ ಪ್ರಸನ್ನಾತ್ಮಾ** - ಎಂದು ಮುಂದೆ ಅಂತವನು **ಮದ್ಭಕ್ತಿಂ ಲಭತೇ ಪರಾಂ** ಎಂದು ಹೇಳಿರುವದರಿಂದ ವ್ಯಕ್ತವು. ಅದೂ ಅಲ್ಲದೆ, ಹಿಂದಿನ ಶ್ಲೋಕದಲ್ಲೇ **ನಿಷ್ಠಾ ಜ್ಞಾನಸ್ಯ ಯಾ ಪರಾ** ಎಂಬ ಪ್ರಯೋಗದಿಂದ ಬ್ರಹ್ಮಪ್ರಾಪ್ತಿಯು **ಯಾ ಪರಾ ನಿಷ್ಠಾ** ಎಂಬರ್ಥವಾಗುವದರಿಂದ ಬ್ರಹ್ಮಪ್ರಾಪ್ತಿಯು **ಪರಾನಿಷ್ಠಾ** - ಸರ್ವೋತ್ಕೃಷ್ಟ ಫಲಕ್ಕೆ ಉಪಾಯವಾಗಿ **ನಿಷ್ಠೀಯತೇ** ಎಂಬರ್ಥವಾಗುವದರಿಂದ ಬ್ರಹ್ಮಪ್ರಾಪ್ತಿ ಶಬ್ದದಲ್ಲಿ ಪರಬ್ರಹ್ಮಪ್ರಾಪ್ತಿ ಎಂಬ ಅರ್ಥವು ಸರಿಯಲ್ಲವು.

**ಬುದ್ಧ್ಯಾ ವಿಶುದ್ಧಯಾ ಯುಕ್ತಃ** - "**ತದ್ಧಾಮ ಪರಮಂ ಮಮ**" (ಗೀ. ೮-೨೧) ಎಂಬಲ್ಲೂ ಮತ್ತು "**ನಿರ್ದೋಷಂ ಹಿ ಸಮಂ ಬ್ರಹ್ಮ**" (ಗೀ. ೫-೭) ಎಂಬಲ್ಲೂ, ಹೇಳಿರುವಹಾಗೆ ವಿಶುದ್ಧವಾದ ಬುದ್ಧಿಯು ಯಾವುದೆಂದರೆ ತನ್ನ ಆತ್ಮವು ತುಂಬಾ ಪರಿಶುದ್ಧವಾದುದು ಎಂಬ ಆತ್ಮಯಾಥಾತ್ಮ್ಯವಿಷಯವಾದ ಬುದ್ಧಿಯಿಂದ ಕೂಡಿದವನಾಗಿ, **ಧೃತ್ಯಾತ್ಮಾನನ್ನಿಯಮ್ಯ ಚ**- ಹಿಂದೆ ಹೇಳಲ್ಪಟ್ಟ ಸಾತ್ವಿಕ ಧೃತಿಯಿಂದ ಮನಸ್ಸನ್ನು ನಿಗ್ರಹಿಸಿ, ತನ್ಮೂಲಕವಾಗಿ **ಶಬ್ದಾದೀನ್ ವಿಷಯಾನ್ ತ್ಯಕ್ತ್ವಾ** - ಶಬ್ದಾದಿ ವಿಷಯಗಳಲ್ಲಿ ಆಶೆಯನ್ನು ತೊರೆದು, ಯಾವಾಗ ವಿಷಯಗಳಲ್ಲಿ ಅನುರಾಗವು ಹೋಯಿತೋ ಆ ಕಾರಣದಿಂದ, **ರಾಗದ್ವೇಷೌ ವ್ಯುದಸ್ಯ ಚ** - ಅವುಗಳು ಬೇಕೆಂಬ ರಾಗವೂ, ಅವುಗಳ ಪ್ರಾಪ್ತಿಗೆ ಇತರರಿಂದ ತೊಂದರೆ ಬಂದರೆ ಅವರಲ್ಲಿ ದ್ವೇಷವೂ ಉಂಟಾಗುವದಿಲ್ಲವಾದುದರಿಂದ ಅವುಗಳನ್ನು ನಿರಾಕರಿಸಿ, **ವಿವಿಕ್ತಸೇವೀ** - ಹಿಂದೆ ೬-೧೦ ರಲ್ಲಿ **ರಹಸಿಸ್ಥಿತಃ** - ಎಂದೂ, **ಏಕಾಕೀ** ಎಂದೂ, ಹೇಳಿರುವಹಾಗೆ ಜನರು ಬಂದು ಉಪಾಸನೆಯನು ಮಾಡುವ ಕಾಲದಲ್ಲಿ ತೊಂದರೆ ಮಾಡದೆಯೂ, ಮನಸ್ಸಿಗೆ ಐಕಾನ್ತ್ಯವು ದೊರೆಯುವದಕ್ಕಾಗಿಯೂ, ಜನರಹಿತವಾದ ಸ್ಥಳದಲ್ಲಿರುವ ಶೀಲವುಳ್ಳವನಾಗಿ, **ಲಘ್ವಾಶೀ** – ಹಿಂದೆ (೬-೧೬) ರಲ್ಲಿ "**ನಾತ್ಯಶ್ನತಸ್ತು**" ಎಂದೂ '**ಯುಕ್ತಾಹಾರ ವಿಹಾರಸ್ಯ**" ಎಂದೂ, ಹೇಳಿರುವ ಹಾಗೆ ಅತ್ಯಾಹಾರ ನಿರಾಹಾರಗಳಿಲ್ಲದೆ ಯುಕ್ತಾಹಾರವುಳ್ಳ ಶೀಲವುಳ್ಳವನಾಗಿ, **ಯತವಾಕ್ಕಾಯ ಮಾನಸಃ** – ಹಿಂದೆ ೬-೨೮ ರಲ್ಲಿ ಹೇಳಿರುವಹಾಗೆ ವಾಕ್ಕೂ ಶರೀರವೂ ಮನಸ್ಸೂ ಎಲ್ಲವೂ ಧ್ಯಾನಕ್ಕೆ ಅನುಕೂಲವಾಗಿರುವಹಾಗೆ ಪ್ರಯುತ್ನಿಸಿದವನಾಗಿ, **ನಿತ್ಯಂ** - ಯಾವಾಗಲೂ ಎಂದರೆ ತಾನು ಜೀವಿಸಿರುವತನಕ, **ಧ್ಯಾನಯೋಗಪರಃ**- ಆ ತನ್ನ ಜೀವಾತ್ಮನ ಯಥಾರ್ಥವಾದ ಪರಿಶುದ್ಧ ಸ್ವರೂಪವನ್ನು ಚಿಂತಿಸುವದರಲ್ಲೇ ಆಸಕ್ತಿಯುಳ್ಳವನಾಗಿ, ಇಲ್ಲಿ ಧ್ಯಾನ ಶಬ್ದವು ಬರೀ ಚಿಂತನಪರವೆಂದು ಅರ್ಥಮಾಡಬಹುದು. ಆತ್ಮಾವಿನ ಉಪಾಸನವೆಂದರೆ ೬ನೆಯ ಅಧ್ಯಾಯ

'ದಲ್ಲಿ ಹೇಳಲ್ಪಟ್ಟ ಜ್ಞಾನಯೋಗಕ್ಕೆ ಬೇಕಾದ ಉಪಾಸನೆಯೇ ಆಗುತ್ತದೆ. ಜ್ಞಾನಯೋಗದ ನಿರಪೇಕ್ಷವಾಗಿ ಕರ್ಮಯೋಗಮಾಡು ಎಂದು ಉಪದೇಶವಾದುದರಿಂದ, ಧ್ಯಾನಶಬ್ದದಿಂದ **ಉಪಾ.** ಸನವು ಹೇಳಲ್ಪಡಲಿಲ್ಲವು. ಬರೀ ಆತ್ಮ ಚಿಂತನವೇ ಹೇಳಲ್ಪಟ್ಟಿತೆಂದು ಭಾವಿಸಬಹುದು ಹಾಗಾದರೆ ಧ್ಯಾನಯೋಗ ಶಬ್ದಕ್ಕೆ ಏನು ಅರ್ಥವು ಎಂದರೆ ಶ್ರೀ ನಿಗಮಾಂತ ದೇಶಿಕರವರು **ಧ್ಯಾನಮೇವಾತ್ರಯೋಗಃ**-ಆತ್ಮಸ್ವರೂಪ ಚಿಂತನವೇ ಒಂದು ಯೋಗವೆಂದಾಗಲಿ ಅಥವಾ **ಧ್ಯಾನೇನವಾಯೋಗಃ** ಆತ್ಮಚಿಂತನದಿಂದ ಯೋಗವೆಂದರೆ ಉಪಾಸನೆ ಎಂದಾಗಲಿ ಅರ್ಥಮಾಡಿ ರುತ್ತಾರೆ. ಆ ಕಾರಣದಿಂದಲೇ **ವೈರಾಗ್ಯಂ ಸಮುಪಾಶ್ರಿತಃ-"ನಿಸ್ಸ್ಪೃಹಸ್ಸರ್ವಕಾಮೇಭ್ಯೋ"** ಎಂದು (ಗೀ. ೬-೧೮) ಹೇಳಿರುವಹಾಗೆ, ಆತ್ಮವ್ಯತಿರಿಕ್ತಗಳಾದ ಸರ್ವ ಲೌಕಿಕ ಪ್ರಸಜ್ಞಗಳಲ್ಲೂ ಆಶೆಯನ್ನು ತೊರೆದಿರೋಣವು ವೈರಾಗ್ಯವು, ಅದನ್ನು ಚೆನ್ನಾಗಿ ಆಶ್ರಯಿಸಿದವನಾಗಿ, **ಅಹಂ ಜ್ಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹವ್** ವಿಮುಚ್ಯ-ಇವುಗಳನ್ನೆಲ್ಲಾ ಪರಿತ್ಯಾಗಮಾಡಿ, **ಅಹಜ್ಕಾರ** ವೆಂದರೆ ಆತ್ಮಾವಲ್ಲದ ದೇಹಾದಿಗಳಲ್ಲಿ ಆತ್ಮವೆಂಬ ಅಭಿಮಾನವು, **ಇಲ್ಲಿ ಬಲ** ವೆಂದರೆ ದೇಹಶಕ್ತಿಯಲ್ಲವು ; ಮೇಲೆ ಹೇಳಿದ ಅಹಂಭಾವವನ್ನು ವೃದ್ಧಿಗೊಳಿಸುವ ಕರ್ಮವಾಸನಾಬಲವು, **ದರ್ಪ** ವೆಂದರೆ ಮೇಲೆ ಹೇಳಿದ ಅಹಂಕಾರ ಬಲಗಳಿಂದುಂಟಾಗುವ, ತಾನೇ ಸರ್ವವನ್ನೂ ನಿರ್ವಹಿಸುವ ಶಕ್ತಿಯುಳ್ಳವನೆಂದೂ, ತಾನು **"ಆಢ್ಯೋಽಭಿಜನವಾನಸ್ಮಿಕೋ ನ್ಯೋಽಸ್ತಿಸದೃಶಂ ಮಯಾ"** ಎಂದು ಗೀ. ೧೬-೧೫ ರಲ್ಲಿ ಹೇಳಿರುವ ಭಾವನೆಯು. **ಕಾಮಂ ಕ್ರೋಧಂ**-ಜ್ಞಾನವಿಜ್ಞಾನ ನಾಶಗಳಾದ ವಿಷಯಾನುರಾಗವು ತತ್ಪ್ರಾಪ್ತಿಯಲ್ಲಿ ಪ್ರತಿಬಂಧಕ ಉಂಟಾದರೆ ಉಂಟಾಗುವ ಕೋಪವೂ (ಗೀ. ೩-೩೭) ರಲ್ಲಿ ಉಪಪಾದಿತಗಳು. **ಪರಿಗ್ರಹ** ವೆಂದರೆ ದೋಷಯುಕ್ತಗಳಾದ ಧನಾದಿ ದಾನಗಳನ್ನು ಪರಿಗ್ರಹಿಸೋಣವು, (ವರುಣ ಮನ್ತ್ರದಲ್ಲಿ ಬಹು ದೋಷಯುಕ್ತವಾಗಿ ಇದು ಹೇಳಲ್ಪಟ್ಟಿರುತ್ತದೆ.) ಇವುಗಳನ್ನೆಲ್ಲಾ ವಿಮುಚ್ಯ ಪರಿತ್ಯಾಗ ಮಾಡಿದವನಾಗಿ, ಹೀಗೆ **ನಿರ್ಮಮಃ** - ಆತ್ಮ ವ್ಯತಿರಿಕ್ತವಾದ ಸಮಸ್ತ ಐಹಿಕಗಳಲ್ಲೂ ಮಮತೆ ಯನ್ನು ತೊರೆದವನಾಗಿ **"ಮಮೇತಿ ದ್ವ್ಯಕ್ಷರೋ ಮೃತ್ಯುಃ ನಮಮೇತಿ ಚ ಶಾಶ್ವತಃ"** ನನ್ನದು ನನ್ನದು ಎಂದು ಮಮ ಎಂಬ ಎರಡಕ್ಷರವು ಬಂಧಕವು, ನಮಮ ನನ್ನದಲ್ಲವು ಎಂಬ ಮೂರಕ್ಷರವು ಶಾಶ್ವತಪದವನ್ನು ಕೊಡುವಂತಾದ್ದು, ಹೀಗೆ ನಿರ್ಮಮಃ - ಮಮತಾರಹಿತನಾಗಿ, **ಶಾನ್ತಃ** - ಆತ್ಮಾನುಭವದಲ್ಲೇ ರತಿಯುಳ್ಳವನಾಗಿರುವವನು, **ಬ್ರಹ್ಮಭೂಯಾಯ ಕಲ್ಪತೇ** - ಪರಿಶುದ್ಧಾತ್ಮ ಸ್ವರೂಪ ದರ್ಶನವನ್ನು ಹೊಂದಲು ಯೋಗ್ಯನಾಗುವನು. ಮುಕ್ತಿಯನ್ನು ಹೊಂದಲು ಯೋಗ್ಯವಾದ ಒಂದು ಮುಖ್ಯವಾದ ಅಜ್ಗವು ಆತ್ಮದರ್ಶನವು ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಹಾಗೆಯೇ ಶ್ರೀ ಯತಿವರ್ಯರು ಶ್ರುತಿಪ್ರಮಾಣಗಳ ಮೂಲಕ ಮೂರನೆಯ ಅಧ್ಯಾಯದ ಅವತಾರಿಕೆಯಲ್ಲಿ ಬಹು ಸ್ಫುಟವಾಗಿ ವ್ಯಕ್ತಪಡಿಸುತ್ತಾರೆ. ಆದುದರಿಂದ ಬ್ರಹ್ಮ ಶಬ್ದಕ್ಕೆ ಈ ಗೀತೆಯಲ್ಲಿ ಅನೇಕ ಕಡೆಗಳಲ್ಲಿ ವಿಶುದ್ಧಾತ್ಮ ಸ್ವರೂಪವೆಂಬುದೇ ಅರ್ಥವು. **"ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿತೇಸ್ಥಿತಾಃ"** (೫-೧೯) **"ಬ್ರಹ್ಮವಿದ್ಬ್ರಹ್ಮಣಿಸ್ಥಿತಃ"** (ಗೀ ೫-೨೦) **"ಸಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ"** (ಗೀ ೫-೨೪). ಈಮೂರು ಶ್ಲೋಕಗಳಲ್ಲಿ ಹೇಳಿರುವದೆಲ್ಲಾ ಹಿಂದೆ ಗೀ. ಐದು ಆರನೆಯ ಅಧ್ಯಾಯಾರ್ಥಗಳ ಅನುಸಂಧಾನವೆಂದು ಭಾವಿಸತಕ್ಕದ್ದು.

**ಭಾಷ್ಯಾರ್ಥವು**—ದಿವ್ಯಾತ್ಮದರ್ಶನ ಪ್ರಾಪ್ತಿಯೇ ಹೇಗೆ ದೊರೆಯುತ್ತದೆಂಬುದನ್ನು ಹಿಂದೆ ಹೇಳಿದುದನ್ನೇ ಪುನಃ ಜ್ಞಾಪಕಕ್ಕೆ ತರುತ್ತಾರೆ. – **ಬುದ್ಧ್ಯಾವಿಶುದ್ಧಯಾ** ಎಂದರೆ **ಯಥಾ ವಸ್ಥಿತ ಆತ್ಮತತ್ವವಿಷಯಯಾ**-ಇತರರು ಅಭಿಪ್ರಾಯ ಪಡುವ ಸಂಶಯ ವಿಪರ್ಯಯಗಳೊಂದೂ ಇಲ್ಲದ ಹಾಗೆ ಯಥಾವಸ್ಥಿತವಾದ ಪರಿಶುದ್ಧವಾದ ಆತ್ಮತತ್ವವನ್ನು ಕುರಿತ ಜ್ಞಾನದಿಂದ,

**ಭಾ.** **ಬುದ್ಧ್ಯಾ ವಿಶುದ್ಧಯಾ - ಯಥಾವಸ್ಥಿತಾತ್ಮತತ್ತ್ವ ವಿಷಯಯಾ, ಯುಕ್ತಃ, ಧೃತ್ಯಾ ಆತ್ಮಾನಂ ನಿಯಮ್ಯ ಚ - ವಿಷಯ ವಿಮುಖೀಕರಣೇನ ಯೋಗ ಯೋಗ್ಯಂ ಮನಃಕೃತ್ವಾ, ಶಬ್ದಾದೀನ್ ವಿಷಯಾಂ ಸ್ತ್ಯಕ್ತ್ವಾ - ಅಸನ್ನಿಹಿತಾನ್ ಕೃತ್ವಾ, ತನ್ನಿಮಿತ್ತೌ ಚ ರಾಗದ್ವೇಷೌ ವ್ಯುದಸ್ಯ, ವಿವಿಕ್ತಸೇವೀ - ಸರ್ವೈರ್ಧ್ಯಾನ ವಿರೋಧಿಭಿರ್ವಿವಿಕ್ತೇ ದೇಶೇ ವರ್ತಮಾನಃ, ಲಘ್ವಾಶೀ - ಅತ್ಯಾಶನಾನಶನರಹಿತಃ, ಯತ ವಾಕ್ಕಾಯ ಮಾನಸಃ - ಧ್ಯಾನಾಭಿಮುಖೀಕೃತ ಕಾಯ ವಾಙ್ಮನೋವೃತ್ತಿಃ, ಧ್ಯಾನ ಯೋಗ ಪರಃ, ನಿತ್ಯಂ - ಏವಂಭೂತಸ್ಸನ್ ಆಪ್ರಯಾಣಾ ದಹರಹರ್ಧ್ಯಾನಯೋಗ**

---

**ಯುಕ್ತಃ** - ಯುಕ್ತನಾಗಿ, ಇದರಿಂದ ಅಣುವಾದ ಆತ್ಮನನ್ನು ವಿಭುವೆಂದು ಗ್ರಹಿಸೋಣವೂ, ಅಸ್ವತಂತ್ರನಾಗಿರುವವನನ್ನು ಸ್ವತಂತ್ರನೆಂದು ಭಾವಿಸೋಣವೂ, ಪರಮಾತ್ಮನಿಗೆ ದಾಸಭೂತನಾಗಿರುವವನನ್ನು ಪರಮಾತ್ಮನೆಂದು ಭಾವಿಸೋಣವೂ, ಇಂತಹ ಯಾವ ಭ್ರಮ ಜ್ಞಾನವೂ ಇಲ್ಲದೆ ಯಥಾವಸ್ಥಿತ ಆತ್ಮ ತತ್ವಜ್ಞಾನವುಳ್ಳವನು ಎಂಬ ಭಾವವು, **ಧೃತ್ಯಾತ್ಮಾನಂ ನಿಯಮ್ಯ ಚ** ಎಂದರೆ **ವಿಷಯ ವಿಮುಖೀಕರಣೇನ ಯೋಗ ಯೋಗ್ಯಂ ಮನಃಕೃತ್ವಾ** - ಶಬ್ದಾದಿ ವಿಷಯಗಳಿಂದ ಹಿಂತೆಗೆಯೋಣದರಿಂದ ಮನಸ್ಸನ್ನು ಉಪಾಸನೆಗೆ ಯೋಗ್ಯವಾದುದನ್ನಾಗಿ ಮಾಡಿ, ಹೀಗೆ ಹೇಳಿದುದರಿಂದ, ಧೃತ್ಯಾ ಎಂದರೆ ಸಾತ್ವಿಕ ಧೃತಿಯಿಂದ ಎಂಬ ಭಾವವು. ಸಾತ್ವಿಕಧೃತಿ ಎಂತಾದ್ದೆಂಬುದು ಹಿಂದೆ ೩೩ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. **ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ** ಎಂದರೆ **ಅಸನ್ನಿಹಿತಾನ್ ಕೃತ್ವಾ** - ಶಬ್ದಾದಿ ವಿಷಯಗಳನ್ನು ತ್ಯಾಗಮಾಡಿ ಎಂದರೆ ಅವುಗಳ ಹತ್ತಿರದಲ್ಲಿ ಇರುವವನ ಹಾಗೆ ಮಾಡಿಕೊಳ್ಳದೆ, ಹತ್ತಿರದಲ್ಲಿದ್ದರೆ ವಿಶ್ವಾಮಿತ್ರ ಋಷ್ಯಶೃಂಗಾದಿಗಳಿಗೆ ಪ್ರಾಪ್ತವಾದ ಹಾಗೆ ಮನಸ್ಸು ಚಾಂಚಲ್ಯವನ್ನು ಹೊಂದಬಹುದು; ಆದುದರಿಂದ ಅವುಗಳ ಹತ್ತಿರ ಸೇರದೆ, **ತನ್ನಿಮಿತ್ತೌ ಚ ರಾಗದ್ವೇಷೌ ವ್ಯುದಸ್ಯ** - ಅವುಗಳ ಮೂಲಕವಾಗಿ ಉಂಟಾಗುವ ಆಶೆಯನ್ನೂ ದ್ವೇಷವನ್ನೂ ನಿಗ್ರಹಿಸಿ, ವಿಷಯದ ಸಂಬಂಧದಿಂದ ಆಶೆಯೂ, ತತ್ಪ್ರಾಪ್ತಿಗೆ ಪ್ರತಿಬಂಧಕ ಮಾಡಿದವರ ವಿಷಯದಲ್ಲಿ ದ್ವೇಷವೂ ಉಂಟಾಗುತ್ತವೆ, ಆದುದರಿಂದ ಇವೆರಡನ್ನೂ ತಿರಸ್ಕರಿಸಿ, **ವಿವಿಕ್ತಸೇವೀ** - ಜನರಾಹಿತ್ಯವಿರುವ ಪ್ರದೇಶವನ್ನು ಅವಲಂಬಿಸುವ ಶೀಲವುಳ್ಳವನಾಗಿ ಎಂದರೆ **ಸರ್ವೈರ್ಧ್ಯಾನವಿರೋಧಿಭಿರ್ವಿವಿಕ್ತೇದೇಶೇ ವರ್ತಮಾನಃ** - ಧ್ಯಾನಕ್ಕೆ ವಿರೋಧಿಗಳಾದ ಸಮಸ್ತವೂ ಇಲ್ಲದಿರುವ ನಿರ್ಜನ ಪ್ರದೇಶದಲ್ಲಿರುವವನಾಗಿ, **ವಿರಕ್ತ** ಶಬ್ದಕ್ಕೆ ರಾಹಿತ್ಯವೆಂಬರ್ಥವು; ಈ ಸಂದರ್ಭದಲ್ಲಿ ಜನರಾಹಿತ್ಯವೆಂಬರ್ಥವು. **ಲಘ್ವಾಶೀ**—ಎಂದರೆ **ಅತ್ಯಶನಾನಶನರಹಿತಃ** - ಹೆಚ್ಚಾಗಿ ಊಟ ಮಾಡದೆಯೂ, ಉಪವಾಸ ಮಾಡದೆಯೂ, ಹಿಂದೆ "**ನಾತ್ಯಶ್ನತಃ**" ಎಂದೂ, "**ಅನಶ್ನತಃ**" (ಗೀ. ೬-೧೬) ಎಂದೂ ಹೇಳಿರುವಹಾಗೆ ಅಲ್ಲದೆ "**ಯುಕ್ತಾಹಾರ ವಿಹಾರಸ್ಯ**" (ಗೀ. ೬-೧೭) ರಲ್ಲಿ ಹೇಳಿರುವ ಹಾಗೆ ಮಿತಾಹಾರವುಳ್ಳವನಾಗಿ ಎಂಬ ಭಾವವು. **ಯತವಾಕ್ಕಾಯ ಮಾನಸಃ** ಎಂದರೆ **ಧ್ಯಾನಾಭಿಮುಖೀಕೃತ ಕಾಯ ವಾಙ್ಮನೋವೃತ್ತಿಃ** - ಧ್ಯಾನಕ್ಕೆ ಸಹಾಯವಾಗಿ ಮಾಡಿಕೊಂಡ ಶರೀರ, ವಾಕ್ಕು ಮನಸ್ಸುಗಳ ಪ್ರವೃತ್ತಿಯುಳ್ಳವನಾಗಿ, ನಿಯಮಿಸಲ್ಪಟ್ಟ ಅಥವಾ ನಿಗ್ರಹಿಸಲ್ಪಟ್ಟ ವಾಕ್ಕಾಯ ಮನಸ್ಸುಗಳನ್ನುಳ್ಳವನೆಂದು ಅರ್ಥಮಾಡಿದರೆ, **ಧೃತ್ಯಾತ್ಮಾನಂ ನಿಯಮ್ಯ** ಎಂಬುದರೊಂದಿಗೆ ಮನಸ್ಸಿನ ವಿಷಯದಲ್ಲಾದರೂ ಪುನರುಕ್ತಿ ಉಂಟಾಗುತ್ತವೆ. ಆದುದರಿಂದ **ಯತ** ಎಂಬುದಕ್ಕೆ **ಧ್ಯಾನಾಭಿಮುಖೀಕೃತ** ಎಂದು ವ್ಯಾಖ್ಯಾನ ಮಾಡಿರುತ್ತಾರೆ. **ವಾಕ್ಕಾಯ ಮನಸ್ಸುಗಳು** ಧ್ಯಾನಕ್ಕೆ ಅಭಿಮುಖವಾಗಿರುವುದು ಹೇಗೆಂದರೆ ? ಸ್ಥಿರವಾದ ಆಸನದಲ್ಲಿ ಕೂತಿರುವದರಿಂದಲೂ, ತುಂಬಾ ಕಾಠಿಣ್ಯವೂ ಮೆತ್ತಗೂ ಇಲ್ಲದ ಆಸನದಲ್ಲಿ ಕೂತಿರುವದರಿಂದಲೂ ಶರೀರವು ಧ್ಯಾನಕ್ಕೆ ಅನುಕೂಲ

ಪರಃ, ವೈರಾಗ್ಯಂ ಸಮುಪಾಶ್ರಿತಃ - ಧ್ಯೇಯತತ್ವ ವ್ಯತಿರಿಕ್ತ ವಿಷಯದೋಷಾವ ಮರ್ಶನೇನ ತತ್ರತತ್ರ ವಿರಾಗತಾಂ ವರ್ಧಯನ್, ಅಹಙ್ಕಾರಂ - ಅನಾತ್ಮನ್ಯಾತ್ಮಾಭಿಮಾನಂ, ಬಲಂ - ತದ್ವೃದ್ಧಿಹೇತುಭೂತ ವಾಸನಾಬಲಂ, ತನ್ನಿಮಿತ್ತಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ ವಿಮುಚ್ಯ, ನಿರ್ಮಮಃ - ಸರ್ವೇಷ್ವನಾತ್ಮೀಯೇಷ್ವಾತ್ಮಬುದ್ಧಿ ರಹಿತಃ, ಶಾನ್ತಃ-ಆತ್ಮಾನುಭವೈಕ ಸುಖಃ, ಏವಂ ಭೂತೋ ಧ್ಯಾನಯೋಗಂ ಕುರ್ವನ್, ಬ್ರಹ್ಮಭೂಯಾಯ ಕಲ್ಪತೇ - ಬ್ರಹ್ಮಭಾವಾಯ ಕಲ್ಪತೇ ; ಸರ್ವಬಂಧ ನಿರ್ಮುಕ್ತೋ ಯಥಾವಸ್ಥಿತ ಮಾತ್ಮಾನ ಮನುಭವತೀತ್ಯರ್ಥಃ ॥ ೫೧, ೫೨, ೫೩ ॥

---

ಸ್ಥಿತಿಯಲ್ಲಿರುತ್ತದೆ. ವಾಕ್ಕು ಪ್ರಣವವನ್ನು ಪ್ಲುತವಾಗಿ ತ್ರಿಮಾತ್ರೆಯುಳ್ಳದ್ದಾಗಿ ಉಚ್ಚರಿಸುವದು ಧ್ಯಾನಕ್ಕೆ ಸಹಾಯವು ; ಮನಸ್ಸಾದರೋ ಶುಭಾಶ್ರಯಾಲಂಬನದಿಂದ ಸಹಾಯವು, ಹೀಗೆ ಅವುಗಳನ್ನು ಧ್ಯಾನಕ್ಕೆ ಅಭಿಮುಖವಾಗಿ ಮಾಡಿಕೊಂಡು ಎಂಬ ತಾತ್ಪರ್ಯವು. ಧ್ಯಾನಯೋಗಪರೋ ನಿತ್ಯಂ ಎಂದರೆ ಏವಂಭೂತಸ್ಸನ್ ಆಪ್ರಯಾಣಾದಹರಹರ್ಧ್ಯಾನಯೋಗಪರಃ - ಹೀಗೆ ಇರುವವನಾಗಿ ದೇಹಾವಸಾನದವರೆಗೂ ಪ್ರತಿದಿನದಲ್ಲೂ ಧ್ಯಾನಯೋಗದಲ್ಲಿ ಆಸಕ್ತಿಯುಳ್ಳವನಾಗಿ, ನಿತ್ಯಂ ಎಂದಿರುವದರಿಂದ ಆಪ್ರಯಾಣಾದಹರಹಃ ಎಂಬ ವ್ಯಾಖ್ಯಾನವು, ವೈರಾಗ್ಯಂ ಸಮುಪಾಶ್ರಿತಃ ಎಂದರೆ ಧ್ಯೇಯತತ್ವವ್ಯತಿರಿಕ್ತ ವಿಷಯದೋಷಾವ ಮರ್ಶನ ತತ್ರ ತತ್ರ ವಿರಾಗತಾಂ ವರ್ಧಯನ್ - ಧ್ಯೇಯತತ್ವಕ್ಕಿಂತ ವ್ಯತಿರಿಕ್ತಗಳಾದ ಐಹಿಕ ವಿಷಯಗಳಲ್ಲಿ ದೋಷವನ್ನು ತಿಳಿದು, ಅಂತಹ ವಿಷಯಗಳಲ್ಲಿ ವೈರಾಗ್ಯವನ್ನು ಅಭಿವೃದ್ಧಿಮಾಡಿ, ಅಹಙ್ಕಾರಂ ಎಂದರೆ ಅನಾತ್ಮನ್ಯಾತ್ಮಾಭಿಮಾನಂ-ಆತ್ಮವಲ್ಲದ ದೇಹದಲ್ಲಿ ಆತ್ಮಾವೆಂಬ ಅಭಿಮಾನವನ್ನೂ ಬಲಂ ಎಂದರೆ ತದ್ವೃದ್ಧಿ ಹೇತುಭೂತವಾಸನಾಬಲಂ-ಆ ಅಭಿಮಾನದ ವೃದ್ಧಿಗೆ ಕಾರಣಭೂತವಾದ ಪೂರ್ವಕರ್ಮ ವಾಸನಾಬಲವನ್ನು, ಬಲವೆಂದರೆ ಸಾಮರ್ಥ್ಯವೆಂದು ಅರ್ಥವನ್ನು ಮಾಡಿದರೆ, ಬಲಂ ವಿಮುಚ್ಯ - ಎಂದರೆ ಅರ್ಥವಾಗುವದಿಲ್ಲವಾದುದರಿಂದ ಹಾಗೆ ವ್ಯಾಖ್ಯಾನವು, ತನ್ನಿಮಿತ್ತಂ ದರ್ಪಂ ಆ ಕಾರಣದಿಂದ ತಾನು ಉಪಾಸಕನು ಎಂಬ ಅಭಿಮಾನದಿಂದುಂಟಾಗುವ ದರ್ಪವನ್ನೂ, ಕಾಮವನ್ನೂ ಕ್ರೋಧವನ್ನೂ, ಪರಿಗ್ರಹಂ-ಅಧರ್ಮವಾದ ಧನವನ್ನು ದಾನವಾಗಿ ಕೊಟ್ಟದುದನ್ನು ಸ್ವೀಕರಿಸೋಣವನ್ನೂ, ವಿಮುಚ್ಯ - ತ್ಯಾಗಮಾಡಿ, ನಿರ್ಮಮಃ - ಎಂದರೆ ಸರ್ವೇಷ್ವನಾತ್ಮೀಯೇಷ್ವಾತ್ಮಬುದ್ಧಿರಹಿತಃ - ತನ್ನ ಆತ್ಮಾವಿಗೆ ಸೇರದೇ ತನ್ನದಲ್ಲದೇ ಇರುವ ಕ್ಷೇತ್ರಗೇಹ ಪತ್ನೀಸುತ ಬಂಧುಗಳು ಮೊದಲಾದವರಲ್ಲಿ ಸ್ವಕೀಯಬುದ್ಧಿ ಇಲ್ಲದವನಾಗಿ ಎಲ್ಲಾ ಐಹಿಕ ವಿಷಯಗಳಲ್ಲೂ ನನ್ನದು ಎಂಬ ಮಮತಾ ರಹಿತನಾಗಿ ಎಂಬ ಭಾವವು. ಇಲ್ಲಿ "ಕಾಮಾತ್ಕ್ರೋಧೋಭಿಜಾಯತೇ" ಎಂದು ಹೇಳಿರುವದನ್ನನುಸರಿಸಿ ಕಾಮವನ್ನು ಹೇಳಿದನಂತರ ಕ್ರೋಧವು ಹೇಳಲ್ಪಟ್ಟಿತು. ವಿಶ್ವಾಮಿತ್ರರಿಗೆ ವಸಿಷ್ಠರ ಕಾಮಧೇನುವಿನಲ್ಲಿ ಕಾಮವು ಉಂಟಾಯಿತು. ಪ್ರಾರ್ಥಿಸಿದರೂ ವಸಿಷ್ಠರು ಕೊಡದೇ ಹೋದುದರಿಂದ ವಿಶ್ವಾಮಿತ್ರರಿಗೆ ವಿಶೇಷ ಕ್ರೋಧವು ಪ್ರಾಪ್ತವಾಗಿ ಕಲಹಕ್ಕೆ ಕಾರಣವಾಯಿತು. ಹೀಗೆ ಕಾಮಕ್ರೋಧಗಳು ಒಟ್ಟಿಗೇ ಇರುವುವು ಎಂದು " ಕಾಮ ಏಷಃ ಕ್ರೋಧಏಷಃ " ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಶಾನ್ತಃ- ಎಂದರೆ ಆತ್ಮಾನುಭವೈಕ ಸುಖಃ - ತನ್ನ ಪರಿಶುದ್ಧಾತ್ಮಸ್ವರೂಪ ಚಿನ್ತನವೇ ಮುಖ್ಯಾನುಭವವಾಗಿರುವವನಾಗಿ, ಏವಂ ಭೂತಃ - ಹೀಗೆ ಮೇಲೆ ಹೇಳಿದ ಪ್ರವೃತ್ತಿವುಳ್ಳವನಾಗಿ ಕರ್ಮಯೋಗವನ್ನನುಷ್ಠಿಸುವವನು, ಧ್ಯಾನಯೋಗಂ ಕುರ್ವನ್ - ಆತ್ಮಯಥಾತ್ಮ್ಯಸ್ವರೂಪವನ್ನು ಚಿಂತಿಸುವವನು, ಬ್ರಹ್ಮಭೂಯಾಯ ಕಲ್ಪತೇ ಎಂದರೆ ಬ್ರಹ್ಮಭಾವಾಯ ಕಲ್ಪತೇ - ಆತ್ಮಾವಲೋಕನಕ್ಕೆ ಯೋಗ್ಯನಾಗುವನು; ಇದರ ತಾತ್ಪರ್ಯವನ್ನು ಮುಂದಿನ ವಾಕ್ಯದಿಂದ ತಿಳಿಸು

ತ್ತಾರೆ - **ಸರ್ವಬಂಧ ನಿರ್ಮುಕ್ತಃ ಯಥಾವಸ್ಥಿತ ಮಾತ್ಮಾನ ಮನುಭವತೀತ್ಯರ್ಥಃ** - ಸಮಸ್ತ ಬಂಧಗಳಿಂದಲೂ ಬಿಡಲ್ಪಟ್ಟವನಾಗಿ, ಆತ್ಮನ ನೈಜಸ್ವರೂಪವನ್ನು ಅನುಭವಿಸುವನು ಎಂಬ ತಾತ್ಪರ್ಯವು. ಕರ್ಮಯೋಗಿಗೆ ಆತ್ಮಾನುಭವ ಪ್ರಾಪ್ತಿರೂಪ ಸಿದ್ಧಿಯು ಉಂಟಾಗುವ ಪ್ರಕಾರವನ್ನು ಹೀಗೆ ಈ ಮೂರು ಶ್ಲೋಕಗಳ ಮೂಲಕ ತಿಳಿಸಿದರು. ಇಲ್ಲಿ **ಬ್ರಹ್ಮಭೂಯಾಯ** ಎಂಬುದಕ್ಕೆ ಬ್ರಹ್ಮಭವನಾಯ ಎಂದರೆ ಅವಿದ್ಯಾ ನಿವೃತ್ತಿಯಿಂದ ತಾನೇ ಪರಬ್ರಹ್ಮನಾಗಲು ಅರ್ಹನಾಗುವ ನೆಂದು ಇತರರು ಮಾಡಿರುವ ಅರ್ಥವಲ್ಲಿ ಮನಸ್ಸು ಒಪ್ಪದೆ, ಪರಬ್ರಹ್ಮನಿಗೆ ನಾವೆಲ್ಲರೂ ದಾಸ ಭೂತರೆಂದು ಹೇಳುವ ಶಾಸ್ತ್ರಜ್ಞಾನದಿಂದ ಪ್ರೇರಿತರಾಗಿ ಶ್ರೀ ಯತಿವರ್ಯರು **ಬ್ರಹ್ಮಭೂಯಾಯ** ಎಂಬುವದಕ್ಕೆ **ಬ್ರಹ್ಮಭಾವಾಯ** - ತನ್ನ ನೈಜರೂಪವಾದ, ಪ್ರಕೃತಿವಿಯುಕ್ತ ದಿವ್ಯಾತ್ಮಸ್ವರೂಪ ವನ್ನು ಹೊಂದಲು ಅರ್ಹನಾಗುವನೆಂದು ಭಾಷ್ಯವನ್ನು ಬರೆದಿರುತ್ತಾರೆ. ಇಲ್ಲಿ ಬ್ರಹ್ಮಶಬ್ದವು ಪ್ರಕೃತಿವಿಯುಕ್ತ ಜ್ಞಾನೈಕಾಕಾರತೆಯಿಂದ ಶೋಭಿಸುವ ಜೀವಾತ್ಮಸ್ವರೂಪವನ್ನು ಬೋಧಿಸು ತ್ತದೆ. ಜೀವಾತ್ಮರೆಲ್ಲಾ ಪರಮಾತ್ಮನಿಗೆ ಶೇಷಭೂತರೆಂಬುದು ಓಂ ಎಂಬ ಪ್ರಣವದಲ್ಲೂ "**ಪತಿಂ ವಿಶ್ವಸ್ಯ**" ಎಂಬಲ್ಲೂ, "**ದಾಸಭೂತಾಸ್ಸ್ವತಸ್ಸರ್ವೇಹ್ಯಾತ್ಮಾನಃ ಪರಮಾತ್ಮನಃ**" ಎಂಬ ರುದ್ರವಾಕ್ಯದಲ್ಲೂ, "**ಮಮೈವಾಂಶೋಜೀವಲೋಕೇ ಜೀವಭೂತಸ್ಸನಾತನಃ**" ಎಂಬಲ್ಲೂ, "**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇಪರಾಮ್ | ಜೀವಭೂತಾಂ**" ಎಂಬಲ್ಲೂ ಸಹ ವ್ಯಕ್ತವು. **ಬ್ರಹ್ಮಭೂಯಾಯ** ಎಂದರೆ ಪರಬ್ರಹ್ಮನಾಗುವನೆಂದು ಅರ್ಥ ಮಾಡಲು ಸಾಧ್ಯವೇ ಇಲ್ಲವು. ಏಕೆಂದರೆ ಮುಂದಿನ ಶ್ಲೋಕದಲ್ಲಿ ಹೀಗೆ ಬ್ರಹ್ಮಭೂತನಾದವನು ಮುಂದಕ್ಕೆ ಪರಭಕ್ತಿಯುತನಾಗುವನೆಂದು ಹೇಳಿರುವದರಿಂದ ಪರಬ್ರಹ್ಮನಾದವನಿಗೆ ಪರಭಕ್ತಿ ಎಂದರೇನು ? ಪರಬ್ರಹ್ಮನೇ ಯಾರಲ್ಲಿ ಭಕ್ತಿಮಾಡಬೇಕು ? ಇತ್ಯಾದಿ ಹಾಸ್ಯಾಸ್ಪದ ಆಕ್ಷೇಪಣೆ ಗಳಿಗೆ ಕಾರಣವಾಗುತ್ತವೆ. ಇನ್ನು ಕೆಲವರು **ಬ್ರಹ್ಮಣಿ ಭಾವೋಬ್ರಹ್ಮಭೂಯಮ್** ಎಂದರ್ಥ ಮಾಡಿರುತ್ತಾರೆ- ಈ ಅರ್ಥವೂ ಅನುಕೂಲಿಸುವದಿಲ್ಲವು; ಏಕೆಂದರೆ ಇಂತವನಿಗೆ ಮುಂದೆ ಉಪಾಸನವು ಸಿದ್ಧಿಸುತ್ತದೆ ಎಂದು ಹೇಳುವದರಿಂದ. ಬ್ರಹ್ಮಭೂತನು ಮುಂದೆ **ಪ್ರಸನ್ನಾತ್ಮಾ** ಆಗುವನೆಂದು ಹೇಳಿರುವದರಿಂದ ಬ್ರಹ್ಮಭೂತನಿಗೆ ಜೀವಾತ್ಮನ ದಿವ್ಯಸ್ವರೂಪವು ಪ್ರಸನ್ನವಾದು ದಾಗುತ್ತದೆ ಎಂಬರ್ಥ ಉಂಟಾಗುವದರಿಂದ, ಅಲ್ಲಿ **ಕ್ಲೇಶಕರ್ಮಾದಿಭಿ ರಕಲುಷಸ್ವರೂಪಃ** ಎಂದು ಸಮಂಜಸವಾದ ಭಾಷ್ಯವನ್ನು ಬರೆದಿರುತ್ತಾರೆ. ಇದರಿಂದ ಯಥಾವಸ್ಥಿತವಾದ ಆತ್ಮ ಸ್ವರೂಪಜ್ಞಾನವುಳ್ಳವನೆಂಬ ಅರ್ಥವು ತೋರಿ ಬರುತ್ತದೆ. ಅಥವಾ ಆತ್ಮಪ್ರಸನ್ನತೆಯು ಯಾವನಿಗೋ ಆತನು ಪ್ರಸನ್ನಾತ್ಮನೆಂದು ಹೇಳಬಹುದು. || ೫೧, ೫೨, ೫೩ ||

ಪ್ರಥಮತಃ ಬ್ರಹ್ಮಭೂತಾವಸ್ಥೆಯು ಎಂತಾದ್ದೆಂಬುದನ್ನು ಪೂರ್ವಾರ್ಧದಿಂದ ಹೇಳಿ ಉತ್ತರಾರ್ಧದಿಂದ ಅಂತವನಿಗೆ ಪರಭಕ್ತಿಯು ಲಭಿಸುತ್ತದೆಂದು ಹೇಳುತ್ತಾರೆ. ಹಿಂದೆ ಹೇಳಿದ ಆತ್ಮಾನುಭವ ಉಂಟಾಗುವದರ ಪ್ರಯೋಜನವೇನು ? ಎಂದರೆ ಅಂತವನಿಗೆ ಭಕ್ತಿಯೋಗವು ಕೈ ಗೂಡುತ್ತದೆಂದು ಈ ಶ್ಲೋಕದಲ್ಲಿ ಉಪದೇಶಿಸುತ್ತಾರೆ.

**ಮೂಲಕ್ಕೆ ಅರ್ಥವು—**ಬ್ರಹ್ಮಭೂತಃ - ಮೇಲೆ ಹೇಳಿದ ಹಾಗೆ ಆತ್ಮಾವಲೋಕನ ವನ್ನು ಹೊಂದಿದವನು, ಹೀಗೆ ಜೀವಾತ್ಮಸ್ವರೂಪವು ಪರಿಶುದ್ಧವಾದುದರಿಂದ, ಶ್ರೀ ಪರಾಶರರು "**ಪುಮಾನ್ ನದೇವೋ ನ ನರೋ ನ ತಿರ್ಯಙ್ನ ಚಪಾದಪಃ**" ಎಂಬಲ್ಲಿ **ಪುಮಾನ್** ಮಹಾ ಪರಿ ಶುದ್ಧನೆಂದು ಹೇಳಿರುತ್ತಾರೆ. ಆ ಕಾರಣದಿಂದ **ಪ್ರಸನ್ನಾತ್ಮಾ** - ಜ್ಞಾನೈಕಾಕಾರತೆಯಿಂದ ಪ್ರಸ ನ್ನತೆಯನ್ನು ಹೊಂದಿದ ಸ್ವಸ್ವರೂಪಜ್ಞಾನವುಳ್ಳವನು; **ನಶೋಚತಿ** - ಐಹಿಕಸಮಸ್ತ ವಸ್ತು

ಮೂ. **ಬ್ರಹ್ಮಭೂತಃ ಪ್ರಸನ್ನಾತ್ಮಾ ನಶೋಚತಿ ನಕಾಂಕ್ಷತಿ ।**
**ಸಮಸ್ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥ ೫೪ ॥**

---

ಗಳಲ್ಲೂ ಆಶೆಯನ್ನು ತೊರದವನಾದ ಪ್ರಯುಕ್ತ, ಅವು ಇಲ್ಲವು ಇವು ಇಲ್ಲವು ಎಂದು ದುಃಖಿಸುವದಿಲ್ಲವು; **ನಕಾಂಕ್ಷತಿ** - ಅವು ಬೇಕು ಇವು ಬೇಕು ಎಂದು ಅಪೇಕ್ಷಿಸುವದಿಲ್ಲವು; **ಸಮಸ್ಸರ್ವೇಷು ಭೂತೇಷು** - ಪರಮಾತ್ಮವ್ಯತಿರಿಕ್ತವಾದ ಎಲ್ಲಾ ವಸ್ತುಗಳಲ್ಲೂ ಆಶೆಯನ್ನು ಬಿಟ್ಟವನಾದ ಪ್ರಯುಕ್ತ, **ಸಮಲೋಷ್ಟಾಶ್ಮಕಾಂಚನಃ** - ಮಣ್ಣಿನಹೆಂಟೆ, ಕಲ್ಲು ಚಿನ್ನ ಇವೆಲ್ಲವನ್ನೂ ಸಮವಾಗಿ, ಭಾವಿಸುವನೆಂದು ಹಿಂದೆ ಹೇಳಿದ ಹಾಗೆ ಎಲ್ಲಾ ವಸ್ತುಗಳಲ್ಲೂ ಆದರವಿಲ್ಲದವನು; ಅಥವಾ **ಸಮಸ್ಸರ್ವೇಷುಭೂತೇಷ** - ಎಲ್ಲಾಪ್ರಾಣಿಗಳಲ್ಲೂ ಸಮವಾಗಿ ಭಾವಿಸುವವನಾಗಿ. ಎಂದರೆ ಅವುಗಳನ್ನು ದ್ವೇಷಿಸದೆ, ಅಥವಾ ಎಲ್ಲಾ ಭೂತಗಳಲ್ಲಿರುವ ಆತ್ಮರನ್ನು ೬ನೇ ಅಧ್ಯಾಯದ ೨೯ರಿಂದ ೩೨ನೆಯ ನಾಲ್ಕು ಶ್ಲೋಕಗಳಲ್ಲಿ ಉಪಪಾದಿಸಿದ ನಾಲ್ಕುವಿಧವಾಗಿ ಸಮವೆಂದು ಭಾವಿಸುವವನಾಗಿ **ಪರಾಂ ಮದ್ಭಕ್ತಿಂ ಲಭತೇ** - ನನ್ನಲ್ಲಿ ಶ್ರೇಷ್ಠವಾದ ಭಕ್ತಿಯನ್ನು, ಏಕಾನ್ತಿಕಾತ್ಯನ್ತಿಕ ಭಕ್ತಿಯನ್ನು ಹೊಂದುವನು ಎಂದರೆ ಉಪಾಸನಕ್ಕೆ ಅರ್ಹವಾದ ಭಕ್ತಿಯನ್ನು ಹೊಂದುವನು. ಅಂತವನಿಗೆ ಭಕ್ತಿಯೋಗದಲ್ಲಿ ಅರ್ಹತೆಯುಂಟಾಗುತ್ತದೆಂಬ ಭಾವವು. ಇಲ್ಲಿ ಕೆಲವರು **ಸಮಸ್ಸರ್ವೇಷು ಭೂತೇಷು** ಎಂದರೆ ರಾಗದ್ವೇಷವಿಲ್ಲದೆ ಎಲ್ಲರನ್ನು ಸಮವಾಗಿ ಕಾಣುವನಾಗಿ ಎಂದು ಅರ್ಥಮಾಡಿರುತ್ತಾರೆ. ಈಗ ಪ್ರಕರಣವೇನೆಂದರೆ ? ಆತ್ಮಾವಲೋಕನ ಉಂಟಾಗಿರುವದರಿಂದ ಆತ್ಮವ್ಯತಿರಿಕ್ತಗಳಾದ ಸರ್ವಭೂತಗಳಲ್ಲೂ ಈತನಿಗೆ ಜಿಹಾಸೆಯು ಉಂಟಾಗಿ ವೈರಾಗ್ಯಪ್ರಾಪ್ತಿಯನ್ನು ಹೇಳುವ ಪ್ರಕರಣದಲ್ಲಿ ಸರ್ವವಸ್ತುವಿನಲ್ಲೂ ಔದಾಸೀನ್ಯವನ್ನು ಹೇಳುವದೇ ಯುಕ್ತವಾದುದರಿಂದ, ಎಲ್ಲಾದರಲ್ಲೂ ಉದಾಸೀನನಾಗಿ ಸಮಸ್ತವನ್ನೂ ತೃಣವಾಗಿ ಕಾಣುವದರಲ್ಲಿ ಸಮತ್ವವನ್ನು ಹೇಳುವದೇ ಯುಕ್ತವಾಗಿ ತೋರುತ್ತದೆ. ಗೀತಾರ್ಥ ಸಙ್ಗ್ರಹದಲ್ಲಿ ಹೇಳಿರುವದು, **ಸ್ವಧರ್ಮಜ್ಞಾನ ವೈರಾಗ್ಯ ಸಾಧ್ಯಭಕ್ತ್ಯೇಕ ಗೋಚರಃ** ಎಂಬಲ್ಲಿ ಕರ್ಮಯೋಗದಿಂದಾಗಲಿ, ಜ್ಞಾನಯೋಗದಿಂದಲಾಗಲಿ ಉಂಟಾಗುವದು ವೈರಾಗ್ಯವು; ಆತ್ಮಾವಲೋಕನವು ಸಿದ್ಧಿಸುವದರಿಂದ ಆತ್ಮವ್ಯತಿರಿಕ್ತವಾದವುಗಳಲ್ಲಿ ವೈರಾಗ್ಯವುಂಟಾಗುತ್ತದೆ. ಹೀಗೆ ಕರ್ಮಯೋಗ, ಜ್ಞಾನಯೋಗ ಆತ್ಮಾವಲೋಕನಗಳಿಂದ ಸಿದ್ಧಿಸುವದು ಭಕ್ತಿಯೋಗವು ಎಂಬ ಅಭಿಪ್ರಾಯವು. ಈ ಭಕ್ತಿಯೋಗವೆಂದೂ ಭಗವದುಪಾಸನವೆಂದೂ ಹೇಳಲ್ಪಟ್ಟಿರುವ ನಿಷ್ಠೆಗೆ ಪರಾಭಕ್ತಿಃ ಅಥವಾ ಪರಭಕ್ತಿಃ ಎಂದೂ ಅಥವಾ ಸುಮ್ಮನೆ ಭಕ್ತಿ ಎಂದೂ ಹೆಸರುಂಟು. ಏತಕ್ಕೆಂದರೆ ಇದು ಐಕಾನ್ತಿಕಾತ್ಯನ್ತಿಕ ನಿರತಿಶಯ ಭಕ್ತಿಯಾಗಿ ತೈಲಾಧಾರೆಯ ಹಾಗೆ ಅವಿಚ್ಛಿನ್ನವಾದ ಸ್ಮೃತಿ ಸಂತತಿರೂಪವಾದುದರಿಂದ ಸಾಮಾನ್ಯಭಕ್ತಿಗಿಂತ ವೈಲಕ್ಷಣ್ಯವನ್ನು ಹೇಳುವದಕ್ಕಾಗಿ ಪರಭಕ್ತಿ ಎಂಬ ವ್ಯವಹಾರವು ಪರಭಕ್ತಿ, ಭಕ್ತಿಯೋಗ, ಪರಮಾತ್ಮಧ್ಯಾನ, ಉಪಾಸನಾ, ವೇದನ, ಧ್ರುವಾಸ್ಮೃತಿ, ಜ್ಞಾನ ಇವೆಲ್ಲಾ ಪರ್ಯಾಯ ಪದಗಳು. ಸಾಮಾನ್ಯ ಭಕ್ತಿಯೇ ವೃದ್ಧಿ ಹೊಂದಿ ಐಕಾನ್ತಿಕವಾದರೆ ಪರಭಕ್ತಿ ಎನಿಸುತ್ತದೆ. ಆ ಪರಭಕ್ತಿಯೇ ಪರಮಾತ್ಮನನ್ನು ಧ್ಯಾನಿಸುತ್ತಾ ಬಂದರೆ ಪರಮಾತ್ಮ ಸಾಕ್ಷಾತ್ಕಾರ ದೊರೆತು ಪರಜ್ಞಾನವೆನಿಸುತ್ತದೆ. ಇನ್ನು ಮುಂದೆ ಪರವಾಸುದೇವನನ್ನಗಲಿ ಒಂದು ನಿಮಿಷಕೂಡ ಇರಲಾರೆನು, ಆತನನ್ನು ಸೇರಿಯೇ ಇರಬೇಕೆಂಬ ಉತ್ಕಟೇಚ್ಛೆಯುಂಟಾದ ದೆಶೆಯು ಪರಮಾಭಕ್ತಿ ಎನಿಸುತ್ತದೆ. ಹೀಗೆ ಭಕ್ತಿಯು ನಾಲ್ಕು ವಿಧವು:- ಸಾಮಾನ್ಯ ಭಕ್ತಿ, ಪರಭಕ್ತಿ, ಪರಜ್ಞಾನ, ಪರಮಾಭಕ್ತಿ ಎಂಬದಾಗಿ, ಇವುಗಳನ್ನು ಬೋಧಿಸುವ ಪ್ರಮಾಣವು ಯಾವುದೆಂದರೆ ?--

**ಭಾ.** **ಬ್ರಹ್ಮಭೂತಃ - ಆವಿರ್ಭೂತಾ ಪರಿಚ್ಛಿನ್ನಜ್ಞಾನೈಕಾಕಾರಮಚ್ಛೇಷತ್ವೈಕ ಸ್ವಭಾವಾತ್ಮಸ್ವರೂಪಃ (೧) "ಇತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇ ಪರಾಮ್" ಇತಿಹಿ**

---

**" ಪರಭಕ್ತಿ ರದೃಷ್ಟಾರ್ಥ ಪ್ರತ್ಯಕ್ಷಾಭಿ ನಿವೇಶನಮ್ । ಪರಜ್ಞಾನಂತು ತಸ್ಯೈವ ಸಾಕ್ಷಾತ್ಕಾರಃ ಪರಿಸ್ಫುಟಃ । ಪುನರ್ವಿಶ್ಲೇಷ ಭೀರುತ್ವಂ ಪರಮಾಭಕ್ತಿರುಚ್ಯತೇ ॥ "**

**ಜ್ಞಾನಯೋಗದ** ಅಪೇಕ್ಷೆಯಿಲ್ಲದೆ ಬರೀ ಕರ್ಮಯೋಗ ಮಾತ್ರದಿಂದಲೇ ಮೇಲೆ ಹೇಳಿದ ರೀತಿಯಲ್ಲಿ ಆತ್ಮಾವಲೋಕನವು ಸಿದ್ಧಿಸುವದರಿಂದ ಪರಭಕ್ತಿಯು ಸಿದ್ಧಿಸುವದು ಎಂಬುದು ಶ್ಲೋಕಾರ್ಥವು.

**ಭಾಷ್ಯಾರ್ಥವು**—ಹೀಗೆ ಕರ್ಮಯೋಗಾದಿಗಳಿಂದ ಸಾಧ್ಯವಾದ ಜೀವಾತ್ಮನ ಯಥಾರ್ಥ ದರ್ಶನದಿಂದ ಪರಭಕ್ತಿಶಬ್ದದಿಂದ ಹೇಳಲ್ಪಡುವ ನಿರತಿಶಯ ಪ್ರೀತಿಯಿಂದ ಪರಮಾತ್ಮನನ್ನು ಉಪಾಸಿಸುವ ಅಧಿಕಾರ ಪ್ರಾಪ್ತಿಯುಂಟಾಗಿ ಪರಮಪುರುಷ ಸಾಕ್ಷಾತ್ಕಾರಕ್ಕೆ ಹೇತುವಾದ ಪರಾಭಕ್ತಿಯು ಲಭಿಸುತ್ತದೆಂದೂ, ಆಕಾರಣದಿಂದ ಪರಮಪುರುಷನ ದಿವ್ಯಮಂಗಳ ವಿಗ್ರಹವನ್ನು ಉಪಾಸಿಸಬೇಕೆಂಬ ಉತ್ಕಟೇಚ್ಛೆಯು ಲಭಿಸುತ್ತದೆಂದೂ ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ. - **ಬ್ರಹ್ಮಭೂತಃ** ಎಂದರೆ **ಆವಿರ್ಭೂತಾ ಪರಿಚ್ಛಿನ್ನಜ್ಞಾನೈಕಾಕಾರ ಮಚ್ಛೇಷತ್ವೈಕ ಸ್ವಭಾವಾತ್ಮಸ್ವರೂಪಃ** - ಆವಿರ್ಭವಿಸಿದ ಅವಧಿಯಿಲ್ಲದ ಜ್ಞಾನವೇ ಮುಖ್ಯಸ್ವರೂಪ ಸ್ವಭಾವಗಳಾಗಿಯೂ, ಮತ್ತು ನನಗೆ ಸದಾ ಶೇಷಭೂತನೆಂಬಿರುವದೇ ಸ್ವಭಾವವಾಗಿವುಳ್ಳ ಆತ್ಮಸ್ವರೂಪವೆಂದು ತಿಳಿದವನು; ಹೀಗೆ ಜೀವಾತ್ಮನು ಪರಮಾತ್ಮನಿಗೆ ಶೇಷಭೂತನೆಂಬ ಉಪದೇಶವು ಈ ಗೀತೆಯಲ್ಲಿ ಇದೆಯೋ ಎಂದರೆ ಪ್ರಮಾಣವಿದೆ ಎಂದು ಉದಾಹರಿಸುತ್ತಾರೆ. - **"ಇತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇ ಪರಾಂ"** ಮುಂದೆ **ಜೀವಭೂತಾಂ** ಎಂದಿರುತ್ತದೆ. ನನಗೆ ಶೇಷಭೂತವಾಗಿ ಶರೀರವಾಗಿರುವ ಈ ಜಡಪ್ರಕೃತಿಗಿಂತ ಇನ್ನೊಂದಾದ ಶ್ರೇಷ್ಠವಾದುದು ಚಿತ್ಪ್ರಕೃತಿಯನ್ನು ಎಂದರೆ ಜೀವತತ್ವವನ್ನು ತಿಳಿ, **ಇತಿಹಿ** ನಿಶೇಷತಶ್ಚೋಕ್ತಾ - ಎಂದನ್ನವೇ ವಿಶೇಷಿಸಿ ಹೇಳಿರುವದು; ಶ್ರೀಯತಿವರ್ಯರು ಒಂದು ಪ್ರಮಾಣವೇ ಸಾಕು ಎಂದು ಉದಹರಿಸಿದರು; ಶೇಷಭೂತವೆಂಬುದಕ್ಕೆ ಇನ್ನೂ ಪ್ರಮಾಣಗಳು ಉಂಟು **ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ"** ಎಂಬ ಮತ್ತು **"ಮಯಿಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ"**ಎಂಬೀ ಪ್ರಮಾಣಗಳಿಗೆಲ್ಲಾ ಉಪಲಕ್ಷಣವಾಗಿ ಇದು ಎಂದುಭಾವಿಸತಕ್ಕದ್ದು. ಹೀಗೆ ಕರ್ಮಯೋಗಫಲವಾಗಿ, ತಾನು ಪರಮಾತ್ಮನಿಗೇನೆ ಶೇಷಭೂತನೆಂಬ ಜ್ಞಾನವು ಉಂಟಾಗುತ್ತದೆ ಎಂಬಭಿಪ್ರಾಯವೂ **ಬ್ರಹ್ಮಭೂತಃ** ಎಂಬುದರಿಂದ ಸೂಚಿಸಲ್ಪಟ್ಟಿತು. ಹೀಗೆ ಬ್ರಹ್ಮಭೂತನಾದುದರಿಂದಲೇ ಕರ್ಮಯೋಗಿಯು, **ಪ್ರಸನ್ನಾತ್ಮಾ** ಆಗುವನು ಎಂದರೆ **ಕ್ಲೇಶಕರ್ಮಾದಿಭಿರಕಲುಷ ಸ್ವರೂಪಃ** - ಕ್ಲೇಶಗಳೇನು, ಪ್ರವೃತ್ತಿಗಳೇನು, ಆದಿಪದದಿಂದ ವಿಪಾಕ ಆಶಯಗಳೇನು. ಇವು ಯಾವುಗಳಿಂದಲೂ ಕಲುಷಿತವಾಗದ ಸ್ವರೂಪವುಳ್ಳವನು, ಹೀಗೆಂದು ಆತ್ಮಸ್ವರೂಪವನ್ನು ಚನ್ನಾಗಿ ತಿಳಿದಿರುವವನು, ಇಂತವುಗಳಿಂದ ತನ್ನ ಸ್ವರೂಪಕ್ಕೆ ಹಾನಿಮಾಡಿಕೊಳ್ಳುವದಿಲ್ಲವೆಂಬ ಭಾವವು; ಕ್ಲೇಶ, ಕರ್ಮ, ವಿಪಾಕ, ಆಶಯ, ಅವಿದ್ಯೆ, ಹೀಗೆ ಸನ್ನಿಯೋಗಶಿಷ್ಟನ್ಯಾಯದ ಪ್ರಕಾರ ಒಟ್ಟಿಗೆ ಇರುವುವುಗಳಾಗಿ ಕ್ಲೇಶ ಶಬ್ದದಿಂದ ಇವು ಐದು ಹೇಳಲ್ಪಡುವುವು. ಕರ್ಮಗಳು ಪುಣ್ಯಪಾಪ ರೂಪದಲ್ಲಿ ಎರಡು ವಿಧಗಳು. ಜಾತಿ ಆಯುಸ್ಸು ಭೋಗಗಳು ವಿಪಾಕಗಳು, ಆಶಯವು ಸಂಸ್ಕಾರವು; ಹೀಗೆ **ಪ್ರಸನ್ನಾತ್ಮಾ** ಎಂದು ಹೇಳಿದುದರಿಂದ, ಭಕ್ತಿಯೋಗವಾದ ಪರಮಾತ್ಮೋಪಾಸನಕ್ಕೆ ಅಧಿಕಾರಿ ಎನಿಸುವನೆಂಬ ಭಾವವು ಹೇಳಲ್ಪಟ್ಟಿತು; **ಪ್ರಸನ್ನಾತ್ಮಾ** ಎಂಬುದರಿಂದ ವಿಷ್ಣುಧರ್ಮವಾಕ್ಯಗಳು ಸ್ಮಾರಿತವು:—**"ಹಿಂಸಾದಿರಹಿತಃ ಕಾಯಃ ಕೇಶವಾರಾಧನೇಕ್ಷಯಮ್ । ರಾಗಾದಿದೂಷಿತೇ ಚಿತ್ತೇ**

**ವಿಶೇಷತೋಕ್ತಾ, ಪ್ರಸನ್ನಾತ್ಮಾ-ಕ್ಲೇಶಕರ್ಮಾದಿಭಿರಕಲುಷಸ್ವರೂಪೋ, ಮದ್ವ್ಯತಿರಿಕ್ತಂ ನ ಕಂಚನ ಭೂತವಿಶೇಷಂ ಪ್ರತಿಶೋಚತಿ, ನ ಕಿಂಚನಕಾಂಕ್ಷತಿ ; ಅಪಿತು**

---

ನಾಸ್ಪದೀ ಮಧುಸೂದನಃ। ನಬಧ್ನಾತಿ ಪದಂ **ಹಂಸಃ ಕದಾಚಿತ್ಕರ್ದಮಾಂಭಸಿ**। ನಯೋಗ್ಯಾ **ಕೇಶವಸ್ತುತ್ಯೈ** ವಾಗ್ದುಷ್ಟಾ **ಚಾನೃತಾದಿನಾ । ತಮಿಸ್ರನಾಶನಾಯಾಲನ್ನೇಂದೋರ್ಲೇಖಾ ಘನ ವೃತಾ** । ಹಿಂಸಾದಿ **ದೂಷಿತಃಕಾಯಃ ಕೇಶವಾರಾಧನೇ** ಕುತಃ । **ಜನಚಿತ್ತ ಪ್ರಸಾದಾಯ ನ ನಭ ಸ್ತಿಮಿರಾವೃತಮ್ । ತಸ್ಮಾಚ್ಛುದ್ಧಸ್ವಭಾವೇನ** ಸತ್ಯ**ವಾಕ್ಯೇನ ಚ ದ್ವಿಜ** ॥ **ಇತ್ಯಾದಿ.** ಆದುದರಿಂದ ಮನಸ್ಸು ರಾಗಾದಿಗಳಿಂದಲೂ, ವಾಕ್ಕು ಅನೃತಾದಿಗಳಿಂದಲೂ, ಕಾಯವು ಹಿಂಸಾದಿಗಳಿಂದಲೂ ಕಲುಷಿತವಾಗದೇ ಇದ್ದರೆ ಆಗೀಗ ಅಧಿಕಾರಿಯು ಪ್ರಸನ್ನಾತ್ಮಾ ಎಂದು ಹೇಳಲ್ಪಡುವನೆಂಬ ಭಾವವು. **ಇಂತಹ** ಪರಮಭಾಗವತನ ಪ್ರಸನ್ನತೆಯನ್ನು ಹೊಂದಿದ ಮನಸ್ಸನ್ನು ದೃಷ್ಟಾಂತವಾಗಿ ವಾಲ್ಮೀಕಿ ಮಹರ್ಷಿಯು **"ಭರದ್ವಾಜನಿಶಾಮಯ । ರಮಣೀಯ ಪ್ರಸನ್ನಾಂಬು ಸನ್ಮನುಷ್ಯ ಮನೋಯಥಾ"** (ರಾ. ಬಾ. ೨. ೫.) ಎಂಬಲ್ಲಿ ಹೇಳಿರುತ್ತಾರೆ. ಓ ಶಿಷ್ಯನಾದ ಭರದ್ವಾಜನೇ ಈ ನದಿಯ ನೀರು ಸನ್ಮನುಷ್ಯನ ಮನಸ್ಸು ಹೇಗೆ ಶಾಂತವಾಗಿ ನಿರ್ಮಲವಾಗಿದೆಯೋ, ಹಾಗೆ ರಮಣೀಯವಾಗಿದೆ. ಹೀಗೆ **ಪ್ರಸನ್ನಾತ್ಮಾ**ವಾದುದರಿಂದಲೇ **ಮದ್ವ್ಯತಿರಿಕ್ತಂ** - ನಾನಲ್ಲದೆ ಬೇರೆಯಾದ, **ನಕಂಚನ ಭೂತವಿಶೇಷಂಪ್ರತಿ** - ಯಾವ ವಸ್ತು ವಿಶೇಷವನ್ನು ಕುರಿತು ಶೋಕಿಸುವದಿಲ್ಲವು. ಹಾಗೆಯೇ ಅವು ಯಾವುವನ್ನೂ, **ನಕಾಂಕ್ಷತಿ** - ಅಪೇಕ್ಷಿಸುವದಿಲ್ಲವು. ಅವುಗಳು ಇಲ್ಲವೆಂದು ಶೋಕಿಸುವದಿಲ್ಲವು ; ಅವುಗಳು ಉಂಟಾಗಿವೆ ಎಂದು ಹಿಗ್ಗುವದಿಲ್ಲವು. ಆಗಲಿ, ಆತ್ಮಯಾಥಾತ್ಮ್ಯದರ್ಶನ ಉಂಟಾಗಿ ಪ್ರಸನ್ನಾತ್ಮನಾದರೆ, ಪರಮಪುರುಷನಲ್ಲಿ ಮನಸ್ಸು ನಿಲ್ಲುತ್ತದೆಂದೂ ಆಪರಮಾತ್ಮನ ಸುಖದ ಮುಂದೆ **ಪರಮಾತ್ಮನಿಯೋರಕ್ತಃ ವಿರಕ್ತೋಽಪರಮಾತ್ಮನಿ** ಎಂಬ ಹೇಳಿಕೆಯ ಪ್ರಕಾರ ಇತರ ಸುಖವೆಲ್ಲಾ ತುಚ್ಛವಾಗಿ ಭಾವಿಸುವನೆಂದು **ಮದ್ವ್ಯತಿರಿಕ್ತಂ ನಕಂಚನಭೂತವಿಶೇಷಂ ಪ್ರತಿಶೋಚತಿ** ಇತ್ಯಾದಿಯು ಹೇಳಲ್ಪಟ್ಟಿತು. ಆತ್ಮಾನುಭವ ಉಂಟಾಗಿ ತಾನು ಪರಮಾತ್ಮನಿಗೆ ಶೇಷಭೂತನೆಂಬ ತಿಳುವಳಿಕೆಯು ಪರಮಾತ್ಮಚಿನ್ತನವೇ ಅತ್ಯನ್ತ ಸುಖಾವಹವಾದುದೆಂಬ ಭಾವನೆಗೆ ಹೇತುವಾಗಿ ಸಮಸ್ತ ಐಹಿಕಗಳಲ್ಲೂ ವೈತೃಷ್ಣ್ಯಯುಂಟಾಗುತ್ತದೆಂಬ ಭಾವವು ಇಲ್ಲಿ ಉಪದೇಶಿಸಲ್ಪಟ್ಟಿತು. ಹೀಗೆ ಆತ್ಮಾವಲೋಕನವು, ಪರಮಾತ್ಮ ಉಪಾಸನೆಗಿಂತ ವ್ಯತಿರಿಕ್ತವಾದವುಗಳಲ್ಲಿ ವೈರಾಗ್ಯವನ್ನು ಹುಟ್ಟಿಸಿ, ಭಗವಂತನನ್ನು ವಿಶೇಷಭಕ್ತಿಯಿಂದ ಚಿನ್ತನ ಮಾಡುವ ಭಕ್ತಿಯೋಗದಲ್ಲಿ ನಿಲ್ಲಿಸುತ್ತದೆ ಎಂಬ ಮುಖ್ಯ ಭಾವವನ್ನು ತಿಳಿಸುವದಕ್ಕಾಗಿ **ಮದ್ವ್ಯತಿರಿಕ್ತಂ ನಕಂಚನ ಭೂತವಿಶೇಷಂ ಪ್ರತಿಶೋಚತಿ ಕಾಂಕ್ಷತಿ** ಎಂದು ಹೇಳಲ್ಪಟ್ಟಿತು. **ಆ**ಸಂದರ್ಭದಲ್ಲಿ **ತನ್ನ ಆತ್ಮ**ಸ್ವರೂಪಾನುಸಂಧಾನಕ್ಕಿಂತ ಪರಮಾತ್ಮಧ್ಯಾನ ಸುಖವು ಉತ್ಕೃಷ್ಟವಾದುದೆಂದು **ಮೋಕ್ಷಾರ್ಥಿಗೆ ತೋರಿಬರುತ್ತದೆಂಬುದು ಸೂಚಿತವು.** ಈ ಅಭಿಪ್ರಾಯವೂ ಸಹ ಹಿಂದೆಯೇ **"ಶ್ರದ್ಧಾವಾನ್ ಭಜತೇಯೋಮಾಂ ಸಮೇಯುಕ್ತ ತಮೋಮತಃ"** (ಗೀ ೬. ೪೭) ಎಂಬಲ್ಲಿ ಉಪಪಾದಿತವು. ಹೀಗಾಗುವದರಿಂದ ಉಂಟಾಗುವ ಫಲವನ್ನು ಮುಂದೆ ತಿಳಿಸುತ್ತಾರೆ **ಅಪಿತು - ಮತ್ತೇನೆಂದರೆ, ಮದ್ವ್ಯತಿರಿಕ್ತೇಷು** - ನನಗಿಂತ ಬೇರೆಯಾದ, **ಸರ್ವೇಷು ಭೂತೇಷು**- ಸಮಸ್ತ ಐಹಿಕವಸ್ತುಗಳಲ್ಲಿ **ಅನಾದರಣೀಯತಾಯಾಂ**- ಅನಾದರಣೆಯಿಂದ ನೋಡುವದರಲ್ಲಿ, **ಸಮಃ** - ಸಮನಾಗಿ, ಇದರ ತಾತ್ಪರ್ಯವನ್ನು ತಿಳಿಸುತ್ತಾರೆ - **ನಿಖಿಲಂ ವಸ್ತುಜಾತಂ** ತೃಣವನ್ಮನ್ಯಮಾನಃ - ಸಮಸ್ತ ಐಹಿಕ ವಸ್ತು ಸಮೂಹವನ್ನು **ತೃಣದ ಹಾಗೆ ಕಾಣುವವನಾಗಿ,** ಹಿಗೆ ಐಹಿಕಾದಿಗಳನ್ನೆಲ್ಲಾ ತೃಣದಹಾಗೆ **ಭಾವನೆಯ ಪರಾವರ**

ಮದ್ವ್ಯತಿರಿಕ್ತೇಷು ಸರ್ವೇಷು ಭೂತೇಷು ಅನಾದರಣೀಯತಾಯಾಂ ಸಮೋ
ನಿಖಿಲಂ ವಸ್ತುಜಾತಂ ತೃಣವನ್ಮನ್ಯಮಾನೋ, ಮದ್ಭಕ್ತಿಂ ಲಭತೇಪರಾಂ–ಮಯಿ

---

ತತ್ತ್ವಗಳ ವಿವೇಕದಿಂದ ಉತ್ಪನ್ನವಾಗುತ್ತದೆಂಬ ಭಾವವು. ಶ್ರೀ ನಿಗಮಾನ್ತದೇಶಿಕರವರು ವೈರಾಗ್ಯ ಶಿಖಾಮಣಿಯಾದುದರಿಂದ ಪುರುಷಾರ್ಥಕಾಷ್ಠಾಧಿಕಾರದಲ್ಲಿ "ನಾಥೇನಸ್ತೃಣ ಮನ್ಯದನ್ಯದಪಿವಾ" ಎಂದು ಪ್ರಯೋಗಿಸಿದ್ದಾರೆ. ತೃಣವು ಯಾವುದೆಂದರೆ ಐಹಿಕಾದಿ ಐಶ್ವರ್ಯಗಳೆಂದು, ಐಶ್ವರ್ಯಶಬ್ದವನ್ನು ಬಾಯಲ್ಲಿ ಉಚ್ಚರಿಸಲೂ ಕೂಡ ಇಷ್ಟವಿಲ್ಲದೆ ಅನ್ಯತ್ ಎಂದು ಹೇಳಿರುತ್ತಾರೆ, ಹಾಗೆಯೇ ಸ್ವರ್ಗಭೋಗಗಳು ತೃಣಕ್ಕೆ ಸಮಾನವಾಗಿ, ಅವುಗಳನ್ನು ಐಶ್ವರ್ಯವೆಂದು ಉಚ್ಚರಿಸಲು ಕೂಡ ಇಷ್ಟವಿಲ್ಲದೆ ಅನ್ಯತ್ ಎಂದು ಪ್ರಯೋಗಿಸಿರುತ್ತಾರೆ. ಮದ್ಭಕ್ತಿಂ ಲಭತೇಪರಾಂ ಎಂದರೆ ನನ್ನಲ್ಲಿ ತೈಲಧಾರೆಯಂತೆ ಅವಿಚ್ಛಿನ್ನಸ್ಮೃತಿಸಂತತಿ ರೂಪಚಿಂತನವಮಾಡುವ ನಿರತಿಶಯ ಪ್ರೀತಿಯನ್ನು ಹೊಂದುವನು, ಎಂದರೆ ನನ್ನ ಉಪಾಸನದಲ್ಲಿ ವಿಶೇಷ ಪ್ರೀತಿಯುಂಟಾಗುತ್ತದೆಂಬ ಭಾವವು. ಇಂತಹ ಪರಭಕ್ತಿ ಎಂದು ವಿಶೇಷಿಸಿ ಹೇಳುವ ಪ್ರೀತಿಯು ಕರ್ಮಯೋಗಾರಂಭದಲ್ಲಿಲ್ಲದೆ, ಅನಂತರ ವೃದ್ಧಿಹೊಂದುತ್ತಾ ಆತ್ಮಾವ ಲೋಕನಪ್ರಾಪ್ತವಾದ ದೆಶೆಯಲ್ಲಿ ಇದು ಉಂಟಾಗಿ ಉಪಾಸನವು ಕೈಗೂಡುವದರಿಂದ ಉಪಾಸನಕ್ಕೆ ಪರಭಕ್ತಿ ಎಂಬ ಹೆಸರು. "**ಇಪ್ಪಡಿ ಮೋಕ್ಷೋಪಾಯಮಾಗ ವಿಧಿತ್ತಭಕ್ತಿ ಯೋಗವತ್ ಪರಭಕ್ತಿ ಎನ್ರುಪೇಶಪ್ಪಟ್ಟದು**" ಎಂದು ಶ್ರೀ ನಿಗಮಾನ್ತದೇಶಿಕರವರು ಶ್ರೀ ಮದ್ರಹಸ್ಯತ್ರಯಸಾರದ ಉಪಾಯವಿಭಾಗಾಧಿಕಾರದಲ್ಲಿ ಅಪ್ಪಣೆ ಕೊಡಿಸಿರುತ್ತಾರೆ (೮೮೪ ನೆಯ ಪುಟ ನೋಡಿ.) ಇಲ್ಲಿ ಸಮ ಶಬ್ದಕ್ಕೆ ಅನಾದರಣೀಯದಲ್ಲಿ ಸಮವೆಂದು ಅರ್ಥಮಾಡಿರುವದು ಸರಿಯೋ? ಎಂದರೆ ಆತನು ಸರ್ವವನ್ನೂ ನಕಾಂಕ್ಷತಿ ಅಪೇಕ್ಷಿಸುವನಿಲ್ಲವು; ಅವುಗಳು ಇಲ್ಲವೇ ಎಂದೂ ನಶೋಚತಿ, ಶೋಕಿಸುವದಿಲ್ಲವು. ಆದುದರಿಂದ ಅವೆಲ್ಲದರಲ್ಲೂ ಅನಾದರಣೀಯ ಮತಿ ಇರುವದರಿಂದ, ಅವೆಲ್ಲಾ ಸಮವೆಂದು ಹೇಳಲ್ಪಟ್ಟಿತು. ಪ್ರಕರಣಾನುಗುಣವಾಗಿ ಅರ್ಥ ಮಾಡತಕ್ಕದ್ದಾಗಿರುತ್ತದೆ. ಅನಾದರವಲ್ಲೇಗ ತುಲ್ಯತೆಯು. ಇದನ್ನೇ ಮುಂದೆ **ನಿಖಿಲಂ ವಸ್ತುಜಾತಂ ತೃಣವನ್ಮನ್ಯಮಾನಃ** ಎಂಬುದರಿಂದ ಎಲ್ಲಾ ತೃಣವಾಗಿರುವ ಭಾವನೆಯಿಂದ ಸಮತ್ವವೆಂಬ ಭಾವವು. **ಸಮಲೋಷ್ಟಾಶ್ಮಕಾಂಚನಃ** ಎಂಬುದರ ಅಭಿಪ್ರಾಯವು. ಆತನಿಗೆ ಮೋರವೂ ಸಾಸಿವೆಕಾಳೂ ಎರಡೂ ಒಂದೇ. ಅಂತವನಿಗೆ ನನ್ನಲ್ಲಿ ವಿಶೇಷ ಪ್ರೀತಿಯುಂಟಾಗಿ ನನ್ನ ಉಪಾಸನಕ್ಕೆ ಅಧಿಕಾರಿಯಾಗುವನು. ಅದೇನು ಅಷ್ಟು ನನ್ನಲ್ಲಿ ಪ್ರೀತಿಯು? ನಾನು ಎಂತವನು? ಎಂದರೆ **ಮದ್ಭಕ್ತಿಂ** ಎಂಬಲ್ಲಿ ಅಸ್ಮಚ್ಛಬ್ದದಿಂದ ತೋರುವ ಅರ್ಥವನ್ನು ವಿಶದೀಕರಿಸುತ್ತಾರೆ. ತನ್ನಲ್ಲಿ ಮುಮುಕ್ಷುವು ಈ ವಿಶೇಷ ಪ್ರೀತಿಯನ್ನು ತೋರಿಸಿ ಉಪಾಸಿಸಲ್ಪ ಯೋಗ್ಯವಾದ ಧರ್ಮಗಳುಳ್ಳವನು ತಾನು, ಎಂಬುದನ್ನು ಸೂಚಿಸುತ್ತಾರೆ. **ಮಯಿಸರ್ವೇಶ್ವರೇ** ನಾನು ಎಂತವನೆಂದರೆ - ಸಮಸ್ತ ಚೇತನಾ ಚೇತನರಿಗೆಲ್ಲಾ ನಿಯಾಮಕನಾಗಿರುವ, ಇವರಿಂದ ತಾನಲ್ಲದೆ ಮಿಕ್ಕ ಯಾರನ್ನು ಆಶ್ರಯಿಸುವದು ವ್ಯರ್ಥವು., ಏಕೆಂದರೆ ತನಗಿಂತಲೂ ಇತರರು ಸ್ವಲ್ಪ ಸುಕೃತದಿಂದ ಹೆಚ್ಚು ಅಧಿಪತ್ಯಗಳನ್ನು ಹೊಂದಿದ್ದರೂ ಮೋಕ್ಷಾರ್ಥಿಗೆ ಅವರುಗಳ ಆಶ್ರಯಣವು ಕಾರ್ಯಕಾರಿಯು ಎಂದಿಗೂ ಆಗಲಾರದೆಂಬ ಭಾವವು ಸೂಚಿತವು; **ನಿಖಿಲಜಗ ದುದ್ಭವ ಲಯಲೀಲೇ** - ಸಮಸ್ತ ಜಗತ್ತಿನ ಸೃಷ್ಟಿಸ್ಥಿತಿ ಪ್ರಳಯಗಳನ್ನೇ ಲೀಲೆಯಾಗಿವುಳ್ಳ, ಇವರಿಂದ ಮೋಕ್ಷೋಪಾಯಕ್ಕಾಗಿ ಆಶ್ರಯಿಸಲ್ಪಡತಕ್ಕವನು, **ಕಾರಣಂತುಧ್ಯೇಯಃ** ಎಂದು ಹೇಳಿರುವದಕ್ಕನುಸಾರವಾಗಿ ಜಗತ್ಕಾರಣನಾಗಿರಬೇಕಾಗಿರುವದರಿಂದ ಹಾಗೆ ಪ್ರಯೋಗವು, ಅಥವಾ ಸೃಷ್ಟಿಕಾಲದಲ್ಲಿ ನಮಗೆ ಕರಣ ಕಳೇಬರಗಳನ್ನೂ, ಶಾಸ್ತ್ರಾದಿಗಳನ್ನೂ ಕೊಟ್ಟು, ಆತತೆಮ್ಮ

**ಸರ್ವೇಶ್ವರೇ ನಿಖಿಲಜಗದುದ್ಭವ ಸ್ಥಿತಿ ಪ್ರಲಯ ಲೀಲೇ, ನಿರಸ್ತ ಸಮಸ್ತ ಹೇಯಗಂಧೇऽನವಧಿಕಾತಿಶಯಾಸಂಖ್ಯೇಯ ಕಲ್ಯಾಣ ಗುಣಗಣೈಕತಾನೇ,**

---

ಆಶ್ರಯಿಸುವ ಉಪಾಯವನ್ನೂ ತಿಳಿಸಿರುವದರಿಂದ ಕೃತಜ್ಞತಾಸೂಚಕವಾಗಿ ಆತನನ್ನೇ ಆಶ್ರಯಿಸಿದರೆ ಮುಂದಕ್ಕೆ ಮೋಕ್ಷವನ್ನು ಕೊಡುವನೇ ಅವನು ಎಂಬ ಭಾವದಿಂದಾಗಲಿ ಹಾಗೆ ಪ್ರಯೋಗವು. ನಮ್ಮಾಳ್ವಾರ್ರವರು **"ಅರಿನಕ್ಕಿನಪಾದಮೇ ಶರಣಾಗ ತಂದೊಳಿಂದಾಯ್ ಉನಕ್ಕೋರ್ ಕೈಮಾರು ಮೊನ್ರಿಲೇನ್ ಎನಾದಾವಿಯು ಮುನದೇ"** ಎಂದು ಹೇಳಿರುತ್ತಾರೆ. ಶ್ರೀನಿಗಮಾಂತ ದೇಶಿಕರವರು **ಅಚಿದವಿಶಿಷ್ಟಾನ್ ಪ್ರಳಯೇ ಜನ್ತೂನವಲೋಕ್ಯಜಾತ ನಿರ್ವೇದಾ । ಕರಣ ಕಳೇಬರಯೋಗಂ ವಿತರಸಿ ವೃಷಶೈಲನಾಥ ಕರುಣೇತ್ವಮ್ ॥**"ದಯಾಶತಕ ೧೭ರಲ್ಲಿ ಹೇಳಿರುವದು ಅನುಸಂಧೇಯವು. ಸರ್ವೇಶ್ವರನು ಪರಿಪೂರ್ಣಕಾಮನಾದುದರಿಂದ ಜಗತ್ತಿನ ಸೃಷ್ಟಿ ಸ್ಥಿತಿಲಯಾದಿಗಳು ಆತನಿಗೆ ಲೀಲೆ ಎಂದು ಹೇಳಲ್ಪಟ್ಟಿತು. (ದಾಸನು ಬರೆದಿರುವ ಶ್ರೀ ಸ್ತುತಿ ೫೫ನೆಯ ಪುಟವನ್ನು ನೋಡಿ)"**ಲೋಕ ವತ್ತು ಲೀಲಾ ಕೈವಲ್ಯಂ**"ಎಂಬ ಬ್ರಹ್ಮಸೂತ್ರದಲ್ಲಿ ಇದು ಉಪಪಾದಿತವು. ಇನ್ನೂ ಎಂತವನೆಂದರೆ "**ನಿರಸ್ತ ಸಮಸ್ತಹೇಯ ಗಂಧನು**" ಯಾವ ವಿಧ ದೋಷ ಗಂಧವೂ ಇಲ್ಲದೆ, ಇದರಿಂದ ಆತನಲ್ಲದೆ ಇಹಲೋಕದಲ್ಲೂ ಸ್ವರ್ಗಾದಿಲೋಕದಲ್ಲೂ ಇರುವವರೆಲ್ಲಾ ಹೇಯಗುಣಯುಕ್ತರಾದುದರಿಂದ ಆಶ್ರಯಿಸಲು ಯೋಗ್ಯರಲ್ಲವೆಂದು ಸೂಚಿತವಾಯಿತು; ಅದ್ವೈತಿಗಳು ಹೇಳುವ ಹಾಗೆ ಅವಿದ್ಯಾಗೃಹೀತತ್ವವನ್ನು ಪರಬ್ರಹ್ಮನಿಗೆ ಹೇಳುವದು ಅನ್ಯಾಯವೆಂದು ತಿಳಿಸುವದಕ್ಕಾಗಿಯೂ ಹಾಗೆ ಪ್ರಯೋಗವು; ಅನವಧಿಕಾತಿಶಯಾಸಂಖ್ಯೇಯ **ಕಲ್ಯಾಣಗುಣಗಣೈಕತಾನೇ**–ನಿರತಿಶಯಗಳಾಗಿ! ಇಷ್ಟೆಂದು ಲೆಖ್ಖಮಾಡಲು ಸಾಧ್ಯವಿಲ್ಲದ ಕಲ್ಯಾಣ ಗುಣಗಳ ಸಮೂಹಕ್ಕೆ ಮುಖ್ಯಾಶ್ರಯನಾದ, ಇದರಿಂದ ಆಶ್ರಯಿಸಲು ಯೋಗ್ಯವಾದ ಸರ್ವಜ್ಞತ್ವ, ಸತ್ಯಸಙ್ಕಲ್ಪತ್ವ, ಸರ್ವಶಕ್ತಿತ್ವಗಳನ್ನೂ ದಯಾಸೌಲಭ್ಯ ಸೌಶೀಲ್ಯ ವಾತ್ಸಲ್ಯಾದಿಗಳನ್ನೂ ಹೊಂದಿರುವ ಭಾವವು ಸೂಚಿತವು; ತಾನು ಆನಂದ ಸ್ವರೂಪಗುಣಗಳುಳ್ಳವನಾಗಿ ಆಶ್ರಿತರನ್ನೂ ಆನಂದಪಡಿಸುವ ಭಾವವೂ ಸಹ ಹೇಳಿದಂತಾಯಿತು, ದಯಾವಾತ್ಸಲ್ಯ ಸೌಲಭ್ಯ ಸೌಶೀಲ್ಯಾದಿಗುಣಗಳ ಪ್ರದರ್ಶನಕ್ಕೂ ಅವುಗಳ ಮಹಾತ್ಮ್ಯೆಯನ್ನು ತಿಳಿಯುವುದಕ್ಕೂ ನಿತ್ಯವಿಭೂತಿಯು ಅಷ್ಟು ಅನುಕೂಲವಾದ ಸ್ಥಳವಲ್ಲವು, ಈಗ ತಮಗೆ ನಿತ್ಯವಿಭೂತಿಯಲ್ಲೇ ನಿರಂತರ ವಾಸಕ್ಕೆ ಸ್ವಲ್ಪಮಟ್ಟಿಗೆ ಉಪಯುಕ್ತವಾಗಬಹುದು. ಈ ಲೀಲಾ ವಿಭೂತಿಯಲ್ಲಿರುವ ಮಹಾಪರಾಧಿಗಳನ್ನು ರಕ್ಷಿಸುವ ಸಂದರ್ಭದಲ್ಲಿ ಅಲ್ಲವೇ ಆ ಕಲ್ಯಾಣಗುಣಗಳ ಮಹಾತ್ಮ್ಯೆಯ ಪ್ರದರ್ಶನವು. ಆದುದರಿಂದಲೇ **ಕಲ್ಯಾಣಗುಣೈಕತಾನೇ** ಎಂಬ ಶ್ರೀಯತಿಸಾರ್ವರ ಪ್ರಯೋಗವು. ಅದ್ವೈತಿಗಳು ಹೇಳುವ ಹಾಗೆ ಎಂದಿಗೂ ಸರ್ವಗುಣರಹಿತನು ಪರಮಪುರುಷನಲ್ಲವೂ ಎಂಬ ಭಾವವು. **ಲಾವಣ್ಯಾಮೃತಸಾಗರೇ** - ಸರ್ವಾವಯವಶೋಭಾವಿಗೆ ಲಾವಣ್ಯವೆಂದು ಹೆಸರು ಅಂತಹ ಅಮೃತಕ್ಕೆಸಾಗರರೂಪನಾದ, ಇದರಿಂದ ಆಶ್ರಯಿಸಿ ಉಪಾಸಿಸುವದಕ್ಕೆ ಅರ್ಹವಾದ ದಿವ್ಯಮಂಗಳ ವಿಗ್ರಹಗುಣ ಪರಿಪೂರ್ಣನೆಂಬುದು ಹೇಳಲ್ಪಟ್ಟಿತು; ಅಂತಹ ಲಾವಣ್ಯವು ಉಪಾಸಕನ ದೃಷ್ಟಿ ಚಿತ್ತಾಪಹಾರಕ್ಕೆ ಆವಶ್ಯಕವು. ಅಂತಹ ದಿವ್ಯ ಸುಂದರ ಮೂರ್ತಿಯಲ್ಲೇ ಮನಸ್ಸು ನಿರಂತರ ಸಕ್ತವಾಗಿರುವದಕ್ಕೆ ಇವು ಹೇತುವೆಂಬ ಭಾವವು ಸೂಚಿಸಲ್ಪಟ್ಟಿತು. "**ಧನ್ಯಾದ್ರಕ್ಷ್ಯನ್ತಿ ರಾಮಸ್ಯತಾರಾಧಿಪನಿಭಂ ಮುಖಮ್**" "**ಸದೃಶಂ ಶಾರದಸ್ಯೇಂದೋಃ ಫುಲ್ಲಸ್ಯ ಕಮಲಸ್ಯಚ**" (ರಾ ಅಯೋಧ್ಯಾ ೭೮-೨೧)" ಎಂದು ಹೇಳಿರುವಹಾಗಿರುವ ಮುಖವನ್ನು ನೋಡಿದನಂತರ "**ರಾಮಂ ಮೇऽನುಗತಾದೃಷ್ಟಿ ರದ್ಯಾಪಿ ನನಿವರ್ತತೇ**" (ರಾ. ಅಯೋಧ್ಯಾ ೪೨, ೩೪) ಎಂದು ದಶರಥರಾಜನು ಹೇಳಿದಹಾಗೆ, ದೃಷ್ಟಿಯು ಹಿಂತಿರುಗದೇ ಇರುವಷ್ಟು ಲಾವ

**ಲಾವಣ್ಯಾಮೃತ ಸಾಗರೇ, ಶ್ರೀಮುಖಿ, ಪುಣ್ಡರೀಕ ನಯನೇ ಸ್ವಸ್ವಾಮಿನ್ಯತ್ಯರ್ಥ ಪ್ರಿಯಾನುಭವರೂಪಾಂ ಪರಾಂ ಭಕ್ತಿಮ್ ಲಭತೇ ॥ ೫೪ ॥**

---

ಣ್ಯಯುಳ್ಳದು, ಸರ್ವೇಶ್ವರನ ದಿವ್ಯಮಙ್ಗಳ ವಿಗ್ರಹವು ಎಂಬ ಭಾವವು; ದೃಷ್ಟಿಗೆ ಅಸೇಚನಕ ವೆಂಬ ಭಾವವು ಶ್ರೀಮುಖಿ - ಅನುಗ್ರಹಮುಖಳಾದ ಲಕ್ಷ್ಮೀಯುಕ್ತನಾದ, ಇದರಿಂದ "ಕೇಕುಪ್ಯೇದ್ವಾನರೋತ್ತಮು"ಎಂದೂ "ಕಾರ್ಯಂ ಕರುಣಮಾರ್ಯೇಣ ನಕಶ್ಚಿನ್ನಾ ಪರಾಧ್ಯತಿ" ಎಂದೂ ಆಂಜನೇಯನಿಗೆ ದಯಾಪರನಾಗಿರಬೇಕೆಂದು ಬುದ್ಧಿ ಕಲಿಸಿದ ಮಹಾಲಕ್ಷ್ಮಿ ಸಾನ್ನಿಧ್ಯವು "ಲಕ್ಷ್ಮ್ಯಾಸಹ ಹೃಷೀಕೇಶೋ ದೇವ್ಯಾಕಾರುಣ್ಯರೂಪಯಾ ।ರಕ್ಷಕಸ್ಸರ್ವಶಾಸ್ತ್ರೇಷು ವೇದಾಂತೇಷುಚ ಗೀಯತೇ" ಎಂದು ಹೇಳಿರುವಹಾಗೆ ಪರಮ ಪುರುಷನ ರಕ್ಷಕತ್ವಕ್ಕೆ ಹೇತುವೆಂಬುದು ಸೂಚಿತವು. ಶ್ರೀಮುಖಿ ಎಂಬಲ್ಲಿ ಶ್ರೀ ಶಬ್ದವು ಶ್ರೀಯತೇ ಚೇತನೈಃ ಎಂಬುದರಿಂದ ಅನುಗ್ರಹಮುಖಳಾದುದರಿಂದ ಚೇತನರಿಂದ ಆಶ್ರಯಿಸಲ್ಪಡುವಳೆಂಬ ಭಾವವೂ, ಶ್ರಯತೇ ಭಗವಂತಂಚ ಶ್ರೀಃ ಎಂಬುದರಿಂದ ಸ್ವತಂತ್ರನಾದ ತನ್ನ ಪತಿಯನ್ನು ವಶಮಾಡಿಕೊಂಡು ಚೇತನರು ಅಪರಾಧಿಗಳಾದರೂ ಆಶ್ರಯಿಸಿರುವದರಿಂದ ಶಿಕ್ಷಿಸಬೇಡವೆಂದು ಹೇಳಿ ಅನುಗ್ರಹಿಸುವಳೆಂಬ ಭಾವವೂ, ಸೂಚಿತವು. ಶ್ರೀಮುಖಿ ಎಂಬ ಪ್ರಯೋಗದಿಂದ ಉಪಾಯೋಪೇಯದೆಶೆಗಳಲ್ಲೂ ಲಕ್ಷ್ಮಿಯ ನಿತ್ಯಾನಪಾಯಿತ್ವವು ಹೇಳಲ್ಪಟ್ಟಿತು. "ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" (ಪುರುಷಸೂಕ್ತ) "ಆನೀತವಾದಗ್‌ಂ ಸ್ವಧಯಾ ತದೇಕಂ" ಎಂಬ ಶ್ರುತಿವಾಕ್ಯಗಳೂ, ಮತ್ತು "ನಿತ್ಯೈವೇಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ" ಎಂಬ ಸ್ಮೃತಿವಾಕ್ಯವೂ (ವಿ ಪು ೧, ೮. ೧೮) ಈ ನಿತ್ಯಾನಪಾಯಿತ್ವವನ್ನು ಸಮರ್ಥಿಸುತ್ತವೆ. ಪುಂಡರೀಕ ನಯನೇ - "ತಸ್ಯಯಥಾ ಕಪ್ಯಾಸಂ ಪುಂಡರೀಕಮೇವ ಮಕ್ಷಿಣೀ" (ಛಾಂ ೧. ೬. ೭) ಎಂಬ ಶ್ರುತಿಯ ವ್ಯಾಖ್ಯಾನದಲ್ಲಿ ವೇದಾರ್ಥಸಙ್ಗ್ರಹದಲ್ಲಿ ಹೇಳಿರುವಹಾಗೆ "ಗಂಭೀರಾಂಭಸ್ಸಮುದ್ಭೂತ ಸುಮೃಷ್ಟನಾಳ ರವಿಕರ ವಿಕಸಿತ ಪುಂಡರೀಕದಳಾ ಮಲಾಯತೇಕ್ಷಣಃ" ಬಹು ಆಳವಾದ ನೀರಿನಿಂದ ಹೊರಗೆ ಬಂದಿರುವ ನಾಳದಲ್ಲಿ ಸೂರ್ಯಕಿರಣದಿಂದ ವಿಕಸಿತವಾದ ಕಮಲದಪತ್ರದ ಹಾಗೆ ಸ್ವಚ್ಛವಾಗಿ ವಿಶಾಲವಾದ ಕಣ್ಣುಳ್ಳವನು; ಈ ಪುಂಡರೀಕನಯನವೂ ಆಶ್ರಿತರನ್ನು ದಿವ್ಯಕಟಾಕ್ಷದಿಂದ ನೋಡುವಾಗ ದಯಾರಸವು ತುಂಬಿ ತುಳುಕಿಬರುವವನ್ನು ಸೂಚಿಸುತ್ತದೆ; ಇದಕ್ಕೆ ನಿದರ್ಶನವಾಗಿ ವಿಭೀಷಣನು ಯಾವಾಗ ಶರಣಾಗತಿಯ ಮೂಲಕ ಆಶ್ರಯಿಸಿದನೋ, ಆತನಲ್ಲಿ ದಯಾವಾತ್ಸಲ್ಯಾದಿಗಳುಂಟಾಗಿ "ಲೋಚನಾಭ್ಯಾಂ ಪಿಬನ್ನಿವ" ಎಂಬ (ರಾಮ ಯುದ್ಧ ) ಪ್ರಯೋಗವನ್ನು ಕಾಣಬಹುದು; ಇದರಿಂದ "ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತ ಉದೇರಹವೈ ಸರ್ವೇಭ್ಯಃ ಪಾಪ್ಮಭ್ಯಃ" (ಛಾಂ ೧. ೬. ೭) ಎಂದು ಹೇಳಿರುವ ಹಾಗೆ ಸರ್ವ ಪಾಪಗಳ ವಿಮೋಚನೆಯಲ್ಲಿ ಆಶಯಿರುವ ಮೋಕ್ಷಾರ್ಥಿಗೆ ಪ್ರಯೋಜನಕರವಾದ ಕಣ್ಣುಗಳುಳ್ಳವನೆಂದು ಹೇಳಲ್ಪಟ್ಟಿತು. ಹೀಗೆ ಸ್ವಾಮಿಯ ದಿವ್ಯ ಚಕ್ಷುಸ್ಸುಗಳಿಗೆ ಇಂತಹ ಅಪರಾಧಗಳನ್ನು ಹೋಗಲಾಡಿಸುವ ಪಾವನತ್ವ ಉಂಟೆಂಬುದನ್ನು ಸಂಶಿತ ವ್ರತಳಾಗಿ ಪರಮ ಭಾಗವತೆಯಾದ ಶಬರಿಯ ವಾಕ್ಯವಾದ "ಚಕ್ಷುಷಾ ತವ ಸೌಮ್ಯೇನ ಪೂತೋಽಸ್ಮಿರಘುನಂದನ" "ನಿನ್ನ ಸೌಮ್ಯವಾದ ಕಣ್ಣಿನ ದೃಷ್ಟಿಯಿಂದ ಓ ರಘುಕುಲೋತ್ಪನ್ನನೇ ನಾನು ಸರ್ವಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ಪರಿಶುದ್ಧಳಾಗಿರುವೆನು" ಎಂಬ ಶಬರಿಯ ವಾಕ್ಯದಿಂದ ಗ್ರಹಿಸಬಹುದು. (ರಾ. ಅರ. ೭೪. ೧೩.) ಮತ್ತು ಶ್ರೀ ಕೃಷ್ಣಭಗವಾನರವರ ಪರತ್ವವನ್ನು ನಿಸ್ಸಂದೇಹವಾಗಿ ಅವರ ಕಣ್ಣಿನ ಸೊಬಗಿನಿಂದ ನಿರ್ಧರಿಸಿಕೊಂಡು, ಶ್ರೀ ಮಾರ್ಕಂಡೇಯ ಮಹರ್ಷಿಗಳು ಯುಧಿಷ್ಠಿರಾದಿಗಳನ್ನು ಕುರಿತು ಹೇಳುತ್ತಾರೆ. – "ಯಃ

**ಸದೇಷೋಽಯಮಯಾದೃಷ್ಟಃ ಪುರಾ ಪದ್ಮಾಯತೇಕ್ಷಣಃ। ಸ ಏಷಃ ಪುರುಷವ್ಯಾಘ್ರ ಸಂಬಂಧೀ ತೇ ಜನಾರ್ದನಃ**" ಎಂದರೆ ನಾನು ಹಿಂದೆ ಪ್ರಳಯದಲ್ಲಿ ಪರಮಪುರುಷನ ಪುಂಡರೀಕನಯನವನ್ನು ನೋಡಿದ್ದೆನು. ಓ ಧರ್ಮರಾಯನೇ ನಿನ್ನ ಸಂಬಂಧಿಯಾಗಿರುವ ಈ ಜನಾರ್ದನನ ಕಣ್ಣಿನ ಸೊಬಗೂ ಹಾಗೆಯೇ ಇರುವದರಿಂದ ಶ್ರೀ ಕೃಷ್ಣನು ಸಾಧಾರಣನಲ್ಲವು; ಪರಮಪುರುಷನೇ ಸರಿ; ಆದುದರಿಂದ **ಗಚ್ಛಧ್ವಮೇನಂ ಶರಣಂ ಶರಣ್ಯಂ ಕೌರವರ್ಷಭಾಃ** - ಓ ಕುರು ವಂಶ ಶ್ರೇಷ್ಠರಾದ ಪಾಂಡವರುಗಳಿರಾ ಈತನು ಸಾಮಾನ್ಯನಲ್ಲವು, ಪುರುಷೋತ್ತಮನು. ನೀವೆಲ್ಲರೂ ಈ ಸರ್ವಲೋಕ ಶರಣ್ಯನಲ್ಲಿ ಶರಣಾಗತಿಯನ್ನು ಅನುಷ್ಠಿಸಿರಿ; ನಿಮಗೆ ಸರ್ವಮಂಗಳಗಳೂ ಪ್ರಾಪ್ತವಾಗುವುವು, ಎಂದು ಮಾರ್ಕಂಡೇಯರು ಉಪದೇಶಿಸಿರುತ್ತಾರೆ. ಆ ಕಣ್ಣುಗಳ ಮಾಹಾತ್ಮ್ಯೆಯು ಅಷ್ಟು ಅತ್ಯದ್ಭುತವಾದುದು (ಭ ರ. ವನ ೧೯೨.೫೧ ೫೭) "**ಯಾಂಪಶ್ಯೇನ್ಮಧುಸೂದನಃ**" "**ಯಂಚರಾಮೋ ನಪಶ್ಯತಿ**" ಇತ್ಯಾದಿ ಪ್ರಯೋಗಗಳು ಕಣ್ಣಿನ ಮಾಹಾತ್ಮ್ಯೆಯನ್ನು ಬೋಧಿಸುವುಗಳಾಗಿವೆ; ಸ್ವಸ್ವಾಮಿನಿ-ತನಗೆ ಶೇಷಿಯಾಗಿ ತನ್ನ ಸರ್ವವಿಧಶ್ರೇಯಸ್ಸಿಗೂ ಸಾಧನ ಭೂತನಾದ ಸಿದ್ಧೋಪಾಯನಲ್ಲಿ **ಅತ್ಯರ್ಥಪ್ರಿಯಾನುಭವರೂಪಾಂ ಪರಾಂಭಕ್ತಿಂ ಲಭತೇ** - ಸಾಧ್ಯೋಪಾಯವಾದ ನಿರತಿಶಯಸುಖಾನುಭವರೂಪವಾಗಿರುವ ನಿರಂತರ ಉಪಾಸಿಸಲುಬೇಕಾದ, ಅತಿಶಯಿತ ಭಕ್ತಿಯನ್ನು ಹೊಂದುವನು; ಅಂತಹ ಕೃಪಾಮಹೋದಧಿಯ ಕಟಾಕ್ಷಮೂಲಕ ಆತನನ್ನು ತೈಲಧಾರೆಯು ಹಾಗೆ ಅವಿಚ್ಛಿನ್ನ ಸ್ಮೃತಿ ಸಂತತಿರೂಪ ಜ್ಞಾನದಿಂದ ಉಪಾಸನೆಯನ್ನು ಕೈಕೊಳ್ಳಲು ಅಧಿಕಾರವನ್ನು ಹೊಂದುವನು ಎಂಬ ಭಾವವು. ಬ್ರಹ್ಮಭೂತನಾಗಿ ಪ್ರಸನ್ನಾತ್ಮನಾದವನು ನನ್ನನ್ನು ಏಕಾನ್ತ್ಯದಿಂದ ಉಪಾಸಿಸುವ ಸ್ಥಿತಿಯನ್ನು ಹೊಂದುವನೆಂಬ ತಾತ್ಪರ್ಯವು.

"**ಮದ್ಭಕ್ತಿಂ**" ಎಂಬಲ್ಲಿರುವ ಮಯಿ ಎಂಬುದಕ್ಕೆ ಅಷ್ಟು ವಿಸ್ತರಿಸಿ, ಆಶ್ರಿತನಿಗೆ ಹಿತವನ್ನುಂಟು ಮಾಡಿ ಪರಮಪುರುಷಾರ್ಥವನ್ನು ದಯಪಾಲಿಸುವ ಮಹಾ ಗುಣಗಳು ತನ್ನಲ್ಲುಂಟು ಎಂಬುದಾಗಿ ಭಾಷ್ಯವನ್ನು ಬರೆಯಲು ಕಾರಣವೇನು? ಎಂದಾಪೇಕ್ಷಿಸಿದರೆ, ಶ್ರೀ ಕೃಷ್ಣ ಭಗವಾನರವರಿಗೆ ತನ್ನಲ್ಲಿ ಅಂತಹ ಪರಭಕ್ತಿಯನ್ನು ಮಾಡಲು ಅರ್ಹವಾದ ಸ್ವರೂಪರೂಪ ಗುಣವಿಭೂತಿಗಳುಳ್ಳವನೆಂದು ಹೇಳುವ ಅಭಿಪ್ರಾಯದಿಂದಲೇ ಮದ್ಭಕ್ತಿಂ ಎಂದು ಪ್ರಯೋಗಿಸಿರುತ್ತಾರೆ. ಮುಂದಿನ ಶ್ಲೋಕದಲ್ಲಿ **ಭಕ್ತ್ಯಾಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ವತಃ**" ಎಂದು ಹೇಳಲ್ಪಟ್ಟಿರುವದರಿಂದ ಸರ್ವೇಶ್ವರನ ಸ್ವರೂಪ ಸ್ವಭಾವಾದಿಗಳ ಅನುಸಂಧಾನವೆಂದೇ ಆಯಿತು. ಅಂತಹ ನಿರತಿಶಯ ಪ್ರಭಾವವುಳ್ಳ ಸ್ವರೂಪರೂಪ ಗುಣವಿಭವಾದಿಗಳಿಲ್ಲದೇ ಹೋದರೆ ಅಂತಹ ಏಕಾನ್ತ್ಯಭಕ್ತಿಯ ಉತ್ಪತ್ತಿಗೆ ಕಾರಣವೇ ಇಲ್ಲವಾಗುತ್ತದೆಂಬ ಭಾವವು. ಅದೂ ಅಲ್ಲದೆ ಪರಮಪುರುಷನ ಸ್ವರೂಪರೂಪಗುಣವಿಭವೈಶ್ವರ್ಯಾದಿಗಳ ವಿಷಯದಲ್ಲಿ ಯಥಾರ್ಥಜ್ಞಾನವಿಲ್ಲದವರಾಗಿದ್ದಾರಲ್ಲಾ ಎಂಬ ಪರಿತಾಪದಿಂದ ಪ್ರಾಪ್ತಸ್ಥಳಗಳಲ್ಲಿ ಅವುಗಳನ್ನು ವ್ಯಕ್ತಪಡಿಸುತ್ತಾರೆ. ॥ ೫೪ ॥

**ಭಾಷ್ಯಾವತಾರಿಕೆಯ ಅರ್ಥವು**—ಹಿಂದಿನ ಶ್ಲೋಕದಲ್ಲಿ ಕರ್ಮಯೋಗವನ್ನು ಅನುಷ್ಠಿಸುತ್ತಾ ಬಂದವನಿಗೆ ಕ್ರಮೇಣ ಆತ್ಮಾವಲೋಕನವೂ ವೈರಾಗ್ಯವೂ ಸಹ ಉಂಟಾಗುವದರಿಂದ ಐಹಿಕಾದಿಗಳಿಲ್ಲವೆಂದೂ ಶೋಕಿಸನು, ಇಲ್ಲವಾದುವನ್ನು ಅಪೇಕ್ಷಿಸನು, ಆಕಾರಣದಿಂದ ನನ್ನನ್ನೇ ಪರಭಕ್ತಿಯಿಂದ ಉಪಾಸಿಸುವನೆಂದು ಹೇಳಿದರು. ಇದರಿಂದುಂಟಾಗುವ ವ್ಯವಹಿತವೆಂದರೆ ಕ್ರಮೇಣ ಉಂಟಾಗುವ ಫಲವೇನು, ಅವ್ಯವಹಿತಸಾಕ್ಷಾತ್ತಾಗಿ ಉಂಟಾಗುವ ಫಲವೇನು ಎಂಬದನ್ನು ಈ ಮುಂದಿನ ಶ್ಲೋಕದಲ್ಲಿ ತಿಳಿಸುತ್ತಾರೆ. ಆದರಿಂದಲೇ ತತ್ಫಲಮಾಹ ಎಂಬ ಅವತಾರಿಕೆಯು. ಈ ಪರಭಕ್ತಿಯಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸುವ ಜ್ಞಾನವುಂಟಾ

**ಭಾಷ್ಯಾವತಾರಿಕೆಯು—ತತ್ಫಲಮಾಹ—**

**ಮೂ. ಭಕ್ತ್ಯಾ ಮಾ ಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದ ನಂತರಮ್ ॥ ೫೫ ॥**

---

ಗುವದರಿಂದ ಪರಜ್ಞಾನವಾಗಿ ಬೆಳೆದು ಆನಂತರ ಪರಮಭಕ್ತಿಯುಂಟಾಗಿ, ಪರಮಾತ್ಮ ಪ್ರಾಪ್ತಿಯು ಲಭಿಸುತ್ತದೆಂದು ಹೇಳಲ್ಪಡುತ್ತದೆ.

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕದಲ್ಲಿ ಸರಿಯಾಗಿ ಹೇಗೆ ಅನುಷ್ಠಿಸಬೇಕೋ ಹಾಗೆ ಅನುಷ್ಠಿಸಿದ ಕರ್ಮಯೋಗವು, ಆತ್ಮಾವಲೋಕನಕ್ಕೆ ಸಾಧನವಾಗಿ ಪರಭಕ್ತಿಯನ್ನುಂಟು ಮಾಡುತ್ತದೆ ಎಂದು ಭಕ್ತಿಯ ಉತ್ಕೃಷ್ಟದೆಶೆಯು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಾದರೋ, ಅದಕ್ಕೂ ಉತ್ಕೃಷ್ಟತರದೆಶೆಯಾದ ಪರಜ್ಞಾನಾವಸ್ಥೆಯು ಹೇಳಲ್ಪಡುತ್ತದೆ. ಇದರಲ್ಲಿ ಪರಮಾತ್ಮ ಸಾಕ್ಷಾತ್ಕಾರವು ಲಭಿಸುತ್ತದೆಂದೂ ಆ ಅವಸ್ಥೆಯು ಪರಜ್ಞಾನವೆಂದು ಹೇಳಲ್ಪಡುತ್ತದೆಂದೂ ಅನಂತರ ಅದರ ಫಲವು ಮೋಕ್ಷಪ್ರಾಪ್ತಿಯೂ ಎಂದೂ ಹೇಳಲ್ಪಡುತ್ತದೆ.

**ಭಕ್ತ್ಯಾ** – ಹೀಗೆ ಆತ್ಮಾವಲೋಕನದಿಂದ ಸಿದ್ಧಿಸಿದ ಪರಭಕ್ತಿಯಿಂದ, **ಆತನನ್ನು** ಏಕಾಗ್ರಚಿತ್ತನಾಗಿ ಧ್ಯಾನಿಸುವದರಿಂದ, **ಯಶ್ಚಾಸ್ಮಿ** - ನಾನು ಸ್ವರೂಪತಃ ಸ್ವಭಾವತಃ ಹೇಗಿದ್ದೇನೆಂಬುವನ್ನೂ, **ಯಾವಾನ್ ಅಸ್ಮಿ** - ಯಾವ ರೂಪಗುಣವಿಭವಗಳಿಂದ ಯುಕ್ತನಾಗಿದ್ದೇನೆಂಬುದನ್ನೂ, ತತ್ತ್ವತಃ - ಯಥಾರ್ಥವಾಗಿ **ಅಭಿಜಾನಾತಿ** - ತಿಳಿಯುತ್ತಾನೆ ಎಂದರೆ ಪರಮಾತ್ಮನ ಸ್ವರೂಪರೂಪಗುಣವಿಭವೈಶ್ವರ್ಯಾದಿಗಳಿಂದ ಕೂಡಿದ ಪರಿಪೂರ್ಣ ಪರಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದುವನು; ಇದೇ ಭಕ್ತಿಯೋಗ ನಿಷ್ಪತ್ತಿಯಿಂದುಂಟಾಗುವ ಪ್ರಕೃಷ್ಟತರದೆಶೆಯು; ಇಂತಹ ಸಾಕ್ಷಾತ್ಕಾರವು ಲಭಿಸಬೇಕಾದರೆ ಏಕಾಂತ್ಯಭಕ್ತಿಯೂ, ಪರಭಕ್ತಿಯಿಂದ ಕೂಡಿದ ಉಪಾಸನೆಯೂ ಆವಶ್ಯಕವು. ಉತ್ತರಾರ್ಧದಿಂದ ಇಂತಹ ಪರಮಾತ್ಮ ಸಾಕ್ಷಾತ್ಕಾರವು ಮೋಕ್ಷಸಾಧನವೆಂದು ಹೇಳುತ್ತಾರೆ—**ಮಾಂ**-ಹೀಗೆ ಸ್ವರೂಪ ಸ್ವಭಾವಗುಣವಿಭವಗಳಿಂದ ಯುಕ್ತನಾಗಿಯೂ ಉಪಾಸ್ಯವಾದ ದಿವ್ಯಮಂಗಳವಿಗ್ರಹಯುಕ್ತನಾಗಿಯೂ ಇರುವ **ಮಾಂ**-ನನ್ನನ್ನು ತತ್ತ್ವತಃ **ಜ್ಞಾತ್ವಾ**-ಯಥಾರ್ಥವಾಗಿ ಸಾಕ್ಷಾತ್ಕರಿಸಿ, **ಅನಂತರಂ** - ಹೀಗೆ ಸಾಕ್ಷಾತ್ಕರಿಸಿದ ನಂತರ,**ತತಃ**-ಆಪರ ಭಕ್ತಿಯಪರಾಕಾಷ್ಠಾದೆಶೆಯಿಂದಲೇ **ತತ್**- ಪರಮಪದವನ್ನು,**ವಿಶತೇ**-ಪ್ರವೇಶಿಸುತ್ತಾನೆ ಎಂದರೆ ನನ್ನೊಂದಿಗೆ ಸಾಯುಜ್ಯವನ್ನುಹೊಂದುವನು ಎಂಬರ್ಥವು. ಕರ್ಮಯೋಗದಲ್ಲಿ ತಾನು ಮಾಡುವ ಕರ್ಮಗಳೆಲ್ಲಾ ಭಗವಂತನಿಗೇನೇ ಸಲ್ಲತಕ್ಕದ್ದೆಂಬ ಅಭಿಸಂಧಿಯಿಂದುಂಟಾದ ಶೇಷಿಯಾದ ತನ್ನಲ್ಲಿ ಮಾಡಿದ ಭಕ್ತಿಯೇ ಬೆಳೆಯುತ್ತಾ ಬೆಳೆಯುತ್ತಾ ಕೊನೆಗೆ ಪರಭಕ್ತಿರೂಪ ಏಕಾನ್ತ ಭಕ್ತಿಯಾಗಿ ಪರಿಣಮಿಸಿ ತನ್ನ ಸ್ವಾಮಿಯನ್ನು ತೈಲಧಾರೆಯ ಹಾಗೆ ಅವಿಚ್ಛಿನ್ನವಾಗಿ ಉಪಾಸಿಸುವ ಸ್ಥಿತಿಯನ್ನು ಹೊಂದುತ್ತದೆ. ಹೀಗೆ ತನಗೆ ಶೇಷಿಯಾದ ಪರಮಾತ್ಮನನ್ನು ಉಪಾಸಿಸುವಾಗ ಆತನ ಸ್ವರೂಪರೂಪಗುಣ ವಿಭವೈಶ್ವರ್ಯಾದಿಗಳೊಂದಿಗೆ ಏಕಾನ್ತಚಿತ್ತದಿಂದ ಧ್ಯಾನಿಸುವದರಿಂದ ಅಂತವನನ್ನು ಸಾಕ್ಷಾತ್ಕರಿಸುವ ದೆಶೆಯಾದ ಪರಜ್ಞಾನವು ಲಭಿಸುತ್ತದೆ. ಈ ಪರಜ್ಞಾನದಿಂದ ಪರಮಪುರುಷನಾದ ಶ್ರೀವಾಸುದೇವನನ್ನು ಒಂದು ನಿಮಿಷವೂ ಅಗಲಿರಲಾರನೆಂಬ ಪರಕಾಷ್ಠೆ ದೆಶೆಯು ಲಭಿಸಿ ದೇಹಾವಸಾನದಿಂದ ಮೋಕ್ಷವನ್ನು ಹೊಂದುವನು. ಈ ದೆಶೆಗೆ ಪರಮಭಕ್ತಿಯೆಂದು ಹೆಸರು. ಹೀಗೆ ಪರಮಾತ್ಮನಲ್ಲಿ ಭಕ್ತಿಯು ಕರ್ಮಯೋಗದಿಂದಾರಂಭಿಸಿ ವೃದ್ಧಿಯನ್ನು ಹೊಂದುತ್ತದೆ:—ಭಕ್ತಿ, ಪರಭಕ್ತಿ, ಪರಜ್ಞಾನ, ಪರಮಭಕ್ತಿ, ಹೀಗೆ ಒಂದಕ್ಕಿಂತ ಒಂದು ಉತ್ಕೃಷ್ಟದೆಶೆಯು. ಉಪಾಸನೆಗೆ ಪ್ರಾರಂಭ ದೆಶೆಯಲ್ಲಿ ಪರಭಕ್ತಿಯಿರುವದರಿಂದಲೇ ಪರಮಾತ್ಮೋಪಾಸನೆಗೆ ಪರಭಕ್ತಿ ಎಂದೇ ಹೆಸರು ಎಂದು ಶ್ರೀ ದೇಶಿಕರವರು

ಹೇಳಿರುತ್ತಾರೆ. ಈ ಪರಭಕ್ತಿ ಎಂಬ ಶಬ್ದವು ಸಾಮಾನ್ಯ ಭಕ್ತಿಯನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ ಹಾಗೆ ವ್ಯವಹರಿಸಲ್ಪಟ್ಟಿರುತ್ತದೆ; ಅಥವಾ ಅನ್ಯದೇವತಾ ಭಕ್ತಿಯನ್ನು ವ್ಯಾವರ್ತಿಸಿ ಹೇಳುವದಕ್ಕಾಗಿಯೂ ಹಾಗೆ ಪ್ರಯೋಗವೆಂದೂ ಭಾವಿಸಬಹುದು. ಈ ಅಭಿಪ್ರಾಯವನ್ನು, ಹಿಂದೆ ೧೧ನೆಯ ಅಧ್ಯಾಯದ ೫೪ನೆಯ ಶ್ಲೋಕದಲ್ಲಿನ "**ಭಕ್ತ್ಯಾ ತ್ವನನ್ಯಯಾ**" ಎಂಬ ಪ್ರಯೋಗದಿಂದ ಗ್ರಹಿಸಬಹುದು; **ಅವ್ಯಭಿಚರಿತಭಕ್ತಿಯು** ಹೇಳಲ್ಪಟ್ಟಿತು. ಈ ಪರಮಪುರುಷನ ಉಪಾಸನೆಯನ್ನು ಪರಭಕ್ತಿ ಶಬ್ದದಿಂದ ಹೇಳಲ್ಪಡುವದಕ್ಕೆ ಬದಲಾಗಿ ಸಂಗ್ರಹವಾಗಿ "**ಭಕ್ತಿ**" ಎಂಬ ಶಬ್ದದಿಂದಲೂ ಹೇಳಲ್ಪಡುವ ವಾಡಿಕೆಯುಂಟು. ಶ್ರೀ ನಿಗಮಾನ್ತ ದೇಶಿಕರವರು ಅನೇಕ ಕಡೆಗಳಲ್ಲಿ ಪರಮಾತ್ಮನನ್ನು ಹೊಂದುವ ಉಪಾಯಗಳು ಭಕ್ತಿ **ಪ್ರಪತ್ತಿಗಳು ಎರಡೇ** ಎಂದು ಅನೇಕಕಡೆಗಳಲ್ಲಿ ಹೇಳಿರುತ್ತಾರೆ. ಹಾಗಾದರೆ ಒಂದು ಉದಾಹರಣೆಯಾದರೂ ಬೇಡವೆ? ಎಂದರೆ ಶ್ರೀಮದ್ರಹಸ್ಯತ್ರಯಸಾರದಲ್ಲಿ ಹೇಳುತ್ತಾರೇನೆಂದರೆ :—"**ಇಪ್ಪಡಿಪ್ರಪತ್ತಿಕ್ಕುಮ್ ಭಕ್ತಿಕ್ಕುಮ್ ಅಧಿಕಾರಿವಿಶೇಷತ್ತೈಪ್ಪತ್ತಿ ತುಲ್ಯಫಲತ್ವಮುಂಡಾಗೈಯಾಲೇ ವಿಕಲ್ಪಮಾಗಕ್ಕಡವದು** ಎಂಬುದಾಗಿ. (೯೦೦ನೆಯ **ಪುಟನೋಡಿ**) ಶ್ರೀ ಭಾಷ್ಯಕಾರರ ಶಿಷ್ಯರಾದ ಶ್ರೀ ಕೂರೇಶರೂ ತಾವು ರಚಿಸಿರುವ ವರದರಾಜಸ್ತವ (೯೨) ಶ್ಲೋಕದಲ್ಲಿ **ಯಾವಾನ್ ಅಸಿ ಯೋಸಿ** ಎಂದು ತಿಳಿದು ಉಪಾಸನೆಯ ಮೂಲಕ ನಿನ್ನನ್ನು ಸಾಕ್ಷಾತ್ಕರಿಸುವದು ಬಹು ಕಷ್ಟವಾದುದರಿಂದ ಅದನ್ನು ಬಿಟ್ಟು ಪ್ರಪತ್ತಿಯನ್ನು ಅವಲಂಬಿಸಿರುತ್ತೇನೆಂದು ಹೇಳಿಕೊಂಡಿರುತ್ತಾರೆ. "**ಯಥಾಸಿ ಯಾವಾನಸಿ ಯದ್ಗುಣಃ ಕರಿಶ ಯಾದೃಗ್ವಿಭವೋ ಯದಿಂಗಿತಃ। ತಥಾವಿಧಂ ತ್ವಾಂ ಬತ ಭಕ್ತಿದುರ್ಗ್ರಹಂ ಪ್ರಪತ್ತಿವಾಚೈವ ನಿರೀಕ್ಷಿತುಂ ವೃಣೇ**"॥ ಇಲ್ಲಿ **ಭಕ್ತಿ** ಎಂದರೆ ಉಪಾಸನೆಯು. ಭಕ್ತಿಯೋಗಶಬ್ದದಲ್ಲೂ ಭಕ್ತಿಶಬ್ದವು ಉಪಾಸನೆಯನ್ನೇ ಬೋಧಿಸುತ್ತದೆ. ಭಕ್ತಿಯೋಗ**ವೆಂದರೆ** ಉಪಾಸನಾರೂಪ ಉಪಾಯವೆಂಬರ್ಥವು. **ಯಾವಾನ್ ಯಶ್ಚಾಸಿ ತತ್ತ್ವತಃ** ಎಂದು ಇಲ್ಲಿಸಂಗ್ರಹವಾಗಿ ಹೇಳಿದುದನ್ನೇ ಇವರು ವಿಸ್ತರಿಸಿ "**ಯಥಾಸಿ ಯಾವಾನಸಿ ಯದ್ಗುಣಃ ಕರೀಶ ಯಾದೃಗ್ವಿಭವೋಯದಿಂಗಿತಃ**" ಎಂದು ಶ್ರೀ ವರದರಾಜನನ್ನು ಕುರಿತು ಹೇಳಿರುತ್ತಾರೆ. ಮೂಲದಲ್ಲಿ **ಯಾವಾನ್ಯಶ್ಚಾಸ್ಮಿ** ಎಂಬಲ್ಲಿ ಮೊದಲು **ಯಾವಾನ್**, ಅನಂತರ **ಯೋಸ್ಮಿ** ಎಂದಿರುವದನ್ನು ಯತಿವರ್ಯರು ಭಾಷ್ಯದಲ್ಲಿ ಈ ಕ್ರಮವನ್ನು ತಪ್ಪಿಸಿ, **ಯೋಹಂ** ಎಂದು ಮೊದಲು ಹೇಳಿ ಅನಂತರ **ಯಾವಾಂಶ್ಚ** ಎಂದು ಬರೆದಿರುವದಕ್ಕೆ ಕಾರಣವೇನೆಂದರೆ, ಮೊದಲು ಸ್ವರೂಪವನ್ನು ಅನಂತರ ಸ್ವಭಾವವನ್ನು ಹೇಳುವದು ಯುಕ್ತವೆಂದು ಭಾವಿಸಿ ಹಾಗೆ ವ್ಯಾಖ್ಯಾನವು. ಆದರೆ ಮೂಲದಲ್ಲಿ ವ್ಯತ್ಯಸ್ತವಾಗಿರುವದು ನ್ಯಾಯವೋ? ಎಂದರೆ ಕವಿಗಳಿಗೆ ಕಾವ್ಯಾನುಗುಣವಾಗಿ ವ್ಯತ್ಯಾಸವು ಸಾಧುವು. ಈಗ ತತ್ತ್ವತಃ - ಯಶ್ಚ ಯಾವಾಂಶ್ಚ ಎಂಬುದರೊಂದಿಗೆ ಇದ್ದರೂ, ಅಭಿಪ್ರಾಯ ಸ್ವಾರಸ್ಯದಿಂದ **ಅಭಿಜಾನಾತಿ** ಎಂಬುದರೊಡಿಗೆ ಅನ್ವಯಿಸತಕ್ಕದ್ದಾಗಿರುತ್ತದೆ ಪರಮಪುರುಷನು ಯಾವಾಗಲೂ ಇರುವದು ಸ್ವರೂಪ ಸ್ವಭಾವದಿಂದ ಒಂದೇ ವಿಧವು, ಆದರೆ ತಿಳಿಯತಕ್ಕವನು ಯಥಾರ್ಥವಾಗಿಯಾಗಲಿ, ಅಯಥಾರ್ಥವಾಗಲಿ ತಿಳಿಯುವನು. **ತತ್ತ್ವತಃ ತತ್ತ್ವತಃ** ಎಂದು ಎರಡು ಸಲ ಈ ಶ್ಲೋಕದಲ್ಲಿ ಪ್ರಯೋಗವೇತಕ್ಕೆ ? ಎಂದರೆ ಉಪಾಸ್ಯನಾದ ಪರಬ್ರಹ್ಮನ ಸ್ವರೂಪಗುಣವಿಭವೈಶ್ವರ್ಯಾದಿಗಳ ಯಥಾರ್ಥ ಜ್ಞಾನವು ಸುಲಭಸಾಧ್ಯವಲ್ಲವೆಂದೂ, ಆದರೆ ಮೋಕ್ಷಪ್ರಾಪ್ತಿಗೂ ಅದಕ್ಕೆ ಹೇತುವಾದ ಉಪಾಸನೆಗೂ ಅದು ಆವಶ್ಯಕವೆಂದೂ, ಪ್ರಾಪ್ಯನಾದ ವೈಕುಂಠಪತಿಯ ಉಪಾಸನೆಯು ತತ್ಕ್ರತು ನ್ಯಾಯ ಪ್ರಕಾರ ಆವಶ್ಯಕವೆಂದೂ ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಅಥವಾ, ಮೊದಲು **ತತ್ವತೋ ಅಭಿಜಾನತಿ** ಎಂದು ಹೇಳಿ, ಪುನಃ **ತತ್ವತೋ ಜ್ಞಾತ್ವಾ** - ಯಥಾರ್ಥವಾಗಿ ಸಾಕ್ಷಾತ್ಕರಿಸಿ ಎಂದು ಅನುವಾದ ಮಾಡುವದರಿಂದ

ಅನೇಕ ಅಪಸಿದ್ಧಾಂತಗಳು ಲೋಕದಲ್ಲಿ ಸರ್ವೇಶ್ವರನಾದ ತನ್ನನ್ನು ವ್ಯತ್ಯಸ್ತವಾಗಿ ತಿಳಿದಿರುವದರಿಂದ ಹಾಗೆ ತತ್ತ್ವತಃ ಯಥಾರ್ಥವಾಗಿ ತಿಳಿಯುವ ಸಂದರ್ಭದಲ್ಲಿ ತಮ್ಮ ಆದರಾತಿಶಯ್ಯವನ್ನೂ ಅಂತಹ ಅಧಿಕಾರಿಯಲ್ಲಿ ತಮಗಿರುವ ಪ್ರೀತ್ಯತಿಶಯವನ್ನೂ ಪ್ರದರ್ಶಿಸುವದಕ್ಕಾಗಿಯೂ ದ್ವಿರುಕ್ತಿಯು. ಇಲ್ಲಿ ಯಾವಾನ್ ಯಶ್ಚಾಸ್ಮಿ ಎಂಬಲ್ಲಿರುವ ಯಚ್ಛಬ್ದಗಳು "ಯತೋವಾ ಇಮಾನಿ ಭೂತಾನಿ ಜಾಯನ್ತೆ ಯೇನಜಾತಾನಿ ಜೀವನ್ತಿ ಯತ್ಪ್ರಯನ್ತ್ಯಭಿ ಸಂವಿಶನ್ತಿ ತದ್ವಿಜಿಜ್ಞಾಸಸ್ವ ತದ್ಬ್ರಹ್ಮ" ಎಂಬ ತೈತ್ತರೀಯ ಶ್ರುತಿಯನ್ನು ಸ್ಮರಿಸುವಹಾಗೆ ಮಾಡುವದಲ್ಲದೆ, ಇಲ್ಲಿ ಜಗತ್ಕಾರಣನೇ ಧ್ಯೇಯನೆಂದು ಹೇಳುವಹಾಗೆ ಈ ಶ್ಲೋಕದಲ್ಲಿಯೂ ಜಗತ್ಕಾರಣನಾದ ತಾನೇ ಉಪಾಸ್ಯನೆಂದು ಉಪದೇಶಿಸಲ್ಪಟ್ಟ, ಪ್ರಸಿದ್ಧಾರ್ಥಕಗಳಾಗಿವೆ.

ಯಾವಾಗ ಸರ್ವೋತ್ಕೃಷ್ಟದೆಶೆಯನ್ನು ಭಕ್ತಿಯು ಹೊಂದುತ್ತದೋ ಆಗ ಪರಬ್ರಹ್ಮ ಸಾಕ್ಷಾತ್ಕಾರ ಉಂಟಾಗುತ್ತದೆಂದು ಹಿಂದೆ ಹೇಳಿ, ಅನಂತರಂ - ಅಂತಹ ಸಾಕ್ಷಾತ್ಕಾರವು ಪ್ರಾಪ್ತನಾದನಂತರ. ತತ್‌ವಿಶತೇ - ಪರಮಪದವನ್ನು ಪ್ರವೇಶಿಸುವನು; ಅಥವಾ ಅನಂತರಂ - ಅನಂತರದಲ್ಲಿ ತತ್ - ಆ ಪ್ರಸಿದ್ಧವಾದ ಪದವನ್ನು, ವಿಶತೇ - ಪ್ರವೇಶಿಸುತ್ತಾನೆ, ದಿವ್ಯ ವೈಕುಂಠವನ್ನು ಸೇರಿ ನನ್ನನ್ನು ಪ್ರಾಪ್ಯವಾಗಿ ಹೊಂದುವನೆಂಬರ್ಥವು ಹೀಗೆ ಅರ್ಥಮಾಡಲು ಆಧಾರವೇನು ? ಎಂದರೆ ಇದನ್ನೇ ಮುಂದಿನ ಶ್ಲೋಕದಲ್ಲಿ "ಅಪ್ನೋತಿ ಶಾಶ್ವತಂ ಪದ ಮವ್ಯಯಮ್" ಎಂದು ವಿವರಿಸಿರುವದರಿಂದ ಬೇರೆ ವಿಧವಾಗಿ ಅರ್ಥಮಾಡಲು ಸಾಧ್ಯವಿಲ್ಲವು. ಹೀಗೆ ಅರ್ಥಮಾಡುವದಕ್ಕೂ ಸಹ ಸ್ವಲ್ಪ ತೊಂದರೆಯುಂಟಲ್ಲಾ; ಹೇಗೆಂದರೆ ಪೂರ್ವಾರ್ಧದಲ್ಲಿ ಮಾಂ ಎಂದು ಉತ್ತಮ ಪುರುಷ ಪ್ರಯೋಗವಿರುವದರಿಂದ ವಿಶತೇ ಮಾಂ ಎಂದು ಉತ್ತರಾರ್ಧದಲ್ಲಿರಬೇಕಲ್ಲವೆ ? ವಿಶತೇ ತತ್ ಎಂದು ನಪುಂಸಕಲಿಂಗವು ಸರಿಹೋಗುವದಿಲ್ಲವಾಗಿ ತತ್ ಎಂದರೆ ಪರಬ್ರಹ್ಮವನ್ನು (ಪ್ರಸಿದ್ಧನಾದ) ಪ್ರವೇಶಿಸುವನು ಎಂದು ಅದ್ವೈತಿಗಳು ಅರ್ಥಮಾಡಬಹುದಾದ ಅರ್ಥವು ಸರಿಹೊಗುವದಿಲ್ಲವು. ಆದುದರಿಂದ ತತ್ ಎಂದರೆ ಅಪ್ರಸಿದ್ಧ ದಿವ್ಯ ವೈಕುಂಠವನ್ನು ಪ್ರವೇಶಿಸುವನು ಎಂದು ಅರ್ಥಮಾಡುವದರಲ್ಲಿ ಈ ವ್ಯಾಕರಣ ವಿರುದ್ಧ ದೋಷವು ಇರುವದಿಲ್ಲವು. ಇವೆರಡು ಅರ್ಥಗಳನ್ನು ತ್ಯಜಿಸಿ ತದನಂತರಂ - ಅದಾದನಂತರ, ಆಮೇಲೆ, ವಿಶತೇ - ಬ್ರಹ್ಮವನ್ನು ಪ್ರವೇಶಿಸುತ್ತಾನೆಂಬರ್ಥವು ಸರಿಯಲ್ಲವು. ವಿಶತೇ ಶಬ್ದವು ಪ್ರವೇಶವೆಂಬರ್ಥವನ್ನು ಬೋಧಿಸುವದರಿಂದ ಪ್ರದೇಶವನ್ನು ಅಪೇಕ್ಷಿಸುವದರಿಂದ ದಿವ್ಯ ವೈಕುಂಠವನ್ನು ವಿಶತೇ ಎಂಬ ಭಾವವು ವ್ಯಕ್ತವು. "ತದ್ವಿಷ್ಣೋಃ ಪರಮಂಪದಮ್" ವಿಶತೇ ಎಂಬರ್ಥವು. ಛಾಂದೋಗ್ಯದಲ್ಲಿ "ಬ್ರಹ್ಮಲೋಕಮಭಿಸಂಪದ್ಯತೇ, ನಚ ಪುನರಾವರ್ತತೇ, ನಚ ಪುನರಾವರ್ತತೇ ಎಂದು ಹೇಳಲ್ಪಟ್ಟಿರುತ್ತದೆ.

ಇಲ್ಲಿ ವಿಶತೇತತ್ ಎಂಬುದಕ್ಕೆ ಪರಬ್ರಹ್ಮವನ್ನೇ ಪ್ರವೇಶಿಸಿ ಸ್ವರೂಪೈಕ್ಯವನ್ನು ಹೊಂದುತ್ತದೆ ಎಂಬರ್ಥವು ಸುತರಾಂ ಕೂಡುವದಿಲ್ಲವು. ಏಕೆಂದರೆ ಈ ಗೀತೆಯಲ್ಲೇ ಅನೇಕ ಕಡೆ ಪ್ರಾಪ್ತಪ್ರಾಪ್ಯರಿಗೆ ಭೇಧವು ಪ್ರೋಕ್ತವಾಗಿರುವದರಿಂದ. ಭೇಧಗಳನ್ನೇ "ಮಾಮೇವೈಷ್ಯಸಿ", "ಯಾನ್ತಿಮಾಮಪಿ" "ತ್ವಾಂ ಮೋಕ್ಷಯಿಷ್ಯಾಮಿ" ಉತ್ತಮಃಪುರುಷಸ್ತ್ವನ್ಯಃ" ಇತ್ಯಾದಿ ಪ್ರಮಾಣಗಳಿಂದ ತೋರಿಬರುವದರಿಂದ ಲೋಕದಲ್ಲೆಲ್ಲಾ ಆತ್ಮ ಒಬ್ಬನೇ ಎಂಬ ವಾದವೂ ಕೂಡುವದಿಲ್ಲವು. ಸಾಯುಜ್ಯದಲ್ಲಿ ಸಾಲೋಕ್ಯವೂ ಅಡಗಿರುವದರಿಂದ ಪರಮಪದವನ್ನು ಪ್ರವೇಶಿಸುತ್ತಾನೆಂದೂ ಅರ್ಥಮಾಡಬಹುದು. "ಬ್ರಹ್ಮಣಸ್ಸಾಯುಜ್ಯಗ್‌ಂ ಸಲೋಕತಾಂ ಯನ್ತಿ" ಎಂಬ (ಕಾಠಕ) ವಾಕ್ಯವು ಇಲ್ಲಿ ಅನುಸಂಧೇಯವು. ಅದೂ ಅಲ್ಲದೆ ಈ ವಿಶತೇತದನಂತರಂ ಎಂಬುದು ಮುಂದಿನ ಶ್ಲೋಕದಲ್ಲಿ "ಅವಾಪ್ನೋತಿ ಶಾಶ್ವತಂ ಪದ ಮವ್ಯಯಮ್" ಎಂದು ವ್ಯಾಖ್ಯಾತವಾಗಿರುವದರಿಂದ, ಯಶ್ಚ ಯಾವಾನ್ ಇತ್ಯಾದಿ ಪ್ರಯೋಗಗಳಿಂದ ಪರ

**ಭಾ.** **ಸ್ವರೂಪತಃ ಸ್ವಭಾವತಶ್ಚ ಯೋಽಹಂ, ಗುಣತೋ ವಿಭೂತಿತೋಽಪಿ ಯಾವಾಂಶ್ಚಾಹಂ**, ತಂ **ಮಾಮ್ ಏವಂ ರೂಪಯಾ ಭಕ್ತ್ಯಾ ತತ್ತ್ವತೋಽಭಿಜಾನಾತಿ, ಮಾಂ** ತತ್ತ್ವತೋ **ಜ್ಞಾತ್ವಾ**, ತದನಂತರಂ **ತತ್ತ್ವಜ್ಞಾನಾನಂತರಂ, ತತೋ - ಭಕ್ತಿ**

---

ಬ್ರಹ್ಮನು ಸವಿಶೇಷಣನೇ ವಿನಾ ನಿರ್ವಿಶೇಷಣನಲ್ಲವು ಎಂಬುದೂ ಈ ಶ್ಲೋಕದಿಂದ ತೋರಿಬರುತ್ತದೆ. "**ತಸ್ಮಿನ್ಯದನ್ತಸ್ತದುಪಾಸಿತವ್ಯಂ**" (ತೈ. ನಾ.) ಎಂದು ತೈತ್ತಿರೀಯದಲ್ಲೂ "**ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮದಹರೋಽಸ್ಮಿನ್ನಂತರ ಆಕಾಶಸ್ತಸ್ಮಿನ್ಯದನ್ತಸ್ತದನ್ವೇಷ್ಟವ್ಯಂ ತದ್ವಾವವಿಜಿಜ್ಞಾಸಿತವ್ಯಂ**" ಎಂದು ಛಾಂದೋಗ್ಯದಲ್ಲೂ ಹೇಳಿರುವಹಾಗೆ ಪರಮಾತ್ಮನ ದಿವ್ಯ ಮಙ್ಗಳ ವಿಗ್ರಹವನ್ನೂ ಉಪಾಸಿಸುವದಲ್ಲದೆ ಆತನು ಶ್ರಿಯಃಪತಿತ್ವಾದಿ ಸ್ವರೂಪನಿರೂಪಕ ಧರ್ಮಗಳನ್ನುಳ್ಳವನು ಹೇಯಪ್ರತ್ಯನೀಕತ್ವ, ಕಲ್ಯಾಣಗುಣಾಕರತ್ವ ಸರ್ವವಿಭೂತಿಯುಕ್ತತ್ವಾದಿಗಳಿಂದ ಪರಿಪೂರ್ಣನಾಗಿರುವನುಎಂದು ಉಪಾಸಿಸತಕ್ಕದ್ದೆಂಬುದೂ **ಯಾವಾನ್ಯಶ್ಚಾಸ್ಮಿ** ಎಂಬ ಪ್ರಯೋಗದಿಂದ ಸೂಚಿಸಲ್ಪಟ್ಟಿತು. ಮೇಲಿನ ಶ್ರುತ್ಯರ್ಥವೇನೆಂದರೆ ನಮ್ಮ ಶರೀರವು ಪರಬ್ರಹ್ಮನಿಗೆ ಆವಾಸಸ್ಥಾನವಾಗಿ ಬ್ರಹ್ಮಪುರವೆಂದು ಹೇಳಲ್ಪಟ್ಟಿತು. ಅದರಲ್ಲಿ ಪುಂಡರೀಕವೆಂದರೆ ಕಮಲವು, ತತ್ಸದೃಶವಾದ ಹೃದಯವುಂಟು; ಅದರಲ್ಲಿ ಸರ್ವಜ್ಞನಾಗಿ ಸರ್ವ ಶಕ್ತನಾಗಿ ಆಶ್ರಿತ ವಾತ್ಸಲ್ಯೈಕ ಜಲಧಿಯಾಗಿ ಉಪಾಸಕನ ಅನುಗ್ರಹಕ್ಕಾಗಿ ಜೀವಾತ್ಮನ ದೇಹದ ಹೃದಯವೆಂಬ ದೇವಾಲಯದಲ್ಲಿ ವಸಿಸುವನೆಂದು ತಿಳಿದು, ದಹರಾಕಾಶ ಶಬ್ದವಾಚ್ಯನಾದ ಈ ಪರಮ ಪುರುಷನನ್ನೂ ಉಪಾಸಿಸುವದಲ್ಲದೆ, ಆತನಲ್ಲಿರುವ ಹೇಯಪ್ರತ್ಯನೀಕತ್ವ ಕಲ್ಯಾಣಗುಣಜಾತತ್ವವೂ ಉಪಾಸಿಸತಕ್ಕದ್ದು ಎಂಬರ್ಥವು. ದಹರ ವಿದ್ಯೆಯಲ್ಲಿ ಹೀಗೆ ಹೇಳಲ್ಪಟ್ಟಿರುತ್ತದೆ.

**ಭಾಷ್ಯಾರ್ಥವು**—ಹಿಂದೆ ಹೇಳಿದ ರೀತಿಯಲ್ಲಿ ಕರ್ಮಯೋಗವನ್ನನುಷ್ಠಿಸಿ, ಆತ್ಮಾವಲೋಕನವುಂಟಾಗಿ ಪರಭಕ್ತಿ ಎಂದು ಹೇಳಿಸಿಕೊಳ್ಳುವ ಐಕಾನ್ತ್ಯಭಕ್ತಿಯಿಂದ ಮಾಡುವ ಉಪಾಸನ ಶಕ್ತಿಯು ದೊರೆಯುವದರಿಂದ ಮೊದಲುಂಟಾಗುವ ಫಲವನ್ನೂ ಅನಂತರ ಉಂಟಾಗುವ ಫಲವನ್ನೂ ತಿಳಿಸುತ್ತಾರೆ. ಪೂರ್ವಾರ್ಧದಿಂದ ಮೊದಲುಂಟಾಗುವ ಫಲವೂ, ಉತ್ತರಾರ್ಧದಿಂದ ಅನಂತರ ಉಂಟಾಗುವ ಫಲವೂ ಹೇಳಲ್ಪಡುತ್ತವೆ. **ಸ್ವರೂಪತಃ ಸ್ವಭಾವತಶ್ಚ ಯೋಽಹಂ**-ಇಲ್ಲಿ **ಸ್ವರೂಪತಃ** ಎಂಬುದರಿಂದ **ಸ್ವರೂಪನಿರೂಪಕ** ಧರ್ಮಗಳೂ, **ಸ್ವಭಾವತಃ** ಎಂಬುದರಿಂದ ನಿರೂಪಿತ ಸ್ವರೂಪವಿಶೇಷಣಗಳಾದ ಜ್ಞಾನ ಶಕ್ತ್ಯಾದಿ ಕಲ್ಯಾಣಗುಣಗಳು ಹೇಳಲ್ಪಟ್ಟವು. ಇವು **ಯಶ್ಚ** ಎಂಬ ಪ್ರಸಿದ್ಧಾರ್ಥ ಸೂಚಕದಿಂದ ವ್ಯಕ್ತವು. **ಯಾವಾನ್ಯಶ್ಚಾಸ್ಮಿ** ಎಂಬ ಪ್ರಯೋಗಗಳು ಸರ್ವೇಶ್ವರನ ಕಲ್ಯಾಣಗುಣಾಕರತ್ವವನ್ನು ವ್ಯಕ್ತವಾಗಿ ಬೋಧಿಸುವಾಗ ಆತನು ನಿರ್ಗುಣನು, ಏನೊಂದು ಗುಣವೂ ಇಲ್ಲದವನೆಂಬ ವಾದವು ಅಶಾಸ್ತ್ರೀಯವು; ಶಾಸ್ತ್ರಗಳು ಆತನನ್ನು ನಿರ್ಗುಣನೆಂದೇನೋ ಹೇಳುತ್ತವೆ. ಅಭಿಪ್ರಾಯವೇನೆಂದರೆ, ಇಲ್ಲಿನ ಹೇಯಗಳಾದ ಪ್ರಾಕೃತಗುಣಗಳಿಲ್ಲದವನೆಂದು ಹೇಳುತ್ತವೆ. ಇದು **ಯಶ್ಚಾಸ್ಮಿ** ಎಂಬುದರ ವ್ಯಾಖ್ಯಾನವು; ನಾನು ಸ್ವರೂಪದಿಂದಲೂ ಸ್ವಭಾವದಿಂದಲೂ ಎಂತವನೋ, **ಗುಣತಃ ವಿಭೂತಿತೋಽಪಿ ಯಾವಾಂಶ್ಚಾಹಂ** – ಕಲ್ಯಾಣಗುಣಜಾತದಿಂದಲೂ ಅಪಾರಾವ್ಯಪ್ತ ವಿಭೂತಿಯಿಂದಲೂ ಎಂತಹ ಮಹಿಮೆಯುಳ್ಳವನೋ, ತಂ **ಮಾಂ** - ಅಂತಹ ನನ್ನನ್ನು, **ಭಕ್ತ್ಯಾ** - ಮೇಲೆ ಹೇಳಿದ ಪರಭಕ್ತಿಯ ಮೂಲಕ, **ತತ್ತ್ವತಃ** - ಯಥಾರ್ಥವಾಗಿ, ಹೇಗೆ ಇರುವೆನೋ ಹಾಗೆಯೇ **ಅಭಿಜಾನಾತಿ** - ತಿಳಿಯುವನು ಎಂದರೆ ಸಾಕ್ಷಾತ್ಕರಿಸುವನು. **ಯೋಽಹಂ** – ಎಂಬುದರಿಂದ ಸ್ವರೂಪನಿರೂಪಕ ಧರ್ಮಗಳೂ, ನಿರೂಪಿತ ಸ್ವರೂಪವಿಶೇಷಣಗಳೂ ಹೇಳಲ್ಪಟ್ಟವೆಂಬ ಭಾವ

**ತತೋ ಮಾಂ ವಿಶತೇ – ಪ್ರವಿಶತಿ ;** ತತ್ತ್ವತಸ್ಸ್ವರೂಪ ಸ್ವಭಾವಗುಣ ವಿಭೂತಿ ದರ್ಶನೋತ್ತರ ಕಾಲಭಾವಿನ್ಯಾ ಅನವಧಿಕಾತಿಶಯ ಭಕ್ತ್ಯಾ ಮಾಂ ಪ್ರಾಪ್ನೋತಿ

---

ದಿಂದ ಹೀಗೆ ವ್ಯಾಖ್ಯಾನವು. ಆದುದರಿಂದ ಪರಮಪುರುಷನು ನಿರ್ಗುಣನೆಂಬ ವಾದವನ್ನು ನಿರಾಕರಿಸುವದಕ್ಕೂ ಹಾಗೆ ವ್ಯಾಖ್ಯಾನವು. ಗುಣಗಳಿಲ್ಲದೆ ವಸ್ತುಸ್ಥಿತಿಯೇ ಇಲ್ಲವೆಂಬುದು ಯತಿವರ್ಯರ ಸಿದ್ಧಾಂತವು. ಗುಣವಿಲ್ಲದ ಪರಬ್ರಹ್ಮನನ್ನು **ತತ್ತ್ವತಃ ಯಶ್ಚ ಯಾವಾಂಶ್ಚ** ಎಂದು ಶಾಸ್ತ್ರಗಳೂ ಉಪದೇಶಿಸಲಾರವು. ತತ್ತ್ವದರ್ಶಿಗಳಾದ ಜ್ಞಾನಿಗಳೂ ಇರಲಾರರು. ಆ ಕಾರಣದಿಂದ ಉಪದೇಶಿಸಲಾರರು. ಆ ವಾದಕ್ಕೆ ಈ ಶ್ಲೋಕವೂ ಈ ಶ್ರೀ ಕೃಷ್ಣೋಕ್ತಿಯೂ ಅರ್ಥವಿಲ್ಲವಾಗುವುವು. ಶ್ರೀಕೃಷ್ಣನು ಸಗುಣಬ್ರಹ್ಮವೆಂದು ಒಪ್ಪುವೆವು ಎಂದರೆ ಆಗ ನಿರ್ಗುಣ ಬ್ರಹ್ಮ ಬೇರೆ ಎಂಬುದಾಗಿ ಅದ್ವೈತವಾದ ಹಾನಿಯು. ಪರಬ್ರಹ್ಮಸ್ವರೂಪ ಶೋಧಕ ವಾಕ್ಯಗಳುಂಟು. "**ಸತ್ಯಂ ಜ್ಞಾನಮನಂತಂ ಬ್ರಹ್ಮ**" ಇತ್ಯಾದಿಗಳು, ಇವುಗಳಿಂದ ಆತನ ಸ್ವರೂಪವನ್ನು ತಿಳಿಸುವ ಧರ್ಮಗಳುವುವು. ಇಂತಹ ಸ್ವರೂಪ ಧರ್ಮಗಳಿಂದ ಆತನ ಸ್ವಭಾವಗಳು ಎಂತವು ಎಂಬುದನ್ನೂ ತಿಳಿಯುತಕ್ಕದ್ದು. ಹೇಗೆಂದರೆ ಸರ್ವಜ್ಞನಾದುದರಿಂದ ತನ್ನನ್ನು ಧ್ಯಾನಿಸುವನೆಂದು ತಿಳಿಯುವನು, ಆದುದರಿಂದ ಆತನು ಕೃತಜ್ಞನು. ಆನಂದಸ್ವರೂಪನಾದುದರಿಂದ ನಮ್ಮನ್ನು **ಆನಂದಯಾತಿ** ನಮ್ಮನ್ನು ಆನಂದಗೊಳಿಸುವ ಸ್ವಭಾವವುಳ್ಳವನು ಇತ್ಯಾದಿ. **ಯಾವಾಂಶ್ಚ** ಎಂಬುದರಿಂದ ಆತನು ದಯಾ, ವಾತ್ಸಲ್ಯ, ಸೌಲಭ್ಯ, ಸೌಶೀಲ್ಯ, ಔದಾರ್ಯಾದಿ ಕಲ್ಯಾಣ ಗುಣಜಾತ ವಿಶಿಷ್ಟನೆಂದೂ ವಿಭೂತಿದ್ವಯ ವಿಶಿಷ್ಟನೆಂದೂ ಹೇಳಿದಂತಾಯಿತು. ಈ ದಹರವಿದ್ಯೆಯಲ್ಲಿ ತಿಳಿಯೋಣವೂ ಪ್ರತಿಯೊಂದು ಬ್ರಹ್ಮವಿದ್ಯೆಗೂ ಆವಶ್ಯಕವಾದುದರಿಂದ ಪರಮಾತ್ಮನನ್ನು ಉಪಾಸಿಸುವಾಗ ಹೀಗೆ ಸ್ವರೂಪ, ಗುಣ, ರೂಪ, ರೂಪಗುಣ, ವಿಭೂತಿಗಳಿಂದ ಪರಿಪೂರ್ಣನೆಂದೂ ಉಪಾಸಿಸಿದರೆ ಅಂತಹ ಪರಿಪೂರ್ಣ ಪರಬ್ರಹ್ಮವನ್ನು ಅನುಭವಿಸುವ ಸ್ಥಿತಿಯು ತತ್ಕ್ರತುನ್ಯಾಯದ ಪ್ರಕಾರ ಲಭಿಸುತ್ತದೆಂಬುದು ತಾತ್ಪರ್ಯವು. ಇದನ್ನೇ ಉತ್ತರಾರ್ಧದಿಂದ ಹೇಳುತ್ತಾರೆ. ಹೇಗೆ ಪರಿಪೂರ್ಣ ಬ್ರಹ್ಮದ ಸಾಕ್ಷಾತ್ಕಾರಾವಸ್ಥೆಯು ಯಾವಾಗ ಉಂಟಾಯಿತೋ ಅನಂತರ ಭಕ್ತಿಯು ಪರಮಾವಸ್ಥೆಯುಂಟಾಗಿ ಪರಮಪದಪ್ರಾಪ್ತಿಯುಂಟುಗುತ್ತದೆಂದು ಮುಂದೆ ಹೇಳುತ್ತಾರೆ. ಅಂತಹ ಭಕ್ತಿಯ ಪರಾಕಾಷ್ಠಾದಶೆಯು ಮುಕ್ತದಶೆಯಲ್ಲೂ ಉಂಟೆಂಬ ಅಭಿಪ್ರಾಯದಿಂದ ಹೇಳುತ್ತಾರೆ. **ಮಾಂ**-ಇಂತಹ ಸ್ವರೂಪರೂಪಗುಣವಿಭೂತಿ ವಿಶಿಷ್ಟನಾದ ನನ್ನನ್ನು **ತತ್ತ್ವತೋಽಜ್ಞಾತ್ವಾ**-ಭ್ರಮ ಸಂಶಯಾದಿಗಳು ಯಾವುದೂ ಇಲ್ಲದೆ ನಾನು ವಾಸ್ತವವಾಗಿರುವ ಹಾಗೆ ಸಾಕ್ಷಾತ್ಕರಿಸಿದರೆ, **ತದನಂತರಂ** ಎಂದರೆ ತತ್ತ್ವಜ್ಞಾನಾನಂತರಂ ಹೀಗೆ ಪರಿಪೂರ್ಣ ಬ್ರಹ್ಮನಾದನನ್ನ ಯಥಾರ್ಥವಾದ ಸಾಕ್ಷಾತ್ಕಾರವುಂಟಾದನಂತರ **ತತಃ** ಎಂದರೆ **ಭಕ್ತಿತಃ** ಅಂತಹ ಭಕ್ತಿಯ ಮೂಲಕ **ಮಾಂ ವಿಶತೇ** ಎಂದರೆ **ಪ್ರವಿಶತಿ** - ಅಂತಹ ಪರಿಪೂರ್ಣ ಬ್ರಹ್ಮನಾದ ನನ್ನ ಪದವಾದ ದಿವ್ಯವೈಕುಂಠವನ್ನೇ ಪ್ರವೇಶಿಸುವನು; ನನ್ನ ಸಾಲೋಕ್ಯವನ್ನು ಹೊಂದುವನು. ಇಲ್ಲಿ **ತತಃ** ಎಂಬುದಕ್ಕೆ **ಭಕ್ತಿತಃ** ಎಂಬ ವ್ಯಾಖ್ಯಾನದಿಂದ ಹಿಂದೆ ೧೧–೫೪ ನೆಯ ಶ್ಲೋಕದಲ್ಲಿ ಹೇಳಿದುದನ್ನು ಇಲ್ಲಿಯೇ ಉಪಪಾದಿಸಿ ಹೇಳುತ್ತಾರೆ. "**ಭಕ್ತ್ಯಾತ್ವನನ್ಯಯಾ**" ಎಂದಾರಂಭಿಸಿ, "**ತತ್ತ್ವೇನಪ್ರವೇಷ್ಟುಂಚ ಪರಂತಪ**" ಎಂದು ಮುಗಿಸಿರುವ ಶ್ಲೋಕವನ್ನು ಸ್ಮರಿಸುವವರಾಗಿ ಹಾಗೆ ವ್ಯಾಖ್ಯಾನವು. ಈ ಶ್ಲೋಕವನ್ನೇ ಮುಂದೆ ಉದಾಹರಿಸುತ್ತಾರೆ. ಇಲ್ಲಿ **ತತಃ** ಎಂದು ಉತ್ತರಾರ್ಧದ ಆದಿಯಲ್ಲಿರುವವರಿಂದ, ಪರಮಾತ್ಮ ಸಾಕ್ಷಾತ್ಕಾರಕ್ಕೂ ಪರಭಕ್ತಿಯೇ ಹೇತುವೆಂದೂ ಅಂತಹ ವೃದ್ಧಿಹೊಂದಿದ ಭಕ್ತಿಯೇ ದಿವ್ಯ ವೈಕುಂಠಪ್ರವೇಶಕ್ಕೂ ಹೇತುವೆಂದು ತಿಳಿಸುವದಕ್ಕಾಗಿ, **ತತಃ**-

**ತ್ಯರ್ಥಃ.** ಅತ್ರ "ತತ" ಇತಿ ಪ್ರಾಪ್ತಿ ಹೇತುತಯಾ ನಿರ್ದಿಷ್ಟಾ ಭಕ್ತಿರೇವಾಭಿಧೀಯತೇ "ಭಕ್ತ್ಯಾತ್ವನನ್ಯಯಾ ಶಕ್ಯಃ" ಇತಿ ತಸ್ಯಾ ಏವ ತತ್ತ್ವತಃ ಪ್ರವೇಶ ಹೇತುತ್ವಾಭಿಧಾನಾತ್ ॥ ೫೫ ॥

---

**ಭಕ್ತಿತೋಽಜ್ಞಾತ್ವಾ ಭಕ್ತಿತೋಮಾಂ ವಿಶತೇ** ಪ್ರವಿಶತಿ ಎಂದು ಅನ್ವಯಿಸಿರುತ್ತಾರೆ. ಹಿಂದೆ ೧೧-೫೪ನೆಯ ಶ್ಲೋಕದಲ್ಲಿ ಹೇಳಿದುದನ್ನು ಇಲ್ಲಿಯೂ ಉಪಪಾದಿಸಿ ಹೇಳುತ್ತಾರೆ; "**ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ । ಜ್ಞಾತುಂ ದ್ರಷ್ಟುಂಚ ತತ್ತ್ವೇನ ಪ್ರವೇಷ್ಟುಂಚ ಪರನ್ತಪ**" ಎಂಬಲ್ಲಿರುವ **ಜ್ಞಾತುಂ ದ್ರಷ್ಟುಂಚ** ಎಂಬುದಕ್ಕೆ ಬದಲಾಗಿ ಇಲ್ಲಿ **ಅಭಿಜಾನಾತಿ, ಜ್ಞಾತ್ವಾ** ಎಂಬ ಶಬ್ದಗಳೂ **ಪ್ರವೇಷ್ಟುಂಚ** ಎಂಬುದಕ್ಕೆ ಬದಲಾಗಿ **ವಿಶತೇ** ಎಂಬ ಪ್ರಯೋಗವೂ ಇವೆ. ಈ ಶ್ಲೋಕದಿಂದ ತೋರಿಬರುವ ತಾತ್ಪರ್ಯವನ್ನು ಮುಂದಿನ ವಾಕ್ಯದಿಂದ ವ್ಯಕ್ತಪಡಿಸುತ್ತಾರೆ. **ತತ್ತ್ವತಃ ಸ್ವರೂಪ ಸ್ವಭಾವಗುಣ ವಿಭೂತಿ ದರ್ಶನೋತ್ತರ ಕಾಲಭಾವಿನ್ಯಾ** – ಹೀಗೆ ಯಥಾರ್ಥವಾದ ನನ್ನ ಸ್ವರೂಪ ಸ್ವಭಾವ ಗುಣ ವಿಭೂತಿಗಳ ಸಾಕ್ಷಾತ್ಕಾರ ಉಂಟಾದ ನಂತರ ಪ್ರಾಪ್ತವಾಗುವ, **ಅನವಧಿಕಾತಿಶಯ ಭಕ್ತ್ಯಾ** - ಅವಧಿಯಿಲ್ಲದ ನಿರತಿಶಯವಾದ ಪರಮಭಕ್ತಿ ಎಂದು ಹೇಳಿಸಿಕೊಳ್ಳುವ ಭಕ್ತಿಯಿಂದ **ಮಾಂ ಪ್ರಾಪ್ನೋತೀತ್ಯರ್ಥಃ**–ದಿವ್ಯ ವೈಕುಂಠದಲ್ಲಿ ಪರವಾಸುದೇವರೂಪದಲ್ಲಿ ಯಾವಾಗಲೂ "**ಕಿರೀಟಿನಂ ಗದಿನಂ ಚಕ್ರಹಸ್ತಂ**" ಎಂದು ಹಿಂದೆ (೧೧-೪೬) ಶ್ಲೋಕದಲ್ಲಿ ವರ್ಣಿಸಿರುವಹಾಗೆ, ಬಿಜಮಾಡಿಸಿರುವ ನನ್ನನ್ನು ಹೊಂದುವನು ಎಂಬರ್ಥವು. ಪರಿಪೂರ್ಣಬ್ರಹ್ಮಾನುಭವವನ್ನೂ ಮಾಡುತ್ತಾ ನಿತ್ಯಕೈಙ್ಕರ್ಯರತನಾಗಿರುವನು ಎಂಬ ತಾತ್ಪರ್ಯವು. ಸಾಕ್ಷಾತ್ಕಾರ ಉಂಟಾದ ನಂತರ ಇದು ಲಭಿಸುತ್ತದೆ ಎಂದು ಮೂಲದಲ್ಲಿ ತತಃ ಎಂಬ ಶಬ್ದವಿರುತ್ತದೆ, ಅದರ ತಾತ್ಪರ್ಯವೇನೆಂಬುದನ್ನು ಉಪದೇಶಿಸುತ್ತಾರೆ, **ಅತ್ರ** ಈ **ಶ್ಲೋಕದಲ್ಲಿ ತತ ಇತಿ** - ತತಃ ಎಂದು **ಪ್ರಾಪ್ತಿಹೇತುತಯಾ ನಿರ್ದಿಷ್ಟಾಭಕ್ತಿರೇವ**–ಪರಮಾತ್ಮ ಪ್ರಾಪ್ತಿಗೆ ಕಾರಣವಾಗಿ ಹೇಳಲ್ಪಟ್ಟ ಈ ಉತ್ಕೃಷ್ಟ ಭಕ್ತಿಯೇ, **ಅಭಿಧೀಯತೇ** ಹೇಳಲ್ಪಟ್ಟಿರುತ್ತದೆ. ಈ ಅಭಿಪ್ರಾಯಕ್ಕೆ ಹೇತುವೇನು ಎಂದರೆ ಹೇಳುತ್ತಾರೆ. "**ಭಕ್ತ್ಯಾತ್ವನನ್ಯಯಾ ಶಕ್ಯಃ**" ಎಂಬ ಗೀತಾ ೧೦-೫೪ನೆಯ ಶ್ಲೋಕದಲ್ಲಿ **ತಸ್ಯಾ ಏವ**-ಅಂತಹ ಪರಾಕಾಷ್ಠಾದೆಶೆಯನ್ನು ಹೊಂದಿದ ಭಕ್ತಿಗೇನೇ, ತತ್ತ್ವತಃ ಪ್ರವೇಶಹೇತುತ್ವಾ**ಭಿಧಾನಾತ್**–ಯಥಾರ್ಥವಾಗಿ ಪರಮಾತ್ಮಪ್ರಾಪ್ತಿಗೆ ಕಾರಣತ್ವವನ್ನು ಹೇಳಿರುವದರಿಂದ. ಆದುದರಿಂದ **ತತಃ** ಎಂಬುದಕ್ಕೆ ಅಂತಹ ಉತ್ಕೃಷ್ಟ ಭಕ್ತಿಯಿಂದಲೇ ಎಂದು ಅರ್ಥವನ್ನು ಹೇಳಬೇಕಾಗಿದೆ ಎಂಬ ಭಾವವು. ಇಷ್ಟುದೂರ ಈ ತತಃ ಎಂಬ ಶಬ್ದಕ್ಕೆ ವ್ಯಾಖ್ಯಾನವೇತಕ್ಕೆ ? ಎಂದರೆ, ಕೆಲವರು **ತತ್ತ್ವಮಸಿ** ಇತ್ಯಾದಿ ವಾಕ್ಯಜನ್ಯ ಜ್ಞಾನವೇ ಮುಖ್ಯವಾಗಿ ಮೋಕ್ಷಕ್ಕೆ ಹೇತುವೆಂದೂ, ಆ ಕಾರಣದಿಂದಲೇ ಈ ಶ್ಲೋಕದಲ್ಲಿ **ಅಭಿಜಾನಾತಿ,** ತತ್ತ್ವತೋಽಜ್ಞಾತ್ವಾ ಇತ್ಯಾದಿ ಪ್ರಯೋಗಗಳಿರುವುದೆಂದು ಅಭಿಪ್ರಾಯಪಡುವರು. ಇದು ಸರಿಯಲ್ಲವೆಂದೂ ಹೀಗೆ ಭಕ್ತಿಯಿಂದ ಉಪಾಸನೆಯನ್ನು ಮಾಡಿ ಅದು ಪರಮಾತ್ಮ ಸಾಕ್ಷಾತ್ಕಾರದೆಶೆಯನ್ನು ಹೊಂದಿದ ನಂತರ ಉಂಟಾಗುವ ಪರಮಭಕ್ತಿಯಿಂದಲೇ ಮೋಕ್ಷವೇ ವಿನಾ ಅನ್ಯಥಾ ಇಲ್ಲವೆಂದು ತಿಳಿಸುವದಕ್ಕಾಗಿ ಈ ವಾಕ್ಯದಲ್ಲಿ **ಪ್ರಾಪ್ತಿಹೇತುತಯಾ ನಿರ್ದಿಷ್ಟಾಭಕ್ತಿರೇವ** ಎಂಬ ಪ್ರಯೋಗವು. **ಏವ** ಕಾರದಿಂದ ವಾಕ್ಯಜನ್ಯ ಜ್ಞಾನವೆಂಬ ಇತರಾಭಿಪ್ರಾಯವನ್ನು ವ್ಯಾವರ್ತಿಸಿ ಹೇಳಿರುತ್ತಾರೆ. ಹಾಗೆ ಹೇಳಿರುವದು ತಮ್ಮ ಅಭಿಪ್ರಾಯಮಾತ್ರವೇ ಅಲ್ಲವು; ಗೀತಾಚಾರ್ಯರ ಅಭಿಪ್ರಾಯವೂ ಎಂದು **ಭಕ್ತ್ಯಾತ್ವನನ್ಯಯಾ ಶಕ್ಯಃ** ಹಿಂದೆ ೧೧ನೆಯ ಅಧ್ಯಾಯದ ಶ್ಲೋಕವನ್ನು ಉದಾಹರಿಸುತ್ತಾರೆ. "**ತತ್ತ್ವಮಸಿ**" ಎಂದು ಶ್ರುತಿಯು ಐಕ್ಯವನ್ನೇ ಹೇಳಿತು ಎಂದರೆ ಬ್ರಹ್ಮವಿದ್ಯೆಯಿಂದ

ಜೀವನೂ ಸಹ **ವೇದ್ಯನೆಂದೇ** ಏರ್ಪಡುತ್ತದೆ. ವಿದ್ಯಾವೇದ್ಯವಾದ ವಸ್ತುವು **ಕಾರಣಂತು ಧ್ಯೇಯಃ** ಎಂಬಲ್ಲಿ ಹೇಳಿರುವಹಾಗೆ, **ಬಹು ಭವನ ಸಙ್ಕಲ್ಪನಾಗಿ**, ಜಗತ್ತಿಗೆ ಕಾರಣಭೂತನಾಗಿ **ಕರಣಾಧಿಪಾಧಿಪನಾಗಿ** ಇರಬೇಕೆಂದೂ ಹೇಳಲ್ಪಟ್ಟಿರುವದೂ ಅಲ್ಲದೆ, ಈ ಐಕ್ಯವನ್ನು ಹೊಂದಿರುವವನಿಗೆ, **ಜಗದ್ವ್ಯಾಪಾರವರ್ಜಮ್** (ಶಾ ೪-೪, ೧೭) ಎಂದು ವ್ಯಾಸ ಸೂತ್ರದಲ್ಲಿ ಹೇಳಿರುವದರಿಂದ, **ವಿಶತೇ** ಎಂಬುದರಿಂದ ಸ್ವರೂಪೈಕ್ಯವನ್ನು ಶ್ರೀ ಕೃಷ್ಣ ಭಗವಾನರವರು ಉಪದೇಶಿಸಲಿಲ್ಲವೆಂಬುದು ಸ್ಪಷ್ಟವು. ಪರಮಾತ್ಮನನ್ನು ಆತನ ಸ್ವರೂಪರೂಪಗುಣವಿಭೂತಿಗಳಿಂದ ಯುಕ್ತವೆಂಬ ಜ್ಞಾನದಿಂದ ಐಕಾನ್ತ್ಯಭಕ್ತಿಯಿಂದ ಉಪಾಸನೆಯೂ ಇದರಿಂದುಂಟಾಗುವ ಉತ್ಕೃಷ್ಟರೂಪಭಕ್ತಿಯಿಂದ ಇಂತಹ ಪರಮಾತ್ಮ ಸಾಕ್ಷಾತ್ಕಾರವೂ, ಅನಂತರ ಭಕ್ತಿಯು ಪರಕಾಷ್ಠಾದೆಶೆಯನ್ನು ಹೊಂದುವದರಿಂದಲೇ ಅಂತಹ ಪರಿಪೂರ್ಣ ಬ್ರಹ್ಮ ಪ್ರಾಪ್ತಿಯೂ ಎಂಬುದೂ ಈ ಶ್ಲೋಕದ ಸಾರಾಂಶವು. ಈ ಶ್ಲೋಕದಲ್ಲಿ ಸರ್ವಕರ್ಮಗಳ ಪರಿತ್ಯಾಗಮೂಲಕ ಜ್ಞಾನ ನಿಷ್ಠೆಯೇ ಹೇಳಲ್ಪಟ್ಟಿತೆಂಬುದೇ ಸಾರಾಂಶವೆಂದು ಕೆಲವರು ಹೇಳುತ್ತಾರೆ; ಇಲ್ಲಿ ಸರ್ವಕರ್ಮಪರಿತ್ಯಾಗ ವಿಷಯವೇ ಇಲ್ಲವು; ಅದೂ ಅಲ್ಲದೆ ಹಿಂದೆಯೇ **ಯಜ್ಞದಾನತಪಃಕರ್ಮನತ್ಯಾಜ್ಯಂ ಕಾರ್ಯಮೇವತತ್** (೧೮ ೫) ಎಂದು ಹೇಳಿ, ಅಲ್ಲಿಂದ **ನಿಯತಸ್ಯತು ಸನ್ನ್ಯಾಸಃ ಕರ್ಮಣೋನೋಪಪದ್ಯತೇ** ಎಂದೂ ಹೇಳಿ, **ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ** ಎಂದು ಪರಿತ್ಯಾಗವನ್ನು ನಿಂದಿಸಿ ಹಾಗಾದರೆ ಕರ್ಮಸನ್ನ್ಯಾಸ ಅಥವಾ ತ್ಯಾಗವೆಂದರೆ, ಕರ್ಮಫಲತ್ಯಾಗವೆಂದು ೧೧ನೆಯ ಶ್ಲೋಕದಲ್ಲೂ ಹೇಳಿ, **ಸ್ವೇಸ್ವೇ ಕರ್ಮಣ್ಯಭಿರತಸ್ಸಂಸಿದ್ಧಿಂ ಲಭತೇ ನರಃ** ಎಂದು ಕೊನೆಗೆ ಸ್ಥಾಪಿಸಿರುವಾಗ, ಸಮಸ್ತ ಕರ್ಮಗಳನ್ನೆಲ್ಲಾ ಬಿಟ್ಟುಬಿಡಬಹುದೆಂಬ ಅಭಿಪ್ರಾಯವು ಹೇಗೆ ಗ್ರಾಹ್ಯವೋ ತಿಳಿಯದು. ನಿತ್ಯನೈಮಿತ್ತಿಕ ಕರ್ಮಗಳು ಉಪಾಸನಕ್ಕೆ ಮುಖ್ಯ ಅಙ್ಗಗಳೆಂದು ವ್ಯಾಸಸೂತ್ರದಲ್ಲಿ "**ಸರ್ವಾಪೇಕ್ಷಾಚ ಯಜ್ಞಾದಿ ಶ್ರುತೇರಶ್ವವತ್** (೩. ೪. ೨೬) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. "**ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾ**" ಮತ್ತು "**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ। ಏವಂತ್ವಯಿನಾನ್ಯಥೇತೋಽಸ್ತಿ ನಕರ್ಮಲಿಪ್ಯತೇ ನರೇ**" (ಈಶಾ. ೨) ಎಂಬ ಶ್ರುತಿಗಳೂ ಬ್ರಹ್ಮವಿದ್ಯೆಗೆ ಕರ್ಮಗಳು ಅಙ್ಗಗಳೆಂದು ಹೇಳುತ್ತವೆ; ಹಾಗೆಯೇ "**ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾ ಮೃತಮಶ್ನುತೇ**" ಎಂಬ ಶ್ರುತಿಯೂ ಬೋಧಿಸುತ್ತದೆ. ಇವುಗಳಿಗೆಲ್ಲಾ ಗಮನವನ್ನು ಕೊಡದೆ ಯಾವ ಕರ್ಮಗಳೂ ಜ್ಞಾನಿಗೆ ಆವಶ್ಯಕವಿಲ್ಲವೆಂಬ ಅಭಿಪ್ರಾಯವು ಶಾಸ್ತ್ರ ಸಮ್ಮತವಾದುದಲ್ಲವು. ಇನ್ನು ಕೆಲವರು **ತತ್ವತಃ ಅಭಿಜಾನಾತಿ** ಎಂಬುದಕ್ಕೆ ಯಥಾರ್ಥವಾಗಿ **ತನ್ನ ಯೋಗ್ಯತಾನುಸಾರ** ತಿಳಿಯುವನೋ ಎಂದು ಅರ್ಥಮಾಡಿರುತ್ತಾರೆ; ತನ್ನ ಯೋಗ್ಯತಾನುಸಾರ ತಿಳಿಯುವದು ಹೇಗೆ ಯಥಾರ್ಥವಾಗಿ ತಿಳಿಯೋಣವಾದೀತು ? ಮುಂದೆ ಉತ್ತರಾರ್ಧದಲ್ಲೂ **ತತ್ವತೋಜ್ಞಾತ್ವಾ** ಎಂದು ಇರುತ್ತದೆ. ತನಗೆ ಪೂರಾಯೋಗ್ಯತೆಯು **ತತ್ತ್ವತಃ** ತಿಳಿಯಲು ಇಲ್ಲದಿದ್ದರೆ, **ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ** (ಗೀ.೪-೩೪) ಎಂದು ಹೇಳಿರುವ ಹಾಗೆ ಜ್ಞಾನಿಗಳನ್ನಾಶ್ರಯಿಸಿದರೆ ಅವರುಗಳ ಮಹಿಮೆ ಅನುಗ್ರಹಾದಿಗಳಿಂದ ಸರಿಯದ ಯಥಾರ್ಥವಾದ ಜ್ಞಾನವು ಲಭಿಸುತ್ತದೆ; ಇಂತಹ ಯಥಾರ್ಥ ಜ್ಞಾನವನ್ನೇ **ಅಭಿಜಾನಾತಿ** ಎಂಬ ಶಬ್ದವು ಬೋಧಿಸುತ್ತದೆ. || ೫೫ ||

**ಭಾಷ್ಯಾವತಾರಿಕೆಯ ಅರ್ಥವು**—**ಏವಂ** - ಹಿಂದೆ ಅನೇಕ ಕಡೆಗಳಲ್ಲೂ, "**ಸ್ವೇಸ್ವೇ ಕರ್ಮಣ್ಯಭಿರತಃ**" ಎಂಬಲ್ಲೂ, ೪೫ನೆಯ ಶ್ಲೋಕಮೊದಲಗೊಂಡು ಇದುವರೆಗೂ ಉಪಪಾದಿಸಿ ಹೇಳಿದ ರೀತಿಯಲ್ಲಿ, **ವರ್ಣಾಶ್ರಮೋಚಿತ ನಿತ್ಯನೈಮಿತ್ತಿಕ ಕರ್ಮಣಾಂ** - ವರ್ಣಾಶ್ರಮಗಳಿಗೆ ಯೋಗ್ಯವೆಂದು ಶಾಸ್ತ್ರದಲ್ಲಿ ವಿಧಿಸಿರುವ ನಿತ್ಯನೈಮಿತ್ತಿಕ ಕರ್ಮಗಳಿಗೆ, **ಪರಿತ್ಯಕ್ತ ಫಲಾದಿಕಾನಾಂ**—

**ಭಾ. ಅವ.** ಏವಂ ವರ್ಣಾಶ್ರಮೋಚಿತ ನಿತ್ಯನೈಮಿತ್ತಿಕ ಕರ್ಮಣಾಂ, ಪರಿತ್ಯಕ್ತ ಫಲಾದಿಕಾನಾಂ, ಪರಮಪುರುಷಾರಾಧನ ರೂಪಾಣಾ ಮನುಷ್ಠಿತಾನಾಂ ವಿಪಾಕ ಉಕ್ತಃ ; ಇದಾನೀಂ ಕಾಮ್ಯಾನಾಮಪಿ ಕರ್ಮಣಾ ಮುಕ್ತೇನೈವ ಪ್ರಕಾರೇಣಾನುಷ್ಠಿತಾನಾಂ ಸ ಏವ ವಿಪಾಕ ಇತ್ಯಾಹ—

---

ಪರಿತ್ಯಾಗ ಮಾಡಲ್ಪಟ್ಟ ಫಲಕರ್ತೃತ್ವಮಮತೆಗಳುಳ್ಳವುಗಳಾಗಿಯೂ, **ಪರಮಪುರುಷಾರಾಧನರೂಪಾಣಾಂ** - ಪರಮಪುರುಷಾರಾಧನರೂಪವಾಗಿಯೂ, **ಅನುಷ್ಠಿತಾನಾಂ** - ಅನುಷ್ಠಿಸಲ್ಪಟ್ಟ ಕರ್ಮಗಳಿಗೆ, **ವಿಪಾಕ ಉಕ್ತಃ** - ಪ್ರಾಪ್ತವಾಗುವ ಭಕ್ತಿಯ ಪರಿಪಕ್ವದೆಶೆಗಳಾದ ಪರಭಕ್ತಿ ಪರಜ್ಞಾನ ಪರಮಾ ಭಕ್ತಿದೆಶೆಗಳು ಹೇಳಲ್ಪಟ್ಟವು. **ಇದಾನೀಂ** - ಈಗಲಾದರೋ **ಕಾಮ್ಯಾನಾಮಪಿ** - ಕಾಮ್ಯಕರ್ಮಗಳಿಗೂ ಕೂಡ, **ಉಕ್ತೇನೈವ ಪ್ರಕಾರೇಣಾ ನುಷ್ಠಿತಾನಾಂ** ಮೇಲೆ ಹೇಳಿದ ರೀತಿಯಲ್ಲಿ ಎಂದರೆ ಫಲ ಕರ್ತೃತ್ವಮಮತೆಗಳನ್ನು ತ್ಯಾಗಮಾಡಿ ಪರಮಪುರುಷಾರಾಧನವೆಂದು ಅನುಷ್ಠಿಸಿದವುಗಳಿಗೂ ಕೂಡ, **ಸ ಏವ ವಿಪಾಕಃ** - ಮೇಲೆ ಹೇಳಿದ ಪರಿಪಕ್ವದೆಶೆಯೇ, ಎಂದರೆ ಪರಭಕ್ತ್ಯಾದಿಗಳ ಉತ್ಪತ್ತಿಮೂಲಕ ಕ್ರಮೇಣ ಮೋಕ್ಷಪ್ರಾಪ್ತಿರೂಪ ವಿಪಾಕದೆಶೆಯೇ, **ಇತ್ಯಾಹ** - ಎಂದು ಈ ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ. ಇಲ್ಲಿ ವಿಪಾಕ ಶಬ್ದದಿಂದ ಹಿಂದಿನ ಎರಡು ಶ್ಲೋಕಗಳಲ್ಲೂ ಹೇಳಲ್ಪಟ್ಟ ಪರಜ್ಞಾನ ಪರಮಾಭಕ್ತಿಗಳ ಪ್ರಾಪ್ತಿವರೆಗೂ ಉಂಟಾಗುವ ಸ್ಥಿತಿಯು ಹೇಳಲ್ಪಟ್ಟಿತೆಂದು ಶ್ರೀ ನಿಗಮಾನ್ತದೇಶಿಕರವರ ಅಭಿಪ್ರಾಯವು.

ಕೆಲವರು ಹಿಂದಿನ ಶ್ಲೋಕಗಳಲ್ಲಿ ಜ್ಞಾನನಿಷ್ಠೆಯೂ, ಈ ಮುಂದಿನ ಶ್ಲೋಕಗಳಲ್ಲಿ ಕರ್ಮನಿಷ್ಠೆಯೂ ಹೇಳಲ್ಪಟ್ಟವೆಂದು ಭಾವಿಸುವರು. ಈ ಅಭಿಪ್ರಾಯವು ಸರಿಯಲ್ಲವೆಂದು ತಿಳಿಸುವದಕ್ಕಾಗಿ ಶ್ರೀ ಯತಿವರ್ಯರು ತಮ್ಮ ಅವತಾರಿಕೆಯನ್ನು ದಯಪಾಲಿಸುತ್ತಾರೆ. ಹಿಂದೆ ಹೇಳಿದುದೂ ಕೂಡ ಜ್ಞಾನರೂಪೋಪಾಸನೆಗೆ ಅಂಗವಾಗಿ ನಿತ್ಯನೈಮಿತ್ತಿಗಳ ಆವಶ್ಯಕತೆಯೇ ಮುಂದೆಯೂ ದೇಹಧಾರಣಾದಿಗಳಿಗೆ ಬೇಕಾದ ಐಹಿಕ ವ್ಯಾಪಾರಗಳೂ ದಾಂಪತ್ಯ ಭಾವದಿಂದ ಉಂಟಾಗುವ ಸರ್ವವಿಧ ಧರ್ಮಯುಕ್ತವಾದ ವ್ಯಾಪಾರಗಳೂ ಶಾಸ್ತ್ರ ಪ್ರೋಕ್ತವಾದ ಕಾಮ್ಯ ಕರ್ಮಗಳ ವಿಷಯವು ; ಇವುಗಳೂ ಕೂಡ ಫಲಕರ್ತೃತ್ವಮಮತಾ ತ್ಯಾಗ ಪೂರ್ವಕವಾಗಿ **"ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್। ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವ ಮದರ್ಪಣಮ್"** ಎಂಬಲ್ಲೂ, **"ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮ ಚೇತಸಾ। ನಿರಾಶೀ ರ್ನಿರ್ಮಮೋಭೂತ್ವಾ"** ಎಂಬಲ್ಲೂ,ಹೇಳಿರುವಹಾಗೆ ಅನುಷ್ಠಿಸಿದರೆ, ಬಂಧಕಗಳಾಗದೆ ಮೋಕ್ಷಕ್ಕೆ ಹೇತುವಾಗುವುವೆಂದೂ ಹೇಳಲ್ಪಡುತ್ತದೆ. ಶ್ರೀಮಚ್ಛಂಕರಾಚಾರ್ಯರವರು ಹಿಂದಿನ ೫೫ನೆಯ ಶ್ಲೋಕದಲ್ಲಿ ಕರ್ಮಗಳನ್ನು ತ್ಯಾಗಮಾಡಿ ಜ್ಞಾನನಿಷ್ಠೆಯನ್ನವಲಂಬಿಸತಕ್ಕದ್ದೆಂದು ಹೇಳಿ, ಈ ಶ್ಲೋಕದಲ್ಲಿ ಇಂತಹ ಯೋಗನಿಷ್ಠನು, ಒಂದುವೇಳೆ ನಿಷಿದ್ಧ ಕರ್ಮಗಳನ್ನಾಚರಿಸಿದರೂ ತನ್ನನ್ನು ಆಶ್ರಯಿಸಿದವನು ತನ್ನ ಅನುಗ್ರಹವನ್ನು ಹೊಂದಿ ವೈಷ್ಣವ ಪದವನ್ನು ಹೊಂದುತ್ತಾನೆಂದು ಹೇಳಿರುತ್ತಾರೆ ; ಹೀಗೆ ನಿಷಿದ್ಧ ಕರ್ಮವನ್ನು ಮನಃಪೂರ್ವಕಮಾಡಿದುದನ್ನು ಸ್ವಾಮಿಯು ಮನ್ನಿಸುವನೆಂದು ಅರ್ಥಮಾಡಿದರೆ ಲೋಕದಲ್ಲಿ ಧರ್ಮಾಚರಣೆಯೇ ಇಲ್ಲದೇ ಹೋಗಬಹುದು. ಪ್ರಪನ್ನನಾದವನು ಕೂಡ ಮನಃಪೂರ್ವಕ ನಿಷಿದ್ಧಾಚರಣೆಮಾಡಿದರೆ ಶಿಕ್ಷೆಯು ತಪ್ಪದು. ಆದರೆ **ತದಧಿಗಮ ಉತ್ತರ ಪೂರ್ವಾಘಯೋ ರಶ್ಲೇಷವಿನಾಶೌ ತದ್ವ್ಯಪದೇಶಾತ್"** (ಬ್ರ. ಸೂ. (೪-೧, ೧೩) ಎಂಬಲ್ಲಿ ಬ್ರಹ್ಮವಿದ್ಯೆಯು ಪ್ರಾಪ್ತವಾದ ಒಡನೆಯೇ ಅದಕ್ಕೆ ಪೂರ್ವದಲ್ಲಿ ಮಾಡಿದ ಪಾಪಗಳನಾಶವೂ ತದನಂತರ ಮಾಡುವ ನಿಷಿದ್ಧ ಕರ್ಮಗಳ ಅಲೇಪವೂ ಹೇಳಿದೆಯಲ್ಲಾ ಎಂದರೆ ಮನಃಪೂರ್ವಕವಾಗಿ ಮಾಡಿದ ನಿಷಿದ್ಧಕರ್ಮವು ಅಂಟುವದಿಲ್ಲವು ಎಂಬರ್ಥವಲ್ಲವು. ಪ್ರಾಮಾ

ದಿಕವಾಗಿ ನಿಷಿದ್ಧ ಕರ್ಮವು ಆಚರಿಸಲ್ಪಟ್ಟಿದೆ ಎಂಬುವದಿಲ್ಲವೆಂಬುದೀಗ ಸರಿಯಾದ ಅಭಿಪ್ರಾಯವು-ಪ್ರಪನ್ನನು ಬುದ್ಧಿಪೂರ್ವಕವಾಗಿ ನಿಷಿದ್ಧ ಕರ್ಮ ಮಾಡಿದರೆ ಪ್ರಾಯಶ್ಚಿತ್ತವು ಆವಶ್ಯಕವು. ಇದಕ್ಕೆ ಪ್ರಮಾಣಗಳು **"ಅಪಿಚೇತ್ಪಾತಕಂ ಕಿಂಚಿದ್ಯೋಗೀ ಕುರ್ಯಾತ್ಪ್ರಮಾದತಃ। ಯೋಗ ಮೇವಹಿ ಕುರ್ವೀತ" "ಪ್ರಾಯಶ್ಚಿತ್ತಿರಿಯಂ ಸಾತ್ರ ಯತ್ಪುನಶ್ಶರಣಂವ್ರಜೇತ್"** ಈ ನಿಷಿದ್ಧಾಚರಣರೂಪಪಾಪನಿವಾರಣಕ್ಕಾಗಿ ಯೋಗಿಯು ಉಪಾಸನೆಯನ್ನೂ, ಶರಣಾಗತಿ ನಿಷ್ಠನೂ ಆದಕ್ಕಾಗಿ ಪುನಶ್ಶರಣಾಗತಿಯನ್ನೂ, ಅನುಷ್ಠಿಸತಕ್ಕದ್ದೆಂದು ಈ ಮೇಲಿನ ಪ್ರಮಾಣಗಳು ಬೋಧಿಸುತ್ತವೆ. ಆದುದರಿಂದ ನಿಷಿದ್ಧಾಚರಣೆಯು ಭಗವಂತನ ನಿಗ್ರಹಸಂಪಾದಕವೇ ವಿನಾ ಅನುಗ್ರಹಸಂಪಾದಕವಲ್ಲವು. ಅದುದರಿಂದ ಅವರುಗಳ ಅವತಾರಿಕೆಯು ಸರಿಯಲ್ಲವೆಂದು ಭಾವಿಸಿ ತಮ್ಮ ಅವತಾರಿಕೆಯನ್ನು ದಯಪಾಲಿಸುತ್ತಾರೆ.

ಹಿಂದೆ ೪ನೆಯ ಅಧ್ಯಾಯದಲ್ಲಿ ಕರ್ಮಯೋಗಕ್ಕೆ ಎರಡು ವಿಧವಾದ ಆಕಾರವುಂಟೆಂದೂ ಅದರಲ್ಲಿ ಜ್ಞಾನಾಕಾರವು ಪ್ರಾಧಾನ್ಯವೆಂದೂ ಹೇಳಿ,ಜ್ಞಾನಾಕಾರತ್ವವೂ ಕೂಡ ಎರಡು ವಿಧವೆಂದೂ ಹೇಳಲ್ಪಟ್ಟಿತು. ಆತ್ಮಯಾಥಾತ್ಮ್ಯಜ್ಞಾನವೂ ಸರ್ವೇಶ್ವರನ ಜಗದಾತ್ಮಕತ್ವ ಜ್ಞಾನವೂ ಆವಶ್ಯಕವೆಂದು ಹೇಳಿ, ಇಂತಹ ಜ್ಞಾನದೊಂದಿಗೆ ತನಗೆ ಶೇಷಿಯಾದ ಪರಮಾತ್ಮನಲ್ಲಿ ಸಮಸ್ತ ಯಜ್ಞಯಾಗಾದಿ ಕರ್ಮಗಳನ್ನೂ ಸಮರ್ಪಿಸಿ,ಫಲಸಂಗಕರ್ತೃತ್ವಾದಿಗಳಿಲ್ಲದೆ ಮಾಡಿದರೆ, ಮೋಕ್ಷೋಪಾಯಕ್ಕೆ ಸಾಧನವೆಂದುಹೇಳಿ,ಆದರಿಂದ ಜ್ಞಾನಯೋಗಾಪೇಕ್ಷೆಯಿಲ್ಲದೆ ಜ್ಞಾನಯೋಗದಿಂದುಂಟಾಗುವ ಫಲವೇ ಇಂತಹ ಕರ್ಮಯೋಗಾನುಷ್ಠಾನದಿಂದಲೇ ಲಭಿಸುತ್ತದೆಂದು ಹೇಳಲ್ಪಟ್ಟಿತ್ತು. ಆ ಅಭಿಪ್ರಾಯವನ್ನೇ ಈಗ ಈ ಅಧ್ಯಾಯದ ೪೭ನೆಯ ಶ್ಲೋಕಗಳಲ್ಲಿ ಅನುವಾದ ಮಾಡಿ ಹೇಳಿದರು. ಇಂತಹ ಕರ್ಮಯೋಗಾನುಷ್ಠಾನದಿಂದ ಪ್ರಾಪ್ತವಾಗುವದು ಆತ್ಮಾವಲೋಕನವು. ಈ ಆತ್ಮಾವಲೋಕನದಿಂದ ಮೋಕ್ಷಸಾಧನವು ಹೇಗೆ ಉಂಟಾಗುತ್ತದೆಂದು ೪೯ನೆಯ ಪ್ರತಿಜ್ಞಾವಾಕ್ಯದಿಂದ ಹೇಳಿ,ಅದು ಹೇಗೆ ಎಂಬುದನ್ನು ಈ ೫೫ನೆಯ ಶ್ಲೋಕದವರೆಗೂ ಹೇಳಿ ಮುಗಿಸಿದರು. ಇವುಗಳ ಒಟ್ಟುತಾತ್ಪರ್ಯವು ಇಷ್ಟೇ. ಯಾವಾಗ ಈ ಆತ್ಮಸ್ವರೂಪದ ಯಥಾರ್ಥಜ್ಞಾನವು ಲಭಿಸಿತೋ, ಆಗ ಈ ಮೋಕ್ಷಾರ್ಥಿಗೆ ವೈರಾಗ್ಯವು ಬೆಳೆದು ಪರಮಾತ್ಮನಲ್ಲೇ ಮನಸ್ಸೂ, ಬುದ್ಧಿಯೂ ಸಹ, **ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ** ಎಂಬ ಹಿತೋಪದೇಶದ ಪ್ರಕಾರ, ಪರಮಾತ್ಮನಲ್ಲೇ ನಿಂತು, ಪರಮಾತ್ಮನನ್ನು ಆತನ ಸ್ವರೂಪಗುಣ ವಿಭೂತಿಗಳೊಂದಿಗೆ ಇರುವವನನ್ನಾಗಿ ಉಪಾಸಿಸುತ್ತಾ ಬರುವದರಿಂದ, ಪರಮಾತ್ಮಸಾಕ್ಷಾತ್ಕಾರ ರೂಪ ಭಕ್ತಿಯ ಉತ್ಕೃಷ್ಟಾವಸ್ಥವು ಲಭಿಸುತ್ತದೆ. ಅನಂತರ ಕ್ರಮೇಣ ಪರಮಾತ್ಮನನ್ನಗಲಿ ಇರಲೇ ಬಾರದೆಂಬ ಪರಮಾವಸ್ಥಾರೂಪವಾದ ಪರಮಾಭಕ್ತಿಯು ಜನಿಸಿ ದೇಹಾವಸಾನವುಂಟಾಗಿ ಹಿಂದಿನ ಶ್ಲೋಕದಲ್ಲಿ **ವಿಶತೇತದನಂತರಂ** ಎಂಬುದರಿಂದ ನಿರ್ಯಾಣ, ಅರ್ಚಿರಾದಿ ಮಾರ್ಗ ಗಮನ, ಮೂಲಕವಾಗಿ ದಿವ್ಯ ವೈಕುಂಠಲೋಕಪ್ರಾಪ್ತಿಯುಂಟಾಗುತ್ತದೆಂದು ಹೇಳಿದರು. ಹಿಂದೆ ಗೂಢವಾಗಿ ಹೇಳಿದುದನ್ನು ಈಗ ವಿಶದೀಕರಿಸಿ ಈ ಶ್ಲೋಕದಲ್ಲಿ **ಪ್ರಾಪ್ನೋತಿಶಾಶ್ವತಂ ಪದಮವ್ಯಯಮ್** ಎಂದು ಹೇಳಿದರು. ವೈಕುಂಠಲೋಕವೇ ಹೇಳಿದುದು ಎಂದು ತಿಳಿಸುವದಕ್ಕಾಗಿ **ಪದ್ಯತೇ ಇತಿ ಪದಮ್** ಎಂಬವ್ಯುತ್ಪತ್ತಿಯ ಮೂಲಕ ವ್ಯಾಖ್ಯಾನ ಮಾಡಿರುತ್ತಾರೆ. ಇದರಿಂದ ಸ್ವರೂಪೈಕ್ಯವಾದವೂ, ನಿತ್ಯವಿಭೂತಿ ಎಂಬುದು ಇಲ್ಲವೆಂಬವಾದವೂ, ನಿರಸ್ತವು. ಆ ಪದವನ್ನು ಶಾಶ್ವತವೆಂಬುದರಿಂದ, ಈ ಅಶಾಶ್ವತವಾದ ಲೋಕಕ್ಕಿಂತ ವಿಲಕ್ಷಣವಾದುದೆಂದು ಹೇಳಲ್ಪಟ್ಟಿತು. ॥೫೬॥

**ಮೂಲಕ್ಕೆ ಅರ್ಥವು—ಸರ್ವಕರ್ಮಾಣ್ಯಪಿ** - ನಿತ್ಯ ನೈಮಿತ್ತಿಕಗಳು ಮಾತ್ರವೇ ಅಲ್ಲದೆ ಮಿಕ್ಕ ಸಮಸ್ತ ಕರ್ಮಗಳನ್ನೂ ಕೂಡ ಎಂದರೆ ದೇಹಯಾತ್ರೆ. ಸಾಂಸಾರಿಕ ಮೊದಲಾದ ವಿಹಿತಕರ್ಮಗಳೂ ಮತ್ತು ಶಾಸ್ತ್ರಾನುಮತಿಯುಳ್ಳ ಸಮಸ್ತ ಕಾಮ್ಯಕರ್ಮಗಳನ್ನೂ ಕೂಡ, ಸದಾ ಯಾವಾಗಲೂ,

**ಮೂ. ಸರ್ವ ಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ**
**ಮತ್ಪ್ರಸಾದಾದಾಪ್ನೋತಿ ಶಾಶ್ವತಂ ಪದ ಮವ್ಯಯಮ್ ॥ ೫೬ ॥**

---

**ಕುರ್ವಾಣಃ** - ಮಾಡುವವನಾದರೂ, **ಮದ್ವ್ಯಪಾಶ್ರಯಃ** - ನನ್ನ ಆಶ್ರಯಣಯುಳ್ಳವನು **ಮತ್ಪ್ರಸಾದಾತ್** - ಆ ಕಾರಣದಿಂದ ನನ್ನ ಅನುಗ್ರಹವು ದೊರತು, ತನ್ಮೂಲಕವಾಗಿ, **ಶಾಶ್ವತಂ** ನಿತ್ಯವಾದ, **ಪದಮ್** - ಪ್ರಾಪ್ಯನಾದ ನನ್ನನ್ನೇ, ಅಥವಾ ನಿತ್ಯವಿಭೂತಿಯಾದ ದಿವ್ಯವೈಕುಂಠವನ್ನು, **ಆಪ್ನೋತಿ** - ಹೊಂದುವನು. ನನ್ನ ಸಾಯುಜ್ಯವನ್ನು ಹೊಂದುವನು ಎಂಬ ಅರ್ಥವು.

ಇಲ್ಲಿ **ಸರ್ವಕರ್ಮಾಣಿ** ಎಂದು ಹೇಳಿದ್ದರೂ ಹಿಂದೆ ನಿತ್ಯನೈಮಿತ್ತಿಕಗಳು ಹೇಳಲ್ಪಟ್ಟಿರುವದರಿಂದ ಪರಿಶೇಷವಾಗಿ ಗೋಬಲಿವರ್ದನ್ಯಾಯದ ಪ್ರಕಾರ **ಸರ್ವಕರ್ಮಾಣಿ** ಎಂಬ ಪ್ರಯೋಗದಿಂದ ವಿಹಿತ ಐಹಿಕಗಳೆಲ್ಲಾ ಹೇಳಲ್ಪಟ್ಟವು. ಭಕ್ತಿಯೋಗನಿಷ್ಠನಾದ ಮೋಕ್ಷಾರ್ಥಿಯು ತಾನು ಮಾಡುವ ಉಪಾಸನೆಗೆ ಅಂಗವಾಗಿ ನಿತ್ಯನೈಮಿತ್ತಕಗಳನ್ನು ಬಿಡದೆ ಅವಶ್ಯಕವಾಗಿ ಮಾಡತಕ್ಕದ್ದು ಮಾತ್ರವೇ ಅಲ್ಲದೆ, ದೇಹಯಾತ್ರೆಗಾಗಿಯೂ, ತನಗೆ ಸಂಬಂಧಪಟ್ಟವರ ಹಿತಕ್ಕಾಗಿಯೂ, ಅಥವಾ ಪರೋಪಕಾರ ಬುದ್ಧಿಯಿಂದ ಲೋಕಹಿತಕ್ಕಾಗಿಯೂ ಕೆಲವು ಶಾಸ್ತ್ರವಿಹಿತವಾಗಿ ಧರ್ಮದಿಂದ ಕೂಡಿರುವ ಕರ್ಮಗಳನ್ನು ಮಾಡುವನು. ಇಂತಹ ಕರ್ಮಗಳನ್ನು ಕುರಿತು ಈ ಶ್ಲೋಕದಲ್ಲಿ ಹೇಳಲ್ಪಡುತ್ತದೆ. ಇವೇನು ಬಂಧಕಗಳೋ ? ಎಂದರೆ ಹಿಂದೆಯೇ **"ಯತ್ಕರೋಷಿ"** ಎಂಬಲ್ಲಿ ಪರಿತ್ಯಕ್ತ ಫಲಕರ್ತೃತ್ವಮಮತೆಗಳಿಂದ ಮಾಡಿ ತನ್ನಲ್ಲಿ ಸಮರ್ಪಿಸಿದರೆ, ಆಗ ಮದ್ವ್ಯಪಾಶ್ರಯನೂ ಆಗಿ, ಉಪಾಯಾನುಷ್ಠಾನವೂ ಲಭಿಸಿ, ಕ್ರಮೇಣ ತನ್ನ ಸಾಯುಜ್ಯವನ್ನೇ ಹೊಂದುವನು ಎಂಬ ಉಪದೇಶವು.

ಈ ಶ್ಲೋಕದಲ್ಲಿ ಕೆಲವರಿಗೆ ಒಂದು ಸಂದೇಹವು ತೋರಬಹುದು. ಇಲ್ಲಿ **ಕುರ್ವಾಣಃ** ಎಂದು ಹೇಳಿರುವ ಅಧಿಕಾರಿಯು ಏನು ಮುಮುಕ್ಷುವೋ ? ಬುಭುಕ್ಷುವೋ ? ಎಂಬುದು ಸಂದೇಹವು. ಏಕೆಂದರೆ **ಸರ್ವಕರ್ಮಾಣಿ** ಎಂದು ಹೇಳಿರುವದರಿಂದ ಅಪ್ರಸ್ತುತವಾಗಿ ಬುಭುಕ್ಷುವನ್ನು ಕುರಿತು ಹೇಳಿತೇ ? ಎಂಬುದು. ಇಂತಹ ಸಂದೇಹಕ್ಕೆ ಕಾರಣವೇ ಇಲ್ಲವು. ಏಕೆಂದರೆ ಮುಂದೆ **ಮದ್ವ್ಯಪಾಶ್ರಯಃ** ಎಂಬುದರಿಂದಲೇ ಮುಮುಕ್ಷು ವಿಷಯವೇ ಎಂಬುದನ್ನು ಗ್ರಹಿಸಬಹುದು.

ಜ್ಞಾನಿಯಾದ ಭಕ್ತನೂ ಅವಶ್ಯಕವಾಗಿ ನಡೆಸಬೇಕಾದ ಅನೇಕ ಐಹಿಕಕರ್ಮಗಳೂ ಉಂಟು. ಅವುಗಳನ್ನೂ ಕೂಡ ಆತನು ಫಲಕರ್ತೃತ್ವ ಮಮತಾ ತ್ಯಾಗ ಪೂರ್ವಕವಾಗಿ ನಡೆಸುತ್ತಾನಾದುದರಿಂದ ಅವುಗಳು ಬಂಧಕಗಳಾಗದೆ ಪರಮಾತ್ಮನ ಪ್ರಸಾದದಿಂದ ಶಾಶ್ವತ ಪದ ಫಲದಾಯಕಗಳಾಗುವದರಲ್ಲಿ ಸಂದೇಹವಿಲ್ಲವೆಂಬ ಭಾವವು- ಮುಕ್ತಿಯನ್ನು ಹೊಂದಲು ಸಾಧನದ ಅನುಷ್ಠಾನದಲ್ಲಿರುವಾಗ **ಮತ್ಪ್ರಸಾದಾತ್** ಎಂದು ಹೇಳಿಕೊಂಡರಲ್ಲಾ, ಅದು ಹೇಗೆ ? ಎಂದರೆ ಈ ಚೇತನನು ಯಾವುದೋ ಒಂದು ಸುಕೃತದ ಬಲದಿಂದ ಉಪಾಯಾನುಷ್ಠಾನವನ್ನು ಅವಲಂಬಿಸಿರುತ್ತಾನೆ. ಅದನ್ನು ಸಮಗ್ರವಾಗಿ ನಡೆಸಿಕೊಡಬೇಕು. ಅದು ಅನುಗ್ರಹವಲ್ಲವೇ ? ಮತ್ತು ಲೆಖ್ಖ ಮಾಡಲು ಕೂಡ ಸಾಧ್ಯವಿಲ್ಲವಷ್ಟು ಜನ್ಮಗಳನ್ನೆತ್ತಿ,ಅವುಗಳಲ್ಲೆಲ್ಲಾ ಮಾಡಿದ ಪಾಪರಾಶಿಗಳೆಲ್ಲಾ ಪ್ರತಿಬಂಧಕಗಳಾಗಿ ಅವುಗಳಿಗಾಗಿ ಪ್ರಾಯಶ್ಚಿತ್ತಗಳ ಸಂಖ್ಯೆಯು ಅಸಾಧ್ಯವಾಗಿರುವ ಸಂದರ್ಭದಲ್ಲಿ, ತನ್ನನ್ನು ಆಶ್ರಯಿಸಿದನೇ, ಎಂಬ ವಾತ್ಸಲ್ಯದಿಂದ, ಆ ಅಪರಾಧಗಳೊಂದನ್ನೂ ಪರಿಗಣಿಸದೆ ಮುಕ್ತಿಯನ್ನೀಯುವದು ಭಗವಂತನ ಪ್ರಸಾದವಲ್ಲವೇ ? ಆತನ ಕೃಪಾ ಮಾಹಾತ್ಮ್ಯೆಯಿಂದಲೇ ಪಾಪರಾಶಿಗಳು ತೊಲಗಬೇಕೇ ವಿನಾ, ಪ್ರಾಯಶ್ಚಿತ್ತಗಳನ್ನನುಷ್ಠಿಸುವದು ಸಾಧ್ಯವೇ ಇಲ್ಲವು.

**ಭಾ. ನಕೇವಲಂ ನಿತ್ಯನೈಮಿತ್ತಿಕಾನಿ ಕರ್ಮಾಣಿ, ಅಪಿತು ಸರ್ವಾಣಿ ಕಾಮ್ಯಾನ್ಯಪಿ ಕರ್ಮಾಣಿ ಮದ್ವ್ಯಪಾಶ್ರಯಃ – ಮಯಿಸನ್ಯಸ್ತಕರ್ತೃತ್ವಾದಿಕಃ, ಕುರ್ವಾಣೋ ಮತ್ಪ್ರಸಾದಾಚ್ಛಾಶ್ವತಂ ಪದ ಮವ್ಯಯಮ್ ಅವಿಕಲಂ ಪ್ರಾಪ್ನೋತಿ ; ಪದ್ಯತ ಇತಿಪದಂ - ಮಾಂ ಪ್ರಾಪ್ನೋತೀತ್ಯರ್ಥಃ || ೫೬ ||**

---

ಮುಂದೆ ೬೬ನೆಯ ಶ್ಲೋಕದಲ್ಲಿ ತನ್ನ ಭಕ್ತನಾದ ಅರ್ಜುನನು ಪಾಪಸಮೂಹಗಳೆಲ್ಲಾ ತೊಲಗುವ ಬಗೆ ಹೇಗೆ? ಎಂದು ಶೋಕಿಸುತ್ತಿರುವ ಸಂದರ್ಭದಲ್ಲಿ, **ಮಾಶುಚಃ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ** ಎಂದು ಹೇಳಿ ಸಮಾಧಾನವನ್ನು ಮಾಡುವದು ಪ್ರಸಾದವಲ್ಲವೇ ? ಪಾಪರಾಶಿಗಳನ್ನು ಗಮನಕ್ಕೆ ಸ್ವಾಮಿಯು ತೆಗೆದುಕೊಂಡರೆ ಈತನು ಮುಕ್ತಿಗೆ ಸಂಪೂರ್ಣವಾಗಿ ಅನರ್ಹನು. ಅಂತಹ ದುರವಸ್ಥೆಯಲ್ಲಿ **"ನಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ"** (**ರಾ. ಅಯೋಧ್ಯಾ**) ಎಂಬಲ್ಲಿ ಹೇಳಿರುವಹಾಗೆ, **ಮದ್ವ್ಯಪಾಶ್ರಯನೇ** ಎಂದು ಭಾವಿಸಿ **ಶಾಶ್ವತಪದ** ವನ್ನೀಯುವದು ಆತನಪ್ರಸಾದದ ಪರಾಕಾಷ್ಠದೆಶೆಯಲ್ಲವೇ ? ಆದುದರಿಂದ **ಮತ್ಪ್ರಸಾದಾತ್** ಎಂದು ಹೇಳಿಕೊಂಡರು. ಚೇತನನು ಮಾಡುವ ಸಾಧನವು ಸಾಮಾನ್ಯವಾದುದು. ಅದಕ್ಕೆ ಕಟ್ಟುಬಿದ್ದು ನಿರತಿಶಯ ಸುಖ ರೂಪವಾದ ಅಮಿತ ಫಲವನ್ನೀಯುವದು ಕೃಪಾಸಾಗರನ ಔದಾರ್ಯವೂ ದಾತೃತ್ವವೂ ಮಹತ್ತಾದುದು ಆದುದರಿಂದ **ಮತ್ಪ್ರಸಾದಾತ್** ಎಂಬ ಪ್ರಯೋಗವು. **ಮದ್ವ್ಯಪಾಶ್ರಯಃ** ಎಂಬ ಪ್ರಯೋಗದಿಂದ ಉಪಾಯಾನುಷ್ಠಾನವು ಭಕ್ತಿಯೋಗರೂಪದಲ್ಲೇ ಇರಬೇಕೆಂಬುದೇನೂ ಇಲ್ಲವು ; ಹಾಗೆ ಉಪಾಯಾನುಷ್ಠಾನವನ್ನು ಮಾಡಲು ಶಕ್ತಿಯಿಲ್ಲದೆಯೂ ಅಧಿಕಾರವಿಲ್ಲದೆಯೂ ಇದ್ದುದಾದರೆ ಇನ್ನೊಂದುಉಪಾಯವಾದ ಪ್ರಪದನರೂಪದಲ್ಲಿಯಾಗಲಿ ಆಶ್ರಯಿಸಬಹುದೆಂಬ ಭಾವವನ್ನು ಸೂಚಿಸುವದಕಾಗಿಯೂ ಹಾಗೆ ಪ್ರಯೋಗವೆಂದು ಭಾವಿಸತಕ್ಕದ್ದು.

**ಭಾಷ್ಯಾರ್ಥವು—ನಕೇವಲಂ ನಿತ್ಯನೈಮಿತ್ತಿಕ ಕರ್ಮಾಣಿ** – ಹಿಂದೆ ಹೇಳಿದ ನೈಮಿತ್ತಿಕ ಕರ್ಮಗಳು ಮಾತ್ರವೇ ಅಲ್ಲವು, **ಅಪಿತು** - ಮತ್ತೇನೆಂದರೆ, **ಸರ್ವಾಣಿಕಾಮ್ಯಾನ್ಯಪಿಕರ್ಮಾಣಿ** ಉಪಾಸಕನು ಮಾಡುವ ಶಾಸ್ತ್ರಗಳಲ್ಲಿ ವಿಹಿತಗಳಾದ ಧರ್ಮಯುಕ್ತಗಳಾದ ಇತರ ಸಮಸ್ತ ಕಾಮ-ಕರ್ಮಗಳನ್ನೂ ಕೂಡ, ಇದರಿಂದ ಅಧರ್ಮ ಕರ್ಮಗಳು ವ್ಯಾವರ್ತಿಸಲ್ಪಟ್ಟವು. **ಮದ್ವ್ಯಪಾಶ್ರಯಃ** ಎಂದರೆ **ಮಯಿಸನ್ಯಸ್ತಕರ್ತೃತ್ವಾದಿಕಃ** - ನನ್ನಲ್ಲಿ ಇಡಲ್ಪಟ್ಟ ಕರ್ತೃತ್ವವೇ ಮೊದಲಾದವುಗಳನ್ನುಳ್ಳವನಾಗಿ, ಆದಿಪದದಿಂದ ಫಲಸಂಗಗಳು ಹೇಳಲ್ಪಟ್ಟವು, **ಕುರ್ವಾಣಃ** – ಮಾಡುವವನಾಗಿ **ಮತ್ಪ್ರಸಾದಾತ್** - ನನ್ನ ಪರಮಾನುಗ್ರಹದಿಂದಲೇ **ಶಾಶ್ವತಂಪದಂ ಅವ್ಯಯಂ-ಅವಿಕಲಂ**- ಇದು **ಅವ್ಯಯಂ** ಎಂಬುದರ ಅರ್ಥವು, ಚ್ಯುತಿಯಿಲ್ಲದಹಾಗೆ **ಪ್ರಾಪ್ನೋತಿ** - ಹೊಂದುತ್ತಾನೆ; **ಪದ್ಯತೇ ಇತಿಪದಮ್** – ಹೊಂದಲ್ಪಡುವನಾದುದರಿಂದ ಪದವೆಂದು ಹೇಳಿಕೊಳ್ಳುವೆನು, ಆದುದರಿಂದ **ಮಾಂ ಪ್ರಾಪ್ನೋತೀತ್ಯರ್ಥಃ** - ನನ್ನನ್ನು ಹೊಂದುವನು ಎಂದರೆ ನನ್ನ ಸಾಯುಜ್ಯವನ್ನು ಹೊಂದುವನು. ಹಿಂದಿನ ಶ್ಲೋಕದಲ್ಲಿ ಹೇಳಿದ **ವಿಶತೇ** ಎಂಬ ಪದವನ್ನೇ ವಿಸ್ತರಿಸಿ ಈ ಶ್ಲೋಕದಲ್ಲಿ **"ಅವಾಪ್ನೋತಿ ಶಾಶ್ವತಂ ಪದಮವ್ಯಯಂ"** ಎಂದು ಹೇಳಲ್ಪಟ್ಟಿತು. ಎರಡೂ ಸಮಾನಾರ್ಥಗಳೇ. ನಿತ್ಯನೈಮಿತ್ತಿಕಗಳೇ ಆಗಲಿ ಅಥವಾ ಇತರ ಶಾಸ್ತ್ರೀಯ ಕರ್ಮಗಳೇ ಆಗಲಿ, ಹೀಗೆ ಸಮಸ್ತ ಕರ್ಮಗಳೂ ಪರಮಾತ್ಮನಲ್ಲಿ ಸಮರ್ಪಿಸಲ್ಪಟ್ಟು, ಫಲಕರ್ತೃತ್ವಾದಿಗಳ ತ್ಯಾಗದಿಂದ ಮಾಡಲ್ಪಟ್ಟರೆ ಬಂಧಕವಲ್ಲದೆ ಮೋಕ್ಷದಾಯಕವಾಗುವದರಲ್ಲಿ ಸಂದೇಹವಿಲ್ಲವೆಂಬ ಭಾವವು. ಯದ್ಯಪಿ ಶಾಸ್ತ್ರೀಯ ಕರ್ಮಗಳೇ ಆದರೂ **ಮದ್ವ್ಯಪಾಶ್ರಯತ್ವ** ವಿಲ್ಲದೆ, ನನ್ನಲ್ಲಿ ಸಮರ್ಪಿಸದೇ ಫಲಸಂಗಾದಿ ಕರ್ತೃತ್ವಗಳ ತ್ಯಾಗವಿಲ್ಲದೆ ಅನುಷ್ಠಿಸಿದರೆ. ಬಂಧಕಗಳೇ. ಹೀಗೆ

**ಭಾ. ಅವ. ಯಸ್ಮಾದೇವಂ ತಸ್ಮಾತ್ —**

**ಮೂ. ಚೇತಸಾ ಸರ್ವ ಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಃ ।**
**ಬುದ್ಧಿಯೋಗ ಮುಪಾಶ್ರಿತ್ಯ ಮಚ್ಚಿತ್ತಸ್ಸತತಂ ಭವ ॥ ೫೭ ॥**

---

ಭಗವದುಪಾಸಕನು ಕಾಮ್ಯ ಕರ್ಮಗಳನ್ನನುಷ್ಠಿಸಿ ಭಗವಂತನಲ್ಲಿ ಸಮರ್ಪಿಸಿದರೆ **"ನಕರ್ಮಲಿಪ್ಯತೇ ನರೇ"**ಮೋಕ್ಷಾರ್ಥಿಗೆ ಕರ್ಮಗಳು ಲೇಪಿಸುವದಿಲ್ಲವೆಂಬ ಶ್ರುತಿ ವಾಕ್ಯಾನುಸಾರವಾಗಿ ಬಂಧಕವಾಗುವದಿಲ್ಲವು; ಮೋಕ್ಷವನ್ನೇ ಕೊಡುವೆನು ಎಂದು ಹೇಳಿರುವದರಿಂದ **ಜ್ಞಾನೀ** ಯಾದವನು **ಜ್ಞಾನೀ ತ್ವಾತ್ಮೈವ ಮೇ ಮತಮ್** (ಗೀ. ೭-೧೮) ಎಂಬಲ್ಲಿ ಹೇಳಿರುವ ಹಾಗೆ ಆತ್ಯರ್ಥ ಪ್ರಿಯನೆಂಬುದನ್ನು ಇಲ್ಲಿ ಜ್ಞಾಪಕಕ್ಕೆ ಕೊಟ್ಟು, ತಾವು ಕೃಪಾಸಾಗರನೆಂಬುದನ್ನು ಈ ಶ್ಲೋಕದಲ್ಲಿ ಪ್ರಕಟಿಸಿರುತ್ತಾರೆ.

**ಭಾಷ್ಯಾವತಾರಿಕೆಯ ಅರ್ಥವು—ಯಸ್ಮಾದೇವಂ** – ಯಾವ ಕಾರಣದಿಂದ ಹೀಗೋ ಎಂದರೆ ನಿತ್ಯ ನೈಮಿತ್ತಿಕಾದಿ ಸಮಸ್ತ ಕರ್ಮಗಳನ್ನೂ ನನ್ನಲ್ಲೇ ಸಮರ್ಪಿಸಿದರೆ ಶಾಶ್ವತಪದವನ್ನು ಹೊಂದಲು ಹೇತುವಾಗುವದರಿಂದ, **ತಸ್ಮಾತ್** – ಆ ಕಾರಣದಿಂದ ನೀನೂ ಅಂತಹ ಮುಕ್ತಿದಾಯಕ ಮಾರ್ಗವನ್ನೂ ಅವಲಂಬಿಸತಕ್ಕದ್ದು. ಹಿಂದಿನ ಶ್ಲೋಕಕ್ಕೂ ಇದಕ್ಕೂ ಹೇತು ಹೇತುಮದ್ಭಾವವೇ ಸಂಗತಿ ಎಂದು ಸೂಚಿಸುವದಕ್ಕಾಗಿ **ಯಸ್ಮಾದೇವಂ ತಸ್ಮಾತ್** ಎಂಬ ಅವತಾರಿಕೆಯು. ಹೀಗೆ ಅತ್ಯಂತೋತ್ಕೃಷ್ಟ ಶ್ರೇಯಸ್ಸಿನ ಪ್ರಾಪ್ತಿ ಇರುವದರಿಂದ ನೀನು ಈಗ ಮಾಡತಕ್ಕದ್ದೇನೆಂಬುದನ್ನು ತಿಳಿಸುತ್ತಾರೆ. ಈ ಕರ್ಮಗಳು ಮೋಕ್ಷದಾಯಕವೆಂಬ ಜ್ಞಾನವೇ ಸಾಲದು. ಅದನ್ನು ಹೊಂದಲು ಉಪಾಯವೇನೆಂದು ತಿಳಿದು ಅದನ್ನೂ ಅನಷ್ಠಿಸತಕ್ಕದ್ದು. ಅದನ್ನೂ ಈಗ ನಿನಗೆ ತಿಳಿಸುವನೆಂಬ ಅಭಿಪ್ರಾಯವು. ಸಮಸ್ತ ಕರ್ಮಗಳನ್ನೂ ಫಲಕರ್ತೃತ್ವಾದಿಗಳ ಸಂಬಂಧವಿಲ್ಲದೆ ನನ್ನಲ್ಲಿ ಸಮರ್ಪಿಸುವದರೊಂದಿಗೆ ಇನ್ನೂ ಏನನ್ನೂ ಮಾಡತಕ್ಕದ್ದೆಂಬುದನ್ನು ತಿಳಿಸುತ್ತಾರೆ—

**ಮೂಲಕ್ಕೆ ಅರ್ಥವು—ಚೇತಸಾ** - ಬುದ್ಧಿಯಿಂದ, ಎಂತಹ ಬುದ್ಧಿಯಿಂದ ಎಂದರೆ ತಾನು ಪರಮಾತ್ಮನಿಗೆ ಶೇಷ ಭೂತನು, ತನ್ನ ವ್ಯಾಪಾರಗಳಿಗೆ ಆತನೇ ಕಾರಣನು ಪ್ರೇರಕನು ಎಂಬ ಜ್ಞಾನದಿಂದ, ಮಯಿ - ಸರ್ವಶೇಷಿಯಾದ ನನ್ನಲ್ಲಿ, **ಸರ್ವಕರ್ಮಾಣಿ ಸನ್ನ್ಯಸ್ಯ** - ಹಿಂದೆ **ಮಯಿಸರ್ವಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ** (ಗೀ ೩. ೩೦) ಎಂದು ಹೇಳಿರುವ ಹಾಗೆ ಸಮಸ್ತ ಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸಿ, ಮತ್ಪರಃ - ನಾನೇ ಪ್ರಾಪ್ಯನಾದುದರಿಂದ ನನ್ನಲ್ಲೇ ಆಸಕ್ತಿಯುಳ್ಳವನಾಗಿ, **ಬುದ್ಧಿಯೋಗಮುಪಾಶ್ರಿತ್ಯ** - ಹಿಂದೆ ಹೇಳಲ್ಪಟ್ಟ ನನ್ನ ಉಪಾಸನೆಯನ್ನು ಕೈಕೊಂಡು,ಅಂತಹ ಹಿಂದೆ ಹೇಳಿದ ನಿರತಿಶಯ ಶ್ರೇಯಸ್ಸನ್ನು ಹೊಂದಲು ಉಪಾಯವೇನೆಂಬುದನ್ನು ವಿವೇಕ ಜ್ಞಾನದಿಂದ ಅರಿತು,ಆ ವಿವೇಕಜ್ಞಾನವು ಈ ಸಂದರ್ಭದಲ್ಲಿ ಯಾವುದು? ಎಂದರೆ ಮುಮುಕ್ಷುವಾದವನಿಗೆ ತನ್ನ ಮತ್ತು ಪರಮಾತ್ಮನಿಗೂ ಇರುವ ಶೇಷ ಶೇಷೀ ರಕ್ಷ ರಕ್ಷಕಾದಿಗಳ ವಿವೇಕ ಜ್ಞಾನವು ಮತ್ತು ತನಗೆ ಕರ್ತೃತ್ವಾದಿಗಳು ಎಷ್ಟರ ಮಟ್ಟಿಗೆ ಎಂಬುದರ ಅನುಸಂಧಾನ ಮೊದಲಾದವು; ಹೀಗೆ **ಬುದ್ಧಿಯೋಗ ಮುಪಾಶ್ರಿತ್ಯ, ಸತತಂ**-ಯಾವಾಗಲೂ ಎಂದರೆ, ಯಾವಾಗ ಯಾವಾಗ ಸಾಧ್ಯವೋ ಆವಾಗ ಆವಾಗೆಲ್ಲಾ ಹೀಗೆ ಪ್ರತಿದಿನಗಳಲ್ಲಿಯೂ ಕ್ರಮವಾಗಿ, **ಮಚ್ಚಿತ್ತಃ**-ನನ್ನಲ್ಲೇ ತೈಲಧಾರೆಯ ಹಾಗೆ ಅವಿಚ್ಛಿನ್ನವಾಗಿ ಮನಸ್ಸನ್ನುಳ್ಳವನಾಗಿ, **ಭವ**–ಆಗು. ಹೀಗೆ ಸಮಸ್ತ ಕರ್ಮಗಳನ್ನೂ ಎಂದರೆ ವರ್ಣಾಶ್ರಮ ವಿಹಿತಕರ್ಮಗಳಾದ ನಿತ್ಯ ನೈಮಿತ್ತಿಕಗಳನ್ನೂ ಇತರ ಐಹಿಕ ಕರ್ಮಗಳನ್ನೂ **"ಯತ್ಕರೋಷಿ ಯದಶ್ನಾಸಿ"** (ಗೀ ೯. ೨೭) ಎಂಬಲ್ಲಿ ಹೇಳಿರುವ ಹಾಗೆ ನನ್ನಲ್ಲೇ ನನ್ನ ಪ್ರೀತ್ಯರ್ಥವಾಗಿ ಸಮರ್ಪಿಸಿ, ನನ್ನನ್ನೇ ಆಶ್ರಯಿಸಿ,

**ಭಾ.** **ಚೇತಸಾ** - ಆತ್ಮನೋ ಮದೀಯತ್ವ ಮನ್ನಿಯಾಮ್ಯತ್ವ ಬುದ್ಧ್ಯಾ, ಉಕ್ತಂ ಹಿ "ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ" ಇತಿ, ಸರ್ವ ಕರ್ಮಾಣಿ ಸಕರ್ತೃಕಾಣಿ ಸಾರಾಧ್ಯಾನಿ ಮಯಿ ಸನ್ನ್ಯಸ್ಯ ಮತ್ಪರಃ – ಅಹಮೇವ ಫಲತಯಾ

---

ನನ್ನ ಉಪಾಸನೆಯನ್ನು ಮಾಡು ಎಂಬ ಹಿತೋಪದೇಶವು ಈ ಶ್ಲೋಕದಲ್ಲಿ ಮಾಡಲ್ಪಟ್ಟಿತು. ಇಲ್ಲಿ **ಬುದ್ಧಿಯೋಗಮುಪಾಶ್ರಿತ್ಯ** ಎಂದು ಹೇಳಿದುದರಿಂದ **ನಾಹಂವೇದೈಃ** ಎಂದು ಹಿಂದೆ ೧೧-೫೩ ರಲ್ಲಿ ಹೇಳಲ್ಪಟ್ಟಿರುವ ಹಾಗೆ ಬರೀ ಕರ್ಮಯೋಗವೇ ಸಾಲದು, "**ಭಕ್ತ್ಯಾತ್ವನನ್ಯಯಾ**" (ಗೀ. ೧೧. ೫೪) ಎಂಬಲ್ಲಿ ಹೇಳಲ್ಪಟ್ಟಿರುವ ಹಾಗೆ ಸಾಕ್ಷಾದುಪಾಯವು ಉಪಾಸನವೇ ವಿನಾ ಕೇವಲ ಇತರ ಕರ್ಮಾನುಷ್ಠಾನಗಳು ಮಾತ್ರವೇ ಉಪಾಯವಾಗಲಾರದೆಂದು ಹೇಳಿದಂತಾಯಿತು. "**ತಮೇವಂ ವಿದ್ವಾ್ ಅಮೃತ ಇಹ ಭವತಿ,ನಾನ್ಯಃಪನ್ಥಾ ವಿದ್ಯತೇ ಅಯನಾಯ**" ಎಂಬ ಶ್ರುತ್ಯರ್ಥವು ಇಲ್ಲಿ ಉಪಪಾದಿತವು. "**ಮಚ್ಚಿತ್ತಸ್ಸತತಂಭವ**" ಎಂಬುದರಿಂದ ಹಿಂದೆ ೧೨-೮ರಲ್ಲಿ ಹೇಳಲ್ಪಟ್ಟ **ಮಯ್ಯೇವ ಮನ ಆಧತ್ಸ್ವಮಯಿ ಬುದ್ಧಿಂ ನಿವೇಶಯ** ಎಂಬಲ್ಲಿ ಮಾಡಲ್ಪಟ್ಟ ಉಪದೇಶವೇ ಇಲ್ಲಿ ಜ್ಞಾಪಿಸಲ್ಪಟ್ಟಿತು.

ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಹಾಗೆ,ನೀನು ಮಾಡತಕ್ಕದ್ದೆಲ್ಲಾ ತುಂಬಾ ಇಲ್ಲವು; ಮಾಡತಕ್ಕದ್ದು ಅತ್ಯಲ್ಪವು; ಏನೆಂದರೆ ಶಾಸ್ತ್ರವಿಹಿತವಾಗಿರುವ ನಿತ್ಯನೈಮಿತ್ತಿಕ ಕಾಮ್ಯ ಕರ್ಮಗಳೆಲ್ಲವನ್ನೂ ಮಾಡಿ ಅವುಗಳನ್ನೆಲ್ಲಾ ನನ್ನಲ್ಲಿ ಸಮರ್ಪಿಸಿ, ನನ್ನಲ್ಲಿ ಮನಸ್ಸಿಟ್ಟು ನೀನು ಉಪಾಸನೆಯನ್ನು ಮಾಡಿದುದಾದರೆ ನಿನಗೆ ಶಾಶ್ವತ ಪದವು ಸಿದ್ಧವು ಎಂದು ಹಿತೋಪದೇಶವನ್ನು ಮಾಡಿರುತ್ತಾರೆ.

**ಭಾಷ್ಯಾರ್ಥವು**—ಹಿಂದಿನ ಶ್ಲೋಕದಲ್ಲಿ ಸರ್ವಕರ್ಮಗಳೂ ತನ್ನ ಭಕ್ತನಿಂದ ಆರಾಧನಾ ರೂಪದಲ್ಲಿ ಮಾಡಲ್ಪಡುವದರಿಂದ ಪರಮಪುರುಷಾರ್ಥ ಪ್ರಾಪ್ತಿಗೆ ಸಾಧನವೆಂದು ಹೇಳಲ್ಪಟ್ಟಿತು. ಸಾಕ್ಷಾದುಪಾಯವಾದ ತನ್ನ ಉಪಾಸನಕ್ಕೆ ಹೇತುವಾಗುತ್ತದೆಂದು ಹೇಳಿ, ಆ ಕಾರಣದಿಂದ ಹಿಂದೆ "**ಮಯ್ಯೇವ ಮನಆಧತ್ಸ್ವ ಮಯಿಬುದ್ಧಿಂ ನಿವೇಶಯ**" ಎಂದು ಹೇಳಿದುದನ್ನೇ ಜ್ಞಾಪಿಸುವವರಾಗಿ **ಮಚ್ಚಿತ್ತ ಸ್ಸತತಂಭವ** ಎಂದು ಉಪಪಾದಿಸುತ್ತಾರೆ. **ಚೇತಸಾ** - ಬುದ್ಧಿಯಿಂದ ಎಂದರೆ **ಆತ್ಮನೋಮದೀಯತ್ವ ಮನ್ನಿಯಾಮ್ಯತ್ವ ಬುದ್ಧ್ಯಾ**-"**ಮೇಪರಾಂ**" ಎಂಬಲ್ಲಿ (ಗೀ ೭. ೫) ಹೇಳಿರುವ ಹಾಗೆ ನನಗೆ ಶರೀರವಾಗಿ ನನಗೆ ಶೇಷಭೂತನೆಂದೂ, "**ಮಯಿಸರ್ವಮಿದಂ ಪ್ರೋತಂ**" (ಗೀ೭. ೭) ಎಂಬಲ್ಲಿಯೂ ಹೇಳಿರುವ ಹಾಗೆ ನನ್ನಿಂದ ನಿಯಮಿಸಲ್ಪಡತಕ್ಕದ್ದೆಂಬ ಬುದ್ಧಿಯಿಂದ, ಹೀಗೆ ಇಲ್ಲಿ ಹೇಳಲ್ಪಟ್ಟಿತು. ಇದಕ್ಕೆ ಹಿಂದೆ ೩-೩೦ ನೆಯ ಶ್ಲೋಕವನ್ನು ಉದಾಹರಿಸುತ್ತಾರೆ. "**ಮಯಿ** - ನನ್ನಲ್ಲಿ, **ಸರ್ವಾಣಿಕರ್ಮಾಣಿ** – ನೀನು ಮಾಡುವ ಸಮಸ್ತ ಕರಗಳನ್ನೂ ಎಂದರೆ ಶಾಸ್ತ್ರೋಕ್ತವಾದ ನಿತ್ಯನೈಮಿತ್ತಿಕ ಕಾಮ್ಯ ಕರ್ಮಗಳೆಲ್ಲವನ್ನೂ, **ಸಂನ್ಯಸ್ಯ** – ಸಮರ್ಪಿಸಿ, ಫಲ ಕರ್ತೃತ್ವ ಸಂಗಗಳಿಲ್ಲದ ಹಾಗೆ ನಾನು ಪ್ರೀತನಾಗುವನೆಂಬ ಭಾವದಿಂದ ಸಮರ್ಪಿಸಿ, ಎಂತಹ ಬುದ್ಧಿಯಿಂದ ಸಮರ್ಪಿಸತಕ್ಕದ್ದು ಎಂದರೆ **ಅಧ್ಯಾತ್ಮಚೇತಸಾ** – ನಾನು ಎಲ್ಲಾ ಆತ್ಮವಿಗೂ ಆತ್ಮಾ, ಸರ್ವ ಚೇತನವರ್ಗಕ್ಕೂ ನಿಯಾಮಕನು, ಸರ್ವರಿಗೂ ನಾನು ಶೇಷಿಯು, ಎಂಬ ಬುದ್ಧಿಯಿಂದ ಸರ್ವಕರ್ಮಗಳನ್ನೂ ಮಾಡತಕ್ಕದ್ದೆಂಬ ಭಾವವು. ಹೀಗೆ **ಸರ್ವಕರ್ಮಾಣಿ** – ಸಮಸ್ತ ಕರ್ಮಗಳನ್ನೂ **ಸಕರ್ತೃಕಾಣಿ** - ಪರಮಾತ್ಮನನ್ನೇ ಕರ್ತಾವಾಗುಳ್ಳವೇ ವಿನಾ ನಾನು ಕರ್ತಾವಲ್ಲವು, ಮತ್ತು **ಸಾರಾಧ್ಯಾನಿ** - ಭಗವಂತನನ್ನೇ ಆರಾಧ್ಯವಾಗಿ ಉಳ್ಳವು ಎಂದು ತಿಳಿದವನಾಗಿ ಎಂಬ ಭಾವವು. **ಮಯಿಸನ್ನ್ಯಸ್ಯ** - ಆದುದರಿಂದ ಸಮಸ್ತ ಪ್ರವೃತ್ತಿಗೂ ಹಿಂದೆ "**ದೈವಂಚೈವಾತ್ರ ಪಂಚಮಂ**"ಎಂಬಲ್ಲಿ ಹೇಳಿರುವ ಹಾಗೆ ನಾನೇ ಕಾರಣವಾದುದರಿಂದ ಹಿಂದೆ ೩-೩೦ರಲ್ಲಿ ಹೇಳಿರುವ ಹಾಗೆನನ್ನಲ್ಲೇ ಸಮರ್ಪಿಸಿ, **ಮತ್ಪರಃ** ಎಂದರೆ **ಅಹಮೇವ ಫಲತಯಾ ಪ್ರಾಪ್ಯ ಇತ್ಯನುಸಂಧ**

**ಪ್ರಾಪ್ಯ ಇತ್ಯನುಸಂಧಾನಃ ಕರ್ಮಾಣಿ ಕುರ್ವನ್ನಿದಮೇವ ಬುದ್ಧಿಯೋಗ ಮುಪಾಶ್ರಿತ್ಯ ಸತತಂ ಮಚ್ಚಿತ್ತೋ ಭವ ॥ ೫೭ ॥**

---

**ಧಾನಃ**-ನಾನೇ ಫಲರೂಪವಾಗಿ ಪ್ರಾಪ್ಯನು ಎಂದು ಅನುಸಂಧಾನಮಾಡುವವನಾಗಿ, **ಕರ್ಮಾಣಿ ಕುರ್ವ್ವ** - ಸಕಲ ಕರ್ಮಗಳನ್ನೂ ಎಂದರೆ ನಿತ್ಯನೈಮಿತ್ತಿಕ ದೇಹ ಕುಟುಂಬಾದಿ ಪೋಷಣೆಗೆ ಬೇಕಾದ ಕರ್ಮಗಳನ್ನೂ ಮಾಡುವವನಾಗಿ, **ಇದಮೇವ ಬುದ್ಧಿಯೋಗಂ** - ಮೇಲೆ ಹೇಳಲ್ಪಟ್ಟ ಬುದ್ಧಿ ಯೋಗವನ್ನು ಅದು ಯಾವುದೆಂದರೆ ಕರ್ಮಯೋಗಾನುಷ್ಠಾನದಲ್ಲಿ ಹೇಳಲ್ಪಟ್ಟ ಪ್ರಧಾನವಾದ ಜ್ಞಾನಾಂಶವನ್ನೂ, ಇದೇ ಸರಿಯಾದ ಅರ್ಥವು. ಅಥವಾ ಬುದ್ಧಿ**ಯೋಗಂ** ಎಂದರೆ **ಮಯಿ ಬುದ್ಧಿಂ ನಿವೇಶಯ** ಎಂದು ಭಕ್ತಿಯೋಗಕ್ಕೆ ಬೇಕಾದ ಐಕಾಂತ್ಯ ಬುದ್ಧಿಯನ್ನು ಎಂದಾಗಲಿ ಅರ್ಥಮಾಡಬಹುದು, ಏಕೆಂದರೆ **ಮಯ್ಯೇವ ಮನಆಧತ್ಸ್ವ ಮಯಿಬುದ್ಧಿಂನಿವೇಶಯ** ಎಂದು ಹಿಂದೆ (ಗೀ. ೧೨-೮) ಹೇಳಿದುದೂ, ಮತ್ತು ಇಲ್ಲಿ "**ಬುದ್ಧಿಯೋಗ ಮುಪಾಶ್ರಿತ್ಯ ಮಚ್ಚಿತ್ತಸ್ಸತತಂಭವ**" ಎಂದು ಉಪದೇಶಿಸುವದೂ ಎರಡೂ ಸಮಾನಾರ್ಥಕಗಳಾಗಿಯೂ ಭಾವಿಸಬಹುದು; ಇಂತಹ ಬುದ್ಧಿಯೋಗವನ್ನು **ಉಪಾಶ್ರಿತ್ಯ** - ಅವಲಂಬಿಸಿ **ಸತತಂ** - ಯಾವಾಗಲೂ, ಯಾವಾಗ ಸಾಧ್ಯವೋ ಆವಾಗೆಲ್ಲಾ **ಮಚ್ಚಿತ್ತೋಭವ** - ನನ್ನಲ್ಲೇ ಮನಸ್ಸನ್ನಿಡುವವನಾಗು. ಇಲ್ಲಿ **ಇದಮೇವ ಬುದ್ಧಿಯೋಗಂ** ಎಂದು ಹೇಳಿರುವ ತಾತ್ಪರ್ಯವೇನೆಂದರೆ ಮೇಲೆ ಉದಾಹರಿಸುವ "**ಮಯಿಸರ್ವಾಣಿ ಕರ್ಮಾಣಿ**" ಎಂಬ ಶ್ಲೋಕದಲ್ಲಿರುವ **ಅಧ್ಯಾತ್ಮಚೇತಸಾ** ಎಂಬ ಪ್ರಯೋಗದಲ್ಲಿ ಅಡಗಿರುವ ಈ ಬುದ್ಧಿಯೋಗದಿಂದ ಎಂಬರ್ಥವು. ಇದು ಎಂಥಾದ್ದೆಂಬುದನ್ನು ಅಲ್ಲಿನ ವ್ಯಾಖ್ಯಾನದಲ್ಲೂ ಕಾಣಬಹುದು. ನಾಲ್ಕನೆಯ ಅಧ್ಯಾಯಾಂತ್ಯದಲ್ಲೂ ಈ ಬುದ್ಧಿಯೋಗಕ್ಕೆ ಪ್ರಾಧಾನ್ಯವು ಹೇಳಲ್ಪಟ್ಟಿರುತ್ತದೆ. ಆದುದರಿಂದಲೇ ಈ ಶ್ಲೋಕದಲ್ಲಿ ಹೇಳಿರುವ **ಚೇತಸಾ** ಎಂಬ ಪದವೂ ಮತ್ತು ಹಿಂದೆ ೩-೩೦ ನೆಯ ಶ್ಲೋಕದಲ್ಲಿರುವ **ಅಧ್ಯಾತ್ಮ ಚೇತಸಾ** - ಎಂಬ ಪದವೂ ಸಮಾನಾರ್ಥಕಗಳೆಂದು ತಿಳಿಸುವದಕ್ಕಾಗಿ, **ಚೇತಸಾ** ಎಂಬುದಕ್ಕೆ "**ಆತ್ಮನಃ ಮದೀಯತ್ವ ಮನ್ನಿಯಾಮ್ಯತ್ವಬುದ್ಧ್ಯಾ**" ಎಂದು ವಾಖ್ಯಾನ ಮಾಡಿರುತ್ತಾರೆ. **ಚೇತಸಾ** ಎಂಬುದಕ್ಕೆ **ಅಧ್ಯಾತ್ಮಚೇತಸಾ** ಎಂದು ಹಿಂದೆ ಹೇಳಿದುದರ ತಾತ್ಪರ್ಯವೇ ಎಂಬ ಭಾವವು. ಹಾಗೆಯೇ ಇಲ್ಲಿರುವ **ಸರ್ವಕರ್ಮಾಣಿ**ಎಂಬುದೂ ಅಲ್ಲಿರುವ **ಸರ್ವಾಣಿಕರ್ಮಾಣಿ** ಎಂಬುದೂ ಸಮಾನಾರ್ಥಕಗಳೆಂಬುದೂ ಸೂಚಿತವು. ಅದರ ವಿವರಣವೇ **ಸಕರ್ತೃಕಾಣಿ ಸಾರಾಧ್ಯಾನಿ** ಎಂಬುದು. ಹಿಂದೆ "**ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ**" ಎಂದು (ಗೀ ೧೨, ೮) ಹೇಳಿದ ಉಪದೇಶವನ್ನು ಇಲ್ಲಿ ಪುನಃ ಜ್ಞಾಪಕಕ್ಕೆ ತರುತ್ತಾರೆ. ತನ್ನನ್ನು ಹೊಂದಲು ಬರೀ ಕರ್ಮಯೋಗಾನುಷ್ಠಾನಗಳಿಂದ ವೇದ, ತಪಸ್ಸು ಇಜ್ಯೆ:ಇವುಗಳಿಂದ ಮಾತ್ರವೇ ಸಾಧ್ಯವಿಲ್ಲವು. ಅವ್ಯಭಿಚರಿತ ಪರಮೈಕಾನ್ತ್ಯ ಭಕ್ತಿಯಿಂದಲೇ ಸಾಧ್ಯವೆಂದು ಹೇಳಿದ ಬಳಿಕ ಅರ್ಜುನನು ಆತನಲ್ಲಿ ಅಂತಹ ಮನಸ್ಸನ್ನಿಟ್ಟು ಉಪಾಸಿಸುವದು ಕಷ್ಟವೇ ಎಂದು ಯೋಚಿಸಿ, ಜಿಜ್ಞಾಸುವಾಗಿ ಅಕ್ಷರ ನಿಷ್ಠೆಯನ್ನು ಕೈಕೊಂಡು, ಅದೂ ಪುನರಾವರ್ತಿಯಿಲ್ಲದಾದುದರಿಂದ, ಹಾಗೆ ನಿನ್ನನ್ನು ಹೊಂದುವದು ಕ್ಷಿಪ್ರ ಪ್ರಾಪ್ತಿಗೆ ಅನುಕೂಲವಾದುದೋ ಅಥವಾ ಈಗ ನೀನು ಉಪದೇಶಿಸಿದ ರೀತಿಯಲ್ಲಿ ಅನನ್ಯ ಭಕ್ತಿಯಿಂದ ನಿನ್ನಲ್ಲೇ ಮನಸ್ಸನ್ನಿಟ್ಟು ಉಪಾಸಿಸುವದು ಕ್ಷಿಪ್ರ ಪ್ರಾಪ್ತಿಗೆ ಅನುಕೂಲವಾದುದೋ ಎಂದು ಪ್ರಶ್ನಿಸುವದಕ್ಕೆ ಉತ್ತರವಾಗಿ ಅಕ್ಷರ ನಿಷ್ಠೆಯು ಕ್ಲೇಶೋಧಿಕವು. ಅದು ಬೇಡವೆಂದು ಹೇಳಿ, ನಿನಗೆ ನನ್ನಲ್ಲಿ ಮನಸ್ಸನ್ನೂ ಬುದ್ಧಿಯನ್ನೂ ಇಡುವದು ಕಷ್ಟವಾದರೆ ಅದನ್ನು ಇಡುವದಕ್ಕೆ ಸುಕರ ಸಾಧನಗಳನ್ನು ಉಪದೇಶಿಸಿ, ಹೀಗೆ ಅಭ್ಯಾಸ ಮಾಡು, ಅಥವಾ ನನಗೆ ಕೈಂಕರ್ಯಗಳನ್ನು ಮಾಡು. ಅಥವಾ ನಿಷ್ಕಾಮ ಕರ್ಮಯೋಗವನ್ನೇ

ಅನುಷ್ಠಿಸುತ್ತಾ ಅವುಗಳನ್ನೆಲ್ಲಾ ಸಮರ್ಪಿಸುತ್ತಾ ಬಾ, ನಿನಗೆ ನನ್ನಲ್ಲಿ ಅನನ್ಯಭಕ್ತಿಯು ಲಭಿಸುತ್ತದೆಂದು ಹೇಳಿದುದನ್ನೇ ಪುನಃ ಈಗ ಜ್ಞಾಪಕಕ್ಕೆ ಕೊಡುತ್ತಾರೆ. **ಚೇತಸಾ** ಸರ್ವಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸಿಬಿಟ್ಟರೆ, ನನ್ನಲ್ಲೇ ವಿಶ್ವಾಸವು ಹುಟ್ಟಿ ಮತ್ಪರ ನಾಗುತ್ತೀಯೆ; ಆಗ ಬುದ್ಧಿಯೋಗವು ಲಭಿಸಿ ನನ್ನಲ್ಲೇ ಅನನ್ಯ ಭಕ್ತಿಯೂ ಲಭಿಸುತ್ತದೆಯಾದುದರಿಂದ,**ಮಚ್ಚಿತ್ತ ಸ್ಸತತಂಭವ** ಎಂಬದಾಗಿ ಪರಮ ಹಿತೋಪದೇಶವು. ಅನನ್ಯ ಭಕ್ತಿಯು ನನ್ನಲ್ಲಿ ಉಂಟಾಗುವದು ಅಸಾಧ್ಯವೆಂಬ ಶಙ್ಕಾವನ್ನು ತ್ಯಜಿಸಿ, ನನ್ನಲ್ಲೇ ಮನಸ್ಸನ್ನಿಡಲು ಪ್ರಯತ್ನಿಸು ಎಂದರೆ ನನ್ನನ್ನೇ ಉಪಾಸಿಸು ಎಂಬ ಭಾವವು.

ಇಲ್ಲಿ ಒಂದು ಪೂರ್ವಪಕ್ಷವು ಉದಿಸಬಹುದು; ಏನೆಂದರೆ ಉಪಾಸನೆಗೆ ಬ್ರಹ್ಮಸೂತ್ರದಲ್ಲಿ ಮುಖ್ಯವಾಗಿ ಅಂಗವಾಗಿ ಹೇಳಿರುವದು ನಿತ್ಯನೈಮಿತ್ತಿಕಾನುಷ್ಠಾನಗಳೂ ಮತ್ತು **"ದೈವಮೇವಾಪರೇ"** ಎಂಬಲ್ಲಿ ಹೇಳಿರುವ ಕರ್ಮಾನುಷ್ಠಾನಗಳೂ. ಹೀಗಿರುವಾಗ ಸರ್ವಕರ್ಮಗಳ ವಿಷಯವೇತಕ್ಕೆ? ಅಪ್ರಸ್ತುತವಲ್ಲವೇ ? ಕರ್ಮಶಬ್ದಕ್ಕೆ ಶಾಸ್ತ್ರೋಕ್ತ ಕರ್ಮವೆಂದೇನೋ ಅರ್ಥವಾದಲಾಯಿತು. ಆದರೂ ಸರ್ವಕರ್ಮಗಳ ವಿಷಯವು ಈಗ ಹೇಳುತ್ತಿರುವ ಬ್ರಹ್ಮವಿದ್ಯೆಗೆ ಅಪ್ರಸ್ತುತವಲ್ಲವೇ ? ಎಂದರೆ ಅಪ್ರಸ್ತುತವಲ್ಲವು. ಪ್ರಪನ್ನನಾದರೂ ತನಗೆ ವಿಹಿತವಾದ ಎಲ್ಲಾ ಇತಿಕರ್ತವ್ಯತೆಗಳನ್ನೂ ನಡಸಲೇಬೇಕು. ಅವುಗಳನ್ನು ತ್ಯಾಗಮಾಡಿದರೆ ನಷ್ಟನಾಗುವನು. ಆದುದರಿಂದಲೇ ಪರಮ ಭಾಗವತರಾದ ಕುಚೇಲರು ಸರ್ವೇಶ್ವರನಾದ ಶ್ರೀ ಕೃಷ್ಣನನ್ನು ಹೋಗಿ ನೋಡಬೇಕೆಂಬ ಆಶೆಯು ಭಾಧಿಸುತ್ತಿದ್ದರೂ, ಹೆಂಡತಿ ಮಕ್ಕಳ ಪೋಷಣೆಯು ಕಷ್ಟತರವಾಗಿರುವಾಗ, ಅಂತಹ ದುರ್ದೆಶೆಯಲ್ಲಿ ಅವರನ್ನು ಬಿಟ್ಟು ಹೋಗುವದು ತನ್ನ ಕರ್ತವ್ಯತೆಗೆ ಕುಂದಕವಾದುದರಿಂದ ಹೋಗದೇ ಇದ್ದು, ಹೆಂಡತಿಯು ಪತಿಯನ್ನು ಕರೆದು ತಾನು ಹೇಗಾದರೂ ಮಾಡುವೆನು, ನೀನು ಶ್ರೀ ಕೃಷ್ಣನಲ್ಲಿ ಹೋಗಿ ಧನವನ್ನು ಪ್ರಾರ್ಥಿಸಿ ಬಾ ಎಂದು ಅನುಮತಿಯನ್ನು ಕೊಟ್ಟನಂತರ ಅವರುಗಳನ್ನು ಬಿಟ್ಟು ಹೋಗಿರುತ್ತಾರೆ. ಹೀಗೆ ಸಂಸಾರದಲ್ಲಿ ಅನೇಕ ವಿಧ ಇತಿಕರ್ತವ್ಯತೆಗಳುಂಟು. ವೃದ್ಧ ಮಾತಾ ಪಿತೃಗಳನ್ನು ನೋಡಿಕೊಳ್ಳಬೇಕಾದ ಇತಿಕರ್ತವ್ಯಗಳೂ, ಸತಿಸುತರು ತುಂಬಾ ಖಾಯಿಲೆಯಲ್ಲಿದ್ದರೆ ಅವರಿಗೆ ಮಾಡಬೇಕಾದ ಔಷಧ ಪಥ್ಯಾದಿ ಇತಿಕರ್ತವ್ಯಗಳೂ ಉಂಟು. ಇವುಗಳನ್ನೂ ತ್ಯಾಗಮಾಡಲು ಮಾರ್ಗವಿಲ್ಲವು,

ಹಾಗೆಯೇ ಕ್ಷತ್ರಿಯನಾದ ಅರ್ಜುನನಿಗೆ ನಿತ್ಯನೈಮಿತ್ತಿಕಗಳು ಹೇಗೆ ಅವಶ್ಯಕವೋ ಹಾಗೆಯೇ ಶಿಷ್ಟಪರಿಪಾಲನೆಯೂ ದುಷ್ಟ ನಿಗ್ರಹವೂ ಇತಿ ಕರ್ತವ್ಯತೆಗಳಲ್ಲಿ ಸೇರಿದ ವಿಹಿತ ಕರ್ಮಗಳು. ಇವುಗಳನ್ನು ತ್ಯಾಗಮಾಡಲು ಸಾಧ್ಯವಿಲ್ಲವು. ತ್ಯಾಗಮಾಡಿದರೆ ಅನಿಷ್ಟಪ್ರಾಪ್ತಿ ತಪ್ಪದು. ಇದನ್ನೇ ಮುಂದಿನ ೫೮ನೆಯ ಶ್ಲೋಕದಲ್ಲಿ **"ಅಥಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ"** ನೀನು ನಾನು ಹೇಳಿದ ಹಾಗೆ ಕೇಳಿ, ನಿನ್ನ ವಿಹಿತಕರ್ಮವನ್ನು ಮಾಡದೆ ಹೋದರೆ ನಾಶ ಹೊಂದುತ್ತೀಯೆ ಎಂದು ಹೇಳಬೇಕಾದುದು ಅವಶ್ಯಕವಾದುದರಿಂದ **ಸರ್ವಕರ್ಮಾಣಿ** ಎಂಬ ಪ್ರಯೋಗವು. ಇತರ ಇತಿಕರ್ತವ್ಯತಾ ರೂಪಕರ್ಮಗಳನ್ನು ಬಿಡಲು ನಿನಗೆ ಅಧಿಕಾರವಿಲ್ಲವು. ಹಾಗೆ ಬಿಟ್ಟರೆ ನಿನಗೆ ನಾಶವು ಕಾದಿರುತ್ತದೆಂಬ ಭಾವವು. ಇದೇ ಮುಂದಿನ ಶ್ಲೋಕದಲ್ಲಿ ಭೋಧಿತವು. || ೫೭ ||

**ಮೂಲಕ್ಕೆ ಅರ್ಥವು**—ಹೀಗೆ ನನ್ನನ್ನು ತೈಲಧಾರೆಯ ಹಾಗೆ ಅವಿಚ್ಛಿನ್ನವಾದ ಆವ್ಯಭಿಚರಿತ ಭಕ್ತಿಯಿಂದ ನನ್ನಲ್ಲೇ ಮನಸ್ಸನ್ನಿಟ್ಟು ಉಪಾಸಿಸುವದರಿಂದುಂಟಾಗುವ ನಿರತಿಶಯ ಫಲವೇನೆಂಬುದನ್ನೂ ಹೇಳಿದರು. ಆದರೊಂದಿಗೆ ಇತರ ಇತಿಕರ್ತವ್ಯತೆಗಳನ್ನೂ ನನ್ನ ಆರಾಧನಾ ರೂಪದಲ್ಲಿ ಫಲಾಭಿಸಂಧಿರಹಿತನಾಗಿ ನಡೆಸತಕ್ಕದ್ದೆಂದೂ ಹೇಳಿದರು. ಇಂತಹ ಇತಿ ಕರ್ತವ್ಯತೆಗಳನ್ನೆಲ್ಲಾ ನಡೆಸಲೇಬೇಕು. ಅಹಂಕಾರಭಾವದಿಂದ ಹಾಗೆ ನಡೆಸದೇ ಹೋದರೆ ನೀನು ನನ್ನ

ಮೂ. ಮಚ್ಚಿತ್ತ ಸ್ಸರ್ವದುರ್ಗಾಣಿ ಮತ್ಪ್ರಸಾದಾ ತ್ತರಿಷ್ಯಸಿ।
ಅಥ ಚೇತ್ತ್ವ ಮಹಙ್ಕಾರಾ ನ್ನಶ್ರೋಷ್ಯಸಿ ವಿನಙ್ಕ್ಷ್ಯಸಿ ॥ ೫೮ ॥

---

ಆಜ್ಞೆಯನ್ನು ತ್ಯಜಿಸಿ ನಿಗ್ರಹವನ್ನು ಸಂಪಾದಿಸಿಕೊಂಡವನಾಗಿ ನಾಶಹೊಂದುತ್ತೀಯೇ ಎಂದು ಹೇಳುತ್ತಾರೆ.--ಮಚ್ಚಿತ್ತಃ - ಯಾವಾಗ ನೀನು ನನ್ನ ಉಪದೇಶಾನುಸಾರವಾಗಿ ನನ್ನಲ್ಲೇ ಮನಸ್ಸನ್ನಿಟ್ಟು ಧ್ಯಾನಿಸಿದುದಾದರೆ, ಮತ್ಪ್ರಸಾದಾತ್ – ನನ್ನ ಅನುಗ್ರಹದಿಂದ, ಸರ್ವದುರ್ಗಾಣಿ- ಇಂತಹ ಉಪಾಯಾನುಷ್ಠಾನಕ್ಕೆ ವಿಘ್ನಗಳಾದ ಸಮಸ್ತ ತೊಂದರೆಗಳನ್ನೂ, ಕಷ್ಟಗಳನ್ನೂ ಅನಿಷ್ಟಗಳನ್ನೂ ತರಿಷ್ಯಸಿ–ದಾಟುವೆ; ಅಥ - ಹಾಗಲ್ಲದೆ, ಅಹಙ್ಕಾರಾತ್ – ನಾನೇ ಸರ್ವಜ್ಞನು, ನನಗೆ ಎಲ್ಲವೂ ತಿಳಿಯುವದು ಎಂಬ ಅಹಂಭಾವದಿಂದ, ನಶ್ರೋಷ್ಯಸಿ ಚೇತ್ - ನೀನು ಚೆನ್ನಾಗಿ ನನ್ನ ಉಪದೇಶವನ್ನು ವಿಮರ್ಶಿಸಿ ಕೇಳಿ ತಿಳಿದು, ಹಾಗೆ ನಡೆಯದಿದ್ದರೆ, ವಿನಙ್ಕ್ಷ್ಯಸಿ– ಅನ್ಯಾಯವಾಗಿ,ಹಾಳಾಗುತ್ತೀಯೇ,ಎಂದರೆ ನಿರತಿಶಯಸುಖಾವಾಪ್ತಿಯುಂಟಾಗಲಿ ಎಂದು ಪರಮಹಿತವನ್ನು ಬೋಧಿಸಿದರೂ ಕೂಡ, ಅದರಹಾಗೆ ನಡೆಯದೆ ಇರುವದರಿಂದ ಪುನಃ ಪುನಃ ಸಂಸಾರಬಂಧಕ್ಕೆ ಸಿಲುಕಿ, ನಾನಾವಿಧ ಕಷ್ಟಗಳಿಗೆ ಒಳಗಾಗುತ್ತೀಯೇ ಎಂಬ ಭಾವವು. ಆದುದರಿಂದ ನಾನು ಹೇಳಿದ ಹಾಗೆ ಕೇಳಿ ನಡೆಸಿ ನಿನ್ನ ಆತ್ಮರಕ್ಷಣೆಯನ್ನು ಮಾಡಿಕೋ ಎಂಬ ಉಪದೇಶವು. ವಿನಙ್ಕ್ಷ್ಯಸಿ ಎಂದು ಅರ್ಜುನನನ್ನು ಕುರಿತು ಶಪಿಸಲಿಲ್ಲವು. ಅನ್ಯಾಯವಾಗಿ ಹಾಳಾಗುತ್ತೀಯೇ ಎಂದು ಪರಿತಾಪದಿಂದ ಹೇಳಿದ ಮಾತಾಗಿರುತ್ತದೆ. ನೀನು ರಕ್ಷಣೋಪಾಯವನ್ನು ಕೈಕೊಳ್ಳಲಿ ಎಂದು ಇಷ್ಟುದೂರ ಸಾಕ್ಷಾತ್ತಾಗಿ ಸರ್ವೇಶ್ವರನಾದ ನಾನೇ ಉಪದೇಶಿಸಿದ್ದರೂ, ನೀನು ಆ ಉಪದೇಶವನ್ನು ಬಾಢಮ್ ಎಂದು ಅನುಮೋದಿಸಿ ನಡೆಸದೇ ಹೋದರೆ, ಅನ್ಯಾಯವಾಗಿ ಹಾಳಾಗ್ತುತ್ತೀಯೇ ; ನನಗಿಂತ ಹಿತೈಷಿಯು ನಿನಗೆ ದೊರೆಯದು ; ಸರ್ವಸುಹೃತ್ತಾದ ನಾನು ಪರಮಕೃಪಯಾ ಮಾಡಿರುವ ಉಪದೇಶದಲ್ಲಿ ನಿನಗೆ ಅಲಕ್ಷ್ಯವು ಬೇಡವೆಂಬ ಭಾವವು. ಹೀಗೆ ನಿನಗೇ ನೀನು ಹಿತಮಾಡಿಕೊಳ್ಳದವನು ಇತರರಿಗೆ ಹಿತಮಾಡಲು ಅರ್ಹತೆ ನಿನಗೆ ಎಲ್ಲಿಯದು? ಎಂಬುದೂ ಸೂಚಿತವು. ಮಚ್ಚಿತ್ತಃ - ಯಾವಾಗ ಮನಸ್ಸನ್ನು ನನ್ನಲ್ಲೇ ಇಟ್ಟು ನನ್ನನ್ನೇ ಉಪಾಸಿಸುತ್ತೀಯೋ, ಆಗ ನಾನು ಸುಪ್ರೀತನಾಗಿ ನಿನಗೆ ಉಪಾಯಾನುಷ್ಠಾನದಲ್ಲಿ ಪ್ರಾಪ್ತವಾಗುವ ಸಮಸ್ತ ಪ್ರತಿಬಂಧಕಗಳನ್ನೂ, ಹಾಗೆಯೇ ನಿನಗೆ ಈ ಜನ್ಮದಲ್ಲಿ ಪ್ರಾಪ್ತವಾಗುವ ಸಾಂಸಾರಿಕ ಕಷ್ಟಗಳನ್ನೂ, ಹೋಗಲಾಡಿಸಿ, ನನ್ನ ಸಾನ್ನಿಧ್ಯವನ್ನು ಹೊಂದುವ ಹಾಗೆ ಮಾಡ್ತುವೆನು ಎಂದು ಪೂರ್ವಾರ್ಧದಿಂದ ಹೇಳಿದರು. ಉತ್ತರಾರ್ಧದಿಂದ ನಾನು ಉಪದೇಶಿಸಿದ ರೀತಿಯಲ್ಲಿ ಕರ್ಮಯೋಗವನ್ನನುಷ್ಠಿಸಿ, ನಾನು ಹೇಳಿದರೀತಿಯಲ್ಲಿ ಮನಸ್ಸನ್ನು ನನ್ನಲ್ಲಿಟ್ಟು ಉಪಪಾದಿಸದೇ ಹೋದರೆ ಮತ್ತು ನೀನು ನಿನ್ನ ಇತರ ಇತಿಕರ್ತವ್ಯತೆಗಳನ್ನೂ ನಡೆಸದೆ ಹೋದರೇ, ನೀನು ವೃಥಾ ಕೆಟ್ಟು ಹೋಗುತ್ತೀಯೇ. "ಯನ್ಮುಹೂರ್ತಂ ಕ್ಷಣಂ ವಾಪಿ ವಾಸುದೇವೋ ನ ಚಿನ್ತ್ಯತೇ । ಸಾಹಾನಿ ಸ್ತನ್ಮಹಚ್ಛಿದ್ರಂ ಸಾ ಭ್ರಾನ್ತಿ ಸ್ಸಾ ಚ ವಿಕ್ರಿಯಾ ॥ "(ಗಾರುಡ ೨೨೨. ೨೨) ಎಂಬಲ್ಲಿ ಈ ಅಭಿಪ್ರಾಯವೇ ಉಪಬೃಂಹಿತವು. ಯಾವ ಮುಹೂರ್ತವಾಗಲಿ ಕ್ಷಣವಾಗಲಿ ವಾಸುದೇವನನ್ನು ಚಿನ್ತಿಸದಿದ್ದರೆ, ಅದೇ ಹಾನಿಃ. ತನ್ನ ಇಷ್ಟಹಾನಿಗೆ ಕಾರಣವು, ತನ್ಮಹಚ್ಛಿದ್ರಂ. ಅನಿಷ್ಟ ಪ್ರಾಪ್ತಿಗೆ ಅವಕಾಶವು, ಭ್ರಾನ್ತಿಃ - ಚಿತ್ತಸ್ಖಲನವು, ವಿಕ್ರಿಯಾ - ಅಙ್ಗಗಳೆಲ್ಲಾ ವಶದಲ್ಲಿರುವದರಿಂದ ವ್ಯತ್ಯಸ್ತವಾದ ವ್ಯಾಪಾರವು. ಹೀಗೆ ವಾಸುದೇವ ಚಿನ್ತನವಿಲ್ಲದಿದ್ದರೆ ಅನಿಷ್ಟಗಳಿಗೆ ಗುರಿಯಾಗುವರೆಂಬ ಭಾವವು. "ಏಕಸ್ಮಿನ್ನಪ್ಯತಿಕ್ರಾನ್ತೇ ಮುಹೂರ್ತೇ ಧ್ಯಾನವರ್ಜಿತೇ । ದಸ್ಯುಭಿ ರ್ಮುಷಿತೇನೇವ ಯುಕ್ತ ಮಾಕ್ರಂದಿತುಂಭೃಶಂ " ಎಂಬ ಶ್ಲೋಕವೂ ಈ ಸಂದರ್ಭದಲ್ಲಿ ಅನುಸಂಧೇಯವು. ಆದುದರಿಂದ ಮಚ್ಚಿತ್ತಃ ಎಂಬಲ್ಲಿ ಹೇಳಿರುವ

**ಭಾ. ಏವಂ ಮಚ್ಚಿತ್ತ ಸ್ಸರ್ವದುರ್ಗಾಣಿ ಕರ್ಮಾಣಿ ಕುರ್ವ ಸರ್ವಾಣಿ ಸಾಂಸಾರಿಕಾಣಿ,**

---

ಹಾಗೆ ವಿಧಿ ವಿಹಿತ ಕರ್ಮಗಳನ್ನೇ ಮಾಡುತ್ತಾ ನಿಷ್ಕಾಮನೆಯಿಂದ ಅವುಗಳನ್ನೆಲ್ಲಾ ನನ್ನಲ್ಲೇ ಸಮರ್ಪಿಸುತ್ತಾ ನಿನ್ನ ಇತಿಕರ್ತವ್ಯತೆಗಳಲ್ಲಾ ನಡೆಸುತ್ತಾ ನನ್ನಲ್ಲೇ ಮನಸ್ಸನ್ನಿಟ್ಟು ಭಕ್ತಿಯಿಂದ ಉಪಾಸಿಸುತ್ತಾ ಬಂದರೆ, ಸಂಸಾರ ಕಷ್ಟಗಳಿಂದ ತಪ್ಪಿಸಿಕೊಳ್ಳುವದಕ್ಕೆ ಪರಮ ಭೇಷಜವು. ಐಹಿಕದಲ್ಲೂ ಎಲ್ಲಾ ಕಷ್ಟಗಳೂ ತಪ್ಪುತ್ತವೆ. ಒಂದು ವೇಳೆ ನಾನು ಈಗ ನಿನಗೆ ಉಪದೇಶಿಸುತ್ತಿರುವ ಹಾಗೆ ಯುದ್ಧವನ್ನು ಪುನಃ ಪ್ರಾರಂಭಿಸಿದರೆ, ಅದರಲ್ಲೂ ನಿನಗೆ ಯಾವ ಕಷ್ಟಗಳೂ ಪ್ರಾಪ್ತವಾಗುವದಿಲ್ಲವು. ಮೋಕ್ಷಾಪೇಕ್ಷೆಯಿಂದ ಮಾಡುವ ಉಪಾಯಾನುಷ್ಠಾನದಲ್ಲೂ ಯಾವ ತೊಂದರೆಗಳೂ ಇರುವದಿಲ್ಲವು. ಸರ್ವವೂ ನಿನಗೆ ಅನುಕೂಲವೇ ಆಗುತ್ತದೆಂಬ ತಾತ್ಪರ್ಯವು. ಹಾಗೆ ಚಿನ್ತಿಸದೆ ಇದ್ದರೆ ಪರಮ ಹಾನಿಗೆ ಕಾರಣವಾಗುತ್ತದೆಂದು ಹೇಳಲ್ಪಟ್ಟಿತು.

**ಭಾಷ್ಯಾರ್ಥವು**—ಹಿಂದೆ ಹೇಳಿದ **ಬುದ್ಧಿಯೋಗವು**, ಮೋಕ್ಷಾರ್ಥಿಯು ಮಾಡುವ ಸಮಸ್ತ ಕರ್ಮಗಳಲ್ಲೂ ಆವಶ್ಯಕವೆಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟೇ ಈ ಶ್ಲೋಕವು ಪ್ರಸ್ತುತವು ಎಂದು ತೋರಿಸುವದಕ್ಕಾಗಿ **ಏವಂ ಮಚ್ಚಿತ್ತಃ** ಎಂದು ಆರಂಭಿಸಿ ಭಾಷ್ಯವನ್ನು ಬರೆಯುತ್ತಾರೆ. ಇಂತಹ ಬುದ್ಧಿಯೋಗವನ್ನು ಆಶ್ರಯಿಸಿ ಇನ್ನೂ ಕರ್ಮವನ್ನು ಮಾಡುವದಾದರೆ ಈಗ ನೀನು ಮಾಡಿ... ಯುದ್ಧಪರಿತ್ಯಾಗವು ಎಂದಿಗೂ ಸರಿಹೋಗುವದಿಲ್ಲವೆಂಬ **ಭಾವವೂ** ಇದರಿಂದ ಸೂಚಿತವು. ದುಷ್ಟನಿಗ್ರಹವನ್ನು ಮಾಡಿ ನನ್ನಲ್ಲಿ ಸಮರ್ಪಿಸಬೇಕೆಂಬ ಬುದ್ಧಿಯೋಗವನ್ನು ಹೊಂದಿ, ನನ್ನನ್ನೇ ಚಿನ್ತಿಸುತ್ತಾ ಉಪಾಸನೆಯನ್ನು ಮಾಡಿದರೆ ನಿನಗೆ ಯಾವ ವಿಧ ತೊಂದರೆಗಳಿಗೂ ಕಾರಣವಿಲ್ಲವೆಂದು ಉಪದೇಶಿಸುತ್ತಾರೆ. **ದೈವಂ ಚೈವಾತ್ರ ಪಂಚಮಮ್** (ಗೀ ೧೮-೧೪) ಎಂಬಲ್ಲಿ ಹೇಳಿರುವ **ಹಾಗೆ**, ನಿನ್ನ ಪ್ರಕೃತಿ ಸಂಬಂಧ ಪ್ರಾರಬ್ಧಗಳಿಗೆ ಅನುಗುಣವಾದ ನನ್ನ ಸಙ್ಕಲ್ಪಾನುಸಾರವಾಗಿಯೇ ಎಲ್ಲವೂ ನಡೆಯುವದರಿಂದ, ನಿನ್ನ ಅಹಂಭಾವವೂ ಸಙ್ಕಲ್ಪವೂ ಕಾರ್ಯ ಕಾರಿಯಾಗಲಾರದಾದುದರಿಂದ ... ಹಿತೋಪದೇಶಾನುಗುಣವಾಗಿ ನೀನು ನಡೆಯುವದು ನಿನಗೆ ಪರಮ ಶ್ರೇಯಸ್ಕರವೆಂದು ಹೇಳಿ, ನಿಗಮನದಲ್ಲಿ ಪುನಃ ಯುದ್ಧ ಪ್ರೋತ್ಸಾಹವನ್ನು ಮಾಡಲು ಆರಂಭಿಸುತ್ತಾರೆ. ಈ ಶ್ಲೋಕದಲ್ಲಾದರೋ ಅಹಂಭಾವದಿಂದ ಸ್ವತಂತ್ರಿಸಿ ನಡೆಯಲುಪಕ್ರಮಿಸಿದರೂ, ಅದು ನಡೆಯುವದಿಲ್ಲವೆಂದೂ ಆವಿಷಯದಲ್ಲಿ ನನ್ನ ಸಙ್ಕಲ್ಪವಿಲ್ಲದುದರಿಂದ, ನನ್ನ ಅನುಗ್ರಹವೂ ಇಲ್ಲದೆ ಪ್ರಕೃತಿ ಸಂಬಧಕ್ಕೆ ಸಿಕ್ಕಿ ತೊಂದರೆ ಪಡುತ್ತೀಯೇ ಎಂದು ಹೇಳುತ್ತಾರೆ. ಆಗಲಿ ಅರ್ಜುನನಿಗೇನೋ ಶ್ರೀ ಕೃಷ್ಣಭಗವಾನರವರು ಪರಮ ಕೃಪೆಯು ಎದುರಿಗೆ ನಿಂತು ಉಪದೇಶಿಸಿರುತ್ತಾರೆ. ಇಂತಹ ಸುಕೃತವು ಎಲ್ಲಾ ಪ್ರಪನ್ನರಿಗೂ ಇಲ್ಲವಲ್ಲಾ; ಅವರುಗಳು ಏನನ್ನು ಮಾಡತಕ್ಕದ್ದು? ಎಂಬ ಆಶಯದಲ್ಲಿ, ಅರ್ಚಾವತಾರಿಯ ಎದುರಿಗೆ ನಿಂತು "ತವೇವ ಶರಣಂಗಚ್ಛ" ಎಂದು ಮುಂದೆ ಈ ಅಭಿಪ್ರಾಯವೇ ಉಪಪಾದಿಸಲ್ಪಡುವ ಶ್ಲೋಕದಲ್ಲಿ ಹೇಳಿರುವ ಹಾಗೆ, ಶರಣಾಗತಿಯನ್ನು ಅನುಷ್ಠಿಸಿ, **ಯುದ್ಧಿತ ಮಮ ದೇವೇಶ** ತದಾಜ್ಞಾಪಯ **ಮಾಧವ**"ಎಂದು ಬೇಡಿದರೆ ಸ್ವಾಮಿಃ ಸಙ್ಕಲ್ಪವಿರುವ ಮತ್ತು ಅನುಗ್ರಹ ದೊರೆಯುವ ಪ್ರವೃತ್ತಿಯಲ್ಲೇ ನಿಯಮಿಸುವನು. ಈ ವಿಷಯದಲ್ಲಿ ಈಷದಪಿ ಸಂದೇಹ ಬೇಕಿಲ್ಲವು. ಸರಿಯಾಗಿಯೇ ಸ್ವಾಮಿ ಪ್ರೇರಿಸುವನೆಂಬುದು ಶಾಸ್ತ್ರಾರ್ಥವೂ ಮತ್ತು ಸುಪ್ರಸಿದ್ಧವೂ. **ಏವಂ** - ಹಿಂದೆ ಹೇಳಿದ ಬುದ್ಧಿಯೋಗದಿಂದ ಕೂಡಿ, **ಮಚ್ಚಿತ್ತಃ** - ನನ್ನಲ್ಲೇ ಇಟ್ಟ ಮನಸ್ಸುಳ್ಳವನಾಗಿ ನಾನೇ ಪ್ರಾಪ್ಯನು, ನಾನೇ ಪ್ರಾಪಕನು, ಎಂಬ ಅಭಿಸಂಧಿಯಿಂದ ಇಟ್ಟ ಮನಸ್ಸುಳ್ಳವನಾಗಿ, **ಸರ್ವ ಕರ್ಮಾಣಿ** - ನಿತ್ಯ ನೈಮಿತ್ತಿಕ ಮತ್ತು ದೇಹ ಧಾರಣಾದಿಗಳಾದ ಕಾಮ್ಯಗಳಾದ ಸಮಸ್ತ ಕರ್ಮಗಳನ್ನೂ, **ಕುರ್ವ** - ನಾನು ಹಿಂದೆ ಹೇಳಿದ ಬುದ್ಧಿಯೋಗಯುಕ್ತ

**ದುರ್ಗಾಣಿ ಮತ್ಪ್ರಸಾದಾದೇವ ತರಿಷ್ಯಸಿ, ಅಥತ್ವಂ ಅಹಙ್ಕಾರಾತ್ ಅಹಮೇವ**

---

**ನಾಗಿಮಾಡುವವನಾಗಿ** ಎಂದರೆ ಮಾಡಿದುದಾದರೆ, **ಸರ್ವಾಣಿ ಸಾಂಸಾರಿಕಾಣಿ ದುರ್ಗಾಣಿ**– ಸಮಸ್ತ ಸಂಸಾರ ಸಂಬಂಧನಾದ ದಾಟಲಶಕ್ಯನಾದ ತೊಂದರೆಗಳನ್ನೆಲ್ಲಾ, **ಮತ್ಪ್ರಸಾದಾದೇವ**- ನನ್ನ ಅನುಗ್ರಹದಿಂದಲೇ, ತ**ರಿಷ್ಯ**ಸಿ - ದಾಟುತ್ತೀಯೋ. ಕರ್ಮಾನುಷ್ಠಾನವೇ ಅಪೂರ್ವದ್ವಾರಾ ಫಲಪ್ರದವೆಂದು ಹೇಳುವದು ಅಪಸಿದ್ಧಾನ್ತವು. ಇದು ನಿರಾಕರಿಸಲ್ಪಟ್ಟಿತು. ಆದುದರಿಂದ **ಮತ್ಪ್ರಸಾದೇನ** ಎಂದು ಪ್ರಯೋಗವು. ಕರ್ಮವು ಜಡವು, ಅದು ಅನುಷ್ಠಿಸಿದ ಒಡನೆಯೇ ಗತಿಸಿ ಹೋಗುತ್ತದೆ. ಅದು ಹೇಗೆ ಫಲಪ್ರದವಾದೀತು ? ಆ ಕರ್ಮವೇ ಭಗವಂತನ ಅನುಗ್ರಹ ನಿಗ್ರಹಸಙ್ಕಲ್ಪವನ್ನುಂಟುಮಾಡುವದರಿಂದ ಅದೇ ಫಲವನ್ನು ಕೊಡುತ್ತದೆಂದು ಹೇಳುವ ವಾಡಿಕೆಯುಂಟು. ಸತ್ಕರ್ಮಗಳನ್ನೇಯಾಗಲಿ ದುಷ್ಕರ್ಮಗಳನ್ನೇಯಾಗಲಿ ಮಾಡಿದರೆ ಅದನ್ನೇನು ಒಂದು ಹೊರೆಯ ರೂಪದಲ್ಲಿ ಹೊತ್ತುಕೊಂಡು ಈತನು ಜನ್ಮವನ್ನೆತ್ತುವದಿಲ್ಲವು. ಸರ್ವೇಶ್ವರನ ಅನುಗ್ರಹ ನಿಗ್ರಹಗಳು ಈತನನ್ನು ಅನುಸರಿಸಿ ಬರುತ್ತವೆ ಎಂಬ ಅಭಿಪ್ರಾಯವು. ಈ ಅಭಿಪ್ರಾಯವನ್ನು ಸೂಚಿಸುವದಕ್ಕಾಗಿ **ಮತ್ಪ್ರಸಾದಾತ್** - ನನ್ನ ಅನುಗ್ರಹದಿಂದ ಎಂಬ ಪ್ರಯೋಗವು. ಹೀಗೆ ಪರಮಾತ್ಮನಲ್ಲೇ ಸಮಸ್ತ ನಿತ್ಯ ನೈಮಿತ್ತಿಕಕಾಮ್ಯಗಳನ್ನೂ ಸಮರ್ಪಿಸತಕ್ಕದ್ದೆಂಬ ಬುದ್ಧಿಯೋಗವನ್ನು ಅವಲಂಬಿಸಿ ಕರ್ಮಯೋಗವನ್ನು ಮಾಡತಕ್ಕದ್ದೇ ವಿಧಾಯಕವೆಂದೂ,ಅದರಿಂದಲೇ ಕ್ರಮೇಣ ಉಪಾಸನದ್ವಾರಾ ಪರಿಪೂರ್ಣ ಭಗವತ್ಪ್ರಾಪ್ತಿಯು ಎಂಬದೂ, ಈ ಶ್ಲೋಕದಿಂದ ನಿಗಮನಮಾಡಿ ಹೇಳಲ್ಪಟ್ಟಿತು. ಇಲ್ಲಿ **ಸರ್ವದುರ್ಗಾಣಿ** ಎಂಬ ಪ್ರಯೋಗದಿಂದ ತೋರುವ ಅರ್ಥವೇನೆಂದ್ಧರೆ, ಈ ಸಂಸಾರದಲ್ಲಿ ಉಂಟಾಗುವ ತೊಂದರೆಗಳು ಗಿರಿ, ವನ, ಜಲದುರ್ಗಗಳಹಾಗೆ, ಸರ್ವೇಶ್ವರನು ಸಾಧ್ಯೋಪಾಯನಾಗಿ ನಿಂತು ಅನುಗ್ರಹಿಸದೆ ಇದ್ದರೆ, ಇಂತಹ ಸಾಂಸಾರಿಕ ತೊಂದರೆಗಳನ್ನೆಲ್ಲಾ ದಾಟಲು ಅಸಾಧ್ಯವೆಂಬ ಭಾವವು ತೋರುತ್ತದೆ. ಇಲ್ಲಿ **ಮಚ್ಚಿತ್ತಃ** - ಎಂದು ನನ್ನಲ್ಲೇ ಮನಸ್ಸನ್ನಿಡತಕ್ಕದ್ದು ಎಂದು ಇಷ್ಟು ಮಾತ್ರ ಉಪದೇಶವು ಸಾಲದು, ಮಚ್ಚಿತ್ತನಾಗಿ ಸಮಸ್ತ ಕರ್ಮಗಳನ್ನೂ ನನ್ನ ಉಪದೇಶರೀತ್ಯಾ ಅನುಷ್ಠಿಸಿ, ಅವುಗಳನ್ನು ನನ್ನಲ್ಲಿ ಸಮರ್ಪಿಸತಕ್ಕದ್ದೆಂಬ ಭಾವವೂ ಸೂಚಿತವೆಂದು **ಏವಂ ಮಚ್ಚಿತ್ತಸ್ಸರ್ವಕರ್ಮಾಣಿ ಕುರ್ವ್ನ** ಎಂಬ ಭಾಷ್ಯವು. ಸರ್ವೇಶ್ವರನ ಉಪದೇಶಾನುಗುಣವಾಗಿಯೂ, ಆತನ ಆಜ್ಞೆಗಳಾದ ಕರ್ಮಗಳನ್ನೂ ಇತರ ಇತಿಕರ್ತವ್ಯಗಳನ್ನೂ ಶಾಸ್ತ್ರಾನುಗುಣವಾಗಿಯೂ ನಡೆಸುವದರಿಂದ ಶ್ರೇಯಃಪ್ರಾಪ್ತಿಯನ್ನು ಜಡವಾದ ಕಳೆದುಹೋದ ಸುಕೃತಗಳೇ ಉಂಟುಮಾಡಲಾರವು ಎಂದೂ ಅನುಗ್ರಹಮಯನಾದ ಸರ್ವೇಶ್ವರನೇ **"ವಿದಧಾತಿಕಾಮಾ"** ಎಂಬ ಶ್ರುತಿಯಲ್ಲಿ ಹೇಳಿರುವ ಹಾಗೆ ಸರ್ವಫಲಪ್ರದನೆಂದೂ ತಿಳಿಯುವನು. ಇದನ್ನೆಲ್ಲಾ **ಮತ್ಪ್ರಸಾದಾತ್** ಎಂಬ ಪ್ರಯೋಗವು ಸೂಚಿಸುತ್ತದೆ. **ಸರ್ವಕರ್ಮಾಣಿ ಕುರ್ವ್ನ** ಎಂಬುದನ್ನು ಶ್ರೀ ಯತಿವರ್ಯರು ತಮ್ಮ ಇಷ್ಟ ಬಂದಂತೇ ಸೇರಿಸಿಕೊಂಡು ವ್ಯಾಖ್ಯಾನ ಬರೆಯಲಿಲ್ಲವು. ಹಿಂದಿನ ೫೭ನೆಯ ಶ್ಲೋಕದಲ್ಲಿರುವ **ಚೇತಸಾ ಸರ್ವ ಕರ್ಮಾಣಿ** ಎಂಬುದನ್ನು ಅನುಸರಿಸಿ, ಪ್ರಕರಣವೂ ಸರ್ವ ಕರ್ಮ ವಿಷಯವಾದುದರಿಂದ, ಹಾಗೆ ಭಾಷ್ಯವು. **ಮತ್ಪ್ರಸಾದಾದೇವ** ಎಂಬಲ್ಲಿನ ಅವಧಾರಣದಿಂದ ಮೋಕ್ಷಸಾಧನವನ್ನೂ ದಯಪಾಲಿಸುವ ಯೋಗ್ಯತೆಯು ತಾನಲ್ಲದೆ ಇನ್ನು ಯಾರಿಗೂ ಇಲ್ಲವೆಂಬುದು ವ್ಯಕ್ತವು. ಆದುದರಿಂದ ಸರ್ವೇಶ್ವರನಿಗೆ **ಸ್ವಜನಸ್ಯಚ ರಕ್ಷಿತಾ** (ರಾಮಾ. ಸುಂ.) ಎಂಬ ಬಿರುದು. ಇಲ್ಲಿ ಸ್ವಜನರು ಯಾರು ಎಂದರೆ ಪ್ರಪನ್ನರು. ಆದುದರಿಂದ **ಮೋಕ್ಷಾರ್ಥಿ**ಗೆ ಶಾಸ್ತ್ರಜ್ಞಾನಮಾತ್ರ ಸಾಲದು. ಹಿತವು ಯಾವುದು ಎಂಬುದನ್ನು ಕೇಳಿ ತಿಳಿದು, ತದನುಗುಣವಾದ ಅನುಷ್ಠಾನವೂ ಆವಶ್ಯಕವು. ಆದುದರಿಂದ **ತತ್ತ್ವಮಸಿ** ಮುಂತಾದ ವಾಕ್ಯಜನ್ಯಜ್ಞಾನದಿಂದಲೇ **ಮೋಕ್ಷ**ವೆಂಬ

**ಕೃತ್ಯಾಕೃತ್ಯ ವಿಷಯಂ ಸರ್ವಂ ಜಾನಾಮೀತಿ ಭಾವಾತ್, ಮದುಕ್ತಂ ನಶ್ರೋಷ್ಯಸಿ ಚೇತ್, ವಿನಙ್ಕ್ಷ್ಯಸಿ – ವಿನಷ್ಟೋ ಭವಿಷ್ಯಸಿ ; ನಹಿ ಕಶ್ಚಿ ನ್ಮದ್ವ್ಯತಿರಿಕ್ತಃ ಕೃತ್ಸ್ನಸ್ಯ ಪ್ರಾಣಿಜಾತಸ್ಯ ಕೃತ್ಯಾಕೃತ್ಯ ಯೋರ್ಜ್ಞಾತಾ ಪ್ರಶಾಸಿತಾ ವಾಸ್ತಿ ||೫೮||**

ವಾದವು ಕೂಡುವದಿಲ್ಲವು. ಆದುದರಿಂದ ಬುದ್ಧಿಯೋಗ ಮಹಿಮೆಯಿಂದ ಓ ಅರ್ಜುನನೇ! ಕರ್ಮಯೋಗವನ್ನೇ ಅನುಷ್ಠಿಸುವದೇ ನಿನಗೆ ಸುಕರವಾಗಿ ಪರಂಪರಯಾ ಮೋಕ್ಷಸಾಧಕವಾಗಿರುವದರಿಂದ, ನೀನು ಅದನ್ನೇ ಅನುಷ್ಠಿಸತಕ್ಕದ್ದೆಂಬುದು ಸಾರವತ್ತಾದ ಉಪದೇಶವೆಂಬುದು ಸೂಚಿತವು. ಹಾಗೆ ನೀನು ನಡೆಸದೇ ಹೋದರೆ ಪ್ರತ್ಯುತ ಪ್ರತ್ಯವಾಯವೂ ಉಂಟೆಂದು ಮುಂದೆ ಹೇಳುತ್ತಾರೆ.

ಮುಂದೆ ಉತ್ತರಾರ್ಧದಿಂದ ಇಂತಹ ಬುದ್ಧಿಯೋಗದಿಂದ ಪರಮಾತ್ಮನಲ್ಲೇ ಮನಸ್ಸಿಟ್ಟು ಆತನಲ್ಲೇ ಸಮಸ್ತ ಕರ್ಮಗಳನ್ನೂ ಸಮರ್ಪಿಸದೇ ಇರುವದರಿಂದುಂಟಾಗುವ ಪ್ರತ್ಯವಾಯವನ್ನು ತಿಳಿಸುತ್ತಾರೆ. ಹೀಗೆ ಪರಮ ಹಿತೋಪದೇಶದಲ್ಲಿ ಅನಾದರಣೆಯನ್ನು ತೋರಿಸಿ, ಸ್ವತಂತ್ರಿಸಿ ನಾನು ಹೇಳಿದ ಹಾಗೆ ಮಾಡದಿದ್ದರೆ ನೀನು ನಷ್ಟನಾಗುವೆ, ಎಂದರೆ ಆತ್ಮೋಜ್ಜೀವನವನ್ನು ಮಾಡಿಕೊಳ್ಳದೆ, ಪುನಃ ಪುನಃ ಸಾಂಸಾರಿಕ ಕಷ್ಟಗಳಿಗೆ ಗುರಿಯಾಗುವೆ ಎಂದು ಹೇಳುತ್ತಾರೆ.—ಅಥ-ಇದು ಹಿಂದೆ ಹೇಳಿದುದಕ್ಕೆ ವಿರುದ್ಧಾರ್ಥವನ್ನು ಬೋಧಿಸುತ್ತದೆ, ಹಾಗಲ್ಲದೆ, ತ್ವಂ-ನನಗೆ ತುಂಬಾ ಹೃದ್ಯನಾದ ನೀನು, ಜೀವಾತ್ಮನು ಶಾಸ್ತ್ರಗಳಲ್ಲಿ ತುಂಬಾ ಹೃದ್ಯನೆಂದು "**ಮಣಿವರ ಇವಶೌರೇರ್ನಿತ್ಯ ಹೃದ್ಯೋಽಪಿ ಜೀವಃ**" ಎಂಬಲ್ಲಿ ಹೇಳಿರವಹಾಗೆ, ಉಪಪಾದಿತವು, **ಅಹಂಕಾರಾತ್** ಎಂದರೆ **ಅಹಮೇವ ಕೃತ್ಯಾಕೃತ್ಯ ವಿಷಯಂ ಸರ್ವಂಜಾನಾಮೀತಿ ಭಾವಾತ್** - ನಾನೇ ಯಾವುದು ಮಾಡತಕ್ಕದ್ದು ಯಾವುದು ಮಾಡತಕ್ಕದ್ದಲ್ಲವು ಎಂಬ ಸ್ವಮಸ್ತವನ್ನೂ ತಿಳಿದವನು ಎಂಬ ಅಹಂಭಾವದಿಂದ, **ಮದುಕ್ತಂ** - ನನ್ನಿಂದ ನಿನಗೆ ಪರಮಹಿತರೂಪದಲ್ಲಿ ಉಪದೇಶಿಸಿಸುವದನ್ನು **ನಶ್ರೋಷ್ಯಸಿಚೇತ್** - ಕೇಳದೇ ಹೋದರೆ, ಎಂದರೆ ನಾನು ಹೇಳಿದ ಹಿತೋಪದೇಶವನ್ನು ಚನ್ನಾಗಿ ಗಮನಿಸಿ ತದನುಗುಣವಾಗಿ ನಡೆಸದೇ ಹೋದರೆ, ಎಂಬರ್ಥವು. ಬರೀ ಕೇಳಿಬಿಟ್ಟರೆ ವಿನಾಶವಿಲ್ಲದೆ ರಕ್ಷಿಸಲ್ಪಡುವದಿಲ್ಲವು. ಉಪದೇಶವನ್ನು ಕೇಳಿ ತದನುಗುಣವಾಗಿ ಅನುಷ್ಠಿಸದೇ ಹೋದರೆ ಅನಿಷ್ಟ ಫಲವೆಂಬ ಭಾವವು. **ವಿನಙ್ಕ್ಷ್ಯಸಿ** ಎಂದರೆ **ವಿನಷ್ಟೋ ಭವಿಷ್ಯಸಿ** - ನಾಶವನ್ನು ಹೊಂದುವನು ಆಗುತ್ತೀಯೇ. ಹಿಂದೆ **ಬುದ್ಧಿನಾಶಾತ್ಪ್ರಣಶ್ಯತಿ** ಎಂಬಲ್ಲಿ ಹೇಳಿದ ಭಾವವೇ ಇಲ್ಲಿಯೂ ಹೇಳಲ್ಪಟ್ಟಿತು. ಇದು ಕೋಪದಿಂದ ಶಾಪರೂಪದಲ್ಲಿ ಹೇಳಲ್ಪಟ್ಟದುದಲ್ಲವು. ಮಮ **ಪ್ರಾಣಾಹಿ ಪಾಂಡವಾಃ**" ಎಂದು ಪಾಂಡವರ ವಿಷಯದಲ್ಲೇ ಹೇಳಿರುವಾಗ ಮುಖ್ಯವಾಗಿ ಅರ್ಜುನನ ವಿಷಯದಲ್ಲೂ ಕೋಪತಾಪಗಳುಂಟೇ? ಆದುದರಿಂದ ಈಗ ತಾವು ಉಪದೇಶಿಸಿದುದು ಪರಮ ಹಿತವಾದುದೇ, ಅಂಥಾದ್ದನ್ನು ತನ್ನ ಮಿತ್ರನು ಇನ್ನೂ ಗಮನಿಸಲಿಲ್ಲವೇ ಎಂಬ ಪರಿತಾಪದಿಂದ ಅರ್ಜುನನನ್ನು ಕುರಿತು ಹೇಳಿದುದು ಎಂಬ ಭಾವವನ್ನು ಮುಂದಿನ ವಾಕ್ಯದಿಂದ ಸೂಚಿಸುತ್ತಾರೆ. **ಮದ್ವ್ಯತಿರಿಕ್ತಃ**-ನಾನಲ್ಲದೆ ಬೇರೆ,ಕೃತ್ಸ್ನ **ಪ್ರಾಣಿಜಾತಸ್ಯ**-ಸಮಸ್ತಪ್ರಾಣಿವರ್ಗದ,**ಕೃತ್ಯಾಕೃತ್ಯಯೋಃ** - ಇದು ಮಾಡತಕ್ಕದ್ದು ಇದು ಮಾಡತಕ್ಕದ್ದಲ್ಲವೆಂಬುದನ್ನು, **ಜ್ಞಾತಾ**- ತಿಳಿದವನಾಗಲಿ ಮತ್ತು **ಪ್ರಶಾಸಿತಾವಾ** - ನಿಯಮಿಸುವನಾಗಲಿ **ನಹಿಕಶ್ಚಿದಸ್ತಿ** - ಯಾವನೊಬ್ಬನೂ ಇಲ್ಲವಷ್ಟೇ. ಪರಮ ಹಿತೋಪದೇಶಕ್ಕೆ ಪ್ರಕೃತಿ ಸಂಬಂಧದಿಂದ ಜ್ಞಾನಸಂಕೋಚವನ್ನು ಹೊಂದಿರುವ ಜೀವಾತ್ಮರುಗಳಿಗಿಂತ ಲೋಕಗುರುವಿನ ಉಪದೇಶವೇ ಸರ್ವೋತ್ಕೃಷ್ಟವು. ಅದೂ ಅಲ್ಲದೆ ಬ್ರಹ್ಮಾದಿ ದೇವತೆಗಳಿಗೆ ಈ ಉಪದೇಶಾನುಗುಣವಾಗಿ ಮೋಕ್ಷವನ್ನು ಕೊಡುವ ಶಕ್ತಿಯೇ ಇಲ್ಲವು. "ಬ್ರಹ್ಮಾಣಃ **ಶಿತಿಕಂಠಂಚ** ಯಾಶ್ಚಾನ್ಯಾ **ದೇವತಾಸ್ಸ್ಮೃತಾಃ | ಪ್ರತಿಬುದ್ಧಾ ನ ಸೇವಂತೇ ಯಸ್ಮಾತ್ಪರಿಮಿತಂ ಫಲಮ್**" ಎಂಬ ವ್ಯಾಸೋಕ್ತಿಯು ದೇವತೆಗಳನ್ನು ಸೇವಿಸಿದರೆ ಪರಿಮಿತ

**ಮೂ. ಯದ್ಯಹಙ್ಕಾರ ಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯ ಸ್ತೇ ಪ್ರಕೃತಿ ಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥**

---

ವಾದ ನಶ್ವರವಾದ ಐಹಿಕಫಲಗಳೇ ವಿನಾ, ಶಾಶ್ವತ ಮೋಕ್ಷಫಲವು ದೊರಕುವದಿಲ್ಲವೆಂದ ಬೋಧಿಸುತ್ತದೆ. ಈಗ ಶ್ರೀ ಕೃಷ್ಣಭಗವಾನರವರು ಮಾಡಿದ ಹಿತೋಪದೇಶವನ್ನು ಅಂಗೀಕರಿಸಿ ದುಷ್ಕೃತಿಗಳನ್ನು ಯುದ್ಧದಲ್ಲಿ ಕೊಲ್ಲುವದು ಕ್ಷತ್ರಿಯವರ್ಣಕ್ಕೆ ಇತಿಕರ್ತವ್ಯತಾರೂಪವಾಗಿ ಕರ್ಮ ಯೋಗಕ್ಕೆ ಸೇರಿದುದರಿಂದ ನೀನು ಪುನಃ ಗಾಂಡೀವವನ್ನು ತೆಗೆದುಕೊಂಡು ಯದ್ಧಮಾಡುವ ದಾದರೆ ನಿನಗೆ ಶ್ರೇಯಸ್ಸುಂಟಾಗುತ್ತದೆ; ಇಲ್ಲವಾದರೆ ವ್ಯಥಾ ಕೆಟ್ಟುಹೋಗುತ್ತೀಯೇ ಎಂಬ ಭಾವವು. ಈ ಜೀವಾತ್ಮನ ಇತಿಕರ್ತವ್ಯತೆಗಳನ್ನೂ ನಿತ್ಯನೈಮಿತ್ತಿಕಗಳನ್ನೂ ನಡಸಲೇಬೇಕೆಂದು ಇಷ್ಟುದೂರ ಒತ್ತಿಹೇಳಲು, ಕಾರಣವೇನೆಂದು ಕೇಳಬಹುದು. ಇವುಗಳೆಲ್ಲಾ ತಾನು ದಯ ಪಾಲಿಸಿದ ಶಾಸ್ತ್ರದಲ್ಲಿ ವಿಧಿಸಿರುವ ಧರ್ಮಗಳು. ಅವುಗಳಲ್ಲಿ ಲೋಪಕೂಡದೆಂದು, ತಾನೇ **ಕೃಷ್ಣಂ ಧರ್ಮಂ ಸನಾತನಂ** ಎಂದೂ "**ರಕ್ಷಿತಾಸ್ವಸ್ಯಧರ್ಮಸ್ಯ**" ಎಂದೂ "**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ**" ಎಂದೂ ಹೀಗೆಲ್ಲಾ ಹೇಳಿ, ಅಂತಹ ಧರ್ಮಗಳಿಗೆ ತಾನೇ ಅಧಿ ಪತಿಯಾಗಿದ್ದರೂ, ತಾನೂ ಅವುಗಳಿಗೆ ವಶನಾಗಿ ಅವುಗಳನ್ನು ಸ್ವಲ್ಪವಾಗಲಿ ಅತಿಕ್ರಮಿಸದೆ ಧರ್ಮವನ್ನು ಪರಿಪಾಲಿಸುತ್ತಿದ್ದಾನೆ. ಆದುದರಿಂದ **ಕ್ಷತ್ರಿಯನಾಗಿ** ತನ್ನ ಧರ್ಮವಾದ ಅಧರ್ಮಿಗಳನ್ನು ನಿರ್ಮೂಲನ ಮಾಡುವ ಕಾರ್ಯದಲ್ಲಿ ಪರಾಙ್ಮುಖನಾದರೆ **ವಿನಙ್ಕ್ಷ್ಯಸಿ** ಎಂದು ಹೇಳಿದರು.

**ವಿನಙ್ಕ್ಷ್ಯಸಿ** ಎಂದು ಕೋಪದಿಂದ ಹೇಳಿದ ಮಾತು ಅಲ್ಲವೆಂದು ತಿಳಿಸುವದಕ್ಕಾಗಿ **ನಹಿ** ಎಂದಾರಂಭಿಸಿ **ಪ್ರಶಂಸಿತಾಮಾಸ್ಮಿ** ಎಂದು ಕೃಪಾಸಾಗರನು ಪರಿತಾಪದಿಂದ ಹೇಳಿದ ಮಾತೆಂದು ಪ್ರದರ್ಶಿಸಿರುತ್ತಾರೆ. ಅರ್ಜುನನ ವಿಷಯದಲ್ಲಿ ಸ್ವಾಮಿಗೆ ಕೋಪವು ಎಂದಿಗೂ ಇಲ್ಲವು; ತನ್ನ ಪ್ರಸನ್ನತೆಯನ್ನು ಸಂಪಾದಿಸಿಕೊಳ್ಳಲು ತಮ್ಮ ಹಿತೋಕ್ತಿಯ ಪ್ರಕಾರ ನಡಸದೇ ಹೋದರೆ, ಇನ್ನು ಯಾರು ಹಿ ಚಿಂತಕರಾಗಲು ಜ್ಞಾತೃತ್ವವೂ ಇಲ್ಲವು, ನಿಯಮನ ಶಕ್ತಿಯೂ ಇಲ್ಲವು; ಆದುದರಿಂದ ನಿನ್ನ ವಿಷಯವಾದ ಪರಿತಾಪದಿಂದ ಉಂಟಾಗುವ ಅನರ್ಥವನ್ನು ತಿಳಿಸಿರು ತ್ತೇನೆಂಬ ಭಾವವು.

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕವಲ್ಲಿ ಇವನ್ನು ಮಾಡಬಹುದು ಇದನ್ನು ಮಾಡ ಕೂಡದು ಎಂಬ ವ್ಯವಸ್ಥೆಗೆ ನಿನಗೇನೇ ಜ್ಞಾನವುಂಟು. ಸ್ವಾತಂತ್ರ್ಯವೂ ಉಂಟು ಎಂದು ಭಾವಿಸಿ ನನ್ನ ಪರಮ ಹಿತೋಪದೇಶವನ್ನು ಅಂಗೀಕರಿಸದಿದ್ದರೆ ನೀನು ಅನ್ಯಾಯವಾಗಿ ಆತ್ಮನಾಶವನ್ನು ಮಾಡಿಕೊಳ್ಳುತ್ತೀಯೇ ಎಂದು ಹೇಳಿದರು. ಈ ಶ್ಲೋಕವಲ್ಲಿ ನೀನು ಹಾಗೆ ಸ್ವತಂತ್ರಿಸಿ ನಡೆ ಯಲೂ ಕೂಡ ನಿನಗೆ ಸಾಧ್ಯವೂ ಇಲ್ಲವೆಂದು ಹೇಳುತ್ತಾರೆ. ಏಕೆಂದರೆ ಹಿಂದೆ ೧೫ ನೆಯ ಶ್ಲೋಕದಲ್ಲಿ, ಸಮಸ್ತ ಜೀವಾತ್ಮರ ಪ್ರವೃತ್ತಿಗೂ ಐದು ಹೇತುಗಳೆಂದು ಹೇಳುವಾಗ "**ದೈವಂ ಚೈವಾತ್ರ ಪಂಚಮಂ**" ಎಂದು ಹೇಳಿರುತ್ತಾರೆ. ಅದೂ ಅಲ್ಲದೆ "**ಪರಾತ್ತು ತಚ್ಛ್ರುತೇಃ** ಎಂಬ ವ್ಯಾಸಸೂತ್ರದಲ್ಲೂ, ಜೀವಾತ್ಮನ ಪ್ರವೃತ್ತಿಗಳೆಲ್ಲಾ ಪರಮಾತ್ಮಾಧೀನವಾದವು ಎಂದು ಹೇಳಲ್ಪಟ್ಟಿ ರುತ್ತದೆ. ಪರಮಾತ್ಮ ಸಙ್ಕಲ್ಪವಾದರೋ ಈ ಜೀವಾತ್ಮನ ಪೂರ್ವಕೃತ ಪಾಪ ಪುಣ್ಯಾನುಗುಣ ವಾದುದರಿಂದ, ಓ ಅರ್ಜುನನೇ ನೀನು ಯುದ್ಧಮಾಡುವದಿಲ್ಲವೆಂಬ ನಿಷ್ಕರ್ಷೆಯೂ ವಿಫಲವಾಗ ಬಹುದು, ಏಕೆಂದರೆ ಕರ್ಮಾನುಗುಣವಾಗಿ ಪ್ರಾಪ್ತವಾದ ಪ್ರಕೃತಿಗೆ ನೀನು ಅಧೀನನಾದುದರಿಂದ ನಿನ್ನ ನಿಷ್ಕರ್ಷೆಯೂ ಸುಳ್ಳಾಗಬಹುದು ಎಂದು ಹೇಳುತ್ತಾರೆ.—**ಅಹಂಕಾರಮಾಶ್ರಿತ್ಯ** - ನನ್ನ ಉಪದೇಶಗಳಿಗೆ ಮನಕೊಡದೆ ಪ್ರವೃತ್ತಿಗಳಲ್ಲಿ ನಾನು ಸರ್ವಸ್ವಾತಂತ್ರ್ಯವುಳ್ಳವನೆಂಬ ಅಹಂಭಾವ ವನ್ನು ಆಶ್ರಯಿಸಿ. **ನಯೋತ್ಸ್ಯೇ** - ಭೀಷ್ಮರೊಂದಿಗೆ ಯುದ್ಧಮಾಡಬೇಕಾಗಿರುವ ಈ ಸಂದರ್ಭ

ದಲ್ಲಿ, ಅಜ್ಞಾನದಿಂದ ನಾನು ಭೀಷ್ಮದ್ರೋಣಾದಿಗಳಮೇಲೆ ಯುದ್ಧಮಾಡುವದಿಲ್ಲವು, **ಇತಿ ಮನ್ಯಸೇಯದಿ** ಎಂದು ಅಭಿಪ್ರಾಯಪಡುವನಾದರೆ, ಇಲ್ಲಿ **ಅಹಂಕಾರಮಾಶ್ರಿತ್ಯ** ಎಂಬುದನ್ನು **ನಯೋತ್ಸ್ಯೇ** ಎಂಬುದರೊಂದಿಗೂ ಮತ್ತು **ಅಹಂಕಾರಮಾಶ್ರಿತ್ಯ ಮನ್ಯಸೇಯದಿ** ಎಂದೂ ಹೀಗೆ ಎರಡರೊಂದಿಗೂ ಅನ್ವಯಿಸತಕ್ಕದ್ದು. ತೇ - ನಿನ್ನ ಪೂರ್ವಕರ್ಮವಾಸನೆಗೂ ತದನುಗುಣವಾದ ನನ್ನ ಸಙ್ಕಲ್ಪಕ್ಕೂ ಅಧೀನನಾದ ನಿನ್ನ, **ಏಷಃ ವ್ಯವಸಾಯಃ** - ಈ ನಿಶ್ಚಯಿಸಿರುವ, ಯುದ್ಧಮಾಡುವದಿಲ್ಲವೆಂಬ ಸಙ್ಕಲ್ಪವು **ಮಿಥ್ಯಾ**-ವ್ಯರ್ಥವಾದುದಾಗಬಹುದು. ಏಕೆಂದರೆ **ಪ್ರಕೃತಿಃ**-ನಿನ್ನ ಕರ್ಮವಾಸನಾರೂಪ ಸ್ವಭಾವವೇ ಅಥವಾ ಕರ್ಮಾನುಗುಣವಾಗಿನಿನಗೆ ಪ್ರಾಪ್ತವಾಗಿರುವ ಕ್ಷತ್ರಿಯ ಸ್ವಭಾವವೇ. **ತ್ವಾಂ** - ಕರ್ಮಬದ್ಧನಾದ ನಿನ್ನನ್ನು, **ನಿಯೋಕ್ಷ್ಯತಿ** - ಯುದ್ಧಮಾಡುವಹಾಗೆ ನಿಯಮಿಸಬಲ್ಲದು. ಯದ್ಯಪಿ ಪ್ರತಿ ಪ್ರವೃತ್ತಿಯ ಪ್ರಥಮ ಸಙ್ಕಲ್ಪದಲ್ಲೂ ಸರ್ವನಿಯನ್ತಾವಾದ ಸರ್ವೇಶ್ವರನು, ಕ್ಷೇತ್ರಜ್ಞನಿಗೆ ಸ್ವಾತಂತ್ರ್ಯವನ್ನು ಕೊಟ್ಟಿರುವದೇನೋ ಸತ್ಯವು; ಆದರೆ ಆ ನಿನ್ನ ಸಙ್ಕಲ್ಪವು ಶಾಸ್ತ್ರಾನುಮತಿಯಿಂದ ಮಾಡುವ ಸದ್ಗುರುವಿನ ಉಪದೇಶಕ್ಕೆ ಅಧೀನವಾಗಿರತಕ್ಕದ್ದು, ಉಪದೇಶಕನು ಲೋಕಗುರುವೇ ಆದನಂತರ ಇನ್ನೂ ಹೇಳತಕ್ಕದ್ದೇನಿರುತ್ತದೆ ? ಆದರೂ ಇಂತಹ ಉಪದೇಶಗಳನ್ನು ನಿರಾಕರಿಸಿ, ಸ್ವಾತಂತ್ರ್ಯವನ್ನು ಆರೋಪಿಸಿಕೊಂಡು **ನಯೋತ್ಸ್ಯೇ** - ನಾನು ಯುದ್ಧಮಾಡುವದಿಲ್ಲವೆಂಬ ನಿನ್ನ ನಿಶ್ಚಯವು ನಡೆಯುವ ಹಾಗೆ ಇಲ್ಲವು. ಏಕೆಂದರೆ ಕರ್ಮವು ಬಲಿಷ್ಠವು. **ವಿಧಿರ್ನೂನ ಮಸಂಹಾರ್ಯಃ ಪ್ರಾಣಿನಾಂ ಪ್ಲವಗೋತ್ತಮ**" (ರಾ ಸುಂ. ೩೭. ೪) ಪ್ರಾರಬ್ಧ ಕರ್ಮಾನುಸಾರ ಪ್ರಾಪ್ತವಾದುದನ್ನು ಮೀರಲು ಯಾವ ಪ್ರಾಣಿಗೂ ಸಾಧ್ಯವಿಲ್ಲವೆಂದು ಸೀತೆಯು ಆಂಜನೇಯನನ್ನು ಕುರಿತು ಹೇಳುತ್ತಾಳೆ. ನನ್ನ ಸಙ್ಕಲ್ಪವೂ ಆವಶ್ಯಕವು ; ಆ ಪರಮಾತ್ಮ ಸಂಕಲ್ಪವಾದರೋ ನಮ್ಮ ಕರ್ಮಾಧೀನವಾದುದು. ಕರ್ಮವು ಬಲಿಷ್ಠವಾದರೆ ನಿನ್ನ ಸಂಕಲ್ಪವು ನಡೆಯುವುದಿಲ್ಲ ನಿನ್ನ "**ಮಿಥ್ಯೈಷ ವ್ಯವಸಾಯಸ್ತೇ**" ಎಂದು ಹೇಳಲ್ಪಟ್ಟಿತು. ನೀನು ಯುದ್ಧಮಾಡುವದಿಲ್ಲನೆಂಬ ನಿಶ್ಚಯವನ್ನು ಹೊಂದಿದವನಾದರೂ ನೀನು ಕರ್ಮವಾಸನಾ ಬಲದಿಂದ ಕ್ಷತ್ರಿಯನಾಗಿ ಜನಿಸಿರುವದರಿಂದಲೂ, ನನ್ನ ಸಂಕಲ್ಪಕ್ಕೂ ಅಧೀನನಾಗಿರುವದರಿಂದಲೂ, ನಿನ್ನ ವ್ಯವಸಾಯವು ನಡೆಯದಿಲ್ಲವು ಎಂದು ಹೇಳುತ್ತಾರೆ. ಹೀಗೆ ಹೇಳಿದ ನಂತರವೂ ಮುಂದೆ ಉಪದೇಶವಿಗಮನ ಕಾಲದಲ್ಲಿ ೬೩ನೆಯ ಶ್ಲೋಕದಲ್ಲಿ, **ಯಥೇಚ್ಛಸಿ ತಥಾ ಕುರು** - ನಿನ್ನ ಇಷ್ಟವಿರುವಹಾಗೆ ಮಾಡು ಎಂದು ಪುನಃ ಸ್ವಾತಂತ್ರ್ಯವನ್ನು ಕೊಟ್ಟು ಹೇಳಿದುದು ಸರಿಯೋ ಎಂಬಾಕ್ಷೇಪವು ನ್ಯಾಯವಾದುದೇ. "**ಕೃತಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷಿದ್ಧವೈಯರ್ಥ್ಯಾದಿಭ್ಯಃ** ಎಂಬ ವ್ಯಾಸಸೂತ್ರದಲ್ಲಿ ಹೇಳಿರುವ ಹಾಗೆ, ಪ್ರವೃತ್ತಿಯ ಪ್ರಥಮ ಸಙ್ಕಲ್ಪ ಕಾಲದಲ್ಲಿ ಸರ್ವೇಶ್ವರನು ಕ್ಷೇತ್ರಜ್ಞನಿಗೆ ಸರ್ವಸ್ವಾತಂತ್ರ್ಯವನ್ನೂ, ಕೊಟ್ಟಿರುತ್ತಾನೆ. ಉಪದೇಶಾನುಗುಣವಾಗಿ ಅರ್ಜುನನು ನಡೆಯಲು ಸಙ್ಕಲ್ಪಿಸುವದರಲ್ಲಿ ಮಾತ್ರ ಸ್ವತಂತ್ರನು; ಅನಂತರ ಪ್ರಾಪ್ತವಾಗುವ ಪ್ರವೃತ್ತಿಗಳೆಲ್ಲಾ ಈ ಕ್ಷೇತ್ರಜ್ಞನ ಪ್ರಾರಬ್ಧಕರ್ಮಾನುಸಾರವಾದ ಸರ್ವೇಶ್ವರನ ಸಙ್ಕಲ್ಪಕ್ಕೆ ಅಧೀನವಾಗಿನಡೆಯತ್ತದೆಂಬುದು ಈಶ್ಲೋಕದಲ್ಲೂ ಮುಂದಿನಶ್ಲೋಕದಲ್ಲೂಹೇಳಲ್ಪಡುತ್ತದೆ.

ಈ ಶ್ಲೋಕದಿಂದ ಗ್ರಹಿಸತಕ್ಕ ಇನ್ನೊಂದು ವಿಷಯವುಂಟು. ಸದ್ಗುರೂಪದೇಶೋಲ್ಲಂಘನೆಯು ಸರ್ವಾತ್ಮನಾ ಕೂಡದೆಂಬ ಮತ್ತು ಈತನಿಗೆ ಇಂತಹ ಸ್ವತಂತ್ರ ಪ್ರವೃತ್ತಿಯು ತುಂಬಾ ಹಾನಿಕರವೆಂಬ ಅಭಿಪ್ರಾಯವು ಸೂಚಿತವು. ಬೃಹಸ್ಪತ್ಯಾಚಾರ್ಯರ ಸದುಪದೇಶವನ್ನು ನಿರಾಕರಿಸಿದುದರಿಂದ ನಹುಷನು ಸ್ವರ್ಗ ಭ್ರಷ್ಟನಾದನು, ಮಹಾ ಪ್ರಾಜ್ಞರಾದ ಆಂಜನೇಯ ವಿಭೀಷಣರುಗಳ ಹಿತೋಪದೇಶವನ್ನೇ ನಿರಾಕರಿಸಿದುದರಿಂದ ರಾವಣನು ಕೆಟ್ಟನು. ಹಾಗೆಯೇ ಮಹಾಪ್ರಾಜ್ಞನಾದ ತನ್ನ ಮಗನಾದ ಪ್ರಹ್ಲಾದನ ಸದುಪದೇಶವನ್ನು ನಿರಾಕರಿಸಿದುದರಿಂದ ಹಿರಣ್ಯಕಶಿ

**ಭಾ. ಯದ್ಯಹಙ್ಕಾರಂ ಆತ್ಮನಿ ಹಿತಾಹಿತ ಜ್ಞಾನೇ ಸ್ವಾತಂತ್ರ್ಯಾಭಿಮಾನಂ ಆಶ್ರಿತ್ಯ ಮನ್ನಿಯೋಗ ಮನಾದೃತ್ಯ ನಯೋತ್ಸ್ಯೇ ಇತಿ ಮನ್ಯಸೇ, ಏಷತೇ ಸ್ವಾತಂತ್ರ್ಯ**

---

**ಪುವು** ವಧಿಸಲ್ಪಟ್ಟನು. ದುರ್ಯೋಧನನು ವಿದುರ ಸಂಜಯ ಧೃತರಾಷ್ಟ್ರಾದಿಗಳ ಹಿತೋಪದೇಶವನ್ನೂ, ಲೋಕಗುರುವಾದ ಶ್ರೀ ಕೃಷ್ಣನ ಉಪದೇಶವನ್ನೂ ಗಮನಿಸದೆ ಹತನಾದನು.

**ಭಾಷ್ಯಾರ್ಥವು**—ಲೋಕಗುರುವಾದ ನನ್ನ ಹಿತೋಪದೇಶಾನುಗುಣವಾಗಿ ಯುದ್ಧವನ್ನು ನಡೆಸದೆ ನನ್ನ ಮಾತನ್ನು ನಿರಾಕರಿಸಿದರೆ ನನ್ನ ಅನುಗ್ರಹವು ನಿನಗೆ ದೊರೆಯದೆ ನೀನು ಕೆಟ್ಟು ಹೋಗುತ್ತೀಯೆ ಎಂದು ಹಿಂದೆ ಹೇಳಿದರು. ಈ ಶ್ಲೋಕಲ್ಲಾದರೋ, ನಾನು ಉಪದೇಶಿಸುವುದಕೆ ವಿರೋಧವಾಗಿ ಸ್ವತಂತ್ರಿಸಿ ಸಙ್ಕಲ್ಪಿಸಿದರೂ, ನಿನ್ನ ಸಙ್ಕಲ್ಪಾನುಗುಣವಾಗಿ ಎಂದಿಗೂ ನಡೆಯಲಾರದು. ಪ್ರಥಮ ಸಙ್ಕಲ್ಪದಲ್ಲೇನೋ ನಿನಗೆ ಸ್ವಾತಂತ್ರ್ಯವನ್ನು ಕೊಟ್ಟಿದ್ದರೂ, ನನ್ನ ಸಂಕಲ್ಪವೂ ಅದರೊಂದಿಗೆ ಸೇರದ ಹೊರ್ತು ಕಾರ್ಯಕಾರಿಯಾಗದು; ಚೇತನ ಕಾರ್ಯಗಳೆಲ್ಲಾ ನನ್ನ ಆಧೀನವಾದ್ದುವೆಂದು ಹಿಂದೆಯೇ ನಿನಗೆ ಉಪದೇಶಿಸಿದೆನು. (ಗೀ ೧೮ ೧೫) ಆದುದರಿಂದ ಯುದ್ಧವನ್ನು ಎಂದಿಗೂ ಮಾಡುವದಿಲ್ಲವೆಂಬ ನಿನ್ನ ದೃಢಸಙ್ಕಲ್ಪವೂ ಸುಳ್ಳಾಗುವದು. ಏಕೆಂದರೆ ನಿನ್ನ ಪ್ರವೃತ್ತಿಗಳೆಲ್ಲಾ ಕರ್ಮಾನುಗುಣವಾಗಿ ಪ್ರಾಪ್ತವಾಗಿರುವ ಪ್ರಕೃತಿ ಸಂಬಂಧಕ್ಕೆ ಅನುಸಾರವಾಗಿಯೇ ನಾನು ಪ್ರೇರಿಸುವೆನಾದುದರಿಂದ, ನಿನ್ನ ಸಂಕಲ್ಪವೇ ನಡೆಯಲಾರದು ಎಂದು ಹೇಳುತ್ತಾರೆ. ಆಗಲಿ ಕ್ಷತ್ರಿಯನಾದುದರಿಂದ ಶತ್ರುಹನನವು ಕರ್ಮಯೋಗದಲ್ಲೇ ಸೇರಿದುದು ಎಂಬುದು ತಮ್ಮ ಅಭಿಪ್ರಾಯವಾದರೂ, ಇದನ್ನು ತ್ಯಜಿಸಿ **"ದೈವಮೇವಾಪರೇ"** ಎಂದು ಹಿಂದೆ ಗೀ. ೪–೨೫ರಲ್ಲಿ ಹೇಳಿರುವ ಇನ್ನೂ ಯಾವುದನ್ನಾದರೂ ಅವಲಂಬಿಸುವೆನು ಎಂದು ತಪ್ಪಿಸಿಕೊಳ್ಳಲು ನಿನಗೆ ಸಾಧ್ಯವಿಲ್ಲವು; ಏಕೆಂದರೆ ವೀರ ಕ್ಷತ್ರಿಯನಿಗೆ ಲೋಕ ಕಂಟಕರಾದ ಶತ್ರುಗಳನ್ನು ಕೊಲ್ಲುವದು ಇತಿಕರ್ತವ್ಯದಲ್ಲಿ ಸೇರಿತು. ಈ ಅಧರ್ಮಿಗಳನ್ನು ನಿನ್ನ ಮೂಲಕವಾಗಿಯೇ ಕೊಲ್ಲಿಸಲು ನಿಷ್ಕರ್ಷಿಸಿರುವೆನು. ನೀನು ಯುದ್ಧ ಮಾಡುವದಿಲ್ಲವೆಂಬ ನಿನ್ನ ಸಙ್ಕಲ್ಪವು ನಡೆಯುವದಿಲ್ಲವು; ಸುಳ್ಳಾಗುವದು. ನೀನು ಭೀಷ್ಮದ್ರೋಣಾದಿಗಳನ್ನು ಕೊಲ್ಲುವದು ಉಚಿತವಲ್ಲವೆಂದು ಹೇಳಿ ನೀನು ಯುದ್ಧರಂಗದಿಂದ ನಿವೃತ್ತನಾದರೂ, ದುರ್ಯೋಧನನು ಸುಮ್ಮನೆ ಇರುವವನಲ್ಲವು. ಈ ಅರ್ಜುನನೆಂಬ ಹೇಡಿಯನ್ನು ನೋಡಿ, ಬೆನ್ನು ತೋರಿಸಿ ಹೋಗುತ್ತಾನೆ, ಎಂದು ಹೀಯಾಳಿಸುವನು. **ಹೇಡಿ** ಎಂಬ **ಶಬ್ದವು** ವೀರಕ್ಷತ್ರಿಯನಿಗೆ ಕರ್ಣಕಠೋರವಾದ ವಾಕ್ಯ. "ಯಾರು ಹೇಡಿ" ಎಂದು ಪುನಃ ಯುದ್ಧರಂಗವನ್ನು ಪ್ರವೇಶಿಸಿ ಯುದ್ಧ ಮಾಡುವಿ. ಹೀಗೆ **ಪ್ರಕೃತಿ ಸ್ತ್ವಾಂ ನಿಯೋಕ್ಷ್ಯತಿ** ಎಂದು ಹೇಳಲ್ಪಟ್ಟಿತೆಂಬ ಭಾವವು. ಇನ್ನೇ ಮುಂದೆ ಉಪಪಾದಿಸುತ್ತಾರೆ. **ಆತ್ಮನಿ** - ತನ್ನಲ್ಲೇ **ಹಿತಾಹಿತಜ್ಞಾನೇ** - ಇದು ತನಗೆ ಹಿತವಾದುದು ಅಹಿತವಾದುದು ಎಂಬ ತಿಳುವಳಿಕೆಯಲ್ಲಿ, **ಸ್ವಾತಂತ್ರ್ಯಾಭಿಮಾನಂ ಅಹಙ್ಕಾರಂ**-ನಾನೇ ಸ್ವತಂತ್ರನೆಂಬ ಅಭಿಮಾನವುಳ್ಳ ಅಹಂಭಾವವನ್ನು **ಅವಲಂಬ್ಯ** - ಆಶ್ರಯಿಸಿ, **ಮನ್ನಿಯೋಗಂ** - ಯುದ್ಧ ಮಾಡು ಎಂದು ಪದೇ ಪದೇ ಹೇಳುತ್ತಿರುವ ನನ್ನ ಆಜ್ಞೆಯನ್ನು, **ಅನಾದೃತ್ಯ** - ನಿರಾಕರಿಸಿ, **ನಯೋತ್ಸ್ಯೇ** – ನಾನು ಯುದ್ಧ ಮಾಡುವದಿಲ್ಲವು, ಇತಿಮನ್ಯಸೇ **ಯದಿ** - ಎಂದು ನಿಶ್ಚಯಿಸಿದುದಾದರೆ, ಹಟವನ್ನು ಹಿಡಿದುದಾದರೆ, ಇದು ಹಿಂದಿನ ಶ್ಲೋಕದಲ್ಲಿ **ನಶ್ರೋಷ್ಯಸಿ** ಎಂಬುದರ ವಿವರಣವು. **ತೇ** - ಸರಿಯಾದ ಜ್ಞಾನವಿಲ್ಲದೆ ಅಜ್ಞಾನ ವಿಜೃಂಭಣೆಯನ್ನು ತೋರಿಸುವ ನಿನ್ನ, **ಸ್ವಾತಂತ್ರ್ಯ ವ್ಯವಸಾಯಃ** – ಅಹಂಭಾವದಿಂದ ನಾನೇ ಸರ್ವವನ್ನೂ ತಿಳಿದವನಾಗಿರುವದರಿಂದ ನಾನು ಸ್ವತಂತ್ರನೆಂಬ ಸಙ್ಕಲ್ಪವು, ಮೂಲದಲ್ಲಿರುವ ಏಷವ್ಯವಸಾಯವು ಯಾವುದು ಎಂಬ ಸಂದರ್ಭದಲ್ಲಿ **ಏಷತೇ ಸ್ವಾತಂತ್ರ್ಯ ವ್ಯವಸಾಯಃ** ಎಂದು ವ್ಯಕ್ತಪಡಿಸಿದರು. **ಮಿಥ್ಯಾಭವಿಷ್ಯತಿ** - ಸುಳ್ಳಾದುದು

**ವ್ಯವಸಾಯೋ ಮಿಥ್ಯಾ ಭವಿಷ್ಯತಿ; ಯತಃ ಪ್ರಕೃತಿ ಸ್ತ್ವಾಂ ಯುದ್ಧೇ ನಿಯೋಕ್ಷ್ಯತಿ - ಮತ್ಸ್ವಾತನ್ತ್ರ್ಯೋದ್ವಿಗ್ನಂ ತ್ವಮಜ್ಞಂ ಪ್ರಕೃತಿ ರ್ನಿಯೋಕ್ಷ್ಯತಿ ॥ ೫೯ ॥**

---

ಆಗುವದು; ಆದಕ್ಕೆ ಕಾರಣವನ್ನು ತಿಳಿಸುತ್ತಾರೆ. **ಯತಃ** - ಯಾವ ಕಾರಣದಿಂದ, **ಪ್ರಕೃತಿಃ** - ನಿನಗೆ ಕರ್ಮವಾಸನಾ ಮೂಲಕವಾಗಿ ನನ್ನ ಸಂಙ್ಕಲ್ಪಾನುಸಾರ ಪ್ರಾಪ್ತವಾಗಿರುವ ದೇಹ ಸಂಬಂಧವೂ ಸ್ವಭಾವವೂ, **ತ್ವಾಂ**-ಅಂತಹ ಪ್ರಕೃತಿಗೆ ವಶನಾಗಿರುವ ನಿನ್ನನ್ನು, **ಯುದ್ಧೇ ನಿಯೋಕ್ಷ್ಯತಿ**-ಯುದ್ಧದಲ್ಲಿ ನಿಯಮಿಸುತ್ತದೆ; ಪ್ರಕೃತಿಯು ಜಡವು; ಆದಕ್ಕೆ ಎಲ್ಲಿ ಅಂತಹ ಶಕ್ತಿಯು? ಎಂದರೆ ಸರ್ವರ ಹೃಷೀಕಗಳಿಗೂ ಈಶನಾಗಿ ನಿಯಾಮಕನಾಗಿರುವದರಿಂದ ಹಾಗೆ ನಡೆಯುತ್ತದೆಂದು ವ್ಯಾಖ್ಯಾನಮಾಡಿರುತ್ತಾರೆ. **ಮತ್ಸ್ವಾತನ್ತ್ರ್ಯೋದ್ವಿಗ್ನಂ**-ಕರ್ಮವಾಸನಾನುಗುಣವಾಗಿ ಪ್ರೇರಿಸುವ ನನ್ನ ಸ್ವಾತಂತ್ರ್ಯಕ್ಕೆ ಸಿಕ್ಕಿ, ಬಂಧುಗಳನ್ನು ಕೊಲ್ಲಲಾರೆನೆಂದು ಪರಿತಾಪವನ್ನು ಪಡುತ್ತಿರುವ, **ಅಜ್ಞಂ** ಹೀಗೆ ನನ್ನ ಪ್ರೇರಣೆಯಿಂದಲೇ ನೀನು ಈಗ ಉದ್ವಿಗ್ನನಾಗಿರುವೆ ಎಂಬ ಅಂಶವನ್ನು ತಿಳಿಯಲಾರದೇ ಇರುವ **ತ್ವಾಂ** - ನಿನ್ನನ್ನು, **ಪ್ರಕೃತಿಃ** - ನನ್ನ ಶಕ್ತಿಯಾದ ಪ್ರಕೃತಿಯು, **ನಿಯೋಕ್ಷ್ಯತಿ** - ನಿಯಮಿಸುತ್ತದೆ. ನಾನು ಸರ್ವಸ್ವತಂತ್ರನು, ಲೀಲಾವಿಭೂತಿ ನಾಯಕನು, ನನ್ನ ಶಕ್ತಿಯಾಗಿ ನಿನಗೆ ಪ್ರಾಪ್ತವಾಗಿರುವ ಪ್ರಕೃತಿಯೇ ದೇಹವೇ ನಿನ್ನನ್ನು ಯುದ್ಧಮಾಡುವ ಹಾಗೆ ಮಾಡಿ, ನಿನ್ನ ಕೈಯಿಂದಲೇ ಈ ದುಷ್ಟರೆಲ್ಲಾ ಹತವಾಗುವ ಮಾಡುತ್ತದೆ; ನಾನೇ ನಗುತ್ತಾ ಈ ಲೀಲೆಯನ್ನು ಅವಲೋಕಿಸುತ್ತಿರುವೆನು; ನಿನ್ನ ಮೂಲಕವಾಗಿಯೇ ಈ ಲೋಕವು ನಿಷ್ಕಂಟಕವಾಗುತ್ತದೆಂದು ಸಙ್ಕಲ್ಪಿಸಿ ಬಿಟ್ಟಿರುವದರಿಂದ ನಿನ್ನ ಯುದ್ಧಮಾಡುವದಿಲ್ಲನೆಂಬ ಸಙ್ಕಲ್ಪವು ಸಾಗುವದಿಲ್ಲವೆಂದು ನಗುತ್ತಾ ಹೇಳುತ್ತಾರೆ. ಹಿಂದೆಯೇ ಪ್ರಹಸನ್ನಿವ ಭಾರತ ಎಂಬಲ್ಲೇ (ಗೀ ೨-೧೦.) ಇದು ವ್ಯಕ್ತವು. ಸರ್ವೇಶ್ವರನ ಪ್ರೇರಣೆಯೆಂದು ತಿಳಿಯದಿರುವದರಿಂದ ಅರ್ಜುನನನ್ನು ಅಜ್ಞನೆಂದು ಶ್ರೀ ಯತಿವರ್ಯರು ಹೇಳಿದರೇ ಹೊರತು ಅರ್ಜುನನು ಮಹಾ ಪ್ರಾಜ್ಞನೆಂದು ಶ್ರೀ ಕೃಷ್ಣಭಗವಾನರವರಿಂದಲೇ ಹೇಳಲ್ಪಟ್ಟಿರುತ್ತದೆ. ಜಗತ್ತಿಗೆ ಹಿತಕಾರಕನ ಸಂಕಲ್ಪವನ್ನು ತಿಳಿಯುವದು ಕಷ್ಟವು. ಹಾಗೆಯೇ ರಾಮಾವತಾರದಲ್ಲಿ ಋಷಿಗಳಿಗೆ ಪ್ರಾಪ್ತವಾಗಿರುವ ಸಂಕಟಗಳನ್ನು ತಪ್ಪಿಸುವದಕ್ಕಾಗಿ ರಾಕ್ಷಸರನ್ನೆಲ್ಲಾ ನಿರ್ಮೂಲಮಾಡುವದಕ್ಕಾಗಿ ತಾನು ಅರಣ್ಯಕ್ಕೆ ತೆರಳುವದು ಆವಶ್ಯಕವೆಂದು ಭಾವಿಸಿ ಮಂಥರೆಯನ್ನು ಪ್ರೇರಿಸಿ, ಕೈಕೇಯೀ ಮೂಲಕ ಯುವರಾಜ್ಯಾಭಿಷೇಕಕ್ಕೆ ವಿಘ್ನ ಮಾಡಿಕೊಂಡು ಅರಣ್ಯಕ್ಕೆ ಶ್ರೀ ರಾಮಚಂದ್ರಪ್ರಭುವು ತೆರಳುತ್ತಾನೆ. ಹಾಗೆಯೇ ಕೃಷ್ಣಾವತಾರಿಯಾಗಿಯೂ ದುರ್ಯೋಧನಾದಿಗಳ ಹತರಾಗಬೇಕೆಂದೇ ಸಙ್ಕಲ್ಪಿಸಿಯೇ, ಇನ್ನು ಯಾರಾದರೂ ಹೋದರೆ ಸಂಧಿಯೆಲ್ಲಾಗುತ್ತದೋ ಎಂದು ತಾವೇ ಹೋಗಿ ದುರ್ಯೋಧನನಿಗೆ ಪ್ರೇರಿಸಿ ಸಂಧಿಯಾಗದೆ ಯುದ್ಧಾರಂಭವಾಗುವ ಹಾಗೆ ಮಾಡಿರುತ್ತಾರೆ. ಹೀಗೆ ಸ್ವಾಮಿ ಸಂಙ್ಕಲ್ಪವನ್ನು ಅರಿಯುವದು ಕಷ್ಟವು. ಅಂತಹ ಸಙ್ಕಲ್ಪವನ್ನು ಅರಿಯದೇ ಇದ್ದುದರಿಂದ ಅರ್ಜುನನು ಅಜ್ಞನು ಎಂದು ಹೇಳಲ್ಪಟ್ಟನು. ಆದ್ದರಿಂದ "**ನಿಮಿತ್ತಮಾತ್ರಂ ಭವ ಸವ್ಯಸಾಚಿನ್**" (ಗೀ ೧೧-೩೩) ಎಂಬಲ್ಲೂ ತಮ್ಮ ದೃಢ ಸಙ್ಕಲ್ಪವನ್ನು ವ್ಯಕ್ತಪಡಿಸಿದರು. ಇದರಿಂದ ಪರ್ಯವಸಾನವೇನಾಯಿತು ಎಂದರೆ ನಿನ್ನ ಯುದ್ಧಮಾಡುವದಿಲ್ಲವೆಂಬ ಸಙ್ಕಲ್ಪವು ಎಂದಿಗೂ ಕೈಗೂಡುವದಿಲ್ಲವು. ಲೋಕ ಗುರುವಾದ ನನ್ನ ಪರಮೋಪದೇಶವನ್ನು ನಿರಾಕರಿಸಿ, ನನಗೆ ಪರತನ್ತ್ರನಾಗಿರುವ ನೀನು, ಸ್ವಾತಂತ್ರ್ಯವನ್ನು ವಹಿಸಿ ಅಹಂಭಾವವನ್ನು ಪ್ರಕಟಿಸಿದುದರಿಂದ ನೀನು ಅಜ್ಞನೆಂದು ಹೇಳಿಸಿಕೊಳ್ಳುವದೇ ಈ ನಿನ್ನ ಸಙ್ಕಲ್ಪಕ್ಕೆ ಫಲವೆಂಬ ಭಾವವು, ಮಹರ್ಷಿಯು "**ಮೋಹಶ್ರಮಂ ಪ್ರಯಾತಾಸೌ ವಾಸನಾರೇಣುಕುಂಠಿತಃ**" ಈ ಕ್ಷೇತ್ರಜ್ಞನು ಸ್ವತಃ ತನಗೆ ಕರ್ತೃತ್ವ ಉಂಟೆಂಬ ಮೋಹದಿಂದ ವ್ಯರ್ಥವಾದ ಶ್ರಮವನ್ನು

**ಭಾ. ಅವ. ತದುಪಪಾದಯತಿ—**

**ಮೂ. ಸ್ವಭಾವಜೇನ ಕೌನ್ತೇಯ ನಿಬದ್ಧ ಸ್ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯ ವಶೋಽಪಿ ತತ್ ॥ ೬೦ ॥**

---

ಹೊಂದಿದವನಾಗುವನ; ಇದು ಅಜ್ಞಾನದ ಫಲವು. ಏಕೆಂದರೆ ವಾಸನಾರೇಣು **ಕುಂಠಿತಃ** ಕರ್ಮವಾಸನಾದಿಂದ ಪ್ರಾಪ್ತವಾದ ಪ್ರಕೃತಿ ಸಂಬಂಧವಿರುವದರಿಂದ, ಎಂದು ಹೇಳಿರುತ್ತಾರೆ. (ವಿ. ಪು. ೬. ೭. ೧೯) ಹಾಗೆಯೇ ಇನ್ನೊಂದು ಕಡೆಯಲ್ಲೂ **"ನಿಮಿತ್ತಮಾತ್ರಮೇವಾಸೌ ಸೃಜ್ಯಾನಾಂ ಸರ್ಗಕರ್ಮಣಿ। ಪ್ರಧಾನಕಾರಣೀಭೂತಾ ಯತೋ ವೈ ಸೃಜ್ಯಶಕ್ತಯಃ"** ಎಂದೂ **"ನೀಯತೇ ತಪತಾಂ ಶ್ರೇಷ್ಠ ಸ್ವಶಕ್ತ್ಯಾ ವಸ್ತುವಸ್ತುತಾಂ"** ಎಂದೂ (ವಿ. ಪು. ೧. ೪. ೫೧. ೫೨) ಕರ್ಮವಾಸನಾಗುಣವಾಗಿಯೇ ದೇಹಾದಿ ಪ್ರಾಪ್ತಿಯೂ ತದನುಸಾರವಾಗಿ ಪ್ರವೃತ್ತಿಗಳೂ; ಆದುದರಿಂದ ಆ ಅಭಿಪ್ರಾಯವೇ ಇಲ್ಲಿ **ಪ್ರಕೃತಿ ಸ್ತ್ವಾಂನಿಯೋಕ್ಷ್ಯತಿ** ಎಂದು ಹೇಳಲ್ಪಟ್ಟಿತು. ನನ್ನ ಉಪದೇಶಾನುಸಾರ ಪ್ರವೃತ್ತಿಯುಳ್ಳವನಾದರೆ ನನ್ನ ಅನುಗ್ರಹವು ಲಭಿಸುವದರಿಂದ ನಿನಗೆ ಹಿತವಾದುದರಲ್ಲಿ ಪ್ರವೃತ್ತಿಯೂ ತನ್ಮೂಲಕ ಪುರುಷಾರ್ಥ ಸಿದ್ಧಿಯೂ ಉಂಟು. ಸ್ವತಂತ್ರಿಸಿನಡೆದರೂ ಆಗಲೂ ನನ್ನ ಇಷ್ಟದಂತೆಯೇ ನಿನ್ನಪ್ರವೃತ್ತಿಯು; ಆದರೆ ನನ್ನ ಅನುಗ್ರಹವನ್ನು ಸಂಪಾದಿಸಿ ಕೆಳ್ಳದೇ ಹೋಗುವಿ ಎಂಬ ತಾತ್ಪರ್ಯವೂ ಗರ್ಭಿತವು. ನಿನ್ನ ಕ್ಷತ್ರಿಯ ಸ್ವಭಾವನೇ ನಿನ್ನನ್ನು ಯುದ್ಧ ಮಾಡುವ ಹಾಗೆ ನನ್ನ ಸಙ್ಕಲ್ಪವು ಪ್ರೇರಿಸುತ್ತದೆ ಆದದರಿಂದ **ಪ್ರಕೃತಿರ್ನಿಯೋಕ್ಷ್ಯತಿ** ಎಂಬಲ್ಲಿ ಪ್ರಕೃತಿಶಬ್ದವು ಅರ್ಜುನನಿಗೆ ಪ್ರಾಪ್ತವಾಗಿರುವ **ಕ್ಷತ್ರಿಯದೇಹದ** ಸ್ವಭಾವವನ್ನು ಬೋಧಿಸುತ್ತದೆ ಕೆಲವರು ಪ್ರಕೃತಿ ಶಬ್ದಕ್ಕೆ ದೈವಸಙ್ಕಲ್ಪವೆಂಬ ಲಾಕ್ಷಣಿಕಾರ್ಥವನ್ನು ಹೇಳಿರುತ್ತಾರೆ. ಏಕೆಂದರೆ ಪ್ರಕೃತಿಯು ಕರ್ಮಾನುಸಾರ ಪ್ರವೃತ್ತಿಗೆ ದೈವಸಙ್ಕಲ್ಪವು ಕಾರಣವಾದುದರಿಂದ. ಅರ್ಜುನನಿಗೆ ದೇಹ ಮೂಲಕವಾಗಿ ಪ್ರಾಪ್ತವಾದ ಪ್ರಕೃತಿ ಎಂದರೆ ಸ್ವಭಾವವೆಂದೂ ಭಾವಿಸಬಹುದು. ಆಗಲಿ ಪ್ರಕೃತಿಯು ಅಚೇತನವು ಅದು ಹೇಗೆ ನಿಯಮಿಸೀತು? ಎಂದರೆ ವ್ಯಾಪಾರಕ್ಕೆ ದೇಹವು ಅವಶ್ಯಕವು. ಮುಖ್ಯ ಪ್ರೇರಕನು ಸರ್ವೇಶ್ವರನಾಗಿ ತದನ ಗುಣವಾಗಿ ವರ್ತಿಸುವನು. ಈ ಸಂದರ್ಭದಲ್ಲಿ ಹಾಗೆ ನಡೆಸುವ ಚೇತನನು ಅರ್ಜುನನು.

**ಭಾಷ್ಯಾವತಾರಿಕೆಯ ಅರ್ಥವು—ತತ್**-ಈ ಮೇಲಿನ ಅಭಿಪ್ರಾಯವನ್ನೇ **ಉಪಪಾದಯತಿ**-ಉಪಪಾದನೆ ಮಾಡಿಹೇಳುತ್ತಾರೆ. ನಿನ್ನ ಸಙ್ಕಲ್ಪವೂ ನನ್ನ **ಸಙ್ಕಲ್ಪವೂ ಎರಡೂ** ಬೆರದರೇನೆ ನಿನ್ನ ಸಙ್ಕಲ್ಪಾನುಸಾರ ಪ್ರವೃತ್ತಿಯು. ನನ್ನ ಸಙ್ಕಲ್ಪವಾದರೋ ನಿನ್ನ **ಪೂರ್ವ ಕರ್ಮಾನುಸಾರವಾಗಿಯೂ** ಈಗಿನ ನನ್ನ ಆಶ್ರಯಣಾನುಸಾರವಾಗಿಯೂ ಉಂಟಾಗುತ್ತದೆ. ಆದುದರಿಂದ ನನ್ನ **ಪ್ರೇರಣಾ**ನುಸಾರವಾಗಿ ನೀನು ಪ್ರಕೃತಿಗೆ ವಶನಾಗಿ ಪ್ರವೃತ್ತಿಯನ್ನುಳ್ಳವನಾಗುತ್ತೀಯೇ ಎಂದು ಹೇಳುತ್ತಾರೆ. ಈ ಅಭಿಪ್ರಾಯವು ಮುಂದಿನ ೬೧ನೆಯ ಶ್ಲೋಕದಲ್ಲೂ ಸುವ್ಯಕ್ತವು. ಹಿಂದಿನ ಶ್ಲೋಕದ ಪುನರುಕ್ತಿದೋಷವೇನೂ ಇಲ್ಲವು; ಅದರ ಉಪಪಾದನೆಯು ಎಂಬುದು ಶ್ರೀ ಯತಿವರ್ಯರ ಅಭಿಪ್ರಾಯವು.

**ಮೂಲಕ್ಕೆ ಅರ್ಥವು**—ನೀನು ಯುದ್ಧಮಾಡುವದಿಲ್ಲವೆಂದು ಸಙ್ಕಲ್ಪಿಸಿದರೂ, ಅದೂ ಸಾಗುವದಿಲ್ಲವು; ನಿನ್ನ ಪ್ರಕೃತಿಯೇ ನಿನ್ನ ಸಙ್ಕಲ್ಪಕ್ಕೆ ವಿರುದ್ಧವಾಗಿ ಪ್ರವೃತ್ತಿಯನ್ನುಂಟುಮಾಡಿತೆಂದು ಹೇಳಲ್ಪಟ್ಟಿತಲ್ಲಾ; ಅದು ಹೇಗೆ ಎಂದು ಕೇಳುತ್ತೀಯೋ ಅದನ್ನೇ ಉಪಪಾದಿಸಿ ಹೇಳುವೆನು ಕೇಳೆಂದು ಶ್ರೀ ಕೃಷ್ಣಭಗವಾನರವರು ಉಪದೇಶಿಸುತ್ತಾರೆ—**ಹೇ ಕೌನ್ತೇಯ** - ಓ ಕುಂತೀಪುತ್ರನಾದ ಅರ್ಜುನನೇ, **ಸ್ವಭಾವಜೇನ** - ಪ್ರಾರಬ್ಧ ಕರ್ಮವಶಾತ್ ಏರ್ಪಟ್ಟ ಶರೀರದ

ಸ್ವಭಾವದಿಂದ ಪ್ರಾಪ್ತವಾದ, ಈಗ ನೀನು ಕ್ಷತ್ರಿಯನಾಗಿ ಜನಿಸಿದ್ದೀಯೇ, ಅಂತಹ ಕ್ಷತ್ರಿಯನಿಗೆ ಹಿಂದೆ ೪೩ನೆಯ ಶ್ಲೋಕದಲ್ಲಿ **"ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಂ"** ಎಂದು ಇವೆಲ್ಲಾ ಕ್ಷತ್ರಿಯನಿಗೆ ಸ್ವಭಾವಜಂ - ಎಂದು ಹೇಳಿರುವಹಾಗೆ, ಇಂತಹ ಶೌರ್ಯಾದಿಗಳಿಂದ ಉಂಟಾದ **ಸ್ವೇನ ಕರ್ಮಣಾ** - ನಿನಗೇನೇ ಸ್ವಭಾವಸಿದ್ಧವಾದ ಕರ್ಮದಿಂದ, **ನಿಬದ್ಧಃ** - ನೀನು ಚೆನ್ನಾಗಿ ಕಟ್ಟಲ್ಪಟ್ಟವನು, ನಿನಗೆ ಈಗ ಕರ್ಮವಶಾತ್ ಪ್ರಾಪ್ತವಾದ ಜನ್ಮಕ್ಕನುಗುಣವಾಗಿ ಪ್ರವೃತ್ತಿಯನ್ನು ಹೊಂದಿರುವೆ; ಅಂತಹ ಪ್ರವೃತ್ತಿಯಿಂದ ನೀನು **ನಿಬದ್ಧನು** ಬಂಧಿಸಲ್ಪಟ್ಟವನು ; ಅದರಿಂದ ತಪ್ಪಿಸಿಕೊಳ್ಳಲು ಸಾಧಾರಣವಾಗಿ ಸಾಧ್ಯವಿಲ್ಲವೆಂಬ ಭಾವವು ತೋರಿಬರುತ್ತದೆ; ಯುದ್ಧಮಾಡುವದು ನಿನಗೆಸ್ವಭಾವತಃ ಪ್ರಾಪ್ತವಾದ ಪ್ರವೃತ್ತಿಯು ಎಂಬ ಭಾವವು ಇದು ಹಿಂದಿನ ಶ್ಲೋಕದಲ್ಲಿ **"ಪ್ರಕೃತಿ ಸ್ತ್ವಾಂ ನಿಯೋಕ್ಷ್ಯತಿ"** ಎಂಬುದರ ವ್ಯಾಖ್ಯಾನವು. **"ವಿಧಿವಿಹಿತಂ ಬುದ್ಧಿರನುಸರತಿ"** ಎಂಬಲ್ಲಿ ಹೇಳಿರುವಹಾಗೆ ಪ್ರಾರಬ್ಧಾನುಗುಣವಾಗಿ, ಸ್ವಾಮಿ ಪ್ರೇರಣೆಯು, ಈತನ ಪ್ರವೃತ್ತಿಯು ಹಾಗೆಯೇ **"ವಿಧಿರ್ನೂನಮಸಂಹಾರ್ಯಃ** ಎಂಬ ಪ್ರಯೋಗವೂ ಉಂಟು. (ರಾಮಾ. ಸುಂದರ ) ಹೀಗಿರುವಾಗ, "**ಮೋಹಾತ್** - ಮೋಹ ಬುದ್ಧಿಯಿಂದ ಎಂದರೆ ನನ್ನ ಹಿತ ಪ್ರವೃತ್ತಿಗೆ ನಾನೇ ಸ್ವತಂತ್ರನು ಎಂಬ ಅಜ್ಞಾನದಿಂದ, **ಯತ್** ಯಾವ ಯುದ್ಧಾದಿಕರ್ಮವನ್ನು **ಕರ್ತುಂ ನೇಚ್ಛಸ್ಯಪಿ** - ಮಾಡಲು ಇಷ್ಟವಿಲ್ಲದಿದ್ದರೂ ಕೂಡ, **ತತ್** - ಅದನ್ನೇ, **ಅವಶಃ** - ನಿನ್ನ ಹಿಂದಿನ ಯುದ್ಧಮಾಡುವದಿಲ್ಲವೆಂಬ ಸಙ್ಕಲ್ಪಕ್ಕೆ ವಶನಾಗದೇನೇ ಅಥವಾ ನಿನಗೆ ಗೊತ್ತಾಗದೇನೇ, **ತತ್** - ಆ ಯುದ್ಧವನ್ನೇ **ಕರಿಷ್ಯಸಿ** - ಮಾಡುವಿ. ಈಗಲೇ ನನ್ನ ಪ್ರೇರಣೆಯಿಂದ ನಿನ್ನ ಪೂರ್ವಸಙ್ಕಲ್ಪವನ್ನು ಮರೆತು ನಿನ್ನ ಪ್ರಕೃತಿಯಾದ ಕ್ಷತ್ರಿಯ ಧರ್ಮವನ್ನು ಆಶ್ರಯಿಸಿ ಈ ಯುದ್ಧವನ್ನೇ ಮಾಡುತ್ತೀಯೇ; ಅಥವಾ ಈಗ ನೀನು ಯುದ್ಧ ಮಾಡುವದಿಲ್ಲವೆಂದು ಯುದ್ಧದಿಂದ ನಿವೃತ್ತನಾದರೆ, ಆಗ ನಿನ್ನ ಶತ್ರುಗಳು ಬಹುವಾಗಿ ಹೇಡಿಯೆಂದು ಹೀಯಾಳಿಸುವರು, ಆಗ ಕೋಪ ಬಂದು ನಿನ್ನ ಸಙ್ಕಲ್ಪವನ್ನು ಮರೆತು ನೀನೇ ಯುದ್ಧ ಮಾಡುತ್ತೀಯೇ. ನನ್ನ ಸಙ್ಕಲ್ಪವೇನೆಂದರೆ? ನಿನ್ನ ಕೈಯಿಂದಲೇ ಯುದ್ಧವನ್ನು ಮಾಡಿಸಿ ದುಷ್ಟರಾದ ಶತ್ರುಗಳ ಹನನವನ್ನು ಮಾಡಿಸಬೇಕು ಎಂಬುದಾಗಿ; ಅದನ್ನು ಹೇಗಾದರೂ ಮಾಡಿ ನಡೆಸುವ ಶಕ್ತಿಯು ನನಗುಂಟು. ಅದುದರಿಂದ ನಿನ್ನ ಪ್ರಥಮಸಙ್ಕಲ್ಪವನ್ನು ಮರೆತು ಯುದ್ಧ ಮಾಡುತ್ತೀಯೆ; ಸಂದೇಹವಿಲ್ಲವೆಂಬ ಭಾವವು. ರಾಮಾವತಾರಿಯಾಗಿರುವಾಗ, ನನ್ನ ಪಿತಾವಾದ ರಾಜನು, ನನ್ನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಬೇಕೆಂಬ ಸುಸಙ್ಕಲ್ಪವು ನೆರವೇರಿತೇ? ಮಹರ್ಷಿಗಳಿಗೆ ಪ್ರಾಪ್ತವಾಗಿದ್ದ ದುಃಖವನ್ನು ಹೋಗಲಾಡಿಸಿ, ಅವರಿಗೆ ಸಂದರ್ಶನಪೂರ್ವಕವಾದ ಆನಂದವನ್ನು ಕೊಡಬೇಕೆಂಬ ಆಶೆಯಿಂದ ಮಂಥರೆಯಮೂಲಕ ಆ ಸಙ್ಕಲ್ಪಕ್ಕೆ ವಿಘ್ನ ಒದಗಿಸಲಿಲ್ಲವೇ? ಹಾಗೆಯೇ ಯಾವುದೋ ಒಂದು ವ್ಯಾಜವನ್ನು ತಂದು ಹಾಕಿ,ನಿನ್ನ ಹಿಂದಿನ ಸಙ್ಕಲ್ಪವು ನಡೆಯದ ಹಾಗೆ ಮಾಡಿ ಕ್ಷತ್ರಿಯನಾದ ನಿನ್ನಿಂದಲೇ ನಿನ್ನ ಕ್ಷತ್ರಿಯ ಸ್ವಭಾವಕ್ಕನುಗುಣವಾಗಿ ನಡೆಸಲು ಸರ್ವೇಶ್ವರನಾದ ನನಗೆ ಶಕ್ತಿಯುಂಟೆಂಬ ಭಾವವು. ಇದನ್ನೇ ಮುಂದಿನ ಶ್ಲೋಕದಲ್ಲಿ ವ್ಯಕ್ತಪಡಿಸುತ್ತಾರೆ. ಅಷ್ಟುದೂರ ಏತಕ್ಕೆ? ನಿನ್ನ ಜ್ಯೇಷ್ಠಭ್ರಾತೃವಿಗೆ ಯುದ್ಧವಿಷ್ಟವಿಲ್ಲವು; ಸಂಧಿಯನ್ನು ಮಾಡಿ ಕೊಳ್ಳಬೇಕೆಂಬುದರಲ್ಲೇ ಅತನಿಗೆ ತಾತ್ಪರ್ಯವು. **"ಗೋವಿನ್ದೇತಿ ಯದಾ ಕ್ರಂದತ್ಕೃಷ್ಣಾ ಮಾಂ ದೂರವಾಸಿನಂ ॥ ಋಣಂ ಪ್ರವೃದ್ಧಮಿವ ಮೇ ಹೃದಯಾನ್ನಾಪಸರ್ಪತಿ "** ಎಂದು ದ್ರೌಪದಿಯ ಮಾನಭಂಗವು ನಡೆದು, ಆಕೆಯು ಗೋವಿಂದಾ ಶರಣೆಂಬ ಎಂಬ ರೋದನವು ನನ್ನ ಹೃದಯಕ್ಕೆ ಈಗಲೂ ಶಲ್ಯವಾಗಿರುವಾಗ, ಅಂತಹ ನೀಚರು ನಾಶವಾಗಲೇಬೇಕೆಂದು ನನ್ನ ಸಙ್ಕಲ್ಪವಿರುವಾಗ ಸಂಧಿ ಆಯಿತೋ? ಈಗ ಯುದ್ಧವು ಮುಂದಕ್ಕೆ ನಡೆಯದೆ ಹೋದೀತೋ ? ನಿನ್ನ ಕ್ಷತ್ರಿಯ ಸ್ವಭಾವದ ಮೂಲಕ ಯುದ್ಧವು ನಡೆಯುವ ಹಾಗೆ

**ಭಾ.** **ಸ್ವಭಾವಜಂಹಿ ಕ್ಷತ್ರಿಯಸ್ಯ ಕರ್ಮಶೌರ್ಯಮ್, ಸ್ವಭಾವಜೇನ ಶೌರ್ಯಾಖ್ಯೇನ ಸ್ವೇನಕರ್ಮಣಾ ನಿಬದ್ಧಃ, ತತ ಏವಾವಶಃ ಪರೈರ್ಧರ್ಷಣಂ ಮಾಸಹಮಾನಸ್ತ್ವಮೇವ ತದ್ಯುದ್ಧಂ ಕರಿಷ್ಯಸಿ, ಯದಿದಾನೀಂ ಮೋಹಾತ್ - ಅಜ್ಞಾನಾತ್ ಕರ್ತುಂ ನೇಚ್ಛಸಿ॥**

---

ಮಾಡುವೆನೆಂಬ ಭಾವವು ಸೂಚಿತವು. ಆದುದರಿಂದಲೇ **ಸ್ವಭಾವಜೇನ** ಎಂಬ ಪ್ರಯೋಗವು. ನಿನ್ನ ಪ್ರವೃತ್ತಿಗಳ ವಿಷಯದಲ್ಲಿ ನೀನು ಸ್ವತಂತ್ರನೆಂದು ಭಾವಿಸಿರುತ್ತೀಯೋ, ಕರ್ತೃತ್ವವೇನೋ ನಿನಗಿದ್ದರೂ, **ಅದುಪರಾತ್ತುತಚ್ಛ್ರುತೇಃ** ಎಂಬಲ್ಲಿ ಹೇಳಿರುವಹಾಗೆ, ನನ್ನ ಸಙ್ಕಲ್ಪಕ್ಕೆ ಅಧೀನವಾದುದು; ಪ್ರಾರಬ್ಧ ಕರ್ಮವಶಾತ್ ಪ್ರಾಪ್ತವಾದ ದೇಹ ಸ್ವಭಾವಾನುಗುಣವಾಗಿ ನಾನು ಪ್ರೇರಿಸುವದರಿಂದ ನಿನ್ನ ಪ್ರವೃತ್ತಿಗಳು ನನ್ನ ಅಧೀನವಾದುದೆಂದು ಉಪದೇಶಿಸುತ್ತಾರೆ. ಆದುದರಿಂದ **ಸ್ವೇನಕರ್ಮಣಾನಿಬದ್ಧಃ** ಎಂಬ ಪ್ರಯೋಗವು; ಆ ಕಾರಣದಿಂದಲೇ ಪೂರ್ವಸಙ್ಕಲ್ಪಕ್ಕೆ ವಶನಾಗದೆ ಅವಶನಾಗಿ ಯುದ್ಧವನ್ನೇ ಮಾಡುವಿ ಎಂದು ಹೇಳಲ್ಪಟ್ಟಿತು.

**ಭಾಷ್ಯಾರ್ಥವು**—ಹಿಂದಿನ ಶ್ಲೋಕದಲ್ಲಿ **ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ** ಎಂದು ಹೇಳಿದರು. ಈ ಅರ್ಥವನ್ನು ಉಪಪಾದಿಸಿ ಹೇಳುವದು ಆವಶ್ಯಕವಾದುದರಿಂದ ಅದನ್ನು ವ್ಯಕ್ತಪಡಿಸುತ್ತಾರೆ.—ಹಿಂದೆ ಹೇಳಿದ **ಪ್ರಕೃತಿ** ಶಬ್ದಕ್ಕೆ ಬದಲಾಗಿ ಇಲ್ಲಿ **ಸ್ವಭಾವ** ಶಬ್ದ ಪ್ರಯೋಗವು. ನಿನ್ನ ಕರ್ಮವೆಲ್ಲಾ ಸ್ವಭಾವ ಸಿದ್ಧವಾದುವುಗಳೆಂದು ಹೇಳುತ್ತಾರೆ. **ಸ್ವಭಾವಜಂಹಿ**-ಇಲ್ಲಿ ಸ್ವಭಾವವು ಯಾವುದು ಎಂದರೆ ಪೂರ್ವಕರ್ಮಾನುಸಾರ ಕ್ಷತ್ರಿಯ ಕುಲದಲ್ಲಿ ಹುಟ್ಟುವಹಾಗೆ ದೇಹಪ್ರಾಪ್ತಿಯಿಂದುಟಾದದು; ಕ್ಷತ್ರಿಯನಾದ ನಿನಗೆ, ಸ್ವಭಾವದಿಂದುಟಾದುದು ಯಾವುದೆಂದರೆ, **ಕ್ಷತ್ರಿಯಸ್ಯ** ಕರ್ಮಶೌರ್ಯಂ – ಕ್ಷತ್ರಿಯನ ಕರ್ಮವಾದ ಶೌರ್ಯವು; ಇದು ಹಿಂದೆಯೇ **ಶೌರ್ಯಂ ತೇಜೋಧೃತಿರ್ದಾಕ್ಷ್ಯಂ**” ಎಂದು ಹೇಳಲ್ಪಟ್ಟಿರುತ್ತದೆಯಾದುದರಿಂದ **ಶೌರ್ಯಂ** ಎಂದು ವ್ಯಾಖ್ಯಾನವು; ಹೀಗೆ ಸ್ವಭಾವಜೇನ ಎಂದರೆ **ಶೌರ್ಯಾಖ್ಯೇನ** - ಶೌರ್ಯವೆಂದು ಹೇಳಿಸಿಕೊಳ್ಳುವ, ಸ್ವೇನಕರ್ಮಣಾ - ಕ್ಷತ್ರಿಯನಾದ ನಿನ್ನ ಸ್ವಂತಕರ್ಮದಿಂದಲೇ, **ನಿಬದ್ಧಃ** - ಬಂಧಿಸಲ್ಪಟ್ಟಿರುವೆ ; **ತತಏವ**-ಆ ಕಾರಣದಿಂದಲೇ, **ಅವಶಃ** - ನಿನ್ನ ಯುದ್ಧಮಾಡುವದಿಲ್ಲವೆಂಬ **ಪೂರ್ವ** ಸಙ್ಕಲ್ಪಕ್ಕೆ ವಶನಾಗದೆ ಬುದ್ಧಿಪರವಶನಾಗಿ, **ಪರೈರ್ಧರ್ಷಣಂ**-ಶತ್ರುಗಳಿಂದ ನೀನು ಹೇಡಿ ಯುದ್ಧ ಮಾಡದೇ ಹೋದೆ, ಇತ್ಯಾದಿ ಅವಮಾನವನ್ನು, ತಿರಸ್ಕಾರವನ್ನು **ಅಸಹಮಾನಃ** - ಸಹಿಸದವನಾಗಿ, **ತ್ವಮೇವ** - ನೀನೇ ಎಂದರೆ ನನ್ನ ಬಲಾತ್ಕಾರ ಉಪದೇಶಾದಿಗಳೊಂದೂ ಬೇಕಿಲ್ಲದೆ ಎಂಬರ್ಥವು, **ಯತ್** - ಯಾವ ಯುದ್ಧವನ್ನು,, **ಇದಾನೀಂ** - ಈಗ, **ಮೋಹಾತ್** - ಎಂದರೆ ಅಜ್ಞಾನದಿಂದ, ನಾನೇ ನನ್ನ ಹಿತ ವಿಷಯದಲ್ಲಿ **ಸ್ವತಂತ್ರನೆಂಬ** ಅಜ್ಞಾನದಿಂದ ಅಥವಾ ಧರ್ಮಯುದ್ಧವನ್ನು ಅಧರ್ಮವೆಂಬ ಅಜ್ಞಾನದಿಂದ, **ಕರ್ತುಂನೇಚ್ಛಸಿ**-ಮಾಡಲು ಇಚ್ಛಿಸುವದಿಲ್ಲವೋ, **ತತ್ ಯುದ್ಧಂ** - ಆ ಯುದ್ಧವನ್ನೇ, **ಕರಿಷ್ಯಸಿ** - ನಡೆಸುವೆ. ಇಲ್ಲಿ ಅವಶನಾಗಿ ತನ್ನ ಸಙ್ಕಲ್ಪಕ್ಕೆ ವಿರುದ್ಧವಾಗಿ ನಡೆಯುವದು ಏತರಿಂದ ಎಂದರೆ? ಸ್ವಭಾವಜವಾದ ಕರ್ಮದಿಂದ ಬದ್ಧನಾಗಿರುವದರಿಂದಲೇ, ಎಂದು ವ್ಯಾಖ್ಯಾನಮಾಡಿರುತ್ತಾರೆ. ಪ್ರಕೃತಿಗೆ ವಶನಾಗಿ ಬದ್ಧನಾಗಿರುವದರಿಂದಲೇ ಅವಶನೆಂಬ ಭಾವವು. ಕರ್ಮವಾಸನಾ ತುಂಬಾ **ಬಲಿಷ್ಠವು**, ಈತನ **ಸಙ್ಕಲ್ಪವು** ಅನ್ಯಥಾವಾಗಿದ್ದರೂ ಅದಕ್ಕೆ ವಿರುದ್ಧವಾಗಿಯೇ ನಡೆಯುವಹಾಗೆ **ಈ**ತನ ಸ್ವಭಾವವು ಪ್ರೇರಿಸುತ್ತದೆ. ಹಾಗೆ ಪ್ರೇರಣೆಯನ್ನುಂಟುಮಾಡುವನು ತಾನೇ ಎಂಬ ಭಾವದಿಂದ ಹೇಳಿದ ಮಾತಾಗಿದೆ, ಈ ತಾತ್ಪರ್ಯವೇ ಮುಂದಿನ ಶ್ಲೋಕದಲ್ಲೂ ಹೇಳಲ್ಪಡುತ್ತದೆ. **ಪರೈರ್ಧರ್ಷಣಾಮಸಹಮಾನಃ** ಇತ್ಯಾದಿ ವ್ಯಾಖ್ಯಾನಕ್ಕೆ ಮೂಲದಲ್ಲಿ ಯಾವ ಸಾಧನವಿದೆ ? ಎಂದು ಕೇಳಿದರೆ ಮೂಲದಲ್ಲಿರುವ **ಅಪಿ** ಶಬ್ದಾರ್ಥದ ಉಪಪಾದನೆ ಎಂದು ಭಾವಿಸತಕ್ಕದ್ದು. ನನ್ನ ಉಪದೇಶದರೀತಿಯಲ್ಲಿ

**ಭಾ. ಅವ. ಸರ್ವಂ ಹಿ ಭೂತ ಜಾತಂ ಸರ್ವೇಶ್ವರೇಣ ಮಯಾ ಪೂರ್ವ ಕರ್ಮಾನುಗುಣ್ಯೇನ ಪ್ರಕೃತ್ಯನುವರ್ತನೇ ನಿಯಮಿತಂ, ತಚ್ಛೃಣು—**

---

ನೀನು ನಡೆಸದಿದ್ದರೂ ಪ್ರಕಾರಾಂತರದಿಂದಾಗಲಿ ಯುದ್ಧ ಮಾಡುವಿ ಎಂಬುದು **ಅಪಿ** ಶಬ್ದಾರ್ಥವು. ಆ ಪ್ರಕಾರಾಂತರ ಯಾವುದು ಎಂಬುದನ್ನು **ಪರೈರ್ಧರ್ಷಣಮುಸಹಮಾನಃ** ಎಂದು ವ್ಯಕ್ತಪಡಿಸಿದರು; ನೀನು ವೀರಕ್ಷತ್ರಿಯನು; ಯುದ್ಧಮಾಡದಿರುವದರಿಂದ ನಿನ್ನನ್ನು ಹೇಡಿ ಎಂದು ಪ್ರಬಲವಾಗಿ ನಿಂದಿಸುವರು, ಅದನ್ನು ನೀನು ಸಹಿಸುವದಿಲ್ಲವು, ಯುದ್ಧವೇನೋ ನಡೆಯುವದು ಸತ್ಯವು; ನಾನು ಹೇಳಿದಾಗಲೇ ಯುದ್ಧಮಾಡಿದ್ದರೆ ನನ್ನ ಅನುಗ್ರಹವು ಇರುತ್ತಿತ್ತು; ಅದನ್ನು ಕಳೆದುಕೊಂಡು ಅನಂತರ ಯುದ್ಧಮಾಡುವದು ಹೇಗಾಯಿತು ಎಂದರೆ ನೀರೆಲ್ಲಾ ಪ್ರವಹಿಸಿ ಹೋದನಂತರ ಅಡ್ಡಲಾಗಿ ಕಟ್ಟೆಯನ್ನು ಕಟ್ಟಿದ ಹಾಗಾಯಿತು. ನೀನು ಯುದ್ಧಮಾಡಿಯೂ ನನ್ನ ಪ್ರಸನ್ನತೆಯನ್ನು ಕಳೆದುಕೊಳ್ಳುತ್ತೀಯೇ. ಅಂತೂ ನೀನು ಈಗ ಯುದ್ಧವನ್ನು ಮಾಡುವದೇನೋ ಸತ್ಯವು. ಅದು ಹೇಗೆ ಎನ್ನುತ್ತೀಯೋ ? ನನ್ನ ಪ್ರೇರಣೆಯೇ, ಕ್ಷತ್ರಿಯನಾದ ನಿನಗೆ ಹಾಗೆಯೇ, ಎಂದು ಮುಂದಿನ ಶ್ಲೋಕದಲ್ಲಿ ವ್ಯಕ್ತಪಡಿಸುತ್ತಾರೆ. ॥ ೬೦ ॥

**ಭಾಷ್ಯಾವತಾರಿಕೆಯ ಅರ್ಥವು**—ಹಿಂದಿನ ಶ್ಲೋಕದಲ್ಲಿ ನನ್ನ ಉಪದೇಶರೀತ್ಯ ನಡೆಸದೆ, ನೀನು ಸ್ವತಂತ್ರಿಸಿ ಅನ್ಯಥಾ ಸಙ್ಕಲ್ಪಿಸಿದರೂ, ಅದು ಸಾಗುವದಿಲ್ಲವು; ನಿನ್ನ ಕ್ಷತ್ರಿಯ ಸ್ವಭಾವವೇ ನನ್ನ ಇಷ್ಟದಂತೆ ನಡೆಸುತ್ತದೆಂದು ಹೇಳಲ್ಪಟ್ಟಿತು. ಹೀಗೆ ಹೇಳಿದರೆ ಮುಂದಿನ ಶಂಕಾಗಳಿಗೆ ಅವಕಾಶವುಂಟಾಗುತ್ತದೆ. ಹೇಗೆಂದರೆ ಜಡವಾದ ದೇಹಸ್ವಭಾವವೇ ಹೇಗೆ ನಿಯಮನ ಮಾಡೀತು ? ಈ ಸಂದರ್ಭದಲ್ಲಿ ಸರ್ವೇಶ್ವರನೇನು ಉದಾಸೀನನಾಗಿ ಸುಮ್ಮನಿರುತ್ತಾನೆಯೇ ? ಇಂತಹ ಶಂಕಾಗಳಿಗೆ ಸಮಾಧಾನವನ್ನು ಹೇಳುತ್ತಾರೆ ನಿನ್ನ ಪ್ರವೃತ್ತಿಗಳು ಯಾವುವೂ ನನ್ನ ಸಂಬಂಧವಿಲ್ಲದ ನಡೆಯುಲಾರವೆಂದು **ದೈವಂಚೈವಾತ್ರ ಪಂಚಮಂ** ಎಂಬಲ್ಲಿ ಹೇಳಿದೆವು. ಆದುದರಿಂದ ನಿನ್ನ **ಸ್ವಭಾವಜ**ವಾದ ಪ್ರವೃತ್ತಿಯೂ ಕೂಡ ನನ್ನಧೀನವಾದುದೆಂಬ ಅರ್ಥವನ್ನು ಶ್ರೀ ಭಗವಾನರವರು ಮುಂದಿನ ಶ್ಲೋಕದಲ್ಲಿ ಬೋಧಿಸುತ್ತಾರೆಂದು ಅವತಾರಿಕೆಯನ್ನು ದಯಪಾಲಿಸುತ್ತಾರೆ. — **ಸರ್ವಂ ಹಿ ಭೂತಜಾತಂ** - ಸಮಸ್ತ ಕ್ಷೇತ್ರಜ್ಞ ಸಮೂಹವೂ. **ಸರ್ವೇಶ್ವರೇಣ** - ಸಮಸ್ತ ಚೇತನಾಚೇತನವನ್ನೆಲ್ಲಾ ವ್ಯಾಪಿಸಿ, ಅಂತರಾತ್ಮಾವಾಗಿ ಸಮಸ್ತ ಚೇತನ ವರ್ಗಕ್ಕೂ ನಿಯಾಮಕನಾಗಿ ಪ್ರೇರಕನಾಗಿರುವ, **ಮಯಾ** - ನನ್ನಿಂದ, **ಪೂರ್ವ ಕರ್ಮಾನುಗುಣ್ಯೇನ** - ಅನಾದಿಯಾಗಿ ಬಂದಿರುವ ಪೂರ್ವಕರ್ಮಗಳಲ್ಲಿ ಈಗ ಉಂಟಾಗಿರುವ ಪ್ರಾರಬ್ಧ ಕರ್ಮಾನುಗಣವಾಗಿ, **ಪ್ರಕೃತ್ಯನುವರ್ತನೇ** - ಪ್ರಾಪ್ತವಾದ ದೇಹ ಸ್ವಭಾವವನ್ನು ಅನುಸರಿಸಿ ನಡೆಯುವದರಲ್ಲಿ, **ನಿಯಮಿತಂ** - ನಿಯಮಿಸಲ್ಪಟ್ಟಿರುತ್ತದೆ. ನನ್ನ ನಿಯಮನ ಪ್ರೇರಣೆಗಳಿಲ್ಲದೆ ಕ್ಷೇತ್ರಜ್ಞನ ಯಾವ ಪ್ರವೃತ್ತಿಯೂ ನಡೆಯುವದಿಲ್ಲವು; ನಾನು ನಿಯಮಿಸುವದಾದರೋ ಮನ ಬಂದಂತೆ ನಿಯಮಿಸುವದಿಲ್ಲವು; ಹಾಗೆ ನಿಯಮಿಸಿ ಬಿಟ್ಟರೆ ನಾನು ವೈಷಮ್ಯ ನೈರ್ಘೃಣ್ಯಗಳಿಗೆ ಒಳಗಾಗುವೆನು. ಆದುದರಿಂದ ಅವರ ಪ್ರಾರಬ್ಧಕರ್ಮಾನುಸಾರ ಪ್ರಾಪ್ತವಾದ ಶರೀರಗಳ ಸಾತ್ವಿಕರಾಜಸತಾಮಸ ಸ್ವಭಾವಗಳಿಗನುಗುಣವಾಗಿ ಪ್ರೇರಿಸಿ ಕರ್ಮವನ್ನು ಮಾಡುತ ಹಾಗೆ ಮಾಡುವೆನೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ - **ತಚ್ಛೃಣು** - ಅದನ್ನು ಸಾವಧಾನವಾಗಿ ಕೇಳಿ ತಿಳಿ ಎಂಬ ಭಾವವು. ಆ ಸ್ವಭಾವಕ್ಕೆ ಪರತಂತ್ರನಾಗಿ ನೀನಿರುವದೂ ಕೂಡ ನನ್ನ ಮೂಲಕವಾಗಿಯೇ ಎಂಬ ಭಾವವು. ಇಂತಹ ಯುದ್ಧಪ್ರವೃತ್ತಿಗೂ ಹಾಗೆಯೇ ಸರ್ವಕ್ಷೇತ್ರಜ್ಞ ಪ್ರವೃತ್ತಿಗೂ ನಾನೇ ಕಾರಣನು. ನಾನು ಸಾಧಾರಣವಾಗಿ ಕಾರಣವು, ನೀನಾದರೋ ನಿನ್ನ ಕರ್ಮ, ಅದರಿಂದುಂಟಾದ ನಿನ್ನ ದೇಹದ ಸ್ವಭಾವ, ಇವುಗಳ ಮೂಲಕವಾಗಿ

**ಮೂ. ಈಶ್ವರ ಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ॥ ೬೧ ॥**

---

**ವಿಶೇಷಕಾರಣವು;** ಎಂಬುದು **ತಾತ್ಪರ್ಯವು.** ಎಲ್ಲಾತರಹೆಯ ಸಸ್ಯವೃದ್ಧಿಗೂ ನೀರು ಹೇಗೆ ಆವಶ್ಯಕವೋ ಹಾಗೆ ನಾನು ಕಾರಣನು. ನೀವಾದರೋ ಬೀಜಗಳ ಹಾಗೆ, ಆ ಜಾತಿಯ ಸಸ್ಯಗಳಿಗೆ ಕಾರಣವು ಎಂಬ ಭಾವವು. ॥ ೬೧॥

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕದಲ್ಲಿ **"ಕರಿಷ್ಯಸಿ ಅವಶೋಽಪಿ ತತ್"** ನೀನು ಮಾಡುವದಿಲ್ಲವೆಂದು ಸಙ್ಕಲ್ಪಿಸಿದ್ದರೂ, ಮೈಮರೆತು ನೀನೇ ನಿನ್ನ ಸಙ್ಕಲ್ಪಕ್ಕೆ ವಿರುದ್ಧವಾಗಿ ನಡೆಯುತ್ತೀಯೇ ಎಂದು ಹೇಳಿದರು. ಅದೇನು ಹಾಗೆ? ಎಂಬ ಸಂದರ್ಭದಲ್ಲಿ ಕಾರಣವನ್ನು ಹೇಳುತ್ತಾರೆ, ಆತ್ಮಾ ಸಙ್ಕಲ್ಪಿಸುದುದನ್ನು ಜಡವಾದ ದೇಹದ ಗುಣವು ನಡೆಯದ ಹಾಗೆ ಮಾಡುತ್ತದೆ ಎಂದರೆ ದೇಹ ಧರ್ಮವು ಹೇಗೆ ಅಷ್ಟು ಬಲಿಷ್ಟವಾದುದು? ಎಂಬ ಚೋದ್ಯಕ್ಕೆ ಸಮಾಧಾನವನ್ನು ಹೇಳುತ್ತಾರೆ – ಪ್ರಕೃತಿಯ ಸ್ವಭಾವಾನುಗುಣವಾಗಿ ನಡೆಯುವ ಹಾಗೆ, ಮಾಡಿಸುವನು ಸರ್ವೇಶ್ವರನಾದ ತಾನೇ ಎಂದೂ, ತನಗೆ ವೈಷಮ್ಯ ನೈರ್ಘೃಣ್ಯಾದಿಗಳು ಯಾವುವೂ ಇಲ್ಲದೆ, ಚೇತನರ ಪ್ರಾರಬ್ಧಾನುಗುಣವಾಗಿ ನಡೆಸುತ್ತೇನೆಂದು ತಿಳಿಸುತ್ತಾರೆ – **ಹೇ ಅರ್ಜುನ-** ಓ ಅರ್ಜುನನೇ, ಅರ್ಜುನ ಶಬ್ದವು ಧವಳವೆಂಬ ಅರ್ಥದಲ್ಲೂ ಪ್ರಯೋಗವಿರುವದರಿಂದ, ಸಾತ್ವಿಕ ಭಾವನಾಗಿ ಸಾತ್ವಿಕಶಿರೋಮಣಿಯಾದವನೇ ಎಂಬ ಭಾವವು; ನಿನ್ನ ಸ್ವಭಾವವು ನಿನ್ನನ್ನು ಸತ್ವಮಾರ್ಗದಲ್ಲೇ ಪ್ರವರ್ತಿಸುವ ಹಾಗೆ ಮಾಡಿ ಧರ್ಮಯುದ್ಧವನ್ನು ನಡೆಸುವ ಹಾಗೆ ಮಾಡುತ್ತದೆಂಬ ಧ್ವನ್ಯರ್ಥವು ಇದರಿಂದ ಸೂಚಿತವು. ಸರ್ವಭೂತಾನಾಂ ಎಂಬ ಪದವು ಮಧ್ಯೆ ಇರುವದರಿಂದ **ಈಶ್ವರ** ಶಬ್ದಕ್ಕೂ, **ಹೃದ್ದೇಶೆ** ಎಂಬ ಶಬ್ದಕ್ಕೂ ಅನ್ವಯಿಸುತ್ತದೆ; **ಸರ್ವಭೂತಾನಾಂ ಈಶ್ವರಃ** - ಸರ್ವ ವಿಶ್ವಕ್ಕೂ ಶ್ರೀಮನ್ನಾರಾಯಣನು ಈಶ್ವರನಾದುದರಿಂದ, **ಸರ್ವಭೂತಾನಾಂ** - ಸರ್ವ ಪ್ರಾಣಿಗಳಿಗೂ, ಈಶ್ವರನು - ನಿಯಾಮಕನು; ಗೀತಾ ಸಂಗ್ರಹ ಶ್ಲೋಕದಲ್ಲಿ **"ವ್ಯಾಪನಾದ್ಭರಣಾತ್ಸ್ವತ್ವಾತ್"** ಎಂದು ಹೇಳಿರುವ ಪ್ರಕಾರ, ಸರ್ವವೂ ತನಗೆ ಶರೀರವಾಗಿ ತಾನು ಎಲ್ಲಕ್ಕೂ ಆತ್ಮಾವಾಗಿ ವ್ಯಾಪಿಸಿರುವದರಿಂದ, ಎಲ್ಲವನ್ನೂ ಆ ಕಾರಣದಿಂದ ಸತ್ತಾಸ್ಥಿತಿ ನಿಯಮನಗಳ ಮೂಲಕ ಭರಿಸಿ ಎಲ್ಲಕ್ಕೂ ಸ್ವಾಮಿಯಾಗಿರುವದರಿಂದ **ಈಶ್ವರನು;** ಎಲ್ಲಕ್ಕೂ ಆತ್ಮಾವಾಗಿರುವದರಿಂದಲೇ ತನಗೆ ಸರ್ವನಿಯಾಮಕತ್ವವೆಂಬ ಭಾವವು. **"ತತ್ಸೃಷ್ಟ್ವಾ ತದೇವಾನುಪ್ರಾವಿಶತ್"** **"ಏವೇತಭೂತಾನಿ ಚರಾಚರಾಣಿ"** **"ಅಂತಃಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ"** ಎಂಬ ಅನೇಕ ಶ್ರುತಿಗಳಲ್ಲೂ **"ಅಹಂ ಆತ್ಮಾ ಗುಡಾಕೇಶ"** (ಗೀ ೧೦ ೨೦) ಇತ್ಯಾದಿ ಅನೇಕ ಗೀತಾಶ್ಲೋಕಗಳಲ್ಲೂ, ಪುರಾಣೇತಿಹಾಸಗಳಲ್ಲೂ ಉಪಪಾದಿತವು; ಇಂತಹ ಸರ್ವನಿಯಾಮಕನಾದ ಈಶ್ವರನು, **ಹೃದ್ದೇಶೇ** - ಜೀವಾತ್ಮನ ಸರ್ವಪ್ರವೃತ್ತಿ ನಿವೃತ್ತಿಗಳಿಗೂ ಕಾರಣಭೂತವಾದ ಹೃದಯ ಪ್ರದೇಶದಲ್ಲೇ **ತಿಷ್ಠತಿ** - ರೂಪವನ್ನು ತಳೆದು ಇರುತ್ತಾನೆ; ಏನು ಸುಮ್ಮನಿರುತ್ತಾನೆಯೇ; ಉದಾಸೀನನಾಗಿರುತ್ತಾನೆಯೇ ಎಂದರೆ ಹಾಗಲ್ಲವು, ಕ್ಷೇತ್ರಜ್ಞನ ಸಮಸ್ತ ಪ್ರವೃತ್ತಿ ನಿವೃತ್ತಿಗಳಿಗೂ ಕಾರಣಭೂತನಾಗಿರುತ್ತಾನೆಂದು ಉತ್ತರಾರ್ಧದಿಂದ ತಿಳಿಸುತ್ತಾರೆ – **ಯನ್ತ್ರಾರೂಢಾನಿ**-ದೇಹೇಂದ್ರಿಯಗಳೆಂಬ ರಥರೂಪಯನ್ತ್ರವನ್ನು ಹತ್ತಿರುವ, **ಸರ್ವಭೂತಾನಿ** – ಸಮಸ್ತ ಪ್ರಾಣಿಗಳನ್ನು, **ಮಾಯಯಾ** - ಪ್ರಾಣಿಕರ್ಮಾನುಸಾರ ಪ್ರಾಪ್ತವಾದ ದೇಹ ಸ್ವಭಾವಾನುಗುಣವಾದ ಪ್ರಕೃತಿಯ ಮೂಲಕ, **ಭ್ರಾಮಯನ್** - ಭ್ರಮಾಯುಕ್ತರು ಸುಮ್ಮನೆ ತಲೆ ಹುಳತ ನಾಯಿಯು ಸುತ್ತುವಹಾಗೆ, ಸುತ್ತಿಸುತ್ತಾ, **ತಿಷ್ಠತಿ** - ಸರ್ವೇಶ್ವರನು ಇರುತ್ತಾನೆ. **"ಯ ಆತ್ಮನಿ ತಿಷ್ಠನ್** - ಎಂಬ ಬೃಹದಾರಣ್ಯಕ (ಜ. ೭. ೨೨.) ವಾಕ್ಯವನ್ನು ಮನಸ್ಸಿನಲ್ಲಿಟ್ಟು **ತಿಷ್ಠತಿ**

ಎಂಬ ಪ್ರಯೋಗವು. ಇಲ್ಲಿ ಹೃದ್ದೇಶೇ ತಿಷ್ಠತಿ ಎಂಬ ಪ್ರಯೋಗವು ಈ ಜೀವಾತ್ಮನಿನ ಸರ್ವದೇಹದ ವ್ಯಾಪ್ತಿಯು ಪರಮಾತ್ಮನಿಗಿರುವಾಗ ಹೇಗೆ ಸಮಂಜಸವು ? ಎಂದರೆ ಇಲ್ಲಿ ಹೃತ್ ಎಂಬ ಶಬ್ದವು ದಹರಕ ಹರವನ್ನು ಮಾತ್ರವೇ ಬೋಧಿಸುವದಿಲ್ಲವು. ಸ್ಯಾಂತಂಹೃನ್ಮಾನಸಂ ಮನಃ" ಎಂಬುದರಿಂದ ಹೃಚ್ಛಬ್ದವು ಮನಸ್ಸನ್ನೂ ತನ್ಮೂಲಕ ಬುದ್ಧಿಯನ್ನೂ ಹಾಗೆಯೇ ಎಲ್ಲವನ್ನೂ ಬೋಧಿಸುತ್ತದೆ, ಕ್ಷೇತ್ರಜ್ಞನ ಮನಸ್ಸು ಬುದ್ಧಿಗಳನ್ನೂ ಈಶ್ವರನು ವ್ಯಾಪಿಸಿರುವದರಿಂದ ಆತನಿಗೆ ಸರ್ವ ಪ್ರಾಣಿ ನಿಯನ್ತೃತ್ವವೂ ಉಂಟೆಂಬ ಭಾವವು. ಅಥವಾ, ದಹರ ವಿದ್ಯೆಯಲ್ಲಿ "ದಹರ ಉತ್ತರೇಭ್ಯಃ" ಎಂಬ (೧. ೩. ೧೩) ಬ್ರಹ್ಮಸೂತ್ರದಲ್ಲಿ, ಛಾಂದೋಗ್ಯ ವಾಕ್ಯವಾದ (೮. ೧. ೧) "ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ" ಎಂಬಲ್ಲಿ, ಜೀವಾತ್ಮನ ಶರೀರ ವನ್ನು ಬ್ರಹ್ಮಪುರವೆಂದು ಹೇಳಿ, ಅಲ್ಲಿ ದಹರ ಕುಹರದಲ್ಲಿ ಆಕಾಶ ಶಬ್ದವಾಚ್ಯನಾದ ಪರಮ ಪುರುಷನಿದ್ದಾನೆಂದು ಹೇಳಲ್ಪಟ್ಟಿರುತ್ತದೆ. ಇದೇ ಹೃದ್ದೇಶವು ಏಕೆಂದರೆ ಮುಂದೆ (ಛಾ. ೮. ೧. ೩) ರಲ್ಲಿ "ಏಷೋನ್ತ ರಹೃದಯ ಆಕಾಶಃ" ಎಂದು ಪ್ರಯೋಗವಿರುವದರಿಂದ. ಈ ಪ್ರಯೋಗವೇ ತೈತ್ತಿರೀಯದಲ್ಲೂ ಇರುತ್ತದೆ. ಪುರುಷ ಸೂಕ್ತದಲ್ಲಿ "ಹೃದಯಂ ತದ್ವಿ ಜಾನೀಯಾದ್ವಿಶ್ವಸ್ಯಾಯತನಂ ಮಹತ್" ಎಂಬ ಪ್ರಯೋಗವುಂಟು. ಹೀಗೆ ರೂಪವನ್ನು ತಳೆದು "ಈಶ್ವರಃ ಹೃದ್ದೇಶೇಽರ್ಜುನ ತಿಷ್ಠತಿ" ಎಂದು ಹೇಳಲ್ಪಟ್ಟಿತು. ಹಾಗೆಯೇ ಕಠಶ್ರುತಿ ಯಲ್ಲಿ "ಅಙ್ಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ" (ಕಠ. ೨. ೪. ೧೨) ಎಂಬ ವಾಕ್ಯದಲ್ಲಿ ಇಲ್ಲಿರುವ ತಿಷ್ಠತಿ ಎಂಬ ಪ್ರಯೋಗವೇ ಇರುತ್ತದೆ. ಮುಂದಿನ ವಾಕ್ಯವಾದ ೨. ೬. ೧೭) "ಅಂಗುಷ್ಠಮಾತ್ರಃ ಪುರುಷೋನ್ತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ" ಎಂಬಲ್ಲಿ ಹೃದ್ದೇಶವು ಹೇಳಲ್ಪಟ್ಟಿರುತ್ತದೆ. ಹೀಗೆ ರೂಪತಃ ಅಲ್ಲದೆ ಸ್ವರೂಪತಃ ಅನ್ತರಾತ್ಮಾವಾಗಿ ಜೀವಾತ್ಮನನ್ನೂ ಶರೀರವನ್ನೂ ಹೀಗೆ ಎಲ್ಲವನ್ನೂ ವ್ಯಾಪಿಸಿರು ತ್ತಾನೆ. ಹೀಗಿರುವದರಿಂದ ಈಶ್ವರನು ಎಂಬ ಭಾವವು. ಹೀಗೆ ಯನ್ತ್ರಶಬ್ದ ಸ್ವಾರಸ್ಯದಿಂದಲೂ, ಭ್ರಾಮಯನ್ ಎಂಬ ಪ್ರಯೋಗದಿಂದ, ದುಷ್ಟ ಹಯಗಳು ಕಟ್ಟಿರುವ ರಥವಲ್ಲಿ ಕೂತವರಾಗಿ ಸರಿಯಾದ ಸಾರಥಿಯಿಲ್ಲದೆ, ಆ ಹಯಗಳು ವಿಪರೀತಮಾರ್ಗದಲ್ಲಿ ಈ ರಥಯಾನ ಕ್ಷೇತ್ರಜ್ಞ ನನ್ನು ಸುತ್ತಿಸುತ್ತವೆ ಎಂಬ ಭಾವವಾದರೂ ಆಗಬಹುದು. ಇಂತಹ ಭ್ರಮಣವು ಕ್ಷೇತ್ರಜ್ಞನಿಗೆ ಪ್ರಾಪ್ತವಾಗುವದಕ್ಕೆ ಕಾರಣವು,ಸರ್ವನಿಯನ್ತಾವಾದ ತಾನು ಅವರಿಗೆ ಕರ್ಮಾನುಸಾರವಾಗಿ ಕೊಟ್ಟ ಕಳೇಬರಾದಿಗಳ ಸ್ವಭಾವಾನುಸಾರ ನಡೆಯುವ ಹಾಗೆ ಮಾಡಿರುತ್ತೇನೆಂಬುದು ತಾತ್ಪರ್ಯವು. ಆಕರಣ ಕಳೇಬರ ಪ್ರಾಪ್ತಿಯನ್ನುಂಟು ಮಾಡಿದುದು ತಾನಾದರೂ, ಅವರವರುಗಳ ಕರ್ಮಗಳೇ ವಿಶೇಷ ಕಾರಣವಾದುದರಿಂದ, ಸ್ವೇನೈವ ನಿರ್ಮಿತಂ ದೇಹೇನ್ದ್ರಿಯಾವಸ್ಥಂ ಪ್ರಕೃತ್ಯಾಖ್ಯಂ. ಯನ್ತ್ರಂ ಎಂದು ಭಾಷ್ಯದಲ್ಲಿ ಸ್ವಾರಸ್ಯವಾದ ವ್ಯಾಖ್ಯಾನವು. ತನ್ನಿಂದಲೇ ತನ್ನಕರ್ಮಮೂಲಕ ವಾಗಿಯೇ ಉಂಟುಮಾಡಿಕೊಂಡ ಶರೀರೇಂದ್ರಿಯಗಳೇ ಯನ್ತ್ರವು ಎಂಬುದೇ ಯನ್ತ್ರಾರೂಢಾನಿ ಎಂಬಲ್ಲಿ ತೋರುವ ಅರ್ಥವು ಎಂಬ ಭಾವವು. ಅತ್ಮಾನಂ ರಥಿನಂ ವಿದ್ಧಿ ಶರೀರಂ ರಥ ಮೇವಚ ಎಂಬ ಶ್ರುತ್ಯರ್ಥವು(ಕಠ. ೩. ೩) ಇಲ್ಲಿ ಅನುಸಂಧೇಯವು. ಯನ್ತ್ರಗಳಲ್ಲಿ ಅನೇಕ ಚಕ್ರಗಳು ಮತ್ತೂ ಭಾಗಗಳು ಭ್ರಮಣಗಳು ಇರುತ್ತವೆಯೋ, ಹಾಗೆ ನಮ್ಮ ದೇಹರಚನೆಯ ವೈಚಿತ್ರ್ಯತೆಯೂ ಅವುಗಳ ಭ್ರಮಣಗಳಿಗೆ ಕಾರಣಭೂತನಾಗಿ ಚೇತನನಿದ್ದಾನೆಂಬುದೂ ಸೂಚಿತವು;

ಭಾಷ್ಯಾರ್ಥವು—ದೇಹ ಸ್ವಭಾವವೇ ಪ್ರವೃತ್ತಿಗೆ ಹೇತುವಾಗಿ ಪರಮಾತ್ಮನು ಉದಾಸೀನ ನಾಗಿ ನಿಂತುಬಿಟ್ಟರೆ, ಪ್ರವೃತ್ತಿಗೆ ಹೇಗೆ ಅವಕಾಶವು ? ಹೀಗೆ ಉದಾಸೀನನಾದರೆ ಸರ್ವೇಶ್ವರನಿಗೆ ಸರ್ವಕಾರಣತ್ವವು ಹೇಗೆ ಕೂಡುತ್ತದೆ ? ವಿಶೇಷಕಾರಣವು ಕರ್ಮಾನುಸಾರ ಪ್ರಾಪ್ತವಾದ ಶರೀರ

ಭಾ. ಈಶ್ವರಃ ಸರ್ವ ನಿಯಮನ ಶೀಲೋ ವಾಸುದೇವಃ ಸರ್ವಭೂತಾನಾಂ ಹೃದ್ದೇಶೇ ಸಕಲ ಪ್ರವೃತ್ತಿ ನಿವೃತ್ತಿ ಮೂಲಜ್ಞಾನೋದಯಪ್ರದೇಶೇ ತಿಷ್ಠತಿ. ಕಥಂ ಕಿಂ ಕುರ್ವಂಸ್ತಿಷ್ಠತಿ ? ಯನ್ತ್ರಾರೂಢಾನಿ ಸರ್ವಭೂತಾನಿ ಮಾಯಯಾ ಭ್ರಾಮಯನ್ ಸ್ವೇನೈವ ನಿರ್ಮಿತಂ ದೇಹೇನ್ದ್ರಿಯಾವಸ್ಥಂ ಪ್ರಕೃತ್ಯಾಖ್ಯಂ ಯನ್ತ್ರ ಮಾರೂಢಾನಿ ಸರ್ವಭೂತಾನಿ ಸ್ವಕೀಯಯಾ ಸತ್ತ್ವಾದಿ ಗುಣಮಯ್ಯಾ ಮಾಯಯಾ ಗುಣಾನು

---

ವಾದರೂ, ಸಾಮಾನ್ಯ ಕಾರಣವು ಸರ್ವೇಶ್ವರನು; ಆದುದರಿಂದ ಯಾವ ವಿರೋಧವೂ ಇಲ್ಲವೆಂದ ಹೇಳುತ್ತಾರೆ.—

**ಈಶ್ವರಃ** ಎಂದರೆ ಸರ್ವನಿಯಮನ ಶೀಲಃ **ವಾಸುದೇವಃ** - ಸಮಸ್ತ ಚರಾಚರವನು ನಿಯಮಿಸುವ ಸ್ವಭಾವವುಳ್ಳ ವಸುದೇವ ಪುತ್ರನಾದ ಶ್ರೀ ಕೃಷ್ಣನು, ವಾಸುದೇವ ಶಬ್ದ ಸ್ವಾರಸ್ಯದಿಂದ ಮುಕ್ತರಿಗೆ ದಿವ್ಯವೈಕುಂಠದಲ್ಲಿ ಯಾವಾಗಲೂ ಸೇವೆಯನ್ನೀಯುತ್ತಿರುವ ಪರ ವಾಸುದೇವನೆಂದೂ ಅರ್ಥವಾಗಬಹುದು; ಅಥವಾ ವ್ಯುತ್ಪತ್ತಿಯುಮೂಲಕ ವಾಸುದೇವ ಶಬ್ದದಲ್ಲಿ ಸರ್ವವ್ಯಾಪ್ತಿಯು ತೋರಿಬರುವದರಿಂದ, ಈಶ್ವರನು ಎಂದು ಸೂಚಿಸುವದಕ್ಕಾಗಿ ಹಾಗೆ ಭಾಷ್ಯವು. **ಸರ್ವತ್ರಾಸೌ ಸಮಸ್ತಂಚ ವಸತ್ಯ ತ್ರೇತಿ ವೈಯತಃ** ಎಂಬ ಪುರಾಣೋಕ್ತಿಯು ಅನುಸಂಧೇಯವು. **ಸರ್ವಭೂತಾನಾಂ ಈಶ್ವರಃ** - ಸರ್ವಪ್ರಾಣಿಗಳಿಗೂ ಅಂತರಾತ್ಮಾವಾಗಿರುವದರಿಂದ ಅವರೆಲ್ಲರಿಗೂ ಪ್ರೇರಕನಾಗಿ ನಿಯಾಮಕನಾಗಿರುವ ಸರ್ವೇಶ್ವರನು, **ಹೃದ್ದೇಶೇ** ಎಂದರೆ **ಸಕಲ ಪ್ರವೃತ್ತಿ ನಿವೃತ್ತಿ ಮೂಲಜ್ಞಾನೋದಯ ಪ್ರದೇಶೇ** – ಸಮಸ್ತ ಕ್ಷೇತ್ರಜ್ಞರ ಸಕಲ ಪ್ರವೃತ್ತಿ ನಿವೃತ್ತಿಗಳಿಗೂ ಕಾರಣಭೂತ ಇದ ಜ್ಞಾನವುಂಟಾಗುವ ಪ್ರದೇಶದಲ್ಲಿ, **ತಿಷ್ಠತಿ** – ಇರುತ್ತಾನೆ. ಏನು, ಉದಾಸೀನನಾಗಿ, ಸ್ತಬ್ಧನಾಗಿ ಏನನ್ನೂ ಮಾಡದೆಸುಮ್ಮನೆ ಇರುತ್ತಾನೆಯೋ? ಸಾಂಖ್ಯರ ಆತ್ಮತತ್ತ್ವದ ಹಾಗೆಯೋ ? ಎಂದರೆ ಹಾಗಲ್ಲವೆಂದು, **ಕಥಂ ಕಿಂ ಕುರ್ವಂಸ್ತಿಷ್ಠತಿ** ಎಂದು ಪ್ರಶ್ನಿಸಿ ಉತ್ತರವನ್ನು ಹೇಳುತ್ತಾರೆ – ಹೇಗೆ ಇರುತ್ತಾನೆ ? ಏನನ್ನು ಮಾಡುತ್ತಾ ಇರುತ್ತಾನೆ ? **ಮಾಯಯಾ** ಯನ್ತ್ರಾರೂಢಾನಿ–ಪ್ರಕೃತಿ ಮೂಲಕ ಯನ್ತ್ರದಲ್ಲಿ ಆರೋಪಿಸಲ್ಪಟ್ಟಿರುವ ಹಾಗೆ ಇರುವ, **ಸರ್ವಭೂತಾನಿ** - ಸಮಸ್ತ ಪ್ರಾಣಿಗಳನ್ನು **ಭ್ರಾಮಯನ್** - ಸುತ್ತಿಸುವವನಾಗಿ, ಇದರ ಅರ್ಥವನ್ನು ವ್ಯಕ್ತಪಡಿಸುತ್ತಾರೆ. **ಸ್ವೇನೈವ ನಿರ್ಮಿತಂ** - ಈಶ್ವರನಾದ ತನ್ನಿಂದಲೇ ಸೃಷ್ಟಿಸಲ್ಪಟ್ಟ, **ದೇಹೇಂದ್ರಿಯಾವಸ್ಥಂ** - ದೇಹೇಂದ್ರಿಯ ಮೊದಲಾದ ಅವಸ್ಥೆಯನ್ನು ಹೊಂದಿರುವ, **ಪ್ರಕೃತ್ಯಾಖ್ಯಂ ಯನ್ತ್ರಂ** - ಪ್ರಕೃತಿ ಎಂಬ ಯನ್ತ್ರವನ್ನೂ, **ಆರೂಢಾನಿ** - ಹತ್ತಿದ, **ಸರ್ವಭೂತಾನಿ** - ಸಮಸ್ತ ಚೇತನರನ್ನೂ, **ಸತ್ತ್ವಾದಿ ಗುಣಮಯ್ಯಾ ಮಾಯಯಾ**-ಸತ್ತ್ವರಜಸ್ತಮೋಗುಣಮಯವಾದ ಪ್ರಕೃತಿಯಿಂದ, **ಗುಣಾನುಗುಣಂ** ಆ ಸತ್ತ್ವಾದಿ ಗುಣಗಳಲ್ಲಿ ಪ್ರಾಚುರ್ಯವುಳ್ಳ ಗುಣಕ್ಕೆ ಅನುಗುಣವಾಗಿ , **ಪ್ರವರ್ತಯನ್** - ಈ ಜೀವಾತ್ಮನನ್ನು ಪ್ರೇರಿಸುವವನಾಗಿ, **ತಿಷ್ಠತೀತ್ಯರ್ಥಃ** - ಈಶ್ವರನು ಅಲ್ಲಿರುತ್ತಾನೆಂಬ ಭಾವವು- ಸುಮ್ಮನೆ ಶಿಲೆಯ ಹಾಗೆ ಇರುವದಿಲ್ಲವು. ಜೀವಾತ್ಮನ ಪೂರ್ವಕರ್ಮಾನುಗುಣವಾಗಿ ಆಧಿಕ್ಯವನ್ನು ಹೊಂದಿದ ಸತ್ತ್ವಾದಿಗುಣಕ್ಕೆ ಯೋಗ್ಯವಾದ ಪ್ರವೃತ್ತಿ ನಿವೃತ್ತಿಗಳನ್ನುಂಟುಮಾಡುತ್ತಾ ಪ್ರೇರಕನಾಗಿರುತ್ತಾನೆಂದು ಹೇಳಲ್ಪಟ್ಟಿತು. ಹೀಗೆ ಪ್ರವೃತ್ತಿ ನಿವೃತ್ತಿಗಳಿಗೆ ಚೇತನನ ವಿಷಯದಲ್ಲಿ ನಿಯಾಮಕನು ಎಂದರೆ ಸ್ವೇಚ್ಛಾನುಗುಣವಾಗಿ ಸ್ವತಂತ್ರಿಸಿ ನಿಯಮಿಸಿ ವೈಷಮ್ಯ ನೈರ್ಘೃಣ್ಯ ಗಳಿಗೆ ಗುರಿಮಾಡಿಕೊಳ್ಳುತ್ತಾನೋ ಎಂದರೆ ಹಾಗಲ್ಲವು. ಕ್ಷೇತ್ರಜ್ಞನ ಪೂರ್ವಕರ್ಮಾನುಗುಣವಾಗಿ ಪ್ರಾಪ್ತವಾದ ಕರಣ ಕಳೇಬರಗಳ ಮೂಲಕ ಸಾತ್ವಿಕ ರಾಜಸ ತಾಮಸಗುಣಗಳಲ್ಲಿ ಯಾವ ಗುಣಕ್ಕೆ ಆಧಿಕ್ಯವೋ, ತದನುಸಾರವಾಗಿ ಭೋಕ್ತಾವಾಗಿ ಅನುಭವಿಸಬೇಕಾದ ಪ್ರಯುಕ್ತ,

ಗುಣಂ ಪ್ರವರ್ತಯಂಸ್ತಿಷ್ಠತೀತ್ಯರ್ಥಃ। ಪೂರ್ವಮುಕ್ತೋ ತದುಕ್ತಮ್. ಸರ್ವಸ್ಯಚಾಹಂ ಹೃದಿಸನ್ನಿವಿಷ್ಟೋ ಮತ್ತಃ ಸ್ಮೃತಿಜ್ಞಾನ ಮಪೋಹನಂ ಚ" ಇತಿ. "ಮತ್ತ ಸ್ಸರ್ವಂ ಪ್ರವರ್ತತೇ " ಇತಿ ಚ. "ಯ ಆತ್ಮನಿ ತಿಷ್ಠ ಇತ್ಯಾದಿಕಾ ಶ್ರುತಿಶ್ಚ ॥೬೧॥

---

ಅಂತಹ ಪ್ರವೃತ್ತಿನಿವೃತ್ತಿಗಳಿಗೆ ಪ್ರೇರಕನಾಗುವನು ಎಂಬ ಭಾವವು. ಸರ್ವೇಶ್ವರನಿಲ್ಲದೆ ತೃಣಮಪಿ ನಚಲತಿ ಎಂಬ ಹೇಳಿಕೆಯ ಪ್ರಕಾರ ಕ್ಷೇತ್ರಜ್ಞರ ಯಾವ ಪ್ರವೃತ್ತಿ ನಿವೃತ್ತಿಗಳೂ ನಡೆಯುವ ದಿಲ್ಲವು. ಹೀಗೆ ಸರ್ವಪ್ರೇರಕನೆಂಬ ಅರ್ಥವು ಹಿಂದೆಯೇ ಹೇಳಲ್ಪಟ್ಟಿರುತ್ತದೆಂದು ಪ್ರಮಾಣ ವನ್ನು ಉದಾಹರಿಸುತ್ತಾರೆ. — ಪೂರ್ವಮುಕ್ತೋ ತದುಕ್ತಮ್ - ಹಿಂದೆಯೂ ಕೂಡ ಈ ಅಭಿ ಪ್ರಾಯವು ಹೇಳಲ್ಪಟ್ಟಿತು. ಎಲ್ಲಿ ಎಂದರೆ "ಸರ್ವಸ್ಯಚಾಹಂ ಹೃದಿಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನ ಮಪೋಹನಂಚ" ಎಂಬಲ್ಲಿಯೂ (ಗೀ. ೧೫. ೧೫) ಮತ್ತು ಮತಸ್ಸರ್ವಂ ಪ್ರವ ರ್ತತೇ" (ಗೀ. ೧೦. ೮) ಎಂಬಲ್ಲೂ. ಇವುಗಳ ಅರ್ಥಕ್ಕೆ ಆ ಶ್ಲೋಕಗಳನ್ನು ನೋಡಿ. ಇದಕ್ಕೆ ಶ್ರುತಿ ಪ್ರಮಾಣವನ್ನು ಉದಾಹರಿಸುತ್ತಾರೆ – ಯ ಆತ್ಮನಿ ತಿಷ್ಠ ಎಂಬುದಾಗಿ. ಇತ್ಯಾದಿ ಕಾಶ್ರುತಿಃ ಎಂದು ಹೇಳಿರುವದರಿಂದ ಇತರ ಅನೇಕ ಅಂತರ್ಯಾಮಿತ್ವವನ್ನು ಬೋಧಿಸುವ ಶ್ರುತಿಗಳು ಆದಿಪದದಿಂದ ಸೂಚಿಸಲ್ಪಟ್ಟವು. ಅವುಗಳಲ್ಲಿ "ಏಷಸರ್ವಭೂತಾನ್ತರಾತ್ಮಾz ಪಹತಪಾಪ್ಮಾ ದಿವ್ಯೋದೇವ ಏಕೋನಾರಾಯಣಃ ಎಂಬ ಸುಬಾಲೋಪನಿಷದ್ವಾಕ್ಯವನ್ನು ಉದಾಹರಿಸ ಬಹುದು. ಇಂತಹ ಅಂತರ್ಯಾಮಿತ್ವವನ್ನು ಬೋಧಿಸುವದಕ್ಕಾಗಿಯೇ "ಸರ್ವ ನಿಯಮನ ಶೀಲಃ ವಾಸುದೇವಃ" ಎಂಬ, "ಸರ್ವತ್ರಾಸೌ ಸಮಸ್ತಂಚ ವಸತ್ಯತ್ರೇ ತಿವೈಯತಃ। ತತಸ್ಸ ವಾಸುದೇವೇ ೀತಿ ವಿದ್ವದ್ಭಿಃ ಪರಿಪಠ್ಯತೇ" (ವಿ ಪು ೧. ೨ ೧೨) ಎಂಬ, ಮತ್ತು "ವಾಸನಾದ್ವಾಸುದೇವಸ್ಯ ವಾಸಿತಂತೇ ಜಗತ್ರಯಮ್। ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತುತೇ" ಎಂಬ "ಸರ್ವಭೂತನಿ ವಾಸಶ್ಚ ವಾಸುದೇವ ಸ್ತತಃ ಸ್ಮೃತಃ" (ಭಾರ. ಮೋ. ೧೬೬) ಎಂಬ ಪ್ರಮಾಣಗಳಿಂದ ಸರ್ವಭೂತಗಳಿಗೆಲ್ಲಾ ಅಂತರಾತ್ಮಾವಾದುದರಿಂದ ವಾಸುದೇವನೆಂದು ಹೇಳಿಸಿ ಕೊಳ್ಳುವದರಿಂದ ಭಾಷ್ಯದಲ್ಲಿ ಶ್ಲೇಷೆಯನ್ನಿಟ್ಟು ವಸುದೇವ ಪುತ್ರ ನಾದ ತನಗೂ ಅನ್ವಯಿಸುವ ಹಾಗೆ ವಾಸುದೇವಃ ಎಂಬ ಪ್ರಯೋಗವು. ಹೀಗೆ ಸರ್ವಾಂತ ರ್ಯಾಮಿ ಯಾಗಿರುವವನು ಚತರ್ಮುಖನಾಗಲಿ, ರುದ್ರನಾಗಲಿ, ಇಂದ್ರನಾಗಲಿ ಅಲ್ಲವು. ನಾರಾ ಯಣನೆಂದೇ ಸುಬಾಲೋಪನಿಷತ್ತು ಹೇಳಿರುತ್ತದೆ.

ಇಲ್ಲಿ ಯನ್ತ್ರಾರೂಢಾನಿ ಎಂಬುದರ ವ್ಯಾಖ್ಯಾನದಲ್ಲಿ ಯನ್ತ್ರವು ಸ್ವೇನೈವ ನಿರ್ಮಿತಂ ಎಂದು ಹೇಳಿದುದರ ಅಭಿಪ್ರಾಯವೇನೆಂದರೆ – ಈ ಪ್ರಾಣಿಗಳ ದೇಹನಿರ್ಮಾಣದಲ್ಲಿ ಕೆಲವು ಪ್ರಾಣಿ ಗಳನ್ನು ಪಶು ಪಕ್ಷಿ ಮೃಗಗಳನ್ನಾಗಿಯೂ, ಇನ್ನು ಕೆಲವನ್ನು ದೇವ ಮನುಷ್ಯರನ್ನಾಗಿಯೂ, ಮನುಷ್ಯರಲ್ಲೇ ಕೆಲವರನ್ನು ಸರ್ವ ಸಂಪತ್ಸಮೃದ್ಧಿಯುಳ್ಳವರಾಗಿಯೂ ಇನ್ನೂ ಕೆಲವರನ್ನು ದರಿದ್ರ ರನ್ನಾಗಿಯೂ, ಕೆಲವರನ್ನು ಆರೋಗ್ಯ ಭಾಗ್ಯವನ್ನುಳ್ಳವರನ್ನಾಗಿಯೂ ಇನ್ನು ಕೆಲವರನ್ನು ರೋಗ ಗಳಿಂದ ನರಳ ವರನ್ನಾಗಿಯೂ ಹೀಗೆ ವಿಷಮ ಸೃಷ್ಟಿಗೆ ತಾನು ಕಾರಣನಲ್ಲವು, ಇದರಿಂದ ತನ ಗೇನೂ ವೈಷಮ್ಯಾದಿಗಳಿಲ್ಲವು ಎಂದು ಹಿಂದೆ ಹೇಳಿರುವದನ್ನು ಜ್ಞಾಪಿಸುವದಕ್ಕಾಗಿ ಯನ್ತ್ರಂ ಸ್ವೇನೈವ ನಿರ್ಮಿತಂ ಎಂದು ವ್ಯಾಖ್ಯಾನ ಮಾಡಲ್ಪಟ್ಟಿತು. ಹಾಗೆಯೇ ಕ್ಷೇತ್ರಜ್ಞನ ಪ್ರವೃತ್ತಿಗೆ ಕಾರಣಭೂತವಾದ ಮಾಯಯಾ ಶಬ್ದವ್ಯಾಖ್ಯಾನದಲ್ಲೂ ಸ್ವಕೀಯಯಾ ಸತ್ವಾದಿಗುಣ ಮಯ್ಯಾ ಮಾಯಯಾ ಎಂಬ ಪ್ರಯೋಗವಿರುತ್ತದೆ. ದೇಹ ಉಂಟಾಗುವದೂ, ಅದರ ಸ್ವಭಾವ ಉಂಟಾಗುವದೂ ತನ್ಮೂಲಕ ಪ್ರವೃತ್ತಿಗಳುಂಟಾಗುವದೂ ಎಲ್ಲವೂ ಕ್ಷೇತ್ರಜ್ಞನ ಪೂರ್ವಕರ್ಮಾ ಯತ್ತವಾದುವೆಂಬ ಭಾವವು.

**ಭ್ರಾಮಯನ್** ಎಂಬ ಪದ ಸ್ವಾರಸ್ಯದಿಂದ ಪ್ರಾರಬ್ಧಕರ್ಮಾನುಗುಣವಾಗಿ ಅನುಭವವು ಬೇಡವೆಂದು ಸಙ್ಕಲ್ಪಿಸಿದರೂ, ಅದು ಸಾಗದೆ, ಸರ್ವೇಶ್ವರನು ಆ ಕರ್ಮಾನುಗುಣವಾಗಿಯೇ ಭ್ರಮೆಯನ್ನುಂಟುಮಾಡಿ, **ವಿಧಿವಿಹಿತಂ ಬುದ್ಧಿರನುಸರತಿ** ಎಂಬಲ್ಲಿ ಹೇಳಿರುವಹಾಗೆ ಪ್ರವೃತ್ತಿ ನಿವೃತ್ತಿಗಳನ್ನು ನಡೆಸುವನು. **"ವಿಧಿರ್ನೂನ ಮಸಂಹಾರ್ಯಃ ಪ್ರಾಣಿನಾಂ ಪ್ಲವಗೋತ್ತಮ। ಸೌಮಿತ್ರಿಂ ಮಾಂಚ ರಾಮಂಚ ವ್ಯಸನೈಃ ಪಶ್ಯಮೋಹಿತಾನ್"** ಎಂಬ ಆಂಜನೇಯನನ್ನು ಕುರಿತ ಸೀತಾವಾಕ್ಯವು ಅನುಸಂಧೇಯವು. ಇಲ್ಲಿ **ವಿಧಿ** ಶಬ್ದವು ಪ್ರಾರಬ್ಧ ಕರ್ಮಾನುಭವವನ್ನು ಬೋಧಿಸುತ್ತದೆ.

ಮೂಲದಲ್ಲಿ **ಹೃದ್ದೇಶೇ ತಿಷ್ಠತಿ ಭ್ರಾಮಯನ್ ಸರ್ವಭೂತಾನಿ** ಎಂದಿರುವದರಿಂದ ಎಂದಿಗೂ ಸರ್ವೇಶ್ವರನು ಉದಾಸೀನನಾಗಿ ಇರುವದಿಲ್ಲವು. ಹಿಂದೆ **"ವರ್ತ ಏವಚ ಕರ್ಮಣಿ"** (ಗೀ. ೩–೨೨) ಎಂಬಲ್ಲಿ ಹೇಳಿರುವಹಾಗೆ, ಪ್ರತಿಯೊಬ್ಬ ಕ್ಷೇತ್ರಜ್ಞನ ಕರ್ಮಾನುಸಾರ ಪ್ರೇರಣೆಯನ್ನು ಮಾಡುವ ಸರ್ವಪ್ರೇರಿತಾ ಎಂದು ಹೇಳಿಕೊಂಡಿರುತ್ತಾರೆ. ಇದಲ್ಲದೆ ಇತರಗಳಾದ **ಲೋಕ ವ್ಯಾಪಾರಗಳುಂಟು.** ಆದುದರಿಂದಲೇ ಚೇತನನ ಹೃದ್ದೇಶವೆಂತಾದ್ದೆಂದರೆ **ಸಕಲ ಪ್ರವೃತ್ತಿ ನಿವೃತ್ತಿ ಮೂಲಜ್ಞಾನೋದಯ ಪ್ರದೇಶ** ವೆಂದು ಭಾಷ್ಯವನ್ನು ಬರೆದಿರುತ್ತಾರೆ. **ಹೇಗೆ ಪ್ರೇರಣೆಯು ?** ಯಾವ ಸಲಕರಣೆಯ ಮೂಲಕವಾಗಿ ? ಎಂದು ಪ್ರಶ್ನಿಸಿಕೊಂಡು, ಅದಕ್ಕೆ ಉತ್ತರವನ್ನು **ಮಾಯಯಾ** ಎಂದು ಹೇಳಿ, ಆ **ಮಾಯಾ** ಶಬ್ದವಾದರೋ **ಮಾಯಾಂತು ಪ್ರಕೃತಿಂ ವಿದ್ಧಿ ಮಾಯಿನಂತು** ಮಹೇಶ್ವರಮ್ ಎಂಬ ಶ್ರುತ್ಯನುಸಾರ ಪ್ರಕೃತಿಯಾದ ಕ್ಷೇತ್ರಜ್ಞ ಶರೀರವನ್ನು ಬೋಧಿಸುವದರಿಂದ, ಆ ಶರೀರವೇ ಒಂದು ರಥರೂಪ ಯನ್ತ್ರವೆಂತೇ **ಯನ್ತ್ರಾರೂಢಾನಿ ಮಾಯಯಾ** ಎಂಬ ಪ್ರಯೋಗವು- **ಭ್ರಾಮಯನ್** ಎಂದು ಮೂಲದಲ್ಲಿರುವ ಶಬ್ದವು **"ಸರ್ವಾಜೀವೇ ಸರ್ವಸಂಸ್ಥೇ ಬೃಹನ್ತೇ ತಸ್ಮಿನ್ ಹಂಸೋ ಭ್ರಾಮ್ಯತೇ ಬ್ರಹ್ಮಚಕ್ರೇ," "ಪೃಥಗಾತ್ಮಾನಂ ಪ್ರೇರಿತಾರಂಚಮತ್ವಾ ಜುಷ್ಟಸ್ತತ ಸ್ತೇನಾಮೃತತ್ವ ಮೇತಿ"** (ಶ್ವೇ. ೧–೬) ಎಂಬುದನ್ನು ಜ್ಞಾಪಿಸುತ್ತದೆ. ಈ ಶ್ರುತ್ಯರ್ಥದ ಉಪಪಾದನೆಯೇ ಈ ಶ್ಲೋಕವೂ ಮತ್ತು ಮುಂದಿನ ಶ್ಲೋಕವೂ. **ಸರ್ವಂ ಆಜೀವೇ** - ಜೀವನಕ್ಕೆ ಹೇತುಭೂತವಾದ, **ಸರ್ವಸಂಸ್ಥೇ**-ಸರ್ವ ಲಯಕ್ಕೂ ಆಧಾರಭೂತನಾದ, ಇಲ್ಲಿ ಲಯವನ್ನು ಹೇಳಿದುದು ಸರ್ವಲೋಕ ಸೃಷ್ಟಿ ಸ್ಥಿತಿಗಳಿಗೂ, ಸರ್ವಚೇತನ ಸತ್ತಾ ಸ್ಥಿತಿ ನಿಯಮನಾದಿಗಳಿಗೂ ಕಾರಣಭೂತನಾದ ಎಂಬರ್ಥವು; **ಬೃಹನ್ತೇ** - ಬೃಹತ್ತಾದ, **ತಸ್ಮಿನ್ ಬ್ರಹ್ಮಚಕ್ರೇ** - ಆ ಪರಬ್ರಹ್ಮವೆಂಬ ಚಕ್ರದಲ್ಲಿ ಸೇರಿಕೊಂಡು. **ಹಂಸಃ** - ಹನ್ತಿ ಗಚ್ಛತಿ [ಎಂಬ ವ್ಯುತ್ಪತ್ತ್ಯನುಸಾರ ಸಂಸಾರವೆಂಬ ಕಾನ್ತಾರದಲ್ಲಿ ಗಮನ ಶೀಲನಾದ ಜೀವನು, **ಭ್ರಮತಿ** - ಸುತ್ತುವನು, ಕರ್ಮಾನುಸಾರವಾಗಿ ಎಂಬ ಭಾವವು; ಹೀಗಿರುವಾಗ ಯಾವುದೋ ಒಂದು ಸುಕೃತದ ಮೂಲಕ **ಪೃಥಗಾತ್ಮಾನಂ ಪ್ರೇರಿತಾರಂಚ ಮತ್ವಾ** - ಜೀವಾತ್ಮ ಪರಮಾತ್ಮ ಸ್ವರೂಪಗಳು ಬೇರೆ ಬೇರೆ ಎಂದು ತಿಳಿದವನಾಗಿ, ತಾನು ನಿಯಾಮ್ಯನು, ತನಗೆ ಪ್ರೇರಕನು ಸರ್ವೇಶ್ವರನು, ತಾನು ದಾಸನು ಶ್ರೇಷ್ಠನು ಸರ್ವೇಶ್ವರನು, ಸ್ವಾಮಿಯು ಶೇಷಿಯು ತಾನು ಶೇಷನು, ತಾನು ರಕ್ಷ್ಯನು ಅತನು ರಕ್ಷಕನು ಹೀಗೆ ಬೇರೆಬೇರೆ ಎಂದು ತಿಳಿದವನಾಗಿ ಅತನನ್ನು ಉಪಾಸಿಸಿದರೆ ಅಥವಾ ಶರಣು ಹೊಂದಿದರೆ ಎಂಬ ಭಾವವು. **ತತಃ** - ಆ **ಕಾರಣದಿಂದ, ತೇನಜುಷ್ಟಃ** - ಆ ಪರಮಾತ್ಮನಿಂದ ಸೇರಿದವನಾಗಿ ಎಂದರೆ ಅತನ ಸಾಯುಜ್ಯವನ್ನು ಹೊಂದಿದವನಾಗಿ, **ಅಮೃತತ್ವಮೇತಿ** - **ಶಾಶ್ವತಪದವನ್ನು ಹೊಂದುವನು.** ಈ ಯನ್ತ್ರವು ವಿಚಿತ್ರವಾದುದು ; ಪೂರ್ವಕರ್ಮಗಳಿಗನುಸಾರವಾಗಿ ಅನುಭವವನ್ನು ರಕ್ಷೆ ಶಿಕ್ಷೆಗಳನ್ನುಂಟುಮಾಡುವಂತಾದ್ದು. ಸುಖದುಃಖಾನುಭವಗಳಿಗಾಗಿ

ಈ ದೇಹರೂಪ ಯನ್ತ್ರವು. ತನ್ಮೂಲಕವಾಗಿ ಶಾಸ್ತ್ರಬೋಧವನ್ನು ಗ್ರಹಿಸಿ ಆಚಾರ್ಯರ ಮೂಲಕ ಜ್ಞಾನವನ್ನು ಸಂಪಾದಿಸಿ ಉಪಾಯಾನುಷ್ಠಾನವನ್ನು ಆಚರಿಸಿ, ಬಂಧದಿಂದ ಬಿಡಿಸಿಕೊಳ್ಳುವ ಹಾಗೆ ರಚಿಸಲ್ಪಟ್ಟ ಧರ್ಮಕ್ಷೇತ್ರವು. ಇಂತಹ **ದೇಹಸಂಪತ್ತಿಃ ವಿಚಿತ್ರಾ**—ಎಂದು ಮಹರ್ಷಿಯಿಂದ **"ವಿಚಿತ್ರಾದೇಹಸಂಪತ್ತಿಃ ಈಶ್ವರಾಯ ನಿವೇದಿತುಮ್"** ಈಶ್ವರನಿಂದ ಕೊಡಲ್ಪಟ್ಟ ದೇಹವು ; ಅದರೊಂದಿಗೆ ಅದರಲ್ಲಿರುವ ತಾನೂ ಈಶ್ವರನಿಗೆ ಸಮರ್ಪಿಸಿಕೊಳ್ಳತಕ್ಕದ್ದು; ಎಂದರೆ ಆತ್ಮನಿಕ್ಷೇಪ ರೂಪ ಶರಣಾಗತಿಯನ್ನು ಅನುಷ್ಠಿಸತಕ್ಕದ್ದು;. ಇಲ್ಲಿ **ನಿವೇದಿತುಂ** ಎಂಬ ಶಬ್ದವು **"ನಿವೇದಯತ ಮಾಂ ಕ್ಷಿಪ್ರಂ ವಿಭೀಷಣ ಮುಪಸ್ಥಿತಂ"** (ರಾ. ಯುದ್ಧ. ೧೭-೧೫) ಎಂಬಲ್ಲಿ ಹೇಳಿರುವ ಹಾಗೆ ಶರಣಾಗತಿ ಪರವು. ಈ ಮಾನುಷ ದೇಹವು ದುರ್ಲಭವು; ಬಹು ಸುಕೃತ ವಿಶೇಷದಿಂದ ಪ್ರಾಪ್ತವಾದುದು; ಈಗಲೇ ತನಗೆ ಪರಮ ಹಿತವು ಯಾವುದೆಂದು ತಿಳಿದು ಸ್ವಾಮಿಯನ್ನು ಆಶ್ರಯಿಸತಕ್ಕದ್ದಾಗಿರುತ್ತದೆ. ಅದಕ್ಕಾಗಿ ಈ ದೇಹದೊಂದಿಗಿರುವ ಆತ್ಮಾವನ್ನು ಸ್ವಾಮಿಯ ಪಾದದಲ್ಲಿ ಸಮರ್ಪಿಸಿ ಬಿಟ್ಟರೆ, ಈ ಚೇತನನಿಗೆ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಯು ಎರಡೂ ಲಭಿಸುತ್ತದೆಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ. ಪ್ರಾರಬ್ಧಕರ್ಮದಲ್ಲಿ ಸುಕೃತ ಫಲಾನುಭವವೂ ದುಷ್ಕೃತ ಫಲಾನುಭವಗಳೆರಡೂ ಇರುತ್ತವೆ. ಸುಕೃತಫಲಾನುಭವವು ಸುಖರೂಪವಾಗಿರುವದರಿಂದ ಕುಚೇಲರಿಗೆ ಪ್ರಾಪ್ತವಾದ ಹಾಗೆ ಉಂಟಾದರೆ ಇಷ್ಟವೇ. ಆದರೆ ಮೋಕ್ಷಾರ್ಥಿಯು ಲಿಪ್ತನಾಗಿರಕೂಡದು. ದುಷ್ಕೃತಫಲಾನುಭವವು ದುಃಖರೂಪವಾಗಿ ಅಹಿತವಾದುದು. ಇದೂ ಕಳೆಯುತ್ತೆಯೋ ಇಲ್ಲವೇ, ಅನುಭವಿಸಲೇ ಬೇಕೇ? ಎಂಬ ಚರ್ಚೆಯಲ್ಲಿ, ಪ್ರಾರಬ್ಧಾಂಶವೂ ಕೂಡ ತೊಲಗುತ್ತದೆ; ಯಾವಾಗ ? ಎಂದರೆ ಈತನು ಸರ್ವಪ್ರವೃತ್ತಿಯಲ್ಲೂ ಆತನನ್ನು ಆಶ್ರಯಿಸಿ ದುಃಖಗಳು ಬೇಡವೆಂದು ಪ್ರಾರ್ಥಿಸಿದರೆ ಅವೂಕೂಡ ತೊಲಗುತ್ತವೆ ಎಂದು ಮುಂದೆ ಹೇಳುತ್ತಾರೆ ಈತನು ಮೋಕ್ಷಕ್ಕಾಗಿ ಮಾಡುವ ಭರನ್ಯಾಸ ಕಾಲದಲ್ಲೇ ಪ್ರಾರಬ್ಧಕರ್ಮನಾಶವಾಗತಕ್ಕದ್ದೆಂದು ಪ್ರಾರ್ಥಿಸಿ ಶರಣಾಗತಿಯನ್ನನುಷ್ಠಿಸಬಹುದು. ಅಥವಾ ಅದಕ್ಕಾಗಿ ಪುನಶ್ಶರಣಾಗತಿಯನ್ನು ಅನುಷ್ಠಿಸಬಹುದೆಂಬ ಶಾಸ್ತ್ರ ಪಙ್ಕ್ತಿಗಳಿವೆ. **"ಸಾಧ್ಯಭಕ್ತಿಸ್ತು ಸಾಹನ್ತ್ರೀ ಪ್ರಾರಬ್ಧಸ್ಯಾಪಿ ಭೂಯಸೀ"** ಎಂದು ಹೇಳಲ್ಪಟ್ಟಿರುತ್ತದೆ. ಹಾಗಿಲ್ಲದಿದ್ದರೆ ಆತನು ಕೃಪಾಜಲನಿಧಿಯಲ್ಲವು.

ಈ ದೇಹವು ಹಿಂದೆ ಮಾಡಿದ ಪ್ರಾರಬ್ಧಾನುಭವಕ್ಕಾಗಿಯಾದುದರಿಂದ, ಅದಕ್ಕನುಗುಣವಾಗಿ ಈಶ್ವರನಾದ ತಾನು ಪ್ರವೃತ್ತಿಯನ್ನುಂಟು ಮಾಡುವೆನು ಎಂದು **"ಪರಾತ್ತು ತಚ್ಛ್ರುತೇಃ"** ಎಂಬ ಸೂತ್ರದಲ್ಲಿ ಹೇಳಲ್ಪಟ್ಟ (೨-೩.೪೦) ಅಭಿಪ್ರಾಯವು ಉಪಪಾದಿಸಲ್ಪಟ್ಟಿತು.

**ಭಾಷ್ಯಾವತಾರಿಕೆಯ ಅರ್ಥವು**—ಹಿಂದಿನ ಶ್ಲೋಕದಲ್ಲಿ ಕ್ಷೇತ್ರಜ್ಞನ ಪೂರ್ವಕರ್ಮಾನುಗುಣವಾಗಿ ದೇಹಪ್ರಾಪ್ತಿಯನ್ನೂ, ಸತ್ತ್ವಾದಿಗುಣ ವೃದ್ಧಿಯನ್ನೂ ಉಂಟುಮಾಡಿ, ಆತನಿಗೆ ಅಂತರಾತ್ಮಾವಾಗಿದ್ದುಕೊಂಡು, ಆತನ ಸ್ವಭಾವಾನುಗುಣವಾಗಿ ಪ್ರೇರಿಸಿ ಪ್ರವೃತ್ತಿಯನ್ನುಂಟುಮಾಡುವೆನೆಂದು ಉಪದೇಶಿಸಿದರು. ಹೀಗೆಯೇ ನಡೆಯುತ್ತಾ ಬಂದರೆ ಪ್ರಾರಬ್ಧವು ಕಳೆಯದೆ ಪುನಃ ಪುನಃ ಪ್ರಾರಬ್ಧಾನುಭವಕ್ಕಾಗಿ ಜನ್ಮಪ್ರಾಪ್ತಿಯೇ ಉಂಟಾಗಿ ಮೋಕ್ಷಪ್ರಾಪ್ತಿಯು ಯಾರಿಗೂ ಉಂಟಾಗಲು ಸಾಧ್ಯವೇ ಇಲ್ಲವಾಗುತ್ತದೆ. ಆದುದರಿಂದ ಅನಿಷ್ಟವಾದ ಪ್ರಾರಬ್ಧನಿವೃತ್ತಿಗೂ, ಈ ದೇಹರೂಪಾವಸ್ಥೆಯಿಂದ ತಪ್ಪಿಸಿಕೊಂಡು ಪುನಃ ಜನ್ಮವಿಲ್ಲದಹಾಗೆ ಮಾಡಿಕೊಳ್ಳುವದಕ್ಕೂ, ಏನಾದರೂ ಮಾರ್ಗ ಉಂಟೋ ಎಂಬ ಸಂದೇಹದಲ್ಲಿ ಬಹು ಸುಲಭೋಪಾಯವೇ ಉಂಟು. ಆದರಿಂದ ಅಹಿತ ಪ್ರಾರಬ್ಧಾಂಶವನ್ನೂ ಕಳೆದುಕೊಳ್ಳಬಹುದೆಂದೂ, ಆದರಿಂದ ಸರ್ವ ಪಾಪರೂಪವಾದ ಅನಿಷ್ಟದ ನಿವೃತ್ತಿಯೂ, ನಿರತಿಶಯ ಇಷ್ಟಪ್ರಾಪ್ತಿರೂಪ ಮೋಕ್ಷವೂ ಉಂಟೆಂದು ಹೇಳುತ್ತಾರೆ. **ಏತನ್ಮಾಯಾ ನಿವೃತ್ತಿ ಹೇತುಮಾಹ**—ಈ ಯನ್ತ್ರರೂಪವಾದ ದೇಹವು ತೊಲಗುವದಕ್ಕೆ ಮಾರ್ಗವನ್ನು ಉಪದೇಶಿಸುತ್ತಾರೆ.—ಇಲ್ಲಿ **ಮಾಯಾ** ಶಬ್ದವು ಪ್ರಕೃತಿಯನ್ನು ಬೋಧಿಸುವದ

**ಭಾ. ಅವ. ಏತನ್ಮಾಯಾ ನಿವೃತ್ತಿ ಹೇತುಮಾಹ—**

---

ರಿಂದ ದೇಹವನ್ನು ಬೋಧಿಸುತ್ತದೆ. "**ಮಾಯಾಂತು ಪ್ರಕೃತಿಂ ವಿದ್ಧಿ ಮಾಯಿನಂತು ಮಹೇಶ್ವರಮ್**" ಎಂಬ ಶ್ರುತ್ಯನುಸಾರ **ಮಾಯಾ** ಎಂದರೆ ಪ್ರಕೃತಿಯು. **ಮಾಯಾ ನಿವೃತ್ತಿ** ಎಂದರೆ ದೇಹನಿವೃತ್ತಿಯು. ಸರ್ವೇಶ್ವರನನ್ನು ಆಶ್ರಯಿಸಿ, ಆತನ ಅನುಗ್ರಹವನ್ನು ಪಡೆದು ನಮ್ಮ ವಶಮಾಡಿಕೊಂಡ ಹೊರ್ತು, ಈ ಹೇಯವಾದ ಅನುಭವಗಳಿಗೂ ಬಂಧಗಳಿಗೂ ಮೂಲವಾದ ಪ್ರಕೃತಿಯು ತೊಲಗದು. ಆತನನ್ನು ವಶಮಾಡಿಕೊಳ್ಳುವ ಮಾರ್ಗವು "**ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ**" ಎಂದು ಶ್ರೀ ಯತಿವರ್ಯರು ಉದ್ಘೋಷಿಸಿ ಹೇಳಿರುವ ಹಾಗೆ ನಡೆಸಿದರೆ, ಸರ್ವ ದುರವಸ್ಥೆಗಳನ್ನೂ ಅನುಭವಿಸದೆ, ದಿವ್ಯ ವೈಕುಂಠವನ್ನು ಹೊಂದುವನು ಎಂದು ತಿಳಿಸುತ್ತಾರೆ. "**ತಾವದಾರ್ತಿ ಸ್ತಥಾವಾಂಛಾ ತಾವನ್ಮೋಹ ಸ್ತಥಾಽಸುಖಮ್ । ಯಾವನ್ನಯಾತಿ ಶರಣಂ ತ್ವಾ ಮಶೇಷಾಘನಾಶನಮ್**" ಆರ್ತಿ, ವಾಂಛಾ, ಮೋಹ, ಅಸುಖ ಇವೆಲ್ಲವೂ ಸರ್ವೇಶ್ವರನಲ್ಲಿ ಶರಣಾಗತಿಯನ್ನು ಮಾಡುವ ತನಕವೇ. ಅನಂತರ ಈ ದುರವಸ್ಥೆಗಳು ಯಾವುವೂ ಇರುವದಿಲ್ಲವೆಂಬುದು ಶ್ಲೋಕಾರ್ಥವು. ಆದುದರಿಂದ ಪ್ರಾರಬ್ಧವೂ ತೊಲಗುವದಕ್ಕೆ ಉಪಾಯವುಂಟೋ ? ಎಂದರೆ ಏತನ್ಮಾಯಾ ನಿವೃತ್ತಿಯುಂಟೆಂದು ಹೇಳು. ತಾ__ರೆ ಆಗಲಿ ಸ್ವಾಮಿ ದೇಶಿಕವರ್ಯರು ಅಪರಾಧಪರಿಹಾರಾಧಿಕಾರದಲ್ಲಿ ಪ್ರಾರಬ್ಧೇತರ **ಪೂರ್ವ ಪಾಪ ಮಖಿಲಂ** ಎಂಬಲ್ಲಿ ಪ್ರಾರಬ್ಧೇತರವೆಲ್ಲಾ ನ್ಯಾಸದಿಂದ ನಾಶವಾಗುತ್ತದೆ. ಪ್ರಾರಬ್ಧವು ಕಳೆಯುವದಿಲ್ಲವೆಂದು ಹೇಗೆ ಹೇಳಿದರು ? ಎಂದಾಕ್ಷೇಪ ತಂದರೆ, ಪ್ರಾರಬ್ಧ ಮೂಲಕ ಬಂದುದ್ದು ಈ ಶರೀರವೂ ಆದರ ಪ್ರವೃತ್ತಿಯೂ; ಶರೀರವಿರುವ ತನಕ ಆ ಅನುಭವ ತಪ್ಪಿದ್ದಲ್ಲವೆಂಬ ಭಾವವು; ಈ ಅನುಭವವು ಸುಖ ಮತ್ತು ದುಃಖರೂಪವಾದುದು. ಇಂತಹ ದುಃಖವಿಲ್ಲದಹಾಗೆ ಮಾಡಿಕೊಳ್ಳಲು ಸಾಧ್ಯವೋ ? ಎಂದರೆ ಸಾಧ್ಯವೆಂದು ಈ ಮುಂದಿನ ಶ್ಲೋಕವು ಹೇಳುತ್ತದೆಂಬುದು ಶ್ರೀ ಯತಿವರ್ಯರ ಮತ್ತು ಶ್ರೀ ನಿಗಮಾನ್ತ ದೇಶಿಕರವರ ಅಭಿಪ್ರಾಯವು.

**ಮೂಲಕ್ಕೆ ಅರ್ಥವು**—ಬಂಧಕವಾದ ಪ್ರಕೃತಿಯಿಂದ ಬಿಡುಗಡೆಯನ್ನು ಹೊಂದಲು ಸುಲಭೋಪಾಯವೇನೆಂಬುದನ್ನು ಉಪದೇಶಿಸುತ್ತಾರೆ. ಇದನ್ನೇನೂ ಹೊಸದಾಗಿ ಹೇಳುವದಿಲ್ಲವು. ಹಿಂದೆ "ಮಾಮೇವ **ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿ ತೇ**" (ಗೀ ೭–೧೪) ಎಂಬಲ್ಲಿ ಹೇಳಿದುದನ್ನೇ ಇಲ್ಲಿ ಜ್ಞಾಪಕಕ್ಕೆ ತರುತ್ತಾರೆ ಈ ಪ್ರಕೃತಿ ಸಂಬಂಧದಿಂದ ತಪ್ಪಿಸಿಕೊಳ್ಳುವದು ಕಷ್ಟವೆಂದು "ದೈವೀಹ್ಯೇಷಾ **ಗುಣಮಯೀ** ಮಮ **ಮಾಯಾ ದುರತ್ಯಯಾ**" ಎಂದು ಪೂರ್ವಾರ್ಧದಿಂದ ಹೇಳಿ, ಮೇಲಿನ ಉತ್ತರಾರ್ಧದಿಂದ ಆತನಲ್ಲಿ ಮಾಡುವ ಶರಣಾಗತಿಯೇ ಸುಲಭೋಪಾಯವೆಂದು ಹಿಂದೆ ಹೇಳಿದುದನ್ನೇ ಈಗ ನಿಗಮನದಲ್ಲೂ ಹೇಳುತ್ತಾರೆ. ಆದರೆ ಅನಿಷ್ಟ ನಿವೃತ್ತಿಯಿಲ್ಲದೆ ಇಷ್ಟಪ್ರಾಪ್ತಿಯಾದ ಮೋಕ್ಷಪ್ರಾಪ್ತಿಯಿಲ್ಲವು. ಅದಕ್ಕೆ ಪ್ರಾರಬ್ಧವೂ ಕಳೆಯಬೇಕು. ಅನಿಷ್ಟ ಪ್ರಾರಬ್ಧಾಂಶವೂ ಕಳೆಯುತ್ತದೆಯೇ? ಇಲ್ಲವೇ ಅನುಭವಿಸಲೇ ಬೇಕೇ? ಎಂದು ಅರ್ಜುನನು ಸಂಶಯಾವಿಷ್ಟನಾಗಿದ್ದಾನೆಂದು ಸರ್ವಜ್ಞನು ತಿಳಿದು, ಶರಣಾಗತಿಯಿಂದ ಅದೂ ನಿವೃತ್ತಿಯಾಗುತ್ತದೆಂದು ತಿಳಿಸುತ್ತಾರೆ. ಪ್ರಾರಬ್ಧವು ಅಭ್ಯುಪಗತ, ಅನಭ್ಯುಪಗತವೆಂದು ಎರಡು ವಿಧವು. ಈಗ ಈ ಜನ್ಮದಲ್ಲಿ ಅನುಭವಿಸಬೇಕಾದುದು ಅಭ್ಯುಪಗತವು. ಅನಭ್ಯುಪಗತ ಮುಂದಿನ ಜನ್ಮದಲ್ಲಿ ಅನುಭವಿಸಬೇಕಾದುದು. ಶರಣಾಗತಿಯಿಂದ ಎರಡೂ ಕಳೆಯುತ್ತವೆ ಎಂದು ಹೇಳುತ್ತಾರೆ. ಇದನ್ನು ಈ ಶ್ಲೋಕದಲ್ಲಿರುವ ಸರ್ವಭಾವೇನ ಎಂಬುದರಿಂದ ಗ್ರಹಿಸಬಹುದು ಆದರೆ "**ವಿಧಿವಿಹಿತಂ ಬುದ್ಧಿರನುಸರತಿ**", "**ಅವಶ್ಯಮನುಭೋ**

**ಮೂ. ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ ೬೨ ॥**

---

**ಕ್ತವ್ಯಮೇವ ಕೃತಂ ಕರ್ಮ ಶುಭಾಶುಭಮ್" "ನಾಭುಕ್ತಂ ಕ್ಷೀಯತೇ ಕರ್ಮ" "ಪ್ರಾಯಶ್ಚಿತ್ತೈರಪೈ ಮುಚ್ಯತೇ"** ಇತ್ಯಾದಿ ವಚನಗಳು ಅಪ್ರಪನ್ನನನ್ನು ಕುರಿತವೆಂದು ತಿಳಿಯತಕ್ಕದ್ದು.

**ಹೇ ಭಾರತ**-ಓ ಮಹಾ ಬ್ರಹ್ಮವಿತ್ತಾದ ಭರತರ ಕುಲದಲ್ಲಿ ಹುಟ್ಟಿದ ಅರ್ಜುನನೇ, ಭರತರು ಹೇಗೆ ಉಪಾಯಾನುಷ್ಠಾನವನ್ನು ಮಾಡಿ, ನನ್ನನ್ನು ಸೇರಿದರೋ ಆ ಮಾರ್ಗವನ್ನವ ಲಂಬಿಸುವದು ಅಂತಹ ಸತ್ಕುಲಪ್ರಸೂತನಾದ ನಿನಗೂ ಯುಕ್ತವಾದುದರಿಂದ ಓ ಭಾರತ ಎಂಬ ಸಂಬೋಧನೆಯು, **ತಮೇವ** - ನಿತ್ಯಮುಕ್ತರಿಗೂ ನಿರತಿಶಯಾನಂದವನ್ನು ಉಂಟುಮಾಡಿದ ಮತ್ತು ನಿನಗೂ ಸಹ ಸಾಧಾರಣವಾದ"ಸ್ವಕಂರೂಪ"ವಾದ ದಿವ್ಯವೈಕುಂಠದಲ್ಲಿ ದಿವ್ಯ ರೂಪವನ್ನು ಪ್ರದರ್ಶಿಸಿ, ಪುನರಾವರ್ತಿಯಿಲ್ಲದ ಶಾಶ್ವತ ಪದವನ್ನೀಯಲು ತನಗೆ ಮಾತ್ರವೇ ಶಕ್ತಿಯು ಎಂದು ಪ್ರಸಿದ್ಧಿಯನ್ನು ಹೊಂದಿರುವ ಆ ವಾಸುದೇವನಾದ ಅವನನ್ನೇ; ಮಾಮೇವ – ನನ್ನನ್ನೇ ಎಂದೂ, ಮುಂದೆ ಉತ್ತರಾರ್ಧದಲ್ಲೂ ಮತ್ಪ್ರಸಾದಾತ್ ಎಂದು ಹೇಳದೆ, **ತಮೇವ ತತ್ಪ್ರಸಾದಾತ್** ಎಂಬ ಪ್ರಯೋಗಗಳು ಹೇಗೆ? ಎಂದರೆ ಮುಕ್ತಿದಾಯಕನಾದ ಮುಕುಂದನು ಎಂಬ ಮಹತ್ತಾದ ಪ್ರಸಿದ್ಧಿಯನ್ನು ತೋರಿಸುವದಕ್ಕಾಗಿ ಪ್ರಥಮಪುರುಷದಲ್ಲಿ ಪ್ರಯೋಗವು. ಬ್ರಹ್ಮ ರುದ್ರೇಂದ್ರಾದಿ ಇತರರಿಗ್ಯಾರಿಗೂ ಆ ಶಕ್ತಿಯಿಲ್ಲವೆಂಬ ಭಾವವನ್ನು ಏವ ಎಂಬ ಅವಧಾರಣವು ಸೂಚಿಸುತ್ತದೆ. ಈ ಅಭಿಪ್ರಾಯವು ಶ್ರುತಿಯಲ್ಲೂ ಉಪಪಾದಿತವು. "**ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್ । ಯದೇಷ ಆಕಾಶೋ ಆನಂದೋ ನ ಸ್ಯಾತ್, ಏಷ ಹ್ಯೇವಾನಂದಯಾತಿ**" ಎಂದರೆ ಈ ದೇದೀಪ್ಯಮಾನನಾದ ಪರಮಪುರುಷನು ಆನಂದಮಯನಾಗದಿದ್ದರೆ ಆತನಲ್ಲದೆ ಇನ್ನು ಯಾರುತಾನೇ ಆಮುಷ್ಮಿಕಾದಿ ಸರ್ವಾನಂದವನ್ನು ಕೊಟ್ಟು ಸಲಹುವ ಶಕ್ತಿಯುಳ್ಳವರು ಇದ್ದಾರೆಂದು ತೈ. ಆನಂದ ೭ ಅನುವಾಕದಲ್ಲಿ ಹೇಳಿರುವ ಅಭಿಪ್ರಾಯವು **ತಮೇವ** ಎಂಬಲ್ಲಿರುವ ಏವ ಕಾರಾಭಿಪ್ರಾಯವನ್ನು ಸಮರ್ಥಿಸುತ್ತದೆ. **ಸರ್ವಭಾವೇನ** - ಪಾಪಗಳನ್ನೆಲ್ಲಾ ಹೋಗ ಲಾಡಿಸುವ ಪ್ರಾಪ್ಯ ಪ್ರಾಪಕ ಸರ್ವಭಾವದಿಂದಲೂ ಅಥವಾ ಹಿಂದೆ ೯–೧೮ ರಲ್ಲಿ "**ಗತಿರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಶ್ಶರಣಂ ಸುಹೃತ್** ಎಂಬ "**ಭರ್ತಾ ಭ್ರಾತಾಚ ಬಂಧುಶ್ಚ ಪಿತಾ ಚ ಮಮ ರಾಘವಃ** (ರಾಮಾ. ಅಯೋಧ್ಯಾ) ಎಂಬ ಸರ್ವ ವಿಧ ಬಂಧುವು. **ಸರ್ವಹಿತ** ಪ್ರದನು, ತ್ರಾತಾ ಎಂಬ ಭಾವನೆಯಿಂದಲೂ, ಅಥವಾ ಸರ್ವ ಶಕ್ತಿಯೂ ಸರ್ವಪ್ರದಾತೃತ್ವವೂ ಇವು ಗಳಿಗೆ ಬೇಕಾದ ಪರತ್ವ, ಸೌಲಭ್ಯ ಸೌಶೀಲ್ಯ, ಔದಾರ್ಯವೇ ಮೊದಲಾದ ಮಹಾಗುಣಗಳಿಂದ ಯುಕ್ತನಾದುದರಿಂದ ತನ್ನ ಎಲ್ಲಾ ಮನೋರಥಗಳೂ ಕೈಗೂಡುತ್ತವೆ ಎಂಬ ಸರ್ವಭಾವದಿಂದಲೂ, ಆತನನ್ನು ಬಿಟ್ಟರೆ ಬೇರೆ ಗತಿ ಎಲ್ಲಿಯದು ಎಂದು ಸರ್ವಾತ್ಮನಾ ಆತನಲ್ಲೇ ಸರ್ವ ಭರವನ್ನು ಇಟ್ಟವ ನಾಗಿ ಎಂದಾಗಲಿ ಆಗಬಹುದು. ನಿನ್ನ ಸಕಲ ಮನೋರಥಾವಾಪ್ತಿಗೂ ಎಂದಾಗಲಿ ಆಗಬಹುದು. **ಶರಣಂಗಚ್ಛ** - ಸರ್ವ ಭರವನ್ನೂ ಆತನಲ್ಲಿಟ್ಟು ಸಿದ್ಧೋಪಾಯನನ್ನಾಗಿ ಭಾವಿಸಿ ಆತನ ಪಾದ ಕಮಲದಲ್ಲಿ ಶರಣಾಗತಿಯನ್ನು ಮಾಡು. **ತತ್ಪ್ರಸಾದಾತ್** ಆ ಶರಣಾಗತವತ್ಸಲನ ಅನುಗ್ರಹ ದಿಂದ,ಪಾಪಗಳಿಂದಲೂ, ಈ ಹೇಯಪ್ರಕೃತಿ ಸಂಬಂಧದಿಂದಲೂ, ಬಿಡುಗಡೆಗೆ, ಇನ್ನು ಯಾವ ಪ್ರಾಯಶ್ಚಿತ್ತವಾಗಲಿ, ಯಜ್ಞದಾನ ತಪಸ್ಸಾಗಲಿ ಅಷ್ಟು ಪ್ರಬಲವಾದ ಔಷಧವಾಗಲಿ ಇಲ್ಲವು ; ಶರಣಾಗತಿಯಿಂದ ಪ್ರೀತನಾದ ಆತನ ಅನುಗ್ರಹವೇ ಇಂತಹ ಬಿಡುಗಡೆಗೆ ಪರಮ ಭೇಷಜವು. ಸರ್ವೋತ್ಕೃಷ್ಟ ಪ್ರಾಯಶ್ಚಿತ್ತವೆಂಬ ಭಾವವು, **ಪರಾಂಶಾಂತಿಂ** - ಉತ್ಕೃಷ್ಟವಾದ ಶಾಂತಿ ಯನ್ನು, ಅಂತಹ ಶಾಂತಿ ಯಾವುದು ? ಎಂದರೆ ಈ ಹೇಯ ಪ್ರಕೃತಿಯಿಂದಲೂ ಪಾಪಗಳಿಂದಲೂ

**ಬಿಡುಗಡೆಯೇ** ಅಂತಹ ಪರಮ ಸುಖರೂಪಾವಸ್ಥೆಯನ್ನೂ, **ಶಾಶ್ವತಂಸ್ಥಾನಂ** - ಪುನರಾವೃತ್ತಿರೂಪ ಜನ್ಮ ಸಂತತಿಗಳಿಲ್ಲದೆ ಇರುವ ಶಾಶ್ವತವಾದ ದಿವ್ಯ ವೈಕುಂಠವನ್ನೂ, ನಿತ್ಯ ಮುಕ್ತರುಗಳೊಂದಿಗೆ ಸೇರಿ ಪರಮಾತ್ಮನಿಗೆ ಸಮಾನವಾದ ಭೋಗವನ್ನು ಅನುಭವಿಸುತ್ತಾ ಇರುವ ಶಾಶ್ವತಪದವನ್ನೂ, **ಪ್ರಾಪ್ಸ್ಯಸಿ** - ಹೊಂದುತ್ತೀಯೇ; ಉಪಾಸನಕ್ಕೆ ಅಙ್ಗವಾಗಿಯೂ ಪ್ರಾರಬ್ಧ ಕರ್ಮವಿನಾಶಕ್ಕಾಗಿಯೂ, ನಿನ್ನ ಸಕಲ ವಿಧಮನೋರಥಾವಾಪ್ತಿಗಾಗಿಯೂ, ಇಲ್ಲಿ ಶರಣಾಗತಿಯು ಹೇಳಲ್ಪಟ್ಟಿತು. ಶರಣಾಗತಿಯಿಲ್ಲದೇ ಮೋಕ್ಷವೇ ಇಲ್ಲವು. ಆ ಶರಣಾಗತಿಯು (೧) ಸದ್ವಾರಕವು (೨) ಅದ್ವಾರಕವು ಎಂಬದಾಗಿ ಎರಡುವಿಧವೆಂದು ಶಾಸ್ತ್ರಗಳಲ್ಲಿ ಉಪಪಾದಿತವು. ಇಲ್ಲಿ ಭಕ್ತಿಯೋಗಕ್ಕೆ ಅಙ್ಗವಾಗಿರುವದರಿಂದ ಸದ್ವಾರಕವು; ಇನ್ನೊಂದರಮೂಲಕ ಮೋಕ್ಷದಾಯಕವೆಂಬ ಭಾವವು; **ಅದ್ವಾರಕವೆಂದರೆ** ಇನ್ನೊಂದರಮೂಲಕವಲ್ಲದೆ ಸಾಕ್ಷಾತ್ತಾಗಿ ಶರಣಾಗತಿಯೇ ಮೋಕ್ಷದಾಯಕವೆಂಬರ್ಥವು. ಇದೇಇಲ್ಲಿ ಹೇಳಲ್ಪಟ್ಟದುದು. ಈ ಗ್ರಂಥದಲ್ಲೇ ಅದ್ವಾರಕವಾಗಿ, ಎಂದರೆ ಸ್ವತಂತ್ರವಾದ ಅಂಗಿಯಾಗಿಯೂ ಉಪಪಾದಿತವು. ಇದೂ, ಈ ಗೀತೆಯಲ್ಲೇ ಅನೇಕ ಕಡೆಗಳಲ್ಲಿ ಹೇಳಲ್ಪಟ್ಟಿರುತ್ತದೆ. ಮುಂದೆ ಶ್ರೀ ಕೃಷ್ಣಭಗವಾನ್ರವರು ನೀನು ನನಗೆ ತುಂಬಾ ಇಷ್ಟನು ಪ್ರಿಯನು; ಆದುದರಿಂದ ಇನ್ನೊಂದು ಸಲ ಗುಹ್ಯತಮವಾದುದನ್ನು ಹೇಳುವೆನು ಕೇಳು ಎಂದು ೧೮-೬೪ನೆಯ ಶ್ಲೋಕದಲ್ಲಿ ಹೇಳಿ ೬೫ನೆಯ ಶ್ಲೋಕದಲ್ಲಿ **ಮನ್ಮನಾಭವ** ಎಂದು **ಉಪಾಸನೆಯನ್ನೇ** ಮಾಡು ಎಂದು ಹೇಳಿ ಮುಗಿಸಿದರು. "**ಚಂಚಲಂ ಹಿ ಮನಃಕೃಷ್ಣ**" ಎಂದು ಹಿಂದಿನಿಂದಲೂ ವ್ಯಥೆಪಡುತ್ತಾ ಇದ್ದು, ಪುನಃ ೧೨ನೆಯ ಅಧ್ಯಾಯದಲ್ಲಿ ಪ್ರಥಮ ಶ್ಲೋಕದಲ್ಲಿ ಮನಸ್ಸಿನ ಐಕಾನ್ತ್ಯವೂ ಉಂಟಾಗುವದು ಕಷ್ಟವೆಂದು ಭಾವಿಸಿ, ಜಿಜ್ಞಾಸುವಾಗಿ ಉಪಾಸಿಸಲೇ ಎಂದು ೧೨ನೆಯ ಅಧ್ಯಾಯದ ೧ನೆಯ ಶ್ಲೋಕದಲ್ಲಿ ಪ್ರಶ್ನಿಸಿದ್ದಕ್ಕೆ, ಪುನಃ ಶ್ರೀ ಕೃಷ್ಣಭಗವಾನ್ರವರು "**ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ**" ಎಂದು ಉತ್ತರ ಹೇಳಿದರೂ, ಒಡಂಬಡದೆ ಪುನಃ **ತಾನು** ಉಪಾಸನೆಗೆ ಅಸಮರ್ಥನೆಂದೂ ಶೋಕಿಸಿದುದರಿಂದ "**ಸರ್ವಧರ್ಮಾನ್ ಪರಿತ್ಯಜ್ಯ**"ಎಂಬ ೬೬ನೆಯ ಶ್ಲೋಕದಲ್ಲಿ **ಮಾಶುಚಃ** - ಶೋಕಿಸಬೇಡವೆಂದು ಸಮಾಧಾನವನ್ನು ಮಾಡಿ, ಮೋಕ್ಷಸಾಧನವಾದ **ಅದ್ವಾರಕಪ್ರಪತ್ತಿ**ಯನ್ನು ಉಪದೇಶಿಸಿದರು. ಇದನ್ನು ಅನುಷ್ಠಿಸುವ ಪ್ರಕಾರವನ್ನು, ಅದಕ್ಕೆ ಬೇಕಾದ ಪರಿಕರಗಳನ್ನು ಕುರಿತು ಏನೊಂದೂ ಇಲ್ಲಿ ಹೇಳಲಿಲ್ಲವು. ಯುದ್ಧದ ಪ್ರಾರಂಭವಾದುದರಿಂದ ಅಷ್ಟೆಲ್ಲಾ ಉಪದೇಶಿಸುವ ಸಮಯವಲ್ಲವು. ಆದರೆ ಭಕ್ತಿಯೋಗವನ್ನು ಮಾತ್ರ ವಿಸ್ತಾರವಾಗಿ ಪ್ರಶಂಸಿಸಿ ಹೇಳಲು ಕಾರಣವೇನೆಂದರೆ? ಕ್ಷತ್ರಿಯನಿಗೆ ಯುದ್ಧ ಪ್ರೋತ್ಸಾಹವು ಆವಶ್ಯಕವಾಗಿ, ಆಕಾರಣದಿಂದ ಕರ್ಮಯೋಗವನ್ನೂ, ಅದರಿಂದ ಸಾಧ್ಯವಾದ ಭಕ್ತಿಯೋಗವನ್ನೂ ಮುಖ್ಯವಾಗಿ ಹೇಳಬೇಕಾಗಿ ಬಂತು. "**ಕಾರ್ಪಣ್ಯದೋಷೋಪಹತಸ್ವಭಾವಃ**" ಎಂಬ ಶ್ಲೋಕದಲ್ಲಿ **ಶಾಧಿಮಾಂ ತ್ವಾಂ** ಪ್ರಪನ್ನಮ್ ಎಂದು ಹೇಳಿ ಮಾಡಿದ ಶರಣಾಗತಿಯು ಅದ್ವಾರಕ ಪ್ರಪತ್ತಿಯು. ಇದು ಮೋಕ್ಷಾರ್ಥಕ್ಕಾಗಿ ಅರ್ಜುನನು ಮಾಡಿದುದಲ್ಲವು. ತತ್ವಜ್ಞಾನಕ್ಕಾಗಿ ಮಾಡಿದ ಶರಣಾಗತಿಯು, ಅದ್ವಾರಕ ಪ್ರವೃತ್ತಿಯು. **ಚತುರ್ವಿಧಾ ಭಜನ್ತೇ ಮಾಂ**" ಎಂಬುದರಿಂದ ಧರ್ಮಕಾಮಾರ್ಥ ಮೋಕ್ಷಗಳಿಗಾಗಿಯೂ ಹೇಗೆ ಪರಮಾತ್ಮೋಪಾಸನವು ಸದ್ವಾರಕೋಪಾಯವಾಗಿ ವಿಧಿಸಲ್ಪಟ್ಟಿರುತ್ತದೋ ಹಾಗೆಯೇ ಶರಣಾಗತಿಯೂ ಕೂಡ ಚತುರ್ವಿಧ ಪುರುಷಾರ್ಥಕ್ಕೂ ಅದ್ವಾರಕೋಪಾಯವು. ಆದುದರಿಂದ ಮೋಕ್ಷಪ್ರಾಪ್ತಿಗೆ ಎರಡು ಉಪಾಯಗಳು **ಉಪಾಸನ ಒಂದು, ಶರಣಾಗತಿಯೇ ಒಂದು**, ಆದರೆ ಉಪಾಸನಕ್ಕೆ ಅಙ್ಗವಾಗಿ ಸದ್ವಾರಕ ಶರಣಾಗತಿಯು ಇಲ್ಲಿ ವಿಧಿಸಲ್ಪಟ್ಟಿರುತ್ತದೆ. ಇದೇ ಗ್ರಂಥದಲ್ಲೇ ಹನ್ನೊಂದನೆಯ ಅಧ್ಯಾಯದಲ್ಲಿ ಅರ್ಜುನನು ಪುನಃ ಅದ್ವಾರಕ ಶರಣಾಗತಿಯನ್ನೇ ಅನುಷ್ಠಿಸಿರುತ್ತಾನೆ. ಇದು ಏತಕ್ಕೆಂದರೆ "ಓ ಕೃಷ್ಣನೇ ನಿನ್ನ ಪರತ್ವಾದಿಗಳ ಜ್ಞಾನವಿಲ್ಲದೆ ಪ್ರಮಾದದಿಂದಲೂ, ಪ್ರಣಯದಿಂದಲೂ, ಅಪ

ಹಾಸಕ್ಕಾಗಿಯೂ, ವಿಹಾರ ಶಯ್ಯಾಸನ ಭೋಜನಗಳಲ್ಲಿ ಹೇ ಕೃಷ್ಣ ಹೇ ಯಾದವ, ಹೇ ಸಖನೇ ಎಂದು, ಹೀಗೆಲ್ಲಾ ಮರ್ಯಾದೆಯನ್ನು ತೋರಿಸದೆ ಪ್ರವರ್ತಿಸಿದ ಅಪರಾಧಗಳನ್ನೆಲ್ಲಾ ಕ್ಷಮಿಸು ಎಂದು "ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ ಪ್ರಸಾದಯೇ ತ್ವಾಂ" ಎಂಬುದಾಗಿ ಹೇಳಿ ಶರಣಾಗತಿಯನ್ನು ಮಾಡಿದ್ದಾನೆ. ದಿವ್ಯ ವೈಕುಂಠದಲ್ಲಿನ ಸ್ವಾಸ್ವರೂಪವನ್ನು ತೋರಿಸು ಎಂದು ಅದೇ ಅಧ್ಯಾಯಾಂತ್ಯದಲ್ಲಿ ಶರಣಾಗತಿಯನ್ನು ಮಾಡಿ ಪ್ರಾರ್ಥಿಸಿರುತ್ತಾನೆ. ಇದೂ ಅದ್ವಾರಕವು ಹಾಗೆಯೇ ಉಪಾಸನಕ್ಕೆ ಅಶಕ್ತನಾದವನೂ ಈ ಅವ್ವಾರಕ ಶರಣಾಗತಿಯನ್ನೇ ಅನುಷ್ಠಿಸಬಹುದೆಂದು ಶ್ರುತಿ ಸ್ಮೃತಿ ಇತಿಹಾಸಗಳಲ್ಲಿ ಪ್ರಸಿದ್ಧವು. ಕಠವಲ್ಲಿಯಲ್ಲಿ ದ್ವಯ ಮನ್ತ್ರೋಚ್ಚಾರಣೆಯ ಮೂಲಕ ಅನುಷ್ಠಿಸತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಭಗವಚ್ಛಾಸ್ತ್ರದಲ್ಲೂ, ಪ್ರಶ್ನಸಂಹಿತಾದಿಗಳಲ್ಲೂ ಶರಣಾಗತಿಯೇ ಮುಖ್ಯೋಪಾಯವಾಗಿ ಹೇಳಲ್ಪಟ್ಟಿರುತ್ತದೆ. ಅಲ್ಲಿ ಶರಣಾಗತಿಮನ್ತ್ರವಾದ ದ್ವಯದ ಸ್ವರೂಪವು ವ ಕ್ಯೋ ದ್ವಿತೀಯಃ ಇತ್ಯಾದಿಗಳಿಂದ ಆರಂಭಿಸಿ ಹೇಳಿ ಶ್ರೀಮಚ್ಛಬ್ದಾತ್ಪರೇಯುಕ್ತ ನಾರಾಯಣ ಇತೀಷ್ಯತೇ । ತತ್ಪರೇಚರಣೌ ಶಬ್ದ ಸ್ತತ್ಪರೇ ಶರಣಂ ತಥಾ । ಪ್ರಪದ್ಯೇ ತತ್ಪರೇಯುಕ್ತಂ ಪರೇನಾರಾಯಣಾಯೇತಿ ಎಂದು ಉಪದೇಶಿಸುತ್ತದೆ; ಮುಂದಕ್ಕೆ ನಮಃ ಎಂದಿದೆ ಎಂದೂ ಹೇಳಲ್ಪಡುತ್ತದೆ.

ಅಹಿರ್ಬುಧ್ನ್ಯ ಮನ್ತ್ರದಲ್ಲಿ "ಸಕೃದೇವ ಪ್ರಪನ್ನಸ್ಯ ಕೃತಂ ನ್ಯೈವಾನ್ಯ ದಿಷ್ಯತೇ ಸಕೃಜ್ಜಪ್ತೇನ ಮನ್ತ್ರೇಣ ಕೃತಕೃತ್ಯ ಸ್ಸುಖೀ ಭವೇತ್" "ತ್ವ ಮೇವೋಪಾಯಭೂತೋ ಮೇ ಭವೇತಿ ಪ್ರಾರ್ಥನಾಮತಿಃ । ಶರಣಾಗತಿ ರಿತ್ಯುಕ್ತಾ ಸಾ ದೇವೇಽಸ್ಮಿನ್ ಪ್ರಯುಜ್ಯತಾಮ್" 'ನೀನೇ ನನ್ನನ್ನು ರಕ್ಷಿಸಲು ಉಪಾಯಭೂತನಾಗು ಎಂದು ಪ್ರಾರ್ಥಿಸಿ ಆತನ ಪಾದದಲ್ಲಿ ಆತ್ಮವನ್ನು ಸಮರ್ಪಿಸುವದು ಶರಣಾಗತಿಯು. ಸನತ್ಕುಮಾರ ಸಂಹಿತೆಯಲ್ಲಿ, "ಕುಯೋನಿಷ್ವಪಿ ಸಂಜಾತೋ ಯಸ್ಸಕೃಚ್ಛರಣಾಗತಃ।ತಂ ಮಾತಾ ಪಿತೃಹಂತಾರ ಮಪಿ ಪಾತಿ ಭವಾರ್ತಿಹಾ" ಎಂದಿದೆ. ಸಾತ್ಯಕಿ ತನ್ತ್ರದಲ್ಲಿ "ನಾನುಕೂಲ್ಯಂ ನ ನಕ್ಷತ್ರಂ ನ ತೀರ್ಥಾದಿ ನಿಷೇವಣಮ್ । ನಮಸ್ಕೃತ್ಯ ಗುರುಂ ದೀರ್ಘಪ್ರಣಾಮೈ ಸ್ತ್ರಿಭಿರಂದಿತಃ । ತತ್ಪಾದೌ ಗೃಹ್ಯ ಮೂರ್ಧ್ನಿ ಸ್ವೇ ವಿಧಾಯ ವಿನಯಾನ್ವಿತಃ । ಗೃಹ್ಣೀಯಾತ್ ಮನ್ತ್ರರಾಜಾನಂ ನಿಧಿಕಾಂಕ್ಷೀವ ನಿರ್ಧನಃ । ಲಬ್ಧ್ವೈವಂ ಮನ್ತ್ರರಾಜಾನಂ ಮಾಂ ಗಚ್ಛೇಚ್ಛರಣಂ ನಮಃ" ॥ ದಕ್ಷಸ್ಮೃತಿಯಲ್ಲಿ,ಸರ್ವೋಪಾಧಿ ವಿನಿರ್ಮುಕ್ತಂ ಕ್ಷೇತ್ರಜ್ಞಂ ಬ್ರಹ್ಮಣಿ ನ್ಯಸೇತ್ । ಏತದ್ಧ್ಯಾನಂ ಚ ಯೋಗ ಶ ಶೇಷೋ ನ್ಯೋ ಗ್ರಂಥವಿಸ್ತರಃ" ಎಂದಿರುತ್ತದೆ.

ವ್ಯಾಸ ಸ್ಮೃತಿಯಲ್ಲಿ—ನಿವೇದಯೀತ ಸ್ವಾತ್ಮಾನಂ ವಿಷ್ಣೌ ವಮಲತೇಜಸಿ । ತದಾತ್ಮಾ ತನ್ಮನ ಶ್ಶಾನ್ತ ಸ್ತದ್ವಿಷ್ಣೋರಿತಿಮನ್ತ್ರತಃ ॥ ಇಲ್ಲಿ ದ್ವಯಮನ್ತ್ರಕ್ಕೆ ಬದಲಾಗಿ "ತದ್ವಿಷ್ಣೋಃ ಪರಮಂ ಪದಂ ಸದಾಪಶ್ಯನ್ತಿ ಸೂರಯಃ" ಎಂಬ ಮನ್ತ್ರವನ್ನು ಉಚ್ಚರಿಸಿ ಶರಣಾಗತಿಯನ್ನು ಮೋಕ್ಷಾರ್ಥವಾಗಿ ಅನುಷ್ಠಿಸತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ.

ಶೌನಕಸ್ಮೃತಿಯಲ್ಲಿ—"ವಾಚಃ ಪರಂ ಪ್ರಾರ್ಥಯತಾ ಪ್ರಪದ್ಯೇ ನ್ನಿಯತಂ ಶ್ರಿಯಮ್ । ಇಲ್ಲಿ ಶರಣಾಗತಿಯನ್ನು ವಿಷ್ಣುವಿನಲ್ಲೇ ಮಾಡಬೇಕೆಂಬ ನಿಯಮವಿಲ್ಲವು. ನಿತ್ಯಾನುಪಾಯಿಯಾದ ಲಕ್ಷ್ಮಿಯಲ್ಲೂ ಅನುಷ್ಠಿಸಬಹುದೆಂದು ಹೇಳಿರುತ್ತದೆ.

ವಿಷ್ಣುಪುರಾಣದಲ್ಲಿ—"ತ್ವಾ ಮಾರ್ತಾ ಶ್ಶರಣಂ ವಿಷ್ಣೋ ಪ್ರಯಾತಾ ದೈತ್ಯನಿರ್ಜಿತಾಃ । ವಯಂ ಪ್ರಸೀದ ಸರ್ವಾತ್ಮಂಸ್ತೇಜಸಾ ಪ್ಯಾಯಯಸ್ವ ನಃ । ತಾವದಾರ್ತಿ ಸ್ತಥಾ ವಾಂಛಾ ತಾವನ್ಮೋಹ ಸ್ತಥಾಽಸುಖಮ್ । ಯಾವನ್ನಯಾತಿ ಶರಣಂ ತ್ವಾಮಶೇಷಾಘನಾಶನಮ್" ಇಲ್ಲಿ ದೇವತೆಗಳು ಮಾಡಿದ ಶರಣಾಗತಿಯು ಶತ್ರುನಾಶಕ್ಕಾಗಿ, ಮೋಕ್ಷಕ್ಕಾಗಿ ಅಲ್ಲವು.

**ವರಾಹಪುರಾಣ**—ಮತ್ಪ್ರದದ್ವಂದ್ವ ಮೇಕಂ ಯೇ ಪ್ರಪದ್ಯಂತ್ರೇ ಪರಾಯಣಮ್ ಉದ್ಧರಿಷ್ಯಾಮ್ಯ ಹಂ ದೇವಿ ಸಂಸಾರಾತ್ಸ್ವಯ ಮೇವ ತಾನ್ ॥

**ಪಾದ್ಮಪುರಾಣ**—ಚತುರ್ಮುಖಬ್ರಹ್ಮನು ಭಗವಂತನನ್ನು ಕೇಳುತ್ತಾನೆ:-

ಭಗವಾನ್ ಕೇನ ಮನ್ತ್ರೇಣ ಸಂಸಾರೋತ್ತರಣಂ ಭವೇತ್ ? ಇದಕ್ಕೆ ಭಗವಂತನ ಉತ್ತರವು:- "ಸಾಧುಪೃಷ್ಟಂ ಮಹಾಭಾಗ ಸರ್ವಲೋಕಹಿತೈಷಿಣಃ । ತಸ್ಮಾದ್ವಕ್ಷ್ಯಾಮಿ ತೇ ಗುಹ್ಯಂ ಯೇನ ಮಾಮಾಪ್ನುಯುರ್ನರಾಃ । ಸರ್ವೇಷಾ ಮೇವ ಮನ್ತ್ರಾಣಾಂ ಮನ್ತ್ರರತ್ನಂ ಶುಭಾಹ್ವಯಮ್ । ಸಕೃತ್ಸ್ಮರಣಮಾತ್ರೇಣ ದದಾತಿ ಪರಮಂ ಪದಮ್ । ಮನ್ತ್ರರತ್ನಂ ದ್ವಯಂ ನ್ಯಾಸಃ ಪ್ರಪತ್ತಿಃ ಶರಣಾಗತಿಃ । ತಸ್ಯೋಚ್ಚಾರಣ ಮಾತ್ರೇಣ ಪರಿತುಷ್ಟೋಽಸ್ಮಿ ನಿತ್ಯಶಃ ಹೀಗೆ ದ್ವಯವೆಂಬ ಮನ್ತ್ರರತ್ನದ ಪಠನಮೂಲಕ ಗುರು ಮುಖೇನ ಶರಣಾಗತಿಯನ್ನು ಅನುಷ್ಠಿಸುವದು ಮೋಕ್ಷಪ್ರದವೆಂದು ಹೇಳಲ್ಪಟ್ಟಿತು.

**ಬ್ರಹ್ಮಪುರಾಣ**—"ಶರಣಂ ತ್ವಂ ಪ್ರಪನ್ನಾ ಯೇ ಧ್ಯಾನಯೋಗವಿವರ್ಜಿತಾಃ ತೇಽಪಿ ಮೃತ್ಯು ಮತಿಕ್ರಮ್ಯ ಯಾನ್ತಿ ತದ್ವೈಷ್ಣವಂ ಪದಮ್"

ಇಲ್ಲಿ ಉಪಾಸನೆಯಿಲ್ಲದೆ ಅದಕ್ಕೆ ಅಶಕ್ತನಾಗಿ ಶರಣಾಗತಿಯನ್ನು ಮಾಡಿದವನು ದಿವ್ಯ ವೈಕುಂಠವನ್ನು ಹೊಂದುತ್ತಾನೆಂದು ಹೇಳಲ್ಪಟ್ಟಿದೆ. ಈ ಅಭಿಪ್ರಾಯವು ಅಹಿರ್ಬುಧ್ನ್ಯ ಸಂಹಿತೆಯಲ್ಲೂ ಹೇಳಲ್ಪಟ್ಟಿರುತ್ತದೆ. "ಯದ್ಯೇನಕಾಮಕಾಮೇನ ನಸಾಧ್ಯಂ ಸಾಧನಾನ್ತರೈಃ । ಮುಮುಕ್ಷುಣಾ ಯತ್ಸಾಂಖ್ಯೇನ ಯೋಗೇನ ನಚ ಭಕ್ತಿತಃ । ಪ್ರಾಪ್ಯತೇ ಪರಮಂ ಧಾಮ ಯತೋ ನಾ ವರ್ತತೇ ಯತಿಃ । ತೇನ ತೇನಾ ಪ್ಯತೇ ತತ್ತತ್ ನ್ಯಾಸೇನೈವ ಮಹಾಮುನೇ" ಎಂಬಲ್ಲಿ ಉಪಾಸನಾದಿ ಸಾಧ್ಯೋಪಾಯಗಳಿಂದ ಲಭಿಸವ ಇರತಕ್ಕದ್ದೆಲ್ಲಾ ಶರಣಾಗತಿಯಿಂದ ಸುಲಭವಾಗಿ ಲಭಿಸುತ್ತದೆಂದೂ, ತನ್ಮೂಲಕ ದಿವ್ಯ ವೈಕುಂಠ ಪ್ರಾಪ್ತಿಯೂ ಉಂಟೆಂದೂ, ಹೇಳಲ್ಪಟ್ಟಿತು.

ಶ್ರೀಮದ್ಭಾಗವತದಲ್ಲಿ ಉದ್ಧವರಿಗೆ ಶ್ರೀಕೃಷ್ಣಪ್ರಭುವು ಉಪಾಸನವನ್ನೇ ಮೊದಲು ಉಪದೇಶಿಸಿ ತನ್ಮೂಲಕ ಮೋಕ್ಷಪ್ರಾಪ್ತಿ ಎಂದು ಹೇಳುತ್ತಾರೆ. ಉಪಾಸನವನ್ನು ಮಾಡಲು ಶಕ್ತಿಯುಳ್ಳವರು ಅತಿ ವಿರಳರು ಎಂದು ಉದ್ಧವರು ಭಾವಿಸಿ,ಸ್ವಾಮಿಯು ಕೃಪಾಸಾಗರನು ಹೇಗೆ ಆದಾನು.? ಕೃಪೆಗೆ ಸಂಕೋಚವನ್ನು ಹೇಳತಕ್ಕದ್ದಲ್ಲವೇ ? ಎಂದು ಚಿನ್ತಿಸುತ್ತಿರುವಾಗ, ಸ್ವಾಮಿ ಕೃಷ್ಣನು ಶರಣಾಗತಿಯನ್ನು ಭಾಗವತ ಸಂಶ್ರಯಣ ಮೂಲಕ ಅನುಷ್ಠಿಸಿ ಅನೇಕ ಮೋಕ್ಷಾರ್ಥಿಗಳು ತನ್ನನ್ನು ಬಂದು ಸೇರಿರುತ್ತಾರೆಂದು ಸುಮಾರು ೨೦ಕ್ಕಿಂತ ಹೆಚ್ಚಾಗಿ ಅವರುಗಳ ಹೆಸರುಗಳನ್ನು ತಿಳಿಸಿ, ಸತ್ಸಂಗದ ಮೂಲಕ"ವಿದ್ಯಾಧರಾ ಮನುಷ್ಯೇಷು ವೈಶ್ಯಾಶ್ಯೂದ್ರಾಸ್ತ್ರಿಯೋಽನ್ತ್ಯಜಾಃ। ರಜಸ್ತಮಃ ಪ್ರಕೃತಯ ಸ್ತಸ್ಮಿಂಸ್ತಸ್ಮಿನ್ ಯುಗೇಯುಗೇ । ಬಹವೋ ಮತ್ಪರಂ ಪ್ರಾಪ್ತಾಃ ಎಂದು ಸ್ತ್ರೀಗಳೂ ಶೂದ್ರರೂ ಅನ್ತ್ಯಜರೂ ಎಲ್ಲರೂ ಗುರು ಮೂಲಕ ಶರಣಾಗತಿಯನ್ನನುಷ್ಠಿಸಿ, ನನ್ನ ವೈಕುಂಠವನ್ನು ಬಂದು ಸೇರಿರುವದರಿಂದ ಓ ಉದ್ಧವರೇ ! ನೀವೂ "ಮಾಮೇಕಮೇವ ಶರಣಂ ಆತ್ಮಾನಂಸರ್ವದೇಹಿನಾಮ್ । ಯಾಹಿ ಸರ್ವಾತ್ಮಭಾವೇನ ಯಾಸ್ಯಸ್ಯ ಕುತೋ ಭಯಮ್ ॥ " ಹೀಗೆ ಶರಣಾಗತಿಯನ್ನು ಅನುಷ್ಠಿಸಿದರೆ ತಮ್ಮ ಮನೋರಥಾನುಸಾರ ನಿರತಿಶಯ ಶ್ರೇಯಸ್ಸಾದ ಮೋಕ್ಷವನ್ನು ಹೊಂದುವಿರಿ ಎಂದು ಶ್ರೀಕೃಷ್ಣಭಗವಾನ್ ಉಪದೇಶಿಸಿರುತ್ತಾರೆ. – ಹಾಗೆಯೇ ವನಪರ್ವದಲ್ಲಿ ಭಗವಾನ್ ಮಾರ್ಕಂಡೇಯರೂ, ಶ್ರೀಕೃಷ್ಣನು ಸಾಮಾನ್ಯ ಮನುಷ್ಯನಲ್ಲವು; ಆವನಲ್ಲಿ ಶರಣಾಗತಿಯನ್ನು ಅನುಷ್ಠಿಸಿ ಎಂದು ದ್ರೌಪದಿ ಸಹಿತರಾದ ಪಂಚಪಾಂಡವರಿಗೂ ಉಪದೇಶಿಸುತ್ತಾರೆ - "ಸರ್ವೇಷಾಮೇವ ಭೂತಾನಾಂ ಪಿತಾ ಮಾತಾಚ ಮಾಧವಃ।

ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ" ಎಂಬುದಾಗಿ. (ಭಾರ. ವನ ೧೯೨-೫೬.)

ಶ್ರೀ ಮದ್ರಾಮಾಯಣವೆಲ್ಲಾ ಸಂಪೂರ್ಣವಾಗಿ ಶರಣಾಗತಿ ಗ್ರಂಥವು, ಎಲ್ಲವನ್ನು ಉದಾಹರಿಸಲು ಸಾಧ್ಯವಿಲ್ಲವು. (೧) "ಸಕೃದೇವಪ್ರಪನ್ನಾಯ ತವಾಸ್ಮೀತಿ ಚಯಾಚತೇ ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ" (ಯುದ್ಧ. ೧೮-೩೩) ಎಂದು ಶ್ರೀ ರಾಮ ವಾಕ್ಯವು. "ವಿದಿತಸ್ಸಹಿ ಧರ್ಮಜ್ಞಶ್ಶರಣಾಗತವತ್ಸಲಃ। ತೇನ ಮೈತ್ರೀಭವತು ತೇ ಯದಿ ಜೀವಿತು ಮಿಚ್ಛಸಿ। ಪ್ರಸಾದಯಸ್ವ ತಂ ಚೈನಂ ಶರಣಾಗತವತ್ಸಲಮ್॥" (ರಾ.ಸುಂ. ೨೧-೨೧) "ಸ ತಂ ನಿಪತಿತಂ ಭೂಮೌ ಶರಣ್ಯಶ್ಶರಣಾಗತಮ್। ವಧಾರ್ಹ ಮಪಿ ಕಾಕುತ್ಸ್ಥಃ ಕೃಪಯಾ ಪರ್ಯಪಾಲಯತ್" (ರಾ. ಸುಂದರ. ೩೮-೩೪) ಹೀಗೆ ಶರಣಾಗತಿಯು ನಾಲ್ಕುವಿಧ ಪುರುಷಾರ್ಥಗಳನ್ನೂ ಸಾಧಿಸಿ ಕೊಡುವಂತಾದ್ದು.

ಇವೆಲ್ಲಾ ಪ್ರಮಾಣಗಳಿಗಿಂತ ಪ್ರಧಾನ ಪ್ರಮಾಣಗಳು ಶ್ರುತಿವಾಕ್ಯಗಳು. ತೈತ್ತಿರೀಯ ನಾರಾಯಣೀಯಾಂತ್ಯದಲ್ಲಿ ಯಜ್ಞದಾನ ತಪಸ್ಸಿಗಳಿಗಿಂತ ಶ್ರೇಷ್ಠವಾಗಿ ಮುಕ್ತಿದಾಯಕವಾದುದರಿಂದ ನ್ಯಾಸವು ಎಂದರೆ ಆತ್ಮಭರನ್ಯಾಸವು ಪ್ರಪದನವು, ಸರ್ವಶ್ರೇಷ್ಠವಾದುದೆಂದು "ತಸ್ಮಾನ್ನ್ಯಾಸ ಮೇಷಾಂ ತಪಸಾ ಮತಿರಿಕ್ತ ಮಾಹುಃ" ಎಂಬುದರಿಂದ ಹೇಳಿ, ನ್ಯಾಸ ಶಬ್ದಕ್ಕೆ ಎಲ್ಲಿ ಅಪಾರ್ಥವನ್ನು ಹೇಳುವರೋ ಎಂಬ ಭಯದಿಂದ ಶ್ರುತಿಯೇ ಅದರ ಅರ್ಥವನ್ನು ಮುಂದಿನ ಋಕ್ಕಿನಲ್ಲಿ ತಿಳಿಸುತ್ತದೆ. "ವಸುರಣ್ಯೋ ವಿಭೂರಸಿ" ಎಂದಾರಂಭಿಸಿ ನ್ಯಾಸಶಬ್ದವು ಇಲ್ಲಿ ಭರನ್ಯಾಸ ಪರಶಬ್ದಾರ್ಥವುಳ್ಳೆಂದು "ಬ್ರಹ್ಮಣೇತ್ವಾಮಹಸ ಓ ಮಿತ್ಯಾತ್ಮಾನಂ ಯುಂಜೀತ, ಏತದ್ವೈ ಮಹೋಪನಿಷದಂ ದೇವಾನಾಂ ಗುಹ್ಯಂ ಯ ಏವಂ ವೇದ ಬ್ರಹ್ಮಣೋ ಮಹಿಮಾನ ಮಾಪ್ನೋತಿ" ಎಂದು ಮುಗಿಸಿರುವದರಿಂದ ಇದು ಪ್ರಪದನಕ್ಕೆ ಕರಣ ಮನ್ತ್ರವೆಂಬುದರಲ್ಲಿ ಸಂದೇಹವಿಲ್ಲವು. ಇನ್ನೊಂದು ಶ್ರುತಿಯಲ್ಲೂ (ಮುಂಡಕ ೨. ೨ ೪) ಈ ಪ್ರಪದನದ ಸ್ವರೂಪವೆಂತಾದ್ದೆಂದು ಬೋಧಿಸಲ್ಪಟ್ಟಿರುತ್ತದೆ. "ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯ ಮುಚ್ಯತೇ। ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್" ಓಂ ಎಂಬ ಪ್ರಣವವು ಧನುಸ್ಸಾಗಿಯೂ ಜೀವಾತ್ಮನು ಬಾಣವಾಗಿಯೂ ರೂಪಕಮಾಡಲ್ಪಟ್ಟಿರುತ್ತದೆ; ಬೇರೆ ಶ್ರುತಿಯಿಂದ ಈ ಪ್ರಣವವನ್ನು ತ್ರಿಮಾತ್ರೆಯಿಂದ ಉಚ್ಚರಿಸಿ ಗುರಿಯಿಟ್ಟು ಪರಮಾತ್ಮನ ಪಾದಾರವಿಂದದಲ್ಲಿ ಸೇರಿಸತಕ್ಕದ್ದು ಆಗ ತನ್ಮಯತ್ವವುಂಟಾಗುತ್ತದೆ; ಹೇಗೆಂದರೆ ಪರಮಪುರುಷನು ಹೇಗೆ ಜ್ಞಾನಸ್ವರೂಪನೂ ಮತ್ತು ಜ್ಞಾನಗುಣಕನೋ ಹಾಗೆಯೇ ಈತನೂ ಆಗುವನೆಂಬ ಭಾವವು. "ಸ್ವೇನರೂಪೇಣಾಭಿ ನಿಷ್ಪದ್ಯತೇ" ಎಂಬ ಶ್ರುತಿಯ ಸೂತ್ರಗಳ ಅಭಿಪ್ರಾಯವೇ ಇಲ್ಲೂ ಉಪಪಾದಿತವು. ಈ ಶ್ರುತಿ ಪ್ರಮಾಣಗಳ ಪ್ರಾಧಾನ್ಯವಾದವು. ಹಾಗೆಯೇ ಸ್ಮೃತಿಯಾದ ಈ ಗ್ರಂಥದಲ್ಲೂ ಉಪಪಾದಿತವು ಎಂದು ಉಪಪಾದಿಸಿರುವೆವು.

**ಭಾಷ್ಯಾರ್ಥವು**—ಹಿಂದೆಯೇ ೧೪-೧೫ನೆಯ ಶ್ಲೋಕಗಳಲ್ಲಿ ಜೀವಾತ್ಮನಿಗೆ ಪರಾಧೀನ ಕರ್ತೃತ್ವ ಉಂಟೆಂದು ಹೇಳಲ್ಪಟ್ಟಿತು. ಹಾಗೆ ದೇಹಾದಿಗಳು ಪ್ರಾರಬ್ಧಕರ್ಮಾನುಸಾರ ಉಂಟಾಗಿರುವಾಗ ಅಂತಹ ಪ್ರಾರಬ್ಧದಿಂದ ಶಾಂತಿಯೂ, ಬದ್ಧ ದೆಶೆಯನ್ನುಂಟುಮಾಡುವ ಪ್ರಕೃತಿಯಿಂದ ಬಿಡುಗಡೆಯೂ ಎಂದಿಗಾದರೂ ಉಂಟೋ ? ಎಂದರೆ ಅದಕ್ಕೆ ಉಪಾಯವನ್ನು ಬೋಧಿಸುತ್ತಾರೆ. ಪ್ರಾರಬ್ಧವು ಸುಕೃತರೂಪವಾಗಿ ತನ್ಮೂಲಕ ಅಶಾಶ್ವತವಾದರೂ ಸುಖಾನುಭವರೂಪವಾದರೆ, ಕುಚೇಲರಿಗೆ ಪ್ರಾಪ್ತವಾದ ಹಾಗೆ ಅವುಗಳಲ್ಲಿ ಲಿಪ್ತನಾಗದೆ ಮೋಕ್ಷಾರ್ಥಿಯು ಅನುಭವಿಸಿದರೂ ಅನುಭವಿಸಬಹುದು. ಆದರೆ ದುಷ್ಕೃತ ಮೂಲಕ ಪ್ರಾರಬ್ಧವು ದುಃಖರೂಪವಾದರೆ ಅದು ಇಷ್ಟವಿಲ್ಲದೆ ಅನಿಷ್ಟರೂಪವಾದುದು;ಆದುದರಿಂದ ಶರೀರವುಅನಿಷ್ಟರೂಪವಾದುದೇ. ಇವೆಲಾ

**ಭಾ.** ಯಸ್ಮಾದೇವಂ, ತಸ್ಮಾತ್ತ್ವಮೇವ ಸರ್ವಸ್ಯ ಪ್ರಶಾಸಿತಾರ ಮಾಶ್ರಿತವಾತ್ಸಲ್ಯೇನ ತತ್ಸಾರಥ್ಯೇಽವಸ್ಥಿತಂ "ಇತ್ಥಂಕುರು" ಇತಿ ಚ ಶಾಸಿತಾರಂ ಸರ್ವಭಾವೇನ-ಸರ್ವಾತ್ಮನಾ ಶರಣಂಗಚ್ಛ - ಸರ್ವಾತ್ಮನಾನುವರ್ತಸ್ವ । ಅನ್ಯಥಾಪಿ ತನ್ಮಾಯಾ ಪ್ರೇರಿತೇನಾಽಜ್ಞೇನತ್ವಯಾ ಯುದ್ಧಾದಿಕರಣ ಮವರ್ಜನೀಯಮ್; ತಥಾಸತಿ ನಷ್ಟೋ

---

ಕಳೆದು ಹೋಗಿ ಶಾಶ್ವತಪದ ಉಂಟಾಗುವದಕ್ಕಾಗಿ ಶರಣಾಗತಿಯನ್ನು ಅನುಷ್ಠಿಸು ಎಂದು ಮಹತ್ತಾದ ಉಪದೇಶವನ್ನು ಮಾಡುತ್ತಾರೆ. ಯಾವ ಪ್ರವೃತ್ತಿಯಲ್ಲೇಯಾಗಲಿ ತನ್ನಲ್ಲಿ ಶರಣಾಗತನಾಗಿ ಸರಿಯಾದ, ದುಃಖಗಳು ಯಾವುವೂ ಇಲ್ಲದ, ಮಾರ್ಗದಲ್ಲಿ ಪ್ರವರ್ತಿಸುವ ಹಾಗೆ ಮಾಡು ಎಂದು "ಯದ್ಧಿತಂ ಮಮದೇವೇಶ ತದಾಜ್ಞಾಪಯ ಮಾಧವ ಎಂದು ಪ್ರಾರ್ಥಿಸಿದರೆ, ಸರಿಯಾದ ಮಾರ್ಗದಲ್ಲಿ ಪ್ರೇರಿಸಿ, ಕ್ರಮೇಣ ಅನಿಷ್ಟನಿವೃತ್ತಿಯೊಂದಿಗೆ ಇಷ್ಟಪ್ರಾಪ್ತಿಯಾದ ದಿವ್ಯ ವೈಕುಂಠವಾದ ಶಾಶ್ವತಪದವನ್ನು ಕೊಡುವೆನು ಎಂದು ಅರ್ಜುನನಿಗೆ ಹೇಳುತ್ತಾರೆ **ಯಸ್ಮಾದೇವಂ** - ಯಾವ ಕಾರಣದಿಂದ ಪ್ರಾರಬ್ಧಕರ್ಮಾನುಗುಣವಾಗಿ ಹೃದಯ ಗುಹೆಯಲ್ಲೇ ಇದ್ದು ಸ್ವಾಮಿಯು ಪ್ರೇರಿಸುವನೋ, **ತಸ್ಮಾತ್**- ಆ ಕಾರಣದಿಂದ, **ತ್ವಮೇವ** ಎಂದರೆ **ಸರ್ವಸ್ಯಪ್ರಶಾಸಿತಾರಂ** - ನಾನು ಈಗ ಹೇಗೆ ನಿನಗೆ ಪ್ರೇರಿತವಾಗಿ ರಥದ ಮುಂಭಾಗದಲ್ಲಿ ಕುಳಿತಿರುವೆನೋ ಹಾಗೆಯೇ "**ಸರ್ವಸ್ಯಚಾಹಂ ಹೃದಿಸನ್ನಿವಿಷ್ಟಃ**" ಎಲ್ಲರ ಹೃದಯ ಗುಹೆಯಲ್ಲಿ ಪ್ರೇರಕನಾಗಿ ಬಿಜಮಾಡಿಸಿರುವ, **ಆಶ್ರಿತವಾತ್ಸಲ್ಯೇನ**-ಶರಣಾಗತಿ ಮಾಡಿ ಆಶ್ರಯಿಸಿದವರ ವಿಷಯದಲ್ಲಿ ವಾತ್ಸಲ್ಯಯುಕ್ತನಾದವನನ್ನು ಈ ಸಂದರ್ಭದಲ್ಲಿ, **ತತ್ಸಾರಥ್ಯೇಽವಸ್ಥಿತಂ** - ಆ ಶಾಸ್ತ್ರಾರ್ಥವನ್ನೇ ಎಲ್ಲರಿಗೂ ಪ್ರದರ್ಶಿಸುವದಕ್ಕಾಗಿ ಪರತತ್ತ್ವವಾದ ಶ್ರೀ ಕೃಷ್ಣಭಗವಾನರವರು ಪ್ರೇರಿತಾವಾಗಿ ಅರ್ಜುನನಿಗೆ **ಸಾರಥ್ಯೇವಸ್ಥಿತಂ** ಎಂಬ ಪ್ರಯೋಗವು; ಲೀಲಾ ಸಾರಥಿಯಾಗಿರುವ, "**ಇತ್ಥಂ ಕುರು**" ಧರ್ಮಯುದ್ಧವನ್ನು ಮಾಡುವದು ಕ್ಷತ್ರಿಯನ ಇತಿಕರ್ತವ್ಯತೆಯಾದುದರಿಂದ, ಹೀಗೆ ಯುದ್ಧವನ್ನು ನಡೆಸು, **ಇತಿ** - ಎಂದೂ, **ಶಾಸಿತಾರಂ** - ಶಾಸ್ತ್ರವನ್ನು ಬೋಧಿಸುವ ಪರಮ ಪುರುಷನನ್ನು, **ಸರ್ವಾತ್ಮನಾ ಶರಣಂಗಚ್ಛ** ಎಂದರೆ **ಸರ್ವಾತ್ಮನಾ ಅನುವರ್ತಸ್ವ** – ಸರ್ವ ಪ್ರಕಾರದಿಂದಲೂ ಅನುಸರಿಸಿ ನಡೆಯತಕ್ಕದ್ದು. ಆದುದರಿಂದ **ಶರಣಂಗಚ್ಛ** ಎಂದು ಉಪದೇಶಿಸಿದರು. ಇದರ ಸಾರವತ್ತಾದ ಅಭಿಪ್ರಾಯವು **ಸರ್ವಾತ್ಮನಾ ಅನುವರ್ತಸ್ವ** - ನನ್ನನ್ನು ಆಶ್ರಯಿಸಿದುದರಿಂದ ವಾತ್ಸಲ್ಯಯುಕ್ತನಾಗಿ ನಿನ್ನ ಹೃದಯ ಗುಹೆಯಲ್ಲಿದ್ದುಕೊಂಡು ನಿನ್ನ ವಿವೇಕ ಜ್ಞಾನಮೂಲಕವಾಗಿ ಆಜ್ಞಾಪಿಸುವನನ್ನು ಅನುವರ್ತಿಸಿ ನಡೆಯತಕ್ಕದ್ದು. **ಅನ್ಯಥಾಪಿ**-ಹಾಗೆ ನೀನು ನಡೆಯದೇ ಹೋದರೆ, **ತನ್ಮಾಯಾ ಪ್ರೇರಿತೇನ** - ಆ ನಿನ್ನ ದೇಹ ಪ್ರಯುಕ್ತ ಉಂಟಾದ ಸ್ವಭಾವದಿಂದ ಪ್ರೇರಿತನಾಗಿ, **ಅಜ್ಞೇನತ್ವಯಾ** - ಆ ಕಾರಣದಿಂದ ಭ್ರಮಜ್ಞಾನ ಯುಕ್ತನಾಗಿ ಅಜ್ಞನಾದ ನಿನ್ನಿಂದ. **ಯುದ್ಧಾದಿಕರಣಂ** - ದುಷ್ಟನಾಶಕ್ಕಾಗಿ ನಾನು ಪ್ರೇರಿಸಿ ನಡೆಸುವ ಯುದ್ಧವೇ ಮೊದಲಾದುವನ್ನು ಮಾಡೋಣವು **ಅವರ್ಜನೀಯಂ** - ತಪ್ಪಿದ್ದಲ್ಲವು. ಆದಿ ಶಬ್ದದಿಂದ ಇತರ "ಕ್ಷಾತ್ರಂ ಕರ್ಮಸ್ವಭಾವಜಂ" (ಗೀ. ೧೮ ೪೩.) ಕ್ಷತ್ರಿಯ ವ್ಯಾಪಾರಗಳಾಗಿ, ಹೇಳಲ್ಪಟ್ಟವೆಲ್ಲವೂ ಸ್ಮಾರಿತವು.

ಇತರ ಬ್ರಾಹ್ಮಣವೈಶ್ಯಾದಿಗಳಿಗೆ ಅನ್ವಯಿಸುವಾಗ ಅವರವರುಗಳ ಸ್ವಭಾವಕ್ಕೆ ಯೋಗ್ಯವಾದ ಇತರ ಪ್ರವೃತ್ತಿಗಳೂ ೪೨ ಮತ್ತು ೪೪ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟವೆಲ್ಲವೂ, ಈ ಆದಿ ಪದದಲ್ಲಿ ಅಂತರ್ಗತವು; **ತಥಾಸತಿ** – ಹಾಗಾಗಲಾಗಿ ಎಂದರೆ ಯುದ್ಧಾದಿಗಳನ್ನು ಮಾಡದಿದ್ದರೆ, **ನಷ್ಟೋ ಭವಿಷ್ಯಸಿ**-ನಷ್ಟನಾಗುತ್ತೀಯೇ ಎಂದರೆ ಯಾವ ಪುರುಷಾರ್ಥಗಳನ್ನು ಹಿಂದೆ ೫೮ನೆಯ ಶ್ಲೋಕದಲ್ಲಿ ಹೇಳಿರುವ ಹಾಗೆ ಹೊಂದದೆ ನಷ್ಟನಾಗುತ್ತೀಯೇ ಎಂಬ ಭಾವವು. **ಅತಃ** -

**ಭವಿಷ್ಯಸಿ; ಅತಸ್ತದುಕ್ತಪ್ರಕಾರೇಣ ಯುದ್ಧಾದಿಕಂ ಕುರ್ವಿತ್ಯರ್ಥಃ; ಏವಂ ಕುರ್ವಾಣ ಸ್ತತ್ಪ್ರಸಾದಾತ್ ಪರಾಂ ಶಾನ್ತಿಂ–ಸರ್ವಕರ್ಮಬಂಧೋಪಶಮಂ, ಶಾಶ್ವತಂಚ ಸ್ಥಾನಂ**

---

ಆದುದರಿಂದ ನೀನು ಈಗ ಏನನ್ನು ಮಾಡತಕ್ಕದ್ದೆಂದರೆ ಹಿಂದೆ **ತದುಕ್ತಪ್ರಕಾರೇಣ** - ಪೂರ್ವಾರ್ಧದಲ್ಲಿ ಹೇಳಿದ ಹಾಗೆ ನನ್ನನ್ನು ಶರಣಹೊಂದಿ, **ಯುದ್ಧಾದಿಕ ಕುರು ಇತ್ಯರ್ಥಃ** - ಕ್ಷತ್ರಿಯನಾದವನ ಇತಿಕರ್ತವ್ಯತಾರೂಪವಾಗಿ ಆತನ ಧರ್ಮವಾದ ದುಷ್ಟನಿಗ್ರಹ ಶಿಷ್ಟ ಪರಿಪಾಲನಕ್ಕಾಗಿ ಯುದ್ಧವೇ ಮೊದಲಾದವನ್ನು ಮಾಡು ಎಂಬ ಭಾವವು; ಮತ್ತು ಸ್ವವರ್ಣೋಚಿತ ನಿತ್ಯನೈಮಿತ್ತಿಕ ಕರ್ಮಗಳನ್ನು ಅನುಷ್ಠಿಸು ಎಂಬುದೂ ಮತ್ತು ಇದಲ್ಲದೆ ಎಂದರೆ ಇಂತಹ ಆಜ್ಞಾಕೈಂಕರ್ಯಗಳನ್ನೆಸಗುವದೇ ಆತನ ವಿಶೇಷ ಪ್ರೀತಿ ಸಂಪಾದಕವೆಂಬುದೂಸೂಚಿತವು. **ಏವಂ ಕುರ್ವಾಣಃ** - ನಾನು ಮಾಡಿದ ಪರಮ ಹಿತೋಪದೇಶವನ್ನು ಅನುಸರಿಸಿ ನಡೆಯುವನಾದರೆ, **ತತ್ಪ್ರಸಾದಾತ್** - ಆ ವಾತ್ಸಲ್ಯ ಕಾರುಣ್ಯ ಸೌಲಭ್ಯಾದಿ ಆಶ್ರಿತೋಪಯುಕ್ತ ಕಲ್ಯಾಣ ಗುಣ ಮಹೋದಧಿಯ ಅನುಗ್ರಹದಿಂದ, **ಪರಾಂಶಾನ್ತಿಂ** ಎಂದರೆ **ಸರ್ವಕರ್ಮಬಂಧೋಪಶಮಂ** - ಸಮಸ್ತ ಪ್ರಾಚೀನ ಕರ್ಮಬಂಧಗಳಿಂದ ಬಿಡುಗಡೆಯನ್ನೂ, ಪುನಸ್ಸಂಸಾರಪ್ರಾಪ್ತಿಯಿಂದ ಬಿಡುಗಡೆಯನ್ನೂ ಇದೇ ಮುಖ್ಯವಾದ ಅನಿಷ್ಟ ನಿವೃತ್ತಿಯು, ಅದನ್ನೂ ಮತ್ತು **ಶಾಶ್ವತಂಚ ಸ್ಥಾನಂ** - ಆತನು "**ಪರಮವ್ಯೋಮನಿಲಯಃ**" ಆದುದರಿಂದ ಆತನ ಸ್ಥಾನವಾದ ಪುನಃ ಪುನರಾವರ್ತಿಭಯವಿಲ್ಲದೆ ಶಾಶ್ವತವಾದ ದಿವ್ಯ ವೈಕುಂಠವನ್ನೂ, **ಪ್ರಾಪ್ಸ್ಯಸಿ**-ಹೊಂದುತ್ತೀಯೇ, ಇದೇ ಇಷ್ಟಪ್ರಾಪ್ತಿಯು, ಹೀಗೆ ಅನಿಷ್ಟ ನಿವೃತ್ತಿ ಮತ್ತು ಇಷ್ಟಪ್ರಾಪ್ತಿ ಎರಡನ್ನೂ ಈ ಶರಣಾಗತಿಯ ಮೂಲಕ ಹೊಂದುವಿ. ಆದುದರಿಂದ ಯುದ್ಧಾದಿಗಳನ್ನು ನೀನು ಮಾಡದೇ ಇರಲ್ಕು ಸಾಧ್ಯವೇ ಇಲ್ಲವು. ನೀನು ಮಾಡುವದಿಲ್ಲವೆಂದರೂ ನಿನ್ನ ಕ್ಷತ್ರಿಯ ಸ್ವಭಾವ ಹೇಗಾದರೂ ನನ್ನ ಸಙ್ಕಲ್ಪದಿಂದ ಪ್ರೇರಿಸಲ್ಪಡುವದರಿಂದ ನಡೆಸಿ ಬಿಡುತ್ತದೆ. ಹಾಗೆ ನನ್ನ ಇಷ್ಟಾನುಸಾರ ನಡೆಯದಿದ್ದರೆ ಇಷ್ಟಾರ್ಥ ಸಿದ್ಧಿಯೂ ಇಲ್ಲವು, ನನ್ನ ಅನುಗ್ರಹವೂ ಇಲ್ಲವು. ಹೇಗೂ ಯುದ್ಧಾದಿಗಳು ತಪ್ಪಿದ್ದಲ್ಲವು. ಸರ್ವೇಶ್ವರನ ಇಷ್ಟಾನುಸಾರ ಮಾಡುತ್ತೇನೆಂದು ಶ್ರದ್ಧಾ ಭಕ್ತಿ ವಿಶ್ವಾಸಪೂರ್ವಕ ನಡೆಸಿದರೆ, ಆತನ ಅನುಗ್ರಹವೂ ಲಭಿಸೀತು, ನಿನಗೆ ಸರ್ವಪುರುಷಾರ್ಥಗಳೂ ಲಭಿಸಿ. ಇಹದಲ್ಲೂ ಸುಖದಲ್ಲಿದ್ದು, ನನ್ನ ಅನುಗ್ರಹದಿಂದಲೇ ಉಪಾಯಾನುಷ್ಠಾನವೂ ಲಭಿಸಿ, ದಿವ್ಯವೈಕುಂಠವನ್ನು ಬಂದು ಸೇರುವಿ ಎಂದು, ಹಿತೋಪದೇಶವನ್ನು ಮಾಡಿದರ. ನನ್ನನ್ನಾಶ್ರಯಿಸಿ ದೇಹಾವಸ್ಥಾನದಲ್ಲಿ ಶರಣಾಗತಿಯನ್ನನುಷ್ಠಿಸಿ ನಾನು ಮಾಡಿರುವ ಪರಮ ಹಿತೋಪದೇಶವನ್ನು ಕೈಕೊಂಡು ಅದಕ್ಕೆ ಅನುಸಾರವಾಗಿ ನಡೆದರೆ ನಿನಗೆ ಅನಿಷ್ಟನಿವೃತ್ತಿಯೂ ಇಷ್ಟಪ್ರಾಪ್ತಿಯೂ ಲಭಿಸುವುವು. ಈ ಹೇಯ ದೇಹ ಪ್ರಾಪ್ತಿಯಿಂದ ಬಿಡುಗಡೆಯೂ, ಪರಮ ಪದಪ್ರಾಪ್ತಿಯೂ ಎರಡೂ ಉಂಟೆಂದು ನಿಗಮನದಲ್ಲಿ ಪರಮ ಹಿತೋಪದೇಶವನ್ನು ಮಾಡಿರುತ್ತಾರೆ. ಇಲ್ಲಿ **ತಮೇವ** ಎಂಬ ಮೂಲದ ಪ್ರಯೋಗವುಪ್ರಸಿದ್ಧಿಯನ್ನುತೋರಿಸುವದಕ್ಕಾಗಿ ಎಂದು ಹಿಂದೆಹೇಳಿದೆವು. ಇಲ್ಲಿಮಾಮೇವ ಎಂದು ಹೇಳಲಿಲ್ಲವು. ಪ್ರಸಿದ್ಧಿ ಹೇಗೆ ಎಂಬುದನ್ನು ವ್ಯಾಖ್ಯಾನದಲ್ಲಿ **ಸರ್ವಸ್ಯಪ್ರಶಾಸಿತಾರಂ** ಎಂದು ಹೇಳಿದರು; ಹೃದಯದಲ್ಲೇವಸಿಸಿರುವಂತವನನ್ನು ಪ್ರವೃತ್ತಿಗೆ ಮೊದಲು ನಾವು ಕೇಳಿದುದಾದರೆ, ಸರಿಯಾದ ಹಿತೋಪದೇಶವನ್ನು ವಿವೇಕಜ್ಞಾನದ ಮೂಲಕ ಮಾಡುವನು; ಕೇಳದೇ ಇದ್ದರೆ ಇಲ್ಲವು; ಸುಂದರ ಸ್ತ್ರೀಯನ್ನು ಕಾಮನೆಯಿಂದ ನೋಡುವದು ನ್ಯಾಯವೇ ಎಂದು ಕೇಳಿದರೆ, ಆತನು ಬುದ್ಧಿ ವಿವೇಕದ್ವಾರಾ ಸರಿಯಲ್ಲವೆಂದು ತಿಳಿಸುವನು; ಹಾಗೆಯೇ ಗುರೂಪಸದನವನ್ನು ಮಾಡಲೇ ಬೇಕೇ ಎಂದು ಕೇಳಿದರೆ ಅವಶ್ಯಮಾಡು ನಿನಗೆ ಸರ್ವಪುರುಷಾರ್ಥಗಳೂ ಲಭಿಸುವದು ಎಂದು ಹೇಳುವನು. ಬುದ್ಧಿವಿವೇಕಸ್ಥಾನದಲ್ಲಿ ತಾನೇ ಇದ್ದುಕೊಂಡು ಈ ರಥಿಯಾದ ಜೀವಾತ್ಮನಿಗೆ

ಸಾರಥಿಯಾಗಿ ಯಾವಾಗಲೂ ಹೃದಯ ಗುಹೆಯಲ್ಲೇ ಇದ್ದಾನೆ. ಈ ಅಭಿಪ್ರಾಯುವನ್ನೇ ಪ್ರಣವವು ಸ್ಫುಟತರವಾಗಿ ಬೋಧಿಸುತ್ತದೆ. ನಮ್ಮ ಹೃದಯವು **"ವಿಶ್ವಸ್ಯಾಯತನಂ ಮಹತ್"** ಪರಿಪೂರ್ಣಕಾಮನಿಗೆ ಮಹತ್ತಾದ ದೇವಾಲಯವು. ಅಲ್ಲಿ ಬಾಗಿಲಲ್ಲೇ ಕೈ ಕಟ್ಟಿಕೊಂಡು ಆತನ ಆಜ್ಞೆಯನ್ನು ಸದಾ ನಿರೀಕ್ಷಿಸುತ್ತಾ ನೀನು ಇರತಕ್ಕದ್ದು. ಪ್ರತಿಯೊಂದು ಪ್ರವೃತ್ತಿಯ ಸಂದರ್ಭದಲ್ಲೂ ಆತನನ್ನು ಪ್ರಶ್ನಿಸಿದರೆ, ವಿವೇಕಜ್ಞಾನದ್ವಾರಾ ನಿನಗೆ ಉತ್ತರವನ್ನೀಯುವನು. ನಮ್ಮೊಂದಿಗೆ ಮಾತನಾಡುತ್ತಾ ಹಿತೋಪದೇಶವನ್ನು ಮಾಡುವದಕ್ಕಾಗಿಯೇ ಕಾದಿರುವನು. ಇದರಲ್ಲಿ ಈಷದಪಿ ಸಂಶಯವಿಲ್ಲವು. ಇದಲ್ಲವೇ ಪರಮ ಪುರುಷನ ನಿರತಿಶಯ ವಾತ್ಸಲ್ಯವನ್ನು ಪ್ರಕಟಿಸುತ್ತದೆ. ಹಾಗೆಯೇ ಇಲ್ಲಿ ಅರ್ಜುನನಾದ ರಥಿಗೆ ಪರಮಪುರುಷನು ಸಾರಥಿಯಾಗಿ ಯುದ್ಧ ಮಾಡುವದು ನ್ಯಾಯವೇ ನ್ಯಾಯವಲ್ಲವೇ ಎಂದು ಕೇಳಿದುದರಿಂದ ವಾತ್ಸಲ್ಯ ಮಹೋದಧಿಯು ಲೋಕಕಂಟಕರ ನಿಗ್ರಹರೂಪ ಯುದ್ಧವನ್ನು ಆವಶ್ಯಕವಾಗಿ ಮಾಡು; ನಿನಗೆ ಸರ್ವ ಪುರುಷಾರ್ಥಗಳು ಲಭಿಸುವುವು ಎಂದು ಹೇಳಿದರು. ಈ ಅಮೋಘಾಭಿಪ್ರಾಯವನ್ನು ಮನಸ್ಸಿನಲ್ಲಿಟ್ಟೇ **"ಆಶ್ರಿತವಾತ್ಸಲ್ಯೇನ ತ್ವತ್ಸಾರಥ್ಯೇ ಅವಸ್ಥಿತಂ 'ಇತ್ಥಂಕುರು' ಇತಿ ಚ ಶಾಸಿತಾರಂ"** ಎಂಬ ಆಸದ್ಭಶವ್ಯಾಖ್ಯಾನವು. ಸಾಧಾರಣ ಜನರಿಂಗಾದರೆ ಹೀಗೆ ಮಾಡಲೇ ಎಂದು ಕೇಳಿದರೆ, ಬುದ್ಧಿ ವಿವೇಕಸ್ಥಾನದಲ್ಲಿ ಕೂತಿರುವವನು ಸರಿಯಾಗಿಯೇ ಹೇಳುವನು. ಹಾಗಲ್ಲದೆ ಇಲ್ಲಿ ಪ್ರಸನ್ನನಾಗಿ ಆತನನ್ನು ಆಶ್ರಯಿಸಿ ಶರಣಾಗತಿಯನ್ನನುಷ್ಠಿಸಿದವನ ವಿಷಯದಲ್ಲಿ ಹೇಳತಕ್ಕದ್ದೇನು? ಕಾರುಣ್ಯ ವಾತ್ಸಲ್ಯ ಜಲನಿಧಿಯು ಸರಿಯಾದ ಮಾರ್ಗವಲ್ಲೇ ಪ್ರೇರಿಸಿ ರಕ್ಷಿಸುವನೆಂಬುದು ಕೈಮುತಿಕ ನ್ಯಾಯ ಸಿದ್ಧವು ಈ ರಥಿಯಾದ ಜೀವಾತ್ಮನಿಗೆ ವಾತ್ಸಲ್ಯ ಮಹೋದಧಿಯು ಸಿದ್ಧೋಪಾಯನಾಗಿ ಸಾರಥಿಯು ಎಂಬ ಭಾವವನ್ನು ಅಕಾರ ಉಕಾರ ಮಕಾರಗಳಿಂದ ಕೂಡಿದ ಓಂ ಎಂಬ ಪ್ರಣವವೇ ನಿರೂಪಿಸುತ್ತದೆ. ಅಕಾರ ವಾಚ್ಯನಾದ ವಿಷ್ಣುವು ಮೊದಲಿನಲ್ಲಿ ಸಾರಥಿಯಾಗಿಯೂ ಮಕಾರ ವಾಚ್ಯನಾದ ಜೀವನು ರಥಿಯಾಗಿ ಹಿಂದೆಯೂ ಈ ಪ್ರಣವದಲ್ಲಿರುವದರಿಂದ ಅಕಾರದಲ್ಲಿರುವ ಅವರಕ್ಷಣೆ ಎಂಬ ಧಾತುವಿನ ಮಕಾರ ಚೇತನನಿಗೆ ರಕ್ಷಕನೆಂಬುದನ್ನೂ ತೋರಿಸಿ, ತನ್ನವಾತ್ಸಲ್ಯಾತಿರೇಕವನ್ನು **"ಓಮಿತ್ಯೇಕಾಕ್ಷರಂ ಬ್ರಹ್ಮ"**ವು. ಸರ್ವಶ್ರುತಿಗಳ ಆದಿಯಲ್ಲೂ ಇರತಕ್ಕದ್ದೆಂದು ಪ್ರಕಟಿಸಿರುತ್ತಾನೆ ಹೇಗೆ ರಥಿಯ ಸಂಚಾರಾದಿ ಪ್ರವರ್ತನೆಗೆ ಸಾರಥಿಯು ಕಾರಣನೋ, ಹಾಗೆಯೇ ಈ ಲೀಲಾಸಾರಥಿಯಾಗಿರುವದರಿಂದ ಜೀವಾತ್ಮನ ಪ್ರವೃತ್ತಿಗೆ ದೇಹಮೂಲಕ ಕಾರಣನು. ಈ ಸಂದರ್ಭದಲ್ಲಿ **"ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವಚ । ಬುದ್ಧಿಂ ತು ಸಾರಥಿಂ ವಿದ್ಧಿ ಮನಃಪ್ರಗ್ರಹಮೇವಚ"**(ಕಠ.೧.೩.೩)ಎಂಬುದು ಅನುಸಂಧೇಯವು. ಈ ವಿವೇಕರೂಪ ಬುದ್ಧಿಯು ಹೃದಯಗುಹೆಯಲ್ಲಿರುವ ಪರಮಪುರುಷನಿಂದ ಉಂಟಾಗತಕ್ಕದ್ದಾದುದರಿಂದ ಶ್ರುತಿಯು ಬುದ್ಧಿಯನ್ನು ಸಾರಥಿ ಎಂದು ಹೇಳಿತು. ಇಲ್ಲಿಯಾದರೋ ಈಶ್ವರನು ಸ್ವತಂತ್ರನು. ಜೀವನು ಪರತಂತ್ರನು; ಅವನು ಶೇಷಿಯು,ಜೀವನು ಶೇಷನು; ಇತ್ಯಾದಿ ಅನೇಕ ಭಾವಗಳೂ ಸಹ ಸೂಚಿತವು. ಪ್ರಾಚೀನ ಕರ್ಮಕ್ಕೂನನ್ನ ಸಪ್ಪಲ್ಪಕ್ಕೂ ನೀನು ಅಧೀನನು; ಹೀಗೆ ಪರತನ್ತ್ರನಾದುದರಿಂದ ನಿನಗೆ ಬೇರೇ ಗತಿಯೇ ಇಲ್ಲವು ; ಆದುದರಿಂದ ಇಂತಹ ವಾತ್ಸಲ್ಯಮಹೋದಧಿಯನ್ನೇ **ಶರಣಂಗಚ್ಛ ಸರ್ವಭಾವೇನ** ಎಂದು ಪರಮ ಹಿತೋಪದೇಶವನ್ನು ನಿಗಮನದಲ್ಲಿ ಮಾಡಿರುತ್ತಾರೆ. ಹೀಗೆ ಪರಮಾತ್ಮನನ್ನು ವಶಮಾಡಿಕೊಂಡರೆ ಅವನ ಅನುಗ್ರಹದಿಂದ ಉಪಾಯ ನಿಷ್ಪತ್ತಿಯೂ ಮೋಕ್ಷಪ್ರಾಪ್ತಿಯೂ ಉಂಟಾಗುವವರಲ್ಲಿ ಸಂದೇಹವಿಲ್ಲವೆಂಬ ಭಾವವು. **ಸರ್ವಭಾವೇನ** ಎಂದು ಹೇಳಿರುವದರಿಂದ ಸರ್ವಭರವನ್ನೂ ಆತನಲ್ಲಿ ಇಡಬೇಕೆಂಬ ಭಾವವೂ ತೋರಿಸುತ್ತದೆ. **"ಯುದ್ಧಿತಂ ಮನು ದೇವೇಶ ತದಾ ಜ್ಞಾಪಯ ಮಾಧವ"**ಆತನು ತನಗೆ ಸರಿಯಾದ ಮಾರ್ಗವನ್ನೇ ತೋರಿಸಿ

ಪರಮಹಿತವನ್ನೇ ಮಾಡುವನೆಂಬ ಪೂರ್ಣನಂಬಿಕೆಯಿಂದ **"ವಾಸುದೇವಸ್ಸರ್ವಮಿತಿ"** ಎಂಬಲ್ಲಿ ಹೇಳಿರುವಹಾಗೆ ವರ್ತಿಸಬೇಕೆಂಬ ಭಾವದಿಂದ ಸರ್ವಭಾವೇನ ಎಂಬುದಕ್ಕೆ **ಸರ್ವಾತ್ಮನಾ ಅನುವರ್ತಸ್ವ** ಎಂದು ವ್ಯಾಖ್ಯಾನ ಮಾಡಿದರು. ಏಕೆಂದರೆ ಇಲ್ಲಿ ಭಾವ ಶಬ್ದವು ನನ್ನನ್ನು ಆಶ್ರಯಿಸದೆ ಸ್ವತಂತ್ರನಾಗಿ ನಡೆಯುವುದಕ್ಕೂ ನನ್ನಲ್ಲಿ ಶರಣಾಗತನಾಗಿ ಪ್ರಪನ್ನನಾಗಿ ನಡೆಯುವುದಕ್ಕೂ, ಅಜಗಜಾಂತರವು ಫಲದಲ್ಲಿ ಎಂಬುದನ್ನೂ ಸ್ಫುಟವಾಗಿ ತೋರಿಸುವುದಕ್ಕಾಗಿ ಹಿಂದೆ ೫೮ ಮತ್ತು ಅದಕ್ಕೆ ಮುಂದಿನ ಎರಡು ಶ್ಲೋಕಗಳ ಅರ್ಥವನ್ನೂ ಅನುವಾದ ಮಾಡಿ ಈ ಶ್ಲೋಕಾರ್ಥವನ್ನು ಉಪಪಾದಿಸಿ, "ಅನ್ಯಥಾಪಿ" ಎಂದಾರಂಭಿಸಿ, **"ಯುದ್ಧಾದಿಕಂ ಕುರು ಇತ್ಯರ್ಥಃ"** ಎಂದು ಮುಗಿಸಿ, ಎರಡು ವಿಧ ಪ್ರವರ್ತನೆಗಳಿಗೂ ಇರುವ ವ್ಯತ್ಯಾಸವನ್ನು ತೋರಿಸಿರುತ್ತಾರೆ. ಒಂದೇ ವಿಧ ಪ್ರವರ್ತನೆಯು ಹೇಗೆ ಬಂಧಕವಾಗಿ ಸರ್ವ ಪುರುಷಾರ್ಥ ನಾಶಕ್ಕೂ ಹೇತುವಾಗಬಹುದೆಂದೂ, ಅದೇ ಹೇಗೆ ಬಂಧಕ ನಿವೃತ್ತಿಗೂ ಸರ್ವ ಪುರುಷಾರ್ಥ ಪ್ರಾಪ್ತಿಗೂ ಹೇತುವಾಗಬಹುದೆಂದೂ, ಬಹು ಸ್ಪಷ್ಟವಾದ ವ್ಯಾಖ್ಯಾನದಿಂದ ಶ್ರೀ ಯತಿವರ್ಯರು ಪ್ರಕಟಿಸಿರುತ್ತಾರೆ. ಆ ಶರಣಾಗತವತ್ಸಲನಲ್ಲಿ ಮಾಡಿದ ಶರಣಾಗತಿಯು ಎರಡು ವಿಧ ಫಲಗಳನ್ನೂ, **ತತ್ಪ್ರಸಾದಾತ್‌ಪರಾಂ ಶಾಂತಿಂ"** ಎಂಬುದರಿಂದ ಪ್ರಾಕೃತದೇಹವಿಯೋಗ ರೂಪ ಅನಿಷ್ಟನಿವೃತ್ತಿಯೂ, "ಶಾಶ್ವತಂ ಸ್ಥಾನಂ ಎಂಬುದರಿಂದ ದಿವ್ಯ ವೈಕುಂಠಪ್ರಾಪ್ತಿರೂಪ ಇಷ್ಟ ಪ್ರಾಪ್ತಿಯನ್ನೂ ಪ್ರಾಪ್ಸ್ಯಸಿ - ಹೊಂದುವಿ ಎಂದು ಹೇಳಲ್ಪಟ್ಟಿದೆ. ಹಾಗೆ ಪರಮಪುರುಷನಲ್ಲಿ ಶರಣಾಗತಿಯನ್ನು ಅನುಷ್ಠಿಸಿದರೆ ಸಮಸ್ತಗಳಾದ ಹಿಂದಿನ ಜನ್ಮಗಳಲ್ಲೆಲ್ಲಾ ಮಾಡಿದ ಸರ್ವಾಪರಾಧಗಳೂ ನಾಶವಾಗುತ್ತವೆ. ಇದನ್ನು ಶ್ರೀ ಮಹರ್ಷಿಯು ಶ್ರೀರಾಮಪ್ರಭುವಿನ ಕಲ್ಯಾಣ ಗುಣಗಳನ್ನೂ ಕೊಂಡಾಡುವ ಸಂದರ್ಭದಲ್ಲಿ ಉಪಪಾದಿಸಿರುತ್ತಾರೆ. - **"ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ । ನ ಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ** (ಅಯೋಧ್ಯ) ಇಲ್ಲಿ ಕಥಂಚಿದು ಪಕಾರವು ಶರಣಾಗತಿಯು; ಶರಣಾಗತಿಯು ಸ್ವಾಮಿಗೇನೂ ಉಪಕಾರವಲ್ಲವು. ಆದುದರಿಂದ ಕಥಂಚಿತ್ ಎಂಬ ಪ್ರಯೋಗವು. ಆದರೂ ಸ್ವಾಮಿಯು ಉದಾರಾಸ್ಸರ್ವ ಏವೈತೇ ಎಂಬಲ್ಲಿ ಹೇಳಿದ ಹಾಗೆ ಉಪಕಾರವಾಗಿ ಭಾವಿಸುವನು. ಹಾಗೆ ಆಶ್ರಯಿಸಿದರೆ, ನ ಸ್ಮರತ್ಯಪಕಾರಾಣಾಂ ಶತ ಮಪ್ಯಾತ್ಮವತ್ತಯಾ—ಎಲ್ಲಾ ಅಪರಾಧಗಳನ್ನೂ ಸ್ಮರಿಸುವದಿಲ್ಲವು. ಸರ್ವಾನಿಷ್ಟ ಶಾಂತಿಯು ಎಂದು ಹೇಳಲ್ಪಟ್ಟಿತು. ಇದು "ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ" ಎಂಬ ವ್ಯಾಸಸೂತ್ರದಲ್ಲೂ (೪ ೧. ೧೩) ಉಪಪಾದಿತವು. ಶ್ರೀ ಭಾಷ್ಯಕಾರರು ಅಪರಾಧಪರಿಹಾರಾಧಿಕಾರದಲ್ಲಿ ನಿಪುಣತರವಾಗಿ ವಿಶದೀಕರಿಸಿರುತ್ತಾರೆ. ಇದೇ ಹಿತ ಉಪದೇಶವನ್ನೇ ಸೀತೆಯು ಅನುಗ್ರಹಮಾಡುದುದರಿಂದ ಪರಮ ದುರ್ಮಾರ್ಗಿಯಾದ ರಾವಣನಿಗೇನೇ ಮಾಡಿರುತ್ತಾಳೆ. " ವಿದಿತಸ್ಸಹಿ ಧರ್ಮಜ್ಞಶ್ಶರಣಾಗತವತ್ಸಲಃ । **ತೇನ ಮೈತ್ರೀ ಭವತು ತೇ ಯದಿ ಜೀವಿತುಮಿಚ್ಛಸಿ** । ಪ್ರಸಾದಯಸ್ವ ತ್ವಂ **ಚೈನಂ** ಶರಣಾಗತ**ವತ್ಸಲಮ್ । ಮಾಂಚಾಸ್ಮೈ ಪ್ರಯತೋ ಭೂತ್ವಾ ನಿರ್ಯಾತಯಿತುಮರ್ಹಸಿ** ॥ (ರಾ. ಸುಂ. ೨೧. ೨೧) ಶ್ರೀ ರಾಮಚಂದ್ರಪ್ರಭುವು ಶರಣಾಗತವತ್ಸಲನು; ಆದುದರಿಂದ ಅವನನ್ನು ಶರಣ ಹೊಂದು ಎಂಬ ಉಪದೇಶವು. ಇಲ್ಲಿ ಜೀವಿತುಂ ಎಂಬುದು ದಿವ್ಯವೈಕುಂಠದಲ್ಲಿ ಸುಖದಿಂದ ಶಾಶ್ವತವಾಗಿರುವದರರ್ಥವು. **"ಮಾಂಚ"** ಎಂಬುದರ ಅರ್ಥವು ಅಹಂ ಅಹಂ ಎಂದು ತೋರುವ ಆತ್ಮಾವನ್ನು **ಪ್ರಯತೋಭೂತ್ವಾ** - ಶ್ರೀರಾಮನಿಗೆ ನಮಸ್ಕರಿಸಿ, ಇಷ್ಟುದಿನವೂ ಈ ಆತ್ಮಾ ತನ್ನದೆಂದು ಚೋರಕೃತ್ಯಮಾಡಿದ ವಸ್ತುವನ್ನು, ನಿರ್ಯಾತಯಿತುಮರ್ಹಸಿ - ಹಿಂತಿರುಗಿ ಸಮರ್ಪಿಸಿ ಬಿಡಲು ಯೋಗ್ಯನಾಗು ಎಂಬ ಹಿತೋಪದೇಶವು. ಆದುದರಿಂದ ಶಾಂತಿ ಶಬ್ದಕ್ಕೆ, ಸರ್ವಕರ್ಮ ಬಂಧೋಪಶಮವೆಂಬ ವ್ಯಾಖ್ಯಾನವನ್ನೂ ಶಾಶ್ವತಂಸ್ಥಾನಂ ಎಂಬುದಕ್ಕೆ ಪರಮವ್ಯೋಮ ದಿವ್ಯ

**ಪ್ರಾಪ್ಸ್ಯಸಿ, ಯದಭಿಧೀಯತೇ ಶ್ರುತಿಶತೈಃ - (೧) ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯನ್ತಿ ಸೂರಯಃ", (೨) "ತೇ ಹ ನಾಕಂ ಮಹಿಮಾನ ಸ್ಸಚನ್ತೇ ಯತ್ರ ಪೂರ್ವೇ ಸಾಧ್ಯಾಸ್ಸನ್ತಿ ದೇವಾಃ"(೩)"ಯತ್ರ ಋಷಯಃ ಪ್ರಥಮಜಾ ಯೇ ಪುರಾಣಾಃ"**

---

ವೈಕುಂಠಪ್ರಾಪ್ತಿ ಎಂಬ ಭಾವವನ್ನಿಟ್ಟು ಹೇಳಿರುತ್ತಾರೆ ಅದಕ್ಕಾಗಿ ಅನೇಕಶ್ರುತಿಪ್ರಮಾಣಗಳನ್ನು ಉದಾಹರಿಸುತ್ತಾರೆ.-ಹಾಗೆ ಶ್ರುತಿಗಳನ್ನು ಉದಾಹರಿಸುವ ಸಂದರ್ಭದಲ್ಲಿ **ಶಾಶ್ವತಸ್ಥಾನವು** ಪರಮಾತ್ಮನ ಸ್ವರೂಪದಲ್ಲಿ ಐಕ್ಯವು ಎಂದು ಕೆಲವರು ಭಾವಿಸಬಹುದಾದ ಪ್ರಯುಕ್ತ, ಅಂತಹ ಅಭಿಪ್ರಾಯವು ಸರಿಯಲ್ಲವೆಂದೂ, **ಶಾಶ್ವತಸ್ಥಾನವು** ಒಂದು ದಿವ್ಯವಾದ ಅಪ್ರಾಕೃತಸ್ಥಾನ ವಿಶೇಷವೆಂದೂ, **ಅಲ್ಲಿ** ಪ್ರಾಪ್ಯನಾದ ಪರವಾಸುದೇವನು ನಿತ್ಯಮುಕ್ತರುಗಳಿಗೆ ತನ್ನ ಪರಿಪೂರ್ಣಾನುಭವವನ್ನುಂಟುಮಾಡಿ, ಅವರುಗಳ ಕೈಙ್ಕರ್ಯಗಳನ್ನು ಕೈಕೊಂಡವನಾಗಿ ಅವರಿಗೆ ನಿರತಿಶಯಾನಂದವನ್ನು ಕೊಡುವನೆಂಬ ಅನೇಕ ಶ್ರುತಿಪ್ರತಿಪಾದಿತ ಅರ್ಥವೇ ಸಮಂಜಸವಾದುದೆಂದೂ ತಿಳಿಸುವುದಕ್ಕಾಗಿ ಆ ಶ್ರುತಿಗಳನ್ನು ಉದಾಹರಿಸುತ್ತಾರೆ:—**ಯದಭಿಧೀಯತೇ ಶ್ರುತಿ ಶತೈಃ** - ಇಲ್ಲಿ ಯತ್ ಎಂಬುದು ತತ್ ಎಂಬುದರೊಂದಿಗೆ ಹೇಳದೆ ಪೃಥಕ್ಕಾಗಿ ಹೇಳಿರುವದರಿಂದ ಪ್ರಸಿದ್ಧಾರ್ಥವನ್ನು ಬೋಧಿಸುತ್ತದೆ; ಶಾಶ್ವತವಾದ ಸ್ಥಾನವು ಒಂದುಂಟೆಂಬ ಪ್ರಸಿದ್ಧಾರ್ಥವು; **ಶ್ರುತಿ ಶತೈಃ**-ಅನೇಕ ಶ್ರುತಿಗಳಿಂದ, **ಅಭಿಧೀಯತೇ** ಹೇಳಲ್ಪಡುತ್ತದೆ, ಆ ಶ್ರುತಿಗಳುಯಾವುವೆಂದರೆ ಹೇಳುತ್ತಾರೆ.— (೧) **ವಿಷ್ಣೋಃ** ವಿಷ್ಣುವಿನ, ತತ್ – ಮಹಾ ಪ್ರಸಿದ್ಧವಾದ. **ಪರಮಂಪದಂ** - ಸರ್ವೋತ್ಕೃಷ್ಟಸ್ಥಾನವಾದ ದಿವ್ಯವೈಕುಂಠವನ್ನು, **ಸೂರಯಃ**-ನಿತ್ಯಸೂರಿಗಳು, ಮುಕ್ತರನ್ನೂ ಇದರಿಂದ ಹೇಳಿದಂತಾಯಿತು. **ಸದಾಪಶ್ಯನ್ತಿ**-ಶಾಶ್ವತವಾಗಿ ನೋಡುತ್ತಿರುತ್ತಾರೆ; ಪರಿಪೂರ್ಣಬ್ರಹ್ಮಾನುಭವವನ್ನು ಮಾಡುತ್ತಾ ಆತನಿಗೆ ಕೈಙ್ಕರ್ಯವನ್ನೆಸಗುತ್ತಾ ಶಾಶ್ವತವಾಗಿ ಆನಂದಿಸುತ್ತಿರುತ್ತಾರೆಂಬ ಭಾವವು

**ಇಲ್ಲಿ ವಿಷ್ಣೋಃ ಪರಮಪದಮ್** ಎಂದು ಸಾಮಾನಾಧಿಕರಣ್ಯವಿಲ್ಲದೆ ವೈಯ್ಯಧಿಕರಣವು, ಒಂದು ಷಷ್ಠೀ ವಿಭಕ್ತಿಯಾಗಿಯೂ ಪದಮ್ ಎಂಬುದು ದ್ವಿತೀಯಾ ವಿಭಕ್ತಿಯೂ ಆಗಿರುವುದರಿಂದ ಇಲ್ಲಿ ಸ್ಥಾನ ವಿಶೇಷವೆಂದು ಅರ್ಥಮಾಡಬೇಕೇ ವಿನಾ ಸ್ವರೂಪೈಕ್ಯವನ್ನು ಹೇಳಿ ಅರ್ಥಮಾಡಲು ಸಾಧ್ಯವೇ ಇಲ್ಲವು. ಅದೂ ಅಲ್ಲದೇ ಸೂರಿ ಶಬ್ದದಲ್ಲೇ ಮುಕ್ತರೂ ಅಂತರ್ಗತವಾದುದರಿಂದ ಅವರಿಗೂ ವಿಷ್ಣುವಿನ ದಿವ್ಯಸ್ಥಾನವಾದ ವೈಕುಂಠಲೋಕ ಪ್ರಾಪ್ತಿಯುಂಟೆಂಬುದು ಸಿದ್ಧವಾದುದರಿಂದ ಮುಕ್ತರಿಗೆಲ್ಲಾ ಈಗ ಸದ್ಯಕ್ಕೆ ಚತುರ್ಮುಖ ಲೋಕವೇ ವಿನಾ ವೈಕುಂಠಪ್ರಾಪ್ತಿಯಿಲ್ಲವೆಂಬ ಮತ್ತು ಚತುರ್ಮುಖನೊಂದಿಗೇನೆ ಸ್ವರೂಪೈಕ್ಯವು ಎಂದು ಹೇಳುವ ವಾದವೂ ಇದರಿಂದ ನಿರಸ್ತವು. (೨) **ಯತ್ರ** - ಯಾವ ದಿವ್ಯವೈಕುಂಠದಲ್ಲಿ, **ಪೂರ್ವೇ**-ಅನಾದಿಯಾಗಿ ಇರುತ್ತಿರುವ **ಸಾಧ್ಯಾದೇವಾಃ**-ಎಂದಿಗೂ ಬಂಧವೇ ಬೇಡವೆಂಬ ಸರ್ವೇಶ್ವರನ ನಿತ್ಯ ಸಙ್ಕಲ್ಪಕ್ಕೆ ಸೇರಿದ ನಿತ್ಯ ಸೂರಿಗಳು. **ಸಂತಿ** - ಸದಾ ಸಂಸಾರಗಂಧವೇ ಇಲ್ಲದೆ ಪರಮಾತ್ಮಾನುಭವವನ್ನು ಮಾಡುತ್ತಾ ಇರುತ್ತಾರೆಯೋ, **ತಂನಾಕಂ** – ಅಂತಹ ದಿವ್ಯವೈಕುಂಠವನ್ನು **ತೇ** - ಭರಸಮರ್ಪಣೆ ಮಾಡಿದ ಆ ಯಜ್ಞಾನುಷ್ಠಾತೃಗಳು **ಮಹಿಮಾನಃ** - ಅರ್ಚಿರಾದಿ ಮಾರ್ಗವನ್ನು ಸೇರಿ ಅಲ್ಲಿ ಆ ತಿವಾಹಿಕರುಗಳಿಂದ ಪೂಜಿಸಲ್ಪಟ್ಟವರಾಗಿ, **ಸಚಂತೇ** - ಹೋಗಿ ಅವರೊಂದಿಗೆ ಸೇರುವರು. ಈ ಶ್ರುತಿಯೂ ಕೂಡ ಸ್ಥಾನವಿಶೇಷ ಪ್ರಾಪ್ತಿಯನ್ನು ಬೋಧಿಸುತ್ತದೇ ವಿನಾ, ಸ್ವರೂಪೈಕ್ಯವನ್ನಾಗಲಿ, ಚತುರ್ಮುಖ ಲೋಕಪ್ರಾಪ್ತಿಯನ್ನಾಗಲಿ ಬೋಧಿಸುವದಿಲ್ಲವು. (೩) **ಯತ್ರ** - ಯಾವ ದಿವ್ಯ ವೈಕುಂಠದಲ್ಲಿ, **ಪ್ರಥಮಜಾಃ** ಮೊದಲಿನಿಂದಲೂ ಅನಾದಿಯಾಗಿ ಬಂದಿರುವ, **ಪುರಾಣಾಃ** - ಪುರಾತನರಾದ **ಋಷಯಃ** - ಮಹತ್ತಾದ ಜ್ಞಾನಿ

---

(೧) ಋಗ್ವೇದ ಮತ್ತು ಸುಬಾಲ ೭-೩೦. (೨) ಪುರುಷಸೂಕ್ತ, ಅಷ್ಟಾದಶೀಋಕ್.

(೪) "ಪರೇಣನಾಕಂ ನಿಹಿತಂ ಗುಹಾಯಾಂ" (೫) "ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ (೬)"ಅಥ ಯದತಃ ಪರೋ ದಿವೋ ಜ್ಯೋತಿ ರ್ದೀಪ್ಯತೇ"(೭)"ಸೋಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್" ಇತ್ಯಾದಿಭಿಃ ||೬೨||

---

ಗಳಾದ ನಿತ್ಯಸೂರಿಗಳೋ" (೪) ಈ ಪೂರಾಶ್ಲೋಕವು ಯಾವುದೆಂದರೆ – **ನಕರ್ಮಣಾ ನಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ। ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜತೇಯದ್ಯತಯೋವಿಶನ್ತಿ"** ಪರೇಣನಾಕಂ - ವಿಷ್ಣುಲೋಕಗಳಿಗೂ ಮೇಲೆ ಇರುವ **ಗುಹಾಯಾಂ ನಿಹಿತಂ** - ಅನೇಕರಿಗೆ ತಿಳಿಯದೇ ಗೋಪ್ಯವಾಗಿರುವ ಸ್ಥಾನ ವಿಶೇಷದಲ್ಲಿ, **ವಿಭ್ರಾಜತೇ** - ಪ್ರಕಾಶಿಸುತ್ತಿರುತ್ತದೋ, ಅಂತಹ **ಯದ್ಯತಯೋ ವಿಶನ್ತಿ** - ಯಾವ ಪರಮಪದವನ್ನು ಯತಿಗಳು ಪ್ರವೇಶಿಸಿ ಅಮೃತತ್ವವನ್ನು ಎಂದರೆ ಪರಮಾತ್ಮನಿಗೆ ಸಮವಾದ ಆನಂದವನ್ನು ಹೊಂದುವರೋ, ಅಂತಹ ಅಮೃತತ್ವವು, **ನಕರ್ಮಣಾ ನಪ್ರಜಯಾ ನಧನೇನ** - ಯಜ್ಞದಾನ ತಪಸ್ಸೇ ಮೊದಲಾದ ಕರ್ಮಯೋಗ ಪ್ರಕ್ರಿಯೆಗಳಿಂದ ಮಾತ್ರವೇ ಹೊಂದಲು ಸಾಧ್ಯವಿಲ್ಲವು. **ಇನ್ನೂ** ಏತರಿಂದ ಸಾಧ್ಯವೆಂದರೆ, **ತ್ಯಾಗೇನೈವ** - ಕರ್ಮಯೋಗ ಭಕ್ತಿಯೋಗಗಳನ್ನು ಅನುಷ್ಠಿಸಿ ಕರ್ಮಸನ್ಯಾಸ ಮೂಲಕವೆಂದರೆ ಕರ್ಮದಲ್ಲಿ ಕರ್ತೃತ್ವ,ಮಮತಾಫಲಗಳನ್ನು ತ್ಯಾಗಮಾಡಿ, **ಏಕೇ** - ಕೆಲವರು ಮಾತ್ರವೇ, **ಅಮೃತತ್ವಮಾನಶುಃ** - ಶಾಶ್ವತಪದವನ್ನು ಹೊಂದಿದರು. ಇದರಿಂದ ನಿತ್ಯವಿಭೂತಿ ಎಂಬ **ಲೋಕ** ಬೇರೆ ಇಲ್ಲವೆಂಬ ವಾದವೂ ನಿರಸ್ತವು. (೫) "**ಅಸ್ಯ** - ಈ ಜೀವಾತ್ಮನಿಗೆ, **ಪರಮೇವ್ಯೋಮನ್** - ದಿವ್ಯವೈಕುಂಠದಲ್ಲಿ, **ಯಃ** - ಯಾವ ಪರಮಪುರುಷನು, **ಅಧ್ಯಕ್ಷಃ** – ಸ್ವಾಮಿಯೋ,(೬)ಈ ಪೂರಾಶ್ರುತಿ ವಾಕ್ಯವು **ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು** ಸರ್ವತಃ **ಪೃಷ್ಠೇಷು** ಅನುತ್ತಮೇಷು **ಲೋಕೇಷ್ವಿದಂ ವಾವ ತದ್ಯದಿದಮಸ್ಮಿನ್ನಂತಃ ಪುರುಷೇಜ್ಯೋತಿಃ"** ಇದು **ಜ್ಯೋತಿಶ್ಚರಣಾಭಿಧಾನಾತ್"** ಎಂಬ ಬ್ರಹ್ಮಸೂತ್ರದ ವಿಷಯ ವಾಕ್ಯವು. ಇಲ್ಲಿ ಜ್ಯೋತಿಶ್ಶಬ್ದದಿಂದ ಹೇಳಲ್ಪಟ್ಟವನು ಶ್ರೀಮನ್ನಾರಾಯಣನೇ ಎಂದು ಸ್ಥಾಪನೆಯನ್ನು ಮಾಡುವ ಸಂದರ್ಭವು. ವಿಶ್ವತಃ **ಪೃಷ್ಠೇಷು** – ವ್ಯಷ್ಟಿ ತತ್ವಕ್ಕೂ ಹೊರಗೂ, ಮತ್ತು ಸರ್ವತಃ **ಪೃಷ್ಠೇಷು** – ಪರಿಶೇಷನ್ಯಾಯದಿಂದ ಸರ್ವಶಬ್ದವು ಸಮಷ್ಟಿತತ್ವಪರವು, ಆದುದರಿಂದ ಸಮಷ್ಟಿತತ್ವಕ್ಕೆ ಆಚೆಗೂ ಇರುವ, **ಅನುತ್ತಮೇಷು** ಸರ್ವೋತ್ಕೃಷ್ಟವಾದ, **ಲೋಕೇಷು** – ನಿತ್ಯವಿಭೂತಿಯಲ್ಲಿರುವ, **ಅತಃಪರೋದಿವೋಜ್ಯೋತಿಃ** - ಹೀಗೆ ಎಲ್ಲಾದಕ್ಕೂ ಮೇಲೆ ಇರುವ ಪರಮಪದ ಸಂಬಂಧವುಳ್ಳ ಜ್ಯೋತಿಸ್ಸಾದ ಯಾವ ಪರಮಪುರುಷನ್ನು **ದೀಪ್ಯತೇ**-ಪ್ರಕಾಶಿಸುತ್ತಿದ್ದಾನೋ **ತತ್**-ಇದಂ ವಾವ **ತದ್ಯದಿದ ಮಸ್ಮಿನ್ನನ್ತಃ ಪುರುಷೇಜ್ಯೋತಿಃ** ಮತ್ತು ಯಾವುದು ಪುರುಷನ ಕುಕ್ಷಿಯಲ್ಲಿ ವೈಶ್ವಾನರ ಶಬ್ದದಿಂದ ಬೋಧಿತನಾಗಿ ಜಾಠರ ತೇಜಶ್ಶರೀರಕನಾಗಿದ್ದಾನೋ, ಅದೂ ಜೋತಿಸ್ಸೇ ಎಂಬುದು ತಾತ್ಪರ್ಯವು. ಈ ದ್ಯು ಸಂಬಂಧವಿರುವ ಎಂದರೆ ಪರಮಪದವಾದ ಪರಂಜ್ಯೋತಿಸ್ಸನ್ನು ಜಾಠರಾಗ್ನಿ ಶರೀರಕ ಪರಮಾತ್ಮನನ್ನಾಗಿ ಉಪಾಸಿಸತಕ್ಕದ್ದೆಂದು ಹೇಳುವ ಪ್ರಕರಣವು. "**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ**" ಎಂಬಲ್ಲಿ (ಗೀ ) ಈ ತತ್ವವೇ ಉಪದೇಶಿಸಲ್ಪಟ್ಟಿರುತ್ತದೆ. ಇಲ್ಲಿ **ಪರೋ ದಿವೋಜ್ಯೋತಿಃ** ಎಂದು ದ್ಯು ಸಂಬಂಧವನ್ನು ಹೊಂದಿದ ಪರಂಜ್ಯೋತಿಸ್ಸೆಂದು **ಹೇಳಿ**, ಆ ದ್ಯು ಲೋಕವು **ವಿಶ್ವತಃ ಪೃಷ್ಠೇಷು** ಅನುತ್ತ**ಮೇಷುಲೋಕೇಷು** ಎಂದು ಅದನ್ನು ವಿಶೇಷಿಸಿ ಹೇಳಿರುವದರಿಂದ ದ್ಯು ಶಬ್ದವು ದಿವ್ಯ ವೈಕುಂಠಲೋಕವಾದ ಸ್ಥಾನವಿಶೇಷವೆಂದು ತೋರಿಸುತ್ತದೆ. ಆದುದರಿಂದ **ಶಾಶ್ವತಂ ಸ್ಥಾನಂ** ಎಂಬುದರಿಂದ ವೈಕುಂಠಲೋಕವೆಂದು ಅರ್ಥಮಾಡ

---

(೩) (೪) ತೈ ನಾರಾಯಣೀಯ ೪. ೫ (೬) ಛಾಂ. ೩. ೧೩. ೭ (೭) ಕಠ ೧. ೩.೯.

ಬೇಕೇ ವಿನಾ, ಸ್ವರೂಪವೈಕ್ಯವೆಂದು ಅರ್ಥಮಾಡಲು ಸಾಧ್ಯವಿಲ್ಲವು. (೭) ಸಃ - ವಿಜ್ಞಾನವಾನ್ ಆಗಿ, ಸಮನಸ್ಕನಾಗಿ, ಸದಾಶುಚಿಯಾಗಿರುವ ಪ್ರಸನ್ನನು, **ಅಧ್ವನಃ - ಸಂಸಾರ** ಮಾರ್ಗದ, **ಪಾರಮಾಪ್ನೋತಿ** - ಆಚೇ ದಡವನ್ನು ಹೋಗಿ ಸೇರುವನು; ಅದು ಯಾವುದೆಂದರೆ ತತ್ - ಅದು, ವಿಷ್ಣೋಃ - ವಿಷ್ಣುವಿನ, **ಪದಂ** - ಪದವು. ಇಲ್ಲಿ ಪದ ಶಬ್ದಕ್ಕೆ ನಿಗಮಾನ್ತ ದೇಶಿಕರು ಮೂರುವಿಧವಾಗಿ ಅರ್ಥಮಾಡಬಹುದೆಂದು ಉಪದೇಶಿಸಿರುತ್ತಾರೆ; (೧) ಪದ್ಯತೇ ಗಮ್ಯತೇ, ಚೇತನನಿಂದ ವಿಷ್ಣುವು ಪ್ರಾಪ್ಯವಾಗಿ ಹೊಂದಲ್ಪಡುವನಾದುದರಿಂದ, **ವಿಷ್ಣೋಃಪದಮ್** ಎಂದರೆ ವಿಷ್ಣುವನ್ನೇ ಪ್ರಾಪ್ಯವಾಗಿ ವಿಷ್ಣುಸಾಯುಜ್ಯವನ್ನು ಹೊಂದುವನು. (೨) ಸಮಸ್ತ ಉಪನಿಷತ್ಪ್ರಮಾಣಗಳ ಸಾಮಂಜಸ್ಯವನ್ನು ಬಯಸುವ ವಿಶಿಷ್ಟಾದ್ವೈತಿಗಳ ಮೋಕ್ಷಾಭಿಪ್ರಾಯವು ಒಂದು ಸ್ಥಾನವಿಶೇಷವಾದ ದಿವ್ಯವೈಕುಂಠದಲ್ಲಿ ಲಕ್ಷ್ಮೀಯುಕ್ತನಾದ ಪರವಾಸುದೇವಾನುಭವವು ಎಂದಾದುದರಿಂದ ಆ ಸ್ಥಾನವಿಶೇಷವನ್ನು ಪರಮಪದ ಶಬ್ದದಿಂದಲೂ ಹೇಳಬಹುದು. ಕೌಷೀತಕೀ ಬ್ರಾಹ್ಮಣದಲ್ಲಿ ಈ ಸ್ಥಾನವಿಶೇಷದ ವರ್ಣನೆಯನ್ನು ಕಾಣಬಹುದು. ಪರಿಪೂರ್ಣ ಬ್ರಹ್ಮಾನುಭವವು ನಿತ್ಯಮುಕ್ತರಿಗೆ ಒಂದು ಸ್ಥಾನವಿಶೇಷದಿಂದಲೇ ದೊರೆಯುತ್ತದೆಂದು ಶ್ರುತಿಪುರಾಣ ಇತಿಹಾಸಗಳಲ್ಲೆಲ್ಲಾ ವ್ಯಕ್ತವು. ಶ್ರೀ ಪರಾಶರರು **ಏಕಾನ್ತಿನಸ್ಸದಾ ಬ್ರಹ್ಮಧ್ಯಾಯಿನೋ ಯೋಗಿನೋಹಿಯೇ । ತೇಷಾಂ ತತ್ಪರಮಂ ಸ್ಥಾನಂಯದ್ವೈಪಶ್ಯನ್ತಿ ಸೂರಯಃ**" (ವಿ.ಪು. ೧. ೬. ೩೯) ಪರಮಪುರುಷನನ್ನು ಉಪಾಸಿಸುವ ಭಕ್ತಿಯೋಗನಿಷ್ಠನಿಗೆ ಸರ್ವೋತ್ಕೃಷ್ಟಸ್ಥಾನವಾದ ಮತ್ತು ನಿತ್ಯಸೂರಿಗಳಿಗೆ ಸೇವೆಯನ್ನೀಯುತ್ತಿರುವ ದಿವ್ಯವೈಕುಂಠಲೋಕವೆಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ ಯಾವ ಯಾವ ಅಧಿಕಾರಿಗಳಿಗೆ ಯಾವ ಯಾವಲೋಕವೆಂದು ಹೇಳುವ ಪ್ರಕರಣವಾದುದರಿಂದ **ಪರಮಂ ಸ್ಥಾನಂ** ಎಂಬುದಕ್ಕೆ ಇನ್ನು ಯಾವ ಅರ್ಥವನ್ನೂ ಔಪಚಾರಿಕವಾಗಿ ಹೇಳಲು ಸಾಧ್ಯವಿಲ್ಲವು. ಹಾಗೆಯೇ ಶ್ರೀ ವ್ಯಾಸರೂ (ಮೋಕ್ಷ ೧೯೬-೪) **"ರಮ್ಯಾಣಿ ಕಾಮಚಾರೀಣಿ ವಿಮಾನಾನಿ ಸಭಾಸ್ತಥಾ। ಆಕ್ರೀಡಾ ವಿವಿಧಾ ರಾಜನ್ ಪದ್ಮಿನ್ಯಶ್ಚಾಮಲೋದಕಾಃ । ಏತೇವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ**" ನಿತ್ಯಸೂರಿಗಳಿರುವ ಸ್ಥಾನವಾದ ದಿವ್ಯವೈಕುಂಠವನ್ನು ವರ್ಣಿಸಿ, ಇನ್ನೂ ಇತರ ಲೋಕಗಳುಂಟೆಂದು ಹೇಳಿ, ವೈಕುಂಠಕ್ಕಿಂತ ಇತರವಾದ ಎಲ್ಲಾ ಲೋಕಗಳೂ ಎಂದರೆ ಲೋಕಪಾಲರ ಮರುತ್ತುಗಳ, ಸಾಧ್ಯರ ಅಶ್ವಿನೀದೇವತೆಗಳ, ರುದ್ರಾದಿತ್ಯವಸುಗಳ, ಹೀಗೆ ಇವರೆಲ್ಲರ ಲೋಕಗಳನ್ನೂ ಆ ಪರಮಪದಕ್ಕೆ ಹೋಲಿಸಿದರೆ, ಅವೆಲ್ಲವೂ ನರಕ ಸಮಾನವೆಂದು ಹೇಳಲ್ಪಟ್ಟಿರುತ್ತದೆ. ದ್ಯು ಪರಮವ್ಯೋಮ ನಿತ್ಯವಿಭೂತಿ, ವೈಕುಂಠ ಮೊದಲಾದ ಶಬ್ದಗಳಿಂದ ಒಂದು ಅಪ್ರಾಕೃತಲೋಕ ಉಂಟೆಂದೂ, ಅಲ್ಲಿ ಪರಮಪುರುಷನು ಲಕ್ಷ್ಮೀವಿಶಿಷ್ಟನಾಗಿರುವ ಪರವಾಸುದೇವರೂಪನು, ಶಾಶ್ವತವಾದ ಎಂದಿಗೂ ಬದಲಾಯಿಸದೆ ತನಗೇನೇ ಅಸಾಧಾರಣವಾದ ರೂಪದಿಂದ ನಿತ್ಯಮುಕ್ತರುಗಳಿಗೆ ಸೇವೆಯನ್ನು ಕೊಟ್ಟು ಆನಂದಗೊಳಿಸುತ್ತಿರುವನೆಂಬುದು ಶ್ರುತೀತಿಹಾಸಪುರಾಣಸಿದ್ಧವು. ಇದೂ ಮಿಥ್ಯಾ ಶಬ್ದದಲ್ಲೇ ಅಂತರ್ಗತವೆಂದು ಕೆಲವರು ಹೇಳುವರು, ಇದು ಸಾಧ್ಯವಿಲ್ಲವು. "ಪರಮಂಪದಂ ಎಂಬುದಕ್ಕೆ ಈ ಅರ್ಥ ಉಂಟಾಗಲು ವ್ಯುತ್ಪತ್ತಿಯು ಹೇಗೆ ಎಂದರೆ **ಪದ್ಯತೇ ಅಸ್ಮಿನ್ - ಈ ಸ್ಥಾನ** ವಿಶೇಷದಲ್ಲಿ ಮುಕ್ತರು ಪರಮ ಪುರುಷನನ್ನು ಪ್ರಾಪ್ಯವಾಗಿ ಹೊಂದುತ್ತಾರೆಯಾದುದರಿಂದ ಪರಮ ಪದವು. (೩) "**ವಿಷ್ಣೋಃ ಪರಮಪದಮ್ - ನಿರಂಜನಃ ಪರಮಂಸಾಮ್ಯಮುಪೈತಿ** ಎಂಬ ಶ್ರುತ್ಯನುಸಾರವಾಗಿ ಆ ಪರಿಪೂರ್ಣಬ್ರಹ್ಮಾನುಭವಕ್ಕೆ ಅನುಗುಣವಾದ ಸರ್ವಜ್ಞತ್ವಾದಿ ಗುಣಗಳುಳ್ಳ ವಿಷ್ಣುವಿನ ಜ್ಞಾನಾನಂದಾದಿ ಸ್ವರೂಪ ಸ್ವಭಾವಕ್ಕೆ ಸಮಾನವಾದ ಗುಣಗಳುಳ್ಳ ಸ್ಥಿತಿಯು ಪ್ರಾಪ್ತವಾಗುವದರಿಂದ ತಾನೇ ವಿಷ್ಣುವಿಗೆ ಸಮಾನವಾದ ಉತ್ಕೃಷ್ಟಾವಸ್ಥೆಯನ್ನು ಹೊಂದುವನೆಂದೂ ಅರ್ಥಮಾಡಬಹುದು. ಇಲ್ಲಿಯೂ ಪದ್ಯತೇ–ಗಮ್ಯತೇ ಎಂಬ ವ್ಯುತ್ಪತ್ತಿ

ಯಿಂದಲೇ ಈ ಅರ್ಥವೂ ಸಹ ಎಂದು ಭಾವಿಸತಕ್ಕದ್ದು; ಇತ್ಯಾದಿಭಿಃ-ಹೀಗೆ ಇನ್ನೂ ಅನೇಕ ಶ್ರುತಿ ಪ್ರಮಾಣಗಳಿರುವದರಿಂದ "ತಮಸಃ ಪರಸ್ತಾತ್""ತಮಸಃಪರಾಕೇ" ಇತ್ಯಾದಿಗಳ ವದರಿಂದ. ಈ ಶ್ಲೋಕದಲ್ಲಿ ಸ್ಥಾನಂ ಶಾಶ್ವತಂ ಎಂಬುದು ದಿವ್ಯವೈಕುಂಠವನ್ನೇ ಬೋಧಿಸುತ್ತದೆ, ಶ್ರೀಶಂಕರಾಚಾರ್ಯರವರ ವ್ಯಾಖ್ಯಾನವೂ ಕೂಡ"ವಿಷ್ಣೋಃಪರಮಂ ಪದಂ ಪ್ರಾಪ್ಸ್ಯಸಿ ಶಾಶ್ವತಂ ನಿತ್ಯಂ" ಎಂದು ಇರುತ್ತದೆ. ಷಷ್ಠೀತತ್ಪುರುಷದಿಂದ ವಿಷ್ಣುವೇ ಬೇರೆ, ಪದವೇ ಬೇರೆ, ಆದುದರಿಂದ ಸ್ವರೂಪೈಕ್ಯವು ಕೂಡುವದು ಕಷ್ಟತರವು. ಶ್ರೀಶಂಕರಾಚಾರ್ಯರವರು ಪರಮಪದವಿಲ್ಲವೆಂದುಹೇಳಲಿಲ್ಲವು. ನಿತ್ಯವಿಭೂತಿ ಲೀಲಾ ವಿಭೂತಿಗಳು ವಾಸ್ತವವಾಗಿ ಇಲ್ಲವೆಂಬ ವಾದವು ಶ್ರೀ ಶಂಕರಾಚಾರ್ಯರವರ ಅನುಯಾಯಿಗಳಿಗೆ ಮಾತ್ರನೇ. ಮಿಥ್ಯಾ ಶಬ್ದವನ್ನೇನೋ ಶ್ರೀ ಶಂಕರಾಚಾರ್ಯರವರು ಉಪಯೋಗಿಸಿರುತ್ತಾರೆ. ಇದರಿಂದ ಶೂನ್ಯವೆಂದು ಅವರು ಹೇಳಲಿಲ್ಲವು. ಸ್ವರೂಪ ಅಥವಾ ಸ್ವಭಾವಗಳಲ್ಲಿ ವಿಕಾರವುಳ್ಳ ದ್ರವ್ಯವೆಲ್ಲಾ ಮಿಥ್ಯೆ ಎಂದು ಹೇಳಿರುತ್ತಾರೆ. ಆದುದರಿಂದ ಅವರ ಅಭಿಪ್ರಾಯಕ್ಕೂ ನಮ್ಮ ಅಭಿಪ್ರಾಯಕ್ಕೂ ಶ್ರುತಿಯಮೂಲಕ ಐಕಕಂಠ್ಯವಿರುತ್ತದೆ. ಅವರ ಅನುಯಾಯಿಗಳು ಅವರ ಅಭಿಪ್ರಾಯವನ್ನೇ ಸರಿಯಾಗಿ ಗ್ರಹಿಸಲಿಲ್ಲವೆಂದು ಅವರ ಸಿದ್ಧಾಂತಿಗಳೇ ಹೇಳಿರುತ್ತಾರೆ. ದಾಸನ ಅಭಿಪ್ರಾಯವಲ್ಲವು. ಈ ಶ್ಲೋಕಭಾಷ್ಯದಲ್ಲಿ ಶ್ರೀ ಶಂಕರಾಚಾರ್ಯರವರು ಹೇಳಿರುವದು ನಿರ್ವಿವಾದವು :- ತತ್ಪ್ರಸಾದಾತ್ - ಈಶ್ವರಾನುಗ್ರಹಾತ್, ಪರಾಂ - ಪ್ರಕೃಷ್ಟಾಂ, ಶಾಂತಿಂ - ಉಪರತಿಂ, ಸ್ಥಾನಂಚ - ಮಮ ವಿಷ್ಣೋಃ ಪರಮಂ ಪದಂ, ಪ್ರಾಪ್ಸ್ಯಸಿ, ಶಾಶ್ವತಂ - ನಿತ್ಯಂ ಎಂದಿರುತ್ತದೆ.

**ಅವತಾರಿಕೆಯು**—ಹೀಗೆ ಅರ್ಜುನನಿಗೆ ಯುದ್ಧ ಪ್ರೋತ್ಸಾಹನ ವ್ಯಾಜದಿಂದ ಮೋಕ್ಷಪ್ರಾಪ್ತಿಗೆ ಬೇಕಾದ ಸಮಸ್ತ ಸಾಧನವನ್ನು ಉಪದೇಶಿಸಿ, ನಿಗಮನದಲ್ಲಿ ಹೇಳುತ್ತಾರೇನೆಂದರೆ, ಓ ಅರ್ಜುನನೇ ಮೋಕ್ಷಪ್ರಾಪ್ತಿಗೆ ಬೇಕಾದ, ಅತ್ಯಂತ ರಹಸ್ಯ ವಿಷಯಗಳಾದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ವಿಷಯಗಳನ್ನೆಲ್ಲಾ ಹೇಳಿ ಮುಗಿಸಿದೆನು. ದುಷ್ಟನಿಗ್ರಹವಾದ ಧರ್ಮಯುದ್ಧವು ಕ್ಷತ್ರಿಯನಿಗೆ ನಿತ್ಯನೈಮಿತ್ತಿಕಗಳಲ್ಲೇ ಸೇರಿ ಇತಿಕರ್ತವ್ಯತಾರೂಪದಲ್ಲಿ ಅವಶ್ಯಕವಾಗಿ ನಡೆಸತಕ್ಕದ್ದೆಂದೂ, ನಿತ್ಯನೈಮಿತ್ತಿಕಗಳು ಎಂದಿಗೂ ಬಿಡತಕ್ಕದ್ದಲ್ಲವೆಂದೂ ಹೀಗೆ ಸರ್ವವೂ ನಿನಗೆ ಪರಮಹಿತರೂಪವಲ್ಲಿ ಉಪದೇಶಿಸಲ್ಪಟ್ಟಿತು. ಇನ್ನು ಉಳಿದಿರುವದೇನೆಂದರೆ ನನ್ನ ಉಪದೇಶವನ್ನು ಮನಸ್ಸಿಗೆ ತಂದುಕೊಂಡು ಚೆನ್ನಾಗಿ ವಿಮರ್ಶಿಸಿ ನೀನು ಪ್ರಾಜ್ಞನಾದ ಪ್ರಯುಕ್ತ, ನಾನು ಹಿಂದೆ (೫೯, ೬೦, ೬೧ ನೆಯ ಶ್ಲೋಕಗಳಲ್ಲಿ)ಹೇಳಿದುದನ್ನುಗಮನಿಸಿ, ನನ್ನ ಸಙ್ಕಲ್ಪಾನುಸಾರ ಯುದ್ಧ ನಡೆಯದೆ ಇರುವದಿಲ್ಲವೆಂಬುದನ್ನು ಚೆನ್ನಾಗಿ ವಿಮರ್ಶಿಸಿ ತಿಳಿದು, ನೀನು ಕ್ಷತ್ರಿಯವರ್ಣಕ್ಕೆ ಸೇರಿದವನಾದಪ್ರಯುಕ್ತ ಕರ್ಮಾದಿಗಳಲ್ಲಿ ಯಾವುದಕ್ಕೆ ನೀನು ಅರ್ಹನೆಂದು ತಿಳಿದುಕೊಂಡು ಎಂದರೆ ನಾನು ಹಿಂದೆ ನೀನು ಕರ್ಮಯೋಗಕ್ಕೇ ಅರ್ಹನು ಎಂದುಹೇಳಿದುದನ್ನೂಜ್ಞಾಪಕಕ್ಕೆ ತಂದುಕೊಂಡು ನೀನು ಕರ್ಮಯೋಗಕ್ಕೆ ಮಾತ್ರವೇ ಅರ್ಹನಾದರೆ ಹಾಗೆಯೇ, ಅಥವಾ ಜ್ಞಾನಯೋಗಕ್ಕೂ, ಅರ್ಹನಾಗಿದ್ದರೆ ಅದನ್ನೂ, ಅನಂತರ ಭಕ್ತಿಯೋಗವನ್ನೂ ಹೀಗೆ ಪ್ರಾಜ್ಞನಾದ ನೀನು ಪಡೆಯಬೇಕಾದ ಶ್ರೇಯಸ್ಸಿಗೆ ಪ್ರತಿಬಂಧಕ ಪಾಪಗಳಿಂದ ಬಿಡುಗಡೆಯನ್ನೂ ಇಷ್ಟಪ್ರಾಪ್ತಿಯನ್ನೂ, ಅಪೇಕ್ಷಿಸುವದರಿಂದ, ಅದಕ್ಕನುಸಾರವಾಗಿ ನಾನು ಉಪದೇಶಿಸಿದ ರೀತಿಯಲ್ಲಿ ನಡೆಸು ಎಂದು ಇಲ್ಲಿ ಹೇಳಿ, ಇದರ ಮುಂದಿನ ಶ್ಲೋಕದಲ್ಲಿ ನಿಗಮನ ರೂಪದಲ್ಲಿ ಭಕ್ತಿಯೋಗವನ್ನೇ ಅನುಷ್ಠಿಸು ಎಂದು ತಿಳಿಸುತ್ತಾರೆ. ಆದರ್ದರಿಂದ ನೀನು ಕರ್ಮಯೋಗವನ್ನೇ ಆರಂಭಿಸಿ ಅನುಷ್ಠಿಸಬೇಕಾಗಿ, ಆ ಕರ್ಮಯೋಗದಲ್ಲೇ ಸೇರಿ ಕ್ಷತ್ರಿಯನಾದ ನಿನಗೆ ಇತಿಕರ್ತವ್ಯತಾರೂಪದಲ್ಲಿರುವ ಲೋಕಕಂಟಕರನ್ನು ನಿರ್ಮೂಲ ಮಾಡುವದಕ್ಕಾಗಿ ಧರ್ಮಯುದ್ಧವನ್ನು ನೀನು ಮುಖ್ಯವಾಗಿ ಅವಲಂಬಿಸತಕ್ಕದ್ದೆಂಬ ತಾತ್ಪರ್ಯವು.

**ಮೂ. ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩ ॥**

---

**ಇತಿ** - ಈ ೧೭ ಅಧ್ಯಾಯಗಳಲ್ಲೂ ಉಪಪಾದಿಸಿದುದನ್ನೆಲ್ಲಾ **ಮಾಯಾ** - ನಿನಗೆ ಪ್ರಿಯ ಸುಹೃತ್ತಾಗಿ, ನಿನ್ನ ನಿಶ್ಶ್ರೇಯಸ ಪ್ರಾಪ್ತಿಯಲ್ಲೇ ತುಂಬಾ ಆದರವುಳ್ಳ ನನ್ನಿಂದ **ತೇ**- ಪ್ರಾಜ್ಞನಾಗಿ ಮುಮುಕ್ಷುವಾಗಿ ಧರ್ಮ ಶಂಕಾಕುಲನಾದ ನಿನಗೆ, **ಜ್ಞಾನಮ್** - ಸರ್ವಶ್ರೇಯಸ್ಸಿಗೂ ಸಾಧನ ಭೂತವಾದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ವಿಷಯವಾಗಿ ಜ್ಞಾನವು, **ಆಖ್ಯಾತಮ್**- ಹೇಳಲ್ಪಟ್ಟಿತು, ಈ ಜ್ಞಾನವೆಂತಾದ್ದು ಎನ್ನುತ್ತಿಯೋ **ಗುಹ್ಯಾದ್ಗುಹ್ಯತರಮ್** - ರಹಸ್ಯಗಳಿಗಿಂತಲೂ ಅತಿ ರಹಸ್ಯವಾದುದು; ಸರ್ವ ಶಾಸ್ತ್ರಗಳಲ್ಲೂ ರಹಸ್ಯವಾದುದು ವೇದವು; ಆ ವೇದದ ಸಾರವತ್ತಾದ ಭಾಗವು ಉಪನಿಷತ್ತು; ಅವುಗಳಲ್ಲೇ ಹೇಳಲ್ಪಟ್ಟಿರುವದು ಕರ್ಮಯೋಗ ಜ್ಞಾನಗಳಿಂದುಂಟಾಗುವ ಆತ್ಮ ಯಾಥಾತ್ಮ್ಯ ಜ್ಞಾನವೂ ಮತ್ತು ಉಪಾಸನ ಮೂಲಕ ಈಶ್ವರ ಸಾಕ್ಷಾತ್ಕಾರ ಜ್ಞಾನವೂ, ಸಹ ನಿನಗೆ **ಆಖ್ಯಾತವಮ್** - ಹೇಳಲ್ಪಟ್ಟಿತು. **ಏತತ್** - ಈ ಉಪದೇಶವನ್ನೆಲ್ಲಾ, **ಅಶೇಷೇಣ** - ಸಮಗ್ರವಾಗಿ, **ವಿಮೃಶ್ಯ** – ವಿಮರ್ಶಿಸಿ ತಿಳಿದು, **ಯಥೇಚ್ಛಸಿ** :- ನಿನ್ನ ವರ್ಣಾಶ್ರಮ ಧರ್ಮಕ್ಕೂ ನಿನ್ನ ಯೋಗ್ಯತೆಗೂ ಉಚಿತವಾಗಿ ಹೇಗೆ ಪ್ರಾಜ್ಞನಾದ ನೀನು ಹಿಂದಿನ ಶ್ಲೋಕದಲ್ಲಿ ಹೇಳಿರುವ ಹಾಗೆ ಅನಿಷ್ಟ ನಿವೃತ್ತಿ ಇಷ್ಟಪ್ರಾಪ್ತಿ ರೂಪ ಶ್ರೇಯಸ್ಸನ್ನು,ಅಪೇಕ್ಷಿಸತಕ್ಕದ್ದೋ **ತಥಾ ಕುರು** - ಹಾಗೆಯೇ ಮಾಡು ಈಗ ನಿನಗೆ ಹೇಳಿರುವದು, ಕರ್ಮಯೋಗದಿಂದಲೇ ಜ್ಞಾನಯೋಗ ನಿರಪೇಕ್ಷವಾಗಿ ಆತ್ಮಾವಲೋಕನ ಸಿದ್ಧಿಯಉಂಟಾಗಿ ಭಕ್ತಿಯೋಗವು ಕೈಗೂಡಿ ಮೋಕ್ಷವುಂಟಾಗುತ್ತದೆಂಬು ಎಂದಾದುದರಿಂದ ಹಾಗೆಯೇ ಮಾಡು; ಶಕ್ತನೆಂದು ತಿಳಿದರೆ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನು ಮಾಡು. ಹೀಗೆ ಭಕ್ತಿಯೋಗವನ್ನು ಅನುಷ್ಠಿಸಿದರೆ ಅದು ಮೋಕ್ಷದಾಯಕವಾಗಿ ಗುಹ್ಯತಮವೆಂದು ಮುಂದಿನ ಶ್ಲೋಕದಲ್ಲಿ ಹೇಳಿ, ಅದನ್ನೇ ನೀನು ಅನುಷ್ಠಿಸತಕ್ಕದ್ದು. ನೀನು ನನಗೆ ಪ್ರಿಯತಮನು. ಆದುದರಿಂದ ಅತ್ಯಂತ ರಹಸ್ಯವಾದ ಈ ಬ್ರಹ್ಮ ವಿದ್ಯೆಯನ್ನು ನಿನಗೆ ಉಪದೇಶಿಸಿದ್ದೇನೆ. ಅನುಷ್ಠಿಸು, ಎಂದು ಹಿಂದೆ ಎರಡು ಸಲ ೯ನೆಯ ಅಧ್ಯಾಯಾಂತ್ಯದಲ್ಲೂ ೧೧ನೆಯ ಅಧ್ಯಾಯಾಂತ್ಯದಲ್ಲೂ ಹೇಳಿದ್ದರೂ, ಇನ್ನೊಂದು ಸಲ ನಿಗಮನದಲ್ಲಿ ಮುಂದಿನ ಶ್ಲೋಕದಲ್ಲಿ ಹಿತೋಪದೇಶವನ್ನು ಮಾಡುತ್ತಾರೆ. ಇಲ್ಲಿ ಭಕ್ತಿಯೋಗ ನಿಷ್ಪತ್ತಿಗೆ ಸಾಧನವಾದ ಆತ್ಮಾವಲೋಕನ ಸಿದ್ಧಿಯನ್ನು ಕರ್ಮಯೋಗ ಮೂಲಕಮಾಡು; ಎನ್ನುತ್ತಾರೆ, ನೀನು ಪ್ರಾಜ್ಞನಾಗಿ ನನ್ನ ಹಿತೋಪದೇಶದ ಮಾಹಾತ್ಮ್ಯೆಯನ್ನು ಅರಿತಿರುವನಾದ ಪ್ರಯುಕ್ತ, ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಅನಿಷ್ಟನಿವೃತ್ತಿರೂಪ ಪರಾಂ ಶಾನ್ತಿಯನ್ನೂ, ಇಷ್ಟಪ್ರಾಪ್ತಿರೂಪ ಶಾಶ್ವತಸ್ಥಾನವನ್ನೂ, **ಯಥೇಚ್ಛಸಿ** - ಹೇಗೆ ಅಪೇಕ್ಷಿಸುತ್ತೀಯೋ ಹಾಗೆ ಮಾಡು ಎಂಬ ತಾತ್ಪರ್ಯವು, ಅದಕ್ಕಾಗಿ ಮೊದಲು ಕರ್ಮಯೋಗವನ್ನಾರಂಭಿಸಿ, ಕ್ಷತ್ರಿಯನಿಗೆ ಮುಖ್ಯವಾಗಿ ಹೇಳಲ್ಪಟ್ಟ ಧರ್ಮ ಯುದ್ಧವನ್ನು ಮಾಡಿ, ಅನಂತರ ನನ್ನನ್ನು ಉಪಾಸಿಸಿ ಅನಿಷ್ಟದೇಹ ಸಂಬಂಧದ ಶಾಂತಿಯನ್ನೂ ನಿನಗೆ ಇಷ್ಟವಾದ ಶಾಶ್ವತ ಪದವನ್ನು ಹೊಂದು ಎಂಬ ತಾತ್ಪರ್ಯವು.

**ಭಾಷ್ಯಾರ್ಥವು** :—ಹೀಗೆ ಅರ್ಜುನನಿಗೆ ಯುದ್ಧಪ್ರೋತ್ಸಾಹ ವ್ಯಾಜದಿಂದ ಸಮಸ್ತ ಅಧ್ಯಾತ್ಮಶಾಸ್ತ್ರೋಪದೇಶವನ್ನೆಲ್ಲಾ ಹೇಳಿ ಮೂರು ನಿಷ್ಠೆಯಲ್ಲೂ ನಿತ್ಯನೈಮಿತ್ತಿಕ ಕರ್ಮಗಳನ್ನು ಪರಿತ್ಯಾಗಮಾಡುವದು ಸಾಧ್ಯವಿಲ್ಲವಾದುದರಿಂದ ಅವುಗಳನ್ನೂ ಅನುಷ್ಠಿಸಿ, ಕ್ಷತ್ರಿಯನಾದ ಅರ್ಜುನನಿಗೆ ದುಷ್ಟನಿಗ್ರಹವಾದ ಯುದ್ಧವನ್ನು ಮಾಡಲೇಬೇಕೆಂದು ನಾನಾ ವಿಧವಾಗಿ ಉಪಪಾದಿಸಿ ಹೇಳಿ ಸ್ಥಾಪಿಸಿದರು, ಈಗಲಾದರೋ ಪರಬ್ರಹ್ಮ ಪ್ರಾಪ್ತಿಗೆ ಈಗ ತಾವು ಮಾಡಿರುವ

**ಭಾ.** **ಇತಿ** – ಏವಂ, **ತೇ** ಮುಮುಕ್ಷುಭಿರಧಿಗನ್ತವ್ಯಂ **ಜ್ಞಾನಂ**, **ಸರ್ವಸ್ಮಾದ್ಗುಹ್ಯಾದ್ಗುಹ್ಯತರಂ**, ಕರ್ಮಯೋಗವಿಷಯಂ, ಜ್ಞಾನಯೋಗ ವಿಷಯಂ, ಭಕ್ತಿಯೋಗ ವಿಷಯಂಚ ,ಸರ್ವಮಾಖ್ಯಾತಮ್ ; ಏತದಶೇಷೇಣ ವಿಮೃಶ್ಯ ಸ್ವಾಧಿಕಾರಾನುರೂಪಂ

---

ಉಪದೇಶವು ಸಾಕು ಎಂಬ ಭಾವನೆಯಿಂದಲೂ, ಇನ್ನು ಏನನ್ನೂ ಕೇಳಿ ತಿಳಿಯಬೇಕಾದ ಆವಶ್ಯಕತೆಯಿಲ್ಲದುದರಿಂದಲೂ ಈಗ ಉಪದೇಶಿಸಲ್ಪಟ್ಟ ಕರ್ಮಯೋಗ ಜ್ಞಾನಯೋಗಾಂಗಕ ಭಕ್ತಿಯೋಗವನ್ನು ಸಂಪೂರ್ಣವಾಗಿ ಉಪದೇಶಿಸಲ್ಪಟ್ಟದುದರಿಂದ, ಅವುಗಳನ್ನು ಅಧಿಕಾರಾನುಗುಣವಾಗಿ ಅನುಷ್ಠಿಸತಕ್ಕದ್ದೆಂದು ನಿಗಮನದಲ್ಲಿ ಹೇಳುತ್ತಾರೆ. ಈ ಗೀತಾ ಶಾಸ್ತ್ರವು ಅರ್ಜುನನನ್ನು ವ್ಯಾಜೀಕರಿಸಿ ಇತರ ಮೋಕ್ಷಾರ್ಥಿಗಾಗಿ ಮಾಡಲ್ಪಟ್ಟ ಉಪದೇಶವಾದುದರಿಂದ ಯಥಾಧಿಕಾರಂ ಮಾಡತಕ್ಕದ್ದೆಂದು ಹೇಳಲ್ಪಡುತ್ತದೆ; ಅರ್ಜುನನಿಗೆ ಅನ್ವಯಿಸುವ ಸಂದರ್ಭದಲ್ಲಿ ಆತನಿಗೆ ಜ್ಞಾನಯೋಗಕ್ಕೆ ಶಕ್ತಿ ಸಾಲದುದರಿಂದ, ಕರ್ಮಯೋಗದಿಂದಲೇ ಭಕ್ತಿಯೋಗಕ್ಕೆ ಅಧಿಕಾರವನ್ನು ಸಂಪಾದಿಸತಕ್ಕದ್ದೆಂಬುದು ಸೂಚಿತವು, ಹಿಂದಿನ ಶ್ಲೋಕಕ್ಕೂ ಈ ಶ್ಲೋಕಕ್ಕೂ ಸಂಗತಿ ಹೇಗೆ? ಎಂದರೆ ನನ್ನ ಆ ಶರಣಾಗತಿಯನ್ನು ಅಂಗವಾಗಿ ನಡೆಸಿದರೆ ಅನಿಷ್ಟನಿವೃತ್ತಿಯುಂಟಾಗಿ ಇಷ್ಟಪ್ರಾಪ್ತಿಗೆ ಹೇತುವಾಗುತ್ತದೆ ಎಂದರು. ಈಗ ಆ ಇಷ್ಟ ಪ್ರಾಪ್ತಿ ಹೇಗೆ? ಎಂದರೆ ನಾನು ಈಗ **ನತ್ವೇವಾಹಂ** ಎಂದಾರಂಭಿಸಿ ಇದುವರೆವಿಗೂ ಹೇಳಿದುದನ್ನೆಲ್ಲಾ ಚನ್ನಾಗಿ ವಿಮರ್ಶಿಸಿ ತಿಳಿದು,ನಾನು ಹೇಳಿದ ಹಾಗೆ ಕರ್ಮಯೋಗಾದಿಗಳಿಂದ ಸಹಕೃತವಾದ ಭಕ್ತಿಯೋಗವನ್ನು ಅನುಷ್ಠಿಸು ಎಂದು ಹೇಳುತ್ತಾರೆ. **ಇತಿ** ಎಂದರೆ, **ಏವಂ** – ಈಗ ನಿನಗೆ ಉಪದೇಶಿಸಿದ ರೀತಿಯಲ್ಲಿ ಸಮಗ್ರವಾಗಿ, **ತೇ**-ನಿನಗೆ,“**ಯಚ್ಛ್ರೇಯಃಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ** ಎಂದು ಶರಣಾಗ[illegible] ಪ್ರಪನ್ನನಾದ ಶಿಷ್ಯನಾದ ನಿನಗೆ, **ಮುಮುಕ್ಷುಭಿರಧಿಗನ್ತವ್ಯಂ** - ಮೋಕ್ಷಾರ್ಥಿಗಳಿಂದ ಹೊಂದತಕ್ಕ [illegible]ಜ್ಞಾನವು. **ಸರ್ವಸ್ಮಾತ್** - ಸಮಸ್ತಗಳಾದ, **ಗುಹ್ಯಾತ್** - ರಹಸ್ಯಗಳಿಗಿಂತ, **ಗುಹ್ಯತರಂ**-ಅತಿ ರಹಸ್ಯವಾದುದನ್ನು ಅದ. ಯಾವುದೆಂದರೆ, **ಕರ್ಮಯೋಗಾದಿಗಳವಿಷಯವಾದ ಸರ್ವಂ** - ಸಮಸ್ತವೂ, **ಆಖ್ಯಾತಮ್** - ಹೇಳಲ್ಪಟ್ಟಿತು, ಉಪದೇಶಿಸಲ್ಪಟ್ಟಿತು; ಹೀಗೆ ಉಪದೇಶಿಸಲು ಕಾರಣವೇನೆಂದರೆ, ನೀನು ಹಿಂದೆ **ಯಚ್ಛ್ರೇಯಃಸ್ಯಾತ್ ನಿಶ್ಚಿತಂ ಬ್ರೂಹಿತನ್ಮೇ**” ಎಂದು ಪ್ರಾರ್ಥಿಸಿ ಶರಣಾಗತನಾದುದರಿಂದ ನೀನು ಶ್ರದ್ಧೆಯುಳ್ಳ ಮುಮುಕ್ಷುವಾದ ಶಿಷ್ಯನಾದುದರಿಂದ, ನಾನು ಸಮಗ್ರವಾಗಿ ನಿನ್ನ ಮನಸ್ಸು ಹಿಡಿಯುವರೀತಿಯಲ್ಲಿ ಹೇಳುವದು ನನ್ನ ಕರ್ತವ್ಯವೆಂದು ತಿಳಿದು ಬ್ರಹ್ಮವಿದ್ಯೆಯನ್ನು ಸಾಧನಗಳೊಂದಿಗೆ ಉಪದೇಶಿಸಿದೆನು ಎಂಬ ಭಾವವು. ಲೌಕಿಕಾದಿ ಜ್ಞಾನಗಳಿಂದ ಸ್ವರ್ಗಾದಿ ಪಾರ ಲೌಕಿಕ ಸುಖಗಳಿಗೆ ಹೇತುವಾಗಿ ರಹಸ್ಯವಾಗಿ ಆಯುಸ್ಸು ಧನುಸ್ಸು ನೀತಿ ಶಾಸ್ತ್ರಗಳಿಂದುಂಟಾಗುವ ಜ್ಞಾನಗಳಿಗಿಂತ'ಅತಿಶಯವಾಗಿ ಅತೀನ್ದ್ರಿಯ ಪಾರಲೌಕಿಕ ಸ್ವರ್ಗಾದಿ ಪುರುಷಾರ್ಥಗಳನ್ನು ಕೊಡುವ ವೇದಗಳಲ್ಲಿನ ಯಜ್ಞಾದಿಕರ್ಮಗಳ ಜ್ಞಾನವು ಗುಹ್ಯ ಶಬ್ದದಿಂದ ಹೇಳಲ್ಪಟ್ಟಿತು. ಗುಹ್ಯತರವಾದುದಾದರೋ ವೇದಾನ್ತಗಳಂದ ಉಪನಿಷತ್ತುಗಳಿಂದ ತೋರಿಬರುವ,ಮೋಕ್ಷಾರ್ಥಿಗಳಿಗೆ ಯಥಾಧಿಕಾರ ಬೇಕಾಗಿರುವ,ವ್ಯವಹಿತಾವ್ಯವಹಿತ ಸಾಧನಗಳಾದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳ ಸಮಸ್ತರಹಸ್ಯಾರ್ಥಗಳು ಹೇಳಲ್ಪಟ್ಟವು. ಈ ಭಾವನೆಯಿಂದ “**ಕರ್ಮಯೋಗ ವಿಷಯಂ ಜ್ಞಾನಯೋಗವಿಷಯಂ ಭಕ್ತಿಯೋಗ ವಿಷಯಂಚ** ಸರ್ವಂಆಖ್ಯಾತಮ್” ಎಂದು ಭಾಷ್ಯವು. ಇದು ಸರ್ವಸ್ಮಾದ್ಗುಹ್ಯತರಮ್ ಎಂದು ಹೇಳಲು ಕಾರಣವೇನೆಂದರೆ ತ್ರಿವರ್ಗದವರಿಗೆ ಮಾತ್ರ ಗೋಪನೀಯವಾದುದು ಗುಹ್ಯತರವಾದರೆ, ಮೋಕ್ಷಾರ್ಥಿಗಳಿಗೆ ಬೇಕಾದ ರಹಸ್ಯಜ್ಞಾನವು ಸರ್ವಸ್ಮಾದ್ಗುಹ್ಯತರವೆಂಬ ಭಾವವು. ಆದುದರಿಂದಲೇ ಮುಮುಕ್ಷುಭಿರಧಿಗನ್ತವ್ಯಂ ಜ್ಞಾನಂ ಸರ್ವಸ್ಮಾದ್ಗುಹ್ಯತರಂ” ಎಂಬ ವ್ಯಾಖ್ಯಾನವು,

ಜ್ಞಾನಯೋಗವು ಅಶಕ್ಯವಾದರೆ ಭಕ್ತಿಯೋಗದಲ್ಲೇ ಅಧಿಕಾರವೆಂದು ತಿಳಿಸುವದಕ್ಕಾಗಿ ಯಥಾಧಿಕಾರಂ ಎಂಬ ಪ್ರಯೋಗವು.

ಆದರೆ ಈ ಸಂದರ್ಭದಲ್ಲಿ ಕೆಲವರು ಅಪಾರ್ಥ ಮಾಡಿರುತ್ತಾರೆ. ಹೇಗೆಂದರೆ ಪೂರ್ವಜನ್ಮದಲ್ಲಿ ಕರ್ಮಯೋಗಸಿದ್ಧಿಯುಂಟಾಗಿದ್ದರೆ, ಅದನ್ನು ತ್ಯಜಿಸಿ, ಜ್ಞಾನಯೋಗ ಭಕ್ತಿಯೋಗಗಳನ್ನು ಮಾಡಬಹುದೆಂದೂ, ಪೂರ್ವ ಜನ್ಮದಲ್ಲಿ ಕರ್ಮಯೋಗ ಜ್ಞಾನಯೋಗಗಳ ಸಿದ್ಧಿಯುಂಟಾಗಿದ್ದರೆ ಅವುಗಳನ್ನು ತ್ಯಜಿಸಿ ಭಕ್ತಿಯೋಗವನ್ನು ಅನುಷ್ಠಿಸಬಹುದೆಂದು ವಾ ಎಂಬ ವಿಕಲ್ಪಪದವನ್ನು ಶ್ರೀಯತಿವರ್ಯರು ಉಪಯೋಗಿಸಿದ್ದಾರೆಂದು ಹೇಳುವರು. ಈ ಅಭಿಪ್ರಾಯವು ಸುತರಾಂ ಸರಿಯಲ್ಲವೆಂದು ಶ್ರೀನಿಗಮಾಂತ ದೇಶಿಕರವರು ನ ಧರ್ಮ ನಿಷ್ಠೋಽಸ್ಮಿ " ಎಂಬ ಯಾಮುನಮುನಿ ಸ್ತೋತ್ರದಲ್ಲಿ ಖಂಡಿಸಿರುತ್ತಾರೆ. ಏಕೆಂದರೆ, ಫಲಸಿದ್ಧಿಗೆ ಅಂಗಾಂಗಿಗಳ ಸಮುಚ್ಚಯವು ಅವಶ್ಯಕವು, ಬರೀ ಅಂಗಿ ಮಾತ್ರವೇ ಸಾಕು ಎಂದು ಹೇಳಿ, ವಿದುರ, ಧರ್ಮವ್ಯಾಧ, ಶಬರಿ ಮೊದಲಾದವರೂ, ಹಿಂದಿನ ಜನ್ಮದ ಕರ್ಮಯೋಗದಿಂದ ಸೇರಿದ ಉಪಾಸನದ ಬಲದಿಂದಲೇ ಈ ಜನ್ಮದಲ್ಲೂ ಉಪಾಸನಮಾಡಿದರೆಂದು ಹೇಳುವರು- ಅಪಶೂದ್ರಾಧಿಕರಣದಿಂದ ತ್ರಿವರ್ಣದವರಿಗೆ ಮಾತ್ರವೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೇ ವಿನಾ, ಶೂದ್ರಾದಿಗಳಿಗೆ ಅಧಿಕಾರವಿಲ್ಲವೆಂಬ ಶಾಸ್ತ್ರ ಪಂಕ್ತಿಗೆ ವಿರೋಧವು. ಭಾಗವತಸಂಶ್ರಯಣದಿಂದಲೂ, ಭಾಗವತರು ಈ ಶೂದ್ರಾದಿಗಳಿಗಾಗಿ ಅನುಷ್ಠಿಸುವ ಶರಣಾಗತಿಯಿಂದಲೂ ಮೋಕ್ಷಪ್ರಾಪ್ತಿಯೆಂದು ಶಾಸ್ತ್ರವು ಹೇಳುವಾಗ ಅದನ್ನು ತ್ಯಜಿಸಿ ಗ ರೂಪಾಯವು ಏತಕ್ಕೆ? ಶ್ರೀ ವಿದುರರು ಧೃತರಾಷ್ಟ್ರನಿಂದ ಪ್ರಾರ್ಥಿಸಲ್ಪಟ್ಟರೂ ಬ್ರಹ್ಮವಿದ್ಯೆಯ ಜ್ಞಾನವು ಸಂಸ್ಕಾರ ಬಲದಿಂದ ಇದ್ದರೂ, ಶೂದ್ರಯೋನಾವಹಂ ಜಾತಃ ನಾತೋಽನ್ಯದ್ವಕ್ತುಮುತ್ಸಹೇ" ಶೂದ್ರಯೋನಿಯಲ್ಲಿ ಜನಿಸಿದವನಾದುದರಿಂದ ತಾವು ಕೇಳಿದ ಇನ್ನೊಂದನ್ನು ನನಗೆ ಹೇಳಲು ಇಷ್ಟವಿಲ್ಲವೆಂದು ಹೇಳಿ, ಧೃತರಾಷ್ಟ್ರನನ್ನು ಸನತ್ಸುಜಾತರಲ್ಲಿಗೆ ಕರೆದುಕೊಂಡು ಹೋಗಿ ಅವರು ಉಪದೇಶಿಸುವ ಹಾಗೆ ಮಾಡಿದರು. ಇಲ್ಲಿ ಬ್ರಹ್ಮವಿದ್ಯೆಯೆಂದು ಹೇಳಲು ಕೂಡ ಯೋಗ್ಯತೆಯಿಲ್ಲವೆಂದು ತಿಳಿಸುವದಕ್ಕಾಗಿ ಅನ್ಯತ್ ಎಂಬ ಸ್ವಾರಸ್ಯವಾದ ಪ್ರಯೋಗವು. ಬ್ರಹ್ಮವಿದ್ಯೆಯನ್ನು ಹೇಳುವದು ಅನುಷ್ಠಿಸುವದರಷ್ಟು ದೋಷಾವಹವಲ್ಲವು. ಹಾಗೆ ಹೇಳದೆ ಇದ್ದವರು ಅನುಷ್ಠಿಸುವರೇ? ವಿದುರರು ವಿಶೇಷಾಧಿಕಾರಿ, ಅದರಿಂದ ಉಪಾಸನೆಯನ್ನು ಮಾಡಿದರು ಎಂದರೆ ಶ್ರೀ ರಾಮಾವತಾರದಲ್ಲಿ ಶಂಬೂಕನೆಂಬ ಶೂದ್ರನು ಉಪಾಸನವನ್ನು ಮಾಡಿದನೆಂದು ಸ್ವಹಸ್ತದಿಂದಲೇ ಅತನ ಶಿರಸ್ಸನ್ನು ಛೇದಿಸಿ, ಕೃಷ್ಣಾವತಾರದಲ್ಲಿ ಶ್ರೀವಿದುರರು ಉಪಾಸನವನ್ನು ಮಾಡಿದರೆ ಅದು ಇಷ್ಟವಾಗಿ "ವಿದುರಾನ್ನಾನಿ ಭುಭುಜೇ ಶುಚೀನಿ ಗುಣವಂತಿಚ" ಎಂದು ಹೇಳಿದರೆ, ಪರಮಪುರುಷನಿಗೆ ವೈಷಮ್ಯವನ್ನು ತಲೆಗೆ ಕಟ್ಟಿದ ಹಾಗಾಗುವದಿಲ್ಲವೇ? ಸ್ವಾಮಿಯೇ ಮಾನುಷಾವತಾರ ಕಾಲಗಳಲ್ಲಿ ಶಾಸ್ತ್ರೋಲ್ಲಂಘನವನ್ನು ಎಳ್ಳಷ್ಟು ಕೂಡ ಎಂದಿಗೂ ಮಾಡಿಲ್ಲವು.

ಈ ಕಾರಣಗಳಿಂದ ಹಿಂದಿನ ಜನ್ಮದ ಕರ್ಮಯೋಗಾದಿಗಳಿಂದ ಉಂಟಾದ ಸಂಸ್ಕಾರಬಲದಿಂದ ಈಗ ಅನುಷ್ಠಿಸುವ ಕರ್ಮಯೋಗಾದಿಗಳು ಸುಕರವಾಗಿ ಫಲಸಿದ್ಧಿ ಹೊಂದುವುದೆಂದು ಇಷ್ಟು ಮಾತ್ರ ಹೇಳಬಹುದೇ ವಿನಾ ಅವು ಮೋಕ್ಷ ಫಲಕ್ಕೆ ಕಾರ್ಯಕಾರಿಯಾಗುವದಿಲ್ಲವು. ಈ ಜನ್ಮದ ವರ್ಣಾಶ್ರಮಾನುಗುಣವಾಗಿ ಉಪಾಯಾನುಷ್ಠಾನಮಾಡಿದರೇ ಫಲಸಿದ್ಧಿಯೇ ವಿನಾ ಅನ್ಯಥಾ ಇಲ್ಲವು. ಪೂರ್ವಜನ್ಮದ ಕರ್ಮಯೋಗಾದಿಗಳು ಈ ಜನ್ಮದ ಉಪಾಸನೆಗೆ ಅಂಗವಾಗುವದೆಂಬುದು ಸೂತ್ರಾಭಿಪ್ರಾಯಕ್ಕೂ ವಿರುದ್ಧವು. ನಿತ್ಯನೈಮಿತ್ತಿಕಗಳೂ ಯಾವಜ್ಜೀವವೂ ಅನುಷ್ಠಿಸುವ ಉಪಾಸನಕ್ಕೆ ಅಂಗನೆಂದು ಹೇಳಲ್ಪಟ್ಟಿರುತ್ತದೆ. ಇವೂ ಕರ್ಮಯೋಗಕ್ಕೆ ಸೇರಿದವು. ಪೂರ್ವಜನ್ಮದ ಅನುಷ್ಠಾನವು ಈ ಜನ್ಮಕ್ಕೆ ಒದಗುತ್ತವೆಂದು ಹೇಳುವದು ಲೋಕವಿರುದ್ಧವು.

**ಭಾ.** **ಇತಿ** – ಏವಂ, **ತೇ** ಮುಮುಕ್ಷುಭಿರಧಿಗನ್ತವ್ಯಂ **ಜ್ಞಾನಂ**, **ಸರ್ವಸ್ಮಾದ್ಗುಹ್ಯಾದ್ಗುಹ್ಯತರಂ**, ಕರ್ಮಯೋಗವಿಷಯಂ, ಜ್ಞಾನಯೋಗ ವಿಷಯಂ, ಭಕ್ತಿಯೋಗ ವಿಷಯಂಚ ,ಸರ್ವಮಾಖ್ಯಾತಮ್ ; ಏತದಶೇಷೇಣ ವಿಮೃಶ್ಯ ಸ್ವಾಧಿಕಾರಾನುರೂಪಂ

---

ಉಪದೇಶವು ಸಾಕು ಎಂಬ ಭಾವನೆಯಿಂದಲೂ, ಇನ್ನು ಏನನ್ನೂ ಕೇಳಿ ತಿಳಿಯಬೇಕಾದ ಆವಶ್ಯಕತೆಯಿಲ್ಲದುದರಿಂದಲೂ ಈಗ ಉಪದೇಶಿಸಲ್ಪಟ್ಟ ಕರ್ಮಯೋಗ ಜ್ಞಾನಯೋಗಾಂಗಕ ಭಕ್ತಿಯೋಗವನ್ನು ಸಂಪೂರ್ಣವಾಗಿ ಉಪದೇಶಿಸಲ್ಪಟ್ಟದುದರಿಂದ, ಅವುಗಳನ್ನು ಅಧಿಕಾರಾನುಗುಣವಾಗಿ ಅನುಷ್ಠಿಸತಕ್ಕದ್ದೆಂದು ನಿಗಮನದಲ್ಲಿ ಹೇಳುತ್ತಾರೆ. ಈ ಗೀತಾ ಶಾಸ್ತ್ರವು ಅರ್ಜುನನನ್ನು ವ್ಯಾಜೀಕರಿಸಿ ಇತರ ಮೋಕ್ಷಾರ್ಥಿಗಾಗಿ ಮಾಡಲ್ಪಟ್ಟ ಉಪದೇಶವಾದುದರಿಂದ ಯಥಾಧಿಕಾರಂ ಮಾಡತಕ್ಕದ್ದೆಂದು ಹೇಳಲ್ಪಡುತ್ತದೆ; ಅರ್ಜುನನಿಗೆ ಅನ್ವಯಿಸುವ ಸಂದರ್ಭದಲ್ಲಿ ಆತನಿಗೆ ಜ್ಞಾನಯೋಗಕ್ಕೆ ಶಕ್ತಿ ಸಾಲದುದರಿಂದ, ಕರ್ಮಯೋಗದಿಂದಲೇ ಭಕ್ತಿಯೋಗಕ್ಕೆ ಅಧಿಕಾರವನ್ನು ಸಂಪಾದಿಸತಕ್ಕದ್ದೆಂಬುದು ಸೂಚಿತವು, ಹಿಂದಿನ ಶ್ಲೋಕಕ್ಕೂ ಈ ಶ್ಲೋಕಕ್ಕೂ ಸಂಗತಿ ಹೇಗೆ? ಎಂದರೆ ನನ್ನ ಆ ಶರಣಾಗತಿಯನ್ನು ಅಂಗವಾಗಿ ನಡೆಸಿದರೆ ಅನಿಷ್ಟನಿವೃತ್ತಿಯುಂಟಾಗಿ ಇಷ್ಟಪ್ರಾಪ್ತಿಗೆ ಹೇತುವಾಗುತ್ತದೆ ಎಂದರು. ಈಗ ಆ ಇಷ್ಟ ಪ್ರಾಪ್ತಿ ಹೇಗೆ? ಎಂದರೆ ನಾನು ಈಗ **ನತ್ವೇವಾಹಂ** ಎಂದಾರಂಭಿಸಿ ಇದುವರೆವಿಗೂ ಹೇಳಿದುದನ್ನೆಲ್ಲಾ ಚನ್ನಾಗಿ ವಿಮರ್ಶಿಸಿ ತಿಳಿದು,ನಾನು ಹೇಳಿದ ಹಾಗೆ ಕರ್ಮಯೋಗಾದಿಗಳಿಂದ ಸಹಕೃತವಾದ ಭಕ್ತಿಯೋಗವನ್ನು ಅನುಷ್ಠಿಸು ಎಂದು ಹೇಳುತ್ತಾರೆ. **ಇತಿ** ಎಂದರೆ, **ಏವಂ** – ಈಗ ನಿನಗೆ ಉಪದೇಶಿಸಿದ ರೀತಿಯಲ್ಲಿ ಸಮಗ್ರವಾಗಿ, **ತೇ**-ನಿನಗೆ,"ಯಚ್ಛ್ರೇಯಃಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ಎಂದು ಶರಣಾಗ[illegible] ಪ್ರಪನ್ನನಾದ ಶಿಷ್ಯನಾದ ನಿನಗೆ, **ಮುಮುಕ್ಷುಭಿರಧಿಗನ್ತವ್ಯಂ** - ಮೋಕ್ಷಾರ್ಥಿಗಳಿಂದ ಹೊಂದತಕ್ಕ [illegible]ಜ್ಞಾನವು. **ಸರ್ವಸ್ಮಾತ್** - ಸಮಸ್ತಗಳಾದ, **ಗುಹ್ಯಾತ್** - ರಹಸ್ಯಗಳಿಗಿಂತ, **ಗುಹ್ಯತರಂ**-ಅತಿ ರಹಸ್ಯವಾದುದನ್ನು ಅದು ಯಾವುದೆಂದರೆ, **ಕರ್ಮಯೋಗಾದಿಗಳವಿಷಯವಾದ** **ಸರ್ವಂ** - ಸಮಸ್ತವೂ, **ಆಖ್ಯಾತಮ್** - ಹೇಳಲ್ಪಟ್ಟಿತು, ಉಪದೇಶಿಸಲ್ಪಟ್ಟಿತು; ಹೀಗೆ ಉಪದೇಶಿಸಲು ಕಾರಣವೇನೆಂದರೆ, ನೀನು ಹಿಂದೆ **ಯಚ್ಛ್ರೇಯಃಸ್ಯಾತ್ ನಿಶ್ಚಿತಂ ಬ್ರೂಹಿತನ್ಮೇ**" ಎಂದು ಪ್ರಾರ್ಥಿಸಿ ಶರಣಾಗತನಾದುದರಿಂದ ನೀನು ಶ್ರದ್ಧೆಯುಳ್ಳ ಮುಮುಕ್ಷುವಾದ ಶಿಷ್ಯನಾದುದರಿಂದ, ನಾನು ಸಮಗ್ರವಾಗಿ ನಿನ್ನ ಮನಸ್ಸು ಹಿಡಿಯುವರೀತಿಯಲ್ಲಿ ಹೇಳುವದು ನನ್ನ ಕರ್ತವ್ಯವೆಂದು ತಿಳಿದು ಬ್ರಹ್ಮವಿದ್ಯೆಯನ್ನು ಸಾಧನಗಳೊಂದಿಗೆ ಉಪದೇಶಿಸಿದೆನು ಎಂಬ ಭಾವವು. ಲೌಕಿಕಾದಿ ಜ್ಞಾನಗಳಿಂದ ಸ್ವರ್ಗಾದಿ ಪಾರ ಲೌಕಿಕ ಸುಖಗಳಿಗೆ ಹೇತುವಾಗಿ ರಹಸ್ಯವಾಗಿ ಆಯುಸ್ಸು ಧನುಸ್ಸು ನೀತಿ ಶಾಸ್ತ್ರಗಳಿಂದುಂಟಾಗುವ ಜ್ಞಾನಗಳಿಗಿಂತ ಅತಿಶಯವಾಗಿ ಅತೀನ್ದ್ರಿಯ ಪಾರಲೌಕಿಕ ಸ್ವರ್ಗಾದಿ ಪುರುಷಾರ್ಥಗಳನ್ನು ಕೊಡುವ ವೇದಗಳಲ್ಲಿನ ಯಜ್ಞಾದಿಕರ್ಮಗಳ ಜ್ಞಾನವು ಗುಹ್ಯ ಶಬ್ದದಿಂದ ಹೇಳಲ್ಪಟ್ಟಿತು. **ಗುಹ್ಯತರವಾದುದಾದರೋ** ವೇದಾನ್ತಗಳಿಂದ ಉಪನಿಷತ್ತುಗಳಿಂದ ತೋರಿಬರುವ,ಮೋಕ್ಷಾರ್ಥಿಗಳಿಗೆ ಯಥಾಧಿಕಾರ ಬೇಕಾಗಿರುವ,ವ್ಯವಹಿತಾವ್ಯವಹಿತ ಸಾಧನಗಳಾದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳ ಸಮಸ್ತರಹಸ್ಯಾರ್ಥಗಳು ಹೇಳಲ್ಪಟ್ಟವು. ಈ ಭಾವನೆಯಿಂದ "**ಕರ್ಮಯೋಗ ವಿಷಯಂ ಜ್ಞಾನಯೋಗವಿಷಯಂ ಭಕ್ತಿಯೋಗ ವಿಷಯಂಚ** ಸರ್ವಂ ಆಖ್ಯಾತಮ್" ಎಂದು ಭಾಷ್ಯವು. ಇದು ಸರ್ವಸ್ಮಾದ್ಗುಹ್ಯತರಮ್ ಎಂದು ಹೇಳಲು ಕಾರಣವೇನೆಂದರೆ ತ್ರಿವರ್ಗದವರಿಗೆ ಮಾತ್ರ ಗೋಪನೀಯವಾದುದು ಗುಹ್ಯತರವಾದರೆ, ಮೋಕ್ಷಾರ್ಥಿಗಳಿಗೆ ಬೇಕಾದ ರಹಸ್ಯಜ್ಞಾನವು ಸರ್ವಸ್ಮಾದ್ಗುಹ್ಯತರವೆಂಬ ಭಾವವು. ಆದುದರಿಂದಲೇ ಮುಮುಕ್ಷುಭಿರಧಿಗನ್ತವ್ಯಂ ಜ್ಞಾನಂ ಸರ್ವಸ್ಮಾದ್ಗುಹ್ಯತರಂ" ಎಂಬ ವ್ಯಾಖ್ಯಾನವು,

ಜ್ಞಾನಯೋಗವು ಅಶಕ್ಯವಾದರೆ ಭಕ್ತಿಯೋಗದಲ್ಲೇ ಅಧಿಕಾರವೆಂದು ತಿಳಿಸುವದಕ್ಕಾಗಿ **ಯಥಾಧಿಕಾರಂ** ಎಂಬ ಪ್ರಯೋಗವು.

ಆದರೆ ಈ ಸಂದರ್ಭದಲ್ಲಿ ಕೆಲವರು ಅಪಾರ್ಥ ಮಾಡಿರುತ್ತಾರೆ. ಹೇಗೆಂದರೆ ಪೂರ್ವಜನ್ಮದಲ್ಲಿ ಕರ್ಮಯೋಗಸಿದ್ಧಿಯುಂಟಾಗಿದ್ದರೆ, ಅದನ್ನು ತ್ಯಜಿಸಿ, ಜ್ಞಾನಯೋಗ ಭಕ್ತಿಯೋಗಗಳನ್ನು ಮಾಡಬಹುದೆಂದೂ, ಪೂರ್ವ ಜನ್ಮದಲ್ಲಿ ಕರ್ಮಯೋಗ ಜ್ಞಾನಯೋಗಗಳ ಸಿದ್ಧಿಯುಂಟಾಗಿದ್ದರೆ ಅವುಗಳನ್ನು ತ್ಯಜಿಸಿ ಭಕ್ತಿಯೋಗವನ್ನು ಅನುಷ್ಠಿಸಬಹುದೆಂದು ವಾ ಎಂಬ ವಿಕಲ್ಪಪದವನ್ನು ಶ್ರೀಯತಿವರ್ಯರು ಉಪಯೋಗಿಸಿದ್ದಾರೆಂದುಹೇಳುವರು. ಈಅಭಿಪ್ರಾಯವು ಸುತರಾಂಸರಿಯಲ್ಲವೆಂದು ಶ್ರೀನಿಗಮಾಂತ ದೇಶಿಕರವರು **ನ ಧರ್ಮನಿಷ್ಠೋಽಸ್ಮಿ** " ಎಂಬ ಯಾಮುನಮುನಿ ಸ್ತೋತ್ರದಲ್ಲಿ ಖಂಡಿಸಿರುತ್ತಾರೆ. ಏಕೆಂದರೆ, ಫಲಸಿದ್ಧಿಗೆ ಅಂಗಾಂಗಿಗಳ ಸಮುಚ್ಚಯವು ಆವಶ್ಯಕವು, ಬರೀ ಅಂಗಿ ಮಾತ್ರವೇ ಸಾಕು ಎಂದು ಹೇಳಿ, ವಿದುರ, ಧರ್ಮವ್ಯಾಧ, ಶಬರಿ ಮೊದಲಾದವರೂ, ಹಿಂದಿನ ಜನ್ಮದ ಕರ್ಮಯೋಗದಿಂದ ಸೇರಿದ ಉಪಾಸನದ ಬಲದಿಂದಲೇ ಈ ಜನ್ಮದಲ್ಲೂ ಉಪಾಸನಮಾಡಿದರೆಂದು ಹೇಳುವರು- ಅಪಶೂದ್ರಾಧಿಕರಣದಿಂದ ತ್ರಿವರ್ಣದವರಿಗೆ ಮಾತ್ರವೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೇ ವಿನಾ, ಶೂದ್ರಾದಿಗಳಿಗೆ ಅಧಿಕಾರವಿಲ್ಲವೆಂಬ ಶಾಸ್ತ್ರ ಪಂಕ್ತಿಗೆ ವಿರೋಧವು. ಭಾಗವತಸಂಶ್ರಯಣದಿಂದಲೂ,ಭಾಗವತರು ಈ ಶೂದ್ರಾದಿಗಳಿಗಾಗಿ ಅನುಷ್ಠಿಸುವ ಶರಣಾಗತಿಯಿಂದಲೂ ಮೋಕ್ಷಪ್ರಾಪ್ತಿಯೆಂದು ಶಾಸ್ತ್ರವು ಹೇಳುವಾಗ ಅವನ್ನು ತ್ಯಜಿಸಿ ಗರೂಪಾಯವು ಏತಕ್ಕೆ? ಶ್ರೀ ವಿದುರರು ಧೃತರಾಷ್ಟ್ರನಿಂದ ಪ್ರಾರ್ಥಿಸಲ್ಪಟ್ಟರೂ ಬ್ರಹ್ಮವಿದ್ಯೆಯ ಜ್ಞಾನವು ಸಂಸ್ಕಾರ ಬಲದಿಂದ ಇದ್ದರೂ,ಶೂದ್ರಯೋನಾವಹಂ ಜಾತಃ ನಾತೋಽನ್ಯದ್ವಕ್ತುಮುತ್ಸಹೇ" ಶೂದ್ರಯೋನಿಯಲ್ಲಿ ಜನಿಸಿದವನಾದುದರಿಂದ ತಾವು ಕೇಳಿದ ಇನ್ನೊಂದನ್ನು ನನಗೆ ಹೇಳಲ್ಪಿಷ್ಟವಿಲ್ಲವೆಂದು ಹೇಳಿ, ಧೃತರಾಷ್ಟ್ರನನ್ನು ಸನತ್ಸುಜಾತರಲ್ಲಿಗೆ ಕರೆದುಕೊಂಡು ಹೋಗಿ ಅವರು ಉಪದೇಶಿಸುವ ಹಾಗೆ ಮಾಡಿದರು. ಇಲ್ಲಿ ಬ್ರಹ್ಮವಿದ್ಯೆಯೆಂದು ಹೇಳಲು ಕೂಡ ಯೋಗ್ಯತೆಯಿಲ್ಲವೆಂದು ತಿಳಿಸುವದಕ್ಕಾಗಿ ಅನ್ಯತ್ ಎಂಬ ಸ್ವಾರಸ್ಯವಾದ ಪ್ರಯೋಗವು. ಬ್ರಹ್ಮವಿದ್ಯೆಯನ್ನು ಹೇಳುವದು ಅನುಷ್ಠಿಸುವದರಷ್ಟು ದೋಷಾವಹವಲ್ಲವು. ಹಾಗೆ ಹೇಳದೆ ಇದ್ದವರು ಅನುಷ್ಠಿಸುವರೇ? ವಿದುರರು ವಿಶೇಷಾಧಿಕಾರಿ, ಆದರಿಂದ ಉಪಾಸನೆಯನ್ನು ಮಾಡಿದರು ಎಂದರೆ ಶ್ರೀರಾಮಾವತಾರದಲ್ಲಿ ಶಂಬೂಕನೆಂಬ ಶೂದ್ರನು ಉಪಾಸನವನ್ನು ಮಾಡಿದನೆಂದು ಸ್ವಹಸ್ತದಿಂದಲೇ ಅತನ ಶಿರಸ್ಸನ್ನು ಛೇದಿಸಿ, ಕೃಷ್ಣಾವತಾರದಲ್ಲಿ ಶ್ರೀವಿದುರರು ಉಪಾಸನವನ್ನು ಮಾಡಿದರೆ ಅದು ಇಷ್ಟವಾಗಿ "ವಿದುರಾನ್ನಾನಿ ಭುಭುಜೇ ಶುಚೀನಿ ಗುಣವಂತಿಚ" ಎಂದು ಹೇಳಿದರೆ, ಪರಮಪುರುಷನಿಗೆ ವೈಷಮ್ಯವನ್ನು ತಲೆಗೆ ಕಟ್ಟಿದ ಹಾಗಾಗುವದಿಲ್ಲವೇ? ಸ್ವಾಮಿಯೇ ಮಾನುಷಾವತಾರ ಕಾಲಗಳಲ್ಲಿ ಶಾಸ್ತ್ರೋಲ್ಲಂಘನವನ್ನು ಎಳ್ಳಷ್ಟು ಕೂಡ ಎಂದಿಗೂ ಮಾಡಿಲ್ಲವು.

ಈ ಕಾರಣಗಳಿಂದ ಹಿಂದಿನ ಜನ್ಮದ ಕರ್ಮಯೋಗಾದಿಗಳಿಂದ ಉಂಟಾದ ಸಂಸ್ಕಾರಬಲದಿಂದ ಈಗ ಅನುಷ್ಠಿಸುವ ಕರ್ಮಯೋಗಾದಿಗಳು ಸುಕರವಾಗಿ ಫಲಸಿದ್ಧಿ ಹೊಂದುವುದೆಂದು ಇಷ್ಟು ಮಾತ್ರ ಹೇಳಬಹುದೇ ವಿನಾ ಅವು ಮೋಕ್ಷ ಫಲಕ್ಕೆ ಕಾರ್ಯಕಾರಿಯಾಗುವದಿಲ್ಲವು. ಈ ಜನ್ಮದ ವರ್ಣಾಶ್ರಮಾನುಗುಣವಾಗಿ ಉಪಾಯಾನುಷ್ಠಾನಮಾಡಿದರೇ ಫಲಸಿದ್ಧಿಯೇ ವಿನಾ ಅನ್ಯಥಾ ಇಲ್ಲವು. ಪೂರ್ವಜನ್ಮದ ಕರ್ಮಯೋಗಾದಿಗಳು ಈ ಜನ್ಮದ ಉಪಾಸನೆಗೆ ಅಂಗವಾಗುವದೆಂಬುದು ಸೂತ್ರಾಭಿಪ್ರಾಯಕ್ಕೂ ವಿರುದ್ಧವು. ನಿತ್ಯನೈಮಿತ್ತಿಕಗಳೂ ಯಾವಜ್ಜೀವವೂ ಅನುಷ್ಠಿಸುವ ಉಪಾಸನಕ್ಕೆ ಅಂಗನೆಂದುಹೇಳಲ್ಪಟ್ಟಿರುತ್ತದೆ. ಇವೂ ಕರ್ಮಯೋಗಕ್ಕೆ ಸೇರಿದವು. ಪೂರ್ವಜನ್ಮದ ಅನುಷ್ಠಾನವು ಈ ಜನ್ಮಕ್ಕೆ ಒದಗುತ್ತವೆಂದು ಹೇಳುವದು ಲೋಕವಿರುದ್ಧವು.

ಪೂರ್ವಜನ್ಮದಲ್ಲಿ ಇಂಟರ್ ಮೀಡಿಯೇಟ್ ಪರೀಕ್ಷೆಯಾಗಿತ್ತು, ಬಿ. ಎ ಕ್ಲಾಸಿಗೆ ಸೇರಿಸು ಎಂದರೆ ಸೇರಿಸುವದಿಲ್ಲವು. ಅದೂ ಅಲ್ಲದೆ ಪೂರ್ವಜನ್ಮದ ಜ್ಞಾನವೂ ಇರುವದಿಲ್ಲವು.

ಆದುದರಿಂದ ವಾ ಎಂಬುದು, ಹೇಗೆ ಯೋಚಿಸಿದರೂ, ವಿಕಲ್ಪಾರ್ಥವನ್ನು, ಎಂದಿಗೂ ಕೊಡುವದಿಲ್ಲವು. ಆದುದರಿಂದ ವಾ ಎಂಬುದರ ಇನ್ನೆರಡೂ ಅರ್ಥಗಳಾದ ಸಮುಚ್ಚಯ ಮತ್ತು ಅವಧಾರಣಾರ್ಥಗಳನ್ನು ಹೇಳಬಹುದು, ಹೇಗೆಂದರೆ? ಕರ್ಮಯೋಗ ಜ್ಞಾನಯೋಗ ಗಳಿಂದಸಾಧ್ಯವಾದ ಭಕ್ತಿಯೋಗವಾದುದರಿಂದ ಇವುಗಳನ್ನೇ ಅನುಷ್ಠಿಸತಕ್ಕದ್ದು. ಹೀಗೆ ಅರ್ಥಹೇಳಿದರೆ, ಕರ್ಮಯೋಗ ಸಿದ್ಧಿಯಾಗಿದ್ದರೆ, ಆಗ ಅದು ಬೇಕಾಗಿಲ್ಲವೆಂದರೆ "ದೈವ ಮೇವಾ ಪರೇ" ಎಂಬಲ್ಲಿ ಹೇಳಿರುವ ಅಂಗಿಯು ಬೇಕಾಗಿಲ್ಲವು ಎಂಬರ್ಥವು. ಆದರೆ ಅದರ ಅಂಗವಾದ ನಿತ್ಯನೈಮಿತ್ತಿಕಗಳು ಆವಾಗಲೂ ಬೇಕು. ಈ ಸಮುಚ್ಚಯಾರ್ಥಕ್ಕೆ ಉದಾಹರಣೆಯಾಗಿ "ಯೊವನ್ನರಾಮಂ ದ್ರಕ್ಷ್ಯಾಮಿ ಲಕ್ಷ್ಮಣಂ ವಾ ಮಹಾ ಬಲಮ್ । ವೈದೇಹೀಂ ವಾ ಮಹಾ ಭಾಗಾಂ ನಮೇಶಾನ್ತಿರ್ಭವಿಷ್ಯತಿ ॥" ಎಂಬಲ್ಲಿ ಭರತಾಳ್ವಾರ್ರವರ ಆಶಯವು ರಾಮ ಲಕ್ಷ್ಮಣ ಸೀತಾ ಮೂವರನ್ನೂ ನೋಡಬೇಕೆಂಬುದು, ಹಾಗೆ ಅವರುಗಳನ್ನು ನೋಡದಿದ್ದರೆ ತನಗೆ ಶಾನ್ತಿಯಿಲ್ಲವೆಂದೂ ಹೇಳಿಕೊಂಡಿರುತ್ತಾರೆ.

ಅಥವಾ ವಾ ಶಬ್ದಕ್ಕೆ "ಸ್ಯುರೇವಂತು ಪುನರ್ವೈವೇತ್ಯವಧಾರಣವಾಚಕಾಃ" ಎಂದು ನಿಘಂಟುವಿನಲ್ಲಿ ಹೇಳಿರುವ ಹಾಗೆ ಅವಧಾರಣಾರ್ಥವಾದರೆ, ಏನೊಂದೂ ತೊಂದರೆಯೇ ಇರುವದಿಲ್ಲವು; ನೀನು ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನೇ ಅನುಷ್ಠಿಸತಕ್ಕದ್ದೆಂಬ ನಿರ್ವಿವಾದ ಅರ್ಥವು ದೊರೆಯುತ್ತದೆ. ಇದೇ ಸಮಂಜಸವಾದ ಅರ್ಥವು ಏಕೆಂದರೆ ಶ್ರೀ ಯತಿವರ್ಯರು ವಾ ಎಂಬುದಕ್ಕೆ ಅವಧಾರಣಾರ್ಥವನ್ನು ಹೇಳಿರುವ ಸಂದರ್ಭವುಂಟು. ಎಲ್ಲಿ ಎಂದರೆ "ಸಂಸಾರವಿಷವೃಕ್ಷಸ್ಯ ದ್ವೇಫಲೇಽಮೃತೋಪಮೇ । ಕದಾಚಿತ್ಕೇಶವೇ ಭಕ್ತಿ ಸ್ತದ್ಭಕ್ತೈರ್ವಾಸಮಾಗಮಃ" (ವಿ: ಪು.) ಎಂಬ ಶ್ಲೋಕದಲ್ಲಿ ವಾ ಎಂಬುದು ಅವಧಾರಣಾರ್ಥವೆಂದು ಅನ್ವಯಿಸುತ್ತಾರೆಂದು ಈಡಿನಲ್ಲಿ ಹೇಳಲ್ಪಟ್ಟಿರುತ್ತದೆ. (ತಿರು. ೩. ೭. ೧) ಪಾಶುರವಾದ "ಪಯಿಲುಂಶುಡರೊಳಿ" ಎಂಬ ಪಾಶುರವಾಕ್ಯವನ್ನು ನೋಡಿ. ಅವಧಾರಣಾರ್ಥಕ್ಕೆ ಗುರುಬಾಲ ಪ್ರಭೋಧಿಕೆಯಲ್ಲಿ "ವ್ಯಾಸೋವಾ ಸರ್ವಧರ್ಮಜ್ಞಃ" ಎಂದು ಉದಾಹರಿಸಿರುತ್ತಾರೆ.

ಇನ್ನೂ ಕೆಲವರು ಯಥೇಚ್ಛಸಿ ತಥಾಕುರು ಎಂದು ಶ್ರೀ ಕೃಷ್ಣ ಭಗವಾನರವರು ಇಷ್ಟವಿದ್ದರೆ ಮಾಡು ಇಲ್ಲದಿದ್ದರೆ ಬಿಟ್ಟು ಬಿಡು ಎಂಬದಾಗಿ ಕೋಪದಿಂದ ಹೇಳಿದರು ಎಂದು ಹೇಳುವರು. ಇದೂ ಸರಿಯಲ್ಲವು. ಏಕೆಂದರೆ ಮುಂದಿನ ಶ್ಲೋಕದಲ್ಲಿ ಇಷ್ಟೋಽಸಿಮೇ ಎಂದು ಪರಮಕಾರುಣಿಕತ್ವವನ್ನು ಪ್ರದರ್ಶಿಸಿರುತ್ತಾರೆ. ಅದರ ಮುಂದಿನ ಶ್ಲೋಕದಲ್ಲೂ ಪುನಃ ಪ್ರಿಯೋಽಸಿ ಮೇ ಎಂದೂ ಹೇಳಿರುವಾಗ, ಅರ್ಜುನನ ವಿಷಯದಲ್ಲಿ ಕೋಪದಿಂದ ಹೇಳಿದರು ಎಂಬುದು ಪರಮ ವಿರುದ್ಧವಾದ ವಿಷಯವು. ಇಲ್ಲೆಲ್ಲಾ ಸ್ವಾಮಿಯ ಕೃಪಾ ಪ್ರವಾಹವನ್ನು ನೋಡಿ, ಮನಸ್ಸು ಆನಂದಿಸುತ್ತದೆ; ತಲೆ ತೂಗುತ್ತದೆ, ಗಾತ್ರವು ಪುಲಕಿತವಾಗುತ್ತದೆ.

ಇನ್ನೂ ಕೆಲವರು ಗುಹ್ಯಾದ್ಗುಹ್ಯತರಂ ಎಂಬ ಪ್ರಯೋಗದಿಂದ ಭ್ರಮೆಗೊಂಡು ಇಲ್ಲಿ ಕರ್ಮಯೋಗ ಜ್ಞಾನಯೋಗಗಳ ನಿಗಮನವು ಹೇಳಲ್ಪಟ್ಟಿತೆಂದೂ, ಮುಂದಿನ ಶ್ಲೋಕದಲ್ಲಿ ಗುಹ್ಯತಮವೆಂಬ ಪ್ರಯೋಗವಿರುವದರಿಂದ ಭಕ್ತಿಯೋಗ ನಿಗಮನವು ಹೇಳಲ್ಪಟ್ಟಿತೆಂದೂ ಭಾವಿಸುವರು; ಆದರೆ ಈ ಶ್ಲೋಕದಲ್ಲೇ ಅಶೇಷೇಣ ಎಂಬ ಪ್ರಯೋಗದಿಂದ ಎಲ್ಲಾ ಗೀತೋಪದೇಶವು ಇಲ್ಲಿವರೆಗೆ ಹೇಳಿದುದೆಲ್ಲಾ ತೋರಿಬರುವದರಿಂದ ಆ ಅಭಿಪ್ರಾಯವು ನಿರಸ್ತವು. ಯಥೇಷ್ಟಮಾತಿಷ್ಠವೆಂಬುದು ಮೂಲದ "ಯಥೇಚ್ಛಸಿ ತಥಾಕುರು" ಎಂಬುದರ ವ್ಯಾಖ್ಯಾನವು. ಇಲ್ಲಿ ಶ್ರೀ ಕೃಷ್ಣಭಗವಾನರವರು ಅರ್ಜುನನಿಗೆ ಸರ್ವಸ್ವಾತಂತ್ರ್ಯವನ್ನು

ಪ್ರಕೃತಿಯಿಂದ ಬಿಡುಗಡೆಯನ್ನೂ, ಸ್ಥಾನಂ ಶಾಶ್ವತಂ-ಪರಮಪದಪ್ರಾಪ್ತಿಯನ್ನು, ವಿಮೃಶ್ಯೈತ-ದಶೇಷೇಣ - ಚನ್ನಾಗಿ ಪರಿಶೀಲಿಸಿ ನೋಡಿ ಯಥೇಚ್ಛಸಿ ತಥಾಕುರು - ಈ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಯನ್ನು ನೀನು ಹೇಗೆ ಅಪೇಕ್ಷಿಸುತ್ತೀಯೋ ಹಾಗೆ ನಿನಗೆ ಕರ್ತವ್ಯವಾದ ಕರ್ಮಯೋಗ ದಲ್ಲಿ ಅಡಗಿರುವ ಯುದ್ಧಾದಿಗಳನ್ನು ಮಾಡಿ, ಅನಂತರ ಭಕ್ತಿಯೋಗವನ್ನೂ ಅನುಷ್ಠಿಸು ಎಂದು ಹಿಂದಿನ ಶ್ಲೋಕಕ್ಕೆ ವ್ಯಾಖ್ಯಾನಮಾಡಿದರೆ ಈ ಶ್ಲೋಕವು ಸಂಗತವಾಗುತ್ತದೇ ವಿನಾ ಅನ್ಯಥಾ ಇಲ್ಲವು.

ಭಾಷ್ಯಾರ್ಥವು—ಹೀಗೆ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳಾದ ಮೂರೂ ಅವಿಶೇಷೇಣ ರಹಸ್ಯಗಳಲ್ಲೆಲ್ಲಾ ರಹಸ್ಯವಾದುವೆಂದು ಹಿಂದೆ ಹೇಳಿದರು, ಮೋಕ್ಷಕ್ಕೆ ಪರಂಪರೆಯಾಗಿ ಸಾಧನಗಳು; ಅವುಗಳಲ್ಲಿ ಕರ್ಮಯೋಗ ಜ್ಞಾನಯೋಗಗಳು ಭಕ್ತಿಯೋಗಕ್ಕೆ ಹೇತುವಾಗಿ, ಸಾಕ್ಷಾದುಪಾಯವು ಭಕ್ತಿಯೋಗ ಶಬ್ದದಿಂದ ಹೇಳಲ್ಪಡುವ ಉಪಾಸನವೇ ಪ್ರಧಾನವಾದುದರಿಂದ ಅದನ್ನೇ ಹಿಂದೆಯೂ ಗುಹ್ಯತಮವಾದ ಉಪದೇಶವೆಂದು ಪರಮಪುರುಷನೇ ೯-೧ ರಲ್ಲಿ ಹೇಳಿರುವುದರಿಂದ, ಈ ಶ್ಲೋಕದಲ್ಲಿ ಆ ಭಕ್ತಿಯೋಗಕ್ಕೆ ಶ್ರೈಷ್ಠ್ಯವನ್ನು ಹೇಳುವವರಾಗಿ ಈ ಗೀತಾಶಾಸ್ತ್ರದಲ್ಲೆಲ್ಲಾ ಸಾರಭೂತವಾದ ಉಪದೇಶವು ಯಾವದೆಂಬುದನ್ನು ಈ ಶ್ಲೋಕದಲ್ಲೂ ಮುಂದಿನ ಶ್ಲೋಕದಲ್ಲೂ ಹೇಳುವವರಾಗಿ ಹಿಂದೆ ಉಪದೇಶಿಸುದವುಗಳನ್ನೇ ಜ್ಞಾಪಕಕ್ಕೆ ಕೊಡುತ್ತಾರೆ. ಈ ಶ್ಲೋಕದಲ್ಲಿ ಭಕ್ತಿಯೋಗವನ್ನು ಗುಹ್ಯತಮವೆಂದು ಇಷ್ಟುಮಾತ್ರವೇ ಹೇಳಿ, ಮುಂದಿನ ಶ್ಲೋಕದಲ್ಲಿ ಅದು ಯಾವುದು ಎಂದು ತಿಳಿಸುವದರಿಂದ ಈ ಮುಂದಿನ ಶ್ಲೋಕವನ್ನು ಗೀತೆಯ ಸಾರಭೂತಾರ್ಥವೆಂದು ಭಾವಿಸಿ ಜ್ಞಾಪಕದಲ್ಲಿಡತಕ್ಕದ್ದು, ಆದುದರಿಂದ ಶ್ರೀ ಯಾಮುನ ಮುನಿಗಳು ಸಹ ಮುಂದಿನ ೬೫ನೆಯ ಶ್ಲೋಕವನ್ನು ಕುರಿತು "ಶಾಸ್ತ್ರಸಾರಾರ್ಥಮುಚ್ಯತೇ" ಎಂದು ಹೇಳುತ್ತಾರೆ. ತ್ರಿವರ್ಣರಲ್ಲಿ ಶಕ್ತರಾಗಿರುವವರಿಗೆ ಈ ಭಕ್ತಿಯೋಗವು ಗುರುವಾದ ಉಪಾಯವೆಂದು ಈ ಶ್ಲೋಕದಲ್ಲೂ ಮುಂದಿನ ಶ್ಲೋಕದಲ್ಲೂ ಹೇಳಿ, ತ್ರಿವರ್ಣರಲ್ಲಿ ಅಶಕ್ತರಿಗೂ ಇತರ ಸ್ತ್ರೀ ಶೂದ್ರಾದಿ ಮಿಕ್ಕವರೆಲ್ಲರಿಗೂ ಸುಲಭೋಪಾಯವಾಗಿ ಪ್ರಪತ್ತಿರೂಪೋಪಾಯವನ್ನು ಉಪಾಸನದ ದುಷ್ಕರತ್ವದಿಂದ ದುಃಖಿಸುವ ಅರ್ಜುನನಿಗೆ ಮುಂದಿನ ೬೬ನೆಯ ಶ್ಲೋಕದಲ್ಲಿ ಹೇಳಿ, ಆತನ ದುಃಖೋಪಶಮನವನ್ನು ಮಾಡಿಸಿ, ಸಂತೋಷಚಿತ್ತನಾಗಿ ಯುದ್ಧವನ್ನು ಮಾಡುವಹಾಗೆ ಪ್ರೇರಿಸುತ್ತಾರೆ. ಆದುದರಿಂದ ಈ ೬೫ ಮತ್ತು ೬೬ನೆಯ ಶ್ಲೋಕಗಳು ಈ ಗುರು ಲಘುರೂಪವಾದ ಎರಡು ವಿಧ ಮೋಕ್ಷೋಪಾಯಗಳನ್ನು ಉಪದೇಶಿಸುವದರಿಂದ ಗೀತಾ ಶಾಸ್ತ್ರದ ಸಾರತಮವಾದವುಗಳೆಂದು ತಿಳಿಯತಕ್ಕದ್ದು. ಇದನ್ನೇ ಯಾಮುನ ಮುನಿಗಳು ಶಾಸ್ತ್ರಸಾರಾರ್ಥಮುಚ್ಯತೇ ಎಂದು, ಉಪಾಯಗಳು ಭಕ್ತಿಪ್ರಪತ್ತಿಗಳೆಂದ ತಿಳಿಸಿರುತ್ತಾರೆ. "ಭಕ್ತ್ಯಾಪರಮಯಾ ವಾಪಿಪ್ರಪತ್ತ್ಯಾ ವಾಮಹಾಮತೇ। ಪ್ರಾಪ್ಯೋಽಹಂ ನಾನ್ಯಥಾಪ್ರಾಪ್ತುಃ ಮಮಕೈಙ್ಕರ್ಯ ಲಿಪ್ಸುಭಿಃ" ಎಂಬುದು ಅನುಸಂಧೇಯವು. ಶ್ರೀ ನಿಗಮಾನ್ತ ದೇಶಿಕರವರ ಅಭಿಪ್ರಾಯವು ಹಾಗೆಯೇ, ಸಾರಾರ್ಥ ಶೇಷತಯಾ ಸಾರತಮಂ ಪ್ರಪದನಂ ಚರಮ ಶ್ಲೋಕೇನ ಪ್ರತಿಪದ್ಯತೇ" ಇತಿ ಸೋಽಪಿ ಶಾಸ್ತ್ರಸಾರಾರ್ಥಃ ಇತ್ಯನೇನೈವ ಕ್ರೋಡೀಕೃತಃ ಎಂದು ಅಪ್ಪಣೆ ಕೊಡಿಸುತ್ತಾರೆ. ಯಾಮುನಮುನಿಗಳಿಗೆ ಉಪಾಯಗಳೆರಡು ಎಂಬ ಅಭಿಪ್ರಾಯವೆಂದು ಹೇಗೆ ಹೇಳುತ್ತೀರೆಂದು ಆಕ್ಷೇಪಿಸಿದರೆ "ನಧರ್ಮನಿಷ್ಠೋಽಸ್ಮಿ" ಇತ್ಯಾದಿ ಶ್ಲೋಕಾರ್ಥಗಳನ್ನು ಪರಾಂಬರಿಸಬಹುದು. ಆದುದರಿಂದ ಗೀತಾರ್ಥ ಸಂಗ್ರಹದ ಪ್ರಥಮ ಶ್ಲೋಕದಿಂದ ಈ ಎರಡು ಉಪಾಯಗಳಿಗೂ ಅನ್ವಯಿಸುವಹಾಗೆ ಪ್ರಯೋಗಿಸಿರುತ್ತಾರೆ. ೫೭ನೆಯ ಪುಟವನ್ನು ಪರಾಂಬರಿಸಿ. ಆದುದರಿಂದ ೬೫ನೆಯ ಶ್ಲೋಕದಲ್ಲಿ ಹೇಳದ ಉಪಾಸನವೂ, ೬೬ನೆಯ ಶ್ಲೋಕದಲ್ಲಿನ ಪ್ರಪದನವೂ ಸಹ ಈ ಸಾರಭೂತಾರ್ಥದಲ್ಲೇ ಅಂತರ್ಗತವು.

ಪೂರ್ವಜನ್ಮದಲ್ಲಿ ಇಂಟರ್ ಮೀಡಿಯೇಟ್ ಪರೀಕ್ಷೆಯಾಗಿತ್ತು, ಬಿ. ಎ ಕ್ಲಾಸಿಗೆ ಸೇರಿಸು ಎಂದರೆ ಸೇರಿಸುವದಿಲ್ಲವು. ಅದೂ ಅಲ್ಲದೆ ಪೂರ್ವಜನ್ಮದ ಜ್ಞಾನವೂ ಇರುವದಿಲ್ಲವು.

ಆದುದರಿಂದ ವಾ ಎಂಬುದು, ಹೇಗೆ ಯೋಚಿಸಿದರೂ, ವಿಕಲ್ಪಾರ್ಥವನ್ನು, ಎಂದಿಗೂ ಕೊಡುವದಿಲ್ಲವು. ಆದುದರಿಂದ ವಾ ಎಂಬುದರ ಇನ್ನೆರಡೂ ಅರ್ಥಗಳಾದ ಸಮುಚ್ಚಯ ಮತ್ತು ಅವಧಾರಣಾರ್ಥಗಳನ್ನು ಹೇಳಬಹುದು, ಹೇಗೆಂದರೆ? ಕರ್ಮಯೋಗ ಜ್ಞಾನಯೋಗ ಗಳಿಂದಸಾಧ್ಯವಾದ ಭಕ್ತಿಯೋಗವಾದುದರಿಂದ ಇವುಗಳನ್ನೇ ಅನುಷ್ಠಿಸತಕ್ಕದ್ದು. ಹೀಗೆ ಅರ್ಥಹೇಳಿದರೆ, ಕರ್ಮಯೋಗ ಸಿದ್ಧಿಯಾಗಿದ್ದರೆ, ಆಗ ಅದು ಬೇಕಾಗಿಲ್ಲವೆಂದರೆ "ದೈವ ಮೇವಾ ಪರೇ" ಎಂಬಲ್ಲಿ ಹೇಳಿರುವ ಅಂಗಿಯು ಬೇಕಾಗಿಲ್ಲವು ಎಂಬರ್ಥವು. ಆದರೆ ಅದರ ಅಂಗವಾದ ನಿತ್ಯನೈಮಿತ್ತಿಕಗಳು ಆವಾಗಲೂ ಬೇಕು. ಈ ಸಮುಚ್ಚಯಾರ್ಥಕ್ಕೆ ಉದಾಹರಣೆಯಾಗಿ "ಯೋವನ್ನರಾಮಂ ದ್ರಕ್ಷ್ಯಾಮಿ ಲಕ್ಷ್ಮಣಂ ವಾ ಮಹಾ ಬಲಮ್ । ವೈದೇಹೀಂ ವಾ ಮಹಾ ಭಾಗಾಂ ನಮೇಶಾನ್ತಿರ್ಭವಿಷ್ಯತಿ ॥" ಎಂಬಲ್ಲಿ ಭರತಾಳ್ವಾರ್ರವರ ಆಶಯವು ರಾಮ ಲಕ್ಷ್ಮಣ ಸೀತಾ ಮೂವರನ್ನೂ ನೋಡಬೇಕೆಂಬುದು, ಹಾಗೆ ಅವರುಗಳನ್ನು ನೋಡದಿದ್ದರೆ ತನಗೆ ಶಾನ್ತಿಯಿಲ್ಲವೆಂದೂ ಹೇಳಿಕೊಂಡಿರುತ್ತಾರೆ.

ಅಥವಾ ವಾ ಶಬ್ದಕ್ಕೆ "ಸ್ಯುರೇವಂತು ಪುನರ್ವೈವೇತ್ಯವಧಾರಣವಾಚಕಾಃ" ಎಂದು ನಿಘಂಟುವಿನಲ್ಲಿ ಹೇಳಿರುವ ಹಾಗೆ ಅವಧಾರಣಾರ್ಥವಾದರೆ, ಏನೊಂದೂ ತೊಂದರೆಯೇ ಇರುವದಿಲ್ಲವು; ನೀನು ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳನ್ನೇ ಅನುಷ್ಠಿಸತಕ್ಕದ್ದೆಂಬ ನಿರ್ವಿವಾದ ಅರ್ಥವು ದೊರೆಯುತ್ತದೆ. ಇದೇ ಸಮಂಜಸವಾದ ಅರ್ಥವು ಏಕೆಂದರೆ ಶ್ರೀ ಯತಿವರ್ಯರು ವಾ ಎಂಬುದಕ್ಕೆ ಅವಧಾರಣಾರ್ಥವನ್ನು ಹೇಳಿರುವ ಸಂದರ್ಭವುಂಟು. ಎಲ್ಲಿ ಎಂದರೆ "ಸಂಸಾರವಿಷವೃಕ್ಷಸ್ಯ ದ್ವೇಫಲೇಽಮೃತೋಪಮೇ । ಕದಾಚಿದ್ಕೇಶವೇ ಭಕ್ತಿ ಸ್ತದ್ಭಕ್ತೈರ್ವಾಸಮಾಗಮಃ" (ವಿ. ಪು.) ಎಂಬ ಶ್ಲೋಕದಲ್ಲಿ ವಾ ಎಂಬುದು ಅವಧಾರಣಾರ್ಥವೆಂದು ಅನ್ವಯಿಸುತ್ತಾರೆಂದು ಈಡಿನಲ್ಲಿ ಹೇಳಲ್ಪಟ್ಟಿರುತ್ತದೆ. (ತಿರು. ೩. ೬. ೧) ಪಾಶುರವಾದ "ಪಯಿಲುಂಶುಡರೊಳಿ" ಎಂಬ ಪಾಶುರವಾಕ್ಯವನ್ನು ನೋಡಿ. ಅವಧಾರಣಾರ್ಥಕ್ಕೆ ಗುರುಬಾಲ ಪ್ರಭೋಧಿಕೆಯಲ್ಲಿ "ವ್ಯಾಸೋವಾ ಸರ್ವಧರ್ಮಜ್ಞಃ" ಎಂದು ಉದಾಹರಿಸಿರುತ್ತಾರೆ.

ಇನ್ನೂ ಕೆಲವರು ಯಥೇಚ್ಛಸಿ ತಥಾಕುರು ಎಂದು ಶ್ರೀ ಕೃಷ್ಣಭಗವಾನರವರು ಇಷ್ಟವಿದ್ದರೆ ಮಾಡು ಇಲ್ಲದಿದ್ದರೆ ಬಿಟ್ಟು ಬಿಡು ಎಂಬದಾಗಿ ಕೋಪದಿಂದ ಹೇಳಿದರು ಎಂದು ಹೇಳುವರು. ಇದೂ ಸರಿಯಲ್ಲವು. ಏಕೆಂದರೆ ಮುಂದಿನ ಶ್ಲೋಕದಲ್ಲಿ ಇಷ್ಟೋಽಸಿಮೇ ಎಂದು ಪರಮಕಾರುಣಿಕತ್ವವನ್ನು ಪ್ರದರ್ಶಿಸಿರುತ್ತಾರೆ. ಅದರ ಮುಂದಿನ ಶ್ಲೋಕದಲ್ಲೂ ಪುನಃ ಪ್ರಿಯೋಽಸಿ ಮೇ ಎಂದೂ ಹೇಳಿರುವಾಗ, ಅರ್ಜುನನ ವಿಷಯದಲ್ಲಿ ಕೋಪದಿಂದ ಹೇಳಿದರು ಎಂಬುದು ಪರಮ ವಿರುದ್ಧವಾದ ವಿಷಯವು. ಇಲ್ಲೆಲ್ಲಾ ಸ್ವಾಮಿಯ ಕೃಪಾ ಪ್ರವಾಹವನ್ನು ನೋಡಿ, ಮನಸ್ಸು ಆನಂದಿಸುತ್ತದೆ; ತಲೆ ತೂಗುತ್ತದೆ, ಗಾತ್ರವು ಪುಲಕಿತವಾಗುತ್ತದೆ.

ಇನ್ನೂ ಕೆಲವರು ಗುಹ್ಯಾದ್ಗುಹ್ಯತರಂ ಎಂಬ ಪ್ರಯೋಗದಿಂದ ಭ್ರಮೆಗೊಂಡು ಇಲ್ಲಿ ಕರ್ಮಯೋಗ ಜ್ಞಾನಯೋಗಗಳ ನಿಗಮನವು ಹೇಳಲ್ಪಟ್ಟಿತೆಂದೂ, ಮುಂದಿನ ಶ್ಲೋಕದಲ್ಲಿ ಗುಹ್ಯತಮವೆಂಬ ಪ್ರಯೋಗವಿರುವದರಿಂದ ಭಕ್ತಿಯೋಗ ನಿಗಮನವು ಹೇಳಲ್ಪಟ್ಟಿತೆಂದೂ ಭಾವಿಸುವರು; ಆದರೆ ಈ ಶ್ಲೋಕದಲ್ಲೇ ಅಶೇಷೇಣ ಎಂಬ ಪ್ರಯೋಗದಿಂದ ಎಲ್ಲಾ ಗೀತೋಪದೇಶವು ಇಲ್ಲಿವರೆಗೆ ಹೇಳಿದುದೆಲ್ಲಾ ತೋರಿಬರುವದರಿಂದ ಆ ಅಭಿಪ್ರಾಯವು ನಿರಸ್ತವು. ಯಥೇಷ್ಟಮಾತಿಷ್ಠವೆಂಬುದು ಮೂಲದ "ಯಥೇಚ್ಛಸಿ ತಥಾಕುರು" ಎಂಬುದರ ವ್ಯಾಖ್ಯಾನವು. ಇಲ್ಲಿ ಶ್ರೀ ಕೃಷ್ಣಭಗವಾನರವರು ಅರ್ಜುನನಿಗೆ ಸರ್ವಸ್ವಾತಂತ್ರ್ಯವನ್ನು

ಪ್ರಕೃತಿಯಿಂದ ಬಿಡುಗಡೆಯನ್ನೂ, ಸ್ಥಾನಂ ಶಾಶ್ವತಂ-ಪರಮಪದಪ್ರಾಪ್ತಿಯನ್ನು, ವಿಮೃಶ್ಯೈತ ದಶೇಷೇಣ - ಚನ್ನಾಗಿ ಪರಿಶೀಲಿಸಿ ನೋಡಿ ಯಥೇಚ್ಛಸಿ ತಥಾಕುರು - ಈ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಯನ್ನು ನೀನು ಹೇಗೆ ಅಪೇಕ್ಷಿಸುತ್ತೀಯೋ ಹಾಗೆ ನಿನಗೆ ಕರ್ತವ್ಯವಾದ ಕರ್ಮಯೋಗ ದಲ್ಲಿ ಅಡಗಿರುವ ಯುದ್ಧಾದಿಗಳನ್ನು ಮಾಡಿ, ಅನಂತರ ಭಕ್ತಿಯೋಗವನ್ನೂ ಅನುಷ್ಠಿಸು ಎಂದು ಹಿಂದಿನ ಶ್ಲೋಕಕ್ಕೆ ವ್ಯಾಖ್ಯಾನಮಾಡಿದರೆ ಈ ಶ್ಲೋಕವು ಸಂಗತವಾಗುತ್ತದೇ ವಿನಾ ಅನ್ಯಥಾ ಇಲ್ಲವು.

ಭಾಷ್ಯಾರ್ಥವು—ಹೀಗೆ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳಾದ ಮೂರೂ ಅವಿಶೇಷೇಣ ರಹಸ್ಯಗಳಲ್ಲೆಲ್ಲಾ ರಹಸ್ಯವಾದುವೆಂದು ಹಿಂದೆ ಹೇಳಿದರು,ಮೋಕ್ಷಕ್ಕೆ ಪರಂಪರೆಯಾಗಿ ಸಾಧನಗಳು; ಅವುಗಳಲ್ಲಿ ಕರ್ಮಯೋಗ ಜ್ಞಾನಯೋಗಗಳು ಭಕ್ತಿಯೋಗಕ್ಕೆ ಹೇತು ವಾಗಿ, ಸಾಕ್ಷಾದುಪಾಯವು ಭಕ್ತಿಯೋಗ ಶಬ್ದದಿಂದ ಹೇಳಲ್ಪಡುವ ಉಪಾಸನವೇ ಪ್ರಧಾನ ವಾದುದರಿಂದ ಅದನ್ನೇ ಹಿಂದೆಯೂ ಗುಹ್ಯತಮವಾದ ಉಪದೇಶವೆಂದು ಪರಮಪುರುಷನೇ ೯.-೧ ರಲ್ಲಿ ಹೇಳಿರುವದರಿಂದ, ಈ ಶ್ಲೋಕದಲ್ಲಿ ಆ ಭಕ್ತಿಯೋಗಕ್ಕೆ ಶ್ರೈಷ್ಠ್ಯವನ್ನು ಹೇಳುವವರಾಗಿ ಈ ಗೀತಾಶಾಸ್ತ್ರದಲ್ಲೆಲ್ಲಾ ಸಾರಭೂತವಾದ ಉಪದೇಶವು ಯಾವದೆಂಬುದನ್ನು ಈ ಶ್ಲೋಕದಲ್ಲೂ ಮುಂದಿನ ಶ್ಲೋಕದಲ್ಲೂ ಹೇಳುವವರಾಗಿ ಹಿಂದೆ ಉಪದೇಶಿಸುದವುಗಳನ್ನೇ ಜ್ಞಾಪಕಕ್ಕೆ ಕೊಡ ತ್ತಾರೆ. ಈ ಶ್ಲೋಕದಲ್ಲಿ ಭಕ್ತಿಯೋಗವನ್ನು ಗುಹ್ಯತಮವೆಂದು ಇಷ್ಟುಮಾತ್ರವೇ ಹೇಳಿ, ಮುಂದಿನ ಶ್ಲೋಕದಲ್ಲಿ ಅದು ಯಾವುದು ಎಂದು ತಿಳಿಸುವದರಿಂದ ಈ ಮುಂದಿನ ಶ್ಲೋಕವನ್ನು ಗೀತೆಯ ಸಾರಭೂತಾರ್ಥವೆಂದು ಭಾವಿಸಿ ಜ್ಞಾಪಕದಲ್ಲಿಡತಕ್ಕದ್ದು,ಆದುದರಿಂದ ಶ್ರೀ ಯಾಮುನ ಮುನಿಗಳು ಸಹ ಮುಂದಿನ ೬೫ನೆಯ ಶ್ಲೋಕವನ್ನು ಕುರಿತು "ಶಾಸ್ತ್ರಸಾರಾರ್ಥಮುಚ್ಯತೇ" ಎಂದು ಹೇಳುತ್ತಾರೆ. ತ್ರಿವರ್ಣರಲ್ಲಿ ಶಕ್ತರಾಗಿರುವವರಿಗೆ ಈ ಭಕ್ತಿಯೋಗವು ಗುರುವಾದ ಉಪಾಯವೆಂದು ಈ ಶ್ಲೋಕದಲ್ಲೂ ಮುಂದಿನ ಶ್ಲೋಕದಲ್ಲೂ ಹೇಳಿ, ತ್ರಿವರ್ಣರಲ್ಲಿ ಅಶಕ್ತರಿಗೂ ಇತರ ಸ್ತ್ರೀ ಶೂದ್ರಾದಿ ಮಿಕ್ಕವರೆಲ್ಲರಿಗೂ ಸುಲಭೋಪಾಯವಾಗಿ ಪ್ರಪತ್ತಿರೂಪೋಪಾಯವನ್ನು ಉಪಾಸನದ ದುಷ್ಕರತ್ವದಿಂದ ದುಃಖಿಸುವ ಅರ್ಜುನನಿಗೆ ಮುಂದಿನ ೬೬ನೆಯ ಶ್ಲೋಕದಲ್ಲಿ ಹೇಳಿ, ಆತನ ದುಃಖೋಪಶಮನವನ್ನು ಮಾಡಿಸಿ, ಸಂತೋಷಚಿತ್ತನಾಗಿ ಯುದ್ಧವನ್ನು ಮಾಡುವಹಾಗೆ ಪ್ರೇರಿಸುತ್ತಾರೆ. ಆದುದರಿಂದ ಈ ೬೫ ಮತ್ತು ೬೬ನೆಯ ಶ್ಲೋಕ ಗಳು ಈ ಗುರು ಲಘುರೂಪವಾದ ಎರಡು ವಿಧ ಮೋಕ್ಷೋಪಾಯಗಳನ್ನು ಉಪದೇಶಿಸು ವದರಿಂದ ಗೀತಾ ಶಾಸ್ತ್ರದ ಸಾರತಮವಾದವುಗಳೆಂದು ತಿಳಿಯತಕ್ಕದ್ದು. ಇದನ್ನೇ ಯಾಮುನ ಮುನಿಗಳು ಶಾಸ್ತ್ರಸಾರಾರ್ಥಮುಚ್ಯತೇ ಎಂದು, ಉಪಾಯಗಳು ಭಕ್ತಿಪ್ರಪತ್ತಿಗಳೆಂದ ತಿಳಿಸಿರುತ್ತಾರೆ. "ಭಕ್ತ್ಯಾ ಪರಮಯಾ ವಾಪಿಪ್ರಪತ್ತ್ಯಾ ವಾಮಹಾಮತೇ। ಪ್ರಾಪ್ಯೋಽಹಂ ನಾನ್ಯಥಾಪ್ರಾಪ್ತಃ ಮಮಕೈಙ್ಕರ್ಯ ಲಿಪ್ಸುಭಿಃ" ಎಂಬುದು ಅನುಸಂಧೇಯವು. ಶ್ರೀ ನಿಗ ಮಾಂತ ದೇಶಿಕರವರ ಅಭಿಪ್ರಾಯವು ಹಾಗೆಯೇ, ಸಾರಾರ್ಥ ಶೇಷತಯಾ ಸಾರತಮಂ ಪ್ರಪ ದನಂ ಚರಮ ಶ್ಲೋಕೇನ ಪ್ರತಿಪದ್ಯತೇ" ಇತಿ ಸೋಽಪಿ ಶಾಸ್ತ್ರಸಾರಾರ್ಥಃ ಇತ್ಯನೇನೈವ ಕ್ರೋಡೀಕೃತಃ ಎಂದು ಅಪ್ಪಣೆ ಕೊಡಿಸುತ್ತಾರೆ. ಯಾಮುನಮುನಿಗಳಿಗೆ ಉಪಾಯಗಳೆರಡು ಎಂಬ ಅಭಿಪ್ರಾಯವೆಂದು ಹೇಗೆ ಹೇಳುತ್ತೀರೆಂದು ಆಕ್ಷೇಪಿಸಿದರೆ"ನಧರ್ಮನಿಷ್ಠೋಽಸ್ಮಿ"ಇತ್ಯಾದಿ ಶ್ಲೋಕಾರ್ಥಗಳನ್ನು ಪರಾಂಬರಿಸಬಹುದು. ಆದುದರಿಂದ ಗೀತಾರ್ಥ ಸಂಗ್ರಹದ ಪ್ರಥಮ ಶ್ಲೋಕದಿಂದ ಈ ಎರಡು ಉಪಾಯಗಳಿಗೂ ಅನ್ವಯಿಸುವಹಾಗೆ ಪ್ರಯೋಗಿಸಿರುತ್ತಾರೆ. ೫೭ನೆಯ ಪುಟವನ್ನು ಪರಾಂಬರಿಸಿ. ಆದುದರಿಂದ ೬೫ನೆಯ ಶ್ಲೋಕದಲ್ಲಿ ಹೇಳದ ಉಪಾಸನವೂ, ೬೬ನೆಯ ಶ್ಲೋಕದಲ್ಲಿನ ಪ್ರಪದನವೂ ಸಹ ಈ ಸಾರಭೂತಾರ್ಥದಲ್ಲೇ ಅಂತರ್ಗತವು.

**ಭಾ.** **ಸರ್ವೇಷ್ವೇತೇಷು ಗುಹ್ಯೇಷು ಭಕ್ತಿಯೋಗಸ್ಯ ಶ್ರೈಷ್ಠ್ಯಾದ್ಗುಹ್ಯತಮಮ್ ಇತಿ ಪೂರ್ವಮೇವೋಕ್ತಮ್, (೧) "ಇದಂತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ" ಇತ್ಯಾದೌ ; ಭೂಯೋಽಪಿ ತದ್ವಿಷಯಂ ಪರಮಂ ಮೇ ವಚಃ ಶೃಣು ; ಇಷ್ಟೋಽಸಿ ಮೇ ದೃಢ ಇತಿ ತತಸ್ತೇ ಹಿತಮ್ ಪ್ರವಕ್ಷ್ಯಾಮಿ ॥ ೬೪ ॥**

---

ಆದುದರಿಂದ ಸಾಧ್ಯೋಪಾಯಗಳು, ಪರಮಹಿತಗಳಾದವು, ಉಪಾಸನ ಪ್ರಪದನಗಳು ಎರಡೇ ಎಂದು ಹೇಳುವದರಿಂದ ೬೫-೬೬ ನೆಯ ಶ್ಲೋಕಗಳ ಅಭಿಪ್ರಾಯಗಳೇ ಗೀತೆಯ ಸಾರಭೂತ ಗಳೆಂದು ತಿಳಯತಕ್ಕವು.

ಮೊದಲು ಸರ್ವಗುಹ್ಯತಮವೆಂಬುದಕ್ಕೆ ಸಮಂಜಸವಾದ ಅರ್ಥವನ್ನು ಬರೆಯುತ್ತಾರೆ— ಕೆಲವರು **ಸರ್ವೇಭ್ಯಃ ಗುಹ್ಯೇಭ್ಯಃ ಗುಹ್ಯತಮಂ** ಎಂದು ಅರ್ಥಮಾಡಿರುತ್ತಾರೆ. ಈ ಶಾಸ್ತ್ರದಲ್ಲಿ ಮಾತ್ರವೇ ಅಲ್ಲದೆ ಇನ್ನೂ ಮಿಕ್ಕ ಎಲ್ಲಾ ಗುಹ್ಯವಾದವುಗಳಿಗಿಂತ ಅತ್ಯಂತ ಗುಹ್ಯವಾಗಿ ಗುಹ್ಯತಮವಾದುದೆಂದು ಅರ್ಥಮಾಡಿರುತ್ತಾರೆ. ಹಿಂದೆಯೂ ಗೀತಾ ೯. ೧ ರಲ್ಲೇ ಇದು ಗುಹ್ಯತಮಂ ಎಂದು ಕೊಂಡಾಡಲ್ಪಟ್ಟಿರುತ್ತದೆ. ಅಲ್ಲಿ ಹೇಗೆ ಗುಹ್ಯತಮವು ಎಂದರೆ ಹಿಂದೆ ಹೇಳಿದುದಕ್ಕಿಂತಲೂ ಪರಮಹಿತವಾದ ಭಾಗವಾಗಿ ಶ್ರೇಷ್ಠವಾದುದೆಂಬ ಭಾವದಿಂದ ಹೇಳಿರುವದರಿಂದಲೂ, ಇಲ್ಲಿ **ಸರ್ವ** ಗುಹ್ಯತಮಂ ವೆಂದರೆ, ತಾವು ಉಪದೇಶಿಸಿರುವದೆಲ್ಲಾ ಗುಹ್ಯವಾದುವೇ, ಅವುಗಳಲ್ಲಿ ಗುಹ್ಯತಮವಾದುದು ಈ ಭಕ್ತಿಯೋಗವೆಂದು ತಿಳಿಸುವದಕ್ಕಾಗಿ ವ್ಯಾಖ್ಯಾನವು ಹೇಗೆ ಎಂದರೆ **ಸರ್ವೇಷ್ವೇತೇಷು ಗುಹ್ಯೇಷು ಗುಹ್ಯತಮಂ** ಎಂಬದಾಗಿ; ಸಮಸ್ತಗಳಾದ ಈ ಮೇಲಿನ ರಹಸ್ಯೋಪದೇಶಗಳಲ್ಲೆಲ್ಲಾ, **ಭಕ್ತಿಯೋಗಸ್ಯ ಶ್ರೈಷ್ಠ್ಯಾತ್** - ಭಕ್ತಿಯೋಗಕ್ಕೇ ಶ್ರೇಷ್ಠತೆಯು ಇರುವದರಿಂದ, ಗುಹ್ಯತಮಂ - ಭಕ್ತಿಯೋಗವೇ ಗುಹ್ಯತಮವಾದುದೆಂದು, **ಪೂರ್ವಮೇವೋಕ್ತಮ್** - ಮೊದಲೇ ೯ನೆಯ ಅಧ್ಯಾಯದ ಆದಿ ಶ್ಲೋಕದಲ್ಲೇ ಹೇಳಲ್ಪಟ್ಟಿರುತ್ತದೆ. ಆದುದರಿಂದ **ಸರ್ವಗುಹ್ಯತಮಮ್** ಎಂಬಲ್ಲಿ ಪಂಚಮ್ಯರ್ಥವೂ ಅಲ್ಲದೆ ಸಪ್ತಮ್ಯರ್ಥವೂ ಸಮಂಜಸವಾದುದು. ಇಲ್ಲಿ ಗುಹ್ಯತಮವೆಂದು ಹೇಳಿದುದು ಹಿಂದೆ ಹೇಳದೆ ಇದ್ದ ವಿಷಯವಾಗಿ ಗುಹ್ಯತಮವೆಂಬರ್ಥವಲ್ಲವು. ಹಿಂದೆ ಹೇಳಿದುದರಲ್ಲೇ ಸಾರತಮವಾಗಿಯೂ ಇರುವ ಭಾಗವೆಂಬ ಭಾವವು. **ಭೂಯಃ** ಎಂಬ ಪದದಿಂದ ಹಿಂದೆ ಹೇಳಿದುದರಲ್ಲೇ **ಪುನಃ** ಶ್ರೇಷ್ಠವಾದ ಸಾರತಮ ಭಾಗವನ್ನು ಹೇಳುವೆನೆಂಬುದು ವ್ಯಕ್ತಪಡುತ್ತದೆ. ಅದು ಪರಮವಾದ ವಾಕ್ಯ ಎಂದು ಮುಂದೆ ಹೇಳುವದರಿಂದ ತದನಂತರ ಹೇಳತಕ್ಕದ್ದೇನು ಇಲ್ಲವೆಂಬ ಭಾವದಿಂದ ನಿಗಮನವು ಸೂಚಿತವು. ಆದರೆ ಮುಂದೆ ಅರ್ಜುನನ ಶೋಕ ಪ್ರದರ್ಶನದ ಮೂಲಕ ಅದೇ ನಿಗಮನವಾಗದೆ ಈ ಗುರೂಪಾಯವನ್ನು ತ್ಯಜಿಸಿ ಲಘೂಪಾಯವನ್ನು ಅನುಷ್ಠಿಸೆಂದು ಬಹು ಸಙ್ಗ್ರಹವಾಗಿ ಹೇಳಬೇಕಾಗಿ ಬಂತು. ಅರ್ಜುನನು ಶೋಕಿಸುತ್ತಾ ಇದ್ದರೆ **"ಮಾಶುಚಃ"** ಎಂದು ಸಮಾಧಾನಮಾಡಬೇಕಷ್ಟೇ. ಹಿಂದೆ ಎಲ್ಲಿ ಹೇಳಿದೆ ಎಂದರೆ ಉದಾಹರಿಸುತ್ತಾರೆ. **"ಇದಂತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ" ಇತ್ಯಾದೌ**- ಇವೇ ಮೊದಲಾದ ಸ್ಥಳಗಳಲ್ಲಿ, ಆದಿ ಶಬ್ದದಿಂದ **"ರಾಜವಿದ್ಯಾ ರಾಜಗುಹ್ಯಮ್"**ಎಂಬ ಪ್ರಮಾಣವು ಸ್ಮಾರಿತವು; **ಭೂಯೋಽಪಿ**- ಆ ಗುಹ್ಯತಮವಾದುದನ್ನೇ **ಪುನಃ** ಇನ್ನೊಂದುಸಲ, **ತದ್ವಿಷಯಂ**- ಕುರಿತು, **ಪರಮಂ**-ಪರಮ ಹಿತವಾದ ಪ್ರಯುಕ್ತ, ಆದಕ್ಕಿಂತಲೂ ಉತ್ಕೃಷ್ಟವಾದುದಿಲ್ಲದ ಅದನ್ನೇ **ಮೇವಚಃ** - ಶರಣಾಗತವತ್ಸಲನಾಗಿ, ಆ ಕಾರಣದಿಂದ ಭಕ್ತಪರಾಧೀನನಾದ ನನ್ನ ಉಪದೇಶವನ್ನು, **ಶೃಣು**-ಗಮನಿಸಿ ಕೇಳು ; ಕೇಳುತ್ತಿರುವವನನ್ನು ಕೇಳು ಎಂದು ಹೇಳಿದರೆ ಹೇಳುವದರ ಪ್ರಾಮುಖ್ಯತೆಯನ್ನೂ ಶ್ರೋತಾವಿನಲ್ಲಿರಬೇಕಾದ ಆದರವನ್ನೂ ಹೇಳಿದಂತಾಯಿತು ; ಅದೇನು

---

(೧) ಗೀ. ೯-೧.

**ಇಷ್ಟು ಆದರದಿಂದ ಪುನಃಪುನಃ ಹೇಳುತ್ತೀಯೆ ಎಂದರೆ ಇಷ್ಟೋಽಸಿ ಮೇ ದೃಢಇತಿ** - ನೀನು ನನಗೆ ಅತ್ಯರ್ಥ ಪ್ರಿಯನಾಗಿರುವವನು ಎಂದು ಚನ್ನಾಗಿ ತಿಳಿದವನಾಗಿ, **ತತಃ** - ಆ ಕಾರಣದಿಂದ **ತೇ** - ನಿನಗೆ, **ಹಿತಮ್** - ಆ ಗುಹ್ಯತಮವಾಗಿರುವ ಹಿತವನ್ನು, **ಪ್ರವಕ್ಷ್ಯಾಮಿ** - ಮನಸ್ಸು ಚನ್ನಾಗಿ ಹಿಡಿಯುವ ಹಾಗೆ ಹೇಳುವೆನು. ಹೀಗೆ ಪ್ರಪನ್ನನಾದ ಮೋಕ್ಷಾರ್ಥಿಯೇ ತನಗೆ ಅತ್ಯರ್ಥ ಪ್ರಿಯನೆಂದು ಹಿಂದೆಯೇ **"ಪ್ರಿಯೋಹಿ ಜ್ಞಾನಿನೋಽತ್ಯರ್ಥ ಮಹಂ ಸಚ ಮಮ ಪ್ರಿಯಃ** (೭-೧೭) ಎಂಬಲ್ಲಿ ಹೇಳಲ್ಪಟ್ಟಿರುತ್ತದೆಯಷ್ಟೇ. ಇದರಿಂದ **ಯಮೇವೈಷವೃಣುತೇ ತೇನಲಭ್ಯಃ** (ಕಠ. ೨-೨೩) ಎಂಬ ಉಪನಿಷದರ್ಥವು ಬೋಧಿಸಲ್ಪಟ್ಟಿತು. ಭಗವಂತನು ಇಷ್ಟನೆಂದು ವರಿಸಿದರೇನೇ ಸಿದ್ಧೋಪಾಯನಾಗಿ ನಿಂತು ಸಾಧ್ಯೋಪಾಯವಾದ ಭಕ್ತಿಯೋಗ ಅಥವಾ ಪ್ರಪದನವನ್ನು ಅನುಷ್ಠಿಸುವ ಹಾಗೆ ಮಾಡಿ ಮೋಕ್ಷದಾಯಕನಾಗುವನೆಂಬ ರಹಸ್ಯಾರ್ಥವೂ ಇದರಿಂದ ಸೂಚಿತವು.

ಇದು **ಪರಮಂ** ವಚಸ್ಸು ಹೇಗೆ? ಎಂದರೆ **ಯಸ್ಮಾದ್ಧರ್ಮಾತ್ಪರೋ ಧರ್ಮೋ ವಿದ್ಯತೇ ನೇಹ ಕಶ್ಚನ"** ಎಂದು ಹೇಳಿರುವದರಿಂದ ಉಪಾಸನವು ಸರ್ವಶ್ರೇಷ್ಠವಾದ ಧರ್ಮವು. ಹಾಗಯೇ **"ಇಜ್ಯಾಚಾರ ದಮಾಹಿಂಸಾದಾನಸ್ವಾಧ್ಯಾಯ ಕರ್ಮಣಾಮ್। ಅಯಂತು ಪರಮೋಧರ್ಮೋ ಯದ್ಯೋಗೇ ನಾತ್ಮದರ್ಶನಮ್** ॥ ಎಂದು ಹೇಳಲ್ಪಟ್ಟಿರುವದರಿಂದ ಭಗವಂತನ ಉಪಾಸನವು ಪರಮ ಧರ್ಮವು ಸರ್ವೋತ್ಕೃಷ್ಟ ಧರ್ಮವು. ಉಪಾಸನವು ಶುದ್ಧ ಜ್ಞಾನವೆಂದು ಕೆಲವರು ಹೇಳುವರು. ಮನಸ್ಸಿನ ಮೂಲಕ ಪರಮಾತ್ಮ ಸಾಕ್ಷಾತ್ಕಾರ ಜ್ಞಾನ ರೂಪವಾದುದರಿಂದ 'ಇದೂ ಕರ್ಮರೂಪವೇ. ಆದುದರಿಂದ ಕರ್ಮದ ಸಹಾಯವಿಲ್ಲದ ಜ್ಞಾನರೂಪ ವಾದುದೆಂದು ಹೇಳುವ ವಾದವು ಇದರಿಂದ ನಿರಸ್ತವು. ಆದುದರಿಂದ ಜ್ಞಾನನಿಧಿಗಳಾದ ಶ್ರೀ ಯಾಮುನಮುನಿಗಳು **"ತ್ರಯಾಣಾಮಪಿ ಯೋಗಾನಾಂ ತ್ರಿಭಿರನ್ಯೋನ್ಯಸಙ್ಗಮಃ"** ಮೂರಾದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳಲ್ಲೂ ಕರ್ಮ, ಜ್ಞಾನ, ಭಕ್ತಿ, ಮೂರೂ ಬೇರೆ ಬೇರೆ ವಿಧಗಳಾಗಿವೇ ಎಂದು ಗೀತಾರ್ಥಸಂಗ್ರಹದಲ್ಲಿ ಉಪದೇಶಿಸಿರುತ್ತಾರೆ. ಆ ಶ್ಲೋಕ ವನ್ನು ಪರಾಂಬರಿಸಿ.

ಅಗಲಿ ಉಪಚ್ಛಂದನರೂಪದಲ್ಲಿ ಈ ಧರ್ಮದ ಸ್ತುತಿಗಾಗಿ ಗುಹ್ಯತಮವೆಂದು ಹೇಳಿ ವಂಚಿಸು ತ್ತೇನೆಂದು ತಿಳಿಯಬೇಡ. ಏಕೆಂದರೆ **ಇಷ್ಟೋಽಸಿ**, ಇಷ್ಟನಾದವನನ್ನು ಎಂದಿಗಾದರೂ ವಂಚಿಸು ವನೇ ಎಂಬ ಭಾವವು ಸೂಚಿತವು. ಭಸ್ಮಾಸುರನನ್ನು ವಂಚಿಸಬಹುದು. ಕಾಲನೇಮಿಯನ್ನು ವಂಚಿಸಬಹುದು. ಬಲಿಚಕ್ರವರ್ತಿಯನ್ನು ವಂಚಿಸಬಹುದು, ಅಸುರರನ್ನು ವಂಚಿಸಬಹುದು ಭಕ್ತರಾದ ಪಾಂಡವರನ್ನು ವಂಚಿಸಬಹುದೋ? ಎಂಬ ತಾತ್ಪರ್ಯವು. ಈವು ಉಪದೇಶಿಸಿದುದ ರಲ್ಲೆಲ್ಲಾ ಈ ಭಕ್ತಿಯೋಗವು ಗುಹ್ಯತಮವು ಹೇಗೆ ಎಂಬವಿಷಯದಲ್ಲಿ ಶ್ರೀ ನಿಗಮಾನ್ತದೇಶಿಕ ರವರು ಹೇಳಿರುವದೇನೆಂದರೆ—ಕರ್ಮಯೋಗ ಜ್ಞಾನಯೋಗಗಳು ವ್ಯವಹಿತೋಪಾಯಗಳಾಗಿ, ಭಕ್ತಿಯೋಗವು ಅವ್ಯವಹಿತೋಪಾಯವಾದುದರಿಂದ, ಭಕ್ತಿಯೋಗವೇ ಗುಹ್ಯತಮವಾಗಿ ಆದಕ್ಕೆ ಪ್ರಾಧಾನ್ಯವು ಎಂಬುದು; ಈ ಅಭಿಪ್ರಾಯವು ಶ್ರೀ ಯತಿವರ್ಯರ ಅಭಿಪ್ರಾಯವನ್ನು ಅನು ಸರಿಸಿಯೇ ಹೇಳಿದುದಾಗಿರುತ್ತದೆ. ಪ್ರಥಮ ಸೂತ್ರದ ಲಘುಸಿದ್ಧಾನ್ತದಲ್ಲಿ **"ಸರ್ವಾಸೂಪನಿಷತ್ಸು ಮೋಕ್ಷಸಾಧನತಯಾ ವಿಹಿತವೇದನ ಮುಪಾಸನ ಮಿತ್ಯುಕ್ತಮ್"** ಸಮಸ್ತ ಉಪನಿಷತ್ತು ಗಳಲ್ಲೂ ಹಾಗೆ, ಈ ಗೀತೋಪನಿಷತ್ತಿನಲ್ಲೂ ಮೋಕ್ಷಕ್ಕೆ ಸಾಧನ ಭೂತವಾದುದು ಯಾವುದೆಂದರೆ ಪರಮಾತ್ಮೋಪಾಸನವೆಂದೇ ವ್ಯಕ್ತವಾಗಿ ಹೇಳಿರುತ್ತಾರೆ. ಆದುದರಿಂದಲೇ ಇದಕ್ಕೇ ಶ್ರೈಷ್ಠ್ಯವೂ ಗುಹ್ಯತಮತ್ವವೂ, ಬೋಧಾಯನ ವೃತ್ತಿಯಲ್ಲಿ ಹೇಳಿರುವದನ್ನು **"ಉಪಾಸನಂ ಸ್ಯಾದ್ಧ್ರುವಾನು ಸ್ಮೃತಿಃ"** ಎಂದು ಉದಾಹರಿಸಿ, ಉಪಾಸನವು ಧ್ರುವಾನುಸ್ಮೃತಿಯೆಂದು ಹೇಳಿ, ಅನಂತರ

ಧ್ರುವಾನುಸ್ಮೃತಿ ಎಂದರೆ ಏನು ಎಂಬ ವಿಮರ್ಶೆಯಲ್ಲಿ ಪರಮಾತ್ಮ ಸಾಕ್ಷಾತ್ಕಾರ ರೂಪವಾದ ಧ್ರುವಾನುಸ್ಮೃತಿಯೇ ಭಕ್ತಿಶಬ್ದದಿಂದ ಹೇಳಲ್ಪಡುತ್ತದೆಂದು ಈ ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ— **"ಆತ್ಮಸಾಕ್ಷಾತ್ಕಾರರೂಪಾಸ್ಮೃತಿಸ್ಸ್ವಯಮಪ್ಯತ್ಯರ್ಥಪ್ರಿಯತ್ವೇನ ಸ್ವಯಮಪಿ ಅತ್ಯರ್ಥಪ್ರಿಯಾ ಯಸ್ಯ ಸ ಏವ ಪರೇಣಾತ್ಮನಾ ವರಣೀಯೋ ಭವತೀತಿ ತೇನೈವ ಲಭ್ಯತೇ ಪರ ಆತ್ಮೇತ್ಯುಕ್ತಂ ಭವತಿ"** ಹೀಗೆ ಹೇಳಿರುವದರಿಂದ ಇಷ್ಟನು ಪ್ರಿಯನೆಂದು ಸರ್ವೇಶ್ವರನು ಯಾವನನ್ನು ವರಿಸುವನೋ ಅವನಿಗೇನೇ ಶಾಶ್ವತಪದವೆಂದು ಹೇಳಿದಂತಾಯಿತು. ಮುಂದಕ್ಕೆ ಹೇಳುತ್ತಾರೇನೆಂದರೆ—**"ಏವಂ ರೂಪಾಧ್ರುವಾನುಸ್ಮೃತಿರೇವ ಭಕ್ತಿಶಬ್ದೇನಾಭಿಧೀಯತೇ"** ಅದಕ್ಕೆ ಕಾರಣವನ್ನು ತಿಳಿಸುತ್ತಾರೆ.—**ಉಪಾಸನಪರ್ಯಾಯತ್ವಾದ್ಭಕ್ತಿ ಶಬ್ದಸ್ಯ** ಎಂಬುವದರಿಂದ. ಆದುದರಿಂದ ಭಕ್ತಿಯೋಗವಾದ ಉಪಾಸನವೇ ಶ್ರೀಕೃಷ್ಣ ಭಗವಾನ್‌ರವರ ಉಪದೇಶದಲ್ಲೆಲ್ಲಾ ಸಾಕ್ಷಾದುಪಾಯವಾದುದರಿಂದ ಗುಹ್ಯತಮತ್ವವು ಸ್ಥಾಪಿತವು. ಹಾಗಾದರೆ ಗುಹ್ಯಗಳಾದ ಕರ್ಮಯೋಗಾದಿಗಳ ಉಪಯೋಗವೆಷ್ಟರಮಟ್ಟಿಗೆ ಎಂಬ ವಿಚಾರದಲ್ಲೇ ಶ್ರೀಯತಿವರ್ಯರು ಅಲ್ಲೇ ಹೇಳಿರುತ್ತಾರೇನೆಂದರೆ—**ಏವಂ ರೂಪಾಯಾಧ್ರುವಾನುಸ್ಮೃತೇಸ್ಸಾಧನಾನಿ ಯಜ್ಞಾದೀನಿಕರ್ಮಾಣಿ"** ಇದರಿಂದ ಕರ್ಮಯೋಗಾದಿಗಳು ಉಪಾಸನಕ್ಕೆ ಸಾಧನವೇ; ವಿನಾ ಅನ್ಯಥಾ ಅಲ್ಲವೆಂದು ಹೇಳಿರುವದರಿಂದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗವಾದ ಗುಹ್ಯಾದ್ಗುಹ್ಯತರಗಳಲ್ಲಿ ಭಕ್ತಿಯೋಗವೇ ಸಾಕ್ಷಾದುಪಾಯವಾದುದರಿಂದ ಅದಕ್ಕೆ ಗುಹ್ಯತಮತ್ವವು ಸಿದ್ಧವು ಎಂಬ ಭಾವವು. ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳೂ ಮೂರೂ ಉಪಾಯಗಳು ಮೂರೂ ಮೋಕ್ಷವನ್ನು ಕೊಡುತ್ತವೆ ಎಂದು ವಾದಿಸುವವರ ಕೂಗು ಈ ಮೇಲಿನ ಶ್ರೀ ದೇಶಿಕಯತಿವರ್ಯರುಗಳ ದಿವ್ಯಸೂಕ್ತಿಗಳಿಗೂ ವಿರೋಧವಾಗುವದಲ್ಲದೆ ಈ ಶ್ಲೋಕದಲ್ಲಿ ಶ್ರೀ ಕೃಷ್ಣಭಗವಾನ್‌ರವರು ಉಪದೇಶಿಸಿರುವ ಗುಹ್ಯತಮತ್ವಕ್ಕೂ ವಿರೋಧವು. ಮೂರೂ ಉಪಾಯವಾದರೆ ತುಲ್ಯಫಲ ಉಂಟಾಗುವದರಿಂದ ಗುಹ್ಯತಮತ್ವವನ್ನು ಭಕ್ತಿಯೋಗಕ್ಕೆ ಸಾಧಿಸಲು ಸಾಧ್ಯವಿಲ್ಲವು; ಶ್ರೀಯತಿವರ್ಯರು ಗುಹ್ಯತಮತ್ವವು ಭಕ್ತಿಯೋಗಕ್ಕೆ ಹೇಗೆ ಎಂದು ಉಪಪಾದಿಸುವ ಸಂದರ್ಭದಲ್ಲಿ, **"ಭಕ್ತಿಯೋಗಸ್ಯ ಶ್ರೈಷ್ಠ್ಯಾತ್"** ಎಂದು ಹೇತುವನ್ನು ಕೊಟ್ಟಿರುತ್ತಾರೆ. ಶ್ರೇಷ್ಠ ಹೇಗೆ ಎಂಬ ಚರ್ಚೆಯಲ್ಲಿ ಹಿಂದೆ ೯ನೆಯ ಅಧ್ಯಾಯದ ಪ್ರಥಮ ಶ್ಲೋಕದ ಇದಂತು ತೇ ಗುಹ್ಯತಮಂ ಎಂಬುದರ ವ್ಯಾಖ್ಯಾನದಲ್ಲಿ ಶ್ರೀನಿಗಮಾಂತದೇಶಿಕರವರು, ತು ಶಬ್ದ ಗುಹ್ಯತಮ ಶಬ್ದಗಳ ಅರ್ಥಗಳನ್ನು ವ್ಯಕ್ತಪಡಿಸುವವರಾಗಿ ಹೇಳುತ್ತಾರೆ. **"ಕರ್ಮಯೋಗ ಜ್ಞಾನಯೋಗಾಭ್ಯಾಮುಪಾಧಿಕ್ಯಂ ವಿವಕ್ಷಿತಮ್, ತಯೋರ್ಹಿ ಗುಹ್ಯತ್ವಂ ಗುಹ್ಯತರತ್ವಂ ಚ; ಇದಂ ತು ಗುಹ್ಯತಮಮ್"** ಎಂದು ಶ್ರೈಷ್ಠ್ಯವನ್ನು ಹೇಳಿ, ಪುನಃ ಇನ್ನೂ ಶ್ರೈಷ್ಠ್ಯವನ್ನು ಉಪಪಾದಿಸುತ್ತಾರೆ. ಹೇಗೆಂದರೆ **ಕರ್ಮಾದಿಭಿರ್ಹಿ ಭಕ್ತ್ಯುತ್ಪತ್ತ್ಯಾದಿ ವಿರೋಧಿಪಾಪ ನಿರಸನಮ್"** ಕರ್ಮಯೋಗಾದಿಗಳಿಗೆ, ಭಕ್ತಿಯೋಗಕ್ಕೆ ಪ್ರತಿಬಂಧಕ ಪಾಪನಿರಸನ ಮಾತ್ರವೇ, ಉಪಾಸನಕ್ಕಾದರೋ, **"ಭಕ್ತ್ಯಾತು ಭಗವತ್ಪ್ರಾಪ್ತಿ ವಿರೋಧಿಸಮಸ್ತ ಪಾಪನಿರಸನಂ ಹಿ ಪ್ರಮಾಣ ಸಿದ್ಧಮ್"** ಎಂದು ಸಮಸ್ತವಾದ ಪಾಪನಿವಾರಣ ಮೂಲಕ **"ಮೋಕ್ಷ್ಯಸೇ ಅಶುಭಾತ್"** ಎಂದು ಮೂಲದಲ್ಲಿರುವ ಹಾಗೆ ಮೋಕ್ಷಪ್ರಾಪ್ತಿಗೆ ಉಪಾಯವಾಗಿ ಶ್ರೈಷ್ಠ್ಯವು; ಆದುದರಿಂದ ಕರ್ಮಯೋಗ ಜ್ಞಾನಯೋಗಗಳು ಭಕ್ತಿಯೋಗ ಸಾಧನಗಳಾಗಿ ಗುಹ್ಯಗುಹ್ಯತರಗಳೂ, ಭಕ್ತಿಯೋಗವೇ ಸಾಕ್ಷಾದುಪಾಯವಾಗಿ ಮೋಕ್ಷಕ್ಕೆ ಅವ್ಯವಹಿತ ಸಾಧನವಾಗಿ ಗುಹ್ಯತಮವೆಂಬುದು ಸ್ಥಾಪಿತವು. ಕರ್ಮಯೋಗವು ವಿಕಲ್ಪವಾಗಿ ಮೋಕ್ಷಕ್ಕೆ ಉಪಾಯವೆಂಬುದು ಸರ್ವಶಾಸ್ತ್ರವಿರುದ್ಧವಾಗಿಯೂ ಈ ಗೀತಾಶಾಸ್ತ್ರಕ್ಕೂ ವಿರುದ್ಧವಾಗಿಯೂ, ಆಳ್ವಾರಾಚಾರ್ಯರುಗಳ ದಿವ್ಯಸೂಕ್ತಿಗೂ ವಿರೋಧವಾಗಿಯೂ ಇರುವ ಅಭಿಪ್ರಾಯವು. ಆದುದರಿಂದ ಹಿಂದಿನ

ಶ್ಲೋಕದಲ್ಲಿ **ಯಥೇಚ್ಛಸಿ ತಥಾಕುರು** ಎಂಬುದಕ್ಕೆ ಶ್ರೀ ಯತಿವರ್ಯರು "**ಕರ್ಮಯೋಗಂ ಜ್ಞಾನಯೋಗಂ ಭಕ್ತಿಯೋಗಂ ವಾ ಯಥೇಷ್ಟಮಾತಿಷ್ಠ**" ಎಂಬುದಕ್ಕೆ ಕರ್ಮ ಯೋಗವನ್ನು ತ್ಯಜಿಸಿ ನಿನಗಿಷ್ಟವಿದ್ದರೆ ಭಕ್ತಿಯೋಗವನ್ನೇ ಮಾಡು ಎಂದು ವಿಕಲ್ಪಿಸಿ ಹೇಳಿದರೆಂದು ಅರ್ಥಮಾಡುವದು ತುಂಬಾ ಅನ್ಯಾಯವು. ಶ್ರೀನಿಗಮಾನ್ತ ದೇಶಿಕರೇ ಈ ಸಂದರ್ಭದಲ್ಲೇ "**ಸಹಸೈವ ಪೂರ್ವಪೂರ್ವ ಪರಿತ್ಯಾಗೋ ನಯುಕ್ತ ಇತಿ ಭಾವಃ**" ಎಂದು ತಾತ್ಪರ್ಯಾರ್ಥವನ್ನು ವ್ಯಕ್ತಪಡಿಸಿರುತ್ತಾರೆ. ಅದುದರಿಂದ ಗುಹ್ಯತಮ ಹೇಗೆ ಎಂಬುದನ್ನು ಶ್ರೀಕೃಷ್ಣಭಗವಾನ್‌ರವರೇ ಮುಂದಿನ ಶ್ಲೋಕದಲ್ಲಿ ಭಕ್ತಿಯೋಗದ ಕರ್ತವ್ಯಾಂಶಗಳು ನಾಲ್ಕು ಎಂದು ಅವುಗಳನ್ನು ಪೂರ್ವಾರ್ಧದಲ್ಲಿ ಹಿಂದೆ ಹೇಳಿದುದನ್ನೆ ಜ್ಞಾಪಿಸಿ,ಅದರ ಫಲವಾಗಿ"**ಮಾಮೇವೈಷ್ಯಸಿ**" ಎಂದು ಹೇಳಿರುವದರಿಂದ, ಸಾಕ್ಷಾನ್ಮೋಕ್ಷ ಫಲಪ್ರದತ್ವ ಭಕ್ತಿಯೋಗಕ್ಕೆ ಮಾತ್ರವೇ ವಿನಾ ಬರೀ ಕರ್ಮಯೋಗ ಜ್ಞಾನಯೋಗಗಳಿಗಿಲ್ಲವಾದುದರಿಂದ ಭಕ್ತಿಯೋಗಕ್ಕೆ ಶ್ರೈಷ್ಠ್ಯವೂ ಗುಹ್ಯತಮತ್ವವೂ ಎಂಬುದು ಸ್ಥಾಪಿತವು. ಭಕ್ತಿಯೋಗವೇ ಅಂಗಿಯು, ಕರ್ಮಯೋಗಜ್ಞಾನ ಯೋಗಗಳು ತದಙ್ಗಗಳೆಂದು ಸುಸ್ಪಷ್ಟವಾಗಿ ಮುಂದಿನ ಶ್ಲೋಕದ ಅವತಾರಿಕೆಯಲ್ಲಿ "ಮನ್ಮನಾಭವ ಇತ್ಯಸ್ಯಾ **ವ್ಯವಹಿತ ಫಲಸಾಧನತಯಾ ಗುಹ್ಯತಮಾಙ್ಗ ಸ್ವರೂಪ ಪರತ್ವಂ ದರ್ಶಯಿತುಂ** ತತ್ಸ್ವರೂಪಂ ತಾವತ್ಪ್ರ**ಮಾಣತ ಶ್ಶಿಕ್ಷಯತಿ ವೇದಾನ್ತೇಷ್ವಿತಿ**" ಎಂಬುದರಿಂದ **ಉ**ಪದೇಶಿಸುತ್ತಾರೆ. ಇಷ್ಟುಸ್ಪಷ್ಟವಾಗಿ ಶ್ರೀ ನಿಗಮಾನ್ತದೇಶಿಕರವರು ಹೇಳಿದ್ದರೂ, ಅವರ ಶ್ರೀಮದ್ರಹಸ್ಯತ್ರಯಸಾರದ **ಕರ್ಮಜ್ಞಾನಸಮುಪಾಸನಂಚ ಶರಣಂ** ವ್ರಜ್ಯೇತಿಚ" ಎಂಬ ಉಪಾಯವಿಭಾಗಾಧಿಕಾರಶ್ಲೋಕದಲ್ಲಿ ಎರಡು ಉಪಾಯಗಳಾದ ಭಕ್ತಿ ಪ್ರಪತ್ತಿಗಳನ್ನು ಎರಡು **ಚ** ಕಾರದಿಂದ ಸ್ಪಷ್ಟವಾಗಿ ಹೇಳಿ, ಕರ್ಮಯೋಗ ಜ್ಞಾನಯೋಗಗಳಿಗೆ ಸದ್ವಾರಕತ್ವ ಮಾತ್ರವನ್ನೇ ಭಕ್ತಿಯೋಗಕ್ಕೆ ಅದ್ವಾರಕತ್ವವನ್ನೇ ತೋರಿಸಿ, ಪ್ರಪದನಕ್ಕೆ ಈ ಎರಡು ಆಕಾರಗಳೂ ಉಂಟೆಂಬುದನ್ನು ಪ್ರಕಟಿಸುವದಕ್ಕೆ ಹೇಳಿದುದನ್ನು ಗ್ರಹಿಸದೆ ನಾಲ್ಕು ಉಪಾಯಗಳು ಹೇಳಲ್ಪಟ್ಟವೆಂಬ ವಾದವು ಶ್ರೀಮದಾಚಾರ್ಯರುಗಳ ಹೃದಯವನ್ನು ಗ್ರಹಿಸದಿರುವ ಶಾಸ್ತ್ರವಿರುದ್ಧಾಭಿಪ್ರಾಯವೆಂಬುದರಲ್ಲಿ ಸಂದೇಹವಿಲ್ಲವು. ಶ್ರೀ ಯತಿವರ್ಯರು ಈ ಗೀತಾ ಶಾಸ್ತ್ರಾವತಾರಿಕೆಯಲ್ಲೇ "ಜ್ಞಾನಕರ್ಮಾನುಗೃಹೀತಂ **ಭಕ್ತಿಯೋಗ ಮವತಾರಯಾಮಾಸ**" ಎಂಬಲ್ಲಿ ಜ್ಞಾನಕರ್ಮಗಳು ಅಙ್ಗಗಳೆಂದೂ ಭಕ್ತಿಯೋಗವೇ ಅಂಗಿ ಎಂದು **ಹೇಳಿರುತ್ತಾರೆ.** ಗೀತಾಚಾರ್ಯರು "**ನಾಹಂ ವೇದೈ**" ಎಂಬುದರಿಂದ ಬರೀ ಕರ್ಮಯೋಗಕ್ಕೆ ಸಾಕ್ಷಾತ್ತಾಗಿ ಮುಕ್ತಿಕೊಡುವ ಶಕ್ತಿಯಿಲ್ಲವೆಂದು ಹೇಳಿರುತ್ತಾರೆ. ಹಾಗೆಯೇ ನ್ಯಾಯ ಸಿದ್ಧಾಂಜನದಲ್ಲೂ "**ಕರ್ಮಾಪಿ ನ ಕೇವಲಂ ಜ್ಞಾನ ಸಮುಚ್ಚಿತಂ ವಾ ಮುಕ್ತಿ ಹೇತುಃ**" ಎಂದು ಅಪ್ಪಣೆ ಕೊಡಿಸಿ ಕೊನೆಯಲ್ಲಿ "**ದ್ವಯೋರಪಿ ಚ ಭಕ್ತ್ಯಂಗತ್ವಂ ಬಹುಷು ಪ್ರದೇಶೇಷು ಅಭಿ ಹಿತಮ್**" ಎಂದು ಕರ್ಮಯೋಗ ಜ್ಞಾನಯೋಗಗಳೆರಡೂ ಭಕ್ತಿಯೋಗಕ್ಕೆ ಅಂಗಗಳೆಂದು ವಿಶದವಾಗಿ ತಿಳಿಸಿರುತ್ತಾರೆ.

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕದಲ್ಲಿ ಶರಣಾಗತವತ್ಸಲನಾಗಿ ಕರುಣಾನಿಧಿಯಾದ ಶ್ರೀ ಕೃಷ್ಣಭಗವಾನರವರು ಓ ಅರ್ಜುನನೇ ನಾನು ನಿನಗೆ ಅತ್ಯರ್ಥ ಪ್ರಿಯನಾದುದರಿಂದ ೯ನೆಯ ಅಧ್ಯಾಯದಲ್ಲಿ ಈ ಗೀತ ಶಾಸ್ತ್ರದ, ಹಾಗೆಯೇ ಸರ್ವ ಶಾಸ್ತ್ರದ ಸಾರತಮಾರ್ಥವನ್ನು ನಿನಗೆ ಉಪದೇಶಿಸಿದ್ದೆನು, ಅದು ನಿನಗೆ ಗುಹ್ಯತಮವಾದುದೆಂದೂ ಹೇಳಿದ್ದೆನು, ನೀನು ಅತ್ಯರ್ಥಪ್ರಿಯನಾದ ಪ್ರಯುಕ್ತ,ಇನ್ನೊಂದು ಸಲ ನಿನಗೆ ಆ ಸಾರಭೂತಾರ್ಥವನ್ನು ಜ್ಞಾಪಕಕ್ಕೆ ಕೊಡುವೆನೆಂದು ಹಿಂದಿನ ಶ್ಲೋಕದಲ್ಲಿ ಹೇಳಿ, ಈ ಶ್ಲೋಕದಲ್ಲಿ ಗುಹ್ಯತಮವಾದ ಪರಮಹಿತವನ್ನೇ ಪುನಃ ಹೇಳಿ ತನ್ಮೂಲಕ ನೀನು ತುಂಬಾ ಪ್ರಿಯತಮನಾದ ಪ್ರಯುಕ್ತ ನೀನು ನನ್ನ ಸಾಯುಜ್ಯವನ್ನೇ ಹೊಂದುವಿ ನಿನಗೆ ಸಂಶಯವು ಈಷದಪಿ ಬೇಡವೆಂದು ಸತ್ಯಪ್ರತಿಜ್ಞೆಯನ್ನು

ಮೂ. ಮನ್ಮನಾಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ ೬೫ ॥

---

ಮಾಡುತ್ತಾರೆ.—ಇದರಿಂದ "ವಿದಿತಸ್ಸಹಿ ಧರ್ಮಜ್ಞಶ್ಶರಣಾಗತವತ್ಸಲಃ" (ರಾ. ಸುಂ.) ಎಂಬಲ್ಲಿ ಹೇಳಿರುವ ಹಾಗೆ, ಭಕ್ತವತ್ಸಲನ ಕೃಪಾಪ್ರಭಾವವು ಅಗಮ್ಯವಾದುದೆಂದು ತೋರ್ಪಡಿಸಿಕೊಂಡಿರುತ್ತಾರೆ. ಈ ಶ್ಲೋಕವೂ, ಮುಂದಿನ ಶ್ಲೋಕವೂ, ಚ್ಯುತಿಯೇ ಇಲ್ಲದ ಕೃಪಾಪ್ರವಾಹ ತರಂಗಗಳೆಂದು ಹೇಳುವದೂ ಕೂಡ, ಅದರ ಮಾಹಾತ್ಮ್ಯೆಯ ಏಕದೇಶ ಕೂಡ ಆಗುವದಿಲ್ಲವು.

ಮನ್ಮನಾಭವ—ಇದೀಗ ಭಕ್ತಿಯೋಗರೂಪ ಮುಖ್ಯವಾದ ಉಪದೇಶವು; ಇದನ್ನೇ ಹಿಂದೆ, ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ಎಂದು (ಅ. ೧೨. ೮) ಉಪದೇಶಿಸಿದ್ದರು; ಮನ್ಮನಾಭವ ಎಂಬುದರಲ್ಲಿ ನನ್ನಲ್ಲೇ ಅವ್ಯಭಿಚಾರಿಯಾದ ಭಕ್ತಿಯನ್ನಿಟ್ಟು ಮನಸ್ಸು ಅನ್ಯದೇವತೆಗಳಲ್ಲೂ, ಅನ್ಯಫಲಗಳಲ್ಲೂ ಚಲಿಸಿದ ಹಾಗೆ ತೈಲಧಾರೆಯ ಹಾಗೆ ಅವಿಚ್ಛಿನ್ನ ಸ್ಮೃತಿ ಸಂತಾನವನ್ನುಳ್ಳವನಾಗಿ ಆಗು; ಆದೇನು ನನ್ನಲ್ಲೇ ಮನಸ್ಸನ್ನಿಡತಕ್ಕದ್ದು ಎನ್ನುವದಕ್ಕೆ ತಾನು ಎಂತವನು ಎಂಬುದಕ್ಕೆ ಅಮೋಘ ವ್ಯಾಖ್ಯಾನವನ್ನು ೯ನೆಯ ಅಧ್ಯಾಯಾಂತ್ಯ ಶ್ಲೋಕದಲ್ಲಿ ಹೇಳಿ, ಉಪಾಸ್ಯದೇವತೆಯು ಎಂತವನಾಗಿರಬೇಕೆಂದರೆ ಅಲ್ಲಿ ತಿಳಿಸಿರುತ್ತಾರೆ. ನಾನು ಎಂತವನೆಂದರೆ ಅನುಗ್ರಹಮಯಳಾದ ಅಜ್ಞಾತನಿಗ್ರಹಳಾಗಿರುವ ಲಕ್ಷ್ಮಿಯೊಂದಿಗೇನೇ ಯಾವಾಗಲೂ ಇರುವ ಶ್ರಿಯಃ ಪತಿಯು; ಹೇಯ ಗಂಧವಿಲ್ಲದ, ಕಲ್ಯಾಣಗುಣ ಮಹೋದಧಿಯು; ಸರ್ವಲೋಕ ಶರಣ್ಯನ; ಪರಮ ಕಾರುಣಿಕನು; ಆಶ್ರಿತವಾತ್ಸಲ್ಯ ಜಲಧಿಯು; ನಿಖಿಲ ಜಗದಾಧಾರನು; ಸರ್ವಜ್ಞನು; ಸತ್ಯಸಙ್ಕಲ್ಪನು; ಸರ್ವಕಾಮಪ್ರದನು; ಇಂತಹ ಗುಣಗಳೂ ಇಂತಹ ಶಕ್ತಿಯೂ ಔದಾರ್ಯವೂ ಇನ್ನು ಯಾರಿಗೂ ಇಲ್ಲವಾದುದರಿಂದ, ಮನ್ಮನಾಭವ-ಅಂತಹ ನನ್ನಲ್ಲೇ ಮನಸ್ಸುಳ್ಳವನಾಗು ಎಂದು ನನ್ನನ್ನೇ ಉಪಾಸಿಸು; ನನ್ನಸಾಕ್ಷಾತ್ಕಾರಕ್ಕಾಗಿ ಅತ್ಯಂತ ಪ್ರೀತಿಯಿಂದ ಪ್ರವರ್ತಿಸು; ಅನುಕ್ರಮೇಣ ಬೆಳೆದು ನನ್ನ ಸಾಕ್ಷಾತ್ಕಾರರೂಪವಾದ ಪರಜ್ಞಾನವನ್ನೂ, ನನ್ನನ್ನು ಬಿಟ್ಟು ಅಗಲಿ ಒಂದು ಕ್ಷಣವೂ ಇರಲಾರನೆಂಬ ಪರಮಭಕ್ತಿಯನ್ನೂ ಉಂಟುಮಾಡಲಿ ಎಂಬ ತಾತ್ಪರ್ಯವು-ನನ್ನಲ್ಲಿ ಹೀಗೆ ಮನಸ್ಸನ್ನಿಟ್ಟು ಅತ್ಯಂತ ಭಕ್ತಿಯಿಂದ ಉಪಾಸಿಸದೆ ಹೋದರೆ ನಿನಗೆ ಮುಕ್ತಿಯು ಎಂದಿಗೂ ಇಲ್ಲವೆಂದು ಶ್ರುತಿಗಳಲ್ಲಿ "ನಾನ್ಯಃಪನ್ಥಾ ವಿದ್ಯತೇ ಅಯನಾಯ" ಬೇರೆಮಾರ್ಗವೇ ಇಲ್ಲವೆಂದು ಹೇಳುವದರಿಂದ, ನನ್ನನ್ನೇ ಉಪಾಸಿಸು ಎಂಬ ಭಾವವು. ಮದ್ಭಕ್ತೋಭವ - ಒಬ್ಬನನ್ನೊಬ್ಬನು ಮನಸ್ಸಿನಲ್ಲಿ ಧ್ಯಾನಿಸುವಾಗ ಭಯದಿಂದ ನೆನೆಸಬಹುದು. ತಲೆಯ ಮೇಲೆ ಕಲ್ಲು ಹಾಕುವ ಶತ್ರುವಾಗಿ ನೆನಿಸಬಹುದು, ಆದರೆ ಪರಮ ಪುರುಷನನ್ನು ಹೇಗೆ ಸದಾ ಚಿನ್ತಿಬೇಕು ಎಂದರೆ ಹೇಳುತ್ತಾರೆ. - ಹೀಗೆ ಮನ್ಮನಾಭವ ನಾಗಬೇಕಾದರೆ, ಮದ್ಭಕ್ತನಾಗಿ ಮನ್ಮನಾಭವ ಎಂದು ಅನ್ವಯವು. ಮದ್ಭಕ್ತೋಭವ ಎಂದಲ್ಲವು. ಅಮಿತಸ್ಯ ಚದಾತಾರಂ ಎಂದು ಮಹರ್ಷಿಯು ಹೇಳಿರುವಹಾಗೆ,ಸಾಧ್ವಿಯು ತನ್ನ ಅತ್ಯನ್ತ ಲಾವಣ್ಯಯುಕ್ತನಾಗಿ ಕಲ್ಯಾಣ ಗುಣಾಕರನಾದ ಪತಿಯನ್ನು ಅತ್ಯಂತ ಪ್ರೀತಿಯಿಂದ ಹೀಗೆ ನೋಡುವಳೋ,ಆ ತೆರದಿ ಮದ್ಭಕ್ತಃ-ನನ್ನಲ್ಲಿ ನಿರತಿಶಯ ಪ್ರೀತಿ ವಿಶೇಷವನ್ನು ತೋರು; ಅಥವಾ ಕಾಮುಕನು ಸದಾ ಕಾಮಿನಿಯನ್ನೇ ವಿಶೇಷ ಪ್ರೀತಿಯಿಂದ ಯಾವಾಗ ಸಮಾಗಮ ಲಭಿಸೀತೆಂಬ ಪರಮ ವ್ಯಾಮೋಹದಿಂದ ಚಿಂತಿಸುತ್ತಿರುತ್ತಾನೋ ಎಂದು "ಯಾ ಪ್ರೀತಿ ರವಿವೇಕಾನಾಂ ವಿಷಯೇಷ್ವನುವರ್ತಿನೀ।ತ್ವಾಮನುಸ್ಮರತಸ್ಸಾಮೇ ಹೃದಯಾನ್ಮಾಪಸರ್ಪತು" (ವಿ. ಪು.) ಎಂದು ಮಹರ್ಷಿಯು ಹೇಳಿರುವ ಹಾಗೆ, ನಿರತಿಶಯ ಪ್ರೀತಿಯುಕ್ತನಾಗಿ ಮನ್ಮನಾಭವ ; ಇನ್ನೂ ಹೇಗೆ ಇದ್ದುಕೊಂಡೇ ನಿನ್ನನ್ನು ಚಿನ್ತ್ಯೈ

ಕಾಗ್ರತೆಯಿಂದ ಉಪಾಸಿಸತಕ್ಕದ್ದೆಂದರೆ, **ಮದ್ಯಾಜೀ** - ನೀನು ಮಾಡುವ ಸರ್ವ ಪ್ರವೃತ್ತಿಯೂ ನನ್ನ ಆರಾಧನ ರೂಪವಾಗಿ, ನೀನು ಆವಶ್ಯಕವಾಗಿ ದೇಹಾವಸಾನದವರೆಗೂ ಮಾಡುವ ಸ್ನಾನ ಸಂಧ್ಯಾವಂದನ, ಬ್ರಹ್ಮಯಜ್ಞ ಭಗವದಾರಾಧನ ವೈಶ್ವದೇವಾದಿ ನಿತ್ಯನೈಮಿತ್ತಿಕ ಕರ್ಮಗಳನ್ನೂ, ಇನ್ನೂ ಇತರ ಅನುಜ್ಞಾ ಕೈಙ್ಕರ್ಯಗಳನ್ನೂ ದೇಹ ಯಾತ್ರಾದಿ ಸಮಸ್ತ ಪ್ರವೃತ್ತಿಗಳನ್ನೂ ನಾನು ನಿನಗೆ ಹಿಂದೆಯೇ **"ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್। ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವಮದರ್ಪಣಮ್"** ಎಂಬಲ್ಲೂ **"ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯ"** (ಗೀ. ೩. ೩೧) ಎಂಬಲ್ಲೂ, ಹೇಳಿರುವಹಾಗೆ, ಎಲ್ಲವನ್ನೂ ನನ್ನ ಆರಾಧನಾರೂಪವಾಗಿ ಅನುಷ್ಠಿಸುವವನಾಗಿ ಎಂಬರ್ಥವು, ಏಕೆಂದರೆ **ನಾನೇ** ಸರ್ವಕರ್ಮಾರಾಧ್ಯನೆಂದು ಹಿಂದೆ ನಿನಗೆ ಉಪದೇಶಿಸಿರುತ್ತೇನೆ ; ನಾನು ಈಗ ತುಂಬಾ ಮುಖ್ಯವಾದ ಉಪಾಯಾನುಷ್ಠಾನದಲ್ಲಿರುವದರಿಂದ ನಿತ್ಯನೈಮಿತ್ತಿಕಾದಿ ವಿಹಿತಕರ್ಮಗಳನ್ನು ತ್ಯಾಗಮಾಡಬಹುದೆಂದು ಎಣಿಸಬೇಡ, ಮದ್ಯಾಜಿಯಾಗಿ ಮನ್ಮನಾಭವ; ಏಕೆಂದರೆ ಶ್ರುತಿಯು **ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ** (ಈಶಾ ೨) ಎಂದು ಉಪದೇಶಿಸಿರುತ್ತದೆ. **ಮಾಂ ನಮಸ್ಕುರು** - ನನ್ನನ್ನು ಕುರಿತು ನಮಸ್ಕಾರವನ್ನು ಮಾಡು; ನಮಸ್ಕಾರವು, ಸ್ವಾಮಿಯಾಗಿ ಶಕ್ತನಾದವನಲ್ಲಿ, ಅಶಕ್ತನಾಗಿ ಶೇಷಭೂತನಾದವನು, ಕೃತಜ್ಞತಾಪೂರ್ವಕವಾಗಿಯಾಗಲಿ, ತನಗೆ ಪ್ರಾಪ್ತವಾಗಿರುವ ಕಷ್ಟನಿವಾರಣೆಗಾಗಿಯಾಗಲಿ, ದೇಹವನ್ನು ಬಗ್ಗಿಸಿ ಉದ್ದಕ್ಕೆ ಅಡ್ಡಬೀಳುವದು. ಹಾಗೆ ಬೀಳುವಾಗ ಸ್ವಾಮಿಯ ಪಾದವನ್ನು ಕೂಡ ಹಿಡಿದುಕೊಂಡ ಹಾಗೆ ಭಾವನೆಯಿಂದ ಅನುಷ್ಠಿಸತಕ್ಕದ್ದು. ಈಗ ಹೇಳಿರುವ ಸಂದರ್ಭವಾದರೋ ಅನಿಷ್ಟನಿವೃತ್ತಿ ಮತ್ತು ಇಷ್ಟಪ್ರಾಪ್ತಿಗಾಗಿ ಎಂದರೆ ಪ್ರಾಕೃತದೇಹವು ತೊಲಗಿ ಪ್ರಾಪಕತ್ವೇನ ಪ್ರಾಪ್ಯತ್ವೇನ ಇಷ್ಟಪ್ರಾಪ್ತಿಗಾಗಿಯಾದುದರಿಂದ, ನಮಸ್ಕಾರವು ಶರಣಾಗತಿ ರೂಪವಾಗಿದೆ. ಶ್ರೀ ಯತಿವರ್ಯರು ತಾವು ರಚಿಸಿದ ನಿತ್ಯದಲ್ಲಿ **ಭಗವನ್ತಂ ಅಷ್ಟಾಂಗೇನ ಪ್ರಣಮ್ಯ ಶರಣಮುಪ ಗಚ್ಛೇತ್"** ಎಂದು ಉಪದೇಶಿಸಿದ್ದಾರೆ. ಅಷ್ಟಾಂಗ ಪ್ರಣಾಮವು, **"ಉರಸಾ ಶಿರಸಾ** ದೃಷ್ಟ್ಯಾ **ವಪುಷಾ ಮನಸಾ** ಗಿರಾ। **ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಉಚ್ಯತೇ."** ಹೀಗೆ ನಮಸ್ಕುರು - ಪ್ರಣಾಮವನ್ನು ಮಾಡು. ಹೀಗೆ ಮಾಡಿದುದಾದರೆ **ಮಾಮೇವೈಷ್ಯಸಿ** - ನನ್ನನ್ನೇ ಪ್ರಾಪ್ಯವನ್ನಾಗಿ ಹೊಂದುವೆ ; ದೇಹಾವಸಾನಾನಂತರ ನಿನಗೆ ಹಿಂದೆ ಹೇಳಿರ ವರೀತಿಯಲ್ಲಿ ಅರ್ಚಿರಾದಿಮಾರ್ಗದಲ್ಲಿ ಹೊರಟು ವಿರಜಾಸ್ನಾನದಿಂದ ಈ ಹೇಯ ಶರೀರವು ಹೋಗಿ, ಅಪ್ರಾಕೃತ ಶರೀರವುಂಟಾಗಿ, ದಿವ್ಯವೈಕುಂಠವನ್ನು ಸೇರಿ, ಅಲ್ಲಿ ನಿತ್ಯವಾದ ಶಾಶ್ವತವಾದ ದಿವ್ಯ ರೂಪವನ್ನು ಧರಿಸಿ, ಲಕ್ಷ್ಮೀಯುಕ್ತನಾಗಿರುವ ನನ್ನನ್ನೇ ಪ್ರಾಪ್ಯವನ್ನಾಗಿ ಹೊಂದುವಿ. ಅಲ್ಲಿ ಪುನರಾವೃತ್ತಿಯ ಭಯವಿಲ್ಲದೆ ನಿರತಿಶಯಾನಂದವನ್ನು ಹೊಂದಿ ನನಗೆ ಕೈಙ್ಕರ್ಯಗಳನ್ನೆಸಗುತ್ತಾ ಇರುವಿ ಎಂಬ ಭಾವವು. **ಸತ್ಯಂ** - ಇದು ಸತ್ಯವು, ನೀನು ಪೂರ್ಣ ವಿಶ್ವಾಸವನ್ನು ನನ್ನ ಮಾತಿನಲ್ಲಿಡಬಹುದು, ಇಂದ್ರಜಾಲದ ಮಾತಲ್ಲವು, "ರಾಮೋ ದ್ವಿರ್ನಾಭಿಭಾಷತೇ" ಭಕ್ತರವಿಷಯದಲ್ಲಿ ಎರಡು ಮಾತಿನವನಲ್ಲವು. **ತೇ ಪ್ರತಿಜಾನೇ** - ನಿನಗೆ ಪ್ರತಿಜ್ಞೆ ಮಾಡಿ ಹೇಳುತ್ತೇನೆ ; ಅದೇನು ಇಷ್ಟು ಕೃಪೆಯಿಂದ ಪ್ರತಿಜ್ಞೆಯನ್ನು ಮಾಡಿ ಹೇಳುತ್ತೀ ಎನ್ನುತ್ತೀಯೋ ? **ಪ್ರಿಯೋಽಸಿಮೇ** - **"ನಿತ್ಯಹೃದ್ಯೋಽಪಿ ಜೀವಃ"** ಎಂಬಲ್ಲಿ ಹೇಳಿರುವಹಾಗೆ ನೀನು ನನಗೆ ಅತ್ಯರ್ಥ ಪ್ರಿಯನಲ್ಲವೇ? ಆದುದರಿಂದ ಪ್ರತಿಜ್ಞೆಯನ್ನು ಮಾಡಿ ಹೇಳಿರುವೆನು. ನಾನು ಪ್ರಪನ್ನ ಸಂರಕ್ಷಣೈಕವ್ರತನಲ್ಲವೇ ? ಎಂಬ ಭಾವವು; ನಾನೇ ಹಿಂದೆ **"ಪ್ರಿಯೋಹಿ ಜ್ಞಾನಿನೋಽತ್ಯರ್ಥಮಹಂ, ಸಚ ಮಮಪ್ರಿಯಃ** ಎಂದೂ **"ಜ್ಞಾನೀತ್ವಾತ್ಮೈವ ಮೇ ಮತಮ್ ಆಸ್ಥಿತಸ್ಸಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್"** ಎಂದೂ (ಗೀ. ೭. ೧೭. ೧೮) ಹಿಂದೆ ಹೇಳಲಿಲ್ಲವೇ ? ಎಂಬ ಭಾವವೂ ತೋರಿಬರುತ್ತದೆ.

ಭಾ. ವೇದಾನ್ತೇಷು (೧) ವೇದಾಹಮೇತಂ ಪುರುಷಂ ಮಹಾನ್ತಂ ಆದಿತ್ಯವರ್ಣಂ

---

ಹಿಂದಿನ ೬೪ನೆಯ ಶ್ಲೋಕದಲ್ಲಿ ತತಃ ಎಂಬ ಶಬ್ದದಿಂದ ನಾವು ಗ್ರಹಿಸತಕ್ಕ ಅಂಶವೇನೆಂದರೆ? ಶಿಷ್ಯಗುಣ ಸಂಪೂರ್ಣತೆ ಇರುವದರ ಮೂಲಕ ಆಚಾರ್ಯನಿಗೆ ಯಾರು ಇಷ್ಟನಾಗುತ್ತಾನೋ ಅಂತವನಿಗೇನೇ ಆಚಾರ್ಯನು ಅಕಾರಣದಿಂದ ಹಿತವನ್ನು ಹೇಳತಕ್ಕದ್ದು ಎಂಬ ರಹಸ್ಯಾರ್ಥವು ಸೂಚಿತವು. ಆ ಹಿತವು ಯಾವುದು ಎಂದರೆ ಸಾಧ್ಯೋಪಾಯವು; ಇದು ಎರಡು ವಿಧವು :- (೧) ಉಪಾಸನೆಯು (೨) ಇನ್ನೊಂದು ಭರಸಮರ್ಪಣೆಯು ರೂಪ ಶರಣಾಗತಿಯು. ಹೀಗೆ ಎರಡು ವಿಧವಾದ ಸಾಧ್ಯೋಪಾಯವೇ ಈ ಹಿತ ಶಬ್ದದಿಂದ ಹೇಳಲ್ಪಟ್ಟಿರುವದು ; ಉಪಾಸನವು ೬೫ ನೆಯ ಶ್ಲೋಕದಲ್ಲೂ, ಭರಸಮರ್ಪಣೆಯು ೬೬ ನೆಯ ಶ್ಲೋಕದಲ್ಲೂ ಹೀಗೆ ಎರಡು ವಿಧ ಹಿತವೂ ಹೇಳಲ್ಪಡುತ್ತದೆ. ೬೫ ನೆಯ ಶ್ಲೋಕದಲ್ಲಿ ಉಪಾಸನವನ್ನು ಯಾವಾಗ ನಿಗಮನ ಮಾಡಿ ಹೇಳಿದರೋ, ಆಗ "ಮನ್ಮನಾಭವ" ಎಂಬ ಉಪದೇಶಕ್ಕೆ ಮನಶ್ಚಾಂಚಲ್ಯದಿಂದ ತನಗೆ ಅರ್ಹತೆಯಿಲ್ಲವೆಂದು ಭಾವಿಸಿ, ಆ ಕಾರಣದಿಂದ ಪಾಪಗಳೆಲ್ಲಾ ನಶಿಸಿಹೋಗಲು ಅವುಗಳಿಗೆ ವಿಧಿಸಿರುವ ಪ್ರಾಯಶ್ಚಿತ್ತಗಳನ್ನೆಲ್ಲಾ ಅನುಷ್ಠಿಸಲು ಒಂದು ಜನ್ಮವೇ ಸಾಲದೇ ಇರುವಾಗ, ಪಾಪಗಳು ಕಳೆಯುವ ಸಂಭವವೇ ಇಲ್ಲವೇ ಎಂಬ ಅಳವಳದಿಂದ ಶೋಕಿಸುತ್ತಾನೆ. ಶೋಕಿಸಿದನೆಂಬುದು ಮಾಶುಚಃ ಎಂಬ ಕೃಪಾನಿಧಿಯ ಸಮಾಧಾನೋಕ್ತಿಯಿಂದಲೇ ವ್ಯಕ್ತವು. ಆ ಅರ್ಜುನನಿಗೆ ಅತಿ ಸುಲಭ ಸಾಧ್ಯವಾದ ಭರಸಮರ್ಪಣರೂಪ ಹಿತವನ್ನು (ಪ್ರಪತ್ತಿ. ಶರಣಾಗತಿ) ಮುಂದಿನ ಶ್ಲೋಕದಲ್ಲಿ ಸಙ್ಗ್ರಹವಾಗಿ ಉಪದೇಶಿಸುತ್ತಾರೆ. ಅದರ ಪ್ರಕಾರವೇನು? ಅದರ ಪರಿಕರಗಳಾವುವು? ಅದನ್ನು ಅನುಷ್ಠಿಸುವ ಕ್ರಮ ಹೇಗೆ? ಆ ಸಂದರ್ಭದಲ್ಲಿ ಉಂಟಾಗಬಹುದಾದ ಪೂರ್ವಪಕ್ಷ ಸಮಾಧಾನಗಳು ಯಾವುವು? ಎಂದರೆ ಅದು ಬೇರೇ ಶಾಸ್ತ್ರವಾಗಿ ಅಲ್ಲಿ ತಿಳಿಯತಕ್ಕದ್ದಾದುದರಿಂದ ಅಲ್ಲಿಗೆ ಉಪದೇಶವನ್ನು ನಿಗಮನ ಮಾಡಿರುತ್ತಾರೆ. "ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ। ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನ ಸ್ತತ್ತ್ವದರ್ಶಿನಃ" ಎಂದಲ್ಲವೇ ಹಿಂದೆ ಹೇಳಿರುತ್ತಾರೆ. ಆದುದರಿಂದ ಅವುಗಳನ್ನೆಲ್ಲಾ ಪ್ರಪತ್ತಿ ಶಾಸ್ತ್ರಗಳಿಂದ ತಿಳಿಯತಕ್ಕದ್ದೆಂದು ಅಲ್ಲಿಗೆ ಉಪದೇಶವನ್ನು ನಿಲ್ಲಿಸಿದರು. ಉದ್ಧವರಿಗೆ ಹೀಗೆಯೇ ಈ ಗೀತೋಪದೇಶವನ್ನೇ ಮಾಡಿದರು. ಉದ್ಧವರಿಗೆ ಅಷ್ಟರಿಂದ ತೃಪ್ತಿಯಾಗದೆ, ಭರನ್ಯಾಸವನ್ನು ಮುಂದಕ್ಕೆ ಹೀಗೆಯೇ ಹೇಳಿ, ಉಪಾಸನಕ್ಕೆ ಅರ್ಹತೆಯೇ ಇಲ್ಲದ ಅನೇಕರು ಈ ಪ್ರಪತ್ತಿಮೂಲಕವಾಗಿ ಮುಕ್ತಿ ಹೊಂದುವವರ ಹೆಸರುಗಳನ್ನೆಲ್ಲಾ ಹೇಳಿರುತ್ತಾರೆ. (ಭಾಗವತ. ೧೧ನೆಯ ಸ್ಕಂದ (೧೨-೫-೭) ಶ್ಲೋಕಗಳನ್ನು ನೋಡಿ.

**ಭಾಷ್ಯಾರ್ಥವು**—ಅರ್ಜುನನನ್ನು ಮುಖ್ಯವಾಗಿ ತನ್ನ ಇತಿಕರ್ತವ್ಯತೆಯನ್ನರಿತು ಯುದ್ಧ ಮಾಡಲೆಂದು ಪ್ರೋತ್ಸಾಹಿಸುವದಕ್ಕಾಗಿ, ಕರ್ಮಾಂಗವಾದ ಭಕ್ತಿಯೋಗವನ್ನೆಲ್ಲಾ ನಿನಗೆ ಉಪದೇಶಿಸಿದೆನ ಎಂದು ಲೀಲಾಸಾರಥಿಯು ೬೩ನೆಯ ಶ್ಲೋಕದಲ್ಲಿ, ಈ ಗೀತೋಪದೇಶವೇ ಶಾಸ್ತ್ರದಲ್ಲಿ "ಗುಹ್ಯಾದ್ಗುಹ್ಯತರಂ" ಎಂದು ಕೊಂಡಾಡಿ, ಅದರಲ್ಲಿ ಭಕ್ತಿಯೋಗವೇ ಮೋಕ್ಷಪ್ರಾಪ್ತಿಗೆ ಅವ್ಯವಹಿತ ಉಪಾಯವಾಗಿ ಗುಹ್ಯತಮವಾದುದು ಎಂದು ಹಿಂದಿನ ಶ್ಲೋಕದಲ್ಲಿ ಪ್ರತಿಜ್ಞಾವಾಕ್ಯರೂಪದಲ್ಲಿ ಮೊದಲು ಹೇಳಿ, ಈ ಶ್ಲೋಕದಲ್ಲಿ ಅದನ್ನು ಅನುಷ್ಠಿಸುವ ಪ್ರಕಾರವನ್ನು ತಿಳಿಸುತ್ತಾರೆ.—ಶ್ರೀಯತಿವರ್ಯರು ಅದು ಗುಹ್ಯತಮವು ಹೇಗೆ ಎಂದು ಉಪಪಾದಿಸುವದಕ್ಕಾಗಿ, "ವೇದೇಷು ಪೌರುಷಂ ಸೂಕ್ತಮ್" ಎಂದು ಸರ್ವೋಪನಿಷತ್ಸಾರಭೂತವಾಗಿ ಪ್ರಖ್ಯಾತಿಹೊಂದಿರುವ ಪುರುಷಸೂಕ್ತಪ್ರಮಾಣವನ್ನು ಉದಾಹರಿಸಿ, ಉಪಾಸನದ ಮಾಹಾತ್ಮ್ಯವನ್ನು ತಿಳಿಸುತ್ತಾರೆ.

**ವೇದಾನ್ತೇಷು** - ಉಪನಿಷತ್ತುಗಳಲ್ಲಿ **"ವೇದಾಹಮೇತಂ"** ಇತ್ಯಾದಿಷು - ಎಂಬಿವೇ

ತಮಸಃಪರಸ್ತಾತ್ । ತಮೇವಂ ವಿದ್ವಾನಮೃತ ಇಹಭವತಿ ನಾನ್ಯಃ ಪನ್ಥಾ ವಿದ್ಯತೇ ಽಯನಾಯ" ಇತ್ಯಾದಿಷು ವಿಹಿತಂ ವಾದನುಧ್ಯಾನೋಽಪಾಸನಾದಿ ಶಬ್ದ ವಾಚ್ಯಂ ದರ್ಶನ ಸಮಾನಾಕಾರಂ ಸ್ಮೃತಿ ಸಂತಾನ ಮತ್ಯರ್ಥಪ್ರಿಯ ಮನನ್ಯಸಾಧನಮೇತಿ ವಿಧೀಯತೇ.

---

ಮೊದಲಾದ ಪ್ರಮಾಣಗಳಲ್ಲಿ, ವಿಹಿತಂ-ಬೋಧಿಸಲ್ಪಟ್ಟ, ವೇದನ, ಧ್ಯಾನ, ಉಪಾಸನ, ಆದಿ ಶಬ್ದವಾಚ್ಯಂ ಆದಿಶಬ್ದದಿಂದ ಜ್ಞಾನ, ನಿದಿಧ್ಯಾಸನ, ಸಮಾಧಿ, ಭಕ್ತಿ, ಧೃವಾಸ್ಮೃತಿ; ಮೊದಲಾದವು ಹೇಳಲ್ಪಟ್ಟವು, ಇಂತಹ ಶಬ್ದಗಳಿಂದ ಹೇಳಲ್ಪಟ್ಟ, ದರ್ಶನ ಸಮಾನಾಕಾರಂ - ಪರಮಾತ್ಮ ಸಾಕ್ಷಾತ್ಕಾರ ರೂಪವಾದ, ಅತ್ಯರ್ಥಪ್ರಿಯಂ - ಅದರಿಂದುಂಟಾಗುವ ಆನಂದದ ಮೂಲಕ ನಿರತಿಶಯ ಪ್ರೀತಿರೂಪವಾದ, ಸ್ಮೃತಿಸಂತಾನಂ - ತೈಲಧಾರೆಯ ಹಾಗೆ ವಿಚ್ಛಿತಿಯಿಲ್ಲದ ಹಾಗೆ ಪರಮಾತ್ಮನ ಧ್ಯಾನವು, ಎಂದರೆ ಚಿತ್ತೈಕಾಗ್ರ್ಯತೆಯಿಂದ ಉಪಾಸಿಸೋಣವು; ಮನನ್ಯಸಾಧನಮೇತಿ ಎಂಬದಾಗಿ ವಿಧೀಯತೇ-ನನ್ನಲ್ಲೇ ಅವ್ಯಭಿಚರಿತವಾದ ಮನಸ್ಸನ್ನಿಡು ಎಂದು ವಿಧಿಸಲ್ಪಟ್ಟಿರುತ್ತದೆ. ಭವ ಎಂದು ಹೇಳಿದ್ದರೂ ಅದು ವಿಧಿಯೇ ಎಂದು ವಿಧೀಯತೇ ಎಂಬ ಪ್ರಯೋಗವು. ಚಿತ್ತೈಕಾಗ್ರ್ಯತೆಯಿಂದ ಉಪಾಸಿಸು ಎಂದು ವಿಧಿಯು. ಪರಮೈಕಾನ್ತಿಕಾತ್ಯನ್ತಿಕ ಭಕ್ತಿಯಿಂದ ಉಪಾಸಿಸತಕ್ಕದ್ದೆಂಬ ಭಾವವು. "ತಸ್ಮಿನ್ ದೃಷ್ಟೇ ಪರಾವರೇ" (ಮುಂ. ೨. ೨. ೯) 'ನಿಚಾಯ್ಯತಂ ಮೃತ್ಯುಮುಖಾತ್ಪ್ರಮುಚ್ಯತೇ" (ಕಠ. ೩. ೧೫) "ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" (ಬೃ. ೬. ೫, ೬) ಇತ್ಯಾದಿ ಸ್ಥಳಗಳಲ್ಲಿ ಹೇಳಿರುವ ದರ್ಶನವು ವಿಶದವಾದ ಸ್ಮೃತಿಸಂತಾನವೆಂಬ ಭಾವದಿಂದ "ದರ್ಶನಸಮಾನಾಕಾರಂ ಸ್ಮೃತಿಸಂತಾನಂ" ಎಂಬ ಪ್ರಯೋಗವು. ಆದುದರಿಂದ ಚಿತ್ತೈಕಾಗ್ರ್ಯಂ ಎಂಬದಾಗಿ ಹೇಳಿಕೆಯು. ಹಾಗೆಯೇ ತೈಲಧಾರಾವದವಿಚ್ಛಿನ್ನವಾದುದು ಎಂಬ ಪ್ರಯೋಗವೂ ಸಹ.

ಮೇಲೆ ವೇದಾಹಮೇತಂ ಎಂದು ಉದಾಹರಿಸಿರುವ ಪುರುಷಸೂಕ್ತವಾಕ್ಯದ ಅರ್ಥವೇನೆಂದರೆ—ವೇದಪುರುಷನು ಹೇಳುತ್ತಾನೆ. ಅಹಂ - ಸರ್ವೇಶ್ವರನ ಸಂಕಲ್ಪಾನುಸಾರ ಸರ್ವಜ್ಞತೆಯನ್ನು ಹೊಂದಿರುವ ವೇದಪುರುಷನಾದ ನಾನು, ಏತಂ - ಈ ಹಿಂದೆ ಹೇಳಿದ ಅಸದೃಶ ಸ್ವರೂಪಗುಣ ವಿಭವಾದಿಗಳನ್ನುಳ್ಳ, ಆ ಕಾರಣದಿಂದಲೇ ಮಹಾಂತಂ - ಅಪರಿಚ್ಛಿನ್ನ ಮಾಹಾತ್ಮ್ಯಯನ್ನು ಹೊಂದಿದ, ಪುರುಷಂ - ಎಲ್ಲಾ ಚೇತನವರ್ಗವೆಲ್ಲಾ "ಸ್ತ್ರೀಪ್ರಾಯಮಿತರತ್" ಎಂಬಲ್ಲಿ ಹೇಳಿರುವಹಾಗೆ ಸ್ತ್ರೀಯಾಗಿ ತನಗೆ ಶರೀರವಾಗಿಯೂ, ವಶ್ಯವಾಗಿಯೂ ಇರುವವರಿಂದ ಪುರುಷೋತ್ತಮನನ್ನು; ಅಥವಾ ಎಲ್ಲಾ ವಿಶ್ವವೂ ಪರಮಾತ್ಮನಿಗೆ ಶರೀರವಾಗಿ ಅವರಿಗೆಲ್ಲಾ, ತಾನು ಆತ್ಮಾವಾಗಿ ಆ ಕಾರಣದಿಂದ ನಾರಾಯಣ ವಾಸುದೇವ ಶಬ್ದವಾಚ್ಯನಾದ ಸರ್ವೇಶ್ವರನನ್ನು, ವೇದ-ಆತನಿಂದುಂಟಾದ ಸರ್ವಜ್ಞತೆಯಿಂದ ತಿಳಿದಿರುವೆನು; ತಮಸಃ ಪರಸ್ತಾತ್ - ಪ್ರಕೃತಿ ಮಂಡಲಕ್ಕೆ ಆಚೆ ಇರುವ ನಿತ್ಯವಿಭೂತಿ ಎಂದೂ ದಿವ್ಯವೈಕುಂಠವೆಂದೂ ಹೇಳಿಸಿಕೊಳ್ಳುವ ಸ್ಥಾನವಿಶೇಷದಲ್ಲಿ, ಆದಿತ್ಯವರ್ಣಂ – ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷಃ" (ಛಾಂ. ೧. ೬. ೬) ಇತ್ಯಾದಿ ಶ್ರುತಿ ಪ್ರಸಿದ್ಧವಾಗಿ ಹಿರಣ್ಯಕಾನ್ತಿಯುಳ್ಳ, ತಂ- ಅಂತಹ ಪ್ರಸಿದ್ಧವಾದ ದಿವ್ಯಮಂಗಳ ವಿಗ್ರಹವೇನು, ಆಶ್ರಿತಾನುಗ್ರಹಕ್ಕೆ ಉಚಿತವಾದ ಸೌಲಭ್ಯ ಸೌಶೀಲ್ಯ ವಾತ್ಸಲ್ಯ ಕಾರುಣ್ಯಾದಿ ಕಲ್ಯಾಣಗುಣಗಳಿಂದ ಪ್ರಸಿದ್ಧನಾದ ಪರವಾಸುದೇವನನ್ನು, ಪುರುಷಸೂಕ್ತದಲ್ಲಿ "ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ" ಭೂಮಿಯೂ, ಲಕ್ಷ್ಮಿಯೂ ಇಬ್ಬರು ಯಾರಿಗೆ ಪತ್ನಿಗಳೋ, ಅಂತಹ ನಾರಾಯಣನನ್ನು ಎಂದು ಹೇಳಲ್ಪಟ್ಟಿರುತ್ತದೆ. ಏವಂ- ಇಂತಹ ಸ್ವರೂಪರೂಪಗುಣಗಳಿಂದ ಶೋಭಿಸುವಂತವನೆಂದು ಭಾವಿಸಿ, ವಿದ್ವಾನ್-ಆತನಲ್ಲಿ ಶರ

ಣಾಗತಿಯನ್ನನುಷ್ಠಿಸಿ ಸಾಕ್ಷಾತ್ಕರಿಸುವನೋ, ಮತ್ತು ಶರಣಾಗತವತ್ಸಲನೆಂದು ಆತನನ್ನು ಧ್ಯಾನಿಸುವನೋ, ಅವನು, **ಇಹ** - ಈ ಲೀಲಾ ವಿಭೂತಿಯಲ್ಲೇ **ಅಮೃತಃ ಭವತಿ** – ಮುಕ್ತನಿಗೆ ಸಮಾನನಾಗುವನು, ಧ್ಯಾನಕಾಲದಲ್ಲಿ ಸಂಸಾರಕ್ಲೇಶವನ್ನೆಲ್ಲಾ ಮರೆಯುವನಾದುದರಿಂದ ಪರಮಾನಂದ ಭಾಕ್ಕಾಗುವನು, ಜೀವನ್ಮುಕ್ತನೆಂಬ ಅರ್ಥವಲ್ಲವು. ಇಲ್ಲಿಯೇ ಮುಕ್ತಸಮನು ಎಂದು ಹೇಳಿದುದರಿಂದ ದೇಹಾವಸಾನಾನಂತರ ಪ್ರಾಕೃತಶರೀರವನ್ನು ತೊರೆದು ಪರವಾಸುದೇವ ಸಾಯುಜ್ಯವನ್ನು ಹೊಂದಿ ನಿರತಿಶಯವಾದ ಆನಂದಭಾಕ್ಕಾಗುವನೆಂಬುದು ಕೈಮುತಿಕ ನ್ಯಾಯ ಸಿದ್ಧವು. ಆದುದರಿಂದ ಈ ಶ್ರುತಿಯ ತಾತ್ಪರ್ಯವೇನೆಂದರೆ, ಆತನನ್ನೇ ನಮಗೆ ಶರಣಾಗತವತ್ಸಲನೆಂದು ಆಶ್ರಯಿಸಿದರೆ "ವಿದಿತಸ್ಸಹಿ ಧರ್ಮಜ್ಞಶ್ಶರಣಾಗತವತ್ಸಲಃ" (ರಾ. ಸುಂ.) ಎಂಬಲ್ಲಿ ಹೇಳಿರುವಹಾಗೆ ರಕ್ಷಿಸುವವನೆಂಬ ಜ್ಞಾನವುಂಟಾಗಿ ಆತನನ್ನು ಧ್ಯಾನಿಸಿದರೆ ಆತನು ರಕ್ಷಿಸುವವರ ಸಂದೇಹವಿಲ್ಲವು. "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂಬಲ್ಲಿ ಹೇಳಿರುವ ಹಾಗೆ, ಅಂಗ ಶರಣಾಗತಿಯನ್ನನುಷ್ಠಿಸಿ ಉಪಾಸಿಸಿದರಾಗಲಿ, ಅಥವಾ ಅಂಗಿ ಶರಣಾಗತಿಯ ಮೂಲಕ ಭಗವಂತನನ್ನು ಅನುಷ್ಠಿಸಿದರಾಗಲಿ ರಕ್ಷಿಸುವನೇ ವಿನಾ, ಇತರವಾದ ಮಾರ್ಗವೇ ಇಲ್ಲವೆಂದು "ನಾನ್ಯಃ ಪನ್ಥಾ ವಿದ್ಯತೇಽಯನಾಯ" ಎಂದು ಶ್ರುತಿಯು ಹೇಳಿತು, ಎಂಬ ತಾತ್ಪರ್ಯವು. ಇದರಿಂದ ಭಕ್ತಿಯೋಗಕ್ಕಾಗಲಿ ಭರನ್ಯಾಸನಿಷ್ಠೆಗಾಗಲಿ ಗುಹ್ಯತಮತ್ವವೂ, ಅವುಗಳಿಗೆ ಅವ್ಯವಹಿತ ಸಿದ್ಧೋಪಾಯತ್ವವೂ, ಸ್ಥಾಪಿತವು. ಈ ಶ್ರುತಿಯಿಂದ ನಾವು ಗ್ರಹಿಸತಕ್ಕ ಇನ್ನೊಂದು ವಿಷಯವೂ ಉಂಟು. ಇಲ್ಲಿ **ಏವಂ ವಿದ್ವಾನ್** ಎಂದಿರುವದರಿಂದ ಆತನು ಕಲ್ಯಾಣಗುಣಾಕರನೆಂಬುದನ್ನೂ ಗ್ರಹಿಸಬಹುದು. ಆದುದರಿಂದ ಪರಬ್ರಹ್ಮನು ಸಗುಣನೆಂಬುದು ಸ್ಥಾಪಿತವು. ಶಾಸ್ತ್ರಗಳಲ್ಲಿ ಅನೇಕ ಕಡೆಗಳಲ್ಲಿ **ನಿರ್ಗುಣೋ ನಿರಂಜನೋ**" ಹೀಗೆಲ್ಲಾ ಹೇಳಿದೆಯಲ್ಲಾ ಎಂದಾಕ್ಷೇಪ ತಂದರೆ ಇಲ್ಲಿನ ಪ್ರಾಕೃತ ಹೇಯಗುಣಗಳಿಲ್ಲದವನು ಎಂಬರ್ಥವು. ಸಗುಣ ಜ್ಞಾನವೇ ಮೋಕ್ಷ ಹೇತುವೆಂದು "ಯಸ್ಮಿನ್ ಯದಂತ ಸ್ತದುಪಾಸಿತವ್ಯಂ" (ತೈ. ನಾರಾ.) ಎಂಬಲ್ಲೂ, "ತಸ್ಮಿನ್ ಯದಂತ ಸ್ತದನ್ವೇಷ್ಟವ್ಯಮ್" (ಛಾಂದೋಗ್ಯ ೮. ೧. ೧) ಇತ್ಯಾದಿ ಸ್ಥಲಗಳಲ್ಲಿ ಹೇಳಲ್ಪಟ್ಟಿದೆ. ಇದನ್ನು ಶ್ರೀಯತಿವರ್ಯರು ಶ್ರೀಭಾಷ್ಯದಲ್ಲಿ ವ್ಯಕ್ತಪಡಿಸಿರುತ್ತಾರೆ. ಆದುದರಿಂದ ನಿರ್ಗುಣ ಶಬ್ದದಿಂದ ಅಪ್ರಾಕೃತ ಕಲ್ಯಾಣ ಗುಣಾಕರತ್ವವು ನಿಷೇಧಿಸಲ್ಪಡಲಿಲ್ಲವು. ಶ್ರೀಶಂಕರಾಚಾರ್ಯರ ಅಭಿಪ್ರಾಯವು ಹಾಗೆಯೇ ಎಂದ ಕೆಲವು ತಪ್ಪು ತಿಳಿದು ಒಪ್ಪುತ್ತಾರೆ. ಆದರೆ ಅನೇಕ ಇತರ ಶಂಕರಾದಿಗಳು ಸರ್ವಗುಣ ರಾಹಿತ್ಯವನ್ನು ಪರಬ್ರಹ್ಮಕ್ಕೆ ಹೇಳುವರು. ಅಂತಹ ವಿಶೇಷಣರಹಿತವಾದ ದ್ರವ್ಯವೇ ಇಲ್ಲವು. ಅಂತಹ ಪರಬ್ರಹ್ಮವನ್ನು ಶಾಸ್ತ್ರತಾನೇ "ವೇದಾಹಮೇತಂ" ಎಂದು ಹೇಗೆ ತಾನೇ ಹೇಳಬಲ್ಲದು ? ಇದರಿಂದ ಪರಮಾತ್ಮನ ರೂಪವು ಶುಭಾಶ್ರಯವೆಂದು ಹೇಳಿದಂತಾಯಿತು.

**ಮನ್ಮನಾಭವ**—ನನ್ನಲ್ಲೇ ಚಿತ್ತೈಕಾಗ್ರತೆಯುಳ್ಳವನಾಗು ಪರಮಪುರುಷನೆಂದು ಶಾಸ್ತ್ರದಲ್ಲಿ ಹೊಗಳಲ್ಪಟ್ಟ ಮತ್ತು ಇಲ್ಲಿಯೂ ಕೂಡ **ಪ್ರಥಿತಃ ಪುರುಷೋತ್ತಮಃ** ಎಂದು ವಿಖ್ಯಾತನಾದ ನನ್ನಲ್ಲೇ ಮನಸ್ಸನ್ನಿಡು; ಎಂಬುದರಿಂದ ಬಾಹ್ಯಕಗಳಿಂದ ದೇವತಾಂತರಗಳಲ್ಲಿ ಮನಸ್ಸನ್ನಿಡಬೇಡವೆಂದು ಹೇಳಿದಂತಾಯಿತು. ಹೀಗೆ ಹೇಳಿದುದರಿಂದ ನಿರತಿಶಯ ಭಕ್ತಿಯಿಂದ ನನ್ನನ್ನು ಉಪಾಸಿಸು ಎಂಬ ಭಾವವು ಆದುದರಿಂದ ಅದನ್ನೇ ಮುಂದಿನ ವಾಕ್ಯದಿಂದ **ಮದ್ಭಕ್ತಃ** ಎಂಬುದರಿಂದ ವ್ಯಕ್ತಪಡಿಸುತ್ತಾರೆ. ಇದನ್ನೇ ಶ್ರೀ ಯತಿವರ್ಯರು ಭಾಷ್ಯದಲ್ಲಿ "**ವೇದನಧ್ಯಾನೋಪಾಸನಾದಿ ಶಬ್ದವಾಚ್ಯಂ ದರ್ಶನ ಸಮಾನಾಕಾರಂ ಮನ್ಮನಾಭವೇತಿ ವಿಧೀಯತೇ**" ಎಂದು ಅಪ್ಪಣೆಕೊಡಿಸಿರುತ್ತಾರೆ. ಭಕ್ತಿಶಬ್ದಕ್ಕೆ "**ಪ್ರೀತಿರೂಪಮನುಧ್ಯಾನ ಭಕ್ತಿರಿತ್ಯಭಿಧೀಯತೇ**" ಎಂದು ವ್ಯಾಖ್ಯಾನವಿರುತ್ತದೆ. ಆಗಲಿ ಹಾಗೆ ಭಕ್ತಿಶಬ್ದವು ವೇದನ ಧ್ಯಾನ ಉಪಾಸನ

**ಭಾ. ಮದ್ಭಕ್ತಃ ಅತ್ಯರ್ಥಮತ್ಪ್ರಿಯಃ, ಅತ್ಯರ್ಥಮತ್ಪ್ರಿಯತ್ವೇನ ನಿರತಿಶಯಪ್ರಿಯಾಂ ಸ್ಮೃತಿಸಂತತಿಂ ಕುರುಷ್ವೇತ್ಯರ್ಥಃ; ಮದ್ಯಾಜೀ - ತತ್ರಾಪಿ ಮದ್ಭಕ್ತ ಇತ್ಯನು ಷಜ್ಯತೇ; ಯಜನಂ-ಪೂಜನಂ, ಅತ್ಯರ್ಥಪ್ರಿಯ ಮದಾರಾಧನಪರೋ ಭವ; ಆರಾ**

---

ಶಬ್ದಗಳೊಂದಿಗೆ ಪರ್ಯಾಯ ಪದನಾಗಿದ್ದ ಪಕ್ಷದಲ್ಲಿ, ಅವುಗಳೊಂದಿಗೆ ಈ ಭಕ್ತಿಶಬ್ದವನ್ನು ಪ್ರಯೋಗಿಸದೆ, ಮುಂದಿರುವ **ಆದಿ** ಶಬ್ದದಿಂದ ಊಹಿಸುವ ಹಾಗೆ ಮಾಡಿರುವುದು ಏತಕ್ಕೆ? ಎಂದಾಕ್ಷೇಪಿಸಿದರೆ ಅದಕ್ಕೆ ಸಮಾಧಾನವೇನೆಂದರೆ, ಮುಂದೆ ಮದ್ಭಕ್ತಃ ಎಂದು ವ್ಯಕ್ತವಾಗಿರುವದರಿಂದ ಆ ಪರ್ಯಾಯ ಪದಗಳೊಂದಿಗೆ ಸೇರಿಸಲಿಲ್ಲ. ಆದರ ಶ್ರೀಭಾಷ್ಯದಲ್ಲಿ ಲಘುಸಿದ್ಧಾಂತದಲ್ಲಿ "**ಉಪಾಸನ ಪರ್ಯಾಯತ್ವಾತ್ ಭಕ್ತಿ ಶಬ್ದಸ್ಯ** ಎಂದು ಪ್ರಥಮ ಸೂತ್ರದಲ್ಲಿ ವ್ಯಕ್ತವಾಗಿ ಹೇಳಿರುತ್ತಾರೆ.

ಆದುದರಿಂದಲೇ ಮದ್ಭಕ್ತಃ ಎಂಬುದಕ್ಕೆ **ಅತ್ಯರ್ಥಮತ್ಪ್ರಿಯಃ** - ಇಷ್ಟೆಂದು ಪ್ರಿಯನು ಎಂದು ಹೇಳಲು ಸಾಧ್ಯವಿಲ್ಲದವನು ಯಾವನೋ ಅವನು ಮದ್ಭಕ್ತನೆಂದು ಅರ್ಥಹೇಳಿ, ಆದರ ತಾತ್ಪರ್ಯಾರ್ಥವು **ಅತ್ಯರ್ಥ ಪ್ರಿಯತ್ವೇನ, ನಿರತಿಶಯಪ್ರಿಯಾಂ ಸ್ಮೃತಿಸಂತತಿಂ** - ನಿರತಿಶಯ ಪ್ರಿಯನಾಗಿ ಭಾವಿಸುವದರಿಂದ, ನಿರತಿಶಯ ಪ್ರೀತಿರೂಪವಾದ, ಚಿತ್ತೈಕಾಗ್ರತೆಯನ್ನು, **ಕುರುಷ್ವೇತ್ಯರ್ಥಃ** - ಮಾಡು ಎಂಬ ತಾತ್ಪರ್ಯವು; ಎಂದರೆ ನಿರತಿಶಯ ಪ್ರಿಯನು ನಾನು ಎಂಬ ಭಾವದಿಂದ ನನ್ನನ್ನೇ ಚಿಂತಿಸು ಎಂದು ಹೇಳಿ, ಅದು ಉಪಾಸನನೇ ಎಂಬ ಭಾವವನ್ನು ತೋರ್ಪಡಿಸಿರುತ್ತಾರೆ. ಇವನು ಯಾವಜ್ಜೀವವೂ ನಿತ್ಯನೈಮಿತ್ತಿಕಾದಿ ಪಂಚ ಮಹಾಯಜ್ಞಗಳನ್ನು ಮಾಡಬೇಕಲ್ಲಾ, ವಸ್ತ್ರ ದೇಹಯಾತ್ರೆ ವ್ಯಾಪಾರಗಳು ನಡೆಯ ಬೇಕಲ್ಲಾ, ಇವುಗಳ ವಿಷಯದಲ್ಲಿ ಹೇಗೆ ಉಪದೇಶವು? ಎಂದರೆ ಉತ್ತರವು-ಮದ್ಯಾಜೀಭವ ಎಂದರೆ ಮದ್ಭಕ್ತನಾಗಿದ್ದುಕೊಂಡೇ ಇವುಗಳನ್ನೂ ಮಾಡಲೇಬೇಕೆಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟು ವ್ಯಾಖ್ಯಾನಮಾಡುತ್ತಾರೆ. **ತತ್ರಾಪಿ ಮದ್ಭಕ್ತ ಇತ್ಯನುಷಜ್ಯತೇ** - ಮದ್ಯಾಜಿಯಾಗಿರುವ ಸಂದರ್ಭದಲ್ಲೂ ಮದ್ಭಕ್ತನಾಗಿರಬೇಕೆಂಬುದು ಸಂಬಂಧಿಸಿಕೊಂಡಿರುತ್ತದೆ, ಅದಕೆ, ಅರ್ಥವನ್ನು ಹೇಳುತ್ತಾರೆ.–**ಯಜನಂ** ಎಂದರೆ **ಪೂಜನಂ**-ನನ್ನ ಪೂಜಿಸೋಣವು, **ಅತ್ಯರ್ಥ ಪ್ರಿಯಮದಾರಾಧನೋ ಭವ** - ನಿನಗೆ ನಿರತಿಶಯ ಪ್ರಿಯನಾದ ನನ್ನನ್ನೇ ಆ ಪ್ರವೃತ್ತಿಗಳಿಂದ ಆರಾಧಿಸುವಂತವನಾಗು; ನಿನ್ನ ಎಲ್ಲಾ ಇತಿಕರ್ತವ್ಯತಾ ಕರ್ಮಗಳನ್ನೆಲ್ಲಾ ನಾನು ಸರ್ವಕರ್ಮಾರಾಧ್ಯನಾದುದರಿಂದ ನನ್ನ ಆರಾಧನಾರೂಪವಲ್ಲೇ ನಡೆಸು; ಮುಂದಿನ ಶ್ಲೋಕವು ಈ ನಿತ್ಯನೈಮಿತ್ತಿಕಗಳನ್ನೆಲ್ಲಾ ಪರಮಾತ್ಮೋಪಾಸಕನು ತ್ಯಾಗಮಾಡಬಹುದೆಂದು ಸಮ್ಮತಿಯನ್ನು ಕೊಟ್ಟಿರುತ್ತದೆಂದು ಇತರರು ಅಪಾರ್ಥವನ್ನು ಕಲ್ಪಿಸುವರಾದ್ದರಿಂದ, ಇತಿಕರ್ತವ್ಯತೆಗಳನ್ನು ತ್ಯಾಗಮಾಡದೇ, ನನ್ನ ಪೂಜನವೆಂದು ಭಾವಿಸಿ, ಫಲಕರ್ತೃತ್ವಮಮತೆಗಳನ್ನು ತೊರೆದು ನನ್ನಲ್ಲೇ ಸಮರ್ಪಿಸು ಎಂಬುವದನ್ನು ಸ್ಪಷ್ಟವಾಗಿ ಹೇಳುವವರಾಗಿ **ಮದ್ಯಾಜೀ** ಭವ ಎಂಬ ಉಪದೇಶವು. ಹಿಂದೆ ೩–೩೦ ನೆಯ ಶ್ಲೋಕವಾದ "**ಮಯಿ ಸರ್ವಾಣಿ ಕರ್ಮಾಣಿ** ಸನ್ನಸ್ಯಾ **ಧ್ಯಾತ್ಮಚೇತಸಾ। ನಿರಾಶೀ ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ**" ಎಂಬಲ್ಲಿನ ಉಪದೇಶವೇ ಇಲ್ಲಿ ಮದ್ಯಾಜೀ ಭವ ಎಂಬುವದರಿಂದ ಸಜ್ಗ್ರಹರೂಪದಲ್ಲಿ ಸ್ಮರಿತವು, **ಮದಾರಾಧನೋ ಭವ** ಎಂಬಲ್ಲಿ ಹೇಳಲ್ಪಟ್ಟ ಆರಾಧನವೆಂದರೇನೆಂದರೆ ಹೇಳುತ್ತಾರೆ—**ಆರಾಧನಂ ಹಿ** - ಆರಾಧನವೆ ಬುದಾದರೋ, **ಪರಿಪೂರ್ಣ ಶೇಷವೃತ್ತಿಃ** - ತನಗೆ ಶೇಷಿಯಾದ ಪರಮಾತ್ಮನಿಗೆ ತಾನು ದಾಸನು ಕಿಂಕರನೆಂದು ಭಾವಿಸಿ ಅವನಿಗೆ ಮಾಡುವ ಕೈಙ್ಕರ್ಯವೆಂಬ ಭಾವನೆಯೇ ಇರಬೇಕೆಂಬ ತಾತ್ಪರ್ಯವು. ಲಕ್ಷ್ಮಣನು ಹೇಗೆ **ಶ್ರೀರಾಮನನ್ನು** ಕುರಿತು **ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಃ ಸ್ವಪತಶ್ಚತೇ** ಎಂದು ಹೇಳಿರುವ ಹಾಗೆ, **ಇತಿಕರ್ತವ್ಯತಾರೂಪ ಪ್ರವೃತ್ತಿಗಳೆಲ್ಲಾ** ಅತನ ಕೈಙ್ಕರ್ಯವೆಂದು ಭಾವಿಸತಕ್ಕದ್ದು; **ಶೇಷ**

**ಧನಂ ಪರಿಪೂರ್ಣ ಶೇಷವೃತ್ತಿಃ ; ಮಾಂ ನಮಸ್ಕುರು; ನಮೋ-ನಮನಂ, ಮಯ್ಯತಿ ಮಾತ್ರ ಪ್ರಹ್ವೀಭಾವ ಮತ್ಯರ್ಥಪ್ರಿಯಂ ಕುರ್ವಿತ್ಯರ್ಥಃ ; ಏವಂ ವರ್ತಮಾನೋ ಮಾಮೇವೈಷ್ಯಸಿ, ಏತತ್ಸತ್ಯಂ ತೇ ಪ್ರತಿಜಾನೇ - ತವ ಪ್ರತಿಜ್ಞಾಂ ಕರೋಮಿ ;**

---

**ವೃತ್ತಿ** ಎಂದರೆ ಇಲ್ಲಿ ಕಿಂಕರನು ಸ್ವಾಮಿಗೆ ಮಾಡುವ ಕೈಂಕರ್ಯವು ; ತಾನು ಇತಿಕರ್ತವ್ಯತಾರೂಪದಲ್ಲಿ ಮಾಡುವ ನಿತ್ಯನೈಮಿತ್ತಿಕಾದಿಗಳೆಲ್ಲ. ಸರ್ವಶೇಷಿಯಾದ ಪರಮಪುರುಷನ ಸನ್ನಿಧಿಯಲ್ಲಿ ನಡೆಸುವ ಆಜ್ಞಾನುಜ್ಞಾ ಕೈಂಕರ್ಯಗಳೆಂದೂ, ತನಗಾಗಿ ಯಾವನ್ನೂ ಇಲ್ಲವೆಂದೂ, ಎಲ್ಲಾ ಆತನಿಗೆ ಎಂದೂ ಸಮರ್ಪಿಸುವನೇ ಆರಾಧನೆಯು ಇದರಿಂದ ಸರ್ವಶೇಷಿಯು ತುಂಬಾ ಪ್ರೀತನಾಗುವನೆಂಬ ಭಾವವು. **ಮಾದ್ಯಾಜೀ ಭವ** ಎಂಬಲ್ಲಿ, ಜ್ಯೋತಿಷ್ಟೋಮಾದಿಯಜ್ಞಗಳು ಹೇಳಲ್ಪಡಲಿಲ್ಲವೆಂದೂ ಅವು ಸ್ವರ್ಗಕಾಮಿಗಳಿಗೇ ವಿನಾ ಮೊಕ್ಷಾರ್ಥಿಗೆ ಬೇಕಿಲ್ಲವೆಂದೂ, ಅಂತಹ ಯಜ್ಞಗಳ ನಿರಾಸನಕ್ಕಾಗಿಯೇ ಮದ್ಯಾಜೀ ಎಂದರೆ ಮದಾರಾಧನ ಪರೋ ಭವ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಇದರಲ್ಲೇ ವೈಶ್ವದೇವವು ಪಂಚಮಹಾಯಜ್ಞರೂಪವಾದುದರಿಂದ ಅಂತರ್ಗತವೆಂದು ಭಾವಿಸಬಹುದು. ಪ್ರಸನ್ನನ ಸ್ವರೂಪಕ್ಕೆ ಯೋಗ್ಯವಾದ ಯಜನವು ಆರಾಧನವು. **ಮದ್ಯಾಜೀ** - ಎಂಬುದರ ವ್ಯಾಖ್ಯಾನದಲ್ಲಿ ಮದ್ಭಕ್ತಃ ಎಂಬುದು ಅನುಷಜ್ಯತೇ ಎಂದು ಹೇಳಿರುವದರ ತಾತ್ಪರ್ಯವೇನೆಂದರೆ? **ಭಕ್ತಿಯೋಗವು** ಅಂಗಿಯು ; ಅದಕ್ಕೆ ಆಜ್ಞಾನುಜ್ಞಾ ಕೈಂಕರ್ಯಗಳು ಅಂಗವು ಅಂಗವಿಲ್ಲದೆ ಅಂಗಿಯ ನಿಷ್ಪತ್ತಿಯಿಲ್ಲವೆಂಬ ಭಾವವನ್ನು ಚೆನ್ನಾಗಿ ಪ್ರದರ್ಶಿಸುವದಕ್ಕಾಗಿ ಹಾಗೆ ವ್ಯಾಖ್ಯಾನವು. ಈ ವಿಷಯವು ಬ್ರಹ್ಮಸೂತ್ರವಾದ (೩. ೪. ೨೬) "ಸರ್ವಾಪೇಕ್ಷಾಚ ಯಜ್ಞಾದಿಶ್ರುತೇ ರಶ್ವವತ್" ಎಂಬಲ್ಲಿ ಚೆನ್ನಾಗಿ ಸ್ಪಷ್ಟಪಡಿಸಲ್ಪಟ್ಟಿದೆ. "ಕುರ್ವನ್ನೇವೇಹ ಕರ್ಮಾಣಿ" ಎಂಬ ಶ್ರುತಿಯಲ್ಲೂ ಹೇಳಿರುವ ಹಾಗೆ, ಒಂದು ರಥವನ್ನೂ ನಡೆಸುತಕ್ಕಂಥ ಕುದುರೆಯಾದನಂತರ ಗಮನಕ್ಕೆ ಬೇಕಾದ ಜೀನು ಮೊದಲಾದವುಗಳ ಅವಶ್ಯಕತೆ ಹೇಗೋ ಹಾಗೆ ವರ್ಣಾಶ್ರಮ ವಿಹಿತಕರ್ಮಗಳೂ ಮೋಕ್ಷಗಾಮಿಗೆ ಅವಶ್ಯಕವು. ಆದುದರಿಂದ **ಮದ್ಯಾಜೀ** ಎಂಬವನ್ನನುಸರಿಸಿ, ಮುಂದಿನ **ಶ್ಲೋಕದ ಸರ್ವಧರ್ಮಾನ್ ಪರಿತ್ಯಜ್ಯ** ಎಂಬುದಕ್ಕೆ ಅರ್ಥ ಹೇಳಬೇಕೆಂಬುದು ಇಲ್ಲಿಯೇ ಸೂಚಿತವು. ಹೀಗೆ ಸರ್ವವನ್ನೂ ನನ್ನಲ್ಲಿ ಸಮರ್ಪಿಸಿ, **ಮಾಂ ನಮಸ್ಕುರು** - ಎಂಬ ಉಪದೇಶವು. **ನಮಃ** ಎಂದರೆ ನಮನವು ಇದರ ಅರ್ಥವೇನೆಂದರೆ? **ಮಯ್ಯತಿ ಮಾತ್ರ** ಪ್ರಹ್ವೀಭಾವ **ಮತ್ಯರ್ಥಪ್ರಿಯಂ** ಕುರ್ವಿತ್ಯರ್ಥಃ- ನನ್ನಲ್ಲಿ ಅತ್ಯಂತ ದೇಹವನ್ನು ಬಗ್ಗಿಸಿ ನಿನ್ನ ಶೇಷಿಗೆ ತುಂಬಾ ಪ್ರಿಯವಾಗುವ ಹಾಗೆ ಪ್ರಣಾಮವನ್ನು ಮಾಡು ಎಂಬ ತಾತ್ಪರ್ಯವು. ನಮಸ್ಕಾರವು ಮೂರು ವಿಧವು :—(೧) ಪಂಚಾಂಗ ನಮಸ್ಕಾರ (೨) ದಂಡವತ್ ನಮಸ್ಕಾರ, (೩) ಅಷ್ಟಾಂಗ ನಮಸ್ಕಾರವೆಂದಾಗಿ ಇವುಗಳ ಈ ಶ್ಲೋಕಗಳಲ್ಲಿ ಹೇಳಲ್ಪಟ್ಟಿವೆ:- "ಪಾದಾಭ್ಯಾಂ ಜಾನುಭ್ಯಾಂ ಶಿರಸಾ ಚಾವನಿಂ ಸ್ಪೃಶನ್ । ಬದ್ಧಾಂಜಲಿರ್ನಮಸ್ಕುರ್ಯಾತ್ಪಂಚಾಂಗಸ್ತು ಸಮೀರ್ಯತೇ । ನಿಧಾಯ ದಂಡವದ್ದೇಹಂ ಪ್ರಸಾರ್ಯ ಚರಣೌ ಕರೌ । ಬಧ್ವಾ ಮುಕುಳವತ್ಪಾಣೀ ಪ್ರಣಾಮೋ ದಂಡಸಂಜ್ಞಿತಃ ॥ ಪಾದೌ ಶಿರ ಸ್ತಥಾ ಹಸ್ತೌ ನಿಕ್ಷಿಪ್ಯ ಮುಕುಳಾಕೃತಿಃ । ಮನೋಬುದ್ಧ್ಯಭಿಮಾನೈಶ್ಚ ಪ್ರಣಾಮೋಽಷ್ಟಾಂಗಸಂಜ್ಞಿತಃ" ಈ ನಮಸ್ಕಾರವೆ ಶರಣಾಗತಿ ರೂಪವಾದುದ. ಇವು ಎರಡು ವಿಧ ಸಾಧ್ಯೋಪಾಯಗಳಾದ ಉಪಾಸನ, ಪ್ರಪತ್ತಿ ಎರಡಕ್ಕೂ ಬೇಕು. ಆದುದರಿಂದ ಶ್ರೀ ಯತಿವರ್ಯರು "ತನ್ನಚವಶೀಕರಣಂ ತಚ್ಛರಣಾಗತಿರೇವ" ಎಂದು ಉಪದೇಶಿಸಿರುತ್ತಾರೆ. ಇದು ಉಪಾಸನಕ್ಕೆ ಅಂಗವು. ಆದೇ ಈ ಶ್ಲೋಕದಲ್ಲಿ ಹೇಳಿರುವದು ಅದಕ್ಕೆ ಸದ್ವಾರಕ ಶರಣಾಗತಿ ಎಂದು ಹೆಸರು ೬೬ನೆಯ ಶ್ಲೋಕದಲ್ಲಿ ಹೇಳಿರುವದು ಅದ್ವಾರಕ ಶರಣಾಗತಿಯು ; ಅಂಗಿ ಶರಣಾಗತಿಯು.

ನೋಪಚ್ಛಂದನ ಮಾತ್ರಮ್, ಯತಸ್ತ್ವಂ ಪ್ರಿಯೋಽಸಿ ಮೇ ; "ಪ್ರಿಯೋ ಹಿ ಜ್ಞಾನಿ ನೋಽತ್ಯರ್ಥಮ್ ಅಹಂ ಸ ಚ ಮಮ ಪ್ರಿಯಃ" ಇತಿ ಪೂರ್ವಮೇವೋಕ್ತಮ್. ಯಸ್ಯ

---

ಇದಕ್ಕೆ ಪ್ರಪದನ, ಭರಸಮರ್ಪಣ ಮೊದಲಾದ ಹೆಸರುಗಳುಂಟು. ಆದದರಿಂದ "ಭಕ್ತ್ಯಾ ಪರಮಯಾ ವಾಪಿ ಪ್ರಪತ್ತ್ಯಾ ವಾ ಮಹಾಮತೇ । ಪ್ರಾಪ್ಯೋಽಹಂ ನಾನ್ಯಥಾ ಪ್ರಾಪ್ತಃ ಮಮ ಕೈಙ್ಕರ್ಯ ಲಿಪ್ಸುಭಿಃ" ಎಂದು ಶಕ್ತನಾಗಿಯೂ ಅಧಿಕಾರವೂ ಇರುವವನಿಗೆ ಉಪಾಸನೆಯೂ ಅಶಕ್ತನಾಗಿಯಾಗಲಿ, ಅಧಿಕಾರ ಹೀನನಾಗಿಯಾಗಲಿ ಇರುವವನಿಗೆ ಪ್ರಪತ್ತಿಮಾರ್ಗವೂ, ಹೀಗೆ ಎರಡು ವಿಧವಾದ ಉಪಾಯಗಳು. ಮಾಂ ನಮಸ್ಕುರು ಎಂಬಲ್ಲಿ ದೇಹದ ಪ್ರಹ್ವೀಭಾವ ಮಾತ್ರವೇ ಉದ್ದೇಶ್ಯವಲ್ಲವು ; ದಾಸಭೂತನಾದವನು ಪರಮಪ್ರಾಪ್ಯಪ್ರಾಪ್ತಿಗಾಗಿ ಆತನಲ್ಲಿ ಸರ್ವಭರವನ್ನೂ ಇಟ್ಟು ತಾನು ಮಾಡಿದ ಅಪರಾಧಗಳ ಕ್ಷಮಾಪಣೆಯನ್ನು ಪ್ರಾರ್ಥಿಸುತ್ತಾ ಇರುವ ಅಂತಃಕರಣವಿಶೇಷವನ್ನು ಸೂಚಿಸುವ ಪ್ರವೃತ್ತಿಯೇ ನಮಸ್ಕಾರವೆಂಬ ಭಾವವು, ಅತಿಮಾತ್ರಪ್ರಹ್ವೀಭಾವದಿಂದ ತಾನೂ, ತನಗೆ ಸೇರಿದ ಸರ್ವವೂ, "ಮಮ ನಾಥ ಯದಸ್ತಿ ಯೋಽಸ್ಮ್ಯಹಂ ಸಕಲಂ ತದ್ಧಿ ತವೈವ ಮಾಧವ" (ಆಳ. ೫೩) ಎಂಬಲ್ಲಿ ಹೇಳಿರುವ ಹಾಗೆ ತನ್ನ ನಾಥನಾದ ಪರಮಪುರುಷನದೇ, ತನ್ನದು ಯಾವುದೂ ಇಲ್ಲವು. ಎಂಬ ಅನುಸಂಧಾನವನ್ನು ಸೂಚಿಸುತ್ತದೆ.

ಹೀಗೆ ಭಕ್ತಿಯೋಗವನ್ನನುಷ್ಠಿಸಿದುದಾದರೆ ಪ್ರಾಪ್ತವಾಗುವ ನಿರತಿಶಯ ಫಲವನ್ನು ಉತ್ತರಾರ್ಧದಿಂದ ಹೇಳುತ್ತಾರೆ—ಏವಂ ವರ್ತಮಾನಃ - ಮದ್ಭಕ್ತನಾಗಿ, ಮದ್ಯಾಜಿಯಾಗಿ ನನ್ನನ್ನಾರಾಧಿಸುವನಾಗಿ ನನಗೆ ನಮಸ್ಕರಿಸುವ ಚಿತ್ತಾಗ್ರತೆಯಿಂದ ಹೀಗೆ ನನ್ನನ್ನೇ ನಿತ್ಯದಲ್ಲೂ ಉಪಾಸಿಸುವನಾದರೆ, ಮಾಮೇ ವೈಷ್ಯಸಿ - ನನ್ನನ್ನೇ ಬಂದು ಸೇರುವಿ. ಏತತ್ ಸತ್ಯಂ - ಇದು ಸತ್ಯವು, ತೇ ಪ್ರತಿಜಾನೇ ಎಂದರೆ ತವ ಪ್ರತಿಜ್ಞಾಂ ಕರೋಮಿ - ನಿನಗಾಗಿ ಸತ್ಯ ಪ್ರತಿಜ್ಞೆಯನ್ನು ಮಾಡುವೆನು ಎಂಬ ಭಾವವು. ಇದು ತನ್ನ ಸತ್ಯಸಙ್ಕಲ್ಪತೆಯನ್ನು ತೋರಿಸುತ್ತದೆ ; ಪ್ರಪನ್ನ ಜನರನ್ನು ರಕ್ಷಿಸೋಣವೇ ತನ್ನ ಸತ್ಯಸಙ್ಕಲ್ಪವು, ತನ್ನ ಸತ್ಯವ್ರತವೆಂಬ ಭಾವದಿಂದ ಹೇಳಿದ ಮಾತಾಗಿರುತ್ತದೆ. ನೋಪಚ್ಛಂದನ ಮಾತ್ರಂ - ನಿನ್ನನ್ನು ವಂಚಿಸುವದಕ್ಕಾಗಿ ಮಾತ್ರ ಹೇಳಿದುದಲ್ಲವು; ಭಕ್ತನ ವಿಷಯದಲ್ಲಿ ಮಾಡಿರುವ ನನ್ನ ಸತ್ಯಸಂಕಲ್ಪವು ಎಂದಿಗೂ ವಿತಥವಾಗುವದಿಲ್ಲವೆಂಬ ಭಾವವು ; "ದ್ಯೌಃ ಪತೇತ್ ಪೃಥಿವೀ ಶೀರ್ಯೇತ್ ಹಿಮವಾನ್ ಶಕಲೀ ಭವೇತ್ । ಶುಷ್ಯೇತ್ತೋಯನಿಧಿಃ ಕೃಷ್ಣೇ ನ ಮೇ ಮೋಘಂ ವಚೋ ಭವೇತ್" ಎಂದಲ್ಲವೇ ದ್ರೌಪದಿಗೆ ಸತ್ಯ ಪ್ರತಿಜ್ಞೆಯನ್ನು ಮಾಡಿದುದು; ಒಂದು ವೇಳೆ ಸ್ವರ್ಗಲೋಕವಾದರೂ ಕೆಳಗೆ ಬಿದ್ದುಹೋಗಬಹುದು, ಸ್ಥಿರವೆಂದು ಹೇಳಿಸಿಕೊಳ್ಳುವ ಭೂಮಿಯು ಒಂದು ವೇಳೆ ಶಿಥಿಲಿಹೋಗಬಹುದು; ಹಾಗೆಯೇ ದೊಡ್ಡದಾದ ಹಿಮವತ್ಪರ್ವತವು ಒಂದು ವೇಳೆ ಚೂರುಚೂರಾಗಬಹುದು ; ಸಮುದ್ರವಾದರೂ ಒಣಗಿಹೋಗಬಹುದು; ಓ, ದ್ರೌಪದಿಯೇ ನನ್ನ ಸತ್ಯಪ್ರತಿಜ್ಞಾರೂಪವಾಕ್ಯಾದರೋ ಎಂದಿಗೂ ವ್ಯರ್ಥವಾಗಲಾರದು ಎಂಬುದು ಶ್ಲೋಕ ತಾತ್ಪರ್ಯವು. (ಭಾಗ) ಈ ಮಾತು ಬರೀ ಉಪಚ್ಛಂದನ ರೂಪದಲ್ಲಿ ನಿನಗೆ ವಂಚನೆಯನ್ನೆಸಗುವ ಮಾತಲ್ಲವು. ಏಕೆಂದರೆ ನೀನು ಪ್ರಿಯೋಽಸಿ ಮೇ ಎಂದು ಮುಂದೆ ಹೇಳುತ್ತಾರೆ. ಪ್ರಿಯನನ್ನು ವಂಚಿಸಬಹುದೋ ದುಷ್ಟರನ್ನು ವಂಚಿಸಬಹುದು. ಅಸುರರನ್ನು ಮೋಹಿನೀ ವೇಷದಿಂದ ವಂಚಿಸಬಹುದು. ಭಸ್ಮಾಸುರನನ್ನು ತಲೆಯಮೇಲೆ ಕೈ ಇಟ್ಟುಕೊಳ್ಳುವ ಹಾಗೆ ಅಭಿನಯಿಸಿ ಭಸ್ಮವಾಗುವಹಾಗೆ ವಂಚಿಸಬಹುದು; ಯವನನನ್ನು ಕಂಡರೆ ಓಡಿಹೋಗುವ ಹಾಗೆ ಮಾಡಿ ಮುಚುಕುಂದರು ಇರುವಲ್ಲಿಗೆ ಆತನು ಹಿಂಬಾಲಿಸಿಬರುವ ಹಾಗೆ ಮಾಡಿ, ಆ ಮಹಾಭಾಗವತರು ಕಣ್ಣು ಬಿಟ್ಟು ನೋಡಿ ಅದ

**ಮಯ್ಯತಿ ಮಾತ್ರಾ ಪ್ರೀತಿರ್ವರ್ತತೇ; ಮಮಾಪಿ ತಸ್ಮಿನ್ನತಿಮಾತ್ರಾ ಪ್ರೀತಿರ್ಭವತಿ, ತದ್ವಿಯೋಗ ಮಸಹಮಾನೋಽಹಂ** ತಂ ಮಾಂ **ಪ್ರಾಪಯಾಮಿ ; ಅತಸ್ಸತ್ಯಮೇವ ಪ್ರತಿಜ್ಞಾತಂ "ಮಾಮೇ ವೈಷ್ಯಸಿ" ಇತಿ ॥ ೬೫ ||**

---

ರಿಂದ ಅಸುರನು ಜಸ್ಮವಾಗುವ ಹಾಗೆ ಮಾಡಿ ವಂಚಿಸಬಹುದು. ಪ್ರಿಯರಾದ ದ್ರೌಪದಿ, ಪಾಂಡವರು., ಅಕ್ರೂರ, ಉದ್ಧವ, ವಿಭೀಷಣ, ಆಂಜನೇಯ ಸುಗ್ರೀವಾದಿಗಳನ್ನು ವಂಚಿಸುವರೋ? ಎಂದಿಗೂ ಇಲ್ಲವು. ಆದುದರಿಂದ **ನೋಪಚ್ಛಂದನ ಮಾತ್ರಂ** ಎಂಬ ವ್ಯಾಖ್ಯಾನವು. ಅದೇನು ನನ್ನ ವಿಷಯದಲ್ಲಿ ತಮಗೆ ಅಂತಹ ಸತ್ಯಪ್ರತಿಜ್ಞೆಯು ಎಂದೇನಾದರೂ ಕೇಳುತ್ತೀಯೋ, ಹೇಳುತ್ತೇನೆ ಕೇಳು - **ಯತಸ್ತ್ವಂ ಪ್ರಿಯೋಽಸಿಮೇ** - ಯಾವಕಾರಣದಿಂದ ನೀನು ನನಗೆ ಶರಣಾಗತನಾಗಿ ಪ್ರಪನ್ನನಾಗಿ ಮೋಕ್ಷಾರ್ಥಿಯಾಗಿರುವದರಿಂದ ನನಗೆ ತುಂಬಾ ಪ್ರಿಯನಾಗಿದೆಯೋ, ಆ ಕಾರಣದಿಂದ ನಿನ್ನ ವಿಷಯದಲ್ಲಿ ಸತ್ಯ ಪ್ರತಿಜ್ಞೆಯು; **ಪ್ರಿಯೋಹಿ ಜ್ಞಾನಿನೋಽತ್ಯರ್ಥ ಮಹಂ ಸ ಚ ಮಮ ಪ್ರಿಯಃ** ಇತಿ **ಪೂರ್ವಮೇವೋಕ್ತಂ**-ಎಂದು ಹಿಂದೆಯೇ ಜ್ಞಾನಿಯಷ್ಟು ಪ್ರಿಯನು ನನಗೆ ಯಾರೂ ಇಲ್ಲವೆಂದು ನಿನಗೆ ಹೇಳಿರುತ್ತೇನೆ.ಮುಷ್ಟೇ. ಇದರಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾರೆ **ಯಸ್ಯ** - ಯಾವ ಮೋಕ್ಷಾರ್ಥಿಗೆ, **ಮಯಿ** - ನನ್ನಲ್ಲಿಯೇ,ಅತಿ**ಮಾತ್ರಾ ಪ್ರೀತಿರ್ವರ್ತತೇ** - ನಿರತಿಶಯವಾದ ಪ್ರೀತಿಯು ಇರುತ್ತದೋ, **ತಸ್ಮಿ** - ಅಂತಹ ಭಕ್ತಿಯೋಗನಿಷ್ಠನಾದ ಜ್ಞಾನಿಯಲ್ಲಿ **ಮಮಾಪಿ** - ನನಗೂ ಕೂಡ, ಅತಿ**ಮಾತ್ರ ಪ್ರೀತಿರ್ಭವತಿ** - ನಿರತಿಶಯ ಪ್ರೀತಿಯುಂಟಾಗುತ್ತದೆ. ಅಂತಹ ಸಂದರ್ಭದಲ್ಲಿ, **ತದ್ವಿಯೊಗಂ** - ಅಂತಹ ಪ್ರಿಯನಾದ ಪ್ರಪನ್ನನ ವಿಶ್ಲೇಷವನ್ನು, ಅಗಲಿರುವಿಕೆಯನ್ನು, **ಅಸಹಮಾನಃ** - ಸಹಿಸದವನಾಗಿ, ತಂ - ಅಂತವನನ್ನು, **ಮಾಂ ಪ್ರಾಪಯಾಮಿ** - ನನ್ನೊಂದಿಗೆ ಬಂದು ಸೇರಿಕೊಳ್ಳುವ ಹಾಗೆ ಮಾಡುವೆನು ; ನನ್ನ ಸಾಯುಜ್ಯವನ್ನು ಹೊಂದುವ ಹಾಗೆ ಮಾಡಿಕೊಳ್ಳುವೆನೆಂಬ ತಾತ್ಪರ್ಯವು. ಅತಃ - ಆ ಕಾರಣದಿಂದ, **ಸತ್ಯಮೇವ ಪ್ರತಿಜ್ಞಾ**ತಂ **ಮಾಮೇವೈ**ಷ್ಯಸಿ ' ಇತಿ ನನ್ನನ್ನೇ ನೀನು ಹೊಂದುವಿ ಎಂದು ಪ್ರತಿಜ್ಞೆಯನ್ನು ಮಾಡಿದುದು ಸತ್ಯವು

ಮಾಮೇವೈಷ್ಯಸಿ ಎಂಬಲ್ಲಿ ಇನ್ನೊಂದು ಗ್ರಹಿಸತಕ್ಕದ್ದಿರುತ್ತದೆ. ನನ್ನನ್ನು ಪ್ರಾಪ್ಯನಾಗಿ ಹೊಂದುವಿ ಎಂದು ಹೇಳುವವನು, **ಶ್ರೀ ಭಗವಾನುವಾಚ** ಎಂದು ಹೇಳಲ್ಪಟ್ಟಿರುವದರಿಂದ ಲಕ್ಷ್ಮೀಯುಕ್ತವಾಸುದೇವನೇ. ಇಲ್ಲಿ ಶ್ರೀ ಶಬ್ದವೂ ಭಗವಚ್ಛಬ್ದವೂ ಎರಡೂ ಮುಖ್ಯಾರ್ಥವುಳ್ಳವೇ. ಪ್ರಾಪ್ಯಪ್ರಾಪಕದೆಶೆಯಲ್ಲೂ ಲಕ್ಷ್ಮೀಯುಕ್ತನಾಗಿಯೇ ಇರುವನು. ಪುರುಷಸೂಕ್ತದಲ್ಲೂ ಈ ಭಗವಂತನು ಯಾರು ಎಂಬಲ್ಲಿ ನಾರಾಯಣನೆಂದೂ ಆತನು ಲಕ್ಷ್ಮೀಯುಕ್ತನೆಂದೂ ಹೇಳಲ್ಪಟ್ಟಿರುತ್ತದೆ. ದಿವ್ಯ ವೈಕುಂಠದಲ್ಲಿರುವ ಲಕ್ಷ್ಮೀಯುಕ್ತನಾದ ವಾಸುದೇವನೇ ಪರಮಪ್ರಾಪ್ಯವೆಂಬುದನ್ನು ತಿಳಿಯತಕ್ಕದ್ದು. **ಆವಾಂ** ಎಂಬ ಪ್ರಯೋಗವಿಲ್ಲದೆ **ಮಾಮೇವ** ಎಂದು ಏಕವಚನವಿರುವಾಗ, ಲಕ್ಷ್ಮೀಯುಕ್ತನೆಂಬ ಅರ್ಥವು ಹೇಗೆ? ಎಂದರೆ **ನಾರಾಯಣನೂ ಲಕ್ಷ್ಮಿಯೂ** ಯಾವಾಗಲೂ ಒಟ್ಟಿಗೆ ಇರುವದರಿಂದ ಸನ್ನಿಯೋಗ ಶಿಷ್ಟನ್ಯಾಯದ ಪ್ರಕಾರ ವಿಶೇಷ್ಯವನ್ನು ಹೇಳಿದರೆ ಅದರೊಂದಿಗೆ ಯಾವಾಗಲೂ ಸೇರಿರುವ ವಿಶೇಷಣವನ್ನು ಹೇಳಿದಂತಾಯಿತು. ಶ್ರುತಿಯು "**ಸ್ವಧಯಾತದೇಕಂ**" "**ಶ್ರದ್ಧಯಾದೇವೋ ದೇವತ್ವಮಶ್ನುತೇ**" ಇತ್ಯಾದಿಗಳಲ್ಲಿ ಹೇಳಲ್ಪಟ್ಟಿದ್ದರೂ, ಮಿಕ್ಕ ಅನೇಕಸ್ಥಳಗಳಲ್ಲಿ ಪರಮಾತ್ಮನೊಬ್ಬನನ್ನೇ ಹೇಳಲ್ಪಟ್ಟನೇ ವಿನಾ ಈ ಸನ್ನಿಯೋಗ ಶಿಷ್ಟನ್ಯಾಯದ ಪ್ರಕಾರ ಪರಮಪುರುಷನೊಬ್ಬನೇ ಹೇಳಲ್ಪಟ್ಟನೇ ವಿನಾ, ಲಕ್ಷ್ಮಿಯನ್ನು ಬೇರೆಯಾಗಿ ತದಂತರ್ಭಾವಾತ್ತ್ವಂ **ನಪೃಥಗ ಭಿದತ್ತೇಶ್ರುತಿರಪಿ (ಶ್ರೀಪರಾ.ಶ್ರೀಗುಣ)** ಎಂದು ಹೇಳಿರುವ ಪ್ರಕಾರ ಶಬ್ದ ಪ್ರಯೋಗವಿಲ್ಲವು. ಆದರೆ ಪರಾಶರ

ವ್ಯಾಸ ಶುಕ ವಾಲ್ಮೀಕಿ ಮಹರ್ಷಿಗಳೆಲ್ಲಾ ಐಕಕಂಠ್ಯದಿಂದ ಲಕ್ಷ್ಮಿಯು ಯಾವಾಗಲೂ ಪತಿಯೊಂದಿಗೆ ಸೇರಿಯೇ ಇರುತ್ತಾಳೆಂಬುದು ಈ ಮುಂದಿನ ಪ್ರಮಾಣಗಳಿಂದ ವ್ಯಕ್ತವು — **"ನಿತ್ಯೈವೈಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ। ಯಥಾಸರ್ವಗತೋ ವಿಷ್ಣುಸ್ತಥೈವೇಯ** ಂ **ದ್ವಿಜೋತ್ತಮ"** ವಿ. ಪು. ೧. ೮. ೧೭. **"ಅರ್ಥೋ ವಿಷ್ಣುರಿಯಂ ವಾಣೀ"** ವಿ. ಪು. **ರಾಘವತ್ವೇ ಭವೇತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ। ಅನ್ಯೇಷು ಚಾವತಾರೇಷು ವಿಷ್ಣೋರೇಷಾನಪಾಯಿನೀ** (ವಿ. ಪು. ೧. ೮.) **"ಮಾಮೇಕಂಚ ಶ್ರಿಯಾಯುಕ್ತಂ ಭಕ್ತಿಯುಕ್ತೇನ ನರೋತ್ತಮಃ। ದ್ವಯೇನ ಮನ್ತ್ರರತ್ನೇನ ಮತ್ಪ್ರಿಯೇಣ ಭಜೇತ್ಸದಾ। ಅಚಿರಾತ್ ತತ್ಪ್ರಸಾದೇನ ಮಲ್ಲೋಕಂ ಸ ಗಚ್ಛತಿ."**(ಪದ್ಮಪುರಾಣ) **ವಿದ್ಯಾಸಹಾಯವಾನ್ ದೇವೋ ವಿಷ್ವಕ್ಸೇನೋ ಹರಿಃ ಪ್ರಭುಃ** (ಮೋಕ್ಷ ಧರ್ಮ) ಇಲ್ಲಿ ವಿದ್ಯಾ ಎಂದರೆ ಲಕ್ಷ್ಮಿಯು; **"ಏಕಾಕೀ ವಿದ್ಯಯಾ ಸಾರ್ಧಂ ವಿಹರಿಷ್ಯೇ ದ್ವಿಜೋತ್ತಮ। ತತೋ ಭೂಯೋ ಜಗತ್ಸೃಷ್ಟಿಂ ಕರಿಷ್ಯಾಮೀಹ ವಿದ್ಯಯಾ** (ಭಾರ. ಮೋಕ್ಷಧರ್ಮ) **ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ** (ರಾಮಾ ಸುಂ. ಸೀತಾವಾಕ್ಯ) **"ಸಹಧರ್ಮಚರೀ ತವ"** (ರಾ. ಬಾ. ) **"ಅನನ್ಯಾ ಹಿ ಮಯಾ ಸೀತಾ ಭಾಸ್ಕರೇಣ ಪ್ರಭಾಯಥಾ** (ರಾ. ಶ್ರೀ ರಾಮೋಕ್ತಿ) ಇತ್ಯಾದ್ಯನೇಕ ಪ್ರಮಾಣಗಳನ್ನು ವಿಮರ್ಶಿಸಿ ನೋಡಿದರೆ **ಮಾಮೇವೈಷ್ಯಸಿ** ಎಂಬ ಅಸ್ಮಚ್ಛಬ್ದದಲ್ಲಿ ಲಕ್ಷ್ಮಿಯು ಅಂತರ್ಗತವೆಂದು ಭಾವಿಸತಕ್ಕದ್ದು. ಓಂ ಎಂಬ ಪ್ರಣವದ ಉಪದೇಶವೂ ಹಾಗೆಯೇ. ಮಕಾರವಾಚ್ಯನಾದ ಜೀವನು ಅಕಾರವಾಚ್ಯನಾದ ವಿಷ್ಣುವಿಗೂ ಉಕಾರವಾಚ್ಯಳಾದ ಲಕ್ಷ್ಮಿಗೂ ಶೇಷಭೂತನೆಂಬುದು ; ಅಗ್ರತಃ **ಪ್ರಯಯೌ ರಾಮಃ ಸೀತಾಮಧ್ಯೇ ಸುಮಧ್ಯಮಾ। ಪೃಷ್ಠತಸ್ತು ಧನುಷ್ಪಾಣಿರ್ಲಕ್ಷ್ಮಣೋ ಅನುಜಗಾಮ ಹ** ಎಂಬ ಅರ್ಥಗರ್ಭಿತವಾದ ಮಹರ್ಷಿಯ ಉಕ್ತಿಯು ಇಲ್ಲಿ ಅನುಸಂಧೇಯವು. ಆದಪರಿಂದ **ಮಾಮೇವೈಷ್ಯಸಿ** ಎಂಬಲ್ಲಿ **ಮಾಂ** ಲಕ್ಷ್ಮೀಯುಕ್ತನಾದ ನನ್ನನ್ನೇ **ಏಷ್ಯಸಿ** - ಹೊಂದುವಿ ಎಂಬರ್ಥವೂ ಸೂಚಿತವು. ಈ ಸನ್ನಿಯೋಗ ಶಿಷ್ಟನ್ಯಾಯವನ್ನನುಸರಿಸಿಯೇ, ಸ್ವಾಮಿಯು ೭ ನೆಯ ಅಧ್ಯಾಯದಲ್ಲಿ ತಮ್ಮ ಸ್ವರೂಪ ಗುಣ, ವಿಭೂತ್ಯೈಶ್ವರ್ಯಗಳನ್ನೂ ಹೇಳಿಕೊಂಡಾಗ ತನಗೆ ಅವಿನಾಭೂತಳಾದ ಲಕ್ಷ್ಮಿಯೂ ತಮ್ಮ ಹಾಗೆಯೇ ಎಂಬ ಭಾವವನ್ನು ಊಹಿಸಿಕೊಳ್ಳಲಿ ಎಂದು ಪೃಥಕ್ಕಾಗಿ ಹೇಳಲಿಲ್ಲವು. ಆದರೆ ೧೦ ನೆಯ ಅಧ್ಯಾಯದಲ್ಲಿ ತಮ್ಮ ಮಹತ್ತಾದ ಐಶ್ವರ್ಯಕ್ಕೆ ಸೇರಿದವಳೆಂದು **"ಕೀರ್ತಿಶ್ರೀರ್ವಾಕ್ಚ ನಾರೀಣಾಂ"** (೩೪) ಎಂಬಲ್ಲಿ ಅವತಾರ ದೇವಿಯ ಮಾಹಾತ್ಮ್ಯೆಯನ್ನು ವಿಶದೀಕರಿಸಿತ್ತಾರೆ.

**ಅವತಾರಿಕೆಯು.** (೧) ತಾನು ಶಕ್ತನೆಂದು ಅರ್ಜುನನು ಭಾವಿಸಿದರೆ ಕರ್ಮಯೋಗಾಂಗಕವಾದ ಉಪಾಸನೋಪಾಯವನ್ನು ಅವಲಂಬಿಸಲಿ, ಹಾಗೆಯೇ ತದಂಗವಾದ ಧರ್ಮಯುದ್ಧವನ್ನು ಮಾಡಲಿ ಎಂದು ೮ ನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲೂ ೧೧ ನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲೂ ಹೇಳಿದ ಗೀತಾಸಾರಭೂತಾರ್ಥವನ್ನೂ ಹಿಂದಿನ ಶ್ಲೋಕದಲ್ಲೂ ಸಹ ನಿಗಮನದಲ್ಲಿ ಹೇಳಿದರು; ಆದರೆ, ಈ ಉಪಾಸನ ರೂಪ ಭಕ್ತಿಯೋಗಕ್ಕೆ ಚಿತ್ತೈಕಾಗ್ರತೆಯು ಬೇಕು. ಅದು ತನ್ನಿಂದ ಸಾಧ್ಯವಿಲ್ಲವೇ ಎಂದು ಅನೇಕ ಕಡೆ ತಿಳಿಸಿರುತ್ತಾನೆ. **"ಚಂಚಲಂ ಹಿ ಮನಃ ಕೃಷ್ಣ"** (೬. ೩೪) ಎಂದು ಪ್ರಥಮತಃ ಹೇಳಿಕೊಂಡಿರುತ್ತಾನೆ. ಅನಂತರ ೧೧ ನೆಯ ಅಧ್ಯಾಯದಲ್ಲಿ ಕೇವಲ ಕರ್ಮಯೋಗವೇ ಮುಕ್ತಿದಾಯಕವಲ್ಲವು ; ಅನನ್ಯ ಭಕ್ತಿಯಿಂದಲೇ ತನ್ನನ್ನು ಬಂದು ಸೇರಬಹುದೆಂದು **"ಭಕ್ತ್ಯಾತ್ವನನ್ಯಯಾ ಶಕ್ಯಃ** ಎಂದು ಹೇಳಿ ಮುಗಿಸಲು ; ಹಾಗೆ ಚಿತ್ತೈಕಾಗ್ರತೆ ಸಾಧ್ಯವಿಲ್ಲದೆ ಅಕ್ಷರ ಮವ್ಯಕ್ತೋಪಾಸನೆಯನ್ನು ಮಾಡಲೇ ಎಂದು ಅರ್ಜುನನು ಕೇಳಲು, ಅದು ಬೇಡ ; ನನ್ನನ್ನೇ ಸಾಕ್ಷಾತ್ತಾಗಿ ಉಪಾಸಿಸು. ನೀನು ಚಿತ್ತೈಕಾಗ್ರತೆಯನ್ನು ಹೊಂದಲು ಕಷ್ಟವೆಂದಲ್ಲವೇ ಹೀಗೆ ಪ್ರಶ್ನಿಸದೆ. ಹಾಗೆ ಚಿತ್ತೈಕಾಗ್ರತೆಯುಂಟಾ

ಮೂ. ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥ ೬೬ ॥

---

ಗಲು ಸಾಧನವನ್ನು ಹೇಳುತ್ತೇನೆ ಕೇಳು ಎಂದು "**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್**" ಎಂದಾರಂಭಿಸಿ ಕೃಪಾನಿಧಿಯು ಮೂರು ವಿಧ ಸಾಧನವನ್ನು ತಿಳಿಸುತ್ತಾರೆ. ಪುನಃ ಹಿಂದಿನ ಶ್ಲೋಕದಲ್ಲಿ ನನ್ನನ್ನೇ ಉಪಾಸಿಸು ಎಂದ ಸಿಗಮನದಲ್ಲಿ ಹೇಳಿ ಯಾವಾಗ ಸುಮ್ಮ ನಾದರೋ, ಆಗ ಈ ಗುರೂಪಾಯವನ್ನು ಅನುಷ್ಠಿಸಲು ತನಗೆ ಚಿತ್ತ ಚಾಂಚಲ್ಯದಿಂದ ಸಾಧ್ಯ ವಿಲ್ಲವೇ ; ತನ್ನ ಪಾಪರಾಶಿಗಳೆಲ್ಲಾ ತೊಲಗುವ ಬಗೆ ಹೇಗೆ ಎಂದು ಅರ್ಜುನನು ಶೋಕಿಸು. ತ್ತಾನೆ. ಇದನ್ನು ಕಂಡು ಕೃಪಾಜಲನಿಧಿಯು ನಿನ್ನ ಸರ್ವಪಾಪಗಳೂ ತೊಲಗುವ ಲಘೂಪಾಯ ವಾದ ಸರ್ವರೂ ಅನುಷ್ಠಿಸಬಹುದಾದ ಶರಣಾಗತಿ ಧರ್ಮವನ್ನು ತಿಳಿಸಿ ಮಾಶುಚಃ ಶೋಕಿಸಬೇಡ ವೆಂದು ಸಮಾಧಾನಮಾಡುತ್ತಾರೆ ಹೀಗೆ ಹಿಂದಿನ ಶ್ಲೋಕದಲ್ಲಿ ಗುರೂಪಾಯವು ಹೇಳಲ್ಪಟ್ಟಿತು ಈ ಶ್ಲೋಕದಲ್ಲಿ ಲಘೂಪಾಯವು ಹೇಳಲ್ಪಟ್ಟಿತು.

(೨) ಹಿಂದಿನ ಶ್ಲೋಕದಲ್ಲಿ ತ್ರಿವರ್ಣದವರಿಗೆ ಮಾತ್ರವೇ ಅಧಿಕಾರವುಳ್ಳ ಮತ್ತು ಉಪಾಸನೆಗೆ ಶಕ್ತರಾದವರಿಗೆ ಮಾತ್ರವೇ ಸಾಧ್ಯವಾದ ಉಪಾಯವು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಾದರೋ ಹಾಗೆ ಶಕ್ತಿಯಿಲ್ಲದ ತ್ರಿವರ್ಣದವರಿಗೂ ಸ್ತ್ರೀ ಶೂದ್ರಚಂಡಾಲರೇ ಮೊದ ಲಾದ ಸರ್ವರೂ ಅನುಷ್ಠಿಸಬಹುದಾದ ಸುಲಭೋಪಾಯವು ಹೇಳಲ್ಪಡುತ್ತದೆ.

ಹಿಂದಿನ ಗುರೂಪಾಯದಿಂದಲೂ ಸರ್ವಪಾಪಬಿಡಗಡೆಯು ಉಂಟಾಗುವದರಿಂದ ಈ ಶ್ಲೋಕವು ಈ ಎರಡು ವಿಧ ಉಪಾಯಗಳಿಗೂ ಅನ್ವಯಿಸುವ ಹಾಗೆ ಭಾಷ್ಯವನ್ನು ಎರಡು ವಿಧ ವಾಗಿ ಮಾಡಿರುತ್ತಾರೆ.

ಉಪಾಸನವನ್ನು ಈ ೧೮ ಅಧ್ಯಾಯಗಳಿಂದ ಉಪಪಾದಿಸಿ, ಶರಣಾಗತಿಯ ನಿಷ್ಠೆಯನ್ನು ಒಂದು ಅನುಷ್ಟುಪ್ ಶ್ಲೋಕದಿಂದ ಹೇಳಿ ಬಿಟ್ಟುಬಿಡಬಹುದೋ ? ಅದರ ಸ್ವರೂಪದೆಂತಾದ್ದು ? ಹೇಗೆ ಅನುಷ್ಠಿಸತಕ್ಕದ್ದು ? ಅದಕ್ಕೆ ಅಂಗಗಳಾವುವು ? ಇತ್ಯಾದಿ ಯಾವ ವಿಷಯವನ್ನೂ ಉಪ ದೇಶಿಸಬೇಡವೇ ಎಂಬ ಆಕ್ಷೇಪಣೆ ಎಂದರೆ, ಈಗ ಯುದ್ಧಕಾಲವಾಗಿ ಅವಕ್ಕೆಲ್ಲಾ ಸಮಯ ವಿಲ್ಲವು. ಅರ್ಜುನನ ಆಶಯವೇನೆಂದರೆ ಪಾಪಗಳೆಲ್ಲಾ ತೊಲಗುವ ಸುಲಭೋಪಾಯವುಂಟೋ ? ಉಪಾಸನೆಗೆ ಯೋಗ್ಯತೆ ಇಲ್ಲದಿರುವಾಗ ತನಗೂ ತನ್ನಂತಹ ಅಶಕ್ತರಿಗೆ ಗತಿಯೇನು ? ಎಂದು ಶೋಕಿಸುತ್ತಿರುವಾಗ ಸುಲಭ ಮಾರ್ಗ ಉಂಟು ಎಂದು ಯಾವಾಗ ಅಭಯಪ್ರದಾನ ಮಾಡಿ ದರೋ ಆಗ ಸಂತುಷ್ಟನಾಗಿ ತನಗಿದ್ದ ಮೋಹವು ತೊಲಗಿತು, ಕರಿಷ್ಯೇ ವಚನಂ ತವ ಎಂದು ಹೇಳಿ ಗಾಂಡೀವವನ್ನು ಪುನಃ ತೆಗೆದುಕೊಂಡು ಯುದ್ಧಕ್ಕೆ ನಿಲ್ಲುತ್ತಾನೆ. ಹೀಗಾಗ ಹಿಂದಿನ ಶ್ಲೋಕಕ್ಕೂ ಈ ಶ್ಲೋಕಕ್ಕೂ ಸಂಗತಿಯು.

**ಮೂಲಕ್ಕೆ ಅರ್ಥವು—ಸರ್ವಧರ್ಮಾನ್ ಪರಿತ್ಯಜ್ಯ** - ಮೋಕ್ಷಪ್ರಾಪ್ತಿಗೆ ಸಾಧನಭೂತವಾದ ವೆಂದು ಈಗ ನಾನು ವಿಸ್ತರಿಸಿ ಹೇಳಿದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳ ಅನುಷ್ಠಾನ ದಲ್ಲಿ, ಅಥವಾ ಜ್ಞಾನಯೋಗ ಕಷ್ಟವಾದರೆ ಕೇವಲ ಕರ್ಮಯೋಗ ಭಕ್ತಿಯೋಗಗಳ ಅನುಷ್ಠಾನ ದಲ್ಲಿ, ಹಿಂದೆ ಹೇಳಿದ ಹಾಗೆ ಕರ್ತೃತ್ವ ಮಮತೆ ಫಲಗಳನ್ನು ಸಂಪೂರ್ಣವಾಗಿ ತ್ಯಾಗಮಾಡಿದವ ನಾಗಿ, **ಮಾಮೇಕಂ** - ಅನ್ಯದೇವತಾ ಸಂಬಂಧವಿಲ್ಲದವನಾಗಿ ಅನುಗ್ರಹಮಯಳಾಗಿ ನನ್ನೊಂದಿಗೆ ಯಾವಾಗಲೂ ಇರುತ್ತಿರುವ ಲಕ್ಷ್ಮಿಯಿಂದ ಯುಕ್ತನಾದ ನನ್ನೊಬ್ಬನನ್ನೇ, **ಶರಣಂ** ಉಪಾಯವನ್ನಾಗಿ ಸಿದ್ಧೋಪಾಯನನ್ನಾಗಿ, **ವ್ರಜ** - ಹೊಂದು ; ಎಂದರೆ ನಾನೇ ಪ್ರಾಪ್ತಿಗೆ ಉಪಾಯನೆಂದೂ ನಾನೇ ಪ್ರಾಪ್ಯನೂ ಎಂದೂ ಅನುಸಂಧಾನ ಮಾಡು. **ಅಹಂ** - ಭಕ್ತಾಭೀಷ್ಟ

ವನ್ನು ಸಲ್ಲಿಸಬೇಕೆಂದೇ ಕಂಕಣಬದ್ಧನಾಗಿಯೂ, ಅವರುಗಳಲ್ಲಿ ಅಪರಿಮಿತ ದಯಾ **ವಾತ್ಸ ಲ್ಯಾದಿಗಳಿಂದ** ಪ್ರೇರಿತನಾಗಿಯೂ ಇರುವ ನಾನು, ತ್ವಾ ನನ್ನಲ್ಲಿ ಶರಣಾಗತಿಯನ್ನು **ಮಾಡಿ ಪ್ರಪನ್ನನಾದ** ನಿನ್ನನ್ನು, **ಸರ್ವ ಪಾಪೇಭ್ಯಃ** – ಅನಾದಿಕಾಲದಿಂದಲೂ ಸಂಚಿತಗಳಾದ ಸರ್ವಪಾಪ ಗಳಿಂದ, ಇವುಗಳಲ್ಲೇ ಪುಣ್ಯಗಳೂ ಸೇರಿದವು, **ಮೋಕ್ಷಯಿಷ್ಯಾಮಿ** - ಬಿಡುಸುವೆನು, **ಮಾಶುಚಃ** ಅಳಬೇಡವೆಂಬ್ಯಾ ಎಂಬರ್ಥವು. ಯಾವಾಗ ಅರ್ಜುನನಿಗೆ ಗುಹ್ಯತಮವಾದ ಪರಮ ಹಿತೋಪ ದೇಶವನ್ನು ಮಾಡಿ ನಿಂತರೋ, ಆಗ ಅರ್ಜುನನು ಹರ್ಷಚಿತ್ತನಾಗಿರಬೇಕಾಗಿತ್ತು. ಆದರೆ ಈ ಶ್ಲೋಕದಿಂದ ಅರ್ಜುನನಿಗೆ ಅಗಾಧ ಶೋಕ ಉಂಟಾಗಿತ್ತೆಂದೂ ಇದನ್ನು ಸರ್ವಜ್ಞರಾದ ಶ್ರೀ ಕೃಷ್ಣಭಗವಾನರವರು ತಿಳಿದವರಾಗಿ ಆತನಿಗಿದ್ದ ಮನಸ್ಸಿನ ಖೇದವನ್ನು ಹೋಗಲಾಡಿಸಿರುತ್ತಾ ರೆಂಬುದು ಈ ಶ್ಲೋಕದಿಂದ ತೋರಿಬರುತ್ತದೆ. ಆದರೆ ಅರ್ಜುನನಿಗೆ ಯಾವಕಾರಣದಿಂದ ಖೇದವೆಂದು ವಿಮರ್ಶಿಸತಕ್ಕದ್ದಾಗಿರುತ್ತದೆ. ಭೀಷ್ಮದ್ರೋಣಾದಿ ಬಂಧುಗಳನ್ನು ಕೊಲ್ಲಲಾರೆ ಎಂಬ ಖೇದವೇ ? ಎಂದರೆ ಅದು ಹಿಂದೆಯೇ ನಿವಾರಣೆಯಾಗಿರಬೇಕು ; ಏಕೆಂದರೆ ಸರ್ವಪಾಪ ಗಳಿಂದಲೂ ಬಿಡುಸುವೆನು ಅಳಬೇಡವೆಂಬ ಉತ್ತರವು ಸಮಂಜಸವಾಗುವದಿಲ್ಲ. ಪುನಃ ವಿಶ್ವ ರೂಪಕಾಲದಲ್ಲೂ ಅರ್ಜುನನಿಗೆ ವ್ಯಥೆಯುಂಟಾಯಿತು, ಅದನ್ನು "ಮಾತೇವ್ಯಥಾ" ಎಂದು (೧೧ - ೪೯) ಅಲ್ಲಿ ಸಮಾಧಾನ ಮಾಡಿರುತ್ತಾರೆ. ಪುನಃ ದೈವಾಸುರವಿಭಾಗವನ್ನು ಉಪದೇಶಿಸಿ ದಾಗ ತಾನು ಏನಾದರೂ ಆಸುರ ಸ್ವಭಾವನೋ ಎಂಬ ಶಂಕಾಪಿಂದ ಪುನಃ ಅರ್ಜುನನಿಗೆ ಶೋಕ ಉಂಟಾಯಿತು ; ಆ ಶೋಕವನ್ನು "ಮಾಶುಚಸ್ಸಂಪದಂ ದೈವೀ ಮಭಿಜಾತೋಸಿ ಪಾಂಡವ ಎಂದು (೧೬. ೫) ಹೇಳಿ ಸಮಾಧಾನ ಮಾಡಿರುತ್ತಾರೆ. ಆದುದರಿಂದ ಈಗ ಆ ಶೋಕಗಳು ಯಾವುವೂ ಅಲ್ಲವು. ಇನ್ನು ಯಾವುದು ಎಂದರೆ **ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ**.– ಸಮಸ್ತಪಾಪಗಳಿಂದಲೂ ಬಿಡಿಸುವೆನು, ಅಳಬೇಡವೆಂದರೆ, ಆತನಿಗೆ ಶೋಕವು, ಅನಾದಿಕಾಲ ದಿಂದಲೂ ಸಂಚಿತವಾದ ಪಾಪಸಮೂಹವೆಲ್ಲಾ ಹೋಗುವ ಬಗೆ ಹೇಗೆ ? ಎಂಬುದಾಗಿಯೇ ಶೋಕವು ಹೀಗೆ ತಾವು ಉಪದೇಶಿಸಿದ ರೀತಿಯಲ್ಲಿ ಕರ್ಮಯೋಗದಿಂದ ಭಕ್ತಿಯೋಗಕ್ಕೆ ಪ್ರತಿ ಬಂಧಕಗಳ ದ ಪಾಪಗಳೆಲ್ಲವೂ ತೊಲಗುತ್ತವೆ. ಕರ್ಮಯೋಗದಲ್ಲಿ ಫಲಕರ್ತೃತ್ವ ಮಮತೆಗಳನ್ನು ತೊರೆದು ಸಮಸ್ತವೂ ತಾನೂ ಬ್ರಹ್ಮಾತ್ಮಕವೆಂಬ ಜ್ಞಾನವನ್ನು ಹೊಂದಿ, ತಾನು ಶರೀರಕ್ಕಿಂತಲೂ ವಿಲಕ್ಷಣನೆಂದು ತಿಳಿದು, ಸಮಸ್ತ ಇತಿಕರ್ತವ್ಯಗಳಾದ ನಿತ್ಯನೈಮಿತ್ತಿಕಾದಿ ಕರ್ಮಗಳಿಂದಲೂ ಶ್ರೀ ಹರಿಯನ್ನು ಆರಾಧಿಸಿ ಆತನಲ್ಲಿ ಸಮರ್ಪಿಸುತ್ತಾ ಬಂದರೆ ಆತ್ಮ ಸಾಕ್ಷಾತ್ಕಾರವು ಲಭಿಸಿ, ಉಪಾ ಯಾನುಷ್ಠಾನವು ಸಿದ್ಧಿಸುತ್ತದೆ ; ಅವನ್ನು ಹಿಂದಿನ ಶ್ಲೋಕದಲ್ಲಿ ಹೇಳಿದರೀತಿಯಲ್ಲಿ ಅನುಷ್ಠಿಸಿ, ಅವುಗಳನ್ನು ಫಲಕರ್ತೃತ್ವ ಮಮ ... ತ್ಯಾಗ ಪೂರ್ವಕವಾಗಿ ಪರಮಪುರುಷನಲ್ಲಿ ಸಮರ್ಪಿಸುತ್ತಾ ಬಂದರೆ, ಆತನಲ್ಲಿ ಅಂಗ ಶರ[illegible]ವನ್ನು ಮಾಡಿದರೆ, ಮಿಕ್ಕ ಸಮಸ್ತ ಪುಣ್ಯಪಾಪಗಳೂ ತೊಲಗಿ ಪರಮಾತ್ಮ ಸಾಕ್ಷಾತ್ಕಾರ [illegible] ಪರಮ ಭಕ್ತಿಯೊಂದಿಗೆ ಮೋಕ್ಷ ಪ್ರಾಪ್ತಿಯು ಸಿದ್ಧಿಸುತ್ತದೆ ಎಂದು ಹೇಳಲ್ಪಟ್ಟಿತು.

ಹಿಂದೆ ಅರ್ಥವನ್ನು ಹೇಳಿದುದರಲ್ಲಿ **ಸರ್ವಧರ್ಮಾನ್ಪರಿತ್ಯಜ್ಯ** ಎಂಬುದಕ್ಕೆ ಕರ್ಮಯೋಗಾದಿ ಸಮಸ್ತಕರ್ಮಗಳನ್ನೂ ಸಾತ್ವಿಕ ತ್ಯಾಗ ಪೂರ್ವಕ ಪರಮಪುರುಷನಲ್ಲಿ ಸಮರ್ಪಿಸಬಹುದೆಂದು ಅರ್ಥವು ಹೇಳಲ್ಪಟ್ಟಿತು. ಆದರೆ ಇನ್ನೊಂದು ವಿಧವಾದ ಅರ್ಥವೂ ಸ್ವಾರಸ್ಯವು. ಹೇಗೆಂದರೆ— ಅರ್ಜುನ ನಿಗೆ ಶೋಕವು ಪಾಪಗಳ ಸಮೂಹಗಳಿಂದ ಬಿಡುಗಡೆಯು ಹೇಗೆ ? ಎಂಬ ವಿಷಯವಾದು ದೆಂಬುದು ವ್ಯಕ್ತವು. ಇದಕ್ಕೆ "ತಮೇವ ಶರಣಂಗಚ್ಛ" ಎಂಬ ಶ್ಲೋಕದಲ್ಲಿ ಅಂಗ ಶರಣಾ ಗತಿಯನ್ನು ವಿಶದವಾಗಿ ಉಪದೇಶಿಸಿ ಸಮಸ್ತ ಅನಿಷ್ಟ ನಿವೃತ್ತಿಯಿಂದ ಇಷ್ಟಪ್ರಾಪ್ತಿಯು ಲಭಿಸು ತ್ತದೆ ಎಂದು ಹೇಳಿದ ನಂತರವೂ ಪಾಪಗಳೆಲ್ಲಾ ಕಳೆಯುವ ಬಗೆ ಹೇಗೆ ? ಎಂದು ಅರ್ಜುನನು

ಶೋಕಿಸುತ್ತಾ ಇದ್ದರೆ ನಾವು ನ್ಯಾಯವಾಗಿ ಊಹಿಸಬೇಕಾದ ವಿಷಯವೇನೆಂಬುದನ್ನು ಚೆನ್ನಾಗಿ ಪರ್ಯಾಲೋಚಿಸತಕ್ಕದ್ದಾಗಿರುತ್ತದೆ. ಅಂಗ ಶರಣಾಗತಿಯೊಂದಿಗೆ ಕರ್ಮಯೋಗಾದಿ ಪರಂಪರೆಗಳನ್ನು ಅನುಷ್ಠಿಸಿ ಚಿತ್ತೈಕಾಗ್ರತೆಯನ್ನು ಹೊಂದುವದು ಕಷ್ಟವೇ; ಆ ಕಾರಣಗಳಿಂದ ಪಾಪಗಳನ್ನು ಕಳೆದುಕೊಳ್ಳುವ ಬಗೆ ಹೇಗೆ? ಒಂದೊಂದು ಅಪರಾಧಕ್ಕೆ ಒಂದೊಂದು ಪ್ರಾಯಶ್ಚಿತ್ತವೇನೋ ವಿಧಿಸಿರುತ್ತದೆ. ಹಾಗೆ ಪಾಪಗಳನ್ನೆಲ್ಲಾ ಕಳೆದುಕೊಳ್ಳೋಣವೆಂದರೆ ಈ ಜನ್ಮದ ಪಾಪಗಳನ್ನೆಲ್ಲಾ ಕಳೆದುಕೊಳ್ಳುವದಕ್ಕೆ ಪುರುಷಾಯುಸ್ಸು ಸಾಲದು. "ಯದ್ಬ್ರಹ್ಮಕಲ್ಪನಿಯುತಾನುಭವೇಪ್ಯನಾಶ್ಯಮ್" ಎಂದು ಹೇಳಿರುವ ಹಾಗೆ ಬ್ರಹ್ಮಕಲ್ಪದವರೆಗೂ ಅನುಭವಿಸಿದರೂ ನಾಶವಾಗದಷ್ಟು ಪಾಪಗಳಿವೆ. ಹೀಗಿರುವಾಗ ಸಂಚಿತ ಪುಣ್ಯಪಾಪಗಳು ಲೆಖ್ಖ ಕೂಡ ಮಾಡಲು ಸಾಧ್ಯವಿಲ್ಲದೆ ಬಹಳವಾಗಿರುವಾಗ ಕಳೆದುಕೊಳ್ಳುವದು ಹೇಗೆ ಸಾಧ್ಯವೆಂಬ ಶೋಕವು ಅರ್ಜುನನನ್ನು ಬಾಧಿಸುತ್ತಿತ್ತೆಂದೇ ಊಹಿಸಬೇಕಾಗಿರುತ್ತದೆ. ಪಾಪಸಮೂಹಗಳಿರುವಾಗ, ಎಷ್ಟು ಪ್ರಾಯಶ್ಚಿತ್ತಗಳನ್ನು ಎಷ್ಟುಕಾಲ ಮಾಡಿದರೂ ಮುಗಿಯುವದಿಲ್ಲವಲ್ಲಾ, ನನ್ನ ಗತಿ ಹೇಗೆ ಎಂಬದಾಗಿ ಶೋಕವು. ತನ್ನಿವಾರಣಾರ್ಥವಾಗಿ ವ್ಯಾಖ್ಯಾನವು ಹೇಗೆ ಎಂದರೆ—ಸರ್ವಧರ್ಮಾನ್-ನೀನು ಮಾಡಿರುವ ಅನೇಕ ಮಹಾಪರಾಧಗಳಿಗೂ ವಿಧಿಸಿರುವ ಸರ್ವಪ್ರಾಯಶ್ಚಿತ್ತ ರೂಪಕರ್ಮಗಳನ್ನೂ, ಪರಿತ್ಯಜ್ಯ-ಬಿಟ್ಟುಬಿಟ್ಟು, ಮಾಮೇಕಂ ಶರಣಂವ್ರಜ-ನನ್ನೊಬ್ಬನನ್ನೇ ಉಪಾಯವನ್ನಾಗಿ ವರಿಸು. ಹೀಗೆ ನನ್ನಲ್ಲಿ ಮಾಡಿದ ಶರಣಾಗತಿ ಮಾಹಾತ್ಮ್ಯೆಯಿಂದ ನಿನ್ನನ್ನು, ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ - ಸಮಸ್ತಪಾಪಗಳಿಂದಲೂ ಬಿಡಿಸುವೆನು, ಮಾಶುಚಃ - ಅಳಬೇಡ. ಹೀಗೆ ನನ್ನಲ್ಲಿ ಮಾಡುವ ಶರಣಾಗತಿಯೇ ಸ್ತ್ರೀ ಶೂದ್ರಾದಿ ಎಲ್ಲಾ ಅಧಿಕಾರಿವಿಷಯದಲ್ಲೂ ಸರ್ವಪಾಪಗಳಿಗೂ ಪ್ರಾಯಶ್ಚಿತ್ತರೂಪವಾದುದು ಎಂಬ ಭಾವವು. ಒಂದೊಂದು ವ್ಯಾಧಿಗೂ ಪ್ರತ್ಯೇಕ ಪ್ರತ್ಯೇಕ ಔಷಧಿಗಳುಂಟು. ಆದರೆ ಕುಪ್ಪೀ ಮಾತ್ರೆಯು ಸರ್ವ ವ್ಯಾಧಿಗಳಿಗೂ ಹೇಗೆ ಭೇಷಜವೋ ಹಾಗೆಯೇ ಈ ಶರಣಾಗತಿಯು ಎಂಬ ಭಾವವು. ಒಂದೊಂದು ಅಪರಾಧಕ್ಕೆ ಒಂದೊಂದು ಬೇರೆ ಪ್ರಾಯಶ್ಚಿತ್ತವು ಉಂಟು, ಆದರೆ ಶರಣಾಗತಿಯು ಸರ್ವಾಪರಾಧಗಳಿಗೂ ಒಂದೇ ಸಲ ಪ್ರಾಯಶ್ಚಿತ್ತವೆಂಬ ಭಾವವು ಸೂಚಿತವು. ಈ ಎರಡನೆಯ ಯೋಜನೆಯಿಂದ ಒಂದು ವಿಶೇಷಾರ್ಥವು ತೋರಿಬರುತ್ತದೆ. ಅರ್ಜುನನು ತನಗೆ ಪಾಪ ನಿವಾರಣೆಗೋಸ್ಕರವಾಗಿ ಪರಮಪುರುಷನನ್ನು ಆಶ್ರಯಿಸಿ ಶರಣಾಗತಿಯನ್ನು ಮಾಡಿದರೆ ತತ್ಸಿದ್ಧಿಯುಂಟಾಗುತ್ತದೆಂದು ಹೇಳಲ್ಪಟ್ಟಿರುವುದರಿಂದ ಯಾವ ಯಾವ ಪ್ರಪನ್ನನೂ ಯಾವ ಯಾವ ಇಷ್ಟಸಿದ್ಧಿಗೋಸ್ಕರವಾಗಿ ಪರಮಪುರುಷನನ್ನು ಆಶ್ರಯಿಸಿ ಶರಣಾಗತಿಯನ್ನನುಷ್ಠಿಸಿದರೂ ಆತನ ಇಷ್ಟಾನುಸಾರವಾಗಿ ಚತುರ್ವಿಧ ಪುರುಷಾರ್ಥಗಳೂ ಸಿದ್ಧಿಸುತ್ತವೆ ಎಂಬುದು ಏರ್ಪಟ್ಟಿತು. ಇದೇ ಶಾಸ್ತ್ರಗಳಲ್ಲಿ ಪ್ರಪದನ, ಭರನ್ಯಾಸ, ಸ್ವತಂತ್ರ ಪ್ರಪತ್ತಿ, ಆತ್ಮನಿಕ್ಷೇಪವೇ ಮೊದಲಾದ ಶಬ್ದಗಳಿಂದ ವ್ಯವಹರಿಸಲ್ಪಟ್ಟಿರುತ್ತದೆ. ಭಕ್ತಿಯೋಗವು ಹೇಗೆ ಉಪಾಯವೋ ಹಾಗೆಯೇ ಪ್ರಪತ್ತಿಯೂ ಉಪಾಯವು. ಇದು ಐದು ಅಙ್ಗಗಳಿಂದಲೂ ಒಂದು ಅಂಗಿಯಿಂದಲೂ ಯುಕ್ತವಾಗಿ ಸಕೃದನುಷ್ಠೇಯವಾದ ಲಘೂಪಾಯವು. ಭಕ್ತಿಯೋಗವು ಕರ್ಮಯೋಗಾದ್ಯನುಷ್ಠಾನಗಳಿಂದ ಅನುಗೃಹೀತವಾಗಿ ಯಾವಜ್ಜೀವವೂ ಅನುಷ್ಠಿಸತಕ್ಕದ್ದಾಗಿರುವದರಿಂದ ಗುರೂಪಾಯವು. ಉಪಾಸನಕ್ಕೆ ಅಶಕ್ತನಾದವನಿಗೆ ಈ ಲಘೂಪಾಯವು ತೈತ್ತರೀಯ, ಕಠ, ಮುಂಡಕ ಶ್ವೇತಾಶ್ವತರ ಶ್ರುತಿಗಳಲ್ಲಿ ಹೇಳಲ್ಪಟ್ಟು ಶ್ರೀಮದ್ರಾಮಾಯಣ, ಪಾಂಚರಾತ್ರ, ಶ್ರೀಮದ್ಭಾಗವತ ಶ್ರೀಮನ್ಮಹಾಭಾರತ ಪದ್ಮಪುರಾಣಾದಿಗಳಲ್ಲೂ ಇನ್ನೂ ಇತರ ಸಂಹಿತೆ ಸ್ಮೃತಿಗಳಲ್ಲೂ ಉಪಪಾದಿತವು, ಇವುಗಳ ವಿಷಯದಲ್ಲಿ ಸಂಪೂರ್ಣ ಜ್ಞಾನಾಪೇಕ್ಷೆಯುಳ್ಳವರು ಶ್ರೀದೇಶಿಕರವರ ರಹಸ್ಯತ್ರಯಸಾರದ ಪರಿಕರ ವಿಭಾಗ ಉಪಾಯ ವಿಭಾಗಾಧಿಕಾರ ಮೊದಲು ನಾಲ್ಕು ಅಧಿಕಾರಗಳನ್ನು ಪರಾಂಬರಿಸಬಹುದು. ದಾಸನು ಬರೆದಿರುವ ವ್ಯಾಖ್ಯಾ

ನದ ಪುಟಗಳು (೮೫೨ – ೧೦೩೧ ಪುಟಗಳು.) ಹೀಗೆ ಗೀತಾಶಾಸ್ತ್ರದಲ್ಲೂ ಎರಡುವಿಧ ಉಪಾಯಗಳೂ ಉಪಪಾದಿತವು. ಆದಿಯಲ್ಲಿ ಅರ್ಜುನನು "**ಶಾಧಿಮಾಂ ತ್ವಾಂಪ್ರಪನ್ನಂ**" ಎಂದು ಬ್ರಹ್ಮವಿದ್ಯಾಜ್ಞಾನಕ್ಕಾಗಿ ಆಶ್ರಯಿಸಿರುವದೇ ಪ್ರಕದನವು ; ಇಲ್ಲಿಯೂ ಕೊನೆಯಲ್ಲೂ ಸೂಚಿತವು. ಹೀಗೆ ತ್ರಿವರ್ಗಗಳ ಪ್ರಾಪ್ತಿಗೂ, ಹಾಗೆಯೇ ಮೋಕ್ಷಪ್ರಾಪ್ತಿಗೂ ಸಹ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿರುವದು ಎರಡು ಉಪಾಯಗಳೆಂಬುದು "**ಭಕ್ತ್ಯಾ ಪರಮಯಾ ವಾಪಿ ಪ್ರಪತ್ತ್ಯಾವಾ ಮಹಾಮತೇ ಪ್ರಾಪ್ಯೋಽಹಂ ನಾನ್ಯಥಾ ಪ್ರಾಪ್ಯೋ** ಮಮಕೈಙ್ಕರ್ಯ **ಲಿಪ್ಸುಭಿಃ**"ಎಂಬೀ ಪ್ರಮಾಣದಿಂದವ್ಯಕ್ತವು. ಇದು ಹೀಗೆ ಮಹತ್ತಾದ ಗೂಢಾರ್ಥವುಳ್ಳ ಶ್ಲೋಕವಾದುದರಿಂದಲೇ ಇದಕ್ಕೆ ಗೀತಾಚರಮ ಶ್ಲೋಕವೆಂಬ ಹೆಸರು, ಇದಕ್ಕೆ ಚರಮ ಶ್ಲೋಕವೆಂಬ ಹೆಸರು ಏತಕ್ಕೆ ? ಎಂದರೆ - (೧) ಗೀತಾ ಕೊನೆಯ ಅಧ್ಯಾಯದ ಕೊನೆಯ ಶ್ಲೋಕವಾಗಿ ಪ್ರಾಪ್ಯವನ್ನು ಸುಲಭವಾಗಿ ಹೊಂದಿಸುವ ಸರ್ವೋತ್ಕೃಷ್ಟ ಉಪಾಯವನ್ನು ಬೋಧಿಸುವದರಿಂದಾಗಲಿ,(೨) ಮುಕ್ತಿಯನ್ನು ಕೊಡುವ ಉಪಾಸನ ಅಥವಾ ಭಕ್ತಿ ಮಾರ್ಗದಲ್ಲಿ ಅಶಕ್ತನಾದವನಿಗೆ ಕೊನೆಯ ಉಪಾಯವಿದು ಎಂದ್ಬ ಅಹಿರ್ಬುಧ್ನ್ಯಸಂಹಿತೆಯಲ್ಲಿ "**ಯದ್ಯೇನ ಕಾಮಕಾಮೇನ ನ ಸಾಧ್ಯಂ** ಸಾಧನಾಂತರೈಃ । **ತೇನ ತೇನಾಪ್ಯತೇ** ತತ್ತತ್ ನ್ಯಾಸೇನೈವ **ಮಹಾಮುನೇ**"ಎಂದು ಹೇಳಿರುವದರಿಂದಾಗಲಿ(೩)ಚರಮ ದೆಶೆಯಲ್ಲಿ ಸುಲಭವಾಗಿ ಸುಕರವಾಗಿ ಸರ್ವೋತ್ಕೃಷ್ಟ ಮಹಿಮೆಯುಳ್ಳ ಉಪಾಯವನ್ನು ಬೋಧಿಸುವದರಿಂದಾಗಲಿ ಎಂದು ಭಾವಿಸಬಹುದು. ಇದರ ಮಾಹಾತ್ಮ್ಯೆಯನ್ನೆಲ್ಲಾ ವಿಶದವಾಗಿ ತಿಳಿಯ ಬೇಕಾದರೆ ಶ್ರೀ ನಿಗಮಾನ್ತದೇಶಿಕರವರು ಬರೆದಿರುವ ಚರಮ ಶ್ಲೋಕಾಧಿಕಾರವನ್ನು ಪರಾಂಬರಿಸ ತಕ್ಕದ್ದಾಗಿದೆ. ಆದರೂ ಸಾಧ್ಯವಾದಮಟ್ಟಿಗೆ ಅದರಲ್ಲಡಗಿರುವ ಸ್ವಾರಸ್ಯಗಳು ಸಂಗ್ರಹವಾಗಿ ಶ್ರೀ ಯತಿವರ್ಯರ ಭಾಷ್ಯದೊಂದಿಗೆ ಉಪಪಾದಿಸಲ್ಪಡುವುವು.

ಪ್ರಪದನ ವಿಷಯವಾಗಿ ಈ ಶ್ಲೋಕವನ್ನು ಅನ್ವಯಿಸುವಾಗ ಹೇಗೆ ಅರ್ಥವನ್ನು ಈ ಶ್ಲೋಕಕ್ಕೆ ಹೇಳತಕ್ಕದ್ದೆಂದರೆ - **ಸರ್ವಧರ್ಮಾನ್ ಪರಿತ್ಯಜ್ಯ** - ಭಗವತ್ಪ್ರಾಪ್ತಿಗೆ ಉಪಾಯಗಳು ಭಕ್ತಿ ಪ್ರಪತ್ತಿಗಳೆಂಡೇ ಯಾದುದರಿಂದ ಉಪಾಯಾಂತರವಾದ ಭಕ್ತಿಮಾರ್ಗಕ್ಕೆ ಆವಶ್ಯಕಗಳಾದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳ ಸಮಸ್ತ ಧರ್ಮಗಳಿಗೂ ನೀನು ಅಶಕ್ತನಾಗಿ ದುಃಖಿಸುವ ಸಂದರ್ಭದಲ್ಲಿ ಅವುಗಳನ್ನೆಲ್ಲಾ ಸಂಪೂರ್ಣವಾಗಿ **ಪರಿತ್ಯಾಗಮಾಡಿ, ಮಾಮೇಕಂ - ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ। ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ** ಮಮ, ಒಂದು ಸಲ ನಿನ್ನವನೈಯ್ಯಾ ನಾನು, ನನಗೆ ಇನ್ಯಾರು ರಕ್ಷಕರಿಲ್ಲ ಕಾಪಾಡು ಎಂದು ಮಹಾ ವಿಶ್ವಾಸದಿಂದಲೂ ದೈನ್ಯದಿಂದಲೂ **ಪ್ರಾರ್ಥಿಸಿದರೆ**, ಅಂತವರಿಗೆ ಅಭಯವನ್ನು ಕೊಡುವೆನೆಂದು ಕಂಕಣಬದ್ಧನಾಗಿ ಶರಣಾಗತ ವತ್ಸಲನಾದ ನನ್ನೊಬ್ಬನನ್ನೇ ಅನ್ಯದೇವತಾ ಸಂಬಂಧವಿಲ್ಲದೆ, **ಶರಣಂ** ವ್ರಜ - ಪ್ರಾಪ್ಯಪ್ರಾಪಕನೆಂದು ತಿಳಿದು ಶರಣಾಗತಿಯನ್ನು ಅನುಷ್ಠಿಸು; ನೀನು ಲೋಕಗುರುವಾದ ನನ್ನ ಮೂಲಕ ಹೇಗೆ ಅನುಷ್ಠಿಸಬೇಕೆಂದು ಇದ್ದೀಯೋ, ಹಾಗೆಯೇ ಎಲ್ಲರೂ ಒಬ್ಬ ಮಹಾ ಗುರುವಿನ ಮೂಲಕ ಅನುಷ್ಠಿಸತಕ್ಕದ್ದೆಂಬ **ಭಾವವು** ; **ಅಹಂ** - ಸರ್ವಜ್ಞನಾಗಿ ಸರ್ವಶಕ್ತನಾಗಿ, ಪ್ರಪನ್ನರ ವಿಷಯದಲ್ಲಿ ಪರಮದಯಾಳುವಾಗಿರುವ ನಾನು, **ತ್ವಾ** - ನೀನು ಹಿಂದೆ ಎಷ್ಟು ಅಸಂಖ್ಯೇಯಗಳಾದ ಅಕೃತ್ಯಕರಣ ಕೃತ್ಯಾಕರಣ ರೂಪ ಪಾಪಗಳನ್ನು ಮಾಡಿದ್ದರೂ ಪ್ರಪನ್ನನಾದ ನಿನ್ನನ್ನು, **ಸರ್ವಪಾಪೇಭ್ಯಃ** - ಯಾವ ಪ್ರಾಯಶ್ಚಿತ್ತಗಳ ಆವಶ್ಯಕತೆಯೂ ಇಲ್ಲದೆ, ಅನಾದಿಕಾಲದಿಂದಲೂ ಸಂಚಿತಗಳಾದ ಸಮಸ್ತಪಾಪಗಳಿಂದಲೂ **ಬಿಡಿಸುವೆನು ಮಾಶುಚಃ**-ಅಳಬೇಡ ; ಎಂದರೆ ಪುನಶ್ಶೋಕಕ್ಕೆ ಅವಕಾಶವಿಲ್ಲದ ಹಾಗೆ ಪುನರಾವರ್ತಿಯಿಲ್ಲದೆ ಮೋಕ್ಷಸುಖವನ್ನು ಕೊಡುವನೆಂಬ **ಭಾವವು**. ಅದೂ ಅಲ್ಲದೆ ಕರ್ಮಯೋಗ ಭಕ್ತಿಯೋಗಾದಿಗಳನ್ನು ಮಾಡಲು ನನಗೆ ಶಕ್ತಿಯಿಲ್ಲವೇ, ಏನು ಮಾಡಲಿ ಎಂಬ ಶೋಕವೂ ನಿನಗೆ **ಬೇಡವು**.

ಭಕ್ತಿಯೋಗವು ಹೇಗೆ ಸರ್ವಪಾಪಗಳನ್ನು ಹೋಗಲಾಡಿಸುತ್ತದೋ, ಹಾಗೆಯೇ ಈ ಶರಣಾಗತಿಯಿಂದ ಲೇ ಸರ್ವಪಾಪಗಳಿಂದ ಬಿಡುಗಡೆಯುಂಟು ಎಂದು ಹೇಳಲ್ಪಟ್ಟಿತು. ಇದನ್ನನುಸರಿಸಿಯೇ ಶ್ರೀಯಾಮುನ ಮುನಿಗಳು "**ನಧರ್ಮನಿಷ್ಠೋಽಸ್ಮಿ ನಚಾತ್ಮವೇದೀ ನಭಕ್ತಿಮಾನ್** ತ್ವಚ್ಚರಣಾರವಿಂದೇ" ಎಂಬ ಪೂರ್ವಾರ್ಧದಲ್ಲಿ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳಿಗೆ ತಮ್ಮ ಅಶಕ್ತತೆಯನ್ನು ಪ್ರದರ್ಶಿಸಿ, ಉತ್ತರಾರ್ಧದಿಂದ "**ಅಕಿಂಚನೋಽನನ್ಯಗತಿ** ಶ್ಶರಣ್ಯ ತತ್ಪಾ**ದಮೂಲಂ ಶರಣಂ ಪ್ರಪದ್ಯೇ**" ಎಂದು ಶರಣಾಗತಿಯನ್ನೇ ಅನುಷ್ಠಿಸಿರುತ್ತಾರೆ. (ಆಳವಂದಾರ್ ೨೧) **ಆದುದರಿಂದ** ಈ ಚರಮಶ್ಲೋಕದ ಮೊದಲನೆಯ ಯೋಜನೆ ಮತ್ತು ಎರಡನೆಯ **ಯೋಜನೆ**ಗಳಿಂದ ತೋರಿಬರುವ ಎರಡು ವಿಧ ಅರ್ಥಗಳ ಒಟ್ಟು ತಾತ್ಪರ್ಯವನ್ನು ಸಙ್ಗ್ರಹವಾಗಿಯೂ ಬಹು ಸ್ವಾರಸ್ಯವಾಗಿಯೂ ಶ್ರೀ ನಿಗಮಾನ್ತದೇಶಿಕರವರು "**ಸುದುಷ್ಕರೇಣ ಶೋಚೇದ್ಯೋಯೇನ ಯೇನೇಷ್ಟಹೇತುನಾ । ಸ ಸ ತಸ್ಯಾ ಹ ಮೇವೇತಿ ಚರಮಶ್ಲೋಕಸಙ್ಗ್ರಹಃ**" ಎಂಬ ಶ್ಲೋಕದಲ್ಲಿ ವ್ಯಕ್ತಪಡಿಸಿರುತ್ತಾರೆ. ಇದರ ತಾತ್ಪರ್ಯವೇನೆಂದರೆ-**ಸುದುಷ್ಕರೇಣ** - ಹೊಂದಲು ಅಸಾಧ್ಯವಾಗಿರುವ, **ಯೇನಯೇನೇಷ್ಟಹೇತುನಾ** - ಯಾವ ಯಾವ ಅಭೀಷ್ಟವನ್ನು ಪಡೆಯಬೇಕೆಂಬ **ಕಾರಣದಿಂದ, ಯಃ** - ಯಾವನು, **ಶೋಚೇತ್** - ಶೋಕಿಸುತ್ತನೋ, **ತಸ್ಯ** - ಅಂತಹ **ಶೋಕಿಸುವವನಿಗೆ, ಸ ಸಃ** - ಆಯಾ ಇಷ್ಟಾರ್ಥವನ್ನು ಹೊಂದುವ ಕಾರಣವೂ, **ಅಹಮೇವೇತಿ**- ಪ್ರಪನ್ನಾನುಗ್ರಹವೇ ವ್ರತವಾಗಿವುಳ್ಳ ಕೃಪಾಮಹೋದಧಿಯಾದ ನಾನೇ ಎಂಬುದೇ ಚರಮ **ಶ್ಲೋಕದ** ಸಙ್ಗ್ರಹಾರ್ಥವು. ಅರ್ಜನನಿಗೆ ಸುದುಷ್ಕರವಾದ ಪಾಪಗಳ ನಿವಾರಣವು ಹೇಗೆ ಆದೀತೆಂದು ಶೋಕಾಕುಲನಾಗಿದ್ದನು ; ಆದು ಹೇಗೆ ಶರಣಾಗತಿಯಿಂದ ತೊಲಗುತ್ತದೆಂದು ಶ್ರೀ ಕೃಷ್ಣಭಗವಾನ್ ರವರು ಹೇಳಿದರೋ, ಹಾಗೆಯೇ ಇತರರಿಗೂ ಅವರುಗಳ ಇಷ್ಟಪ್ರಾಪ್ತಿಯ ವಿಷಯದಲ್ಲಿನ ದುಃಖವು ತೊಲಗಿ ಫಲವು ಸಿದ್ಧಿಸುತ್ತದೆಂಬ ತಾತ್ಪರ್ಯವು. ಉಪಾಯವು ಹೀಗೆ ಎರಡು ವಿಧ. ಉಪಾಯಗಳಾದ ಭಕ್ತಿ ಪ್ರಪತ್ತಿಗಳಲ್ಲೂ ಶರಣಾಗತಿಯು ಅವಶ್ಯಕವು ; ಭಕ್ತಿಮಾರ್ಗದಲ್ಲಿ ಪ್ರತಿಬಂಧಕ ಪಾಪಸಮೂಹ ನಿವೃತ್ತಿಗಾಗಿ ಅಙ್ಗವಾಗಿ ಶರಣಾಗತಿಯು ಅವಶ್ಯಕವು ; ಪ್ರಪತ್ತಿಮಾರ್ಗದಲ್ಲಿ ಅಂಗಿಯಾಗಿ ಅವಶ್ಯಕವು. ಹೀಗೆ ಎರಡಕ್ಕೂ ಅವಶ್ಯಕವಾದುದರಿಂದಲೇ ಶ್ರೀ ಯತಿವರ್ಯರು ಶ್ರೀ ಭಾಷ್ಯದಲ್ಲಿ "**ತಸ್ಯಚವಶೀಕರಣಂ ತಚ್ಛರಣಾಗತಿರೇವ**"ಎಂದು ಸ್ಪಷ್ಟವಾಗಿ ಹೇಳಿರುತ್ತಾರೆ. ಇದು ಈ ಗ್ರಂಥದಲ್ಲಿ ವ್ಯಕ್ತವು. ೧೮-೬೨ ರಲ್ಲಿ "ತಮೇವ ಶರಣಂಗಚ್ಛ ಎಂಬಲ್ಲಿ ಅಂಗಶರಣಾಗತಿಯೂ ಇಲ್ಲಿ ಅಂಗಿ ಶರಣಾಗತಿಯೂ ಹೇಳಲ್ಪಟ್ಟಿರುತ್ತವೆ.

ಅರ್ಜುನನು ಮಹಾ ಪ್ರಾಜ್ಞನು. ಹೀಗೆ ಭರನ್ಯಾಸವನ್ನು ಅನುಷ್ಠಿಸಿ, ಸರ್ವಪಾಪಗಳೂ ಕಳೆದು ಮೋಕ್ಷವು ಸಿದ್ಧಿಸುತ್ತದೆ ಎಂದು ಹೇಳಿದುದರಿಂದ, ಈಗ ಪ್ರಾಪ್ತವಾಗಿರುವ ಮತ್ತು ಕ್ಷತ್ರಿಯನಾಗಿರುವ ತನಗೆ ಇತಿಕರ್ತವ್ಯತಾರೂಪದಲ್ಲಿ ಒದಗಿರುವ ಸಾಧು ಪರಿತ್ರಾಣ ದುಷ್ಕೃತ ವಿನಾಶರೂಪವಾದ ಇತಿಕರ್ತವ್ಯತೆಯಾದ ಯುದ್ಧವನ್ನು ಪರಿತ್ಯಾಗಮಾಡಬಹುದೆಂದು ತಿಳಿಯಲಿಲ್ಲವು. "**ನಷ್ಟೋಮೋಹಃಸ್ಮೃತಿರ್ಲಬ್ಧಾ**" (೧೮-೭೩) ಎಂದು ಮುಂದೆ ಹೇಳಿ ಗಾಂಡೀವವನ್ನು ಪುನಃ ಧರಿಸಿ ಉತ್ಸಾಹಯುಕ್ತನಾಗಿ ಯುದ್ಧಕ್ಕೆ ನಿಂತಿದುದರಿಂದ ವಿಹಿತಕರ್ಮಗಳ ತ್ಯಾಗವು ಸರ್ವಾತ್ಮನಾ ಕೂಡದೆಂಬ ವಿಷಯವನ್ನು ತನ್ನ ಪ್ರಾಜ್ಞತೆಯಿಂದ ಪ್ರದರ್ಶಿಸಿರುತ್ತಾನೆ. ಈ ಅರ್ಜುನನ ವೃತ್ತಿಯಿಂದ ಅದ್ವೈತಿಗಳೂ ಪ್ರಾಜ್ಞತೆಯನ್ನು ಹೊಂದಿ ವಿಹಿತಕರ್ಮಗಳ ಪರಿತ್ಯಾಗ ಸರ್ವಾತ್ಮನಾ ಕೂಡದೆಂಬುವುದನ್ನು ಗ್ರಹಿಸತಕ್ಕದಾಗಿರುತ್ತದೆ. ಹಾಗೆ ಗ್ರಹಿಸುವವನೇ ಜ್ಞಾನಿಯು.

ಉಪಾಸನವನ್ನು ಮಾಡಲು ಶಕ್ತಿಯುಳ್ಳವರಿಗೆಲ್ಲಾ ಕರ್ಮಯೋಗಾದಿ ಸಹಕೃತ ಭಕ್ತಿಯೋಗವೇ ಉಪಾಯವು; ಅಶಕ್ತರಿಗೂ ಅದರಲ್ಲೂ ಅಧಿಕಾರವಿಲ್ಲದ, ಸ್ತ್ರೀ ಶೂದ್ರ ಪಂಚಮರೇ ಮೊದಲಾದ

ಸರ್ವರಿಗೂ ಈ ಪ್ರಪದನವೇ ಉಪಾಯವೆಂದು ಹೇಳಿದಂತಾಯಿತು. ಆಗ ಸರ್ವಧರ್ಮಾನ್‌ಪರಿತ್ಯಜ ಎಂಬುದಕ್ಕೆ ಏನರ್ಥವೆಂದರೆ ಭಗವಂತನನ್ನು ಹೊಂದುವದಕ್ಕೆ ಉಪಾಯವಾಗಿ ಹೇಳಿರುವದನ್ನೆಲ್ಲಾ ತ್ಯಜಿಸಿ, ನನ್ನಲ್ಲಿ ಶರಣಾಗತಿಯನ್ನು ಅನುಷ್ಠಿಸು ಎಂಬರ್ಥವು. ಅಶಕ್ತರು ೧೫ ವಿಧವೆಂದು ಶ್ರೀ ದೇಶಿಕರವರು ಶ್ರೀ ಮದ್ರಹಸ್ಯತ್ರಯಾಸಾರದ ಅಧಿಕಾರ ವಿಭಾಗದಲ್ಲಿ ನಿರ್ಣಯಿಸಿರುತ್ತಾರೆ.

**ಸರ್ವಧರ್ಮಾನ್‌ಪರಿತ್ಯಜ್ಯ** ಎಂಬಲ್ಲಿ ಅನುಮತಿಯು ತೋರಿಬರುತ್ತದೆಂದೂ ಕೆಲವರು ಭಾವಿಸುವರು. ಇದು ಶಾಸ್ತ್ರವಿರುದ್ಧ ವಿಷಯವು **"ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಗ್ಂ ಸಮಾಃ" "ಅಹರಹಸ್ಸಂಧ್ಯಾ ಮುಪಾಸೀತ" "ಸಂಧ್ಯಾಹೀನೋಽಶುಚಿರ್ನಿತ್ಯ ಮನರ್ಹಸ್ಸರ್ವ ಕರ್ಮಸು"** ಇತ್ಯಾದಿ ಪ್ರಮಾಣಗಳಿಗೂ ಮತ್ತು ಸ್ಮೃತಿರತ್ನಾಕರದಲ್ಲಿ ಸಂಗ್ರಹಿಸಿರುವ ಶ್ರೀ ವ್ಯಾಸ ಮನು ಮೊದಲಾದ ಮಹರ್ಷಿಗಳ ಅನೇಕ ದಿವ್ಯಸೂಕ್ತಿಗಳಿಗೂ, ಹಿಂದೆ ಶ್ರೀ ಕೃಷ್ಣಭಗವಾನರವರೇ ಸಾಕ್ಷಾತ್ತಾಗಿ ಉಪದೇಶಿಸಿರುವ **"ಸ್ವೇಸ್ವೇಕರ್ಮಣ್ಯಭಿರತಃ"** ಎಂಬ ೧೮-೪೬ ಎಂಬುದಕ್ಕೂ, ಮತ್ತು **"ಸಾಪೇಕ್ಷತತ್ವಾದಶ್ವವತ್"** ಎಂಬ ಶಾರೀರಕ ಸೂತ್ರಕ್ಕೂ ವಿರೋಧವು. ಹೀಗೆ ಇತಿಕರ್ತವ್ಯತೆಗಳನ್ನೂ ನಿತ್ಯನೈಮಿತ್ತಿಕಗಳನ್ನೂ ಪರಿತ್ಯಾಗಮಾಡಲು ಸಾಧ್ಯವೇ ಇಲ್ಲವು. ಕ್ಷತ್ರಿಯನಿಗೆ ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳು ಇತಿ ಕರ್ತವ್ಯತೆಯಲ್ಲೇ ಸೇರಿದವಾಗಿ, ಅವುಗಳನ್ನು ತ್ಯಾಗ ಮಾಡಲು ಸಾಧ್ಯವೇ ಇಲ್ಲವು. ಅವುಗಳನ್ನು ಪರಿತ್ಯಾಗಮಾಡಿದರೆ **ಆಜ್ಞಾಛೇದಿ ಮಮ ದ್ರೋಹೀ** ಎಂಬಲ್ಲಿ ಹೇಳಿರುವ ಹಾಗೆ ಭಗವನ್ನಿಗ್ರಹಕ್ಕೆ ಗುರಿಯಾಗುವನು. ಇದನ್ನು ತಿಳಿದ ಮಹಾಪ್ರಾಜ್ಞನು ಅರ್ಜುನನಾದುದರಿಂದ ಈ ಲಘೂಪಾಯವನ್ನು ಉಪದೇಶಿಸಿದ ನಂತರವೇ **"ನಷ್ಟೋ ಮೋಹಃ ಸ್ಮೃತಿರ್ಲಬ್ಧಾ"** ಎಂದು ಹೇಳಿ ಗಾಂಡೀವವನ್ನು ತೆಗೆದುಕೊಂಡು ಯುದ್ಧಸನ್ನದ್ಧನಾಗಿರುತ್ತಾನೆ.

**ಭಾವಾರ್ಥವು**—ಹಿಂದಿನ ಶ್ಲೋಕದಲ್ಲಿ ವ್ಯಾಜರೂಪವಾದ ಸಾಧ್ಯೋಪಾಯವಾದ ಭಕ್ತಿಯೋಗವನ್ನು ಹೇಳಿದರು. ಆದರೆ ಅದು ಸಿದ್ಧೋಪಾಯನ ಅನುಗ್ರಹವಿಲ್ಲದೆ ಎಂದಿಗೂ ಸಿದ್ಧಿಸದು. ಆ ಭಗವದನುಗ್ರಹವನ್ನು ಸಂಪಾದಿಸುವ ಸುಲಭೋಪಾಯವು ಯಾವುದು ಎಂದರೆ? ತನ್ನಲ್ಲಿ ಮಾಡುವ ಶರಣಾಗತಿಯೇ ಎಂದು ತಮೇವ ಶರಣಂಗಚ್ಛ ಎಂಬಲ್ಲಿ ವಿಧಿಸಿ, ತನ್ಮೂಲಕ ಸರ್ವಾನಿಷ್ಟ ನಿವೃತ್ತಿಯೂ ಪರಮ ನಿಶ್ರೇಯಸ್ಸೂ ಲಭಿಸುತ್ತವೆಂದು ಹೇಳಲ್ಪಟ್ಟಿತು. ಹಿಂದೆ ಗುಹ್ಯತಮವಾದ ಉಪಾಯಾನುಷ್ಠಾನ ಕ್ರಮವು ವಿಸ್ತರಿಸಿ ಹೇಳಿದುದು ಸಙ್ಗ್ರಹಿಸಿ ಹೇಳಲ್ಪಟ್ಟಿತು. ಆದರೂ ಅರ್ಜುನನಿಗೆ ಹರ್ಷವಿರಬೇಕಾದ ಸಂದರ್ಭದಲ್ಲಿ ಅಪಾರ ಶೋಕದಿಂದಿದ್ದನು ; ಏಕೆಂದರೆ, ಉಪಾಯವೇನೋ ಉತ್ಕೃಷ್ಟವಾದುದೇ ; ಆದರೆ ಅದು ಕೈಗೂಡಬೇಕಾದರೆ ಪ್ರತಿಬಂಧಕರೂಪದಲ್ಲಿ ಅಕೃತ್ಯಕರಣ ಕೃತ್ಯಾಕರಣರೂಪಗಳಾದ ಲೆಖ್ಖವಿಲ್ಲದಷ್ಟು ಪಾಪಸಂಚಯಗಳಿವೆಯಲ್ಲಾ, ಇವುತೊಲಗುವ ಬಗೆ ಹೇಗೆ ಎಂದು ಶೋಕಿಸುತ್ತಿರುವವನನ್ನು ಸಮಾಧಾನ ಮಾಡಿ ಅದಕ್ಕೆ ಉಪಾಯವನ್ನು ಪರಮ ಕೃಪಯಾ ಪ್ರೇರಿತರಾಗಿ "**ವಿದಿತಸ್ಸಹಿಧರ್ಮಜ್ಞ ಶ್ಶರಣಾಗತವತ್ಸಲಃ**' ಎಂಬಬಿರುದನ್ನು ಪ್ರಕಟಿಸುವವರಾಗಿ, ಉಪದೇಶಿಸುತ್ತಾರೆ. ಈ ಶ್ಲೋಕಕ್ಕೆ ಶ್ರೀ ಯತಿವರ್ಯರು ಎರಡುವಿಧವಾಗಿ ಅರ್ಥವನ್ನು ದಯಪಾಲಿಸುತ್ತಾರೆ. ನಿಷ್ಕರ್ಷಾರ್ಥವು ತಿಳಿಯದೆ ವಿಕಲ್ಪಿಸಿ ಅರ್ಥ ಹೇಳಿದರೆಂದು ಭ್ರಮಿಸಕೂಡದು. ಆದಿ ಶ್ಲೋಕದಲ್ಲಿ ಹೇಗೆ ವಿಶೇಷಾರ್ಥಗಳು ಕೂಡಿರುತ್ತವೋ, ಹಾಗೆಯೇ ಲೀಲಾಸಾರಥಿಯು ನಿಗಮನದಲ್ಲಿ ಹೇಳುವ ಸೂಕ್ತಿಯಾದ ಚರಮ ಶ್ಲೋಕದಲ್ಲೂ ಅನೇಕಾರ್ಥಗಳು ಗರ್ಭಿತವಾಗಿವೆ. ಈ ಎರಡು ಅರ್ಥಗಳೂ ಮುಖ್ಯವಾದವೇ. ಅವುಗಳನ್ನು ಉಪದೇಶಿಸಿ ಹೇಳುತ್ತಾರೆ. ಹೀಗೆ ಶರಣಾಗತಿ ಮಾಡಿದ ಅಧಿಕಾರಿಗೆ ಇಲ್ಲಿ ಮಾಶುಚಃ ಎಂದು ಹೇಳಿದ ಹಾಗೆ ದುಃಖೋಪಶಮನವನ್ನು ಮಾಡಿದ ಸಂದರ್ಭವೇನಾದರೂ ಉಂಟೋ ಎಂದರೆ ಪರಮ ಸಾಧ್ವಿಯಾದ ದ್ರೌಪದಿಯು ದುಶ್ಶಾಸನನ ಮಾನ

ಭಾ. ಕರ್ಮಯೋಗ ಜ್ಞಾನಯೋಗ ಭಕ್ತಿಯೋಗರೂಪಾನ್ ಸರ್ವಧರ್ಮಾನ್ ಪರಮನಿಶ್ಶ್ರೇಯಸ ಸಾಧನ ಭೂತಾನ್ ಮದಾರಾಧನತ್ವೇನ ಅತಿಮಾತ್ರ ಪ್ರೀತ್ಯಾ ಯಥಾಧಿಕಾರಂ ಕುರ್ವಾಣ ಏವೋಕ್ತರೀತ್ಯಾ ಫಲಕರ್ಮಕರ್ತೃತ್ವಾದಿಪರಿತ್ಯಾಗೇನ ಪರಿತ್ಯಜ್ಯ ಮಾಮೇಕಮೇವ ಕರ್ತಾರಮಾರಾಧ್ಯಂ ಪ್ರಾಪ್ಯಮುಪಾಯಂ ಚಾನುಸಂಧತ್ಸ್ವ;

---

ಭಂಗಪ್ರಯುಕ್ತ ವೇಳೆಯಲ್ಲಿ ಶರಣಾಗತಿಯನ್ನು ಮಾಡಿ, ಶ್ರೀ ಕೃಷ್ಣನನ್ನು ಕಂಡಾಗ **"ಸಾಹಂ ಕೇಶಗ್ರಹಂ ಪ್ರಾಪ್ತಾ ಪರಿಕ್ಲಿಷ್ಟಾ ಸಭಾಂಗತಾ। ಪಶ್ಯತಾಂ ಪಾಂಡುಪುತ್ರಾಣಾಂ ತ್ವಯಿ ಜೀವತಿ ಕೇಶವ"** ಎಂದು ಹೇಳಿಕೊಂಡು ರೋದನಮಾಡಲು, ಅದಕ್ಕೆ ಶ್ರೀಕೃಷ್ಣನು ಸಮಾಧಾನಮಾಡಿ ಹೇಳುತ್ತಾನೆ. **"ಸತ್ಯಂ ತೇ ಪ್ರತಿಜಾನಾಮಿ ಕೃಷ್ಣೇ ಬಾಷ್ಪೋ ನಿಗೃಹ್ಯತಾಮ್। ಹತಾಮಿತ್ರಾನ್ ಶ್ರಿಯಾಯುಕ್ತಾನ್ ಅಚಿರಾದ್ರಕ್ಷ್ಯಸೇ ಪತೀನ್"** ಓ ದ್ರೌಪದಿಯೇ ಇಗೊ ನಿನ್ನಲ್ಲಿ ಪ್ರತಿಜ್ಞೆ ಮಾಡಿ ಹೇಳುವೆನು ; ಕಣ್ಣೀರನ್ನು ಒರೆಸಿಕೋ. ನಿನ್ನ ಪತಿಗಳ ಶತ್ರುಗಳನ್ನು ಕೊಂದು ಅವರಿಗೆ ಸರ್ವಶ್ರೇಯಸ್ಸನ್ನು ಉಂಟುಮಾಡುವೆನು ಎಂದು ಹೇಳಿರುವದರಿಂದ ಇವಕ್ಕಿಂತ ಬೇರೆ ನಿದರ್ಶನ ಬೇಕಿಲ್ಲವು.

(೧) **ಸರ್ವಧರ್ಮಾನ್ ಪರಿತ್ಯಜ್ಯ** ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ.—ಕರ **ಯೋಗ** ಜ್ಞಾನಯೋಗ ಭಕ್ತಿಯೋಗರೂಪಗಳಾದ ಸರ್ವಧರ್ಮಾನ್, ಸಮಸ್ತ ಧರ್ಮಗಳನ್ನೂ, ಅವು ಎಂತಹವೆಂದರೆ, **ಪರಮನಿಶ್ರೇಯಸ ಸಾಧನಭೂತಾನ್** - ಪರಮಪುರುಷಾರ್ಥವಾದ ಭಗವತ್ಪ್ರಾಪ್ತಿಗೆ **ಸಾಧನಗಳಾದವು**, ಇದರಿಂದ ಅವುಗಳು ತ್ಯಜಿಸತಕ್ಕದ್ದಲ್ಲವೆಂಬ ಭಾವವು ಸೂಚಿತವು ; ಹಾಗೆ ಬಿಡತಕ್ಕವುಗಳಾದರೆ ಶ್ರೀ ಕೃಷ್ಣಭಗವಾನರವರಿಗೆ ೧೮ ಅಧ್ಯಾಯಗಳಿಂದಲೂ ಹೇಳಬೇಕಾದ ಕ್ಲೇಶವೆಲ್ಲಿಯದು ? ಆದುದರಿಂದ ಪರಮನಿಶ್ಶ್ರೇಯಸ ಸಾಧನ ಭೂತವಾದವು, ಇವುಗಳನ್ನು **ಮದಾರಾಧನತ್ವೇನ**-ನನ್ನ ಆರಾಧನಾರೂಪವೆಂಬ ಭಾವದಿಂದ, **ಅತಿಮಾತ್ರಪ್ರೀತ್ಯಾ** ನಿರತಿಶಯ ಪ್ರೀತಿಯಿಂದ, **ಯಥಾಧಿಕಾರಂ ಕುರ್ವಾಣಃ** - ವರ್ಣಾಶ್ರಮರೀತ್ಯಾ ಆ ಮೂರನ್ನೂ ಕ್ರಮವಾಗಿ ಅನುಷ್ಠಿಸುತ್ತಾ ಈಗ ಅರ್ಜುನನ ಮಾತ್ರದಲ್ಲೇ ಅವನ್ನು ಅನುಷ್ಠಿಸುವವನಾಗಿ, ಹಿಂದೆ **ಯಥೇಚ್ಛಸಿತಥಾಕುರು** ಎಂದು ಹೇಳಿದುದನ್ನು ಜ್ಞಾಪಕಕ್ಕೆ ತಂದುಕೊಂಡು ಮೂಲದಲ್ಲಿಲ್ಲದಿದ್ದರೂ ಯಥಾಧಿಕಾರಂ ಎಂಬ ಪ್ರಯೋಗವು, **ಫಲಕರ್ಮಕರ್ತೃತ್ವಾದಿಪರಿತ್ಯಾಗೇನ ಪರಿತ್ಯಜ್ಯ** - ಅವುಗಳ ಫಲ, ಅವರಲ್ಲಿ ಮಮತೆ **ಕರ್ತೃತ್ವ** ಮೊದಲಾದವುಗಳನ್ನು **ಪರಿತ್ಯಾಗ** ಮಾಡಿ, ಇಲ್ಲಿ ಆದಿಪದದಿಂದ ಬ್ರಹ್ಮರುದ್ರೇಂದ್ರಾದಿ ಜೀವಕೋಟಿಗೆ ಸೇರಿದ **ಅನ್ಯದೇವತಾ** ಧರ್ಮಗಳಲ್ಲಿ ಪರಿತ್ಯಾಗವು ಸೂಚಿತವು. ಇದರಿಂದ ಅವುಗಳಲ್ಲಿ **ಫಲಕರ್ತೃತ್ವ ಮಮತೆಗಳ** ತ್ಯಾಗವೇ ಶಾಸ್ತ್ರೀಯ ತ್ಯಾಗನೇ ವಿನ ಆ ಕರ್ಮಗಳನ್ನೆಲ್ಲಾ ಸಂಪೂರ್ಣವಾಗಿ **ಬಿಟ್ಟು** ಬಿಟ್ಟು ಎಂದು **ಇತರರು** ಮಾಡಿರುವ ಅರ್ಥವು ಸರಿಯಲ್ಲವು ಎಂದು **ಹೇಳಿದಂತಾಯಿತು ; ಹೀಗೆ** ಹೇಳಿದ ಕರ್ಮಯೋಗಾದಿ ಸಮಸ್ತಕರ್ಮಗಳಲ್ಲೂ ಫಲಕರ್ತೃತ್ವ **ಮಮತೆಗಳನ್ನೂ ತ್ಯಾಗ**ಮಾಡಿ, **ಮಾಮೇಕಮೇವ** - ಇನ್ನು ಯಾರಿಗೂ ನಿನ್ನನ್ನು ರಕ್ಷಿಸುವ **ಯೋಗ್ಯತೆ ಇಲ್ಲದುದರಿಂದ** ಲಕ್ಷ್ಮೀ ವಿಶಿಷ್ಟನಾದ ನನ್ನೊಬ್ಬನನ್ನೇ, **ಕರ್ತಾರಮಾರಾಧ್ಯಂ ಪ್ರಾಪ್ಯಮುಪಾಯಂಚ ಅನುಸಂಧತ್ಸ್ವ** ಇದು **ಶರಣಂವ್ರಜ** ಎಂಬುದರ ತಾತ್ಪರ್ಯವು, ಆ ಅನುಷ್ಠಾನಗಳನ್ನೆಲ್ಲಾ **ಮಾಡಿ**ಸುವವನೂ ಅವುಗಳಿಂದ ಆರಾಧಿಸಲ್ಪಡುವವನೂ ಪ್ರಾಪ್ಯನೂ, ಅದಕ್ಕೆ **ಉಪಾಯನೂ** ಸಹ ನಾನೇ ಎಂಬದಾಗಿ ಅನುಸಂಧಾನಮಾಡು ಇಂತಹ **ಭಾವನೆ**ಯಿಂದ **ನನ್ನನ್ನು** ಆಶ್ರಯಿಸಿ, ನನ್ನಲ್ಲಿ ಶರಣಾಗತಿಯನ್ನು ಮಾಡು ಎಂಬ ಭಾವವು. **ಶರಣಂವ್ರಜ ಎಂಬಲ್ಲಿ ಶರಣ**

**ಏಷ ಏವ ಸರ್ವಧರ್ಮಾಣಾಂ ಶಾಸ್ತ್ರೀಯ ಪರಿತ್ಯಾಗ ಇತಿ** (೧) **"ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತ ಸತ್ತಮ । ತ್ಯಾಗೋಹಿ ಪುರುಷವ್ಯಾಘ್ರ ತ್ರಿವಿಧ ಸ್ಸಂಪ್ರಕೀರ್ತಿತಃ" ಇತ್ಯಾರಭ್ಯ** (೨) **"ಸಙ್ಗಂತ್ಯಕ್ತ್ವಾ ಫಲಂಚೈವ ಸತ್ಯಾಗ ಸ್ಸಾತ್ವಿಕೋಮತಃ। ನಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯ ಶೇಷತಃ। ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀ ತ್ಯಭಿಧೀಯತೇ" ಇತ್ಯಧ್ಯಾಯಾದೌ ಸುದೃಢ ಮುಪಪಾದಿತಮ್. ಅಹಂ**

---

ಶಬ್ದಕ್ಕೆ ಉಪಾಯವೆಂಬರ್ಥವಾದುದರಿಂದ ಈ ಮೇಲೆ ಹೇಳಿದ ಎಲ್ಲಕ್ಕೂ ನನ್ನನ್ನು ಸಿದ್ಧೋಪಾಯನೆಂದು ಭಾವಿಸು ಎಂಬ ತಾತ್ಪರ್ಯವು. ಈತನು ಮಾಡುವ ಅನುಷ್ಠಾನವನ್ನು ವ್ಯಾಜೀಕರಿಸಿ, ಅದರಿಂದ ಪ್ರೀತನಾಗಿ ಪುರುಷಾರ್ಥವನ್ನು ಕೊಡುವಂತವನು ನಾನು ಎಂಬ ಭಾವವು. **ಶರಣ** ಮತ್ತು **ಉಪಾಯ** ಶಬ್ದಗಳಿಂದ ತೋರಿಬರುವ ಅರ್ಥವು ಹೀಗೆ ಉಪಾಯನಾಗಬೇಕಾದರೆ ಶ್ರೀ ಕೃಷ್ಣ ಭಗವಾನ್ ಪರಮ ಕಾರುಣಿಕನೆಂಬ ಭಾವವು. ಈ ಗುಣವಿಲ್ಲದಿದ್ದರೆ ಈಗ **ಲೀಲಾ** ಸಾರಥಿಯಾಗಿ ಸಿದ್ಧೋಪಾಯನಾಗಿ ರಕ್ಷಕನಾಗಿ ಬರಲಾರನು. ಸಂಹಿತೆಯು "**ಉಪಾಯೇ ಗೃಹರಕ್ಷಿತ್ರೋಃ ಶಬ್ದ ಶ್ಶರಣ ಮಿತ್ಯಯಂ । ವರ್ತತೇ ಸಾಂಪ್ರತಂ ಶ್ಚೈಷ ಉಪಾಯಾರ್ಥೈಕವಾಚಕಃ**" ಎಂದು ಹೇಳಿರುವದರಿಂದ **ಶರಣಂವ್ರಜ** ಎಂದರೆ ಉಪಾಯವನ್ನಾಗಿ ಆಶ್ರಯಿಸು ಎಂಬರ್ಥವು, ಭರತಮುನಿವಾಕ್ಯದಲ್ಲೂ "**ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸಪೂರ್ವಕಮ್ । ತದೇಕೋಪಾಯತಾ ಯಾಚ್ಞಾ ಪ್ರಪತ್ತಿ ಶ್ಶರಣಾಗತಿಃ**" ತನಗೆ ಬೇಕಾದ ದಿವ್ಯ ವೈಕುಂಠ ಪ್ರಾಪ್ತಿಯು ಇತರ ಅನ್ಯದೇವತೆಗಳು ಯಾರಿಂದಲೂ ಸಾಧ್ಯವಿಲ್ಲದುದರಿಂದ ಆಕಿಂಚನ್ಯ ಮಹಾವಿಶ್ವಾಸ **ಪೂರ್ವ**ಕವಾಗಿ ಭಗವಂತನನ್ನು ನೀನೇ ಉಪಾಯವಾಗಿದ್ದುಕೊಂಡು ಸಾಧಿಸಿಕೊಡಬೇಕೆಂಬ ಪ್ರಾರ್ಥನೆಯೇ ಪ್ರಪತ್ತಿಯೆಂದೂ, ಶರಣಾಗತಿ ಎಂದೂ ಹೇಳಲ್ಪಡುತ್ತದೆ. ಇದರಿಂದ **ಮಾಮೇಕಂ** ಎಂಬಲ್ಲಿನ ಏಕಶಬ್ದಾರ್ಥವು ನನ್ನಲ್ಲದೆ ಇನ್ನು ಯಾವದೇವತೆಗಳಿಂದಲೂ ಸಾಧ್ಯವಲ್ಲದುದರಿಂದ ನನ್ನೊಬ್ಬನನ್ನೇ ಎಂಬರ್ಥವು ವ್ಯಕ್ತವು. ಅಥವಾ ಏಕಂ - ಇತರ ಯಾರ ಸಹಾಯವು ಬೇಕಿಲ್ಲದೇ ನನ್ನೊಬ್ಬನನ್ನೇ ಎಂಬರ್ಥವಾಗಲಿ ಆಗಬಹುದು. ಹೀಗೆ ಅನ್ಯನಿರಪೇಕ್ಷವಾಗಿ ಎಂಬರ್ಥವಾಗುವದರಿಂದಲೇ **ಪರಮಕಾರುಣಿಕಂ** ಎಂಬ ಪ್ರಯೋಗವು. ಆದರೆ **ಸರ್ವಧರ್ಮಾ ಪರಿತ್ಯಜ್ಯ** ಎಂಬುದಕ್ಕೆ ಸಾಮಾನ್ಯವಾಗಿ ಇತರರು ಮಾಡುವ ಸಮಸ್ತ ಧರ್ಮಗಳನ್ನು ಪರಿತ್ಯಾಗಮಾಡಿ ಎಂಬರ್ಥವೇ ತೋರುವಾಗ ಫಲಕರ್ತೃತ್ವ ಪರಿಮಾತ್ರತ್ಯಾಗವೆಂದೂ, ಅವುಗಳ ಅನುಷ್ಠಾನವು ಎಂದಿಗೂ ಬಿಡತಕ್ಕದ್ದಲ್ಲವೆಂದೂ, ಅವು ಮೋಕ್ಷಕ್ಕೆ ಸಾಧಕವೆಂದೂ ಅರ್ಥಮಾಡಿದರೆ, ಅದು ಹೇಗೆ? ಎಂಬ ಆಕ್ಷೇಪ ಬಂದೀತೆಂದು ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ- ಇಲ್ಲಿ ಪರಿತ್ಯಜ್ಯ ಎಂಬುದಕ್ಕೆ ಸಾಮಾನ್ಯವಾಗಿ ತೋರುವ ಅರ್ಥವು; ಶಾಸ್ತ್ರೀಯ ತ್ಯಾಗವಾದ ವಿಶೇಷಾರ್ಥವುಳ್ಳದೆಂದು ಹೇಳುತ್ತಾರೆ—**ಏಷಏವ** ಈಗ ನಾವು ಹೇಳಿದ ಸಾತ್ವಿಕತ್ಯಾಗವೇ, **ಸರ್ವಧರ್ಮಾಣಾಂಶಾಸ್ತ್ರೀಯ ಪರಿತ್ಯಾಗಃ**-ಸಕಲ ಶಾಸ್ತ್ರವಿಹಿತಕರ್ಮಗಳ, ಶಾಸ್ತ್ರೀಯವಾದ ಪರಿತ್ಯಾಗವು, **ಇತಿ** - ಎಂಬದಾಗಿ, ಮುಂದೆ ಉದಾಹರಿಸುವ ಪ್ರಮಾಣಗಳಿಂದ ಈ ಅಭಿಪ್ರಾಯವೇ ಎಂಬುದಾಗಿ, **ಅಧ್ಯಾಯಾದೌ** - ಈ ೧೮ನೆಯ ಅಧ್ಯಾಯಾರಂಭದಲ್ಲಿ, **ಸುದೃಢ ಮುಪಪಾದಿತಮ್**-ಸುಸ್ಪಷ್ಟವಾಗಿ ಉಪಪಾದಿಸಲ್ಪಟ್ಟಿರುತ್ತದೆ. ಆ ಪ್ರಮಾಣಗಳು ಯಾವುವೆಂದರೆ - "**ನಿಶ್ಚಯಂ ಶೃಣುಮೇ" ಇತ್ಯಾದಿ.** ಈ ಶ್ಲೋಕಾರ್ಥವು ಹಿಂದೆಯೇ ಉಪಪಾದಿಸಲ್ಪಟ್ಟಿರುತ್ತದೆ. **ತ್ಯಾಗಶಬ್ದಕ್ಕೆ ಸರಿಯಾದ** ಅಭಿಪ್ರಾಯವನ್ನು ಕೇಳು, ಅದು ಮೂರು ತ್ಯಾಗದಿಂದ ಕೂಡಿದುದು

---

(೧) ಗೀ. ೧೮-೪. (೨) ಗೀ. ೧೮-೧೧

**ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ - ಏವಂ ವರ್ತಮಾನಂ ತ್ವಾಂ ಮತ್ಪ್ರಾಪ್ತಿ ವಿರೋಧಿಭ್ಯೋಽನಾದಿಕಾಲ ಸಂಚಿತಾನಂತಾಕೃತ್ಯಕರಣ ಕೃತ್ಯಾಕರಣರೂಪೇಭ್ಯ ಸ್ಸರ್ವೇಭ್ಯಃ ಪಾಪೇಭ್ಯ ಮೋಕ್ಷಯಿಷ್ಯಾಮಿ; ಮಾಶುಚಃ - ಶೋಕಂ ಮಾಕೃಥಾಃ;**

ಇತ್ಯಾರಭ್ಯ ಎಂದು ಆರಂಭಿಸಿ ಹೇಳಿ (೨) "ಸಙ್ಗಂ ತ್ಯಕ್ತ್ವಾ **ಫಲಂಚೈವ ಸ ತ್ಯಾಗ ಸ್ಸಾತ್ವಿಕೋ ಮತಃ। ನಹಿದೇಹಭೃತಾ ಶಕ್ಯಂ ತ್ಯಕ್ತುಂ** ಕರ್ಮಾಣ್ಯಶೇಷತಃ।ಯಸ್ತು ಕರ್ಮ**ಫಲತ್ಯಾಗೀ ಸತ್ಯಾಗೀತ್ಯಭಿಧೀಯತೇ**"(ಗೀ. ೧೮-೧೧)ಕರ್ಮದಲ್ಲಿ ನನಗೆ ಕರ್ತೃತ್ವ ಉಂಟೆಂಬ ಸಂಬಂಧವನ್ನೂ ಬಿಟ್ಟು ಅನುಷ್ಠಿಸುವದೇ ಸಾತ್ವಿಕ ತ್ಯಾಗವೆಂದು ಹೇಳಲ್ಪಡುತ್ತದೆ. ಕ್ಷೇತ್ರಜ್ಞನಿಗೆ ವಿಹಿತಕರ್ಮಗಳ ಸಂಪೂರ್ಣ ಪರಿತ್ಯಾಗವು ಸರ್ವಾತ್ಮನಾ ಸಾಧ್ಯವಿಲ್ಲವು, ಏಕೆಂದರೆ ಭಗವನ್ನಿಗ್ರಹಕ್ಕೆ ಪಾತ್ರನಾಗುವದರಿಂದ. ಯಾವನು ಹೀಗೆ ಕರ್ಮದಲ್ಲಿ ಮಮತೆಯನ್ನೂ ಕರ್ತೃತ್ವ ಫಲವನ್ನೂ ತ್ಯಾಗ ಮಾಡಿ ಕರ್ಮಾನುಷ್ಠಾನವನ್ನು ಮಾಡುವನೋ ಆತನು ತ್ಯಾಗೀ ಎಂದು ಹೇಳಿಸಿಕೊಳ್ಳುವನು. **ಇತ್ಯಧ್ಯಾಯಾದೌ** - ಎಂಬದಾಗಿ ಇದೇ ಅಧ್ಯಾಯಾರಂಭದಲ್ಲಿ, **ಸುದೃಢಮುಪಪಾದಿತಂ** - ಬಹು ಸ್ಪಷ್ಟವಾಗಿ ಸಿದ್ಧಾಂತಿಸಿ ಹೇಳಲ್ಪಟ್ಟಿತು; ತ್ಯಾಗಕ್ಕೆ ಈ ಅರ್ಥವೇ ವಿನಾ, ಕರ್ಮಗಳನ್ನೆಲ್ಲಾ ಸಂಪೂರ್ಣವಾಗಿ ಬಿಟ್ಟುಬಿಡಬಹುದೆಂಬ ಅರ್ಥವು ಸರ್ವಾತ್ಮನಾ ಕೂಡುವುದಿಲ್ಲವೆಂಬ ಭಾವವನ್ನು ತಿಳಿಸುವದಕ್ಕಾಗಿ ಸುದೃಢಮುಪಪಾದಿತಂ ಎಂಬ ಪ್ರಯೋಗವು. ಕಷ್ಟಪಟ್ಟು ೧೮ ಅಧ್ಯಾಯಗಳಿಂದಲೂ ವಿಸ್ತಾರವಾಗಿಯೂ ಪುನಃ ಸಂಗ್ರಹವಾಗಿಯೂ ಉಪದೇಶಿಸಲ್ಪಟ್ಟದುದನ್ನೆಲ್ಲಾ ನಿರಾಕರಿಸಿ, ಅವುಗಳು ಬೇಡ. ಬಿಟ್ಟು ಬಿಡು ಎಂದು, ಎಂದಿಗಾದರೂ ತಮ್ಮ ಪೂರ್ವೋಪದೇಶಕ್ಕೆ ವಿರುದ್ಧವಾಗಿ ಉಪದೇಶಿಸುತ್ತಾರೆಯೇ? ಆದುದರಿಂದ ಆ ಅರ್ಥವು ಎಂದಿಗೂ ಕೂಡುವದಿಲ್ಲವೆಂದೂ ತಾವು ಹೇಳಿರುವುದೇ ಸಮಂಜಸಾರ್ಥವೆಂದೂ ತಿಳಿಸುವದಕ್ಕಾಗಿ **ದೃಢಮುಪಪಾದಿತಂ** ಎಂದು ಹೇಳಿರುತ್ತಾರೆ.

ಮುಂದೆ ಉತ್ತರಾರ್ಧಕ್ಕೆ ಭಾಷ್ಯವನ್ನು ಬರೆಯುತ್ತಾರೆ—" **ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ**" ಇದರ ತಾತ್ಪರ್ಯವೇನೆಂದರೆ? **ಏವಂ ವರ್ತಮಾನಂ ತ್ವಾಂ** ಮೂಲದಲ್ಲಿ **ತ್ವಾ** ಎಂದಿರುವದರಿಂದ ತೋರಿಬರುವ ಅಭಿಪ್ರಾಯವನ್ನು **ಏವಂ ವರ್ತಮಾನಂ ತ್ವಾಂ** ಎಂದು ವಿವರಿಸಿರುತ್ತಾರೆ, ಹೀಗೆ ನಾನು ಉಪದೇಶಿಸಿರುವ ಫಲಕರ್ತೃತ್ವ ಮಮತೆಗಳನ್ನು ತ್ಯಾಗಮಾಡಿ, ಉಪಾಯಾನುಷ್ಠಾನವನ್ನು ಮಾಡಿ. ಅವೆಲ್ಲವೂ ನನ್ನ ಆರಾಧನೆಯೆಂದು **ಭಾವಿಸಿ**, ನನ್ನಲ್ಲಿ ಸಮರ್ಪಿಸಿ ನಿಂತಿರುವ ನಿನ್ನನ್ನು, **ಮತ್ಪ್ರಾಪ್ತಿವಿರೋಧಿಭ್ಯಃ** - ನನ್ನ ಪ್ರಾಪ್ತಿಗೆ ಪ್ರತಿಬಂಧಕಗಳಾದ **ಅನಾದಿಕಾಲ ಸಂಚಿತಾನಂತಾಕೃತ್ಯ ಕರಣ ಕೃತ್ಯಾಕರಣ ರೂಪೇಭ್ಯಃ** – ಅನಾದಿಕಾಲದಿಂದಲೂ ಸಂಚಿತಗಳಾದ ಲೆಖ್ಖಮಾಡಲು ಸಾಧ್ಯವಿಲ್ಲದ, ಮಾಡಬಾರದುದನ್ನೂ ಮಾಡಿ, **ಮಾಡಬೇಕಾದುದನ್ನು ಬಿಟ್ಟ, ಸರ್ವೇಭ್ಯಃ ಪಾಪೇಭ್ಯಃ** - ಸಮಸ್ತಪಾಪಗಳಿಂದಲೂ, **ಮೋಕ್ಷಯಿಷ್ಯಾಮಿ** - **ಬಿಡಿಸುವೆನು; ಮಾಶುಚಃ** ಎಂದರೆ **ಶೋಕಂ ಮಾಕೃಥಾಃ** - ಶೋಕವನ್ನು ಮಾಡಬೇಡ, ನೀನು ಶೋಕಿಸುವ ಕೆಲಸ ವಿಲ್ಲವೆಂಬ ಭಾವವು. **ಸರ್ವಪಾಪೇಭ್ಯಃ** ಎಂಬಲ್ಲಿರುವ ಸರ್ವಶಬ್ದದ ವ್ಯಾಖ್ಯಾನವಾಗಿ **ಮತ್ಪ್ರಾಪ್ತಿವಿರೋಧಿಭ್ಯಃ ಅನಾದಿಕಾಲ ಸಂಚಿತಾನನ್ತ ಪಾಪೇಭ್ಯಃ** ಎಂದು ಹೇಳಿರುತ್ತಾರೆ ಪಾಪಗಳು ಎರಡು ವಿಧವು - (೧) ಶಾಸ್ತ್ರದಲ್ಲಿ ಮಾಡಬೇಡವೆಂದು ನಿಷೇಧಿಸುವದನ್ನು ಮಾಡುವದು; ಮತ್ತು (೨) ಶಾಸ್ತ್ರದಲ್ಲಿ ಮಾಡಬೇಕೆಂದು ವಿಧಿಸಿರುವದನ್ನು ಬಿಡುವದು; ಇಂತಹ ಪಾಪಗಳು ಅನಾದಿಕಾಲದಿಂದಲೂ ಮಾಡಲ್ಪಟ್ಟು ಲೆಖ್ಖವಿಲ್ಲದ ಹಾಗೆ ಅನಂತಗಳಾಗಿವೆ. ಇವುಗಳೆಲ್ಲಾ ತೊಲಗುವ ಬಗೆ ಹೇಗೆ ಎನ್ನುತ್ತೀಯೋ, ನಾನು ಹಿಂದೆ ನಿನಗೆ ಉಪದೇಶಿಸಿದ ರೀತಿಯಲ್ಲಿ ಕರ್ಮಯೋಗಾದಿ ಪರಂಪರಾರೂಪವಾದ ಉಪಾಯವನ್ನು ಫಲಕರ್ಮಕರ್ತೃತ್ವತ್ಯಾಗ

ಪೂರ್ವಕ ಅನುಷ್ಠಿಸಿ, ಸರ್ವಪಾಪಗಳ ನಿವಾರಣಕ್ಕಾಗಿ ನನ್ನಲ್ಲಿ ಶರಣಾಗತನಾದರೆ ಸರ್ವ ಪಾಪಗಳೂ ತೊಲಗುತ್ತವೆ ; ನೀನು ಇದಕ್ಕಾಗಿ ಶೋಕಿಸುವ ಕೆಲಸವಿಲ್ಲವೆಂದು ಕೃಪಾಮಹೋದಧಿಯು ಸಮಾಧಾನವನ್ನು ಮಾಡಿದರು ಎಂಬದು ತಾತ್ಪರ್ಯವು. ಹಿಂದೆಯೇ ಮಾವ್ಯೈವೈಷ್ಯಸಿ ಎಂದು ಭರವನ್ನಿತ್ತರು. ಆದರೂ ಅರ್ಜುನನು ತನ್ನ ಪಾಪಸಮೂಹವು ಅನಂತವು, ಅವು ಕಳಿಯುವ ಬಗೆ ಹೇಗೆ ಎಂದು, ಅಧೈರ್ಯದಿಂದ ಶೋಕಿಸಿದನು, ತಮ್ಮಲ್ಲಿ ಶರಣಾಗತನಾದರೆ ಪ್ರತಿಬಂಧಕ ಸರ್ವಪಾಪಗಳೂ ತೊಲಗುತ್ತವೆ ಎಂದು ಹೇಳಿದರು. ಇಷ್ಟು ಮಾತ್ರವೇ ಹೇಳಿದರೇ ವಿನಾ, ಹಿಂದಿನ ಶ್ಲೋಕದಲ್ಲಿ ಹೇಳಿದ್ದರೂ ಮೋಕ್ಷಪ್ರಾಪ್ತಿಯುಂಟು ಎಂದು ಏಕೆ ಹೇಳಲಿಲ್ಲವೆಂದು ಕೇಳಿದರೆ, ಅನಿಷ್ಟ ನಿವೃತ್ತಿ ಯಾವಾಗ ಆಯಿತೋ, ಆಗ ಅರ್ಚಿರಾದಿಗತಿಯುಂಟಾಗಿ ಹೇಯ ಶರೀರವು ತೊಲಗಿ ಸ್ವಸ್ವರೂಪಾವಿರ್ಭಾವವೂ ಉಂಟಾಗುತ್ತದೆಂದು ಹಿಂದೆಯೇ ಹೇಳುವದರಿಂದ ಇಲ್ಲಿ ಪುನಃ ಹೇಳಲಿಲ್ಲವು. ಈ ಸಂದರ್ಭದಲ್ಲಿ ಅದ್ವೈತ ಸಿದ್ಧಾಂತಿಗಳು "ಮಾಮೇಕಂಸರ್ವಾತ್ಮಾನಂ ಸಮಂಸರ್ವ ಭೂತಸ್ಥಂ ಈಶ್ವರಂ ಅಹಮೇವೇತ್ಯೇವ ಮೇಕಂ ಶರಣಂವ್ರಜ, ನಮತ್ತೋಽನ್ಯದಸ್ತೀತ್ಯವಧಾರಯ" ಎಂದು ಅರ್ಥಮಾಡಲು ಶ್ಲೋಕದ ಯಾವ ಪದಗಳ ಶಕ್ಯಾರ್ಥದಿಂದಾಗಲಿ, ಅರ್ಥವಾಗಿಯಾಗಲಿ, ಸಾಧ್ಯವಿಲ್ಲವು. ಹಿಂದೆ ಹೇಳಿರುವದು "ಮತ್ತಃ ಪರತರಂ ನಾಸ್ತಿ ಕಿಂಚಿದಸ್ತಿ ಧನಂಜಯ" (ಗೀ. ೭-೭) ಎಂಬುದರಿಂದಲೇ "ಮತ್ತಃ ಅಸ್ತಿ, ಕಿನ್ತು ಪರತರಂ ನಾಸ್ತಿ" ಎಂಬರ್ಥವು ವ್ಯಕ್ತವು. ಅದೂ ಅಲ್ಲದೆ ಪ್ರಕೃತಿಂ ಪುರುಷಂಚೈವ ವಿದ್ಧ್ಯನಾದೀ ಉಭಾವಪಿ" ಎಂದೂ, "ಭೂಮಿರಾಪೋನಲೋವಾಯುಃ ಖಂ ಮನೋ ಬುದ್ಧಿ ರೇವಚ । ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ।ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ।ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್" (ಗೀ. ೭ ೭.೫) ಎಂದೂ, ಮತ್ತು ಶ್ರುತಿಯಲ್ಲೂ ಅನೇಕಕಡೆಗಳಲ್ಲಿ "ಕ್ಷರಂ ಪ್ರಧಾನಂ ಅಮೃತಾಕ್ಷರಂ ಹರಃ. ಕ್ಷರಾತ್ಮಾನೌ ಈಶತೇ ದೇವ ಏಕಃ" (ಶ್ವೇ. ೧.೧೦) ಎಂದೂ "ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ" (ಶ್ವೇ.೧-೧೨) ಎಂದೂ ಮೂರು ತತ್ವಗಳಿವೆ ಎಂಬುದು ವ್ಯಕ್ತವಾಗಿ ಅನಾದಿಯಾಗಿ ನಿತ್ಯವಾಗಿವೆ ಎಂದು ಹೇಳಲ್ಪಟ್ಟಿರುವಾಗ "ನಮತ್ತೋಽನ್ಯದಸ್ತೀತಿ" ಎಂಬ ವ್ಯಾಖ್ಯಾನವು ಶಾಸ್ತ್ರಪಙ್ಕ್ತಿಗೆ ವಿರುದ್ಧವು. ಇಲ್ಲಿ "ಅಹಂ ತ್ವಾಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂದಿರುವದರಿಂಧ, ಸರ್ವಶಕ್ತನಾದ ಪರಮಕಾರುಣಿಕನಾದ, ಅನಾಲೋಚಿತಾಶೇಷಲೋಕಶರಣ್ಯನಾದ ರಕ್ಷಕನಾದ, ಪರಮಶೇಷಿಯಾದ ಪ್ರಾಪ್ಯನಾದ ಲಕ್ಷ್ಮೀಪತಿಯೇ ಬೇರೆ ; ಅಶಕ್ತನಾದ, ದೀನನಾದ, ಪರತಂತ್ರನಾದ ರಕ್ಷ್ಯವಸ್ತುವಾದ ಶೇಷನಾದ ಪ್ರಾಪ್ತಾವಾದ ಜೀವಾತ್ಮನೇ ಬೇರೆ ಎಂದೂ, ಶ್ರೀ ರಾಮಚಂದ್ರ ಪ್ರಭುವೇ ಬೇರೆ, ಶರಣಾಗತನಾಗಿ ರಾಕ್ಷಸನಾದ ವಿಭೀಷಣನೇ ಬೇರೆ ಎಂದೂ ಘಂಟಾಘೋಷದಿಂದ ಸರ್ವಜ್ಞರಾದ ಮಹರ್ಷಿಗಳ ವಾಕ್ಯ ಇರುವಾಗ ಗೀತೆಯಲ್ಲೂ ಭೇಧವೇ ವ್ಯಕ್ತವೇ ವಿನಾ ಅಭೇಧವು ಎಲ್ಲಿಯೂ ಇಲ್ಲವು. ಉತ್ತಮಃಪುರುಷಸ್ತ್ವನ್ಯಃ (ಗೀ. ೧೫-೧೭) ಎಂಬ ಪ್ರಮಾಣಕ್ಕಿಂತ ವ್ಯಕ್ತವಾದುದು ಇನ್ನು ಬೇರೆ ಬೇಕೆ. ?

ಸರ್ವಧರ್ಮಾನ್ ಪರಿತ್ಯಜ್ಯ ಎಂಬಲ್ಲಿಯೂ ಕೂಡ ಸರ್ವಕರ್ಮಗಳ ಎಂದರೆ ನಿತ್ಯನೈಮಿತ್ತಿಕಗಳ ಸ್ವರೂಪತಃ ಪರಿತ್ಯಾಗವು ಕೂಡ ಭಕ್ತಿಯೋಗನಿಷ್ಠನಿಗೆ ಉಪದೇಶಿಸಲ್ಪಟ್ಟಿರತ್ತದೆಂದು ಹೇಳುವರು. ಇದಕ್ಕೆ ಅವರಕಾರಣವೇನೆಂಗರೆ ಜ್ಞಾನಾನ್ಮೋಕ್ಷಃ ಎಂಬುದೇ ಅವರಿಗೆ ಹೇತುವು ಜ್ಞಾನಾನ್ಮೋಕ್ಷಃ ಎಂಬುದನ್ನು ನಾವೂ ಒಪ್ಪುವೆವು. ಆದರೆ ಆ ಜ್ಞಾನವು ಯದ್ರೂಪವೆಂದು ವಿಮರ್ಶಿಸತಕ್ಕದ್ದಾಗಿರುತ್ತದೆ. ಈ ಸಂದರ್ಭದಲ್ಲಿ ಶ್ರೀ ಯತಿವರ್ಯರು ಅದು ವೇದನ, ಉಪಾಸನ ಶಬ್ದಗಳಿಂದ ಬೋಧಿತವಾದ ಸ್ಮೃತಿಸಂತಾನರೂಪವಾಗಿ ಮನಸ್ಸಿನ ಏಕಾನ್ತ್ಯರೂಪ ವ್ಯಾಪಾರ

ವಾದುದರಿಂದ ಕರ್ಮಾಂಗಕಜ್ಞಾನವು. ಅದೂ ಅಲ್ಲದೆ ಈ ಅಧ್ಯಾಯದಲ್ಲೇ "ನಿಯತಸ್ಯತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ । ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ" (೧೮.೭) ಎಂಬಲ್ಲಿ ನಿಂದಿಸಲ್ಪಟ್ಟಿರುತ್ತದೆ. ತ್ಯಾಗ ಶಬ್ದವೇನೆಂಬುದು "ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ" (೧೮-೨) ಎಂದು ಉಪಪಾದಿಸಲ್ಪಟ್ಟಿರುತ್ತದೆ. "ಏತಾನ್ಯಪಿತು ಕರ್ಮಾಣಿ ಸಂಗಂತ್ಯಕ್ತ್ವಾ ಫಲಾನಿಚ। ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತ ಮುತ್ತಮಮ್" (೧೮.೧೮) ಎಂಬುದೇ ತಮ್ಮ ಸಿದ್ಧಾಂತವೆಂದು ಶ್ರೀ ಕೃಷ್ಣ ಭಗವಾನರವರ ಪರಮ ಹಿತೋಪದೇಶವಾಗಿರುವಾಗ, ಅದನ್ನು ನಿರಾಕರಿಸಿ ಉಪಾಸನ ನಿಷ್ಠನ್ನನಿಗೆ ನಿತ್ಯನೈಮಿತ್ತಿಕಾದಿ ಸಕಲ ಧರ್ಮಗಳೂ ಆವಶ್ಯಕವಿಲ್ಲವೆಂದು ಹೇಗೆ ಸರ್ವಧರ್ಮಾನ್‌ಪರಿತ್ಯಜ್ಯ ಎಂಬುದಕ್ಕೆ ಅರ್ಥಮಾಡಲು ಸಾಧ್ಯವು?

ಆದರೆ ಇಲ್ಲಿ ವ್ಯಕ್ತವಾಗಿ ಸರ್ವಕರ್ಮಪರಿತ್ಯಾಗವು ಹೇಳದಿದ್ದರೂ, ಇತರ ಪ್ರಮಾಣಗಳಾದ "ನಾವಿರತೋ ದುಶ್ಚರಿತಾತ್" (ಕಠ ೨. ೨೪) "ತ್ಯಜ ಧರ್ಮ ಮಧರ್ಮಂ ಚ" (ಭಾಗ. ೧೧ ಎಂಬ ಶ್ರುತಿ ಸ್ಮೃತಿಗಳಲ್ಲಿ ಸರ್ವಕರ್ಮಗಳ ಸ್ವರೂಪ ತ್ಯಾಗವು ಬೋಧಿತವೆಂದು ಅಭಿಪ್ರಾಯಪಟ್ಟಿರುತ್ತಾರೆ. ಕಠಶ್ರುತಿಯ ಪೂರಾವಾಕ್ಯವು—"ನಾವಿರತೋ ದುಶ್ಚರಿತಾನ್ನಾಶಾನ್ತೋ ನಾಸಮಾಹಿತಃ। ನಾಶಾನ್ತ ಮಾನಸೋವಾಪಿ ಪ್ರಜ್ಞಾನೇನೈವ ಮಾಪ್ನುಯಾತ್" ಎಂಬುದು. ಇಲ್ಲಿ ಪರಮಾತ್ಮೋಪಾಸನೆಗೆ ದುಶ್ಚರಿತ ಮೊದಲಾದ ನಿಷಿದ್ಧ ಕರ್ಮಪರಿತ್ಯಾಗವು ಹೇಳಲ್ಪಟ್ಟಿತೇ ವಿನಾ, ನಿತ್ಯನೈಮಿತ್ತಿಕಾದಿ ವಿಹಿತ ಕರ್ಮಗಳ ತ್ಯಾಗವು ಹೇಳಲ್ಪಡಲಿಲ್ಲವು. ಪರದಾರಗಮನ ಪರದ್ರವ್ಯಾಪಹಾರಾದಿಗಳಿಂದ ನಿವೃತ್ತನಲ್ಲದೆಯೂ, ನಾನಾ ವಿಧ ವ್ಯಾಪಾರಗಳ ಮೂಲಕ ಉಪಶಾನ್ತ ಚಿತ್ತನಲ್ಲದೆಯೂ, ಹೀಗೆ ಮನಸ್ಸನ್ನು ನಿಗ್ರಹಿಸದೇ ಇರುವವನು, ಉಪಾಸನೆಯ ಮೂಲಕ ಪರಮಾತ್ಮನನ್ನು ಹೊಂದಲಾರನೆಂದು ಇಷ್ಟು ಮಾತ್ರವೇ ಹೇಳಿತೇ ವಿನಾ, ವಿಹಿತ ಕರ್ಮ ತ್ಯಾಗವನ್ನು ಈ ಶ್ರುತಿಯು ಉಪದೇಶಿಸಲಿಲ್ಲವು.

ಹಾಗೆಯೇ "ತ್ಯಜಧರ್ಮ ಮಧರ್ಮಂಚ" ಎಂದು ಉಪದೇಶಿಸಿದುದೂ ಎಲ್ಲಾ ಧರ್ಮಾಧರ್ಮಗಳನ್ನು ಬಿಟ್ಟು ಬಿಡು ಎಂಬ ಭಾವದಿಂದಲ್ಲವು. ಈ ಉಪದೇಶವು ಭಾರತ ಶಾಂತಿ ಪರ್ವದಲ್ಲಿರುತ್ತದೆ. (೩೩೯–೪೪) ಕಾಮ್ಯ ಕರ್ಮಗಳನ್ನು ಬಂಧಕಗಳಾದುದರಿಂದಲೂ, ನಿಷಿದ್ಧಕರ್ಮಗಳನ್ನು ಭಗವನ್ನಿಗ್ರಹವನ್ನುಂಟು ಮಾಡುವದರಿಂದಲೂ, ಪ್ರಪನ್ನನು ಬಿಡಬೇಕೆಂಬರ್ಥವು "ತ್ಯಜಧರ್ಮಮಧರ್ಮಂಚ ಉಭೇ ಸತ್ಯಾನೃತೇ ತ್ಯಜ । ಉಭೇ ಸತ್ಯಾನೃತೇತ್ಯಕ್ತ್ವಾ ಯೇನ ತ್ಯಜಸಿ ತತ್ತ್ಯಜ । ಏತತ್ತೇ ಪರಮಂ ಗುಹ್ಯಂ ಆಖ್ಯಾತ ಮೃಷಿಸತ್ತಮ ॥" ಎಂಬುದು ಪೂರಾ ವಾಕ್ಯವು. ಪರಮಹಿತವಾದ ಪರಮಪುರುಷ ಸಾಕ್ಷಾತ್ಕಾರ ಕ್ರಮವನ್ನು ಉಪದೇಶಿಸಿದ ನಂತರ ಮೋಕ್ಷೇತರ ಫಲಗಳಲ್ಲಿ ವೈರಾಗ್ಯವು ಆವಶ್ಯಕವಾದುದರಿಂದ ಹೇಳುತ್ತಾರೇನೆಂದರೆ - ತ್ಯಜಧರ್ಮ ಮಧರ್ಮಂಚ–ಪ್ರವೃತ್ತಿಧರ್ಮಗಳನ್ನು ಫಲಾಭಿಸಂಧಿಯೊಂದಿಗೆ ಮಾಡಿದರೆ ಅವು ಬಂಧಕಗಳಾಗುವದರಿಂದ ಅಂತಹ ಕಾಮ್ಯಕರ್ಮಗಳನ್ನೂ, ಅಕೃತ್ಯಕರಣ ಕೃತ್ಯಾಕರಣ ರೂಪ ನಿಷಿದ್ಧಕರ್ಮಗಳನ್ನೂ, ತ್ಯಜಿಸು ಎಂಬರ್ಥವು. ಇದರಿಂದ ವಿಹಿತಕರ್ಮಗಳ ತ್ಯಾಗವು ಬೋಧಿಸಲ್ಪಡಲಿಲ್ಲವು. ಹಾಗೆಯೇ ಸತ್ಯಾನೃತೇತ್ಯಜ–"ಅನೃತೇನೈವ ಪ್ರತ್ಯೂಢಾಃ" ಎಂದು ಶ್ರುತಿಯಲ್ಲಿ ಹೇಳಿರುವಹಾಗೆ, ಸಾಂಸಾರಿಕ ಫಲವುಳ್ಳ ಕರ್ಮವು ಅನೃತ ವೆಂದು ಹೇಳಿಸಿಕೊಳ್ಳುತ್ತದೆ. ಅನೃತವಲ್ಲದುದು ಋತವು ಸತ್ಯವು; ಅದು ಜಿಜ್ಞಾಸುವಿಗೆ ಪ್ರಾಪ್ತವಾಗುವ ಕೈವಲ್ಯಫಲವನ್ನು ಕೊಡತಕ್ಕ ಪಂಚಾಗ್ನಿ ವಿದ್ಯಾರೂಪಾದಿಯೋಗವು. ಆದುದರಿಂದ ಉಪದೇಶವೇನಾಯಿತೆಂದರೆ ನೀನು ಆರ್ತನಾಗಿಯಾಗಲಿ ಅರ್ಥಾರ್ಥಿಯಾಗಿಯಾಗಲಿ ಉಪಾಸನೆಯನ್ನು ಮಾಡಬೇಡ; ಅಂತಹ ಪ್ರವೃತ್ತಿಗಳನ್ನು ತ್ಯಾಗಮಾಡು. ಜ್ಞಾನಿಯಾಗಿ ಫಲಕರ್ತೃತ್ವ

ಮಮತೆಗಳನ್ನು ತ್ಯಾಗಮಾಡಿ ವಿಹಿತಕರ್ಮಗಳನ್ನು ಅನುಷ್ಠಿಸು ಎಂಬ ಉಪದೇಶವು. ಇದನ್ನೇ ಮುಂದಿನ ವಾಕ್ಯದಿಂದ ಉಪದೇಶಿಸುತ್ತಾರೆ - **"ಯೇನ ತ್ಯಜಸಿ ತತ್ತ್ಯಜ"** - ಹೀಗೆ ಜ್ಞಾನಿಯಾಗಿ ನಾನು ಉಪಾಸನೆಯನ್ನು ಮಾಡುತ್ತೇನೆ, ನಾನು ಮೋಕ್ಷವನ್ನು ಸಾಧಿಸಿ ಪಡೆಯುತ್ತೇನೆ, ನಾನು ಎಂಬ ಮತ್ತು ಫಲಕರ್ತೃತ್ವಾದಿಗಳನ್ನು ತ್ಯಾಗಮಾಡಿರುತ್ತೇನೆ, ಹೀಗೆ ಅನುಪಯುಕ್ತವಾಗಿ ಬಂಧಕಗಳಾಗಿರುವದನ್ನೆಲ್ಲಾ ಬಿಟ್ಟಿರುತ್ತೇನೆ, ಇತ್ಯಾದಿ ಅಹಂಭಾವವು ಯಾತರಿಂದುಂಟಾಗುತ್ತದೋ ಅದನ್ನು ಕೂಡ ಬಿಟ್ಟುಬಿಡು ಎಂಬ ಹಿತೋಪದೇಶವು.

ಹಾಗೆಯೇ ಶ್ರೀ ಭಾಗವತದಲ್ಲೂ ಪರಮಭಾಗವತರಾದ ಉದ್ಧವರಿಗೆ ಶ್ರೀ ಕೃಷ್ಣ ಭಗವಾನರವರೇ ಹಿತೋಪದೇಶವನ್ನು ಮಾಡಿರುತ್ತಾರೆ. ಹೇಗೆಂದರೆ - "**ತಸ್ಮಾತ್ತ್ವಂ ಉದ್ಧವೋತ್ಸೃಜ್ಯ ಚೋದನಾಂ ಪ್ರತಿಚೋದನಾಮ್। ಪ್ರವೃತ್ತಿಂಚ ನಿವೃತ್ತಿಂಚ ಶ್ರೋತವ್ಯಂ ಶ್ರುತಮೇವಚ। ಮಾಮೇಕ ಮೇವ ಶರಣಂ ಆತ್ಮಾನಂ ಸರ್ವದೇಹಿನಾಮ್।ಯಾಹಿ ಸರ್ವಾತ್ಮಭಾವೇನ ಯಾಸ್ಯಸ್ಯಕುತೋಭಯಮ್**" (ಭಾಗ. ೧೧-೧೨-೧೪ ೧೫) ಇದರ ಅರ್ಥವೇನೆಂದರೆ—ನ್ಯಾಸವಿದ್ಯೆಯಾದ ಸ್ವತಂತ್ರ ಪ್ರಪತ್ತಿಯ ಮಾಹಾತ್ಮ್ಯೆಯನ್ನು ಉದ್ಧವರಿಗೆ ಪ್ರದರ್ಶಿಸುವ ಪ್ರಕರಣವು.—ಓ ಉದ್ಧವನೇ! "**ಚೋದನಾಂ ಪ್ರತಿಚೋದನಾಂ** - ವಿಧಿ ನಿಷೇಧ ವಾಕ್ಯಗಳಲ್ಲಿ ಹೇಳಲ್ಪಟ್ಟ ಧರ್ಮಗಳಾದ **ಪ್ರವೃತ್ತಿಂಚ ನಿವೃತ್ತಿಂಚ** - ಪ್ರವೃತ್ತಿ ಧರ್ಮಗಳನ್ನೂ, ಬಿಡತಕ್ಕ ವ್ಯಾಪಾರಗಳನ್ನೂ. ಫಲಕಾಮನೆಯಿಂದಲಾಗಲಿ ಫಲಾದಿಗಳನ್ನು ತ್ಯಾಗಮಾಡಿಯಾಗಲಿ. ಹಾಗೆಯೇ **ಶ್ರೋತವ್ಯಂ** - ಉಪಾಯಾಂತರ ಉಂಟೆಂದು ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳು ಅನುಷ್ಠೇಯವು ಮೋಕ್ಷದಾಯಕವು ಎಂದು ಉಪದೇಶಾರ್ಹವಾದುದನ್ನೂ, **ಶ್ರುತಮೇವಚ** - ನಿತ್ಯನೈಮಿತ್ತಿಕಗಳು ಅವಶ್ಯಕವಾಗಿ ಆಜ್ಞಾಕೈಂಕರ್ಯವಾದರೂ, **ಅವು**ಗಳು ಈ ಪ್ರಪತ್ತಿಗೆ ಅಂಗವೆಂಬ ಭಾವವನ್ನೂ, **ಉತ್ಸೃಜ್ಯ** - ಬಿಟ್ಟುಬಿಟ್ಟು, **ಮಾಂ** - ಸರ್ವಜ್ಞ ಸರ್ವಶಕ್ತತ್ವಾದಿ, ಆಶ್ರಯ ಸೌಕರ್ಯವನ್ನುಂಟುಮಾಡುವ ಮತ್ತು ಆಶ್ರಿತನ ಕೋರಿಕೆಯನ್ನು ಸಫಲಗೊಳಿಸುವ ಕಾರುಣ್ಯ ವಾತ್ಸಲ್ಯ ಸೌಲಭ್ಯ. ಸೌಶೀಲ್ಯ ಮೊದಲಾದ ಕಲ್ಯಾಣಗುಣ ಮಹೋದಧಿಯಾದ ನನ್ನನ್ನು. **ಏಕಮೇವ** - ಶ್ರಿಯಃಪತಿಯಾಗಿಯೂ ಪ್ರಾಪಕನು ಪ್ರಾಪ್ಯನೂ ಒಬ್ಬನೇಯಾಗಿ. ಅಶಕ್ತರಾಗಿ ಬ್ರಹ್ಮರುದ್ರೇಂದ್ರಾದಿ ಅನ್ಯದೇವತೆಗಳಿಗೆ ಮೋಕ್ಷ ಪ್ರದತ್ವ ಶಕ್ತಿಯಿಲ್ಲದಿರುವುದರಿಂದ ನನ್ನೊಬ್ಬನನ್ನೇ. ಇನ್ನೂ ಎಂತವನೆಂದರೆ "**ಆತ್ಮಾನಂ ಸರ್ವದೇಹಿನಾಂ** - ಚತುರ್ಮುಖ ಮೊದಲುಗೊಂಡು ಕ್ರಿಮಿಕೀಟಗಳವರೆಗೂ ಸಮಸ್ತ ಪ್ರಾಣಿವರ್ಗಕ್ಕೂ ಸಮಸ್ತ ಸಸ್ಯವರ್ಗಕ್ಕೂ ಆತ್ಮವಾಗಿರುವ ನನ್ನೊಬ್ಬನನ್ನೇ, **ಸರ್ವಾತ್ಮಭಾವೇನ** - ಉಪಾಯತ್ವ ಉಪೇಯತ್ವ, ಪಿತೃತ್ವ, ರಕ್ಷಕತ್ವ ಶೇಷತಾದಿ ಸರ್ವ ಭಾವಗಳಿಂದಲೂ, **ಶರಣಂ ಯಾಹಿ** - ಸಿದ್ಧೋಪಾಯನನ್ನಾಗಿ ಭಾವಿಸಿ ಶರಣಾಗತಿಯನ್ನನುಷ್ಠಿಸು. **ಯಾಸ್ಯಸ್ಯ ಕುತೋಭಯಮ್** - ಸ್ವಲ್ಪವಾಗಲಿ ಪುನರಾವರ್ತಿರೂಪ ಭಯವಿಲ್ಲದ ದಿವ್ಯವೈಕುಂಠವನ್ನು ಸೇರುವೆ, ಎಂದು ಉಪದೇಶವು.

೨. ಈಗ ಹಿಂದ ಕರ್ಮಯೋಗಾದಿ ಸಮಸ್ತೋಪದೇಶಗಳಲ್ಲೂ ಗುಹ್ಯತಮವೆಂದು ಹಿಂದೆ ಹೇಳಲ್ಪಟ್ಟಿದುದನ್ನೇ ಪುನಃ ಜ್ಞಾಪಕಕ್ಕೆ ಕೊಟ್ಟು, ಇದೇ ಅಧ್ಯಾಯದಲ್ಲೇ ಹಿಂದೆ ಹೇಳಿದ ತ್ರಿವಿಧ ತ್ಯಾಗವು ಆವಶ್ಯಕವೆಂದು ಹೇಳಿದನಂತರವೂ. ಈಗ ಪುನಃ ಹೇಳುವದರಲ್ಲಿ ಪ್ರಯೋಜನವೇನು? ಎಂಬುದೊಂದು ಆಕ್ಷೇಪವು; ಇನ್ನೊಂದೇನೆಂದರೆ ಸರ್ವಧರ್ಮಾನ್ ಪರಿತ್ಯಜ್ಯ ಎಂಬುದಕ್ಕೆ ಸಾಮಾನ್ಯವಾಗಿ ಸರ್ವ ಧರ್ಮಗಳ ಪರಿತ್ಯಾಗವೇ ಅರ್ಥವಾಗಿರುವಾಗ ಬೇರೇ ವಿಧವಾಗಿ ಅನ್ವಯಿಸುವದು ನ್ಯಾಯವೇ? ಆತನಿಗೆ ಈಗ ದುಃಖವೇನೋ ಉಂಟಾಗಿದೆ ಎಂಬುದು ಮಾಶುಚಃ ಎಂಬ ವಾಕ್ಯದಿಂದಲೇ ಸ್ಪಷ್ಟವು. ಅಳುವವನನ್ನು ಕುರಿತಲ್ಲವೇ ಅಳಬೇಡವೆಂದು ಹೇಳಬೇಕಾದುದು; ಈ

**ಭಾ. ಅಥವಾ ಸರ್ವಪಾಪ ವಿನಿರ್ಮುಕ್ತಾತ್ಯರ್ಥ ಭಗವತ್ಪ್ರಿಯಪುರುಷ ನಿವರ್ತ್ಯತ್ವಾದ್ಭಕ್ತಿಯೋಗಸ್ಯ ತದಾರಂಭ ವಿರೋಧಿಪಾಪಾನಾ ಮಾನಂತ್ಯಾತ್ ತತ್ಪ್ರಾಯಶ್ಚಿತ್ತ**

ದುಃಖವು ಯಾವುದು ಎಂದರೆ ತನ್ನ ಎಲ್ಲಾ ಅಸಂಖ್ಯೇಯಗಳಾದ ಪಾಪಗಳೆಲ್ಲಾ ತೊಲಗಲು ಸಾಧ್ಯವೇ? **ಮಾಮೇವೈಷ್ಯಸಿ** ಎಂದು ಏನೋ ಹೇಳಿದರು; ಇಷ್ಟು ಪಾಪಗಳಿರುವಾಗ ಉಪಾಯವು ಹೇಗೆ ಸಿದ್ಧಿಸೀತು ಎಂಬ ಶೋಕವುಂಟೆಂಬುದು ವ್ಯಕ್ತವು. ಒಂದು ವೇಳೆ ಸಿದ್ಧಿಸಬೇಕಾದರೆ ಇಷ್ಟು ಪಾಪಗಳಿಗಾಗಿ ಪ್ರಾಯಶ್ಚಿತ್ತಗಳನ್ನು ಅನುಷ್ಠಿಸುತ್ತಾ ಬಂದರೆ, ಎಷ್ಟು ಜನ್ಮಗಳಲ್ಲಿ ಆ ಅನುಷ್ಠಾನಗಳು ಮುಗಿಯುವುವು; ಹೀಗಿರುವಾಗ ಎಂದಿಗೆ ಆತನ ಪಾದಾಬ್ಜವನ್ನು ಹೋಗಿ ಸೇರುವದು? ಇತ್ಯಾದಿಗಳಿಗೆಲ್ಲಾ ಹಿಂದಿನ ಯೋಜನೆಯಲ್ಲಿ ಸಮಾಧಾನ ಸಿಕ್ಕದಿರುವದರಿಂದ ಕ್ಷಿಪ್ರಫಲಕಾರಿಯಾದ ಇನ್ನೊಂದು ವಿಧ ಉಪಾಯವನ್ನು ತಿಳಿಸುತ್ತಾರೆ. ಹಿಂದೆ ಹೇಳಿದ ಉಪಾಯವು ಕಷ್ಟವಾದರೆ, ನೀನು ಶೋಕಿಸಬೇಕಾದುದಿಲ್ಲವು. ಇನ್ನೊಂದು ಸುಲಭ ಸಾಧ್ಯವಾಗಿ ಸರ್ವರಿಗೂ ಅಧಿಕಾರವಿರುವ ಉಪಾಯವನ್ನು ಹೇಳುವೆನು. ಅನರ ವಿಷಯವಾದ ಸರ್ವವನ್ನೂ ತಿಳಿದುಕೊಂಡು ಅವನ್ನಾದರೂ ಅನುಷ್ಠಿಸು, ಅಂತೂ ನೀನು ನಿನ್ನ ಇತಿ ಕರ್ತವ್ಯತಾ ರೂಪಧರ್ಮಯುದ್ಧವನ್ನು ತ್ಯಜಿಸಲು ಮಾರ್ಗವೇ ಇಲ್ಲವು ಎಂದು ತಿಳಿಸುವದಕ್ಕಾಗಿ ಸುಲಭೋಪಾಯವನ್ನು ಉಪದೇಶಿಸುತ್ತಾರೆ.—ಇದೂ ಕೂಡ ಸಾರಭೂತವಾದ ಉಪಾಯವಾದುದರಿಂದ ಅಶಕ್ತರಿಗೆ ಸುಲಭೋಪಾಯವಾಗಿ ಇದೂ ಗುಹ್ಯತಮವೆಂದು ಹೇಳಿದುದಲ್ಲೇ ಸೇರಿದುದಾಗಿ ಗೀತಾ ಚರಮಶ್ಲೋಕವೆಂದು ಶ್ಲಾಘಿಸಲ್ಪಡಲು ಯೋಗ್ಯವಾದ ಅಭಿಪ್ರಾಯವಾಗಿ ಎರಡನೆಯ ಯೋಜನೆಯನ್ನು ತಿಳಿಸುತ್ತಾರೆ. **ಅಥವಾ**—ಇನ್ನೊಂದುವಿಧವಾಗಿಯೂ ಅರ್ಥಹೇಳಬಹುದು. **ಅಥವಾ** ಎಂದರೆ ವಿಕಲ್ಪಾರ್ಥವೆಂದೇ ಭಾವಿಸಿ, ಹಿಂದಿನ ಅರ್ಥವು ಸರಿಹೋಗದೇ ಹೋದರೆ ಈ ಅರ್ಥವನ್ನಾದರೂ ಪರಿಗ್ರಹಿಸಬಹುದೆಂಬ ಅರ್ಥದಲ್ಲಿ **ಅಥವಾ** ಎಂದು ಪ್ರಯೋಗಿಸಿದುದಲ್ಲವು; ಇನ್ನೊಂದು ವಿಧವಾಗಿಯೂ ಅರ್ಥವು ಉದ್ದೇಶ್ಯವೇ. ಹಿಂದಿನ ಶ್ಲೋಕದಲ್ಲಿ ಹೇಳಿದಹಾಗೆ ಮಾಡು ಅಥವಾ ಮುಂದಿನ ಶ್ಲೋಕದಲ್ಲಿ ಹೇಳಿದಹಾಗೆಮಾಡು. ಶ್ರೀಕೃಷ್ಣ ಭಗವಂತರವರು ಉಪದೇಶಿಸುವದರಲ್ಲಿ ಈ ಎರಡು ವಿಧ ಅಭಿಪ್ರಾಯಗಳನ್ನೂ ವ್ಯಕ್ತಪಡಿಸಬೇಕೆಂಬ ಅಭಿಪ್ರಾಯದಿಂದ ಹೇಳಿರುವರು ಎಂದು ಭಾವಿಸತಕ್ಕದ್ದು. ಮಹರ್ಷಿಗಳ ದಿವ್ಯಸೂಕ್ತಿಯು ಪೂರ್ಣ ಅರ್ಥಗರ್ಭಿತವಾದುದು. ಈ ಚರಮ ಶ್ಲೋಕದ ಈ ಅರ್ಥದಿಂದ ತೋರಿಬರುವ ಅನೇಕ ರಹಸ್ಯಾಭಿಪ್ರಾಯಗಳೂ ಉಂಟು ಅವುಗಳನ್ನೆಲ್ಲಾ ವಿಸ್ತಾರವಾಗಿ ಉಪಪಾದಿಸುವದು ಸಾಧ್ಯವಿಲ್ಲವಾದುದರಿಂದ ಮುಂದೆ ಸಂಗ್ರಹವಾಗಿ ಕೆಲವನ್ನು ಮಾತ್ರ ಸೂಚಿಸುವೆವು. ವಿಸ್ತಾರವಾಗಿ ತಿಳಿಯಬೇಕೆಂಬ ಅಭಿಲಾಷೆಯಿರುವವರು ದಾಸನು ಬರೆದಿರುವ ರಹಸ್ಯತ್ರಯಸಾರದ ಚರಮಶ್ಲೋಕಾಧಿಕಾರದ ಅರ್ಥ ತಾತ್ಪರ್ಯಗಳನ್ನು ಕಟಾಕ್ಷಿಸಬಹುದು ಈ ಎರಡನೆಯ ಯೋಜನೆಯು ಹೇಗೆಂದರೆ? **ಭಕ್ತಿಯೋಗಸ್ಯ** – ಭಕ್ತಿಯೋಗವು, **ಸರ್ವಪಾಪವಿನಿರ್ಮುಕ್ತಾತ್ಯರ್ಥ ಭಗವತ್ಪ್ರಿಯ ಪುರುಷನಿವರ್ತ್ಯತ್ವಾತ್** - ಸರ್ವಪಾಪಗಳಿಂದ ಬಿಡಲ್ಪಟ್ಟು, ಭಗವಂತನಿಗೆ ವಿಶೇಷ ಪ್ರಿಯನಾದ ಪುರುಷನಿಂದ ಅನುಷ್ಠಿಸಲು ಸಾಧ್ಯವಾದುದರಿಂದ, **ತದಾರಂಭವಿರೋಧಿಪಾಪಾನಾಂ** - ಆ ಭಕ್ತಿಯೋಗವನ್ನು ಆರಂಭಿಸುವದಕ್ಕೆ ಪ್ರತಿಬಂಧಕಗಳಾದ ಪಾಪಗಳ, (ಇದರಲ್ಲೇ ಪುಣ್ಯಗಳೂ ಪ್ರತಿಬಂಧಕಗಳಾದುದರಿಂದ ಸೇರಿದವು) **ಆನಂತ್ಯಾತ್** – ಲೆಖ್ಖವಿಲ್ಲದಷ್ಟು ಬಾಹುಳ್ಯವಿರುವದರಿಂದ, **ತತ್ಪ್ರಾಯಶ್ಚಿತ್ತರೂಪಧರ್ಮೈಃ** - ಆಯಾ ಪಾಪಗಳಿಗೆ ಪ್ರಾಯಶ್ಚಿತ್ತರೂಪದಲ್ಲಿ ಶಾಸ್ತ್ರಗಳಲ್ಲಿ ವಿಧಿಸಿರುವ ಧರ್ಮಗಳಿಂದ, ಹೀಗೆ **ಪರಿಮಿತಕಾಲಕೃತ್ಯೈಃ** – ಒಂದು ಜನ್ಮದ ಪರಿಮಿತವಾದ ಕಾಲದಲ್ಲಿ ಅನುಷ್ಠಿಸುವವರಿಂದ, **ತೇಷಾಂ** - ಆ ಪಾಪಗಳ, **ದುಸ್ತರತಯಾ** - ನಿವಾರಣವು ಕಷ್ಟವಾದುದರಿಂದ, **ಆತ್ಮನಃ** - ತನ್ನ, **ಭಕ್ತಿಯೋಗಾರಂಭಾನರ್ಹತಾಂ** -

**ರೂಪಧರ್ಮೈಃ ಪರಿಮಿತಕಾಲಕೃತೈಸ್ತೇಷಾಂ ದುಸ್ತರತಯಾ ಆತ್ಮನೋ ಭಕ್ತಿಯೋಗಾರಂಭಾನರ್ಹತಾ ಮಾಲೋಚ್ಯ ಶೋಚತೋಽರ್ಜುನಸ್ಯ ಶೋಕಮಪನುದನ್ ಶ್ರೀ ಭಗವಾನುವಾಚ—**

ಭಾ. **"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಇತಿ; ಭಕ್ತಿಯೋಗಾರಂಭವಿರೋಧ್ಯನಾದಿಕಾಲ ಸಂಚಿತ ನಾನಾವಿಧಾನಂತ ಪಾಪಾನುಗುಣಾನ್ ತತ್ತತ್ಪ್ರಾಯಶ್ಚಿತ್ತರೂಪಾನ್ ಕೃಚ್ಛ್ರ ಚಾಂದ್ರಾಯಣ ಕೂಷ್ಮಾಂಡ ವೈಶ್ವಾನರ ವ್ರಾತಪತಿ ಪವಿತ್ರೇ**

---

ಭಕ್ತಿಯೋಗವನ್ನು ಆರಂಭಿಸುವದಕ್ಕಿರುವ ಅಶಕ್ತತೆಯನ್ನು, **ಆಲೋಚ್ಯ** - ಆಲೋಚಿಸಿ, **ಶೋಚತಃ** - ಶೋಕಿಸುತ್ತಿರುವ **ಅರ್ಜುನಸ್ಯ** - ಅರ್ಜುನನ, **ಶೋಕಮಪನುದನ್** - ಶೋಕವನ್ನು ಹೋಗಲಾಡಿಸುವವರಾಗಿ, **ಶ್ರೀಭಗವಾನುವಾಚ** - ಲಕ್ಷ್ಮೀಯುಕ್ತನಾದ ಭಗವಾನ್ ಹೇಳುತ್ತಾರೆ—ಏನೆಂದರೆ, ಈ ಮುಂದೆ ಹೇಳುವ ಎರಡನೆಯ ಅರ್ಥಕ್ಕೆ ಈ ಮೇಲಿನ ವಾಕ್ಯದಿಂದ ಅವತಾರಿಕೆಯನ್ನು ದಯಪಾಲಿಸಿರುತ್ತಾರೆ. ಭಕ್ತಿಯೋಗದಲ್ಲಿ ಅಭಿನಿವೇಶ ಉಂಟಾಗಬೇಕಾದರೆ, ಭಕ್ತಿಯೋಗಾರಂಭಕ್ಕೆ ಪ್ರತಿಬಂಧಕಗಳಾದ ಪಾಪಗಳೆಲ್ಲಾ ಕಳೆದು ಆ ಕಾರಣದಿಂದ ಪರಮಪುರುಷನಿಗೆ ಅತ್ಯರ್ಥಪ್ರಿಯನಾಗಿರಬೇಕು. ಹಾಗೆಯೇ, **"ಜನ್ಮಾಂತರ ಸಹಸ್ರೇಷು ತಪೋಜ್ಞಾನಸಮಾಧಿಭಿಃ । ನರಾಣಾಂ ಕ್ಷೀಣಪಾಪಾನಾಂ ಕೃಷ್ಣೇ ಭಕ್ತಿಃ ಪ್ರಜಾಯತೇ"** ಎಂಬ **"ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ"** ಎಂಬ **"ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ"** ಎಂಬಿವೇ ಮೊದಲಾದ ಪ್ರಮಾಣಗಳು ಭಕ್ತಿಯೋಗಕ್ಕೆ ಅರ್ಹತೆಯು ಭಗವದನುಗ್ರಹದಿಂದುಂಟಾದ ಪಾಪಗಳ ನಿವೃತ್ತಿಯಿಂದಲೇ ಎಂದು ಹೇಳುತ್ತದೆ. ಭಗವದನುಗ್ರಹವು ಲಭಿಸಬೇಕಾದರೆ ಕರ್ಮಯೋಗಾನುಷ್ಠಾನಾನಂತರ ಭಕ್ತಿಯೋಗಾರಂಭ ಪೂರ್ವಭಾವಿಯಾಗಿ ಶರಣಾಗತಿಯನ್ನು ಪಾಪನಿವಾರಣಾರ್ಥವಾಗಿ ಅನುಷ್ಠಿಸತಕ್ಕದ್ದೆಂಬುದು ಏರ್ಪಟ್ಟಿತೆಂಬ ಭಾವವು. ಇದನ್ನು ಸೂಚಿಸುವದಕ್ಕಾಗಿ **ಸರ್ವಪಾಪವಿನಿರ್ಮುಕ್ತಾತ್ಯರ್ಥಭಗವತ್ಪ್ರಿಯಪುರುಷನಿರ್ವರ್ತ್ಯತ್ವಾತ್ ಭಕ್ತಿಯೋಗಸ್ಯ** ಎಂಬ ವ್ಯಾಖ್ಯಾನವು. ಪಾಪಗಳಾದರೋ ಅನಾದಿಕಾಲದಿಂದಲೂ ಅನೇಕ ಜನ್ಮ ಸಂತತಿಗಳಿಂದ ಮಾಡಲ್ಪಟ್ಟು **ಲೆಖ್ಖ**ಮಾಡಲು ಕೂಡ ಸಾಧ್ಯವಿಲ್ಲದೆ, ಅನಂತವಾದವು. ಅವುಗಳನ್ನೆಲ್ಲಾ ಪ್ರಾಯಶ್ಚಿತ್ತ ಮೂಲಕ ಕಳೆಯೋಣವೆಂದರೆ ಸಾಧ್ಯವಿಲ್ಲವು. ಎಷ್ಟು ಜನ್ಮಗಳನ್ನೆತ್ತಿ ಅವುಗಳಿಗೆ ಹೇಳಿರುವ ಪ್ರಾಯಶ್ಚಿತ್ತಗಳನ್ನೆಲ್ಲಾ ಅನುಷ್ಠಿಸಿದರೆ ಆದೀತು ? ಹೀಗೆ ಅಸಾಧ್ಯವೇ ಎಂದು ಶೋಕಿಸುತ್ತಿರುವ ಅರ್ಜುನನನ್ನು ಕಂಡು ಸಮಾಧಾನಮಾಡಿ ಕೃಪಾಪರಿಪೂರ್ಣರಾದ ಲೀಲಾಸಾರಥಿಯು ಹೇಳುತ್ತಾರೆ. ಅಷ್ಟುಪಾಪಗಳೂ ಒಂದು ಕ್ಷಣಕಾಲದಲ್ಲಿ ತೂಲರಾಶಿಯೆಲ್ಲಾ ಅಗ್ನಿಯಿಂದ ಭಸ್ಮವಾಗುವ ಹಾಗೆ, ಒಂದೇ ಕ್ಷಣಕಾಲದ ಅನುಷ್ಠಾನದಿಂದ ತೊಲಗುವ ಉಪಾಯವನ್ನು ಹೇಳುತ್ತೇನೆ ಕೇಳು ಎಂದು ಉಪದೇಶಿಸುತ್ತಾರೆ. **ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ಇತಿ** - ಎಂಬುದೇ; ಈ ಸರ್ವ ಪಾಪಗಳ ನಾಶಕೂ ಒಂದೇ ಪ್ರಾಯಶ್ಚಿತ್ತವು; ಇದರ ಅರ್ಥವೇನೆಂಬುದನ್ನು ವ್ಯಕ್ತಪಡಿಸುತ್ತಾರೆ **ಭಕ್ತಿಯೋಗಾರಂಭ ವಿರೋಧ್ಯನಾದಿ ಕಾಲಸಂಚಿತ ನಾನಾವಿಧಾನಂತ ಪಾಪಾನುಗುಣಾನ್**- ಭಕ್ತಿಯೋಗವನ್ನು ಆರಂಭಿಸಲು ಪ್ರತಿ ಬಂಧಕಗಳಾದ ಅನಾದಿಕಾಲದಿಂದಲೂ ಸಂಪಾದಿಸಲ್ಪಟ್ಟ ನಾನಾ ವಿಧಗಳಾದ ಅನಂತ ಪಾಪಗಳಿಗೆ ಅನುಗುಣವಾದ ಎಂದರೆ ಶಾಸ್ತ್ರಗಳಲ್ಲಿ ವಿಹಿತಗಳಾದ, **ತತ್ತತ್ಪ್ರಾಯಶ್ಚಿತ್ತರೂಪಾನ್** - ಆ ಪ್ರಾಯಶ್ಚಿತ್ತಗಳಾದ **ಕೃಚ್ಛ್ರ ಚಾಂದ್ರಾಯಣ ಕೂಷ್ಮಾಂಡ ಹೋಮ ವೈಶ್ವಾನರೇಷ್ಟಿ ವ್ರಾತಪತೀಷ್ಟಿ ತ್ರಿವೃತ್ ಅಗ್ನಿಷ್ಟೋಮ**

**ಷ್ಟಿತ್ರಿವಿದಗ್ನಿಷ್ಟೋಮಾದೀನ್ ನಾನಾವಿಧಾನನಂತಾಂಸ್ತ್ವಯಾ ಪರಿಮಿತ ಕಾಲವರ್ತಿನಾ ದುರನುಷ್ಠಾನಾನ್ ಸರ್ವಾನ್ ಧರ್ಮಾನ್ ಪರಿತ್ಯಜ್ಯ ಭಕ್ತಿಯೋಗಾರಂಭ ಸಿದ್ಧಯೇ ಮಾಮೇಕಂ ಪರಮಕಾರುಣಿಕ ಮನಾಲೋಚಿತ ವಿಶೇಷಾಶೇಷ ಲೋಕಶರಣ್ಯ ಮಾಶ್ರಿತ ವಾತ್ಸಲ್ಯ ಜಲಧಿಂ, ಶರಣಂ ಪ್ರಪದ್ಯಸ್ವ ; ಅಹಂ ತ್ವಾ ಸರ್ವಪಾಪೇಭ್ಯೋ ಯಥೋದಿತ ಸ್ವರೂಪ ಭಕ್ತ್ಯಾರಂಭ ವಿರೋಧಿಭ್ಯಸ್ಸರ್ವೇಭ್ಯಃ ಪಾಪೇಭ್ಯೋ ಮೋಕ್ಷಯಿಷ್ಯಾಮಿ ; ಮಾಶುಚಃ. || ೬೬ ||**

---

ಇವೇ **ಮೊದಲಾದ**, **ನಾನಾವಿಧಾನನಂತಾನ್** ಎಂಬುದರ ಅರ್ಥವು, ಪರಿಮಿತ**ಕಾಲವರ್ತಿನಾ ತ್ವಯಾ** - ಸ್ವಲ್ಪಕಾಲ ಜೀವಮಾನವಿರುವ ನಿನ್ನಿಂದ, **ದುರನುಷ್ಠಾನಾನ್**-ಅನುಷ್ಠಿಸುವದು ಅಸಾಧ್ಯಗಳಾಗಿರುವ, **ಸರ್ವಧರ್ಮಾನ್** - ಆ ಪ್ರಾಯಶ್ಚಿತ್ತಗಳೆನ್ನೆಲ್ಲಾ, **ಪರಿತ್ಯಜ್ಯ** - ಸಮಗ್ರವಾಗಿ ಸ್ವರೂಪತಃ ತ್ಯಜಿಸಿ, ಹೀಗೆ ಹೇಳಿದುದರಿಂದ **ನಿತ್ಯನೈಮಿತ್ತಿಕ** ಸ್ವರೂಪತ್ಯಾಗವೇನೂ ಇದರಿಂದ ಹೇಳಲ್ಪಡಲಿಲ್ಲವು. ಇದಕ್ಕೆ ಅಂಗವಾಗಿಯಲ್ಲದೆ ಬೇರೇ **"ಅಹರಹಸ್ಸಂಧ್ಯಾಮುಪಾಸೀತ"** ಇತ್ಯಾದಿ ಪ್ರಮಾಣಗಳಿಂದ ಅನುಷ್ಠಿಸಲೇಬೇಕು, ಬಿಡತಕ್ಕದ್ದಲ್ಲವು. **ಭಕ್ತಿಯೋಗಾರಂಭಸಿದ್ಧಯೇ** - ಭಕ್ತಿಯೋಗಾರಂಭವು ಸಿದ್ಧಿಸುವದಕ್ಕಾಗಿ, **ಮಾಮೇಕಂ** - ಲಕ್ಷ್ಮೀಯುಕ್ತನಾದ ನನ್ನೊಬ್ಬನನ್ನೇ ಅನ್ಯಾಪೇಕ್ಷೆ ಯಾವುದೂ ಬೇಕಿಲ್ಲವೆಂದೂ ದೇವತಾಂತರವೆಲ್ಲಾ ಅಶಕ್ತರೆಂದೂ ಹೇಳಿದಂತಾಯಿತು. ನಾನು ಎಂತವನೆಂದರೆ ಪರಮಕಾರುಣಿಕನಾಗಿಯೂ, **ಅನಾಲೋಚಿತವಿಶೇಷಾಶೇಷ ಲೋಕಶರಣ್ಯಂ** - ಗುಣಶೀಲವೃತ್ತಿ ಅಭಿಜಾತ್ಯ ಮೊದಲಾದವುಗಳ ಉತ್ಕೃಷ್ಟತೆ ನಿಕೃಷ್ಟತೆಯ ತಾರತಮ್ಯಗಳನ್ನೊಂದೂ ಪರಿಗಣಿಸದೆ ಲೋಕದ ಸಮಸ್ತ ಜನರಿಗೂ ರಕ್ಷಕನಾದ, ಮತ್ತು **ಆಶ್ರಿತ ವಾತ್ಸಲ್ಯಜಲಧಿಂ** - ತನ್ನನ್ನು ಶರಣಾಗತಿಯ ಮೂಲಕ ಆಶ್ರಯಿಸಿದವರ ವಿಷಯದಲ್ಲಿ ಯಾವ ದೋಷವನ್ನು ಪರಿಗಣಿಸದೆ, **ದೋಷೋಯದ್ಯಪಿತಸ್ಯಸ್ಯಾತ್**-ದೋಷಿಯಾಗಿದ್ದರೆ ಏನಾಯಿತು ಎಂದು ಹೇಳುವ ವಾತ್ಸಲ್ಯಕ್ಕೆ ಸಮುದ್ರಪ್ರಾಯನಾದ, ನನ್ನನ್ನು **ಶರಣಂ ಪ್ರಪದ್ಯಸ್ವ**-ಉಪಾಯವನ್ನಾಗಿ ಹೊಂದು, ಎಂದರೆ ಆತನಲ್ಲಿ ಶರಣಾಗತಿಯನ್ನು ಮಾಡು; **ಅಹಂ** - ಇಂತಹ ಕ್ಷೇತ್ರಜ್ಞನಿಗೆ ಶ್ರೇಯಸ್ಸನ್ನೇ ಮಾಡಬೇಕೆಂದು ಕಾದಿರುವ ನಾನು, **ತ್ವಾ** - ನನ್ನಲ್ಲಿ ಸದುಪದೇಶಕ್ಕಾಗಿ ಶರಣಾಗತಿಯನ್ನು ಆದಿಯಲ್ಲಿ ಮಾಡಿ ಅಧ್ಯಾತ್ಮ ವಿದ್ಯೆಯನ್ನು ಕೇಳಿತಿಳಿದ ಮೋಕ್ಷಾರ್ಥಿಯಾದ ನಿನ್ನನ್ನು, **ಸರ್ವ ಪಾಪೇಭ್ಯಃ** ಎಂದರೆ **ಯಥೋದಿತಸ್ವರೂಪಭಕ್ತ್ಯಾರಂಭ ವಿರೋಧಿಭ್ಯಃ** - ನಾನು ಹಿಂದೆ ಗುಹ್ಯತಮವಾಗಿ ಮೋಕ್ಷಪ್ರಾಪ್ತಿಯನ್ನು ಸಾಧಿಸಿಕೊಡುವದೆಂದು ಉಪದೇಶಿಸಿದ ಸ್ವರೂಪವುಳ್ಳ ಭಕ್ತಿಯೋಗವನ್ನು ಆರಂಭಿಸುವದಕ್ಕೆ ಪ್ರತಿಬಂಧಕಗಳಾದ **ಸರ್ವೇಭ್ಯಃ ಪಾಪೇಭ್ಯಃ** - ಸಮಸ್ತಪಾಪಗಳಿಂದಲೂ, **ಮೋಕ್ಷಯಿಷ್ಯಾಮಿ** - ಬಿಡಿಸುವೆನು, **ಮಾಶುಚಃ** - ಅಳಬೇಡ. ಎಷ್ಟು ಜನ್ಮಸಂತತಿಗಳನ್ನೆತ್ತಿ ಎಷ್ಟು ಪ್ರಾಯಶ್ಚಿತ್ತಗಳನ್ನೂ ಪಾಪ ಪರಿಹಾರಕ್ಕಾಗಿ ಅನುಷ್ಠಿಸಿದರೂ ಅವು ಪರಿಹಾರವಾಗಲಾರವು. ಹೀಗಿರುವಾಗ ಈ ಜನ್ಮದ ಅಲ್ಪಕಾಲದಲ್ಲೇ ಅವುಗಳನ್ನೆಲ್ಲಾ ಕಳೆದುಕೊಳ್ಳಲು ಉಪಾಯವು ಯಾವುದು ಎಂದು ದುಃಖಿಸುತ್ತಿರುವ ಅರ್ಜುನನಿಗೆ ಹೇಳುತ್ತಾರೆ. ಈ ಲಘೂಪಾಯವಾದ ಶರಣಾಗತಿಯನ್ನು ಅನುಷ್ಠಿಸು, ಎಲ್ಲವೂ ತೊಲಗುವುವು, ನೀನು ಶೋಕಿಸುವ ಕೆಲಸವಿಲ್ಲವು. ಅನಿಷ್ಟನಿವೃತ್ತಿಮೂಲಕ ಇಷ್ಟಪ್ರಾಪ್ತಿಯಾದ ನಿರತಿಶಯಾನಂದವು ಲಭಿಸುವದು ಎಂಬ ತಾತ್ಪರ್ಯವ. ಈ ಅರ್ಥವು ಹಿಂದೆ ಏಳನೆಯ ಅಧ್ಯಾಯದಲ್ಲಿ **"ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿತೇ"** (೭-೧೪) ಎಂಬಲ್ಲಿ ಹೇಳಲ್ಪಟ್ಟಿತು. ಶರಣಾಗತಿಯು ಉಪಾಸನ ಭರನ್ಯಾಸ ಎರಡು ವಿಧೋಪಾಯಗಳಿಗೂ ಅವಶ್ಯಕವು. ಉಪಾಸನಾರಂಭದಲ್ಲಿ

ಮಾಡುವ ಶರಣಾಗತಿಗೆ, ಉಪಾಸನಕ್ಕೆ ಪ್ರತಿಬಂಧಕಗಳಾದ ಪಾಪಗಳನ್ನೆಲ್ಲಾ ಹೋಗಲಾಡಿಸಿ ಭಕ್ತಿಯೋಗಕ್ಕೆ ಅದು ಅಧಿಕಾರವನ್ನು ಸಂಪಾದಿಸಿಕೊಡುತ್ತದೆ. ಈ ಶರಣಾಗತಿಗೆ ಸದ್ವಾರಕ ಶರಣಾಗತಿಯೆಂದು ಹೆಸರು. ಶರಣಾಗತಿಯು ಇನ್ನೊಂದರ ಅಪೇಕ್ಷೆಯಿಲ್ಲದೆಯೂ ಸಾಕ್ಷಾತ್ತಾಗಿ ಉಪಾಯವು. ಇದಕ್ಕೆ ಅದ್ವಾರಕ ಶರಣಾಗತಿಯೆಂದು ಹೆಸರು. ಯಾವಾಗ ಪಾಪಗಳೆಲ್ಲಾ ಕಳೆಯುವ ಬಗೆ ಹೇಗೆ ಎಂದು ಅರ್ಜುನನು ಶೋಕಿಸುತ್ತಾ ನಿಂತನೋ, ಈ ಎರಡನೆಯ ವಿಧ ಶರಣಾಗತಿಯನ್ನು ಅನುಷ್ಠಿಸೆಂದು ಉಪದೇಶಿಸಿದರು. ಇದಕ್ಕೆ ಭರನ್ಯಾಸ ಪ್ರಪತ್ತಿ ಮೊದಲಾದ ಹೆಸರುಗಳುಂಟು. ನ್ಯಾಸವಿದ್ಯೆ ಎಂದೂ ಹೇಳಿಸಿಕೊಳ್ಳುತ್ತದೆ. ಇದು ಅನೇಕ ಶಾಸ್ತ್ರಗಳಲ್ಲಿ ಉಪಪಾದಿತವು. ತೈತ್ತಿರೀಯ ನಾರಾಯಣೀಯದಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಅಲ್ಲಿ ಮಗನು ತಂದೆಯನ್ನು ಕುರಿತು "ಕಿಂ ಭಗವಂತಃ ಪರಮಂ ವದನ್ತಿ ॥ ಯಾವ ಸಾಧನವು ಸರ್ವೋತ್ಕೃಷ್ಟವಾದುದೆಂದು ಪ್ರಾಜ್ಞರು ಹೇಳುವರು; ಅದನ್ನು ತಿಳಿಸಿರಿ ಎಂದು ಪ್ರಾರ್ಥಿಸಲು; ಇದಕ್ಕೆ ಪ್ರತ್ಯುತ್ತರವಾಗಿ, ಅನೇಕ ವ್ಯವಹಿತೋಪಾಯಗಳಾದ, ಸತ್ಯ, ದಾನ, ಧರ್ಮ, ತಪಸ್ಸೇ ಮೊದಲಾದವುಗಳನ್ನೆಲ್ಲಾ ಹೇಳಿ, ಇವೆಲ್ಲಕ್ಕಿಂತಲೂ ಅವ್ಯವಹಿತವಾಗಿ ಸರ್ವಶ್ರೇಷ್ಠವಾದ ಉಪಾಯವು "ತಸ್ಮಾನ್ನ್ಯಾಸಮೇಷಾಂ ತಪಸಾ ಮತಿರಿಕ್ತಮಾಹುಃ" ನ್ಯಾಸಶಬ್ದದಿಂದ ಹೇಳಲ್ಪಡುವ ಆತ್ಮನಿಕ್ಷೇಪ ಶರಣಾಗತಿಯೆಂದು ತಿಳಿಸಿ, ಆ ನ್ಯಾಸ ಶಬ್ದಾರ್ಥಕ್ಕೆ ಅಯಥಾರ್ಥವನ್ನು ಎಲ್ಲಿ ಕಲ್ಪಿಸುವರೋ ಎಂಬ ಭಯದಿಂದ ಶ್ರುತಿಯು ಮುಂದಿನ ಮಂತ್ರದಲ್ಲಿ "ವಸುರಣ್ಯೋ ವಿಭೂರಸಿ" ಎಂದಾರಂಭಿಸಿ ಓಮಿತ್ಯಾತ್ಮಾನಂ ಯುಂಜೀತ" ಎಂದು ಪರಮಾತ್ಮನ ಪಾದಾರವಿಂದದಲ್ಲಿ ಆತ್ಮನಿಕ್ಷೇಪವನ್ನು ಎಂದರೆ ತನ್ನ ಆತ್ಮಾವನ್ನು ಓಂ ಎಂದು ತ್ರಿಮಾತ್ರೆಯಿಂದ ಸಮರ್ಪಿಸತಕ್ಕದ್ದೆಂದು ಉಪದೇಶಿಸಿರತ್ತದೆ. ಆದುದರಿಂದ ಇದೂ ಶರಣಾಮಂತ್ರವು. ಇದರಿಂದ ಎಲ್ಲಾ ಪಾಪಗಳೂ ತೊಲಗುವುವು. ಇದು ಬ್ರಹ್ಮಸೂತ್ರವಾದ "ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ" ಎಂಬಲ್ಲಿ ಪೂರ್ವಾಘಗಳ ನಾಶವೂ, ಉತ್ತರಾಘಗಳ ಲೇಪವಿಲ್ಲದಿರೋಣವೂ, ಉಪಾಯಾನುಷ್ಠಾನಮಾಡಿದ ಪ್ರಪನ್ನನಿಗೆ ಎಂದು ಹೇಳಲ್ಪಟ್ಟಿರುತ್ತದೆ. ಈ ಲೇಪಿಸದ ಉತ್ತರ ಪಾಪಗಳು ಬುದ್ಧಿಪೂರ್ವಕನಲ್ಲದ ಅಪರಾಧಗಳೆಂದು ಶ್ರೀಯತಿವರ್ಯರು ವ್ಯಾಖ್ಯಾನಮಾಡಿರುತ್ತಾರೆ. ಹೀಗೆ ಭರನ್ಯಾಸವನ್ನು ಅನುಷ್ಠಿಸಿದನಂತರ ಸಾಮಾನ್ಯವಾಗಿ ಪ್ರಪನ್ನನು ತನ್ನ ಸ್ವರೂಪಕ್ಕೂ ಸ್ವನಿಷ್ಠೆಗೂ ವಿರೋಧವಾಗಿ ಪಾಪಗಳನ್ನು ಮಾಡಲಾರನು; ಒಂದುವೇಳೆ ಅಂತಹ ಅಪರಾಧಗಳ ಸಂಘಟನೆಯುಂಟಾದರೆ, ಪುನಶ್ಶರಣಾಗತಿಯನ್ನು ಪಾಪನಿಬರ್ಹಣಕ್ಕಾಗಿ ಮಾಡತಕ್ಕದ್ದಾಗಿರುತ್ತದೆ. "ಮನೀಷೀವೈದಿಕಾಚಾರಂ ಮನಸಾಪಿ ನಲಂಘಯೇತ್ । ಅಪಾಯಸಂಪ್ಲವೇ ಸದ್ಯಃ ಪ್ರಾಯಶ್ಚಿತ್ತಂ ಸಮಾಚರೇತ್। ಪ್ರಾಯಶ್ಚಿತ್ತಿರಿಯಂ ಸಾತ್ರ ಯತ್ಪುನಶ್ಶರಣಂ ವ್ರಜೇತ್ ॥ ಎಂದು ವಿಧಿಸಲ್ಪಟ್ಟಿರುತ್ತದೆ. ಹೀಗೆ ಪ್ರಾಯಶ್ಚಿತ್ತರೂಪ ಶರಣಾಗತಿಯನ್ನು ಅನುಷ್ಠಿಸದೇ ಹೋದರೆ, ಸರ್ವೇಶ್ವರನು ಈ ಜನ್ಮದಲ್ಲೇ, ಪ್ರಪನ್ನನಾದುದರಿಂದ ಅಲ್ಪ ದಂಡನೆಯನ್ನು ವಿಧಿಸಿ, ದೇಹಾವಸಾನಾನಂತರ ಮೋಕ್ಷವನ್ನು ಕೊಟ್ಟು ರಕ್ಷಿಸುವನು.

ಇಲ್ಲಿ ಇನ್ನೊಂದು ಶಂಕಾ ಉದಿಸಬಹುದೇನೆಂದರೆ ಪ್ರಾರಬ್ಧವು ಪ್ರಪನ್ನನಿಗೆ ಕಳೆದು ಹೋಗುತ್ತದೆಯೋ ಇಲ್ಲವೇ ಎಂಬುದು. ಹಿಂದೆ ತಮೇವ ಶರಣಂಗಚ್ಛ (ಗೀ. ೧೮-೬೨) ಎಂಬಲ್ಲಿ ಕಳೆಯುತ್ತವೆಂದೇ ಉಪಪಾದಿಸಲ್ಪಟ್ಟಿತು. ಆರ್ತನಿಗೇನೋ ಕಳೆದುಹೋಗುತ್ತದೆಂಬುದನ್ನು ಒಪ್ಪಬಹುದು. ದೃಪ್ತನಿಗೆ ಹೇಗೆ ಎಂದರೆ ದೇಹಾವಸಾನಾನಂತರ ಮೋಕ್ಷವನ್ನು ಅಪೇಕ್ಷಿಸುವವನ ವಿಷಯದಲ್ಲಿ ಹೇಗೆ? ಎಂದರೆ ಹೇಳುವೆವು. ಪ್ರಾರಬ್ಧವು ಅನಭ್ಯುಪಗತ ಪ್ರಾರಬ್ಧವೆಂದೂ, ಅಭ್ಯುಪಗತವೆಂದೂ, ಎರಡು ವಿಧವು. ಮುಂದೆ ಅನುಭವಿಸಬೇಕಾದುದು ಅನಭ್ಯುಪಗತ ಪ್ರಾರಬ್ಧವು ಇದೂ ನಾಶವಾಗುತ್ತದೆ. ಏಕೆಂದರೆ ಈ ಪ್ರಪನ್ನನಿಗೆ ಪುನರ್ಜನ್ಮವಿಲ್ಲವು. ಅಭ್ಯುಪಗತ

ಪ್ರಾರಬ್ಧವು ಈ ದೇಹಮೂಲಕ ಅನುಭವಿಸಬೇಕಾದುದು ; ಇದು ಎರಡು ವಿಧವು, ಅನುಕೂಲ ಪ್ರತಿಕೂಲ ರೂಪವಾಗಿ ಸುಖದುಃಖಗಳಿಗೆ ಹೇತುವಾಗಿರುವುವು. ಇವುಗಳಲ್ಲಿ ದೃಪ್ತಪ್ರಪನ್ನನಿಗೆ ಅನುಕೂಲಪ್ರಾರಬ್ಧವೂ ಸಮ್ಮತವೇ; ಆದರೆ ಆ ಸುಖೋಪಭೋಗಗಳಲ್ಲಿ ಆತನು ಲಿಪ್ತನಾಗಿರಕೂಡದು. ಈಗ ಪ್ರಶ್ನೆ ಏನೆಂದರೆ ಪ್ರತಿಕೂಲ ಪ್ರಾರಬ್ಧವು ದುಃಖಕ್ಕೆ ಕಾರಣವಾಗಿರುವದು, ಅದು ತೊಲಗುತ್ತದೆಯೋ ಇಲ್ಲವೇ?ಎಂಬ ಪ್ರಶ್ನೆಯಲ್ಲಿ ಇದೂ ತೊಲಗುತ್ತದೆ;ಅದಕ್ಕಾಗಿ ಶರಣಾಗತಿಯನ್ನನುಷ್ಠಿಸಿದರೆ ಎಂದು "ತಮೇವ ಶರಣಂ ಗಚ್ಛ"ಎಂಬಲ್ಲಿ ಹಿಂದೆಯೇ ಉಪಪಾದಿಸಲ್ಪಟ್ಟಿರುತ್ತದೆ "ಸರ್ವ ಪಾಪೇಭ್ಯಃ" ಎಂಬಲ್ಲಿ ಇದೂ ಸೇರಿತೆಂದು ಭಾವಿಸತಕ್ಕದ್ದು (ಗೀ ೧೮-೬೬) ಅಲ್ಲಿ ಸರ್ವಾನಿಷ್ಟ ನಿವೃತ್ತಿಯನ್ನೂ ಹೊಂದಿ, ಇಷ್ಟಪ್ರಾಪ್ತಿಯಾದ ಮೋಕ್ಷಸುಖವನ್ನು ಹೊಂದುವಿ ಎಂದು ಹೇಳಲ್ಪಟ್ಟಿರುತ್ತದೆ. ಆದುದರಿಂದಲೇ ಪ್ರಾಜ್ಞರು "ಸಾಧ್ಯಭಕ್ತಿಸ್ತು ಸಾಹನ್ತ್ರೀ ಪ್ರಾರಬ್ಧಸ್ಯಾಪಿ ಭೂಯಸೀ" ಎಂದು ಹೇಳಿರುತ್ತಾರೆ. ಇಲ್ಲಿ ಸಾಧ್ಯಭಕ್ತಿ ಶಬ್ದವು "ಸಾಧ್ಯಾ ಭಕ್ತಿರ್ಯಯಾಸಾ" ಎಂಬ ವ್ಯುತ್ಪತ್ತಿಯ ಮೂಲಕ ಶರಣಾಗತಿಯನ್ನು ಬೋಧಿಸುತ್ತದೆ. ಹಾಗೆಯೇ ಕ್ಷಮಾಷೋಡಶಿಯ ಶ್ಲೋಕವಾದ "ದೇವ ತ್ವಾಂ ಶರಣಂ ಪ್ರಪನ್ನಮಪಿ" ಎಂಬ ಶ್ಲೋಕದಲ್ಲೂ ದುಃಖವನ್ನುಂಟುಮಾಡುವ ಪ್ರಾರಬ್ಧವೂ ಕೂಡ ತೊಲಗುತ್ತದೆಂದು ಪರಮ ಭಾಗವತರು ಉಪಪಾದಿಸಿರುತ್ತಾರೆ. ಇದು ದೃಪ್ತ ಪ್ರಪನ್ನನ ವಿಷಯವು. ಆರ ಪ್ರಪನ್ನನಾದರೆ ಪುಣ್ಯಪಾಪರೂಪಗಳಾದ ಎರಡು ವಿಧ ಪ್ರಾರಬ್ಧಗಳೂ ಒಡನೆಯೇ ತೊಲಗುತ್ತವೆ

ಹಿಂದೆ ಗುಹ್ಯತಮವಾದ ಸಾರಭೂತವಾದ ಹಿತೋಪದೇಶವನ್ನು "ಮನ್ಮನಾಭವ ಮದ್ಭಕ್ತಃ" ಎಂದು ಮಾಡಿದರು. ಅದನ್ನು ಆರಂಭಿಸುವುದಕ್ಕೆ ಮೊದಲು ಈ ಶರಣಾಗತಿಯನ್ನು ಅನುಷ್ಠಿಸಿದರೆ, ಕರ್ಮಯೋಗಾನುಷ್ಠಾನ ಬಲದಿಂದಲೂ ಶ್ರೀ ಕೃಷ್ಣಭಗವಂತನ ಅನುಗ್ರಹದಿಂದಲೂ ಭಕ್ತಿಯೋಗಾರಂಭಕ್ಕೆ ಪ್ರತಿಬಂಧಕಗಳಾದ ಸಮಸ್ತ ಪಾಪಗಳೂ ತೊಲಗುತ್ತವೆಂಬ ಭಾವವು. ಆದರೆ ಈ ವೇಳೆ ಉದಾಹರಿಸಿದ ಪ್ರಮಾಣಗಳೆಲ್ಲಾ ಉಪಾಯಾನುಷ್ಠಾನ ಪ್ರತಿಬಂಧಕಗಳನ್ನೂ ಹೋಗಲಾಡಿಸುತ್ತವೆ ಎಂದು ಹೇಳಿರುವಾಗಲೂ ಮತ್ತು ಇದೇ ಗ್ರಂಥದಲ್ಲೇ ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ ಎಂದು ಪಾಪನಿವರ್ತಕಗಳೆಂದೂ, ಹೇಳಿರುವಾಗ ಈ ಶರಣಾಗತಿ ಬೇರೆ ಏತಕ್ಕೆ? ಎಂದರೆ ಜಡಸ್ವಭಾವ ಕರ್ಮಾನುಷ್ಠಾನಗಳಿಂದ ಯಾವ ಫಲವೂ ದೊರೆಯುವುದಿಲ್ಲವು. ಭಗವದನುಗ್ರಹ ಸಂಪಾದಕಗಳಾಗಿ ಅವು ಪಾಪನಿವಾರಕಗಳು. ಅಂತಹ ಭಗವದನುಗ್ರಹವು ಕ್ಷಿಪ್ರದಲ್ಲಿ ಒದಗುವದಕ್ಕಾಗಿ ಶರಣಾಗತಿಯೂ ಅವಶ್ಯಕವೆಂಬ ಭಾವವು. ಸರ್ವಲೋಕ ಶರಣ್ಯತ್ವಕ್ಕೆ "ವಧಾರ್ಹಮಪಿ ಕಾಕುತ್ಸ್ಥಃ ಕೃಪಯಾ ಪರ್ಯಪಾಲಯತ್" (ಶ್ರೀ ರಾ. ಸುಂ. ೩೯ ೩೮) ಎಂದು ಹೇಳಿರುವಹಾಗೆ, ಕೃಪಾಗುಣದ ಮಾಹಾತ್ಮ್ಯವಿಲ್ಲದಿದ್ದರೆ ಮಹಾಪರಾಧಿಯಾದ ಶರಣಾಗತನನ್ನು ಸಂರಕ್ಷಿಸಲು ಸಾಧ್ಯವಿಲ್ಲವಾಗುತ್ತದೆ. ಕಾಕನು ಮಹಾಪರಾಧಿಯು; ಅಂತವನೂ ಕೂಡ ಶರಣಾಗತನಾದುದರಿಂದ ರಕ್ಷಿಸಲ್ಪಟ್ಟಿರುವದು ಪರಮ ಕರುಣೆಯ ವೈಭವವಾದುದರಿಂದ ಮಾಮೇಕಂ ಎಂಬುದರಿಂದ ದ್ಯೋತಿತವಾದ ಅರ್ಥದಲ್ಲಿ ಪರಮಕಾರುಣಿಕಂ ಎಂದು ಪೃಥಮತಃ ಹೇಳಲ್ಪಟ್ಟಿತು. ಈ ಕರುಣೆಯು ಮಾತ್ರವಿಲ್ಲದಿದ್ದರೆ ಮಿಕ್ಕ ಎಲ್ಲಾ ಭಗವಂತನ ಕಲ್ಯಾಣಗುಣಗಳೆಲ್ಲಾ "ದೋಷಾಭವೇಯುರೇತೇ" ಎಂದು ಶ್ರೀವೇದಾಚಾರ್ಯರು ಹೇಳಿರುತ್ತಾರೆ (ದಯಾಶತಕ. ೫.) ಈ ದಯೆಯ ಪರೀವಾಹವೇ "ದೋಷೋಯದ್ಯಪಿ ತಸ್ಯಸ್ಯಾತ್ಸತಾಮೇತದಗರ್ಹಿತಂ" ಎಂದೂ "ಯದಿವಾರಾವಣಸ್ಸ್ವಯಂ" ಎಂದೂ ಶ್ರೀ ರಾಮಚಂದ್ರಪ್ರಭುವನ್ನು ಹೇಳುವಹಾಗೆ ಮಾಡಿತು. ಹೀಗೆ ಕಾರುಣ್ಯ ಪಾರಮ್ಯವಿರುವದರಿಂದಲೇ, ಅನಾಲೋಚಿತ ವಿಶೇಷಾ ಶೇಷಲೋಕ ಶರಣ್ಯನೆಂಬ ಬಿರುದು ಶ್ರೀ ಕೃಷ್ಣಭಗವಾನರವರಿಗೆ ಸಲ್ಲುತ್ತದೆಂದು ತೋರಿಸಿರುತ್ತಾರೆ. ಹಾಗೆಯೇ ಶ್ರುತಿಯು ಹೇಳು

ತ್ತದೇನೆಂದರೆ - **ಸರ್ವಸ್ಯ ಪ್ರಭು ನಿಯಾಶಾಸಂ ಸರ್ವಸ್ಯ** ಶರಣಂ ಸುಹೃತ್ (ಶ್ವೇತಾ ೩ ೧೭) ಸಮಸ್ತರಿಗೂ ಶೇಷಿಯಾಗಿ ಪ್ರಭುವು ನಿಯಾಮಕನು, ಸರ್ವರಿಗೂ ಸದ್ಗತಿಗೆ ಉಪಾಯವು, ಸರ್ವರಿಗೂ ಪ್ರಿಯಸುಹೃತ್ತು ಎಂಬರ್ಥವು. ಹಾಗಯೇ "**ಸರ್ವಲೋಕ ಶರಣ್ಯಾಯ ರಾಘವಾಯ**" ಎಂಬ ವಿಭೀಷಣವಾಕ್ಯವಾಗಿ ಮಹರ್ಷಿಪ್ರಯೋಗವಿರುತ್ತದೆ. **ವಿಭೀಷಣೋ ವಾ ಸುಗ್ರೀವ ಯದಿ** ವಾ **ರಾವಣಸ್ಸ್ವಯಮ್**" ಎಂಬ ಶ್ರೀ ರಾಮಚಂದ್ರಪ್ರಭುವಿನ ವಾಕ್ಯವಿರುತ್ತದೆ. ಯಾವಾಗ ಶರಣವನ್ನು ಹೊಂದಿದನೋ ಆಗ ಆತನು ಎಂತವನೇ ಆಗಲಿ, ರಕ್ಷಣೀಯನು. **ನಜಾತಿ ಭೇದಂ ನಕುಲಂ ನಲಿಙ್ಗಂ** ನಗುಣಕ್ರಿಯಾಃ । **ನದೇಶ ಕಾಲೌ ನಾವಸ್ಥಾಂ ಯೋಗೋಹ್ಯಯ** ಮಪೇಕ್ಷ**ತೇ**" ಈ ಪ್ರಪದನ ರೂಪಯೋಗವು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಪಂಚಮ ಜಾತಿಭೇದದ ಉತ್ಕೃಷ್ಟತೆ ನಿಕೃಷ್ಟತೆಯನ್ನಾಗಲಿ ಕುಲದ ತಾರತಮ್ಯವನ್ನಾಗಲಿ ಸ್ತ್ರೀಪುರುಷಭೇಧವನ್ನಾಗಲಿ ಅಪೇಕ್ಷಿಸುವದಿಲ್ಲವು. ಆ ಕಾರಣದಿಂದಲೇ **ಅನಾಲೋಚಿತ ವಿಶೇಷಾಶೇಷಲೋಕಶರಣ್ಯ** ಎಂಬ ಪ್ರಯೋಗವು. ಆದರೆ ಈ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಾದಿಗಳು ತ್ರಿವರ್ಣದವರಿಗೆ ಮಾತ್ರವೇ ಅಲ್ಲವೇ ? ಈ "**ಅನಾಲೋಚಿತ ಇತ್ಯಾದಿ** ಪ್ರಯೋಗವು ಹೇಗೆ ಕೂಡುತ್ತದೆ? ಎಂದರೆ, ಈ ಎರಡನೆಯ ಯೋಜನೆಯಲ್ಲಿ ಅನುಗ್ರಹಿಸಿದರ್ಥವು ಭಕ್ತಿಯೋಗನಿಷ್ಠರಿಗೆ ಮಾತ್ರವೇ ಅನ್ವಯಿಸುವುದಿಲ್ಲವು. ಅಶಕ್ತನಾಗಿಯೂ ವಿಳಂಬವನ್ನು ಸಹಿಸದ ಆರ್ತನಿಗೂ ಸಹ ಸ್ವತಂತ್ರಪ್ರಪತ್ತಿಯನ್ನು ಅನುಷ್ಠಿಸಬಹುದೆಂಬ ಅರ್ಥವೂ ದ್ಯೋತಿತವಾದುದರಿಂದ ಈ ಪ್ರಪತ್ತಿಮಾರ್ಗದಲ್ಲಿ ಸರ್ವರಿಗೂ ಅಧಿಕಾರವಿರುವದರಿಂದ "**ಅನಾಲೋಚಿತಂ** ಇತ್ಯಾದಿ ಪ್ರಯೋಗವು. ಈ ಲಘೂಪಾಯವು ಐದು ಅಙ್ಗಗಳಿಂದ ಕೂಡಿ ಸಕೃದನುಷ್ಠೇಯ ಯವು. ಹೀಗೆ ದೋಷಗಳನ್ನು ಆಶ್ರಿತನಲ್ಲಿ ಪರಿಗಣಿಸದೆ ಇರುವದರಿಂದಲೇ **ಆಶ್ರಿತ ವಾತ್ಸಲ್ಯ ಜಲಧಿಂ** ಎಂಬ ಪ್ರಯೋಗವು. ಆದುದರಿಂದಲೇ "**ವಿದಿತಸ್ಸಹಿಧರ್ಮಜ್ಞಃ ಶರಣಾಗತ ವತ್ಸಲಃ** । **ತೇನ ಮೈತ್ರೀ ಭವ**ತು **ತೇ ಯದಿ** ಜೀವಿತು ಮಿಚ್ಛಸಿ । **ಪ್ರ**ಸಾದ**ಯಸ್ವ** ತ್ವಂ **ಚೈ**ನಂ **ಶ**ರಣಾ**ಗತವತ್ಸ**ಲಂ" ಎಂಬದಾಗಿ ಶ್ರೀರಾಮನಲ್ಲಿ ಶರಣಾಗತಿಯನ್ನು ಮಾಡು ಕ್ಷಮಿಸುವನು, ನಿನ್ನ ದೋಷವನ್ನು ನೋಡುವದಿಲ್ಲವು ಎಂದು ರಾವಣನಿಗೆ ಸೀತೆಯ ಪರಮಹಿತೋಪದೇಶವು. ವಾತ್ಸಲ್ಯವಿರುವದರಿಂದಲೇ ಆಶ್ರಿತನ ದೋಷವು ಪರಿಗಣಿಸುವದಿಲ್ಲವು. **ಕಥಂಚಿ ದುಪಕಾರೇಣ ಕೃತೇನೈಕೇನ** ತುಷ್ಯತಿ । **ನಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ?**" ಇಲ್ಲಿ ಶರಣಾಗತಿಯನ್ನು ಕಥಂಚಿದುಪಕಾರವೆಂದು ಭಾವಿಸುವನೆಂದೂ, ಹಾಗೆ ಆಶ್ರಯಿಸಿದನಂತರ ಆತನ ಶತಾಪರಾಧಗಳನ್ನೂ ಸ್ಮರಿಸುವನಲ್ಲವೆಂದೂ, ಹೇಳಲ್ಪಟ್ಟಿರುತ್ತದೆ. **ವ್ರಜ** ಎಂಬ ಶಬ್ದವು ಗತ್ಯರ್ಥದಲ್ಲಿ ಪ್ರಯೋಗಿಸಿರುವದರಿಂದ ಬುದ್ಧ್ಯರ್ಥವನ್ನು ಸೂಚಿಸುವದರಿಂದ ಪ್ರಥಮಯೋಜನೆಯಲ್ಲಿ ಅನುಸಂಧಾನಮಾಡು ಎಂಬರ್ಥವು ವ್ಯಕ್ತಪಡುವದರಿಂದ, **ವ್ರಜ** ಎಂದರೆ **ಅನುಸಂಧತ್ಸ್ವ** ಎಂದು ವ್ಯಾಖ್ಯಾನಮಾಡಿದರು.

ಈ ಸಾರಭೂತಾರ್ಥವಾದ ದ್ವಿತೀಯ ಯೋಜನೆಯಲ್ಲಿಯಾದರೋ ಶರಣಾಗತಿಯೇ ಸ್ವತಃ ಉಪಾಯವಾಗಬೇಕಾದರೆ "**ರಕ್ಷಿಷ್ಯತೀತಿ ವಿಶ್ವಾಸಃ**" ಎಂದು ಹೇಳಿರುವ ಮುಖ್ಯವಾದ ಅಂಗವಾದ ಮಹಾ ವಿಶ್ವಾಸದಿಂದ ಕೂಡಿದ ಅಧ್ಯವಸಾಯವನ್ನು ಪ್ರಕಟಿಸುವ ಬುದ್ಧಿವಿಶೇಷವನ್ನು ತಿಳಿಸುವುದಕ್ಕಾಗಿಯೇ **ವ್ರಜ** ಎಂದರೆ **ಪ್ರಪದ್ಯಸ್ವ** ಎಂದು ವ್ಯಾಖ್ಯಾನಮಾಡಿರುತ್ತಾರೆ. **ಅಹಂ ತ್ವಾಂ** ಎಂದು ಎರಡು ಪದಗಳನ್ನೂ ಒಟ್ಟಿಗೆ ಸೇರಿಸುವದರಿಂದ ನಾನು ಸರ್ವಜ್ಞನು ನೀನು ಅಜ್ಞನು; ನಾನು ಸರ್ವಶಕ್ತನು ನೀನು ಅಶಕ್ತನು, ನೀನು ದೈನ್ಯದಿಂದ ಇರುವವನು, ನಾನು ಸ್ವತಂತ್ರನು ನೀನು ನನಗೆ ಸರ್ವವಿಧದಲ್ಲೂ ಅಧೀನನು ನಾನು ಪರಮ ಕಾರುಣಿಕನು ನೀನು

ಕರುಣಿಸೆಂದು ಪ್ರಾರ್ಥನೆಯಲ್ಲಿರುವನು, ಇತ್ಯಾದನೇಕ ಭಾವಗಳು ತಾರತಮ್ಯದಿಂದ ತೋರಿಬರುವದಕ್ಕಾಗಿ ಎರಡು ಪದಗಳೂ ಒಟ್ಟಿಗೆ, ಶ್ರುತಿಯು "ಜ್ಞಾಜ್ಞೌ ದ್ವಾವಜೌ ಈಶನೀಶೌ" ಎಂದು ಪ್ರಯೋಗಿಸಿರುವ ಹಾಗೆ ಉಪಯೋಗಿಸಲ್ಪಟ್ಟಿವೆ. ಈಗ ಈ ಭಕ್ತಿಯೋಗಾರಂಭಕ್ಕೆ ಪ್ರತಿಬಂಧಕಗಳಾದ ಸರ್ವಪಾಪಗಳನ್ನೂ ಅವವುಗಳಿಗೆ ಶಾಸ್ತ್ರಗಳಲ್ಲಿ ವಿಹಿತಗಳಾದ ಪ್ರಾಯಶ್ಚಿತಗಳನ್ನು ಅನುಷ್ಠಿಸುವದು ಈ ಜನ್ಮದಲ್ಲೇ ಅಲ್ಪಕಾಲದಲ್ಲೇ ಸಾಧ್ಯವಿಲ್ಲದುದರಿಂದ, ಆ ಎಲಾ ಪಾಪಗಳೂ ಈ ಒಂದೇ ಪ್ರಾಯಶ್ಚಿತ್ತದ ಮೂಲಕ ತೊಲಗುತ್ತವೆ, ಅನುಷ್ಠಿಸು; ಅದು ಯಾವ್ಡುದೆಂದರೆ ನನ್ನನ್ನು ಉಪಾಯವಾಗಿ ಶರಣು ಹೊಂದು ಎಂದು ಹೇಳಿದರು; ಹೀಗೆ ಹೇಳಿದ ಶರಣಾಗತಿಯಿಂದಲೇ ಯಾವಯಾವ ಇಷ್ಟಾರ್ಥಪ್ರಾಪ್ತಿಗಾಗಿ ಶೋಕಿಸುವನೋ, ಆಯಾ ಇಷ್ಟಾರ್ಥಗಳನ್ನೆಲ್ಲಾ, ಉಂಟುಮಾಡುವೆನು, ನನ್ನಲ್ಲಿ ಪ್ರಪದನವನ್ನು ಅನುಷ್ಠಿಸು ಎಂಬರ್ಥವೂ ಇದರಿಂದ ಸೂಚಿತವು. ಹೀಗೆ ಎರಡನೆಯ ಯೋಜನೆಯು ಭಾಷ್ಯವು ಈ ಅರ್ಥವನ್ನು ಸೂಚಿಸುವದರಿಂದ ಎರಡು ವಿಧೋಪಾಯಗಳಾದ ಭಕ್ತಿ ಪ್ರಪತ್ತಿಗಳಿಗೂ ಅನ್ವಯಿಸುತ್ತದೆ. ಭಕ್ತಿಯೋಗವು ಸಿದ್ಧಿಸಬೇಕಲ್ಲಾ ಎಂದು ಶೋಕಿಸಿದರೆ ಅದೂ ಸಿದ್ಧಿಸುತ್ತದೆ. ಪಾಪನಿಬರ್ಹಣಮೂಲಕ ಮುಕ್ತಿ ಸಿದ್ಧಿಸಬೇಕಲ್ಲಾ ಎಂದು ಶೋಕಿಸಿದರೆ ಅದೂ ಸಿದ್ಧಿಸುತ್ತದೆ. ಆದುದರಿಂದಇಲ್ಲಿನ ಭಾಷ್ಯಕ್ಕೂ ಮತ್ತು ಶ್ರೀಯತಿವರ್ಯರು ಅನುಗ್ರಹಿಸಿರುವ ಪ್ರಪದನರೂಪ ಶರಣಾಗತಿಯ ಉಪಬ್ರಹ್ಮಣವಾದ ಶರಣಾಗತಿ ಗದ್ಯಕ್ಕೂ ಏನೊಂದೂ ವಿರೋಧವಿಲ್ಲವು. ಇದನ್ನು ಚೆನ್ನಾಗಿ ಗ್ರಹಿಸದೆ, ಕೆಲವರು ಶರಣಾಗತಿಗದ್ಯದಲ್ಲಿ ಅಂಗ ಶರಣಾಗತಿಯೇ ಉಪಪಾದಿತವೆಂದು ಭ್ರಮಿಸುವರು, ಏಕೆಂದರೆ ಅಲ್ಲಿ "ಪರಭಕ್ತಿ ಪರಜ್ಞಾನಪರಮಭಕ್ತಿಯುತಂ ಮಾಂ ಕುರುಷ್ವ" ಎಂಬ ಪ್ರಯೋಗವಿರುವುದರಿಂದ. ಪ್ರಪತ್ತಿನಿಷ್ಠನೂ ಕೂಡ ಭಕ್ತ್ಯುಪಾಯಕ್ಕೆ ಸಂಬಂಧವಿಲ್ಲದೇನೇ ತುಂಬಾ ಭಕ್ತಿಯಿಂದ ಭಜಿಸುವನಾದುದರಿಂದ ಆತನೂ ಪರಭಕ್ತಿ ಪರಜ್ಞಾನ ಪರಮಭಕ್ತಿಯುತನಾಗುವನೆಂದು ತಿಳಿಯತಕ್ಕದ್ದಾಗಿರುತ್ತದೆ. ಇಲ್ಲಿ ಅಹಂ ತ್ವಾ ಎಂಬ ಶಬ್ದಗಳಿಂದ ರಾಘವ ವಿಭೀಷಣರ ಹಾಗೆ, ರಕ್ಷಕ ರಕ್ಷ್ಯರೂಪ ಬೇಧವು ಸಿದ್ಧವಾಗಿರುವಾಗ ಕೆಲವರ ಭಾಷ್ಯದಲ್ಲಿ ನಾನೊಬ್ಬನೇ ಇರುವನು, ನನ್ನೊಬ್ಬನನ್ನೇ ಶರಣ ಹೊಂದು ಎಂದು ಹೇಳಿರುವದು ಹೇಗೆ ಸಮಂಜಸವಾಗುತ್ತದೋ ತಿಳಿಯಲಿಲ್ಲವು. ಈ ಶ್ಲೋಕವೇ ಕರ್ಮಯೋಗದ ಫಲವಾಗಿ ಹೇಳಲ್ಪಟ್ಟಿರುತ್ತದೆಂಬ ಅವತಾರಿಕೆಯೂ ಸಹ ಕೂಡುವದಿಲ್ಲವು. "ಸರ್ವಧರ್ಮಾ‌ನ್ ಪರಿತ್ಯಜ್ಯ" ಎಂದು ಸರ್ವಕರ್ಮಸ್ವರೂಪ ಸನ್ಯಾಸವು ಹೇಳಲ್ಪಟ್ಟಿತೆಂದು ಅರ್ಥಮಾಡಿದರೆ ತಾಮಸತ್ಯಾಗವಾಗುವದಿಲ್ಲವೇ ? ಆದುದರಿಂದ ಇದಕ್ಕೆ ಸಾತ್ವಿಕ ತ್ಯಾಗವೆಂಬುದೇ ಅಭಿಪ್ರಾಯವೆಂದು ಪ್ರಥಮ ವಿಧ ಭಾಷ್ಯದಲ್ಲಿ ಶ್ರೀ ಯತಿವರ್ಯರು ಪ್ರದರ್ಶಿಸಿರುತ್ತಾರೆ.

ಮಾಮೇಕಂ ಎಂಬಲ್ಲಿ ಮಾಂ ಎಂದರೆ ನಿರ್ವಿಶೇಷನಾದ ಚಿನ್ಮಾತ್ರನು ಎಂದು ಅರ್ಥಮಾಡಿದರೆ, ಬಾಲರೂ ಕೂಡ ನಗುವರು ಎಂದು ಗುರುಗಳು ಹೇಳಿರುತ್ತಾರೆ. ಏಕೆಂದರೆ ಅಂತಹ ನಿರ್ವಿಶೇಷನನ್ನು ಶರಣು ಹೊಂದುವದರಿಂದ ನಮಗೆ ಬೇಕಾದುದು ಏನೂ ಇಲ್ಲವಷ್ಟೇ. ಮಾಮೇಕಂ ಎಂಬಲ್ಲಿ ಏಕ ವೆಂಬ ಶಬ್ದದಿಂದಲೇ ಇತರ ದೇವತೆಗಳಿದ್ದಾರೆ, ಅವರೆಲ್ಲಾ ಅಶಕ್ತರಾದುದರಿಂದ ನನ್ನೊಬ್ಬನನ್ನೇ ರಕ್ಷಕನನ್ನಾಗಿ ವರಿಸು ಎಂಬರ್ಥವು ವ್ಯಕ್ತವಾಗಿ ತೋರುವದರಿಂದ ಪರಮಪುರುಷನಲ್ಲದೆ ಇನ್ನು ಯಾರೂ ಇಲ್ಲವೆಂಬ ವಾದವು ಹೇಗೆ ಸರಿಹೋಗುತ್ತದೆ ? ಇದರಿಂದ ಅಶಕ್ತರಾದ ಸರ್ವಾಧಿಕಾರಿಗಳಿಗೂ ಯೋಗ್ಯವಾದ ಶರಣಾಗತಿಯು ಇಲ್ಲಿ ಹೇಳಲ್ಪಟ್ಟಿತು. ಈ ಭರನ್ಯಾಸವು ಅನೇಕ ಶ್ರುತಿಸ್ಮೃತಿ ಪುರಾಣೇತಿಹಾಸ ಸಂಹಿತಾದಿಗಳಲ್ಲಿ ಹೇಳಲ್ಪಟ್ಟಿರುವದರಿಂದ ಸರ್ವಪಾಪನಿಬರ್ಹಣಕ್ಕೂ, ದಿವ್ಯ ವೈಕುಂಠಪ್ರಾಪ್ತಿಗೂ ಉಪಾಯವೆಂಬುದರಲ್ಲಿ ನಿಸ್ಸಂದೇಹವು. ಇದಕ್ಕೆ ಒಂದು ಅಂಗಿಯು, ಐದು ಅಂಗಗಳು. ಅಂಗಿಯು ಈ ಆತ್ಮಾವನ್ನು ಸರ್ವೇಶ್ವರನ

ಪಾದಾರವಿಂದದಲ್ಲಿ ಸಮರ್ಪಿಸೋಣವು. ಇದು "ಶರಣಂವ್ರಜ" ಎಂಬುದರಿಂದ ಹೇಳಲ್ಪಟ್ಟಿತು. ಐದು ಅಂಗಗಳು ಯಾವುವೆಂದರೆ—(೧) **ಆನುಕೂಲ್ಯಸ್ಯ ಸಙ್ಕಲ್ಪಃ** (೨) **ಪ್ರಾತಿಕೂಲ್ಯಸ ವರ್ಜನಂ**" ಇವೆರಡೂ ಪ್ರಥಮ ಪಾದದಲ್ಲಿ **ಸರ್ವಧರ್ಮಾನ್ ಪರಿತ್ಯಜ್ಯ** ಎಂಬಲ್ಲಿ ಹೇಳಲ್ಪಟ್ಟವು. **ಶರಣಂವ್ರಜ** ಎಂಬಲ್ಲಿ (೩) ನೆಯದಾದ ಮಹಾ ವಿಶ್ವಾಸವು **ವ್ರಜ** ಎಂಬಲ್ಲಿ ತೋರಿಬರುತ್ತದೆ. **ಶರಣಂ** ಎಂಬ ಶಬ್ದದಿಂದ ಉಪಾಯಾರ್ಥದಿಂದ ತೋರಿಬರುವ (೪) ನೆಯದಾದ **ಗೋಪ್ತೃ**ತ್ವ ವರಣವೂ, **ಮಾಮ್ ಏಕಂ** ಎಂಬುದರಿಂದ ಆಕಿಂಚನ್ಯ, ಅನನ್ಯಗತಿತ್ವಾನುಸಂಧಾನರೂಪವಾದ (೫) ನೆಯದಾದ ಕಾರ್ಪಣ್ಯವೂ ತೋರಿಬರುತ್ತವೆ. **ಮಾಮೇಕಂ** ಎಂಬಲ್ಲಿಯೂ ಅನನ್ಯಗತಿತ್ವ ವನ್ನು ಊಹಿಸಬಹುದು.

ಶ್ರೀ ಯತಿವರ್ಯರು, ಎರಡನೆಯ ಯೋಜನೆಯಲ್ಲಿ ಕರ್ಮಯೋಗಾದಿ ಪರಿಕರಗಳಿಂದ ಕೂಡಿದ ಭಕ್ತಿಯೋಗವನ್ನು ಅನುಷ್ಠಿಸುವದು ಕಷ್ಟವೇ ಎಂದು ಶೋಕಿಸುತ್ತಿರುವ ಅರ್ಜುನನಿಗೆ ಈ ಸುಖ ವಾಗಿ ಸುಲಭವಾಗಿ ಸಕೃತ್ಕರ್ತವ್ಯವಾಗಿರುವ ಭರನ್ಯಾಸವನ್ನು ಉಪದೇಶಿಸಿ ಸಮಾಧಾನವನ್ನು ಮಾಡಿದರೆಂದು ಹೇಳಿದರೆಂಬುದು ವ್ಯಕ್ತವು. ಆ ಸಂದರ್ಭದಲ್ಲಿ ತೋರಿಬರುವ ಅರ್ಥಗಳನ್ನೆಲ್ಲಾ ವಿಸ್ತಾರವಾಗಿ ಶ್ರೀ ದೇಶಿಕರವರು ರಹಸ್ಯತ್ರಯಸಾರವೆಂಬ ಗ್ರಂಥದ ಮೂರನೆಯ ರಹಸ್ಯವಾದ ಚರಮಶ್ಲೋಕಾಧಿಕಾರದಲ್ಲಿ ಉಪಪಾದಿಸಿರುವ ಅಭಿಪ್ರಾಯಗಳನ್ನು ಇಲ್ಲಿ ಸಂಗ್ರಹವಾಗಿ ಸೂಚಿಸುವೆವು.

**ಸರ್ವಧರ್ಮಾನ್ ಪರಿತ್ಯಜ್ಯ** - ಇಲ್ಲಿ ಧರ್ಮವು ಯಾವುದೆಂದರೆ ಅಭಿಮತ ಸಾಧನೆಗೆ ಉಪಯುಕ್ತವಾದ ಶಾಸ್ತ್ರಪ್ರಕ್ರಿಯೆಯು. ಅದರಿಂದ ಈ ಸಂದರ್ಭದಲ್ಲಿ ಕರ್ಮಯೋಗ ಜ್ಞಾನಯೋಗಗಳಿಂದ ಸಹಕೃತವಾದ ಭಕ್ತಿಯೋಗಾದಿಗಳು. ಇಲ್ಲಿ ಬಹುವಚನವಿರುವದರಿಂದ, ಭಕ್ತಿಯೋಗಕ್ಕೆ ಕರ್ಮಯೋಗಾದಿಗಳು ಅಂಗವಾಗಿ ಹೇಳಲ್ಪಟ್ಟವೆಂದಾಗಲಿ, ಅಥವಾ ಭಕ್ತಿಯೋಗವಾದ ಬ್ರಹ್ಮವಿದ್ಯೆಯು ೩೨ ವಿಧವಾದುದರಿಂದಾಗಲಿ ಬಹುವಚನವೆಂದು ಭಾವಿಸಬಹುದು. ಇವುಗಳ ಪರಿತ್ಯಾಗ ಏತರಿಂದ ಎಂದರೆ ದುಸ್ತರವಾಗಿ ಅಶಕ್ತತೆಯಿಂದಾಗಲಿ ಅಥವಾ ಅಧಿಕಾರವಿಲ್ಲದುದರಿಂದಾಗಲಿ ಉಂಟಾಗಬಹುದು. "**ಅತೋಽಶಕ್ತ್ಯಾಧಿಕಾರತ್ವಮಾಕಿಂಚನ್ಯ ಪುರಸ್ಕ್ರಿಯಾ । ಅನಙ್ಗಭಾವೋ ಧರ್ಮಾಣಾಂ ಮುಶಕ್ಯಾರಂಭವಾರಣಂ । ತತ್ಪ್ರತ್ಯಾಶಾ ಪ್ರಶಮನಂ ಬ್ರಹ್ಮಾಸ್ತ್ರನ್ಯಾಯಸೂಚನಂ । ಸರ್ವಧರ್ಮಪರಿತ್ಯಾಗ ಶಬ್ದಾರ್ಥಾಸ್ಸಾಧು ಸಮ್ಮತಾಃ ॥** ಎಂಬ ಕಾರಿಕೆಗಳಿಂದ ಈ ಪ್ರಥಮಪಾದದಲ್ಲಿ ತೋರುವ ೬ ಅರ್ಥಗಳನ್ನು ಸಂಗ್ರಹಿಸಿರುತ್ತಾರೆ.

೧. **ಅಶಕ್ತ್ಯಾಧಿಕಾರತ್ವಂ** – ಕಷ್ಟತರವಾಗಿ ಕರ್ಮಯೋಗಾದಿ ಅನುಷ್ಠಾನ ಪರಂಪರೆಗಳಿಗೆ ಅಶಕ್ತತೆಯಿಂದ ಅವುಗಳನ್ನು ಪರಿತ್ಯಾಗಮಾಡಿ, ಎಂದರೆ ಭಕ್ತಿಯೋಗವು ದುಷ್ಕರವೆಂದು ನೀನು ಶೋಕಿಸುತ್ತಿರುವದರಿಂದ ಅವೆಲ್ಲವನ್ನೂ ಬಿಟ್ಟು ಎಂಬರ್ಥವು.

೨. ನಿನಗೆ ಬೇರೇ ವಿಧಿಗಳಿಂದ ನಿತ್ಯನೈಮಿತ್ತಿಕಾನುಷ್ಠಾನವು ವಿಹಿತವಾದುದರಿಂದ, ಅವುಗಳನ್ನು ಅಂಗಗಳೆಂದು ಭಾವಿಸದೆ, ಅವುಗಳನ್ನು ತ್ಯಜಿಸಿ ಎಂಬರ್ಥವು. ಇದು **ಅನಙ್ಗಭಾವೋ ಧರ್ಮಾಣಾಂ** ಎಂಬುದರ ತಾತ್ಪರ್ಯವು. **ಸರ್ವಧರ್ಮಾನ್ ಪರಿತ್ಯಜ್ಯ** ಎಂಬಲ್ಲಿ ತ್ಯಜ ಎಂಬುದಕ್ಕೆ ಲ್ಯಪ್ ಪ್ರತ್ಯಯ ಸೇರಿರುತ್ತದೆ. ಈ ಲ್ಯಪ್ಪಿಗೆ ಎರಡು ವಿಧವಾಗಿ ಅರ್ಥವನ್ನು ಹೇಳಬಹುದು. ೧. ಅನುವಾದ, ೨. ವಿಧಿ. ಹೇಗೆಂದರೆ? **ಸರ್ವಧರ್ಮಾನ್ ಪರಿತ್ಯಜ್ಯ**–ಸಮಸ್ತ ಬ್ರಹ್ಮವಿದ್ಯೆಗಳು ಬಹು ದುಷ್ಕರವೆಂಬ ಭಾವದಿಂದ, ಶರಣಂ ವ್ರಜ ಎಂಬದಾಗಿ ವಿಧಿಯು. ಆಗಲಿ ಈ ಶರಣಾಗತಿರೂಪ ವಿಧಿಗೆ ಸೇರಿದವೂ ಕೂಡ ಪ್ರಪತ್ತಿಗೆ ಅಂಗವಾಗುವದಿಲ್ಲವೋ? ಎಂದರೆ ಅಂಗವಾಗುವದಿಲ್ಲವೆಂದು ಇಲ್ಲಿ ಹೇಳಲ್ಪಟ್ಟಿತು. ಅನುವಾದವೇ ಅಲ್ಲವು, ವಿಧಿ ಎನ್ನುತ್ತೇವೆ ಎಂದರೆ, ಆ ಬ್ರಹ್ಮವಿದ್ಯೆಗಳು ಕಷ್ಟಸಾಧ್ಯವೆಂಬ ಆಕಿಂಚನ್ಯವು ಪ್ರದರ್ಶಿಸಲ್ಪಡುವದರಿಂದ

ಆಗಲೂ ಆ ಅಭಿಪ್ರಾಯವು ಶಾಸ್ತ್ರಸಮ್ಮತವಾದುದು. **ಸ್ನಾತ್ವಾ ನಿತ್ಯ ನೈಮಿತ್ತಿಕ ಭಗವದಾರಾಧನಾದೀನ್ ಕುರು** ಎಂಬಲ್ಲಿ ಹೇಳಿರುವಹಾಗೆ **ಸ್ನಾತ್ವಾ** ಎಂಬುದು ವಿಧಿಯಾಗಬಹುದು. ಆದರೆ ಇಲ್ಲಿ ಸರ್ವಶಬ್ದವು ಇರುವದರಿಂದ ಈ **ಪರಿತ್ಯಜ್ಯ** ಎಂಬ ವಿಧಿಯ ಮೂಲಕ ಸಮಸ್ತ ನಿತ್ಯ ನೈಮಿತ್ತಿಕ ಭಗವದಾರಾಧನಾದಿಗಳ ಸ್ವರೂಪತ್ಯಾಗವು ವಿಧಿಸಲ್ಪಟ್ಟಿತೆಂದು ಅರ್ಥ ಮಾಡುತ್ತೇವೆ ಎಂದರೆ ಅನೇಕ ಶ್ರುತಿ ಸ್ಮೃತಿ ಇತಿಹಾಸ ಪುರಾಣೋಕ್ತಿಗಳಿಗೆಲ್ಲಾ ವಿರುದ್ಧವು. ಹೇಗೆಂದರೆ "**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಗಂ ಸಮಾಃ**" (ಈಶಾವಾಸ್ಯ) "**ಅಹರಹಸ್ಸಂಧ್ಯಾಮುಪಾಸೀತ**" "ಮುನೀಷೀ ವೈದಿಕಾಚಾರಂ ಮನಸಾಪಿ ನ **ಲಂಘಯೇತ್**"ಇತ್ಯಾದಿಗಳಿಗೆ ವಿರೋಧವು. ಇದೇ ಗೀತೆಯಲ್ಲೇ "**ಕುರು ಕರ್ಮೈವ ತಸ್ಮಾತ್ತ್ವಂ**" "**ಯಜ್ಞೋದಾನ ತಪಶ್ಚೈವ ನ ತ್ಯಾಜ್ಯಂ** ಕಾರ್ಯ ಮೇವತತ್" "**ಸ್ವೇಸ್ವೇ** ಕರ್ಮಣ್ಯಭಿರತಃ **ಸಂಸಿದ್ಧಿಂ ಲಭತೇನರಃ**" "**ಸ್ವಕರ್ಮಣಾ** ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ" ಇತ್ಯಾದ್ಯನೇಕ ಪ್ರಮಾಣಗಳಿಗೂ ವಿರೋಧವು. ಆದುದರಿಂದ ಇತರರು ಹೇಳುವ ಅಭಿಪ್ರಾಯಗಳು ಶಾಸ್ತ್ರಸಮ್ಮತವಲ್ಲವು.

೩. **ಅಂಕಿಚನ್ಯಪುರಸ್ಕ್ರಿಯಾ**—ಭಕ್ತಿಯೋಗಕ್ಕೆ **ಸೇರಿದ** ಅನುಷ್ಠಾನಗಳಲ್ಲಿ ತನಗೆ ಯೋಗ್ಯತೆ ಇಲ್ಲವೇ ಎಂಬ ಕಾರಣದಿಂದ ಅವುಗಳನ್ನು ಪರಿತ್ಯಾಗಮಾಡಿ ಎಂಬ **ಭಾ**ವವು. ಇದು **ಪರಿತ್ಯಜ್ಯ** ಎಂಬ ಲ್ಯಪ್ಪನ್ನು ವಿಧಿಯಾಗಿ ಭಾವಿಸುವದರಿಂದ ವ್ಯಕ್ತವು.

೪. **ಅಶಕ್ಯಾರಂಭವಾರಣಂ**-ನಿನಗೆ ಅಶಕ್ಯಗಳಾದ ಎಲ್ಲಾ ಪ್ರಯತ್ನವನ್ನೂ ಬಿಟ್ಟುಬಿಟ್ಟು; ಪಾಪಗಳು ಕಳೆಯಬೇಕಾದರೆ ಅವುಗಳಿಗೆ ಪ್ರಾಯಶ್ಚಿತ್ತರೂಪದಲ್ಲಿ ಅನೇಕ ವೈದಿಕ **ಧರ್ಮ**ಗಳು ಹೇಳಲ್ಪಟ್ಟಿವೆ. ಅವುಗಳನ್ನೆಲ್ಲಾ ಅನುಷ್ಠಿಸುವದು **ಸಾಧ್ಯ**ವಿಲ್ಲದುದರಿಂದ ಅವುಗಳನ್ನು ತ್ಯಾಗಮಾಡಿ ಈ ಸರ್ವ ಪ್ರಾಯಶ್ಚಿತ್ತರೂಪ ಭರನ್ಯಾಸವನ್ನು ಅನುಷ್ಠಿಸು ಎಂಬ ಭಾವವು.

೫. ಅಶಕ್ಯಗಳಾಗಿದ್ದರೂ, ಕೆಲವನ್ನಾದರೂ ಕಷ್ಟಪಟ್ಟಾದರೂ ಮಾಡುವೆನೆಂಬ ಆಶೆಯನ್ನು ತೊರೆದು ಆ ಧರ್ಮಗಳನ್ನು **ತ್ಯಜಿಸಿ** ಎಂಬುದು **ತತ್ಪ್ರತ್ಯಾಶಾಪ್ರಶಮನಂ** ಎಂಬುದರ ಅರ್ಥವು.

೬. ಹೀಗೆ ಉಪಾಯಾಂತರಗಳಲ್ಲಿ ಸ್ವಲ್ಪ ಭಾಗವನ್ನಾದರೂ ಆಶ್ರಯಿಸಿದರೆ, ಆಂಜನೇಯನಿಗೆ ಇಂದ್ರಜಿತುವಿನಿಂದ ಬ್ರಹ್ಮಾಸ್ತ್ರಬಂಧನವು ಹೇಗೆ ರಜ್ಜುಬಂಧದಿಂದ ಬಿಟ್ಟುಹೋಯಿತೋ, ಹಾಗೆ ಪ್ರಪದನ ಸಿದ್ಧಿಯು ಬಿಟ್ಟುಹೋಗುತ್ತದೆ. ಆದುದರಿಂದ ಆ ಸ್ವಲ್ಪ ಭಾಗವನ್ನೂ ಕೂಡ ಯತ್ನಿಸದೆ ಎಂಬುದು "**ಸರ್ವಧರ್ಮಾನ್ ಪರಿತ್ಯಜ್ಯ**" ಎಂಬುದರ **ಅರ್ಥ**ವು. ಇದರಿಂದ ದೇವಾತಾಂತರ **ಆಶ್ರಯಣ** ಧರ್ಮಗಳು ಅವಶ್ಯಕವಾಗಿ **ಬಿಡತಕ್ಕವೆಂದೂ** ಇಲ್ಲಿ ಹೇಳಲ್ಪಟ್ಟಿತು. ಹಾಗಾದರೆ ಗುರೂಪಸದನವನ್ನೂ ಬಿಡಬಹುದೋ ಎಂಬ ಸಂದೇಹದಲ್ಲಿ ಅದನ್ನು ಬಿಡತಕ್ಕದ್ದಲ್ಲವು; ಏಕೆಂದರೆ ಇದೇ ಗೀತೆಯಲ್ಲೇ "**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ । ಉಪದೇಕ್ಷ್ಯಂತಿ ತೇ ಜ್ಞಾನಂ** ಜ್ಞಾನಿನಸ್ತತ್ತ್ವ**ದರ್ಶಿನಃ**" ಒಂದು ವೇಳೆ ಸ್ವತಃ ಜ್ಞಾನ ತಿಳುವಳಿಕೆಯಿದ್ದರೂ, ಗುರುವು ಪುರುಷಕಾರ ರೂಪದಲ್ಲಿ ಅವಶ್ಯಕವಾದುದರಿಂದ, "**ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ । ಆಚಾರ್ಯವತ್ತಯಾ ಮುಕ್ತೌ** ತಸ್ಮಾದಾ**ಚಾರ್ಯವಾನ್ ಭವೇತ್** ಎಂಬಲ್ಲಿ ಹೇಳಿರುವ ಹಾಗೆ ಆಚಾರ್ಯನನ್ನಾಶ್ರಯಿಸುವದು ಅವಶ್ಯಕವು.

ಇಲ್ಲಿ **ಪರಿತ್ಯಜ್ಯ** ವೆಂಬಲ್ಲಿ **ಪರಿ** ಎಂಬ ಉಪಸರ್ಗದಿಂದ **ತೋರಿ**ಬರುವ **ಅರ್ಥವೇ**ನೆಂದರೆ:- ಸರ್ವಕಾಲದಲ್ಲೂ ಸರ್ವಪ್ರಕಾರದಿಂದ ಪ್ರಪನ್ನನಾಗುವ ತನಗೆ **ಯೋಗ್ಯತೆ** ಇಲ್ಲವೆಂಬ ನೈರಾಶ್ಯಾತಿಶಯವನ್ನು **ತೋರ್ಪಡಿ**ಸುತ್ತದೆ. ಇಲ್ಲಿ ಮುಖ್ಯವಾಗಿ ಸಂಗ್ರಹಿಸತಕ್ಕ **ವಿಷಯವೇ**ನೆಂದರೆ ಸ್ವವರ್ಣೋಚಿತ ನಿತ್ಯ ನೈಮಿತ್ತಿಕ ಧರ್ಮಗಳನ್ನು ಸ್ವರೂಪತಃ **ಬಿಡತಕ್ಕವೆಂಬ ಅರ್ಥವು** ಎಂದಿಗೂ **ಅಲ್ಲವು**. **ಭರನ್ಯಾಸ ನಿಷ್ಠನ ವಿಷಯದಲ್ಲಿ ಸಾತ್ವಿಕ ತ್ಯಾಗವು ಇಲ್ಲಿ ಹೇಳಲ್ಪಟ್ಟಿತೆಂದು ಭಾವಿಸುವದೂ**

ಯುಕ್ತವಲ್ಲವು. ಹಾಗೆ ಭಾವಿಸಿದರೆ ಭರನ್ಯಾಸಕ್ಕೂ ನಿತ್ಯನೈಮಿತ್ತಿಕಗಳು ಅಂಗಗಳೆಂದು ಹೇಳಿದಂತಾಗುತ್ತದೆ. ವಿಹಿತಕರ್ಮಗಳ ಸ್ವರೂಪತ್ಯಾಗವು ಇಲ್ಲಿ ಹೇಳಲ್ಪಡಲೇ ಇಲ್ಲವು. ಹಾಗೆ ಭಾವಿಸಿದರೆ ಅನೇಕ ಪ್ರಮಾಣಗಳಿಗೆ ವಿರುದ್ಧವಾಗುತ್ತದೆ. "**ಮನೀಷೀ ವೈದಿಕಾಚಾರಂ ಮನಸಾಪಿ ನಲಙ್ಘಯೇತ್** ಎಂದು ಹೇಳಲ್ಪಟ್ಟಿರುತ್ತದೆ.

ಇಲ್ಲಿ ಪರಿತ್ಯಜ್ಯ ಎಂಬುದರಿಂದ ಇನ್ನೊಂದು ಭಾವನೆಯೂ ಕೂಡ ಕೂಡದೆಂಬುದು ಸೂಚಿತವು. ಏನೆಂದರೆ – ಶರಣ್ಯನು ಹೇಗೆ ಈ ಆಶ್ರಿತನನ್ನು ರಕ್ಷಿಸುವದಕ್ಕೂ ಹೇತುವಾಗಿ ಪ್ರಧಾನ ಕರ್ತಾವೋ, ಕ್ರಿಯೆಯೂ ಕೂಡ ಹೇಗೆ ಪ್ರಾಧಾನ್ಯವೋ, ಹಾಗೆಯೇ ತಾನೂ ತನ್ನ ಕ್ರಿಯೆಯಾದ ಭರನ್ಯಾಸವೂ ಪ್ರಧಾನ ಹೇತುವೆಂದು ಕರ್ತೃತ್ವಾಭಿಮಾನವನ್ನೂ, ತನ್ನ ಪ್ರವೃತ್ತಿಯಲ್ಲಿ ಪ್ರಧಾನೋಪಾಯವನ್ನೂ ತ್ಯಾಗಮಾಡು ಎಂದೂ ಹೇಳಿದಂತಾಯಿತು.

"**ಮಾಮೇಕಂ** ಎಂದು ಸರ್ವೇಶ್ವರನಿಗೂ ಜೀವನಿಗೂ ಇರುವ ಸರ್ವಶಕ್ತತೆ ಅಶಕ್ತತೆಗಳನ್ನು ಪ್ರಕಟಿಸುವದಕ್ಕಾಗಿ ಒಟ್ಟಿಗೆ ಪ್ರಯೋಗವು; "**ಜ್ಞಾಜ್ಞೌ ದ್ವಾವಜಾ ಈಶನೀಶೌ** (ಶ್ವೇ ೧. ೯) **ದ್ವಾಸುಪರ್ಣಾ** (ಶ್ವೇ ೪-೬) "**ಉತ್ತಮಃ ಪುರುಷಸ್ತ್ವನ್ಯಃ**'(ಗೀ ೧೫-೧೭) ಇತ್ಯಾದಿಗಳು ಅನುಸಂಧೇಯಗಳು. ಇಲ್ಲಿ **ಮಾಂ** ಎಂಬ ಶಬ್ದವು **ನಾರಾಯಣ** ಶಬ್ದದಲ್ಲಿ ತೋರುವ ಮಹತ್ತಾದ ಆಶ್ರಯಣೋಚಿತವಾದ ಸೌಲಭ್ಯ ಸೌಶೀಲ್ಯ, ವಾತ್ಸಲ್ಯ ಕೃಪೌದಾರ್ಯಾದಿ ಗುಣಗಳುಳ್ಳವನು **ನಾನು** ಎಂಬದನ್ನು ಸೂಚಿಸುತ್ತದೆ. ಇಲ್ಲಿನ **ಏಕ** ಶಬ್ದದಿಂದ ೬ ಅರ್ಥಗಳು ತೋರಿಬರುತ್ತದೆಂದು ಹೇಳಲ್ಪಟ್ಟವೆ—"**ಪ್ರಾಪ್ಯಸ್ಯೇವ ಪ್ರಾಪಕತ್ವಂ ಸ್ವಪ್ರಾಧಾನ್ಯ ನಿವಾರಣಮ್ ಪ್ರಪತ್ತೇರ್ವ್ಯಾಜಮಾತ್ರತ್ವ ಮನ್ಯೋಪಾಯೈ ರನನ್ವಯಃ ॥ ತದಙ್ಗೈ ರಪ್ಯಸಂಬಂಧ ಸ್ಸರ್ವಸಾಧ್ಯೇಷ್ವಭಿನ್ನತಾ । ಇತ್ಥಮರ್ಥಂ ಷಡಾ ಚಾರ್ಯೈ ರೇಕಶಬ್ದಸ್ಯ ದರ್ಶಿತಾಃ**" ಎಂಬುದು ಈ ೬ ಅರ್ಥಗಳನ್ನು ಸಂಗ್ರಹವಾಗಿ ಬೋಧಿಸುವ ಕಾರಿಕೆಯು.

೧. **ಪ್ರಾಪಕನೂ, ಪ್ರಾಪ್ಯನೂ ನಾನೊಬ್ಬನೇ** ಎಂಬ **ಅಭೇದಾರ್ಥ**ವನ್ನು ಬೋಧಿಸುತ್ತದೆ. ಇಂತಹ **ಮಾಂ** ನನ್ನನ್ನು ಎಂಬರ್ಥವು.

೨. **ಸ್ವಪ್ರಾಧಾನ್ಯ ನಿವಾರಣಂ** - ಸ್ವಪ್ರಯತ್ನವೇನೂ ಇಲ್ಲಿ ಅಷ್ಟು ಮುಖ್ಯವಲ್ಲವು। ಮುಕ್ತಿದಾಯಕನಾದ ನಾನು ಪ್ರೀತನಾದರೇನೇ ನಿನಗೆ ಸಿದ್ಧಿಯಾದುದರಿಂದ ಇನ್ನು ಯಾವ ಪ್ರಯತ್ನವೂ ಬೇಕಿಲ್ಲದೆ ನನ್ನೊಬ್ಬನನ್ನೇ **ಶರಣಂವ್ರಜ** ಎಂಬರ್ಥವು. ಈ ಸಂದರ್ಭದಲ್ಲಿ **ಏಕಂ** ಎಂಬುದಕ್ಕೆ **ಮಾಮೇವ** - ನನ್ನನ್ನೇ ಎಂದು ಅವಧಾರಣಾರ್ಥವು. ಬ್ರಹ್ಮರುದ್ರೇಂದ್ರಾದಿ ದೇವತೆಗಳಿಗೂ ನಿನ್ನನ್ನು ಪಾಪಗಳಿಂದ ರಕ್ಷಿಸಿ ಮುಕ್ತಿ ಕೊಡುವ ಶಕ್ತಿಯಿಲ್ಲವೆಂಬ ಭಾವವು. ನನ್ನ ಪ್ರಯತ್ನವು ಯಾವುದೂ ಬೇಕಿಲ್ಲವೋ? ಸ್ವಪ್ರಾಧಾನ್ಯನಿವಾರಣ ಹೇಗೆ? ಸ್ವಪ್ರಯತ್ನವೂ ಅವಶ್ಯಕವೆಂದು ಹಿಂದೆ ಹೇಳಲ್ಪಟ್ಟಿತಲ್ಲಾ ? ಎಂದರೆ, ಸ್ವಪ್ರಯತ್ನವಾದ ಸಾಧ್ಯೋಪಾಯಕ್ಕೂ ಬೇಕಾದ ಕರಣ ಕಳೇಬರಯೋಗ, ವಿವೇಕಜ್ಞಾನ ಪ್ರವೃತ್ತಿ ಎಲ್ಲವೂ ಅತನ ಅಧೀನವು. ಸತ್ತಾ ಸ್ಥಿತಿ ನಿಯಮನಾದಿಗಳೆಲ್ಲವೂ ಆತನಿಂದಲೇ. ಹಾಗಾದರೆ ಈ ಸಾಧ್ಯೋಪಾಯವಾದ ಪ್ರಪದನ ತಾನೇ ಏತಕ್ಕೆ ? ಎಂದರೆ ಮಗುವು ಅಳದೆ ಸ್ತನ್ಯವು ಲಭಿಸಲಾರದಾದುದರಿಂದ, ಸಾಧ್ಯೋಪಾಯದ ಮೂಲಕ ಆತನೊಬ್ಬನನ್ನೇ ಆಶ್ರಯಿಸತಕ್ಕದ್ದು. ಅದೂ ಅಲ್ಲದೆ ಯಾವ ವ್ಯಾಜವೂ ಇಲ್ಲದೆ ರಕ್ಷಿಸಿದರೆ ಎಲ್ಲರನ್ನೂ ಸ್ವಾಮಿಯು ರಕ್ಷಿಸಬೇಕಾಗಿ ಬರುತ್ತದೆ. ಸ್ವಾಮಿಗೆ ವೈಷಮ್ಯವನ್ನು ಆರೋಪಿಸಬೇಕಾಗುತ್ತದೆ.

೩. ಆದುವರಿಂದ, **ಪ್ರಪತ್ತೇರ್ವ್ಯಾಜಮಾತ್ರತ್ವಂ**-ತಾಯಿಯಾದವಳೊಬ್ಬಳೇ ಸ್ತನ್ಯವನ್ನು ಕೊಡತಕ್ಕವಳಾಗಿ ಅಳುವ ವ್ಯಾಜದಿಂದ ಹೇಗೆ ಕೊಡುತ್ತಾಳೋ, ಹಾಗೆಯೇ ಮುಕ್ತಿಯನ್ನು ಕೊಡುವವನು ಮುಕುಂದನಾಗಿ, ಅತನು ಈ ವ್ಯಾಜಮಾತ್ರವಾದ ಭರನ್ಯಾಸದಿಂದಲೇ ಕೊಡ

ತಕ್ಕವನು. ಶರಣಾಗತಿಯು ಸಾಕ್ಷಾತ್ತಾಗಿ ಕೊಡಲಾರದಷ್ಟೇ, ಆದುದರಿಂದ ಅದು ವ್ಯಾಜ ಮಾತ್ರವೇ. ಕೊಡತಕ್ಕವನು ಶ್ರೀ ಕೃಷ್ಣಭಗವಾನ್ ಮಾತ್ರವೇ ಎಂಬುದು ಏಕಶಬ್ದದಿಂದ ಬೋಧಿತವು.

೪. ಅನ್ಯೋಪಾಯೈರನನ್ವಯಃ - ಉಪಾಯಾನ್ತರವಾದ ಕರ್ಮಯೋಗ ಜ್ಞಾನಯೋಗ ದಿಂದ ಸೇರಿದ ಭಕ್ತಿಯೋಗ ಸಂಬಂಧ ಬೇಕಿಲ್ಲವೆಂಬುದೂ ಏಕಶಬ್ದಾರ್ಥವು. ಭಕ್ತಿಯೋಗ ಕ್ಕಾದರೋ ಕರ್ಮಯೋಗಾದಿಗಳು ಅಙ್ಗವಾಗಿ ಬೇಕು. ಈ ಭರನ್ಯಾಸಾನುಷ್ಠಾನ ಮಾಡಿದವನು ಆಕಿಂಚನನು ಮತ್ತು ವಿಳಂಬವನ್ನು ಸಹಿಸದವನು, ಈತನು ಮಾಡಿದ ಸ್ವತಂತ್ರ ಪ್ರಪತ್ತಿಯಿಂದ ಲೇ ಪ್ರೀತನಾಗಿ ಇನ್ನೇನೂ ಬೇಕಿಲ್ಲದೆ ರಕ್ಷಿಸುವನು. ಇದೂ ಏಕ ಶಬ್ದಾರ್ಥವು. ಸ್ವತಂತ್ರ ಪ್ರಪತ್ತಿಯನ್ನೂ ಅನುಷ್ಠಿಸಿ, ಅನಂತರ ಉಪಾಸನವನ್ನೂ ಮಾಡುತ್ತೇನೆಂದು ಪ್ರಾರಂಭಿಸುವುದು ಅವಿಜ್ಞತೆಯನ್ನು ಪ್ರಕಟಿಸುತ್ತದೆ. ಮಹಾ ವಿಶ್ವಾಸವನ್ನು ದೂರೀಕರಿಸುತ್ತದೆ. ದೇವತಾಂತರ ಆಶ್ರಯಣವೂ ಬೇಕಿಲ್ಲವು ಎಂಬುದೂ ಏಕಶಬ್ದಾರ್ಥವು.

೫. ತದಙ್ಗೈರಪ್ಯ ಸಂಬಂಧಃ - ನಿತ್ಯನೈಮಿತ್ತಿಕಗಳ ಅನುಷ್ಠಾನವು ಉಪಾಸನರೂಪ ಬ್ರಹ್ಮವಿದ್ಯೆಗೆ ಅಙ್ಗವು. ಈ ಪ್ರಪತ್ತಿಯಲ್ಲಾದರೋ ಅವು ಅಙ್ಗವಲ್ಲವಾದುದರಿಂದ ಉಪಾಯಕ್ಕೆ ಸಂಬಂಧಿಸಿದವಲ್ಲವು. ಹಾಗಾದರೆ ಅವುಗಳ ಪರಿತ್ಯಾಗಕ್ಕೆ ಅನುಮತಿಯೇ? ಎಂದರೆ ಪೃಥಕ್ಕಾದ "ಅಹ ರಹ ಸ್ಸಂಧ್ಯಾ ಮುಪಾಸೀತ" ಇತ್ಯಾದ್ಯನೇಕ ವಿಧಿಬಲಪ್ರಾಪ್ತಗಳಾದುದರಿಂದ ಅವು ಗಳನ್ನು ಪರಮಪುರುಷನ ಆಜ್ಞಾ ಕೈಙ್ಕರ್ಯಗಳೆಂದು ಭಾವಿಸಿ, ಆತನ ಮುಖೋಲ್ಲಾಸಕ್ಕಾಗಿ ಆವಶ್ಯಕವಾಗಿ ಅನುಷ್ಠಿಸತಕ್ಕದ್ದಾಗಿವೆ. ಇಲ್ಲದಿದ್ದರೆ "ಆಜ್ಞಾಛೇದೀ ಮಮದ್ರೋಹೀ" ಎಂದು ಹೇಳಿರುವಹಾಗೆ ಭಗವನ್ನಿಗ್ರಹಕ್ಕೆ ಒಳಗಾಗುವನು. ಪ್ರಪತ್ತಿಯೂ ನಿತ್ಯನೈಮಿತ್ತಿಕ ಗಳೂ ಉಪಾಸನಕ್ಕೆ ಅಙ್ಗವಾಗಿ ಅನುಷ್ಠಿಸುವದರಿಂದ ಯಾವ ಫಲವು ದೊರೆಯುತ್ತದೋ, ಅದನ್ನು ಅವುಗಳ ಅಪೇಕ್ಷೆ ಇಲ್ಲದೇನೆ, ಈ ಸ್ವತಂತ್ರ ಪ್ರಪತ್ತಿಯೊಂದೇ ಕೊಡುತ್ತದೆಂಬುದೂ ಏಕ ಶಬ್ದಾರ್ಥವು.

೬. ಸರ್ವ ಸಾಧ್ಯೇಷ್ವಭಿನ್ನತಾ - ಸರ್ವವಿಧ ಫಲಗಳನ್ನೂ ಏನೊಂದೂ ವ್ಯತ್ಯಾಸವಿಲ್ಲದೆ ಈ ಪ್ರಪತ್ತಿಯೊಂದೇ ಸಾಧಿಸಿಕೊಡುತ್ತದೆಂಬುದೂ ಏಕ ಶಬ್ದಾರ್ಥವು. "ಯದ್ಯೇನ ಕಾಮ ಕಾಮೇನ ನಸಾಧ್ಯಂ ಸಾಧನಾನ್ತರೈಃ। ಮುಮುಕ್ಷುಣಾ ಯತ್ಸಾಂಖ್ಯೇನ ನಯೋಗೇನ ನಭಕ್ತಿತಃ। ಪ್ರಾಪ್ಯತೇ ಪರಮಂ ಧಾಮ ಯತೋ ನಾವರ್ತತೇ ಪುನಃ। ತೇನ ತೇನಾ ಪ್ಯತೇ ತತ್ತನ್ನ್ಯಾಸೇನೈವ ಮಹಾಮುನೇ" ಯಾವಉಪಾಯಾನ್ತರಗಳನ್ನವಲಂಬಿಸಿ ಪುರುಷಾರ್ಥಕಾಮಿ ಗಳಾದ ಆರ್ತನೂ, ಅರ್ಥಾರ್ಥಿಯೂ, ಕೇವಲನೂ, ಜ್ಞಾನಿಯೂ ಸಹ ಹೊಂದಲು ಕಷ್ಟ ಸಾಧ್ಯವೋ, ಅಂತಹ ಅವರುಗಳ ಇಷ್ಟಾರ್ಥಗಳನ್ನೆಲ್ಲಾ ಸುಕರವಾಗಿ ಶೀಘ್ರವಾಗಿ ಈ ನ್ಯಾಸವಿದ್ಯೆಯೊಂದರಿಂದಲೇ ಹೊಂದುವನು ಎಂಬುದೂ ಏಕಶಬ್ದಾರ್ಥವು. ಹೀಗೆ ಆರು ಅರ್ಥ ಗಳನ್ನು ತಮ್ಮ ಆಚಾರ್ಯರು ತಮಗೆ ಉಪದೇಶಿಸಿದರೆಂದು ಶ್ರೀ ದೇಶಿಕವರ್ಯರು ತಿಳಿಸಿರುತ್ತಾರೆ.

ಪಾಪ ನಿವಾರಕ ಸರ್ವ ಧರ್ಮಗಳೂ ಬೇಕಿಲ್ಲವು. ನಾನೊಬ್ಬನೇ ಸರ್ವ ಪಾಪಗಳನ್ನೂ ಹೋಗ ಲಾಡಿಸುವನೆಂಬುದೂ ಏಕ ಶಬ್ದಾರ್ಥವು. ಒಂದೊಂದು ರೋಗಕ್ಕೆ ಒಂದೊಂದು ಔಷಧಿಯು ಪರಿಹಾರವಾಗಿ ವಿಧಿಸಿರುವದುಂಟು. ಇದು ಕುಪ್ಪೀ ಮಾತ್ರೆಯ ಹಾಗೆ ಸರ್ವರೋಗಗಳನ್ನೂ ಪರಿಹರಿಸುವಂತಾದ್ದು. ಆದುದರಿಂದ ಏಕ ಶಬ್ದವು. "ಸರ್ವ ಪ್ರಾಯಶ್ಚಿತ್ತಾರ್ಥಂ ಶ್ರೀ ವಿಷ್ಣವೇ ಸ್ವಾಹಾ" ಎಂಬುದು ಅನುಸಂಧೇಯವು.

ಇನ್ನೊಂದು ಮುಖ್ಯಾಭಿಪ್ರಾಯವನ್ನು ಈ ಏಕ ಶಬ್ದದಲ್ಲಿ ಗ್ರಹಿಸತಕ್ಕದ್ದೆಂದು ಹಾಗೆಯೇ ಉಪಪಾದಿಸಲ್ಪಟ್ಟಿತು. ಯಾವಾಗ ವಿಶೇಷ್ಯನಾದ ಸಿದ್ಧೋಪಾಯನಾದ ಭಗವಂತನು ಹೇಳಲ್ಪ

ಟ್ಟನೋ ಆಗ ವಿಶೇಷಣಯುಕ್ತವಾದ ವಿಶೇಷ್ಯವು ಹೇಳಲ್ಪಟ್ಟಿತೆಂಬುದು ವ್ಯಕ್ತವು. ಲಕ್ಷ್ಮಿಯು ನಾರಾಯಣನಿಗೆ ವಿಶೇಷಣವು. ಆದುದರಿಂದ **ಮಾಮೇಕಂ** ಎಂದರೆ ಲಕ್ಷ್ಮಿಯುಕ್ತನಾದ ನಾರಾಯಣನೇ ಪರತತ್ತ್ವವಾದುದರಿಂದ ಅಂತಹ ನಾನೊಬ್ಬನೇ ಎಂಬರ್ಥವು. ಈಗ ರುಕ್ಮಿಣೀ ಯುಕ್ತನಾಗಿರುವ ಶ್ರೀಕೃಷ್ಣಭಗವಾನ್ ಆದ ನಾನೊಬ್ಬನೇ ಎಂಬ ತಾತ್ಪರ್ಯವು. ಹೀಗೆ ರಕ್ಷಣ ದೀಕ್ಷೆಯಲ್ಲೂ ಸಹ ಆಕೆಯೂ **ಸಹಧರ್ಮಚರೀ** ಯಾಗಿ, ಕಂಕಣಬದ್ಧಳು. ಆಕೆಯು ಪತಿ ಯೊಂದಿಗೆ ನಿತ್ಯಾನಪಾಯಿಯಾದುದರಿಂದ ಇಬ್ಬರೂ ಒಟ್ಟಿಗೇ ಇರುವವರು. ಪುಷ್ಪವು ಪರಿಮಳವನ್ನೂ, ರತ್ನವು ಕಾಂತಿಯನ್ನೂ, ಆದಿತ್ಯನು ಕಿರಣವನ್ನೂ ಹೇಗೆ ಧರಿಸಿರುತ್ತಿಯೋ, ಹಾಗೆಯೇ ನಾರಾಯಣನು ಲಕ್ಷ್ಮಿಯನ್ನು ಅಪೃಥಕ್ಸಿದ್ಧ ವಿಶೇಷಣವಾಗಿ ಹೊಂದಿರುವವನು. ಆಕೆ ಯನ್ನು ಭಗವಂತನು ಎಂದಿಗೂ ಬಿಟ್ಟಿರುವದಿಲ್ಲವೆಂಬುದು ಈ ಏಕಶಬ್ದದಿಂದ ವಾಚ್ಯನಾದ ಪರಮ ಪುರುಷನೆಂಬುದು ವ್ಯಕ್ತವು. ಜಗತ್ತಿನ ಸೃಷ್ಟಿಸ್ಥಿತಿ ಪ್ರಳಯಾದಿ ಕಾರ್ಯ ಪ್ರವೃತ್ತಿಗಳಲ್ಲೂ ಈ ಚೇತನ ನಿಗೆ ಸಿದ್ಧೋಪಾಯನಾಗಿ ರಕ್ಷಿಸುವದೇ ಮೊದಲಾದವುಗಳಲ್ಲಿ ಲಕ್ಷ್ಮಿಯೊಂದಿಗೇ ಇರುವನೆಂದೂ ಶ್ರುತಿ ಸ್ಮೃತಿಪುರಾಣೇತಿಹಾಸಗಳಲ್ಲೆಲ್ಲಾ ಸುಪ್ರಸಿದ್ಧವು. ಮೋಕ್ಷಪ್ರದತ್ವದಲ್ಲೂ ಅನ್ವಯ ವುಂಟೋ? ಎಂದರೆ ಜ್ಞಾನಾಗ್ರೇಸರರಾದ ಪರಾಶರ ಮಹರ್ಷಿಯು **ಸಂಸಾರಾರ್ಣವ ತಾರಿಣೀಂ** ಎಂದೂ, ವಿಮುಕ್ತಿ ಫಲದಾಯಿನೀಂ ಎಂದೂ, ಪ್ರಯೋಗಿಸಿರುತ್ತಾರೆ. ಹಾಗೆಯೇ ಶ್ರೀಸೂಕ್ತದಲ್ಲೂ **"ತಾಂ ಪದ್ಮನೇಮಿಾಂ ಶರಣಮಹಂ ಪ್ರಪದ್ಯೇ"** ಎಂದು ಹೇಳಿ **ಅಲಕ್ಷ್ಮೀರ್ಮೇನಶ್ಯತಾಂ** – ಸಂಸಾರಬಂಧವು ನಾಶವಾಗಲಿ ಎಂದು ಪ್ರಾರ್ಥಿಸಿ, **ಶ್ರಿಯಂ** ವಸಾನಾ **ಮಮೃತತ್ವಮಾಯನ್** ಎಂದು ಮೋಕ್ಷಪ್ರಾಪ್ತಿಯನ್ನೂ ಹೇಳಿರುತ್ತದೆ. ಹೀಗೆ ಏಕ ಶಬ್ದಕ್ಕೆ ಲಕ್ಷ್ಮೀಯುಕ್ತನಾದ ತಾನೊ ಬ್ಬನೇ ಎಂದು **"ಆನೀತವಾದಗ್ಂ ಸ್ವಧಯಾ ತದೇಕಮ್"** ಎಂದು ಶ್ರುತಿಪ್ರಯೋಗವಿದೆ. ಇಲ್ಲಿ **ಸ್ವಧಾ** ಎಂದರೆ ಲಕ್ಷ್ಮಿಯು. ಲಕ್ಷ್ಮಿಯೊಂದಿಗೆ ಒಬ್ಬನಾದ ಪರತತ್ತ್ವವೆಂದು ಹೇಳಲ್ಪಟ್ಟಿರುತ್ತದೆ. ಇದನ್ನನುಸರಿಸಿಯೇ ಮೋಕ್ಷಧರ್ಮದಲ್ಲಿ ಶ್ರೀ ವೇದವ್ಯಾಸರು **"ಏಕಾಕೀ ವಿದ್ಯಯಾಸಾರ್ಧಂ ವಿಹ ರಿಷ್ಯೇ ದ್ವಿಜೋತ್ತಮ।** ತತೋ **ಭೂಯೋ ಜಗತ್ಸೃಷ್ಟಿಂ ಕರಿಷ್ಯಾಮಿಾಹವಿದ್ಯಯಾ"** ಎಂದು ಪ್ರಯೋಗಿಸಿರುತ್ತಾರೆ. ಇಲ್ಲಿ **ವಿದ್ಯಾ** ಶಬ್ದವು ಲಕ್ಷ್ಮಿಯನ್ನು ಬೋಧಿಸುತ್ತದೆ. **ವಿದ್ಯಾ ಯೈನಮಃ** ಎಂದು ಲಕ್ಷ್ಮಿಯ ಅಷ್ಟೋತ್ತರದಲ್ಲಿ ಕಾಣಬಹುದು. ಹಾಗೆಯೇ ಹರಿವಂಶದಲ್ಲೂ **"ಏಕೋ ವಿದ್ಯಾ ಸಹಾಯಸ್ತ್ವಮ್"** ಎಂಬ ಪ್ರಯೋಗವಿರುತ್ತದೆ. ಹೀಗೆ ಉಪಾಯಸ್ಥಾನ ದಲ್ಲೂ ಉಪೇಯವಾಗಿರುವಾಗಲೂ ಲಕ್ಷ್ಮೀನಾರಾಯಣರಿಬ್ಬರಿಗೂ ಅನ್ವಯವುಂಟು. **ಲಕ್ಷ್ಮ್ಯಾ ಸಹ ಹೃಷೀಕೇಶೋ ದೇವ್ಯಾ ಕಾರುಣ್ಯ ರೂಪಯಾ। ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇ ಷು ಚ ಗೀಯತೇ" "ಉಪಾಯಂ ವೃಣು ಲಕ್ಷ್ಮೀಶಂ** ತಮುಪೇಯಂ **ವಿಚಿಂತಯ"** ಎಂಬೀ ಪ್ರಮಾಣಗಳು ಅನುಸಂಧೇಯವು.

ಶ್ರೀ ಶುಕರು ಭಾಗವತದಲ್ಲಿ ೬ನೆಯ ಸ್ಕಂದದ ಕೊನೆಯ ಅಧ್ಯಾಯದಲ್ಲಿ ಸಙ್ಗ್ರಹವಾಗಿ ಲಕ್ಷ್ಮೀ ತತ್ತ್ವವನ್ನು ಉಪಪಾದಿಸಿರುತ್ತಾರೆ. ಪುಂಸವನ ವ್ರತಾಚರಣೆಯಲ್ಲಿ ಇಬ್ಬರೂ ಲಕ್ಷ್ಮೀ ನಾರಾಯಣರು ಆರಾಧ್ಯರೆಂದು ಹೇಳಿ ದ್ವಾದಶಾಹುತಿಗೆ ಮನ್ತ್ರವನ್ನು ಹೇಳುವ ಸಂದರ್ಭದಲ್ಲಿ ಭಗವಂತನನ್ನೂ ಲಕ್ಷ್ಮಿಯನ್ನೂ ನಮಸ್ಕರಿಸಿ ಲಕ್ಷ್ಮಿಯನ್ನು **ಮಹಾಪುರುಷ ಲಕ್ಷಣೆ**ಯುಳ್ಳ ವಳೆಂಬುದರಿಂದ **ಭಗವನ್ನಾರಾಯಣಾಭಿ ಮತಾನುರೂಪಸ್ವರೂಪರೂಪಗುಣವಿಭವೈಶ್ವರ್ಯ ಯುಕ್ತೆ**ಳೆಂದೂ, **ಪ್ರಿಯಧಾಮೇ** ಎಂಬುದರಿಂದ ಸರ್ವದಾ ಅಪೃಥಕ್ಸಿದ್ಧ ವಿಶೇಷಣಳಾಗಿ ವಕ್ಷ ಸ್ಥಳದಲ್ಲಿರುವವಳೆಂದೂ, ಚೇತನರಿಗೆಲ್ಲಾ **ಲೋಕಮಾತೆ** ಎಂದೂ ಹೇಳಲ್ಪಟ್ಟಿರುತ್ತದೆ. ಇಬ್ಬ ರನ್ನೂ ಆ ವ್ರತದಲ್ಲಿ ಸ್ತುತಿಸತಕ್ಕದ್ದೆಂದು ಹೇಳುವಾಗ **ಯುವಾಂಹಿ ವಿಶ್ವಸ್ಯ ವಿಭೂ** ಎಂದು ತಮ್ಮ ಪಿತಾಮಹರಾದ ಶ್ರೀ ಪರಾಶರರು ಹೇಳಿರುವ **ಯಥಾ ಸರ್ವಗತೋವಿಷ್ಣುಸ್ತಥೈವೇಯಂ**

ದ್ವಿಜೋತ್ತಮ ಎಂಬ ವಾಕ್ಯವನ್ನನುಸರಿಸಿ ಇಬ್ಬರೂ ವಿಭುಗಳೆಂದೂ, ಇದರಿಂದ ಅವರುಗಳಿಗೆ ಸರ್ವ ವ್ಯಾಪ್ತಿಯೂ ಪರಸ್ಪರ ವ್ಯಾಪ್ತಿಯೂ ಉಂಟೆಂದೂ ಜಗತಃ ಕಾರಣಂ ಪರಮ್। ಎಂಬುದರಿಂದ ಈಶ್ವರನಹಾಗೆ ಜಗತ್ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಸರ್ವವಿಧ ಕಾರಣಳೆಂದೂ, ಇಬ್ಬರೂ ಸಿದ್ಧೋಪಾಯರಾಗಿ ವರದೌ ಸರ್ವ ವಿಧ ವರಪ್ರದರೆಂದೂ, ಹೇಳಿರುತ್ತಾರೆ. ತಸ್ಯಾ ಅಧೀಶ್ವರ ಸ್ಸ್ವಸ್ತ್ವಾತ್ ಎಂಬುದರಿಂದ ಪತಿಶೇಷತ್ವವನ್ನೂ ಉಪಪಾದಿಸಿರುತ್ತಾರೆ.

ಶರಣಂ ವ್ರಜ ಎಂದರೆ ಸಿದ್ಧೋಪಾಯನನ್ನಾಗಿ ನನ್ನನ್ನು ಆಶ್ರಯಿಸು ಎಂಬರ್ಥವು. ಹೇಗೆ ಆಶ್ರಯಿಸತಕ್ಕದ್ದು ? ಎಂದರೆ ಸದ್ಗುರುವನ್ನಾಶ್ರಯಿಸಿ ಆತನು ಉಚ್ಚರಿಸಿದ ದ್ವಯಮಂತ್ರವನ್ನು ತಾನು ಉಚ್ಚರಿಸುವದರ ಮೂಲಕವಾಗಿ ಎಂದು ತಿಳಿಯತಕ್ಕದ್ದು. ಇದೀಗ ಸಂಪ್ರದಾಯವು. ಇಲ್ಲಿ ಶರಣ ಶಬ್ದವು ಉಪಾಯವನ್ನು ಬೋಧಿಸುತ್ತದೆಯಾದುದರಿಂದ ಶರಣಂವ್ರಜ ಸಿದ್ಧೋಪಾಯನನ್ನಾಗಿ ನನ್ನನ್ನು ಆಶ್ರಯಿಸು ಎಂಬರ್ಥವು. ಇದರ ಭಾವವೇನೆಂದರೆ ವ್ರಜ - ಎಂಬುದು ಗತ್ಯರ್ಥವಾಗಿ ಬುದ್ಧ್ಯರ್ಥವನ್ನು ಬೋಧಿಸುವದರಿಂದ, ವಿಶ್ವಾಸಪ್ರಾರ್ಥನಾಪೂರ್ವಕವಾದ ಆತ್ಮರಕ್ಷಾಭರನ್ಯಾಸವನ್ನು ಅನುಷ್ಠಿಸು ಎಂಬುದು ಸೂಚಿತವು. ಈ ಅನುಷ್ಠಾನವನ್ನು ಲೋಕಗುರುವಿನಲ್ಲಿ ಹೇಗೋ ಹಾಗೆ ಪರಮ ಗುರುವನ್ನು ಆಶ್ರಯಿಸಿ ನಡೆಸತಕ್ಕದ್ದು. ಆಗಲಿ ನಿರ್ಹೇತುಕ ಕೃಪಾನಿಧಿಯಾದವನು ತಾನೇ ರಕ್ಷಿಸದೆ ಶರಣಂವ್ರಜ ಎಂದು ವ್ಯಾಜವನ್ನು ಎದುರು ನೋಡ ಬಹುದೋ ? ಆತನ ಶರಣ್ಯನಾಗಿರುವ ಮಹತ್ವಕ್ಕೇ ಕುಂದಕವಲ್ಲವೇ ? ಎಂದರೆ ಒಂದು ವ್ಯಾಜವನ್ನು ಪ್ರತೀಕ್ಷಿಸಿ ರಕ್ಷಿಸಿದರೆ ವೈಷಮ್ಯಾದಿ ದೋಷಗಳಿಗೆ ಹೇತುವಾಗುವದಿಲ್ಲವು. ಶಾಸ್ತ್ರದಲ್ಲಿ ಶರಣ್ಯನು ಒಂದೊಂದು ಪ್ರವೃತ್ತಿಗೆ ಒಂದೊಂದು ಫಲವನ್ನು ಏರ್ಪಡಿಸುವದರಿಂದ ವ್ಯಾಜವು ಆವಶ್ಯಕವು.

ಪೂರ್ವಾರ್ಧದಿಂದ ಉಪಾಸನಕ್ಕೆ ಅಶಕ್ತತೆ ಮತ್ತು ಅನಧಿಕಾರವನ್ನು ಹೊಂದಿದವನು ಮಾಡತಕ್ಕದ್ದು ಭರನ್ಯಾಸವೆಂದು ಹೇಳಲ್ಪಟ್ಟಿತು. ಉತ್ತರಾರ್ಧದಿಂದ ಅದರಿಂದ ಪ್ರೀತನಾದ ಪರಮ ಕೃಪೌದಾರ್ಯ ಸೌಲಭ್ಯ ಸೌಶೀಲ್ಯವಾತ್ಸಲ್ಯಾದಿಗುಣಗಳಿಂದ ಯುಕ್ತನಾದ ಸರ್ವಶಕ್ತನ ಕೃತ್ಯವು ಹೇಳಲ್ಪಡುತ್ತದೆ. ಅಹಂ - ಉತ್ತರಾರ್ಧದ ಕೊನೆಯಲ್ಲಿ ಮೋಕ್ಷಯಿಷ್ಯಾಮಿ ಎಂಬುದರಿಂದಲೇ ಉತ್ತಮ ಪುರುಷವು ತೋರಿಬರುವಾಗ ಇಲ್ಲಿ ಅಸ್ಮಚ್ಛಬ್ದವು ನಿರರ್ಥಕವಲ್ಲವೋ? ಎಂದರೆ, ಅಲ್ಲವು ; ಏಕೆಂದರೆ ತಾನು ಈಗ ಜೀವಾತ್ಮರಿಗೆ ಕರ್ಮಾನುಸಾರ ಏರ್ಪಡಿಸಿರುವ ಬಂಧದಿಂದ ಬಿಡಿಸುವ ಸಾಮರ್ಥ್ಯವು ಬ್ರಹ್ಮರುದ್ರೇಂದ್ರಾದಿ ಸರ್ವದೇವತೆಗಳಿಗೂ ಇಲ್ಲವೆಂದೂ, ತಾನೊಬ್ಬನು ಮಾತ್ರವೇ ಅಂತಹ ಅಘಟಿತ ಘಟನಾ ಶಕ್ತಿಯುಳ್ಳವನು ಎಂದೂ ಈ ಅಹಂ ಎಂಬ ಶಬ್ದವು ಪ್ರಕಟಿಸುತ್ತದೆ.

ಅಹಂ ಎಂಬ ಪದದೊಂದಿಗೆ ತ್ವಾ ಎಂಬ ಪದವನ್ನು ಸೇರಿಸಿ ಹೇಳಿರುವದು ಸಾರ್ಥವಾಗಿದೆ. ಅಹಂ ಸರ್ವಶಕ್ತನು, ನೀನಾದರೋ ಅಶಕ್ತನು ; ನಾನಾದರೋ ಸ್ವಾಮಿಯು, ಶೇಷಿಯು; ನೀನಾದರೋ ದಾಸನು, ಶೇಷನು ; ನಾನಾದರೋ ಸರ್ವ ರಕ್ಷಕನು, ನೀನಾದರೋ ರಕ್ಷ್ಯವಸ್ತುವು; ಇತ್ಯಾದಿ ಸ್ವಾರಸ್ಯಾರ್ಥಗಳೆಲ್ಲಾ ತೋರಿಬರುತ್ತವೆ. ನಿನ್ನನ್ನು ಇನ್ನು ಯಾರೂ ರಕ್ಷಿಸಲು ಶಕ್ತಿಯಿಲ್ಲದವರಾದುದರಿಂದ ಅದನ್ನು ಅರಿತು ಸರ್ವಜ್ಞನಾದ, ಸತ್ಯಸಙ್ಕಲ್ಪನಾದ, ಸರ್ವ ಶಕ್ತನಾದ ಪರಮ ಕಾರುಣಿಕನೂ ಉದಾರಿಯೂ ಆದ ನನ್ನನ್ನು ಆಶ್ರಯಿಸಿದ ಬಳಿಕ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಎಂದು ತಮ್ಮ ಪರಮಾನುಗ್ರಹವನ್ನು ಹೇಳಿಕೊಳ್ಳುತ್ತಾರೆ

"ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ" ಎಂದು ಸಮಸ್ತಾನಿಷ್ಟನಿವೃತ್ತಿ ಯಾವಾಗ ಆಯಿತೋ ಆಗ ಇಷ್ಟಪ್ರಾಪ್ತಿಯಾದ ಪರಮಾತ್ಮ ಪ್ರಾಪ್ತಿಯೂ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು.

ಇಲ್ಲಿ ಪಾಪಗಳು ಯಾವುವು ಎಂದರೆ ಶಾಸ್ತ್ರಕ್ಕೆ ವಿರುದ್ಧವಾಗಿ ನಡೆಯೋಣವು; ಅಕೃತ್ಯ ಕರಣ, ಕೃತ್ಯಾಕರಣದೋಷಗಳು. ಇವು ಅನಾದಿಯಾಗಿ ಒಂದು ಪ್ರವಾಹರೂಪವಾಗಿ ಬಂದಿರುವದರಿಂದ ಭಗವನ್ನಿಗ್ರಹವನ್ನುಂಟುಮಾಡಿ ಬಂಧಕಗಳು. ಮೋಕ್ಷಾರ್ಥಿಗೆ ಪುಣ್ಯಗಳೂ ಕೂಡ ಸ್ವರ್ಗಾದಿ ಭೋಗಗಳನ್ನುಂಟುಮಾಡಿ ಬಂಧಕಗಳಾಗುವದರಿಂದ ಅವೂ ಈ ಪಾಪ ಶಬ್ದದಲ್ಲೇ ಸೇರಿದವು. 'ಏತೇ ವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ" ಎಂಬ ಪರಾಶರ ವಾಕ್ಯವು ಅನುಸಂಧೇಯವು.

ಮೋಕ್ಷಾರ್ಥಿಗೆ ಪುಣ್ಯದಿಂದುಂಟಾಗುವ ಸುಖವೂ ನರಕ ಸಮಾನವೆಂದು ಹೇಳಲ್ಪಟ್ಟಿತಲ್ಲಾ ಅದು ಹೇಗೆ? ಎಂದರೆ, ಅನುಭವವು, ಅಚೇತನಾನುಭವ, (ವಿಷಯ ಸುಖಾನುಭವ) ಆತ್ಮ ಮಾತ್ರಾನುಭವ, ಈಶ್ವರಾನುಭವವೆಂದು ಮೂರು ವಿಧವು. ಇವು ಅನುಕೂಲ ಅನುಕೂಲತರ ಅನುಕೂಲತಮವೆಂದು ಹೇಳಿಸಿಕೊಳ್ಳುತ್ತವೆ. ಈ ಸುಖಗಳಿಗೆ ಸಾಧನಗಳಾಗಿರುವುವು ಹಿತ, ಹಿತತರ ಹಿತತಮವಾಗಿರುತ್ತವೆ. ಮೋಕ್ಷಾರ್ಥಿಯಾದರೋ ಈಶ್ವರಾನುಭವರೂಪವಾದ ಅನುಕೂಲತಮವಾದ ಶ್ರೇಯಸ್ಸನ್ನು ಅಪೇಕ್ಷಿಸುವವನು, ಅದಕ್ಕಾಗಿ ಹಿತತಮ ಸಾಧನವಾದ ಭರನ್ಯಾಸವನ್ನು ಶರಣಂ ವ್ರಜ ಎಂಬಲ್ಲಿ ತೋರುವುದನ್ನು ಅನುಷ್ಠಿಸಿದವನು. "ತವಾಮೃತಸ್ಯಂದಿನಿ ಪಾದಪಙ್ಕಜೇ ನಿವೇಶಿತಾತ್ಮಾ ಕಥಮನ್ಯದಿಚ್ಛತಿ । ಸ್ಥಿತೇರವಿಂದೇ ಮಕರಂದ ನಿರ್ಭರೇ ಮಧುವ್ರತೋ ನೇಕ್ಷುರಕಂ ಹಿವೀಕ್ಷ್ಯತೇ" (ಆಳ. ಸ್ತೋತ್ರ) ಎಂಬಲ್ಲಿ ಹೇಳಿರುವ ಹಾಗೆ ಇತರ ಎರಡು ವಿಧ ಸುಖಗಳನ್ನು ಬಯಸುವನೋ? ಅವು ಆತನಿಗೆ ನರಕಪ್ರಾಯವು.

ಮೋಕ್ಷಯಿಷ್ಯಾಮಿ ಎಂದು ಶರಣ್ಯನು ಹೇಳಿದುದು, "ಸಕೃದೇವಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇತ ದ್ವ್ರತಂ ಮಮ" ಎಂಬಲ್ಲಿ ಹೇಳಿರುವ ವ್ರತವನ್ನು, ಸ್ಥಿರಸಙ್ಕಲ್ಪವನ್ನು, ಸೂಚಿಸುತ್ತದೆ ಹೀಗೆ ವ್ರತವಾದರೆ ಮಾಡಿಯೇ ತೀರಬೇಕು. ಏಕೆಂದರೆ ಪರಮ ಭಾಗವತರು ನನ್ನನ್ನು ನಿಂದಿಸಬಹುದು. ತನ್ನ ಕೃಪಾ ಗುಣಕ್ಕೆ ಕೊರತೆಯನ್ನುಂಟುಮಾಡುವದು ತನ್ನ ಮಾಹಾತ್ಮ್ಯಗೆ ಹಾನಿಯು. ಆದುದರಿಂದ ತಾನು ರಕ್ಷಿಸಲೇಬೇಕು. ಅದಕ್ಕಾಗಿ ಮಾಶುಚಃ ಎಂದರು.

ಇಲ್ಲಿ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಎಂಬಲ್ಲಿ ಸರ್ವಶಬ್ದವಿರುವದರಿಂದ ಪ್ರಪತ್ತ್ಯುತ್ತರ ಕಾಲೀನ ಬುದ್ಧಿಪೂರ್ವಾಘವೂ ಲೇಪಿಸುವದಿಲ್ಲವೆಂದು ಕೆಲವರು ಅಭಿಪ್ರಾಯಪಡುವರು. ಇದು ಸರಿಯಲ್ಲವು, ಬ್ರಹ್ಮಸೂತ್ರವಾದ ತದಧಿಗಮ ಉತ್ತರಪೂರ್ವಾಘಯೋ ರಶ್ಲೇಷವಿನಾಶೌ ತದ್ವ್ಯಪದೇಶಾತ್" ಎಂಬಲ್ಲಿ ಬ್ರಹ್ಮವಿದ್ಯೆಯು ಪ್ರಾಪ್ತವಾದ ದೆಶೆಯಲ್ಲಿ ವಿದ್ಯಾ ಮಾಹಾತ್ಮ್ಯೆಯಿಂದ ಅದಕ್ಕೆ ಪೂರ್ವಭಾವಿಯಾಗಿ ಮಾಡಿದ ಸಮಸ್ತ ಪುಣ್ಯಪಾಪಗಳ ವಿನಾಶವೂ, ಅದಕ್ಕೆ ಉತ್ತರ ಕಾಲದಲ್ಲಿ ಮಾಡಿದ ಪುಣ್ಯಪಾಪಗಳು ಲೇಪಿಸುವದಿಲ್ಲವು ಎಂದು ಹೇಳಲ್ಪಟ್ಟಿತು. ಇದರಿಂದ ಕೆಲವರು ಬುದ್ಧಿಪೂರ್ವಕವಾಗಿ ಮಾಡಿದ ಉತ್ತರಾಘಗಳೂ ಲೇಪಿಸುವುದಿಲ್ಲವೆಂದು ತಿಳಿಯುತ್ತಾರೆ. ಇದು ತಪ್ಪಾದ ಅಭಿಪ್ರಾಯವು. ಶ್ರೀ ಯತಿವರ್ಯರು ಹೇಳಿರುವದೇನೆಂದರೆ— "ತದಿದಮಶ್ಲೇಷ ವಚನಂ ಪ್ರಾಮಾದಿಕ ವಿಷಯಂ ಮನ್ತವ್ಯಂ" ಎಂದು ಹೇಳಿರುವದರಿಂದ ಉತ್ತರಾಘದ ಲೇಪವಿಲ್ಲವೆಂದು ಹೇಳಿರುವದು ಪ್ರಾಮಾದಿಕ ಪಾಪಗಳ ವಿಷಯವೇ ವಿನಾ ಬುದ್ಧಿಪೂರ್ವಕವಾಗಿ ಮಾಡಿದ ಉತ್ತರಾಘಕ್ಕೆ ಲೇಪವೂ ಉಂಟು, ಶಿಕ್ಷೆಯೂ ಉಂಟು. ಪ್ರಪನ್ನನಾದ ಪ್ರಯುಕ್ತ ಅಲ್ಪ ಶಿಕ್ಷೆಯು. "ಯಸ್ಯನಾಹಂ ಕೃತೋಭಾವೋ ಬುದ್ಧಿರಸ್ಯ ನಲಿಪ್ಯತೇ ಹತ್ವಾಪಿ ಸ ಇಮಾಲ್ಲೋಕಾನ್ ನಹನ್ತಿ ನನಿಬಧ್ಯತೇ" ಎಂದು ಇದೇ ಗ್ರಂಥದಲ್ಲೇ ಜ್ಞಾನಿಗೆ ಬುದ್ಧಿಪೂರ್ವಕವಾದ ಉತ್ತರಾಘವೂ ಲೇಪಿಸುವದಿಲ್ಲವೆಂದು ಹೇಳಿರುತ್ತದೆಯಲ್ಲಾ ಎಂದರೆ, ಈಗ ಅರ್ಜುನನಿಗೆ ಪ್ರಾಪ್ತವಾಗಿರುವದು ಧರ್ಮಯುದ್ಧವಾಗಿ, ಕ್ಷತ್ರಿಯ ವರ್ಣಕ್ಕೆ ಸೇರಿದ ಇತಿ

ಕರ್ತವ್ಯತೆಯು ದುಷ್ಟನಿಗ್ರಹವಾದುದರಿಂದ ಹಾಗೆ ಹೇಳಲ್ಪಟ್ಟಿತೇ ಹೊರತು, ಧರ್ಮಿಷ್ಠರಾದ ಮತ್ತು ಅಲೋಕಕಂಟಕರಲ್ಲದವರ ಹನನವನ್ನು ಮಾಡಬಹುದೆಂಬ ಅನುಮತಿಯನ್ನು ಅಲ್ಲಿ ಕೊಡಲಿಲ್ಲವು. ಹಾಗೆ ಧರ್ಮಯುದ್ಧವನ್ನು ಮಾಡದೇ ಹೋದರೆ "ಪ್ರಿಯೋಽಪಿ ನ ಪ್ರಿಯೋಽಸೌ ಮೇ ಮದಾಜ್ಞಾ ವ್ಯತಿವರ್ತನಾತ್" "ಆಜ್ಞಾಚ್ಛೇದೀ ಮಮ ದ್ರೋಹೀ" ಎಂದು ಹೇಳಿರುವರಾಗಿ ಶಿಕ್ಷೆಗೆ ಗುರಿಯಾಗುವನು. ಸಾಧಾರಣವಾಗಿ ತಿಳುವಳಿಕೆ ಇದ್ದು ಪ್ರಪನ್ನನು ಸ್ನಾನವನ್ನು ಮಾಡಿ, ದೇವಗಂಗೆಯಲ್ಲಿ ಅವಗಾಹನವನ್ನು ಮಾಡಿದವನಹಾಗೆ ಪರಿಶುದ್ಧನಾದವನು ಪುನಃ ಬುದ್ಧಿಪೂರ್ವಕ ಅರ್ಥಕಾಮವೆಂಬ ಕೆಸರುಗುಂಡಿಯಲ್ಲಿ ಬಿದ್ದು ಕೆಸರಾಗಬಾರದಲ್ಲವು ಪ್ರಪನ್ನನು ಅಲ್ಪ ತಿಳುವಳಿಕೆಯುಳ್ಳವನಾಗಿ ಬುದ್ಧಿಪೂರ್ವಕವಾಗಿ ಅಂತಹ ಕೆಸರುಗುಂಡಿಯಲ್ಲಿ ಬಿದ್ದರೆ ಪುನಶ್ಶರಣಾಗತಿರೂಪ ಪ್ರಾಯಶ್ಚಿತ್ತದ ಮೂಲಕ ಕೆಸರನ್ನು ತೊಳೆದುಕೊಳ್ಳುವನು. ಕಠಿನಮನಸ್ಕನಾಗಿ, ಅನಾಶ್ರಯ ಪ್ರಾಯಶ್ಚಿತ್ತಾದಿಗಳನ್ನವಲಂಬಿಸದವನು ಅಲ್ಪ ಶಿಕ್ಷೆಯಿಂದ ಶಿಕ್ಷಿಸಲ್ಪಟ್ಟು, ಅನಂತರ ಉಪಾಯ ಮಹಿಮೆಯಿಂದ ಕಡೆಗೆ ರಕ್ಷಿಸಲ್ಪಡುವನು. ಇಂತಹ ಪ್ರಪನ್ನನು ಬುದ್ಧಿಪೂರ್ವಕವಾಗಿ ಮಾಡಬಹುದಾದ ಅಪರಾಧಗಳಲ್ಲಿ ಭಾಗವತಾಪಚಾರವು ತುಂಬಾ ಗುರುತರವಾದುದು. ಆದುದರಿಂದ ಅದು ಸಂಭವಿಸದ ಹಾಗೆ ತುಂಬಾ ಜಾಗರೂಕನಾಗಿರಬೇಕು. ಮಾಶುಚಃ ಎಂಬ ಪದದಿಂದ, ಅರ್ಜುನನು ಈ ಚರಮಶ್ಲೋಕೋಕ್ತಿಯ ಕಾಲದಲ್ಲಿ ಉಪಾಸನೆಯು ತುಂಬಾ ಕಷ್ಟವಾದ ಉಪಾಯವೇ, ಸರ್ವ ಪಾಪಗಳು ಕಳೆಯುವ ಬಗೆ ಹೇಗೆ? ಅನಿಷ್ಟನಿವೃತ್ತಿ ಇಲ್ಲದೆ ದಿವ್ಯ ವೈಕುಂಠಪ್ರಾಪ್ತಿ ಎಲ್ಲಿಯದು? ಎಂದು ಶೋಕಿಸುತ್ತಿರುವವನನ್ನು ಕಂಡು "ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" ಎಂದು ಶ್ರೀ ಕೃಷ್ಣಭಗವಾನರವರು ಅತನನ್ನು ಸಮಾಧಾನಪಡಿಸಿದರೆಂಬುದು ವ್ಯಕ್ತವು. ಉಪಾಸನೆಯಲ್ಲಿ ಹೀಗೆ ಅಧಿಕಾರವಿದ್ದರೂ ಕರ್ಮಯೋಗಾದಿಗಳಿಂದ ಸಹಕೃತವಾದ ಭಕ್ತಿಯೋಗವನ್ನು ಅನುಷ್ಠಿಸುವದು ದುಷ್ಕರವಾದುದರಿಂದಲೂ ಅಧಿಕಾರವಿಲ್ಲದಿರುವ ಸ್ತ್ರೀಶೂದ್ರ ಚಂಡಾಲಾದಿ ಸರ್ವರಿಗೂ ಅನ್ವಯಿಸುವಹಾಗೆ ಲಘೂಪಾಯವಾದ ಪ್ರಪದನವನ್ನು ಈ ಎರಡನೆಯ ಯೋಜನೆಯಲ್ಲಿ ಅಥವಾ ಎಂದಾರಂಭಿಸಿ ತಿಳಿಸಿರುತ್ತಾರೆ.

ಇಲ್ಲಿ ಮಾಶುಚಃ ಎಂಬುದಕ್ಕೆ ಬರೀ ಶೋಕವನ್ನು ತ್ಯಜಿಸು ಎಂದು ಇಷ್ಟು ಮಾತ್ರವೇ ಅರ್ಥವಲ್ಲವು. ಎಲ್ಲಾ ಪಾಪಗಳೂ ಪ್ರಾಪ್ತಿ ವಿರೋಧಿಗಳು. ಅವುಗಳಿಂದ ಯಾವಾಗ ಪ್ರಪನ್ನನಾದುದರಿಂದ ಬಿಡಿಸಿದೆನೋ, ಆಗ ನೀನು "ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ" ಯಾದುದರಿಂದ ನೀನು ಸಂತೋಷಚಿತ್ತನಾಗಿರತಕ್ಕದ್ದು. ಏಕೆಂದರೆ ನೀನು ಶರಣಾಗತನಾದುದರಿಂದ ಕೃತಕೃತ್ಯನಾದೆ. ನೀನು ಆರ್ತನಾದರೆ ಒಡನೆ ದೇಹಾವಸಾನ ಉಂಟಾಗಿ ನನ್ನನ್ನು ಬಂದು ಸೇರುವಿ; ಹಾಗಲ್ಲದೆ ದೃಪ್ತನಾದರೆ ದೇಹಾವಸಾನಾನಂತರ ಅರ್ಚಿರಾದಿ ಗತಿಯ ಮೂಲಕ ನನ್ನನ್ನು ಬಂದು ಸೇರಿ, ಕೈಂಕರ್ಯ ಸಾಮ್ರಾಜ್ಯ ಪದವಿಯನ್ನು ಹೊಂದುವಿಯಾದುದರಿಂದ ಹರ್ಷಕ್ಕೆ ಕಾರಣವೇ ವಿನಾ ಶೋಕಕ್ಕೆ ಕಾರಣವಿಲ್ಲವೆಂಬುದು ತಾತ್ಪರ್ಯವು.

ಈ ಹಿಂದಿನ ಶ್ಲೋಕವನ್ನೂ ಈ ಚರಮಶ್ಲೋಕವನ್ನೂ ಒಟ್ಟಿಗೆ ಅನುಸಂಧಾನಮಾಡುವದರಿಂದ ಶಕ್ತನಾದ ಅಧಿಕಾರವಿರುವವನಿಗೆ ಉಪಾಯವು ಉಪಾಸನೆಯೆಂದೂ, ಅಶಕ್ತನಿಗೂ ಅಧಿಕಾರವಿಲ್ಲದವನಿಗೂ ಹೀಗೆ ಸರ್ವರಿಗೂ, ಉಪಾಯವು ಭರನ್ಯಾಸವೆಂದೂ ಶ್ರೀಕೃಷ್ಣಭಗವಾನರವರು ಉಪದೇಶಿಸಿರುವರೆಂಬುದು ವ್ಯಕ್ತಪಡುತ್ತದೆ. ಇದನ್ನೇ ಶಾಸ್ತ್ರಜ್ಞರು "ಭಕ್ತ್ಯಾ ಪರಮಯಾ ವಾಪಿ ಪ್ರಪತ್ತ್ಯಾ ವಾ ಮಹಾಮತೇ" "ಶರಣಂ ತ್ವಾಂ ಪ್ರಪನ್ನಾಯೇ" "ನರಸ್ಯ ಬುದ್ಧಿ ದೌರ್ಬಲ್ಯಾತ್ ಉಪಾಯಾಂತರ ಮಿಷ್ಯತೇ" ಇತ್ಯಾದಿ ಸ್ಥಳಗಳಲ್ಲಿ ಉಪಪಾದಿಸಿರುತ್ತಾರೆ. ಅನೇಕ ಶ್ರುತಿ ಸ್ಮೃತಿ ಸಂಹಿತೇತಿಹಾಸ ಪುರಾಣಾದಿಗಳಲ್ಲೂ ಉಪಪಾದಿತವು. ಈ ಗ್ರಂಥದಲ್ಲೇ, ಆದಿಯಲ್ಲಿ ಶಾಧಿಮಾಂ ತ್ವಾಂ ಪ್ರಪನ್ನಂ ಎಂಬಲ್ಲೇ ಶರಣಾಗತಿಯನ್ನನುಷ್ಠಿಸಿ

ಅರ್ಜುನನು ಶ ಸ್ತ್ರೋಪದೇಶವನ್ನು ಫಲವಾಗಿ ಹೊಂದಿದನು. ಪುನಃ ಶರಣಾಗತಿಯನ್ನು ಅನು ಷ್ಠಿಸಿ ಹನ್ನೊಂದನೆಯ ಅಧ್ಯಾಯದಲ್ಲಿ ಪರರೂಪವನ್ನು ತೋರಿಸು ಎಂದು ಪ್ರಾರ್ಥಿಸಿ ತನ್ನ ಕೋರಿಕೆಯನ್ನು ಪಡೆದನು. ನಾಲ್ಕು ಜನರು ನ ಪ್ರಪದ್ಯನ್ತೇ ಎಂದು (ಗೀ. ೭) ಎಂಬಲ್ಲಿ ಹೇಳಿರುತ್ತಾರೆ. ಹಾಗೆಯೇ ಉಪಾಸನಕ್ಕೆ ಅಧಿಕಾರಿಗಳಲ್ಲದ ಸ್ತ್ರಿಯೋವೈಶ್ಯಾಸ್ತಥಾಶೂದ್ರಾ ಸ್ತೇಪಿ ಯಾನ್ತಿ ಪರಾಂ ಗತಿಮ್" ಇತ್ಯಾದಿಗಳೆಲ್ಲಾ ಇರುವದರಿಂದ ಎರಡು ಉಪಾಯಗಳೂ ಭಕ್ತಿಪ್ರಪತ್ತಿಗಳೂ ಹೇಳಲ್ಪಟ್ಟವೆಂಬುದು ಸಿದ್ಧವು.

ಇಲ್ಲಿ ಅರ್ಜುನನನ್ನು ವ್ಯಾಜೀಕರಿಸಿ ಅಕಿಂಚನ್ಯ ಅನನ್ಯಗತಿತ್ವಗಳಿಂದ ಶೋಕಿಸುತ್ತಿರುವ ಸರ್ವರಿಗೂ ಹೇಳಿದ ಲಘೂಪಾಯವನ್ನು ಉಪದೇಶಿಸಿದಹಾಗೆ ಶ್ರೀಕೃಷ್ಣಭಗವಾನವರೇ ಭಾಗವತ ಏಕಾದಶ ಸ್ಕಂಧದಲ್ಲಿ ಉದ್ಧವರಿಗೆ ಉಪದೇಶಿಸಿರುತ್ತಾರೆ. ಅದು ಹಿಂದೆ ಉದಾಹರಿಸಿರುವ "ತಸ್ಮಾತ್ತ್ವಂ ಉದ್ಧವೋತ್ಸೃಜ್ಯ" ಎಂಬುದರಿಂದ ಗ್ರಹಿಸಬಹುದು.

ಈ ಲಘೂಪಾಯವನ್ನೇ ಶ್ರೀ ಯತಿವರ್ಯರು ಅನುಷ್ಠಿಸಿರುವದಾಗಿ ಶರಣಾಗತಿಗದ್ಯದಲ್ಲಿ ತೋರ್ಪಡಿಸಿರುತ್ತಾರೆ. ಪ್ರತಿನಿತ್ಯವೂ ಪ್ರಪನ್ನರೆಲ್ಲಾ ಅದನ್ನು ಅನುಸಂಧಾನರೀತ್ಯಾ ಪಠಿಸುವದು ಅವಶ್ಯಕವು. ಹೀಗೆ ಅವಲಂಬಿಸಬಹುದೆಂಬುದು ಅವರಿಗೆ ಶ್ರೀ ತಿರುಕ್ಕೋಟ್ಟಿಯೂರ್ ನಂಬಿ ಗುರುಗಳ ಉಪದೇಶವು. ಅದೂ ಅಲ್ಲದೆ ಶ್ರೀ ಯತಿವರ್ಯರು "ಯತ್ಪದಾಂಬೋ ರುಹಧ್ಯಾನ" ವೆಂಬ ಶ್ಲೋಕದಲ್ಲಿ ಶ್ರೀ ಯಾಮುನಮುನಿಗಳನ್ನು ಪರಮಗುರುವಾಗಿ ಭಾವಿಸಿರು ವದರಿಂದ, ಶ್ರೀ ಯಾಮುನಮುನಿಗಳು "ನಧರ್ಮನಿಷ್ಠೋಸ್ಮಿ" ಎಂಬ ಶ್ಲೋಕದಲ್ಲಿ ಗುರೂಪಾಯಾ ನುಷ್ಠಾನಕ್ಕೆ ತಮ್ಮ ಅಶಕ್ತತೆಯನ್ನು ಹೇಳಿ ಭರನ್ಯಾಸವನ್ನು ಅವಲಂಬಿಸಿರುವದನ್ನು ಶ್ರೀ ಆಳವಂದಾರ್ ಸ್ತೋತ್ರದಲ್ಲೇ ವ್ಯಕ್ತಪಡಿಸಿರುವದರಿಂದ, ಈ ಲಘೂಪಾಯವನ್ನೇ ಶ್ರೀ ವೈಷ್ಣವ ಮಂಡಲಿಯವರೆಲ್ಲಾ ಈಗ ಸಾಂಪ್ರದಾಯಿಕವಾದ ಮಾರ್ಗವೆಂದು ಅವಲಂಬಿಸಿರುತ್ತಾರೆ.

ಈ ಚರಮಶ್ಲೋಕದ ಸಾರಭೂತವಾದ ಅರ್ಥವು ಸಙ್ಗ್ರಹವಾಗಿ ಇಷ್ಟೇ.—"ಮೋಕ್ಷೋ ಪಾಯಾದಿಗಳಾದ ಉಪಾಸನರೂಪ ಬ್ರಹ್ಮವಿದ್ಯೆಗಳಿಗೂ ತದಙ್ಗಗಳಿಗೂ ಅಶಕ್ತನಾದ ನೀನು, ಶರ ಣಾಗತವತ್ಸಲನಾಗಿ ಆಶ್ರಯೋಪಯುಕ್ತ ಮಹಾಗುಣನಿಧಿಯಾದ ನನ್ನ ಪಾದಾರವಿಂದದಲ್ಲಿ ಭರ ನ್ಯಾಸವನ್ನು ಮಾಡು. ಸಮಸ್ತ ಪ್ರತಿಬಂಧಕ ಪುಣ್ಯಪಾಪಗಳಿಂದ ಬಿಡಿಸಿ, ನನ್ನನ್ನು ನೀನು ಬಂದು ಸೇರುವಹಾಗೆ ಮಾಡಿ ನಿರತಿಶಯಾನಂದವನ್ನು ಹೊಂದುವಹಾಗೆ ಮಾಡುವೆನು. ನೀನ ಶೋಕಿಸುವ ಕೆಲಸವಿಲ್ಲ. ನೀನು ಇದರಿಂದ ಕೃತಕೃತ್ಯನಾಗುವದರಿಂದ, ನೀನು ನಿರ್ಭರನಾಗಿ ನಿರ್ಭಯನಾಗಿ, ಹೃಷ್ಟಮನಸ್ಕನಾಗಿರು" ಎಂಬುದು.

ಪ್ರಾಪ್ತ ಸ್ಥಳಗಳಲ್ಲಿ ತಮ್ಮ ಸಿದ್ಧಾನ್ತಕ್ಕೂ ಅದ್ವೈತಾದಿ ಸಿದ್ಧಾನ್ತಗಳಿಗೂ ಇರುವ ವ್ಯತ್ಯಾಸ ವನ್ನು ಶ್ರೀ ದೇಶಿಕರವರು ತೋರಿಸಿರುತ್ತಾರೆ ಅಲ್ಲಿ ಹೇಳದೆ ಇರುವ ಇನ್ನೂ ಕೆಲವು ವ್ಯತ್ಯಾಸ ಗಳನ್ನು ಇಲ್ಲಿ ಗ್ರಂಥಾಂತ್ಯದಲ್ಲಿ ತಿಳಿಸುತ್ತಾರೆ. ಪ್ರಥಮೋಧ್ಯಾಯದಲ್ಲಿ ಅರ್ಜುನನು ಅಸ್ಥಾನ ಸ್ನೇಹಕಾರುಣ್ಯಾದಿಗಳಿಂದ ಪ್ರೇರಿತನಾಗಿ ಶಾಸ್ತ್ರೋಲ್ಲಂಘನಮಾಡುವ ಪೂರ್ವಪಕ್ಷವನ್ನು ದೇಹಾತ ಭ್ರಮೆಯ ಮೂಲಕ ಮಾಡಿದುದರಿಂದ, ಅದಕ್ಕಾಗಿ ದ್ವಿತೀಯಾಧ್ಯಾಯದಲ್ಲಿ ಆತನು ಮಾಡಿದ ಶರಣಾಗತಿಗೆ ಕಟ್ಟುಬಿದ್ದು ಅಧ್ಯಾತ್ಮಶಾಸ್ತ್ರದ ಉಪದೇಶವನ್ನು ಮಾಡಬೇಕಾಗಿ ಆತನಿಗೆ ಸಮಾ ಧಾನ ಹೇಳಬೇಕಾಗಿ ಬಂತೆಂಬುವದೂ ನಿರ್ವಿವಾದ ವಿಷಯವು.

ದ್ವಿತೀಯಾಧ್ಯಾಯದಲ್ಲಿ ಹೇಳಲ್ಪಟ್ಟ ಕರ್ಮಯೋಗಾದಿಗಳಲ್ಲೂ ಭಗವಂತನೇ ಆರಾಧ್ಯ ನೆಂಬಲ್ಲೂ ಇಬ್ಬರಿಗೂ ಏನೆಂಮೂ ಸಮುತ್ಪಕವಿಲ್ಲದುದಿಲ್ಲವು. ಆದರೆ ಭಗವಂತನಲ್ಲಿ ಸಮಸ್ತ ಕರ್ಮಗಳನ್ನು ಸಮರ್ಪಿಸಬೇಕಾದುದು ಅಲ್ಲಿ ಪ್ರಕರಣಾನುಗುಣವಾಗಿ ಮುಖ್ಯವಲ್ಲವು, ಏಕೆಂದರೆ ಗವಂತನ ಭಜನವು ೬ನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಯೋಗಿನಾಮಪಿಸರ್ವೇ

**ಷಾಂ** ಮದ್ಗತೇನಾನ್ತರಾತ್ಮನಾ । **ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ** ಎಂದು ವಿವೇಕಿಸಿ ಹೇಳುವದರಿಂದ ಎರಡನೆಯ ಮೂರನೆಯ ಮೊದಲುಗೊಂಡು ಆರನೆಯ ಅಧ್ಯಾಯದವರೆಗೂ ಜೀವಾತ್ಮಸ್ವರೂಪವನ್ನು ಕುರಿತು ಕರ್ಮಯೋಗ ಜ್ಞಾನಯೋಗಾದಿಗಳಲ್ಲಿ ಹೇಳಿರುವದು ಜೀವಾತ್ಮವಿಷಯವೆಂದೇ ಹೇಳಬೇಕಾದುದರಿಂದ ಜೀವಾತ್ಮ ಪರಮಾತ್ಮ ಭೇದವೇ ಏರ್ಪಟ್ಟಿತೇ ವಿನಾ ಅನ್ಯಥಾ ಅಲ್ಲವು. ಅಂತಹ ಭೇದವೇ **ನತ್ವೇವಾಹಂ ಜಾತು** ನಾಸಂ ಎಂಬ ಶ್ಲೋಕದಲ್ಲಿ "ನಿತ್ಯೋನಿತ್ಯಾನಾಂ **ಚೇತನಶ್ಚೇ**ತನಾನಾಂ" "**ಪೃಥಗಾತ್ಮಾನಂ ಪ್ರೇರಿತಾರಂ**ಚ ಮತ್ವಾ" "**ಜ್ಞಾಜ್ಞೌ** ದ್ವಾವಜಾ ಈಶನೀಶೌ" "**ಕ್ಷ**ರಂ **ಪ್ರಧಾನಂ ಅಮೃ**ತಾಕ್ಷರಂ **ಹರಃ, ಕ್ಷರಾತ್ಮಾನೌ ಈಶತೇ** ದೇವ ಏಕಃ" ಇತ್ಯಾದ್ಯನೇಕ **ಭೇದಪ್ರತಿಪಾದಕ** ಶ್ರುತಿಗಳಿಗನುಗುಣವಾಗಿಯೇ ಉಪಪಾದಿಸಲ್ಪಟ್ಟಿತು. ಇಂತಹ ಪ್ರತ್ಯಗಾತ್ಮದರ್ಶನವು ಪರವಿದ್ಯೆಗೆ ಅಙ್ಗವೆಂದು ಪ್ರಜಾಪತಿವಾಕ್ಯದಲ್ಲಿ ಛಾಂದೋಗ್ಯದಲ್ಲಿ ಹೇಳಲ್ಪಟ್ಟಿರುತ್ತದೆ. ಇದೀಗ ತುಂಬಾ ಮುಖ್ಯವಾಗ ವ್ಯತ್ಯಾಸವು. ಪ್ರತ್ಯಗಾತ್ಮ ದರ್ಶನಕ್ಕಿಂತ ವಿಲಕ್ಷಣವಾಗಿ ಭಗವಂತನ ಉಪಾಸನವು ಹೇಳಲ್ಪಟ್ಟಿರುವದರಿಂದ ಜೀವಾತ್ಮಪರಮಾತ್ಮ ಭೇದವಿಲ್ಲವೆಂದು ಹೇಳುವದು ಸಾಧ್ಯವೇ ಇಲ್ಲವು. ಆದುದರಿಂದ ಮೊದಲಿನ ಆರು ಅಧ್ಯಾಯಗಳೂ ಜೀವಾತ್ಮ ಪರವಾದ ವಿಷಯವೇ ವಿನಾ ಪರಮಾತ್ಮವಿಷಯವಾದುದಲ್ಲವು. ಆರನೆಯ ಅಧ್ಯಾಯವು ಪರಮಾತ್ಮೋಪಾಸನ ಪರವಾದುದೆಂಬ ವಾದವು ಸರಿಯಲ್ಲವು. ಏಕೆಂದರೆ "**ಯೋಗಿನಾಮಪಿ**" ಎಂಬ ಕೊನೆಯ ಶ್ಲೋಕದಲ್ಲಿ ಕರ್ಮಯೋಗಕ್ಕೂ ಶ್ರೇಷ್ಠವಾದ ಯೋಗವಾದ ಉಪಾಸನವುಂಟು. ಅದು ಮುಂದೆ ಹೇಳಲ್ಪಡುತ್ತದೆಂದು ತಿಳಿಸಿ, ೭ನೆಯ ಅಧ್ಯಾಯದಲ್ಲಿ ಪರಮಾತ್ಮನ ಸ್ವರೂಪಾದಿಗಳನ್ನು ಹೇಳಿ, ೯ನೆಯ ಅಧ್ಯಾಯದ ಕೊನೆಯಲ್ಲಿ ಪರಮಪುರುಷನ ಉಪಾಸನೆಯು ಉಪದೇಶಿಸಲ್ಪಟ್ಟಿತು. ಹೀಗೆ ೭ನೆಯ ಅಧ್ಯಾಯದಿಂದ ಮುಂದಕ್ಕೇ ಭಗವದುಪಾಸನವು ಬೋಧಿತವು ಎಂದರೆ ಉಪಾಸನಕ್ರಮವು ೭ನೆಯ ಅಧ್ಯಾಯಾನಂತರ ಎಲ್ಲಿ ಹೇಳಿದೆ ಎಂದು ಆಕ್ಷೇಪಿಸಿದರೆ ಉಪಾಸನಕ್ರಮವು ೬ನೆಯ ಅಧ್ಯಾಯದಲ್ಲಿ ಜೀವಾತ್ಮನ ವಿಷಯದಲ್ಲೇ ಹೇಳಿರುವದನ್ನೇ ಅತಿದೇಶರೂಪದಲ್ಲಿ ಇಟ್ಟುಕೊಳ್ಳತಕ್ಕದ್ದು ಎಂಬುದು ಶಾಸ್ತ್ರಸಮ್ಮತವಾದುದು. ಕೆಲವರು ಮೂರನೆಯ ಅಧ್ಯಾಯದಲ್ಲಿ ಕರ್ಮಯೋಗಜ್ಞಾನಯೋಗಗಳ ವಿಮರ್ಶೆಯು ಪ್ರದರ್ಶಿಸಲ್ಪಟ್ಟಿತೆಂದು ಹೇಳುವದು ಸರಿಯಲ್ಲವು. ಏಕೆಂದರೆ ಭಕ್ತಿಯೋಗಕ್ಕೆ ಎರಡೂ ಸಾಧನಗಳಾಗಿ ಅಂಗಗಳು. ಇವೆರಡಕ್ಕೂ ಅಧಿಕಾರಿ ಭೇದವನ್ನು "**ಜ್ಞಾನಯೋಗೇನ ಸಾಂಖ್ಯಾನಾಂ** ಕರ್ಮಯೋಗೇನ **ಯೋಗಿನಾಂ**" ಎಂದು ಹೇಳಿ ಸರ್ವೇಂದ್ರಿಯೋಪರತಿ ಇರುವವನು ಕರ್ಮಯೋಗಜ್ಞಾನಯೋಗಗಳನ್ನು ಅನುಷ್ಠಿಸಬಹುದೆಂದೂ ಅಂತಹ ಶಕ್ತಿ ಇಲ್ಲದವನಿಗೆ ಕರ್ಮಯೋಗಮಾತ್ರದಿಂದಲೇ ಭಕ್ತಿಯೋಗಕ್ಕೆ ಅಧಿಕಾರವನ್ನು ಜನಕಾದಿಗಳಹಾಗೆ ಹೊಂದಬಹುದೆಂದೂ ಹೇಳಲ್ಪಟ್ಟಿತು.

ಇವೆರಡು ನಿಷ್ಠೆಗಳೂ ಮೋಕ್ಷೋಪಾಯಕ್ಕೆ ಹೇತುವೆಂದೂ "**ನಿಶ್ರೇಯಸಕರಾವುಭೌ**" (ಗೀ. ೫-೨) ಎಂಬಲ್ಲಿ ಹೇಳುವದರಿಂದ ಅಷ್ಟು ಲಂಬವಾದ ಅವತಾರಿಕೆಗೆ ಅವಕಾಶವೇ ಇಲ್ಲವು. ಕೊನೆವರೆಗೂ "**ಸ್ವೇಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ** ಲಭತೇ ನರಃ" (ಗೀ. ೧೮-೪೫) ಎಂಬ ಉಪದೇಶಕ್ಕೂ "**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ** ಸಮಾಃ। **ಏವಂ ತ್ವಯಿ ನಾನ್ಯಥೇತೋಽಸ್ತಿ** ನ ಕರ್ಮ **ಲಿಪ್ಯತೇ ನರೇ**" (ಈಶಾ) ಎಂಬ "ಶ್ರುತ್ಯಾದಿಗಳಿಗೂ **ಸರ್ವಾಪೇಕ್ಷಾಚ ಯಜ್ಞಾದಿ ಶ್ರುತೇರಶ್ವವತ್**" ಎಂಬ ಬ್ರಹ್ಮಸೂತ್ರಕ್ಕೂ ೩-೪-೨೬ ಮತ್ತು ಅನೇಕ ಋಷಿ **ಪ್ರೋಕ್ತಸ್ಮೃತಿ** ವಚನಗಳಿಗೂ **ಅಹರಹಸ್ಸಂಧ್ಯಾಮುಪಾಸೀತ** ಇತ್ಯಾದಿ ವಿಧ್ಯುಕ್ತಿಗಳಿಗೂ ಪರಮವಿರುದ್ಧವು. ಆದರೆ **ದೂರೇಣ ಹ್ಯವರಂ ಕರ್ಮ** ಎಂದು (೨-೪೯) ಕರ್ಮವು ನಿಂದಿಸಲ್ಪಟ್ಟಿದೆಯಲ್ಲಾ ಎಂದರೆ ಅದು ವಿಹಿತ ನಿತ್ಯನೈಮಿತ್ತಿಕಾದಿ ಕರ್ಮಗಳ ವಿಷಯವಲ್ಲವು, ಆ ನಿಂದೆಯು

ಕಾಮ್ಯಕರ್ಮಗಳ ವಿಷಯವಾದುದು ; ಫಲಾಭಿಸಂಧಿ ಇರುವ ಕರ್ಮವೀಗ ನಿಂದ್ಯವು, ಬಂಧಕವು. ಫಲಾಭಿಸಂಧಿರಹಿತ ಕರ್ಮವು ಶ್ರೇಯಸ್ಸಾಧಕವೆಂಬ ಭಾವದಲ್ಲಿ ಹೇಳಲ್ಪಟ್ಟಿದೆ. ಇಲ್ಲಿ ಕರ್ಮವನ್ನು ನಿಂದಿಸಿತು ಎಂದರೆ, ಮುಂದಿನ ಶ್ಲೋಕದಲ್ಲಿ ಪುನಃ ಕರ್ಮವನ್ನೇ ಮಾಡು ಎಂದು "ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್" (೨–೫೦) ಎಂಬ ಉಪದೇಶಕ್ಕೆ ಗತಿ ಏನು ? "ಯಸ್ತ್ವಾತ್ಮರತಿರೇವಸ್ಯಾತ್" (ಗೀ. ೩-೧೭, ೧೮) ಎಂದಾರಂಭಿಸಿ ಹೇಳಿದ ಎರಡು ಶ್ಲೋಕಗಳಲ್ಲಿ ಮೋಕ್ಷಾಭಿಲಾಷೆಯು ಚೆನ್ನಾಗಿ ತೋರಿಬಂದು ಪರಮಾತ್ಮೈಕರತಿಯುಂಟಾಗಿರುವವನಿಗೆ ಮಾಡಬೇಕಾದ ಕರ್ಮದಿಂದ ಏನೊಂದೂ ಪ್ರಯೋಜನವಿಲ್ಲವು. ಎಂದೂ, ಅಕೃತ್ಯವನ್ನುಮಾಡಿದರೂ ಪರಮಾತ್ಮನಿಂದ ಪ್ರತ್ಯವಾಯವೂ ಇಲ್ಲವು! ಎಂದೂ ಮತ್ತು ಅಜ್ಞಾನಿಗೇಗ ಕರ್ಮದ ಆವಶ್ಯಕತೆಯು, ಜ್ಞಾನಿಗೆ ಆವಶ್ಯಕವಿಲ್ಲವೆಂಬ ಎಂಬ ಅಭಿಪ್ರಾಯಗಳೂ ಸರಿಯಲ್ಲವು. ಏಕೆಂದರೆ "ನಾವಿರತೋ ದುಶ್ಚರಿತಾತ್" ಎಂಬ ಶ್ಲೋಕಾಭಿಪ್ರಾಯವು ಇದಕ್ಕೆ ವಿರುದ್ಧವಾಗುತ್ತದೆ. ಈ ಶ್ಲೋಕದ ವ್ಯಾಖ್ಯಾನಗಳನ್ನು ನೋಡಿ ಅಲ್ಲಿ ವಿಹಿತ ಕರ್ಮತ್ಯಾಗವು ಹೇಳಲ್ಪಡಲಿಲ್ಲವು. ಆದುದರಿಂದ "ಹತ್ವಾಪಿ ಸ ಇಮಾಲ್ಲೋಕಾನ್ ನಹನ್ತಿ ನನಿಬಧ್ಯತೇ" (ಗೀ. ೧೮–೧೭) ಎಂಬಲ್ಲಿ ಹೇಳಿರುವದು ಧರ್ಮಯುದ್ಧದಲ್ಲಿ ಕೊಂದರೂ, ನಾನು ಯುದ್ಧಮಾಡಿದೆನು, ನಾನು ಕೊಂದೆನು ಎಂಬ ಅಹಂಕಾರ ಶೂನ್ಯನಾಗಿ ತನ್ನ ಇತಿಕರ್ತವ್ಯವಾಗಿ ಭಗವತ್ಪ್ರೀತಿಗಾಗಿ ಮಾಡಿದ ದುಷ್ಟನಿಗ್ರಹ ವಿಷಯವಾದುದರಿಂದ, ಇದಕ್ಕೆ ಸಂಬಂಧಿಸುವುದಿಲ್ಲವು. ಆದುದರಿಂದ ಮೇಲಿನ "ಯಸ್ತ್ವಾತ್ಮರತಿಃ" ಎಂಬೀ ಎರಡು ಶ್ಲೋಕಗಳು ಸಮಾಧಿಯಲ್ಲಿರುವ ಅವಸ್ಥೆಯಲ್ಲಿ ಮಾತ್ರ ಮುಕ್ತದೆಶೆಯಲ್ಲಿರುವಹಾಗೆ ವಿಹಿತಕರ್ಮಗಳ ತ್ಯಾಗವು ಹೇಳಲ್ಪಟ್ಟಿತೆಂದರೆ ಒಪ್ಪಬಹುದು. ಆರನೆಯ ಅಧ್ಯಾಯದಲ್ಲಿ ಅವರುಗಳೇ ಯಂ ಸನ್ಯಾಸ ಇತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಣ್ಡವ (ಗೀ. ೬-೨) ಎಂಬ ಶ್ಲೋಕದಲ್ಲಿ ಸಮಾಧಿವೇಳೆಯಲ್ಲಿ ಮಾತ್ರ ವಿಹಿತಕರ್ಮಗಳ ತ್ಯಾಗಮಾಡಬಹುದೆಂದೂ, ಬೇರೆ ಕಾಲದಲ್ಲಿ ಆಗದೆಂದೂ ಹೇಳಲ್ಪಟ್ಟಿರುತ್ತದೆಂದು ಹೇಳಿರುತ್ತಾರೆ. ಅನಂತರ ಆ ಮುಂದಿನ ಶ್ಲೋಕವಾದ ಆರುರುಕ್ಷೋರ್ಮುನೇರ್ಯೋಗಮ್ (ಗೀ. ೬.೩) ಎಂಬಲ್ಲೂ ಯಾವ ಜಿತೇಂದ್ರಿಯನಿಗೆ ಸಕಲ ಕರ್ಮಾನುಷ್ಠಾನ ಕಾಲವೂ ಸಮಾಧಿಯಲ್ಲಿ ಕಳೆಯುತ್ತದೋ ಅವನಿಗೆ ಕರ್ಮಗಳು ಆವಶ್ಯಕವಿಲ್ಲವೆಂದೂ, ಬೇರೆಯವರಿಗೆ ಹಾಗಲ್ಲವೆಂದೂ ಹಾಗೆಯೇ ಹೇಳಿ, ಈ ಅರ್ಥಗಳೇ ಮೂರು ನಾಲ್ಕು ಐದನೇ ಅಧ್ಯಾಯಗಳಲ್ಲಿ ಉಪಪಾದಿತವೆಂದೂ ಹೀಗೆ ಪರಸ್ಪರ ವಿರುದ್ಧವಾಗಿ ಹೇಳುವರು; ೩ನೆಯ ಅಧ್ಯಾಯದಲ್ಲಿ ಯಸ್ತ್ವಾತ್ಮರತಿರೇವಸ್ಯಾತ್ [ಗೀ.೩-೧೭] ಎಂಬಲ್ಲೂ ೪ನೆಯ ಅಧ್ಯಾಯದಲ್ಲಿ ಯೋಗಸನ್ನ್ಯಸ್ತಕರ್ಮಾಣಂ [ಗೀ.೪-೪೧] ಎಂಬಲ್ಲೂ. ೫ನೆಯ ಅಧ್ಯಾಯದಲ್ಲಿ ಸರ್ವಕರ್ಮಾಣಿ ಮನಸಾ ಸನ್ನ್ಯಸ್ಯ [ಗೀ. ೫-೧೩] ಎಂಬಲ್ಲೂ, ಇಂತವರಿಗೆಲ್ಲಾ ಕರ್ಮತ್ಯಾಗವು ಯುಕ್ತವೆಂದು ಹೇಳಿದೆ ಎಂದು ಅರ್ಥಮಾಡಿರುತ್ತಾರೆ. ಇಂತವರು ಲೋಕವಿಖ್ಯಾತರಾಗಿ ಲೋಕದವರಿಗೆ ಕನ್ನಡಿಯಾಗಿರುವ ಶ್ರೇಷ್ಠರಿಗೆ ತಮಗೆ ಕರ್ಮಾನುಷ್ಠಾನದಿಂದ ಯಾವ ಪ್ರಯೋಜನವೂ ಇಲ್ಲದಿದ್ದರೂ ಕರ್ಮ ಮಾಡಬೇಕೆಂದೂ ಒಂದು ವೇಳೆ ಬೇಡದ ಕರ್ಮಾನುಷ್ಠಾನವನ್ನು ಮಾಡುವದರಿಂದ ಪ್ರತ್ಯವಾಯವೂ ಇಲ್ಲವೆಂದೂ, ಹೀಗೆಲ್ಲಾ ಹೇಳುವದು ಆಯಾ ಸಂದರ್ಭದಲ್ಲಿ ಅಪ್ರಸ್ತುತವಾದ ಉಪನ್ಯಾಸವೆಂಬುದನ್ನು ಆಯಾ ಶ್ಲೋಕಗಳ ಉಪಪಾದನೆಯಲ್ಲಿ ವ್ಯಕ್ತವು. ಗೀತೆಯ ಸಾರಾಂಶವೇ ಇತಿಕರ್ತವ್ಯತೆಯನ್ನು ಎಂದಿಗೂ ಬಿಡತಕ್ಕದ್ದಲ್ಲವು ಎಂಬುದು. ಹೀಗಿರುವಾಗ ವಿಹಿತ ಕರ್ಮಗಳ ಪರಿತ್ಯಾಗಕ್ಕೆ ಅನುಮತಿ ಉಂಟೆಂದು ಹೇಳುವದು ಗೀತೆಯ ಮುಖ್ಯಾಭಿಪ್ರಾಯವನ್ನೇ ತ್ಯಾಗಮಾಡಿದಂತಾಗುತ್ತದೆ. ೧೮ನೆಯ ಅಧ್ಯಾಯದಲ್ಲಿ ಶಾಸ್ತ್ರಚೋದಿತನ್ಯಾಸ ತ್ಯಾಗ ಶಬ್ದಗಳ ಅಭಿಪ್ರಾಯದಲ್ಲಿ ಎಲ್ಲಿ ವ್ಯತ್ಯಸ್ತವಾದ ಭಾವನೆಯುಂಟಾಗುತ್ತದೋ ಎಂಬ ಭೀತಿಯಿಂದ ವಿಹಿತಕರ್ಮಗಳನ್ನು ತ್ಯಾಗಮಾಡಕೂಡದೆಂದೂ, ಮಾಡಲೇಬೇಕೆಂದೂ, ಅವು

ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪ ನಿವಾರಕಗಳಾಗಿ ಪಾವನವಾದವೆಂದೂ ಹೇಳಲ್ಪಟ್ಟಿರುತ್ತದೆ. ಅಲ್ಲಿ ಕರ್ಮಸನ್ಯಾಸ ಮತ್ತು ತ್ಯಾಗ ಶಬ್ದಗಳು ಸಮಾನಾರ್ಥಕಗಳೆಂದೂ, ಅವುಗಳ ಅರ್ಥವು ಸ್ವರೂಪತಃ ಕರ್ಮತ್ಯಾಗವಲ್ಲವೆಂದೂ, ಕರ್ಮಗಳ ಫಲ, ಕರ್ತೃತ್ವ ಮುಮತಾ ತ್ಯಾಗಗಳೆಂದೂ, ಉಪದೇಶಿಸಲ್ಪಟ್ಟಿತು.

ಯೋಗಿಯು ನಿಷಿದ್ಧಾನುಷ್ಠಾನಮಾಡಿದರೂ ಪ್ರತ್ಯವಾಯುವಿಲ್ಲವೆಂದೂ ಒಂದು ವೇಳೆ ವಿಹಿತವಾದವನ್ನು ಮಾಡಿದರೂ ಪ್ರಯೋಜನವೇನೂ ಇಲ್ಲವನ್ನೆ ಎಂಬ ಅವರುಗಳ ಅಭಿಪ್ರಾಯವು ಅಪ್ರಸ್ತುತವಾದ ಶಾಸ್ತ್ರಸಮ್ಮತಿಯಿಲ್ಲದ ಉಪನ್ಯಾಸವು.

**ಕರ್ಮಣೈವಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ** (ಗೀ. ೩-೨೦) ಎಂಬಲ್ಲಿ ಕ್ಷತ್ರಿಯರಾದ ಜನಕಾದಿಗಳಾದ ರಾಜರುಗಳೇ ಲೋಕದಲ್ಲಿ ಪ್ರಸಿದ್ಧರಾಮದರಿಂದ ಅಂತವರು ಕರ್ಮಗಳನ್ನು ಅನುಷ್ಠಿಸತಕ್ಕದ್ದೆಂದೂ ಇತರರಿಗೆ ಅನಾವಶ್ಯಕವೆಂದು ಅರ್ಥಮಾಡುವದೂ, ಮತ್ತು ಹಾಗೆಯೇ **ಏವಂ ಪರಂಪರಾ ಪ್ರಾಪ್ತಂ ರಾಜರ್ಷಯೋ ವಿದುಃ** (ಗೀ. ೪-೨ ಎಂದು ಹೇಳಿರುವದರಿಂದ ಕ್ಷತ್ರಿಯರಾದ ರಾಜರುಗಳು ಪ್ರಸಿದ್ಧರಾಮುದರಿಂದಲೇ ಇತರರಿಗೆ ಆದರ್ಶಪ್ರಾಯರಾಗಿ ಲೋಕಸಙ್ಗ್ರಹಾರ್ಥವಾಗಿ ಕರ್ಮಗಳನ್ನನುಷ್ಠಿಸತಕ್ಕದ್ದು. ಇತರರಿಗೆ ಬೇಕಿಲ್ಲವೆಂದು ಅರ್ಥಮಾಡುವದೂ ತುಂಬಾ ಅಸ್ವಾರಸ್ಯವಾದ ಅಭಿಪ್ರಾಯವು. ಮತ್ತು **ಏವಂ ಪರಂಪರಾ ಪ್ರಾಪ್ತಮಿಮಂ ರಾಜರ್ಷಯೋ ವಿದುಃ**" ಎಂಬಲ್ಲಿ ಯೋಗಿಗಳಾದ ರಾಜರುಗಳಿಗೇ ಈ ಕರ್ಮಪರಿತ್ಯಾಗವು ಹೇಳಿರುದು ಇತರರಿಗೆ ಹೇಳಿದುದಲ್ಲವೆಂಬ ಅಭಿಪ್ರಾಯವೂ ಸರಿಯಲ್ಲವು. ಏಕೆಂದರೆ ಎಲ್ಲರೂ ವಿಹಿತ ಕರ್ಮಗಳನ್ನು ಪರಿತ್ಯಾಗ ಮಾಡಕೂಡದೆಂಬುದು "**ಇಮಂ ರಾಜರ್ಷಯೋವಿದುಃ** ಎಂಬಲ್ಲಿ ಸುಸ್ಪಷ್ಟವಾದುದರಿಂದ ಇನ್ನು ಕೆಲವರು ವಿಹಿತ ಕರ್ಮವನ್ನೇ ಎಲ್ಲರೂ ಅನುಷ್ಠಿಸತಕ್ಕದ್ದು ಪ್ರಸಿದ್ಧನಾದವನಿಗೆ ತಾನು ಪ್ರಸಿದ್ಧನಾದುದರಿಂದ ಇತರರು ತನ್ನನ್ನು ನೋಡಿ ಅವರೂ ಅನುಷ್ಠಿಸಲಿ ಎಂಬ ಇತಿಕರ್ತವ್ಯತಾರೂಪ ಇನ್ನೊಂದು ಪ್ರಬಲಕಾರಣವೂ ಉಂಟೆಂದು ಅರ್ಥಮಾಡುವುದು ಸರ್ವಸಮಂಜಸವು. ಆದರೆ ಮೊದಲನೆಯವರು ಹೇಳುವದೇ ಅರ್ಥವಾದರೆ ಮುಂದೆ ೯ನೆಯ ಅಧ್ಯಾಯದಲ್ಲಿ ರಾಜವಿದ್ಯಾರಾಜಗುಹ್ಯಂ ಎಂಬಲ್ಲೂ ಉಪಾಸನದಲ್ಲೂ ರಾಜರಿಗೆ ಮಾತ್ರವೇ ಅಧಿಕಾರವೆಂದು ಅರ್ಥಮಾಡಿದರೆ ಇನ್ನೂ ಅವ್ಯವಸ್ಥಿತವಾದ ಅರ್ಥವಾಗುತ್ತದೆ; ಉಪಾಸನೆಯಲ್ಲಿ ಅಧಿಕಾರವು ತ್ರಿವರ್ಣದವರಿಗೂ ಉಂಟೆಂದು ಅವರೇ ಅಙ್ಗೀಕರಿಸಿರುತ್ತಾರೆ. ಆದುದರಿಂದ ಜನಕಾದಿಗಳನ್ನೂ ರಾಜರ್ಷಿಗಳನ್ನೂ ಮುಖ್ಯವಾಗಿ ಹೇಳಿರುವದು ಪ್ರಸಿದ್ಧರಾಗಿ ಲೋಕಸಙ್ಗ್ರಹ ರೂಪ ಪ್ರಯೋಜನಕ್ಕೆ ಸರಿಯಾದ ಅಧಿಕಾರಿಗಳೆಂದು ಪ್ರದರ್ಶನಾರ್ಥವಾಗಿ ಹೇಳಿದ ವಿಷಯವೆಂದು ತಿಳಿಯತಕ್ಕದ್ದು.

ಪುನಃ **ಸನ್ಯಾಸಃ ಕರ್ಮಯೋಗಶ್ಚ ನಿಶ್ರೇಯಸ ಕರಾವುಭೌ** (ಗೀ. ೫-೨) ಎಂಬಲ್ಲಿ ಸನ್ಯಾಸವೆಂದರೆ ಏನೆಂಬ ವಿವಕ್ಷೆಯಲ್ಲಿ, **ಸಾಂಖ್ಯಯೋಗೌ** ಎಂದು (ಗೀ. ೫-೪) ಮುಂದೆಯೇ ವ್ಯಕ್ತಪಡಿಸಿದ್ದರೂ ಆದಕ್ಕೆ ಗಮನ ಕೊಡದೆ, **ಸನ್ಯಾಸಃ** ಎಂದರೆ ಕರ್ಮಪರಿತ್ಯಾಗವೆಂದು ಅರ್ಥಮಾಡಿರುವದು ಅಸಮಂಜಸವು. ಕರ್ಮಮಾಡುವದೂ, ಕರ್ಮತ್ಯಾಗಮಾಡುವದೂ ಎರಡೂ **ನಿಶ್ರೇಯಸಕರೌ** ಎಂದು ಹೇಳುವದು ತಾನೇ ಹೇಗೆ ಸಮಂಜಸವೋ ತಿಳಿಯದು. **ಸನ್ಯಾಸ**ವೆಂದರೆ ಸಾಂಖ್ಯಯೋಗವೆಂದು ಹೇಳಿ, **ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ** (ಗೀ. ೩-೩) ಎಂದು ಹಿಂದೆಯೇ ಸಾಂಖ್ಯಶಬ್ದಾರ್ಥವನ್ನು ವ್ಯಕ್ತಪಡಿಸಿದ್ದರೂ ಇದನ್ನೆಲ್ಲಾ ಪರಿಗಣಿಸದೆ ಅಪ್ರಸ್ತುತವಾದ ಬೇರೆ ಅರ್ಥವನ್ನು ಪ್ರಾಜ್ಞರೇ ಹೇಳಿದರೆ ಮಾಡತಕ್ಕದ್ದೇನಿರುತ್ತದೆ

ಮುಂದೆ ೫-೧೮ ರಲ್ಲಿ **ಪಂಡಿತಾಸ್ಸಮದರ್ಶಿನಃ** ಎಂಬಲ್ಲಿ ಸಮಸ್ತ ಪ್ರಾಣಿಗಳ ವಿಷಯದಲ್ಲೂ ಅಹಿಂಸಕತಾಬುದ್ಧಿಯೂ, ಅನುಗ್ರಾಹ್ಯತಾಬುದ್ಧಿಯೂ, ಈಶ್ವರಾನುಗ್ರಾಹ್ಯತಾ ಬುದ್ಧಿಯೂ ಈಶ್ವರ ವಿಭೂತಿಯಾದುದರಿಂದ ಅನುಕೂಲತಾ ಬುದ್ಧಿಯೂ, **ಸಮದರ್ಶನಃ** ಎಂಬುದರಿಂದ ಹೇಳಲ್ಪಟ್ಟಿತು ಎಂಬುದು ಸರ್ವಸಾಧಾರಣವಾದ ವಿಷಯವು. ಅದರ ಮುಂದೆ ಹೀಗೆ ಅನುಗ್ರಹಗಳಲ್ಲೂ ಘಾಸಾಮ್ಯ ಬುದ್ಧಿಯೂ, ಬ್ರಾಹ್ಮಣಾದಿ ವಿಶೇಷದ ತಿರಸ್ಕಾರವೂ ಪ್ರಮಾಣಾಂತರದಿಂದ ತೋರಿಬರುತ್ತದೆಂಬ ಹೇಳಿಕೆಯೂ, ಆತ್ಮವ್ಯತಿರಿಕ್ತವಾದುದೆಲ್ಲಾ ಮಿಥ್ಯಾ ಎಂದು ವಾದಿಸುವರ ಹೇಳಿಕೆಗೆ ಅನುಕೂಲವೇ ವಿನಾ ಲೋಕದಲ್ಲಿಲ್ಲಾ ದೇಹ ಮೂಲಕ ಸತ್ಯವಾದ **ವೈಚಿತ್ರ್ಯ** ವೈವಿಧ್ಯಗಳೇ ತೋರುತ್ತದೆಂದು ಅಂಗೀಕರಿಸುವವರಿಗೆ ಯುಕ್ತವಾಗಿ ತೋರುವದಿಲ್ಲವು. ನಮಗೆ ದೇಹರೂಪೋಪಾಧಿಯ ಮೂಲಕ ವಿದ್ಯಾವಿನಯ **ಸಂಪನ್ನತೆ** ಮೊದಲಾದವುಗಳ ಮೂಲಕ ಉತ್ತಮ ಮಧ್ಯಮ ಅಧಮ ಅಧಮಾಧಮವಾದಿ **ಸತ್ಯವಾದ** ವ್ಯತ್ಯಾಸಗಳೂ, ಆ ಉಪಾಧಿಯಿಂದ ಬಿಡುಗಡೆಯನ್ನು ಹೊಂದಿದ ನಂತರ ಸಮಸ್ತ ಆತ್ಮರೂ ಜ್ಞಾನಸ್ವರೂಪ ಗುಣಗಳಿಂದ ಪರಸ್ಪರ ಸಮ, ಪರಮಾತ್ಮನಿಗೂ ಕೂಡ ಸಮವೆಂಬರ್ಥವು ನಮಗೆ ಸಮಂಜಸವು. **ಸಮದರ್ಶಿತ್ವ** ವೆಂಬಲ್ಲಿ ಸಮ ಶಬ್ದವೇ ಕೆಲವು ವಿಷಯದಲ್ಲಿ ಮಾತ್ರ ಸಮ, ಮಿಕ್ಕ ವಿಷಯದಲ್ಲಿ ಆತ್ಮರುಗಳೆಲ್ಲಾ ಪರಸ್ಪರ ಭಿನ್ನವೆಂಬ ಭಾವವನ್ನು ವ್ಯಕ್ತಪಡಿಸುತ್ತದೆ. ಆದರೆ ಕೆಲವರು ಈ ಶ್ಲೋಕಕ್ಕೆ ಪರಮಾತ್ಮನು ಅಂತರ್ಯಾಮಿಯಾಗಿರುವದರಿಂದ ಸಮಸ್ತ ಆತ್ಮರು ಸಮವೆಂದು ಪ್ರಾಜ್ಞರು ತಿಳಿಯುವರು ಎಂದು ಅರ್ಥಮಾಡಿರುವದರಲ್ಲಿ ಏನೊಂದೂ ಅಸಂಗತವಾದುದು ಇಲ್ಲದಿದ್ದರೂ ಪ್ರಕರಣಕ್ಕೆ ವಿರುದ್ಧವು. ಜ್ಞಾನೈಕಾಕಾರತೆಯಿಂದ ಎಲ್ಲಾ ಆತ್ಮರೂ ಸ್ವರೂಪದಲ್ಲಿ ಸಮವೆಂಬರ್ಥವೇ ತೋರಿಬರುವದರಿಂದ ಅದ್ವೈತಾಭಿಪ್ರಾಯವು ನಿರಸ್ತವು. ಏಕೆಂದರೆ ಶಾಸ್ತ್ರವು, ಆತ್ಮರುಗಳ ಸ್ವರೂಪದಲ್ಲಿ ಪರಸ್ಪರ ಭಿನ್ನರಾದರೂ ಏನೊಂದು ವ್ಯತ್ಯಾಸವಿಲ್ಲವು; ಹೇಗೆಂದರೆ ಕರೀ, ಕೆಂಪು, ಬಿಳುಪು ಮೊದಲಾದ ವರ್ಣಗಳುಳ್ಳ ಹಸುವಿನಲ್ಲಿರುವ ಹಾಲು ಭಿನ್ನವಾದರೂ ಹೇಗೆ ಸ್ವರೂಪತಃ ಸಮವೋ ಹಾಗೆ. ಈ ಸಂದರ್ಭದಲ್ಲಿ ಗೀತಾ ೧೮-೨೧ ಶ್ಲೋಕಗಳನ್ನು ಪರಾಂಬರಿಸಬಹುದು. ಸರ್ವಭೂತಗಳಲ್ಲಿರುವ ಆತ್ಮರುಗಳು ಬೇರೆಬೇರೆಯಾದರೂ "**ಅವಿಭಕ್ತಂ ವಿಭಕ್ತೇಷು**" ಸ್ವರೂಪತಃ ಸಮವೆಂದು ತಿಳಿಯುವ ಜ್ಞಾನವು **ಸಾತ್ವಿಕವೆಂದೂ ಸ್ವರೂಪತಃ** ಬೇರೆ ಬೇರೆ ಎಂದು ತಿಳಿಯುವ ಜ್ಞಾನವು ರಾಜಸವೆಂದು ಹೇಳಲ್ಪಟ್ಟಿರುತ್ತದೆ.

ಆರನೆಯ ಅಧ್ಯಾಯದಲ್ಲಿ ಒಂದು ವಿಧ ಉಪಾಸನೆಯನ್ನು ಹೇಳಿ ಅವಕ್ಕೂ ಶ್ರೇಷ್ಠವಾದ ಯೋಗವಾದ ಪರಮಾತ್ಮೋಪಾಸನಾರೂಪ ಭಕ್ತಿಯೋಗವುಂಟೆಂದು ಉಪಾಸನ ವೈವಿಧ್ಯವನ್ನು ಎಲ್ಲರೂ ಒಪ್ಪತಕ್ಕದ್ದಾಗುವದರಿಂದ ಜೀವಾತ್ಮೋಪಾಸನವನ್ನು ಹೇಳಿ, ಅದಕ್ಕೂ ಉತ್ಕೃಷ್ಟವಾದ ಜ್ಞಾನಿಯ ಪರಮಾತ್ಮೋಪಾಸನವನ್ನು ಹೇಳುತ್ತೇನೆಂದ ಪ್ರತಿಜ್ಞಾನಿರೂಪದರಿಂದ ಅಲ್ಲಿ ಅದ್ವೈತಾರ್ಥವು ಕಷ್ಟವು. ೪೪ನೆಯ ಶ್ಲೋಕದಲ್ಲಿ **ಶಬ್ದಬ್ರಹ್ಮಾತಿವರ್ತತೇ** ಎಂಬಲ್ಲಿ ವೇದದಲ್ಲಿ ಹೇಳಲ್ಪಟ್ಟ ಕರ್ಮ ಫಲಕ್ಕಿಂತ ಸನ್ಯಾಸಿಯು ಹೆಚ್ಚು ಫಲವನ್ನು ಹೊಂದುವನು ಎಂಬರ್ಥವನ್ನು ಕೆಲವರು ಹೇಳುತ್ತಾರೆ. ಯೋಗಭ್ರಷ್ಟನನ್ನು ಕುರಿತ ವಿಷಯದಲ್ಲಿ ಈ ಅರ್ಥಕ್ಕೆ ಅನುಕೂಲವೇ ಇಲ್ಲವು. ಅಂತಹ ಯೋಗಭ್ರಷ್ಟನು ಪುನಃ ಯೋಗ ಮಾಹಾತ್ಮ್ಯೆಯಿಂದ ಯೋಗಜಿಜ್ಞಾಸುವಾಗಿ ಕ್ರಮೇಣ ಶಬ್ದಬ್ರಹ್ಮವನ್ನು ಅತಿಕ್ರಮಿಸುವನು ಎಂದರೆ ನಾಮರೂಪಗಳಾದ ದೇವಮನುಷ್ಯಾದಿ ವ್ಯವಹಾರಗಳಿಗೆ ಅವಶ್ಯಕವಾದ ಪ್ರಕೃತಿ ಸಂಬಂಧವನ್ನು ನೀಗಿಕೊಳ್ಳುವನೆಂದು ಅರ್ಥಮಾಡುವದು ಪ್ರಕರಣಕ್ಕೆ ಯುಕ್ತವಾದುದು. ಅಲ್ಲಿ **ತಪಸ್ವಿಭ್ಯೋಽಧಿಕೋಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ। ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ।** ಎಂಬಲ್ಲಿ ಸನ್ಯಾಸಿ

ಎಂಬಲ್ಲಿ ಸಾಮಾನಾಧಿಕರಣ್ಯಾಭಿಪ್ರಾಯ ನಿರ್ವಾಹಕ್ಕಾಗಿ ರಸಾದಿಗಳಲ್ಲಿ ತಾದಾತ್ಮ್ಯದಿಂದ ಸಾಮಾನಾಧಿಕರಣ್ಯವೆಂದು ಹೇಳಿದರೆ, ಆತನು ಗುಣಾಧಿಕನಾದುದರಿಂದ, ಅಂಶಭೂತವಾಗಿರುವ ಮಿಕ್ಕೆಲ್ಲವೂ ಗುಣಾಧಿಕ್ಯವಿಲ್ಲದೆ ಹೇಯವಾದರೂ ತಾದಾತ್ಮ್ಯದಿಂದ ಸಾಮಾನಾಧಿಕರಣ್ಯವು ಕೂಡುತ್ತದೆ ಎಂದರೆ ಪ್ರಾಕೃತ ಅಪ್ರಾಕೃತವಸ್ತುಗಳು ಎರಡೂ ಸಮವೆಂಬಭಿಪ್ರಾಯವುಂಟಾಗುತ್ತದೆ. ಆದುದರಿಂದ ರಸವೇ ನಾನು ಎಂಬ ಹೇಳಿಕೆಯು ಸಮಂಜಸವಾಗುವದಿಲ್ಲವು. ನಮ್ಮಗಾದರೋ ಪರಮಾತ್ಮನಿಂದಲೇ ಉತ್ಪತ್ತಿಯನ್ನು ಹೊಂದಿ ಪರಮಾತ್ಮನಿಗೆ ಶರೀರವಾಗಿ ಪರಮಾತ್ಮನೇ ಅವುಗಳಿಗೆಲ್ಲಾ ಆತ್ಮನಾದುದರಿಂದ ಅಪೃಥಕ್ಸಿದ್ಧ ವಿಶೇಷಣ ವಿಶೇಷ್ಯ ಎಂದರೆ ಶರೀರಾತ್ಮಭಾವದಿಂದ ಸಾಮಾನಾಧಿಕರಣ್ಯ ಭಾವವು ಸ್ವಾರಸ್ಯವಾಗಿ ಕೂಡುತ್ತದೆ. ಅವರಿಗಾದರೋ ಅವರ ಸಾಮಾನಾಧಿಕರಣ್ಯೋಕ್ತಿಯಿಂದ, ಕಲ್ಯಾಣಗುಣಾಕರನಿಗೆ ಹೇಯ ದೋಷಪ್ರಸಙ್ಗವುಂಟಾಗುತ್ತದೆ. ನಮಗಾದರೋ ಆತನ ಶರೀರವಾದ ಚಿದಚಿತ್ತುಗಳ ಹೇಯತ್ವವು ಆತನಿಗೆ ಸಂಬಂಧಿಸುವದಿಲ್ಲವು.

ಎಂಟನೆಯ ಅಧ್ಯಾಯದಲ್ಲಿ ಕಿಂತದ್ಬ್ರಹ್ಮ ಇತ್ಯಾದಿ ಪ್ರಶ್ನೆಗಳೆಲ್ಲಾ ಒಂದೇ ಅಧಿಕಾರಿಯು ತಿಳಿಯತಕ್ಕ ಅಂಶವಲ್ಲವೆಂದು ಅಲ್ಲಿಯೇ ನಿರಾಕರಿಸಿರುವೆವು. ಇತರ ಪ್ರಮಾಣಗಳಿಂದ ಶ್ರುತಿಸ್ಮೃತಿಗಳಿಗೆ ಅವಿರೋಧೇನ ನಾವುಗಳು ಚತುರ್ಮುಖನ ದೈನಂದಿನ ಪ್ರಳಯ ಪ್ರಾಕೃತಿಕ ಮಹಾಪ್ರಳಯಗಳ ರೂಪದಲ್ಲಿ ಎರಡು ವಿಧ ಪ್ರಳಯಗಳು ೧೭, ೧೮, ೧೯ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟವೆಂದು ಅಙ್ಗೀಕರಿಸಿರುವೆವು. ಹಿರಣ್ಯಗರ್ಭನ ದಿವಸಾವಸಾನದಲ್ಲೇ ಮಹಾಪ್ರಳಯವು ಹೇಳಲ್ಪಟ್ಟಿತೆಂದು ಅರ್ಥವಾದವು ಈ ಶ್ಲೋಕಗಳಿಗೂ ಶ್ರುತಿಸ್ಮೃತ್ಯಾದಿ ಇತರ ಶಾಸ್ತ್ರಗಳಿಗೂ ಐಕಮತ್ಯವಿಲ್ಲವಾಗುತ್ತದೆ. ಇಲ್ಲಿ ಅರ್ಥವಾದವದರಲ್ಲಿ ಸರ್ವ ಮುಖ್ಯ ಶಾಸ್ತ್ರಗಳ ಸಾಮಂಜಸ್ಯವನ್ನೇ ಮನಸ್ಸಿನಲ್ಲಿಡುವರ ಆಶ್ಯಾಪಕ್ಷವು ೧೩ನೆಯ ಶ್ಲೋಕದಲ್ಲೂ ೧೪-೧೬ನೆಯ ಶ್ಲೋಕಗಳಲ್ಲೂ ಒಂದೇ ವಿಧ ಅಧಿಕಾರಿಯಾದ ಜ್ಞಾನಿಯಾದ ಭಕ್ತಿಯೋಗನಿಷ್ಠನೇ ಹೇಳಲ್ಪಟ್ಟನೆಂಬುದು ಕೆಲವರ ಅಭಿಪ್ರಾಯವು. ನಮ್ಮಗಳ ಅಭಿಪ್ರಾಯವಾದರೋ ಅಕ್ಷರಾಕ್ಷರ ಶಬ್ದದಿಂದ ಪ್ರಕೃತಿ ವಿಯುಕ್ತ ಜೀವಾತ್ಮಸ್ವರೂಪ ಪ್ರಾಪ್ತಿಗಾಗಿ ಜಿಜ್ಞಾಸುವಾದ ಭಕ್ತಿಯೋಗನಿಷ್ಠನೂ, ೧೪-೧೫ ರಿಂದ ಜ್ಞಾನಿಯಾದ ಭಕ್ತಿಯೋಗನಿಷ್ಠನೂ ಹೇಳಲ್ಪಟ್ಟರೆಂಬುದು. ಜಿಜ್ಞಾಸುವಿಗೆ ಕೈವಲ್ಯಪ್ರಾಪ್ತಿಯಾದರೂ ಅದೂ ಅಪುನರಾವೃತ್ತಿ ಲಕ್ಷಣವಾಗಿ ಮುಂದಕ್ಕೆ ಮೋಕ್ಷವೆಂಬುದು ೧೩ನೆಯ ಶ್ಲೋಕದಲ್ಲಿ ವ್ಯಕ್ತವು. ಈ ಅಧಿಕಾರಿ ಭೇದವನ್ನು ಹೇಳುವದಕ್ಕೆ ಕಾರಣವೇನೆಂದು ಕೇಳಿದರೆ, ಮೊದಲು ಚತುರ್ವಿಧಾ ಭಜನ್ತೇ ಮಾಂ ಎಂದು ನಾಲ್ಕು ವಿಧ ಭಕ್ತರನ್ನು ಹೇಳಿ, ಮುಂದೆ ಐಶ್ವರ್ಯಾರ್ಥಿಗಳಾದ ಆರ್ತನಿಗೂ ಅರ್ಥಾರ್ಥಿಗೂ ಪುನರಾವೃತ್ತಿಯನ್ನೂ, ಇನ್ನು ಮಿಕ್ಕ ಇಬ್ಬರಿಗೂ ಅಪುನರಾವೃತ್ತಿಯನ್ನೂ ಹೀಗೆ ವಿಭಾಗಿಸಿ ತು ಶಬ್ದದಿಂದ ೧೬ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುವದರಿಂದ ಹಿಂದಿನ ಮೂರು ಶ್ಲೋಕಗಳಲ್ಲೂ ಈ ಜಿಜ್ಞಾಸುವೂ ಜ್ಞಾನಿಯೂ ಹೇಳಲ್ಪಟ್ಟಿರಬೇಕೆಂದು ಏರ್ಪಟ್ಟಿತು. ೧೪-೧೫ ಜ್ಞಾನಿಯ ಅಪುನರಾವೃತ್ತಿಯ ವಿಷಯವೆಂಬುದು ಯಾವಾಗ್ಗೆ ವ್ಯಕ್ತವೋ, ಪರಿಶೇಷಾತ್ ೧೩ನೆಯ ಶ್ಲೋಕವು ಜಿಜ್ಞಾಸುವಿನ ಅಪುನರಾವೃತ್ತಿ ವಿಷಯವೆಂಬುದೂ ವ್ಯಕ್ತವು. ಈ ಅಭಿಪ್ರಾಯವೇ ಮುಂದೆ ೨೦-೨೧ ರಲ್ಲಿ ಯದ್ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ ಎಂಬಲ್ಲೂ ಅನುವಾದರೂಪದಲ್ಲಿ ಉಪಪಾದಿತವು. ಹೀಗೆ ಎರಡು ವಿಧ ಉಪಾಸಕರಿಗೂ ಅರ್ಚಿರಾದಿ ಮಾರ್ಗವೂ ಮೋಕ್ಷವೂ ಉಂಟೆಂಬುದು "ತದ್ಯ ಇತ್ಥಂ ವಿದುಃ" ಎಂದು ಆರಂಭಿಸಿ ಛಾಂದೋಗ್ಯದಲ್ಲಿ ಉಪಪಾದಿತವು. ವ್ಯಾಸಸೂತ್ರದಲ್ಲೂ ಅಪ್ರತೀಕಾಲಂಬನಾನ್ನಯತೀತಿ

**ಬಾದರಾಯಣಃ"** ಎಂಬಲ್ಲೂ ಉಪಪಾದಿತವು. ಆದುದರಿಂದ ಏಕಾಧಿಕಾರಿಯ ವಿಷಯವೆಂಬ ವಾದವು ಶ್ರುತಿ ವಿರುದ್ಧವಾಗುತ್ತದೆ. ಇಲ್ಲಿ ಪಂಚಾಗ್ನಿವಿದ್ಯಾನಿಷ್ಠನು ಜಿಜ್ಞಾಸುವು.

ಇನ್ನೆಲ್ಲಿ ಅದೇ ಅಧ್ಯಾಯದಲ್ಲಿ ವ್ಯಾಖ್ಯಾನವೆಂದರೆ—೨೪-೨೫ ನೆಯ ಶ್ಲೋಕಗಳಲ್ಲಿ **ಅಗ್ನಿರ್ಜ್ಯೋತಿಃ** ಎಂಬಲ್ಲೂ **ಧೂಮೋರಾತ್ರಿಃ** ಎಂಬಲ್ಲೂ ಮರಣಕಾಲ ವಿಶೇಷವಾದ ಅಹಸ್ಸೂ ರಾತ್ರಿಯೂ ಹೇಳಲ್ಪಟ್ಟಿತೆಂಬುದೂ ಸಮಂಜಸವಲ್ಲವು. ಈ ಶಬ್ದಗಳಿಂದ ಶ್ರುತಿ ಸ್ಮೃತಿಗಳಿಂದ ಉಪಪಾದಿಸಲ್ಪಟ್ಟ ಜಿಜ್ಞಾಸು ಮತ್ತು ಜ್ಞಾನಿಗೆ ದೇಹಾವಸಾನದಲ್ಲಿ ಉಂಟಾಗುವ ಪುನರಾವೃತ್ತಿಯಿಲ್ಲದ ದೇವಯಾನ ಅಥವಾ ಅರ್ಚಿರಾದಿಗತಿಯೂ, ಜಿಜ್ಞಾಸ್ವರ್ಥಿಗಳಾದ ಆರ್ತನೂ ಅರ್ಥಾರ್ಥಿಗೂ ಪುನರ್ಜನ್ಮಕ್ಕೆ ವಿಹಿತವಾದ ಪಿತೃಯಾನ ಅಥವಾ ಧೂಮಾದಿಗತಿಯೂ ಹೀಗೆ ಎರಡು ಗತಿಗಳು ಹೇಳಲ್ಪಟ್ಟವು. ಮುಂದೆ ೨೭ನೆಯ ಶ್ಲೋಕದಲ್ಲಿ **ನೈತೇಸೃತೀ** ಎಂದು ಎರಡು ವಿಧವಾದ ಮಾರ್ಗಗಳನ್ನು ಹೇಳುವ ಈ ವಿಷಯವು ನಿಗಮನಮಾಡಿ ಹೇಳಿರುವದರಿಂದ ದೇಹ ವಿಯೋಗ ಹೊಂದಿದವರಿಗೆ, ಒಂದು ಮೋಕ್ಷಕ್ಕೆ ಹೋಗುವ ಇನ್ನೊಂದು ಪುನರ್ಜನ್ಮವೆತ್ತುವ ಎರಡು ಮಾರ್ಗಗಳು ಹೇಳಲ್ಪಟ್ಟವು. ಆದುದರಿಂದ **ಯತ್ರಕಾಲೇ** ಎಂಬಲ್ಲಿ ಕಾಲ ಶಬ್ದವು ಕಾಲಾಭಿಮಾನ ದೇವತೆಯನ್ನೂ, ಹಾಗೆಯೇ **ಷಣ್ಮಾಸ**, **ಸಂವತ್ಸರ** ಪ್ರಯೋಗಗಳೂ ತತ್ತದಭಿಮಾನ ದೇವತೆಗಳನ್ನೂ ಬೋಧಿಸುತ್ತವೆ. ಹೀಗೆ ಹನ್ನೆರಡು ಅತಿವಾಹಿಕರು ಪರಮಪದವನ್ನು ಕುರಿತು ಹೋಗುವವನನ್ನು ಸತ್ಕರಿಸಿ ಕರೆದುಕೊಂಡು ಹೋಗುವರೆಂದು ಹೇಳಲ್ಪಟ್ಟಿರುತ್ತದೆ. ಹೀಗೀಗ ನಮ್ಮ ವ್ಯಾಖ್ಯಾನವು. ಇತರರು ಹೇಳುವ ಹಗಲಲ್ಲೂ ಶುಕ್ಲ**ಪಕ್ಷದಲ್ಲೂ ಉತ್ತರಾಯಣದಲ್ಲೂ** ಮರಣಹೊಂದಿದವರಿಗೆ ಅಪುನರಾವೃತ್ತಿಯೂ, ರಾತ್ರಿಯಲ್ಲೂ **ಕೃಷ್ಣಪಕ್ಷದಲ್ಲೂ ದಕ್ಷಿಣಾಯನದಲ್ಲೂ ದೇಹಾವಸಾನವು** ಉಂಟಾದವರಿಗೆ ಚಂದ್ರನನ್ನು ಸೇರಿ ಅಲ್ಲಿಂದ ಪುನರ್ಜನ್ಮವೆಂಬ ಅಭಿಪ್ರಾಯವು ಶ್ರುತಿಸಮ್ಮತವಿಲ್ಲದುದು. **"ನಿಶಿನೇತಿಚೇನ್ನ ಸಂಬನ್ಧಸ್ಯ ಯಾವದ್ದೇಹಭಾವಿತ್ವಾದ್ದರ್ಶಯತಿಚ"** (ಶಾ. ೪-೨-೧೮) ಎಂಬ ಸೂತ್ರವು ರಾತ್ರಿಯಲ್ಲಿ ಮರಣ ಹೊಂದಿದ ಬ್ರಹ್ಮನಿಷ್ಠನಿಗೂ ಅಪುನರಾವೃತ್ತಿ ಎಂದೇ ಶಾಸ್ತ್ರದಲ್ಲಿ ವಿಹಿತವು. ಯಾವಾಗ ಪೂರ್ವೋತ್ತರಾಘಗಳ ವಿನಾಶವೂ ಅಶ್ಲೇಷವೂ ಹೇಳಲ್ಪಟ್ಟವೋ, ಕರ್ಮಶೇಷವಿಲ್ಲದುದರಿಂದ ಆತನಿಗೆ ಮುಕ್ತಿಯುಂಟು. ಹಾಗೆಯೇ **"ಅತಶ್ಚಾಯನೇಪಿದಕ್ಷಿಣೇ"** ಎಂಬ (ಶಾ. ೪-೨-೧೯) ಸೂತ್ರದಲ್ಲೂ ದಕ್ಷಿಣಾಯನದಲ್ಲಿ ಮೃತನಾದ ಬ್ರಹ್ಮವಿತ್ತಿಗೂ ಅಪುನರಾವೃತ್ತಿಯೇ ವಿನಾ ಆವೃತ್ತಿ ಇಲ್ಲವೆಂದು ಹೇಳಲ್ಪಟ್ಟಿರುತ್ತದೆ. ಚಂದ್ರಸಾಯುಜ್ಯವೆಂದು ಹೇಳಿರುವದು ಈ ಬ್ರಹ್ಮನಿಷ್ಠನ ವಿಶ್ರಾಮಸ್ಥಾನವೆಂಬ ತಾತ್ಪರ್ಯವು. ನಿಶಿಮೃತನಾದ ಬ್ರಹ್ಮವಿತ್ತಿಗೆ ಮೋಕ್ಷ ಉಂಟೆಂದು ಯಾವ ಕಾರಣದಿಂದ ಹೇಳಲ್ಪಟ್ಟಿತೋ, ಆ ಕಾರಣವೇ ಈ ದಕ್ಷಿಣಾಯನ ಮೃತನಿಗೂ ಅನ್ವಯಿಸುತ್ತದೆ. **"ತಸ್ಯೈವಂ ವಿದುಷೋ"** ಎಂಬ ತೈತ್ತರೀಯವು ಚಂದ್ರಸಾಯುಜ್ಯವಿರುವ ವಿದ್ವಾನನಿಗೂ ಮೋಕ್ಷ ಉಂಟೆಂದು ಹೇಳಿರುತ್ತದೆ. ಆದರೆ ಶ್ರೀ ಭೀಷ್ಮರು ಉತ್ತರಾಯಣವನ್ನು ನಿರೀಕ್ಷಿಸಿ ಪ್ರಾಣತ್ಯಾಗಮಾಡಿದರೆಂದು ಹೇಳಲ್ಪಟ್ಟಿದೆಯಲಾ ಎಂದರೆ ಕಾಲವಿಭಾಗದಲ್ಲಿ ಮರಣಕ್ಕೆ ಹಗಲೂ ಉತ್ತರಾಯಣವೂ ಪ್ರಶಸ್ತವಾದುವು ಎಂದು ತೋರಿಸುವದಕ್ಕಾಗಿ ಪರಮಬ್ರಹ್ಮವಿತ್ತಾದ ಶ್ರೀ ಭೀಷ್ಮರು ತಮಗೆ ಮರಣ ವಿಷಯವು ಸ್ವಾಯತ್ತವಾಗಿರುವದರಿಂದ ಉತ್ತರಾಯಣವನ್ನು ನಿರೀಕ್ಷಿಸಿ ಪ್ರಾಣತ್ಯಾಗಮಾಡಿದರು ಎಂಬ ಭಾವವು. ಇದರಿಂದ ದಕ್ಷಿಣಾಯನ ಮೃತಿಯುಳ್ಳ ಬ್ರಹ್ಮವಿತ್ತಿಗೆ ಮೋಕ್ಷವಿಲ್ಲವೆಂದು ಹೇಳಿದಂತಾಯಿತೇ? ಚಂದ್ರಮಸ ಸಾಯುಜ್ಯ ಉಂಟಾಗಿಯೂ ಬ್ರಹ್ಮವಿತ್ತಿಗೆ ಅಪುನರಾವೃತ್ತಿಯುಂಟೆಂದು ಹೇಳಿದ ತೈತ್ತರೀಯ ವಾಕ್ಯವು ಇದರಿಂದ ನಿರಸ್ತವೆಂದು ಹೇಳಬಹುದೇ? ಎಂಟನೆಯ ಅಧ್ಯಾಯದಲ್ಲಿ ಹೇಳಿರುವ ಎರಡು ಮಾರ್ಗಗಳು ನಾಲ್ಕು ಜನ ಭಕ್ತರ ವಿಷಯವಾಗಿಯೇ ವಿನಾ ಇತರರ ವಿಷಯ

ವಾಗಿ ಹೇಳಲಿಲ್ಲವು. ಆದುದರಿಂದ ಎರಡನೆಯ ಮಾರ್ಗವು ಮುಮುಕ್ಷುವಲ್ಲದೆ ಇರುವವರ ವಿಷಯದಲ್ಲಿ ಹೇಳಲ್ಪಟ್ಟಿತೆಂದು ಭಾವಿಸಬಹುದು.

ಒಂಬತ್ತನೆಯ ಅಧ್ಯಾಯದಲ್ಲಿ, ಸಮಾಹಿತ ಚಿತ್ತರಲ್ಲದವರಿಗೂ ಕೂಡ ಸುಕರವಾಗಿ ಸುಖವನ್ನುಂಟುಮಾಡುವದಾಗಿ ಕ್ಷಿಪ್ರವಾಗಿ ಫಲವನ್ನುಂಟುಮಾಡುವದನ್ನು ಕುರಿತು ಭಗವಂತನಲ್ಲಿ ಪ್ರಸಕ್ತಿಯನ್ನು ಅನುಷ್ಠಿಸುವ ಪ್ರಕಾರವನ್ನು ಹೇಳುವದಕ್ಕಾಗಿ, ಶ್ರೀ ಭಗವಾನುವಾಚ ಎಂದು ಅಧ್ಯಾಯಾರಂಭದಲ್ಲಿ ಯಾವ ವ್ಯಾಖ್ಯಾನ ಮಾಡಲ್ಪಟ್ಟಿತೋ ಅದೂ ಕೂಡ, ಹಿಂದೆ ಹೇಳಿದ ಜ್ಞಾನಿಗಳಿಂದ ಸಾಧ್ಯವಾದ ಅನನ್ಯ ಭಜನವುಳ್ಳವರಿಗೇನೇ ಪ್ರಸ್ತುತಿ ಹೇಳಿರುವ ಸಂದರ್ಭವಾದುದರಿಂದ, ಸರಿಯಲ್ಲವು. "ಜ್ಞಾನ ಯಜ್ಞೇನ ಚಾಪ್ಯನ್ಯೇ" (ಗೀ. ೯-೧೫) ಎಂಬ ಶ್ಲೋಕದಲ್ಲಿ ಕರ್ಮಯೋಗಜ್ಞಾನಯೋಗಗಳ ಸಮುಚ್ಚಯದೊಂದಿಗೆ ಕೆಲವರು ಉಪಾಸನೆಯನ್ನು ಮಾಡುವದು ಏಕತ್ವೇನ ವೆಂದೂ ಮತ್ತು ಕರ್ಮಯೋಗ ಒಂದರಿಂದಲೇ ಆಗಲಿ, ಜ್ಞಾನಯೋಗ ಒಂದರಿಂದಲೇಯಾಗಲಿ ಮಾಡುವ ಉಪಾಸನವು ಪೃಥಕ್ತ್ವೇನ ವೆಂದೂ ಹೀಗೆ ಬಹುಧಾ ಉಪಾಸತೇ ಎಂದು ಅರ್ಥಮಾಡಿರುವದು ಸರಿಯಲ್ಲವು. ಏಕೆಂದರೆ ಇಲ್ಲಿ ಕರ್ಮಯೋಗವಾಗಲಿ ಜ್ಞಾನಯೋಗವಾಗಲಿ ಹೇಳುವವಕ್ಕೆ ಪ್ರಸಕ್ತಿ ಏನೂ ಇಲ್ಲವ. ಅಲ್ಲಿ ಹೇಳಿರುವದಾವರೋ ಕೆಲವರು "ಜ್ಞಾನಯಜ್ಞೇನ ಚ" ಎಂದು ಈ ಶ್ಲೋಕದಲ್ಲಿ ಹೇಳಿರುವದರಿಂದ, ಹಿಂದಿನ ಶ್ಲೋಕದಲ್ಲಿ ಹೇಳಿದುದೆಲ್ಲಾ ಕೀರ್ತನ, ಆರಾಧನೆ ನಮಸ್ಕಾರಾದಿಗಳು ಕರ್ಮಯಜ್ಞಗಳು, ಸ್ವಾಮಿಯ ಕೈಂಕರ್ಯಾದಿಗಳು, ಇವುಗಳೊಂದಿಗೆ ಉಪಾಸನೆಯನ್ನೂ ಮಾಡುವರೆಂದೂ, ಇನ್ನು ಕೆಲವರು ಜ್ಞಾನವುಳ್ಳವರಾಗಿ ಸರ್ವ ವಿಶ್ವವೂ ಆತನಿಗೆ ಶರೀರವು ಆತನೇ ಸರ್ವಕ್ಕೂ ಆತ್ಮಾ ಎಂಬ ಯಥಾರ್ಥಜ್ಞಾನವುಳ್ಳವರಾಗಿ ಉಪಾಸಿಸುತ್ತಾರೆ; ಇದೇ ಜ್ಞಾನಯಜ್ಞನೆಂದು ಹೇಳಲ್ಪಟ್ಟಿತು. ಅನಂತರ "ಅಹಂಕ್ರತುಃ" ಎಂದಾರಂಭಿಸಿದ ಶ್ಲೋಕಗಳಿಂದ ಈ ವಿಶ್ವಶರೀರಕನಾಗಿರುವವನ್ನೇ, "ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಂ" ಎಂಬುದ ಹೇಗೆ ಎಂಬುದು ವಿವರಣೆಯು ಇರುತ್ತದೆ. "ಅನನ್ಯಾಶ್ಚಿನ್ತಯನ್ತೋ ಮಾಂ" ಎಂಬ ಶ್ಲೋಕಾದಿಗಳಲ್ಲಿ ಅವರೊಳ, ಮುಖ್ಯವಾಗಿ ಆತನ ಏಕಾಂತ್ಯ ಭಕ್ತರಿಗೆ ಯೋಗಕ್ಷೇಮವನ್ನು ವಹಿಸುವದಕ್ಕಾ, ದೇವತಾಂತರುಗಳ ಅಥವಾ ಇತರ ಧರ್ಮಗಳ ಅಪೇಕ್ಷೆಯು ಬೇಕಿಲ್ಲವೆಂದು ಸರ್ವೇಶ್ವರನು ಹೇಳಿರುವದು ನಮಗೂ ಉಪಾದೇಯವೇ. ನಾಲ್ಕು ಜನ ಭಕ್ತರುಗಳ ವಿಷಯದಲ್ಲೂ ಉಪಾಸನಕ್ಕೆ ಸಂಬಂಧಿಸಿದ ವಿಶೇಷ ವಿಷಯಗಳೂ ಅವುಗಳಿಗಿರುವ ವೈಶಿಷ್ಟ್ಯವೂ ಉಪಪಾದಿಸಲ್ಪಟ್ಟಿತೆಂಬುದು ಪ್ರಕರಣಾದಿಗಳಿಂದ ವ್ಯಕ್ತವು. ಒಬ್ಬ ಅಧಿಕಾರಿಯ ವಿಷಯವೆಂದು ಅರ್ಥಮಾಡುವದು ತಪ್ಪು.

ಹತ್ತನೆಯ ಅಧ್ಯಾಯದಲ್ಲಿ "ವಿಸ್ತರೇಣಾತ್ಮನೋ ಯೋಗಂ ವಿಭೂತಿಂಚ" (ಗೀ. ೧೦-೧೮) ಎಂಬಲ್ಲಿ ಯೋಗ ಶಬ್ದಕ್ಕೆ ಭಗವಂತನ ಕರ್ಮಯೋಗ ವೆಂದು ಅರ್ಥ ಮಾಡುವದು ಅಯುಕ್ತವು. ಏಕೆಂದರೆ "ಪಶ್ಯಮೇ ಯೋಗಮೈಶ್ವರಮ್" (ಗೀ. ೧೧-೮) ಎಂಬಲ್ಲಿ ನನ್ನ ಯೋಗವೆಂದರೆ ನನ್ನ ಕಲ್ಯಾಣ ಗುಣಾಕರತ್ವದ ಯೋಗವೆಂಬ ಮತ್ತು "ಏತಾಂ ವಿಭೂತಿಂ ಯೋಗಂಚ (ಗೀ. ೧೦-೭) ಈ ನನ್ನ ವಿಭೂತಿಯನ್ನೂ ನನ್ನ ಕಲ್ಯಾಣಗುಣಗಣಯೋಗವನ್ನೂ ಸಹ ಎಂದು ಹೇಳಿರುವವಕ್ಕೂ ವಿರುದ್ಧವಾಗುತ್ತದೆ. ಕರ್ಮಯೋಗವು ಹಿಂದಿನ ಆರು ಅಧ್ಯಾಯಗಳಿಂದಲೇ ಹೇಳಿದ್ದಾಯಿತು. ಈ ಅಧ್ಯಾಯದಲ್ಲಿ ಕರ್ಮಯೋಗದ ವಿಷಯವು ಇಲ್ಲದುದರಿಂದಲೂ ಇಲ್ಲಿ ಹೇಳಿರುವದು ಭಗವಂತನ ಉಪಾಸನೆಯೇ ವಿನಾ ಕರ್ಮಯೋಗವೆಂದು ಹೇಳಲು ಸಾಧ್ಯವಿಲ್ಲವು. ಆಗಲಿ, ೧೧ನೆಯ ಅಧ್ಯಾಯಾಂತ್ಯ ಶ್ಲೋಕದಲ್ಲಿ "ಮತ್ಕರ್ಮಕೃತ್" ಎಂದು ಕರ್ಮವಿಷಯವು ಹೇಳಿದೆಯಲ್ಲಾ ಎಂದರೆ ಬಹಳ ದೂರದಲ್ಲಿ ಸಂಕ್ಷೇಪವಾಗಿ ಹೇಳಿರುವದು ಉಪಾಸನಾಂಗವಾಗಿ ಹೇಳಿದ ಭಗವದಾರಾಧನೆ ನಿತ್ಯನೈಮಿತ್ತಿಕಾದಿಗಳು. ಈ ಅಧ್ಯಾಯದಲ್ಲಿ ೨ನೆಯ

ಶ್ಲೋಕದಿಂದಾರಂಭಿಸಿ ಹೇಳಿರುವ ಸಾಮಾನಾಧಿಕರಣ್ಯವು, ಜಗತ್ಸ್ವರೂಪದ ಏಕದೇಶದ ವರ್ಣನೆ ಎಂದು ಹೇಳಿರುವುದೂ ಸಹ ಹಿಂದೆ ಉಪಪಾದಿಸಿ ಹೇಳಿದ ದೋಷಗಳಿಂದಲೇ ನಿರಸ್ತವು.

**ಹನ್ನೊಂದನೆಯ ಅಧ್ಯಾಯದಲ್ಲಿ** ಶ್ರೀ ವಿಶ್ವರೂಪನ ದಿವ್ಯ ಮಙ್ಗಳ ವಿಗ್ರಹದ ಅವಯವವಾಗಿ ಈ ವಿಶ್ವವೆಲ್ಲವೂ ಎಂದು ವರ್ಣನೆ ಮಾಡಿದರೆ, ಈ ವಿಶ್ವವು ಅಪ್ರಾಕೃತ ಪ್ರಾಕೃತ, ಎಂದರೆ ನಿತ್ಯವಿಭೂತಿ ಲೀಲಾವಿಭೂತಿ ಎಂದೂ ಹೀಗೆ ಎರಡು ವಿಭೂತಿ ಎಂದು ವಿಭಾಗಿಸಿರುವದಕ್ಕೆ ವಿರುದ್ಧವಾಗುತ್ತದೆ. ಈ ಅಧ್ಯಾಯಾಂತ್ಯದಲ್ಲಿ ಅರ್ಜುನನ ಪ್ರಾರ್ಥನೆಗೆ ಕಟ್ಟುಬಿದ್ದು ನಿತ್ಯವಿಭೂತಿಯ ಸ್ವಸ್ವರೂಪವನ್ನೂ ಪ್ರದರ್ಶಿಸಿರುತ್ತಾನೆ. ವಿಶ್ವರೂಪ ಒಂದೇ ತೋರಿದುದು ಎಂಬ ಭಾವವು ಸರಿಯಲ್ಲವು.

**ಹನ್ನೆರಡನೆಯ ಅಧ್ಯಾಯದಲ್ಲೂ ಭೇದವು ತಪ್ಪಿದಲ್ಲವು.** ಅಕ್ಷರೋಪಾಸನವು ಭಗವದುಪಾಸನಕ್ಕಿಂತ ಭಿನ್ನವಾದುದೆಂದೂ, ಪುರುಷೋತ್ತಮೋಪಾಸನವೇ ಶ್ರೇಷ್ಠವೆಂದೂ ಹೇಳುವದರಿಂದ ತಾವುಗಳೇ ಭೇದವನ್ನು ಸಾಧಿಸಿದ್ದಾರೆ. ಆದರೆ ಇಂಥ ಭೇದಗಳೆಲ್ಲಾ ಏನೋ ಅವಸ್ಥಾ ಭೇದಗಳನ್ನಾಶ್ರಯಿಸಿ ಹೇಳಲ್ಪಟ್ಟವು, ಅವುಗಳನ್ನು ಮುಖ್ಯವಾಗಿ ಭಾವಿಸತಕ್ಕವಲ್ಲವು, ಅವಸ್ಥಾಭೇದವು ಹೇಗೆಂದರೆ ವಸ್ತುತಃ ನಿರ್ವಿಶೇಷವಾದ ವಸ್ತುವಿನ ಸ್ವರೂಪವು, ಅದೇ ಆವಿರ್ಭೂತವಾದ ಸಮಸ್ತ ಕಲ್ಯಾಣಗುಣ ಸಮಷ್ಟಿರೂಪದಲ್ಲಿ ಅವಸ್ಥಾಭೇದವನ್ನು ಹೊಂದುತ್ತದೆ ಎಂದರೆ ಅನೇಕ ವಿಷಯ ವ್ಯಾಖ್ಯಾತೃಗಳಿಗೆ ಆಸ್ಪದವಾಗಿರುವದರಿಂದ ಹಾಸ್ಯಾಸ್ಪದವಾಗುತ್ತದೆ ನಿರ್ಗುಣನು ಸಗುಣನಾಗುವನು ಎಂದರೆ ಹಾಸ್ಯಾಸ್ಪದವೇ.

**೧೩ನೆಯ ಅಧ್ಯಾಯದಲ್ಲಿ "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ"** ಎಂಬುದರ **ಅರ್ಥ**ವೇನೆಂಬುದನ್ನು ಶ್ರೀ ಯತಿವರ್ಯರೇ ಉಪಪಾದಿಸಿ ಇತರಾಭಿಪ್ರಾಯವು ಸರಿಯಲ್ಲವೆಂಬುದನ್ನು ವ್ಯಕ್ತಪಡಿಸಿರುವದರಿಂದ ಭೇದವೇ ಪರಮಾರ್ಥವು. ಅಲ್ಲಿ **"ಯತಶ್ಚ ತತ್"** ಎಂಬ ಪಾಠವು ಪ್ರಸಿದ್ಧವಲ್ಲವು. ಕ್ಷೇತ್ರವು ನಿತ್ಯವೆಂಬುವಕ್ಕೆ ... ಲ್ಲವೆಂದೂ, ಅದು ಇಲ್ಲವೆಂಬ ಹೇಳಿಕೆಯೊಂದೇ ಉಂಟು. ಆದರೆ ಅದು ಸರಿಯಾದುದಲ್ಲವು. **"ಮಹಾಭೂತಾನಹಂಕಾರಃ"** ಎಂಬಿವೇ ಮೊದಲಾದುವುದರಿಂದ ಹೇಳಲ್ಪಟ್ಟ ಮತ್ತು ಅವ್ಯಕ್ತಕ್ಕಿಂತ **ವ್ಯತಿರಿಕ್ತ**ವಾದ, ಕ್ಷೇತ್ರವೆಲ್ಲಕ್ಕೂ ಅನಿತ್ಯತ್ವವನ್ನು ಹೇಳಬೇಕಾಗಿ ಬರುತ್ತದೆ. ಅವುಗಳು ವಿಕಾರವನ್ನು ಹೊಂದಿದರೂ ಅವುಗಳು ಪ್ರವಾಹತಃ ನಿತ್ಯವಾದುವೇ. **"ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮ । ಅವ್ಯಕ್ತಂ ಪುರುಷೇ ಬ್ರಹ್ಮನ್ ನಿಷ್ಕಲೇ ಸಂಪ್ರಲೀಯತೇ"** ಎಂಬಲ್ಲಿ ಪರಬ್ರಹ್ಮನಿಂದಲೇ ಅವ್ಯಕ್ತವೂ ತ್ರಿಗುಣವೂ ಉಂಟಾದವೆಂದೂ ಅವುಗಳು ಆ ಪರಮ ಪುರುಷನಲ್ಲೇ ಲಯವನ್ನು ಹೊಂದುತ್ತವೆ ಎಂದೂ ಹೇಳಿರುವದರಿಂದ ನಿತ್ಯವಾದುವುಗಳಾಗಿ ಪರಬ್ರಹ್ಮನಲ್ಲಿ ಸೇರಿರುವದರಿಂದ ಏಕೀಭಾವವೂ ಬೇರೆಬೇರೆಯಾಗಿ ತೋರುವದರಿಂದ ಪೃಥಗ್ಭಾವವೂ ಸಹ ಕೂಡುತ್ತವೆ. ಕ್ಷೇತ್ರವೂ ನಿತ್ಯವೆಂದು **"ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ"** ಎಂಬಲ್ಲಿಯೂ ಹೇಳಲ್ಪಟ್ಟಿರುತ್ತದೆ. ಗೀ. ೧೩. ೪ನೆಯ ಶ್ಲೋಕದಲ್ಲಿ **"ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ"** ಎಂಬಲ್ಲಿ ಮಾಡಿರುವ ಭಾಷ್ಯವಾದ **"ಕ್ಷೇತ್ರಾದಿ ತತ್ತ್ವವ್ಯವಸ್ಥಾಪನಪರಾಣಿ ಪಂಚಶಿಖಾದಿ ಪ್ರಣೀತಾನಿ ಸೂತ್ರಪದಾನಿ"** ಎಂಬುದಕ್ಕೆ ಯಾವ ಪ್ರಮಾಣವೂ ಇರುವದಿಲ್ಲವು. ಪಂಚಶಿಖ ಗ್ರಂಥದಲ್ಲಿ ಬ್ರಹ್ಮಸೂತ್ರ ಪ್ರಸಿದ್ಧಿ ಯಾವುದೂ ಇಲ್ಲದುದರಿಂದ.

ಮತ್ತು **ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ** (ಗೀ. ೧೩-೧೮) ಎಂಬಲ್ಲಿ ನಿಗಮನ ಮಾಡಿ **ಮದ್ಭಾವಾಯೋಪಪದ್ಯತೇ** ಎಂದು ಹೇಳಿರುವದರಿಂದ ಭಗವಂತನೇ **"ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ"** (ಗೀ. ೧೩.೧೨) **ಜ್ಞೇಯಂ** ಎಂಬದಾಗಿ ಹೇಳಲ್ಪಟ್ಟ,

ನೆಂಬುದು ಸರಿಯಲ್ಲವು. ಈ ಅಧ್ಯಾಯವೆಲ್ಲಾ ಕ್ಷೇತ್ರಕ್ಷೇತ್ರಜ್ಞವೆಂದರೆ ದೇಹ ಮತ್ತು ಜೀವಾತ್ಮ ವಿಷಯವಾದುದು "**ಇತಿ ಕ್ಷೇತ್ರಂ ತಥಾಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ**" (ಗೀ. ೧೩-೧೮) ಎಂದು ನಿಗಮನಮಾಡಿ ಹೇಳಿರುವ ಮೂರೂ ಅವು ಯಾವುವೆಂದರೆ ಕ್ಷೇತ್ರದ ಯಾಥಾತ್ಮ್ಯವೂ, ಕ್ಷೇತ್ರಜ್ಞ ಜ್ಞಾನಕ್ಕೆ ಸಾಧನವೂ, ಆತ್ಮತತ್ತ್ವವಾದ ಜ್ಞೇಯದ ಯಾಥಾತ್ಮ್ಯವೂ, ಸಂಕ್ಷೇಪವಾಗಿ ಅನುವಾದಮಾಡಿ ಹೇಳಲ್ಪಟ್ಟಿರುವದರಿಂದ ಆ ಸಂದರ್ಭವಲ್ಲಿ ಕ್ಷೇತ್ರಜ್ಞಾನವು ಹೇಗೆ ಮೋಕ್ಷೋಪಯೋಗವಾದುದೋ ಹಾಗೆಯೇ ಕ್ಷೇತ್ರಜ್ಞನಾದ ಈ ಜೀವಾತ್ಮನ ಯಾಥಾತ್ಮ್ಯ ಜ್ಞಾನವೂ ಸಹ ಮೋಕ್ಷೋಪಯುಕ್ತವೆಂದು ಹೇಳುವದರಿಂದ ಏನೊಂದೂ ವಿರೋಧಕ್ಕೆ ಆಸ್ಪದ ವಿಲ್ಲವೆಂದು ಭಾವಿಸತಕ್ಕದ್ದು.

೧೪ನೆಯ ಅಧ್ಯಾಯದಲ್ಲಿ "**ಮಮಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಮ್**" (ಗೀ. ೧೪-೩) ಎಂಬಲ್ಲಿ ಹಿಂದೆ ಏಳನೆಯ ಅಧ್ಯಾಯದಲ್ಲಿ ಭಗವಂತನಿಗೆ ಅಪೃಥಕ್ಸಿದ್ಧ ವಿಶೇಷಣಗಳಾದ ಅಪರಾಪ್ರಕೃತಿಯಾದ ಅಚಿತ್ತೂ, ಪರಾಪ್ರಕೃತಿಯಾದ ಚಿತ್ತೂ ಇವುಗಳೇ ಹೇಳಿರುವವು. ಆ ಸಂದರ್ಭದಲ್ಲಿ ಜೀವ ಮತ್ತು ಅವ್ಯಕ್ತ ಸಂಜ್ಞೆಗಳುಳ್ಳವುಗಳ ಸೇರುವಿಕೆಗೆ ಗರ್ಭ ವೆಂದು ಹೇಳಿದುದು ಎಂಬ ಅಭಿಪ್ರಾಯವೂ ಸರಿಯಲ್ಲವು. ಏಕೆಂದರೆ, (ಗೀ. ೧೩-೨೬) ನೆಯ ಶ್ಲೋಕದಲ್ಲಿ ಇದು "**ಕ್ಷೇತ್ರಕ್ಷೇತ್ರಜ್ಞ ಸಂಯೋಗಾತ್ತದ್ವಿದ್ಧಿ ಭರತರ್ಷಭ** ಎಂದು ವ್ಯಕ್ತಪಡಿ ಸಿರುವದರಿಂದ. ಗರ್ಭ ಶಬ್ದಕ್ಕೆ ಚೇತನನಾದ ಜೀವಾತ್ಮನೇ ಎಂಬರ್ಥವೇ ಉಚಿತವಾದುದು. "**ಅನೇನ ಜೀವೇನಾ ಆತ್ಮನಾನು ಪ್ರವಿಶ್ಯ ನಾಮರೂಪೇ ವ್ಯಾಕರಣವಾಣಿ**" ಎಂಬ ಶ್ರುತಿಯು ಅನುಸಂಧೇಯವು.

"**ಸರ್ವದ್ವಾರೇಷು ದೇಹೇಸ್ಮಿನ್ ಪ್ರಕಾಶ ಉಪಜಾಯತೇ । ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ**"(ಗೀ. ೧೪-೧೧)ಎಂಬ ಶ್ಲೋಕದಲ್ಲಿ ಪ್ರಕಾಶಜ್ಞಾನವೆಂಬೆರಡು ಪದಗಳಿಂದ ಬಾಹ್ಯಾಂತರೇಂದ್ರಿಯ ಪ್ರವೃತ್ತಿಗಳ ವಿಷಯವಾದುದೆಂಬ ವ್ಯವಸ್ಥೆಯನ್ನು ಮಾಡು ವದು ಅಶಕ್ಯವು; ಏಕೆಂದರೆ ಅಂತರ ಬಾಹ್ಯೇಂದ್ರಿಯ ಪ್ರವೃತ್ತಿ ವಿಷಯವೆಂದು ವ್ಯತ್ಯಸ್ತವಾಗಿ ಹೇಳಿದರೂ ಏನೂ ವಿರೋಧವಾಗುವುದಿಲ್ಲವು. ಇಲ್ಲಿ ಹೇಳಬೇಕಾದುದು ರಾಜಸತಾಮಸ ವೃತ್ತಿ ಗಳಿಗಿಂತಲೂ ವೈಲಕ್ಷಣ್ಯವಾಗುದರಿಂದ ವಸ್ತು ಯಾಥಾತ್ಮ್ಯವನ್ನು ಗ್ರಹಿಸುವಂಥಾ ಜ್ಞಾನವು ಯುಕ್ತವಾದುದು; ರಜಃಕಾರ್ಯದ ಮುಂದಿನ ಶ್ಲೋಕದಲ್ಲಿ, ಲೋಭಪ್ರವೃತ್ತಿ ಎಂದರೆ ಲೋಭ ದಿಂದುಂಟಾದ ಪ್ರವೃತ್ತಿ ಎಂಬ ವ್ಯಾಖ್ಯಾನವೂ ಸರಿಯಲ್ಲವು; ಏಕೆಂದರೆ ಅಲ್ಲಿನ ಅಭಿಪ್ರಾಯವು, ಲೋಭಕ್ಕಾಗಿ ಪ್ರವೃತ್ತಿಯು ಉದ್ದೇಶ್ಯವಾದುದರಿಂದ ಅದರ ಮುಂದಿನ ತಮಃಕಾರ್ಯ ಶ್ಲೋಕದಲ್ಲಿ "**ಅಪ್ರಕಾಶೋಽಪ್ರವೃತ್ತಿಶ್ಚ**" ಎಂಬುದರಿಂದ ಸತ್ತ್ವಕಾರ್ಯವಾದ ಪ್ರಕಾಶದ ನಿಷೇಧದ ಹಾಗೆಯೇ ರಜಸ್ಸಿನ ಕಾರ್ಯವಾದ ಪ್ರವೃತ್ತಿಯ ನಿಷೇಧ ಮಾಡಿ ಬೇರೆ ಇಲ್ಲಿ ಹೇಳುವದು ನ್ಯಾಯವಾದುದೇ. ಹಿಂದಿನ ರಜಃಕಾರ್ಯದಲ್ಲಿ ಪ್ರವೃತ್ತಿಯನ್ನೂ ಹೇಳಿ, **ಕರ್ಮಣಾಮಾರಂಭಃ** ಎಂದು ಹೇಳುವದೇನೂ ಪುನರುಕ್ತಿ ಮಾಡುವದಿಲ್ಲವು. ಪ್ರಯೋಜನಾದಿಗಳನ್ನು ಪರಿಗಣಿಸದೇ ಇರುವ ಪ್ರವೃತ್ತಿ ಹಿಂದೆ ಹೇಳಿರುವದರಿಂದ ಗೋಬಲೀವರ್ದನ್ಯಾಯಪ್ರಕಾರ ಪ್ರಯೋಜನದ ಉದ್ದಿಶ್ಯವಾಗಿ ಮಾಡಿದ ಕರ್ಮಗಳ ಆರಂಭವೆಂಬರ್ಥವು ಸಮಂಜಸವು.

ಹದಿನೈದನೆಯ ಅಧ್ಯಾಯದಲ್ಲಿ "**ತಮೇವ ಚಾದ್ಯಂ ಪುರುಷಂ ಪ್ರಪದ್ಯೇದ್ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ**" (೧೫-೪) ಎಂಬಲ್ಲಿ "**ಪ್ರಪದ್ಯೇ ಯತಃ**" ಎಂಬ ಪಾಠಾಂತರವು ಅಪ್ರಸಿದ್ಧವು. ಶ್ರೀ ಯತಿವರ್ಯರು ಈ ಪಾಠಾಂತರ ವಿಷಯ ಸೂಚಿಸಿರುತ್ತಾರೆ. ಅದೂ ಅಪ್ರಸಿದ್ಧ ಪಾಠವೆಂದು ಶ್ರೀ ದೇಶಿಕರವರ ಅಭಿಪ್ರಾಯವು. ಈ ಪಾಠವನ್ನೇ ಶ್ರೀ ಶಂಕರಾಚಾರ್ಯರವರು ಸ್ವೀಕರಿಸಿರುತ್ತಾರೆ, ಪ್ರಪದ್ಯೇ ಎಂದು ಉತ್ತಮಪುರುಷವಾಗುತ್ತದೆ. ಉಪದೇಶಕರು ಭಗ

ವಂತನೇಯಾದುದರಿಂದ ಪ್ರಪದ್ಯೇತ್ ಎಂಬ ವಿಧಿ ವಾಕ್ಯವೇ ಯುಕ್ತವಾದುದು. ಮಾಯಾ ಸಂಬಂಧವನ್ನು ಕಳೆದುಕೊಳ್ಳಬೇಕಾದರೆ ಶರಣಾಗತಿಯನ್ನು ಮಾಡು ಎಂಬ ಹಿತೋಕ್ತಿಯು.

"**ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ**" (ಗೀ. ೧೫-೭) ಎಂಬ ಶ್ಲೋಕದಲ್ಲಿ **ಮಮೈವಾಂಶಃ** ನನ್ನ ಭಾಗ, ಅವಯವ, ಏಕದೇಶವೆಂದು ಸಂಸಾರಿಯಲ್ಲದ ಈಶ್ವರನ ಒಂದು ಭಾಗವೆಂದು ಅರ್ಥಮಾಡಿರುತ್ತಾರೆ. ಹಾಗೆ ಹೇಳುವದರಲ್ಲೇನೂ ಅರ್ಥ ವಿರೋಧವು ನಮಗೂ ಇಲ್ಲವು. ಅವಯವವು ಪರಮಾತ್ಮನಿಗಿಂತ ಬೇರೆಯಾಗಿರಬಹುದು. ಘಟಾಕಾಶದಲ್ಲಿ ಘಟವೆಂಬ ಅವಿದ್ಯಾರೂಪ ಉಪಾಧಿಯನ್ನು ತೊಲಗಿದರೆ ಅಂಶವಾದ ಘಟಾಕಾಶವು ಪರಮಾಕಾಶವನ್ನು ಹೊಂದಿ ಹೇಗೆ ಭಿನ್ನವಾಗಿರುವುದಿಲ್ಲವೋ ಹಾಗೆ ಎಂಬ ದೃಷ್ಟಾಂತವನ್ನು ಕೊಟ್ಟಿರುವದನ್ನು ನಾವೂ ಒಪ್ಪುತ್ತೇವೆ. ಈ ಅಭಿಪ್ರಾಯವು ನಿಪುಣತರವಾಗಿ ಶೌನಕ ವಚನದಲ್ಲಿ ಉಪಪಾದಿತವು. **ಘಟಧ್ವಂಸೇ ಘಟಾಕಾಶೋ ನಭಿನ್ನೋ ನಭಸಾ ಯಥಾ । ಬ್ರಹ್ಮಣಾ ಹೇಯವಿಧ್ವಂಸೇ ವಿಷ್ಣ್ವೈಕ್ಯೇನ ತಥಾ ಪುಮಾನ್** ॥ ಅಲ್ಲೇ ಇದರ ಉಪಪಾದನದಲ್ಲಿ **ಯಥಾಗ್ನಿರಗ್ನೌ ಸಂಕ್ಷಿಪ್ತ ಸ್ಸಮಾನತ್ವ ಮನುವ್ರಜೇತ್**" ಎಂದು ಹೇಳುವದರಿಂದ, **ಜೀವಾತ್ಮನು** ಪರಮಾತ್ಮನ ಅಂಶವಾಗಿ ಶರೀರವಾಗಿ, ಅಪೃಥಕ್ಸಿದ್ಧ ವಿಶೇಷಣವಾಗಿ ಅವಯವವೆಂಬುದು ನಮಗೂ ಸಮ್ಮತವೇ. ಜೀವಪರಮಾತ್ಮರಿಗೆ ಅನೇಕ ವೈಧರ್ಮ್ಯಗಳು, ಅಣುವಿಭುವಾಗಿಯೂ, ಕರ್ಮವಶ್ಯವಾಗಿ ಅಕರ್ಮವಶ್ಯನಾಗಿ, ಜಗದ್ವ್ಯಾಪಾರ ವರ್ಜನಾಗಿ ಜಗದ್ವ್ಯಾಪಾರಯುತನಾಗಿ ಹೀಗೆ ಅನೇಕ ವೈಧರ್ಮ್ಯಗಳಿದ್ದರೂ ಪ್ರಕೃತಿವಿಯುಕ್ತ ದೆಶೆಯಲ್ಲಿ ಇಬ್ಬರೂ ಜ್ಞಾನೈಕಾಕಾರತೆಯಿಂದ ಸಮರಾಗುವದರಿಂದ ಆ ಅವಸ್ಥೆಯಲ್ಲಿ ಸಂಸಾರಿತ್ವವು ಈ ಪರಮಾತ್ಮಾಂಶನಾದ ಜೀವನಿಗಿದ ವೆಂಬುದು ಸ್ಪಷ್ಟವಾದ ವಿಷಯವು. ಈ ಅಭಿಪ್ರಾಯದಿಂದಲೇ ಉಪಾಸನಮಾಡತಕ್ಕದ್ದೆಂದಲ್ಲ ಸೂತ್ರದಲ್ಲಿ ಹೇಳಲ್ಪಟ್ಟಿತು. "**ಆತ್ಮೇತಿತೂಪಗಚ್ಛನ್ತಿ ಗ್ರಾಹಯನ್ತಿ ಚ**" "**ಅವಿಭಾಗೇನ ದೃಷ್ಟತ್ವಾತ್**" (ಶಾ. ಸೂತ್ರ ೪. ೧, ೩) ಉಪಾಸನೆಯನ್ನು ಅನುಷ್ಠಿಸುವಾಗ, ತಾನು ಪರಮಾತ್ಮನಿಗೆ ಅಪೃಥಕ್ಸಿದ್ಧ ವಿಶೇಷಣವಾಗಿಯೂ, ಪರಮಾತ್ಮನು ತನಗೆ ಆತ್ಮನು ಎಂದು ಭಾವಿಸಿ, ಆದುದರಿಂದ ತಾನು ಪರಮಾತ್ಮನ ಅಂಶವಾಗಿ ಅವನಿಗಿಂತ ಬೇರೆಯಲ್ಲವೆಂದೂ ಭಾವಿಸಿ. "**ತ್ವಂ ವಾ ಅಹಮಸ್ಮಿ** ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವಹಾಗೆ. "ಅಹಂಬ್ರಹ್ಮಾಸ್ಮಿ" **ಅಹಂ ಬ್ರಹ್ಮಶರೀರಕೋ ಅಸ್ಮಿ** ಎಂದೇ ಉಪಾಸಿಸತಕ್ಕದ್ದು. ಈ ಅರ್ಥವನ್ನೇ **ಆತ್ಮೇತಿತೂಪಗಚ್ಛನ್ತಿ** ಎಂಬುದು ಬೋಧಿಸುತ್ತದೆ. **ಗ್ರಾಹಯನ್ತಿ ಚ** ಎಂದರೆ "**ಯಸ್ಯಾತ್ಮಾ ಶರೀರಮ್. ಯ ಆತ್ಮಾನ ಮಂತರೋ ಯಮಯತಿ, ಸತ ಆತ್ಮಾನ್ತರ್ಯಾಮ್ಯಮೃತಃ**" "**ಐತದಾತ್ಮ್ಯ ಮಿದಂ ಸರ್ವಂ**" ಇತ್ಯಾದಿ ಶ್ರುತಿ ವಾಕ್ಯಗಳಲ್ಲಿ ಪರಮಾತ್ಮನು ತನಗೂ ಆತ್ಮಾವೆಂದೂ, ಆ ಕಾರಣದಿಂದ ತನ್ನ ಸ್ವರೂಪ ಸ್ಥಿತಿ ಪ್ರವೃತ್ತಿಗಳೆಲ್ಲಾ ಅಧಿಕನಾದ ಅವನಿಗೆ ಅಧೀನವೆಂದೂ, ಬೋಧಿಸುತ್ತವೆ ; ಆದುದರಿಂದ ಇಂತಹ ಅರ್ಥವನ್ನು ಗ್ರಹಿಸಬಹುದಾದುದರಿಂದ ಅಂಶವೆ ವರೆ ಭಾಗ, ಅವಯವ, ಏಕದೇಶ ಇತ್ಯಾದಿ ಶ್ರೀಮಚ್ಛಂಕರಾಚಾರ್ಯರ ಅರ್ಥಗಳು ನಮಗೂ ಗ್ರಾಹ್ಯವು ಎಂದು ಹೇಳುತ್ತಾರೆ. ಹಾಗೆಯೇ ಎಲ್ಲಕ್ಕೂ ತಾನು ಆತ್ಮಾ ಎಂದು ಮುಂದೆ ಶ್ರೀ ಕೃಷ್ಣಭಗವಾನರವರು "**ಸರ್ವಸ್ಯಚಾಹಂ ಹೃದಿ ಸನ್ನಿವಿಷ್ಟಃ**" (ಗೀ. ೧೫-೧೫) ಎಂದು ಹೇಳಿಕೊಂಡಿರುತ್ತಾರೆ. ಈ ನಮ್ಮ ಅರ್ಥವೇ "**ಜೀವಭೂತಾಂ ಮಹಾಬಾಹೋ**" ಎಂಬಲ್ಲಿ ಉಪಪಾದಿಸಲ್ಪಟ್ಟು. ಗೀ. ೭-೫ ನೆಯ ಶ್ಲೋಕದಲ್ಲಿ. ಶ್ರೀ ಕೃಷ್ಣಭಗವಾನರವರು ಜೀವಾತ್ಮನನ್ನು ಅಪೃಥಕ್ಸಿದ್ಧ ವಿಶೇಷಣವನ್ನಾಗಿ ಹೇಳಿಕೊಂಡರೂ ಈ ಸ್ವವಾಕ್ಯಕ್ಕೇ ನಾವು ವಿಶೇಷ ಗಮನ ಕೊಡಬೇಕಾದುದು ಆವಶ್ಯಕವು.

"**ವಿಷಯಾನುಪಸೇವತೇ**" (ಗೀ. ೧೫-೯) ಎಂಬಲ್ಲಿ ಈ ಜೀವಭೂತನು ವಿಷಯೋಪಭೋಗವನ್ನು ಮಾಡುವನೆಂದೂ, ಹೀಗೆ ಪ್ರತಿಕೂಲಾಚರಣೆ ಉದಾಸೀನ ಭಾವ, ಮತ್ತು ಭೋಗಗಳಿಂದ

ಆತನಿಗೆ ಜನ್ಮ ಮರಣಾದಿಗಳನ್ನು ಹೇಳುವದರಿಂದ ಪರಮಾತ್ಮನಾಗಿ ಹೃದಯದಲ್ಲಿ ಅಂತರ್ಯಾಮಿಯಾಗಿರುವವನು ಎಂದು ಹೇಳುವದು ಉಚಿತವಲ್ಲದುದಾಗಿ, ದೇಹಕ್ಕೂ ಇಂದ್ರಿಯಗಳಿಗೂ ನಿಯಾಮಕನಾಗಿ ನಿರ್ಯಾಣಕಾಲದಲ್ಲಿ ಈ ಭೂತಸೂಕ್ಷ್ಮ ಇಂದ್ರಿಯಗಳನ್ನೂ ಆಕರ್ಷಿಸಿಕೊಂಡು ಹೋಗುವವನೆಂದು **ಉತ್ಕ್ರಾಮತೀಶ್ವರಃ । ಗೃಹೀತ್ವೈತಾನಿ ಸಂಯಾತಿ** (ಗೀ. ೧೫-೮) ಎಂಬಲ್ಲಿ ಹೇಳಿರುವದರಿಂದಲೂ ಜೀವಾತ್ಮನು ಪರಮಾತ್ಮನಿಗಿಂತ ಬೇರೆಯಾಗಿ ಆತನಿಗೆ ಅಪೃಥಕ್ಸಿದ್ಧ ವಿಶೇಷಣವಾಗಿ ಆತನ ಅವಯವ, ಶರೀರವೆಂದು ಅರ್ಥ ಮಾಡಿದರೂ ಏನೊಂದೂ ತೊಂದರೆಯಿಲ್ಲವು. ಈ ಜೀವಾತ್ಮನಿಗೂ ಸ್ವಾಮಿಯು ಆತ್ಮಾ ಎಂದು ಎಲ್ಲಿ ಹೇಳಿದೆ ಎಂದರೆ **ಪಶ್ಯನ್ತ್ಯಾತ್ಮನ್ಯವಸ್ಥಿತಮ್**" (ಗೀ. ೧೫-೧೧) ಎಂಬಲ್ಲಿ ಶರೀರದಲ್ಲಿ ಇರುತ್ತಾನೆಂದು ಹೇಳಿ, ಅನಂತರ "**ಸರ್ವಸ್ಯಚಾಹಂ ಹೃದಿಸನ್ನಿವಿಷ್ಟಃ**" ಎಂಬಲ್ಲಿ ಪರಮಾತ್ಮನ ಅಂತರ್ಯಾಮಿತ್ವವನ್ನೂ ಪೃಥಕ್ಕಾಗಿ ಹೇಳಿರುವದರಿಂದ ಜೀವಾತ್ಮನು ಪರಮಾತ್ಮನಿಗಿಂತ ಪೃಥಕ್ಕಾದವನು ಎಂದು ಹೇಳುವದೇ ಯುಕ್ತವು, ಆಗಲಿ ಎರಡೂ ಒಂದೇ ಅರ್ಥವುಳ್ಳವೆಂದೂ ಎರಡನೆಯ ಹೇಳಿಕೆಯು ಅದರ ಅನುವಾದವೆಂದು ಏಕೆ ಹೇಳಕೂಡದು ಎಂದಾಕ್ಷೇಪಿಸಿದರೆ ನಮ್ಮ ಅಭಿಪ್ರಾಯಕ್ಕೆ "**ದ್ವಾಸುಪರ್ಣಾ ಸಯುಜಾ ಸಖಾಯಾ**" ಎಂಬ ಶ್ರುತಿ ಬಲವಿರುವದರಿಂದ ನಮ್ಮ ಅಭಿಪ್ರಾಯವೇ ಸಾಧುವೆಂದು ಭಾವಿಸತಕ್ಕದ್ದು. ಈ ಶ್ರುತಿಯ ಅಭಿಪ್ರಾಯವನ್ನೇ ಸ್ವಲ್ಪ ವ್ಯತ್ಯಸ್ತವಾಗಿ "**ದ್ವಾವಿಮೌ ಪುರುಷೌಲೋಕೇ**" ಎಂದಾರಂಭಿಸಿ "**ಉತ್ತಮಃ ಪುರುಷಸ್ತ್ವನ್ಯಃ**" ಎಂಬ ಶ್ಲೋಕದಲ್ಲಿ ಉಪಪಾದಿಸಿರುವದರಿಂದಲೂ ನಮ್ಮ ಅರ್ಥದ ಔಚಿತ್ಯವು ತೋರಿಬರುತ್ತದೆ. ಈ ಶ್ಲೋಕದಲ್ಲಿ ಹೇಳಿರುವ ಪರಮಪುರುಷನ ಈಶ್ವರತ್ವಕ್ಕೂ ೧೧ನೆಯ ಶ್ಲೋಕದಲ್ಲಿ ಹೇಳಿರುವ ಜೀವೇಶ್ವರತ್ವಕ್ಕೂ ವ್ಯತ್ಯಾಸವುಂಟು. ಅದು ಲೋಕತ್ರಯಗಳ ವ್ಯಾಪ್ತಿ ಭರಣಾದಿ ರೂಪವಾದುದು ; ಎರಡನೆಯ ಜೀವನ ಈಶ್ವರತ್ವವು ಆತನ ಶರೀರೇಂದ್ರಿಯಗಳ ನಿಯಮನರೂಪವಾದುದು. ಈ ಶರೀರವಲ್ಲಿದ್ದುಕೊಂಡಿರುವ ನಿಯಮನ ಪ್ರವೃತ್ತಿಯುಳ್ಳವನು ಜೀವಾತ್ಮನೆಂದು ಹೇಳುವದಕ್ಕಾಗಿಯೇ "**ಆತ್ಮನ್ಯವಸ್ಥಿತಮ್**" (ಗೀ. ೧೫-೧೧) ಎಂದು ಹೇಳಲ್ಪಟ್ಟಿತು. ಇಲ್ಲಿ ಆತ್ಮಾ ಎಂದರೆ ಶರೀರವು. ಆತ್ಮ ಎಂಬ ಶಬ್ದಕ್ಕೆ ನಾನಾರ್ಥ ವಿವರಣ ಪ್ರಕಾರ ಅನೇಕಾರ್ಥಗಳಿದ್ದರೂ, ಇಲ್ಲಿ ಶರೀರವೆಂಬರ್ಥವು ಪ್ರಕರಣಾನುಗುಣವಾಗಿ ಸಂಯೋಗವಾಗುವದರಿಂದ, ಆ ಅರ್ಥವನ್ನೇ ಹೇಳತಕ್ಕದ್ದಾಗಿರುತ್ತದೆ.

**ವೇದೈಶ್ಚ ಸರ್ವೈರಹಮೇವ ವೇದ್ಯಃ** ಎಂಬಲ್ಲಿ ವೇದವೇದ್ಯನು ಹೇಗೆ ? ಆದಿತ್ಯ ವೈಶ್ವಾನರ ಇಂದ್ರ ವರುಣಾದಿಗಳ ವಿಷಯವು ವೇದಗಳಲ್ಲಿ ಹೇಳಲ್ಪಟ್ಟಾಗ **ಅಹಮೇವವೇದ್ಯ** ಹೇಗೆ ಎಂದರೆ, ಸರ್ವ ಶರೀರಕನಾಗಿ ಸರ್ವಕ್ಕೂ ಆತ್ಮಾವಾಗಿರುವದರಿಂದ ನಾನೇ ಅವುಗಳೂ ಆಗಿ, ಪ್ರಧಾನನಾಗಿ ನಾನೇ ತಿಳಿಯತಕ್ಕವನೆಂಬ ಅರ್ಥವು. **ವೇದಾಂತಕೃತ್** ಎಂದರೆ ವೇದಾಂತಾರ್ಥ ಸಂಪ್ರದಾನಕೃತ್ ಎಂದು ಅರ್ಥ ಮಾಡಿರುತ್ತಾರೆ. ವೇದವಿಧಿಗಳಿಂದ ಸರ್ವಕರ್ಮಾರಾಧ್ಯತೆಯೇ ಭಗವಂತನಿಗೆ ಹೇಳಲ್ಪಡುವದರಿಂದ, **ವೇದಾಂತಕೃತ್** ಎಂದರೆ ಅಂತಹ ವೇದ ವಿಧಿಗಳಿಗೆ ಅನುಸಾರವಾಗಿ ನಡೆಸುವವರಿಗೆ ಫಲಪ್ರದಾತನೂ ತಾನೇ ಎಂಬರ್ಥವೇ ಉಚಿತವು. ಈ ಅಭಿಪ್ರಾಯಗಳನ್ನೆಲ್ಲಾ ಹಿಂದೆಯೇ ವಿಸ್ತರವಾಗಿ ಸೂಚಿಸಿರುವೆವು. ವೇದಗಳೆಲ್ಲಾ ತಮ್ಮಿಂದ ಬಂದ ಶಾಸ್ತ್ರವಾದುದರಿಂದ ತಾವೇ ವೇದಗಳ ಸಾರಭೂತಾರ್ಥಗಳನ್ನು ತಿಳಿದಿರುವರೂ ಉಪದೇಶಿಸುವರೂ. ಆದುದರಿಂದ ಸಾರಭೂತಾರ್ಥವನ್ನು ಮುಂದಿನ ಶ್ಲೋಕಗಳ ಮೂಲಕ ಉಪದೇಶಿಸುತ್ತಾರೆ. ಹಿಂದೆ ಹೇಳಿದ ಜೀವಾತ್ಮವರ್ಗವು ಬದ್ಧರೆಂದೂ ಮುಕ್ತರೆಂದೂ ಎರಡು ವಿಧವೆಂದು ಕ್ಷರಾಕ್ಷರ ಶಬ್ದದಿಂದ ಹೇಳಿ, ಅಕ್ಷರ ಶಬ್ದದಿಂದ ಬೋಧಿಸಲ್ಪಟ್ಟವನು ಕೂಟಸ್ಥನಾದ ಮುಕ್ತನೆಂದು ತಿಳಿಸಿ, ಹೀಗೆ ಈ ಇಬ್ಬರಾದ ಪುರುಷ ವರ್ಗಕ್ಕಿಂತ ತಾನು ಅವರಿಗೆ ಸತ್ತಾದಾಯಕನಾಗಿಯೂ ನಿಯಾ

ಮುಕನಾಗಿಯೂ ಅವರುಗಳಹಾಗೆ ಒಂದು ಕಾಲದಲ್ಲೂ ಜ್ಞಾನತಿರೋಹಿತತ್ವರೂಪ ಕ್ಷರಣಸ್ವಭಾವ ವಿಲ್ಲದ ಪುರುಷೋತ್ತಮನೆಂದು ಹೇಳಿಕೊಂಡಿರುತ್ತಾರೆ. ವಿಶ್ವದಲ್ಲೆಲ್ಲಾ ತಾನು ಒಬ್ಬನೇ ಪುರುಷ ನಾದರೆ ವಿಕಾರ ಹೊಂದುವವ ತಾನು ಅಧಿಕನೆಂದು ಹೇಳಬೇಕಾದ ಆವಶ್ಯಕತೆ ಏನಿರುತ್ತದೆ? ಅಂತಹ ಉಪದೇಶವು ನಿರರ್ಥಕವು. ಆ ಉಪದೇಶವು ಯಾರಿಗೆ ? ತನಗೇ ತನ್ನ ಉಪದೇಶವೇ ? ಇತ್ಯಾದಿ ಹಾಸ್ಯಾಸ್ಪದವಾದ ಆಕ್ಷೇಪಗಳಿಗೆ ಕಾರಣವಾಗುವದಿಲ್ಲವೇ ? ಒಂದು ಕ್ಲಾಸಿನಲ್ಲಿ ಒಬ್ಬನೇ ವಿದ್ಯಾರ್ಥಿ ಇದ್ದು ಇವನೇ ಸರ್ವೋತ್ತಮನು ಎಂದು ಹೇಳಿದ ಹಾಗೆ, ಈ ಪುರುಷೋತ್ತಮತ್ವವನ್ನು ಸರ್ವೇಶ್ವರನಿಗೆ ಅನ್ವಯಿಸಬೇಕಾಗುತ್ತದೆಯಲ್ಲವೇ ? ಅನ್ಯರಿಬ್ಬರಿಂದಕ್ಕೆ ನೀವೇ ವಿಲಕ್ಷಣನೆಂದು ಅರ್ಥವಾಗಿರುತ್ತೀರಿ. ಇದರಿಂದಲೇ ಕ್ಷರಾಕ್ಷರ ಶಬ್ದವಾಚಗಳು ಪರಮಾತ್ಮನಿಗಿಂತ ಬೇರೆ ಎಂದು ಅರ್ಥವಾಗುವದಿಲ್ಲವೇ ?

"ಕೂಟಸ್ಥೋಽಕ್ಷರ ಉಚ್ಯತೇ" (ಗೀ. ೧೫-೧೬) ಎಂಬಲ್ಲಿ ಕೂಟಸ್ಥಃ ಎಂದರೆ ರಾಶಿಯ ಹಾಗೆ ಇರುವವನು ಎಂಬದಾಗಿಯೂ, ಮತ್ತು ಸಂಸಾರ ಬೀಜಾನನಾವೃತ್ತ್ ನಕ್ಷರತೀತಿ ಅಕ್ಷರಃ ಎಂದೂ, ಅರ್ಥ ಮಾಡಲ್ಪಟ್ಟಿರುತ್ತದೆ. ಕ್ಷರ ಶಬ್ದಕ್ಕೆ ಸಂಯುಕ್ತ ವಿಕಾರ ಜಾತವು ಎಂದು ಅರ್ಥ ಮಾಡಿದ ನಂತರ, ಅಕ್ಷರ ಶಬ್ದಕ್ಕೆ ಆ ವಿಕಾರತ್ವವನ್ನು ಕಳೆದುಕೊಂಡ ಜಾತವು ಎಂದು ಅರ್ಥ ಮಾಡುವದು ಯುಕ್ತವಲ್ಲವೇ ? ಆಗ ಸಂಸಾರಿತ್ವವು ತೊಲಗಿದ ಮುಕ್ತ ಸಂಘವೆಂದು ಅರ್ಥ ಮಾಡುವದೇ ಉಚಿತವಲ್ಲವೇ ? ಪುರುಷೋತ್ತಮನು ಬದ್ಧಮುಕ್ತರುಗಳಿಗಿಂತ ವಿಲಕ್ಷಣನೆಂದು ಇಲ್ಲಿ ಹೇಳಲ್ಪಟ್ಟಿತು.

ಹದಿನಾರನೆಯ ಅಧ್ಯಾಯದ ಅವತಾರಿಕೆಯಲ್ಲಿ, ಹಿಂದೆ ಒಂಬತ್ತನೆಯ ಅಧ್ಯಾಯದಲ್ಲಿ ಹೇಳಿದ ದೈವೀ ಆಸುರೀ ಪ್ರಕೃತಿಯನ್ನು ಸಂಕ್ಷೇಪವಾಗಿ ಸೂಚಿಸಿದುದನ್ನು ಈ ಅಧ್ಯಾಯದಲ್ಲಿ ವಿಸ್ತರಿಸಿ ಹೇಳುತ್ತಾರೆಂದೂ, ಪ್ರಕಾರಾಂತರದಿಂದ ಅರ್ಜುನನಿಗೆ ಉಂಟಾದ ಶೋಕವನ್ನು ಹೋಗಲಾಡಿಸುವದಕ್ಕಾಗಿ ದೈವೀ ಸ್ವಭಾವಕ್ಕೂ ಅಸುರಸ್ವಭಾವಕ್ಕೂ ಇರುವ ಮೋಕ್ಷಪ್ರಾಪ್ತಿ, ಸಂಸಾರ ಬಂಧಗಳ ಮೂಲಕ ಅನರ್ಥ, ಇವುಗಳನ್ನು ತಿಳಿಸುವದಕ್ಕಾಗಿ ಎಂದು ಉಕ್ತವಾಗಿರುತ್ತದೆ. ಯದ್ಯಪಿ ದೈವೀ ಆಸುರೀ ಸ್ವಭಾವಗಳ ವರ್ಣನೆಯೂ, ತನ್ಮೂಲಕ ಉಂಟಾದ ಅರ್ಜುನನ ತಾನೇನಾದರೂ ಆಸುರೀಸ್ವಭಾವ ಯುಕ್ತನೇ ಎಂಬ ಶೋಕವೂ ನೀನು ದೈವೀ ಪ್ರಕೃತಿಯೇ ಎಂಬ ಶ್ರೀ ಕೃಷ್ಣಭಗವಾನರವರ ಶೋಕ ಸಮಾಧಾನೋಕ್ತಿಯೂ ಇರುತ್ತವೆ. ಆದರೂ ಶ್ರೀ ಯಾಮುನಮುನಿಗಳ ಮತ್ತು ಯತಿವರರ ಅಭಿಪ್ರಾಯದಂತೆ ಅರ್ಜುನನಿಗೆ ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯವ್ಯವಸ್ಥಿತೌ" ಎಂದು ಮುಖ್ಯವಾಗಿ ಉಪದೇಶಿಸಿ, ಶಾಸ್ತ್ರವಶ್ಯವಾದ ಪ್ರವೃತ್ತಿಯು ದೈವೀ ಸ್ವಭಾವಕ್ಕೂ ಶಾಸ್ತ್ರೋಲ್ಲಂಘನೆಯಿಂದ ಕೂಡಿದ ಪ್ರವೃತ್ತಿಯು ಆಸುರೀಸ್ವಭಾವಕ್ಕೂ ಎಂಬ ಉಪದೇಶವೇ ಈ ಅಧ್ಯಾಯದ ಸಾರಭೂತಾರ್ಥವೆಂದು ಗ್ರಹಿಸತಕ್ಕದ್ದು.

ಹದಿನೇಳನೆಯ ಅಧ್ಯಾಯದಲ್ಲಿ ಶ್ರದ್ಧಾ ತ್ರೈವಿಧ್ಯವು ಶಾಸ್ತ್ರವಿಹಿತವಲ್ಲದ ಪ್ರವೃತ್ತಿಯಲ್ಲಿ ಹೇಳಲ್ಪಟ್ಟಿತೆಂಬ ಅಭಿಪ್ರಾಯವು ಸರಿಯಲ್ಲವು. ಹಿಂದಿನ ಅಧ್ಯಾಯದಲ್ಲಿ ಶಾಸ್ತ್ರ ವಶ್ಯತೆಯನ್ನು ಉಪದೇಶಿಸಿದುದರಿಂದ, ಹಾಗೆ ಶಾಸ್ತ್ರವಿಧಿಯನ್ನನುಸರಿಸದೆ ಶ್ರದ್ಧೆಯಿಂದ ಮಾತ್ರ ಕರ್ಮ ಮಾಡುವವನು? ಎಂತವನು ದೈವೀ ಸ್ವಭಾವಕ್ಕೆ ಸೇರಿದವನೇ? ಅಸುರೀ ಸ್ವಭಾವಕ್ಕೆ ಸೇರಿದವನೇ? ಎಂಬ ದೇನೋ ಅರ್ಜುನ ಪ್ರಶ್ನೆಯು. ಇದಕ್ಕೆ ಭಗವಾನ್ ಒಡನೆಯೇ ಪ್ರತ್ಯುತ್ತರವನ್ನು ಹೇಳದೆ ಶಾಸ್ತ್ರವಿಧಿಯನ್ನನುಸರಿಸಿ ನಡೆಸಿದ ಪ್ರವೃತ್ತಿಯೇ ಶ್ರದ್ಧಾಭೇದದಿಂದ ತ್ರಿವಿಧವೆಂದು ಹೇಳಿ ಶಾಸ್ತ್ರೀಯ ಯಾಗಾದಿಗಳೇ ಯಕ್ಷ ರಾಕ್ಷಸರನ್ನುದ್ದೇಶಿಸಿಯಾಗಲಿ ಪ್ರೇತಭೂತಗಣಗಳನ್ನು ಉದ್ದೇಶಿಸಿಯಾಗಲಿ ಶ್ರದ್ಧೆಯಿಂದ ನಡೆಸಿದರೂ ಆಸುರಗಳಾಗಿ ನಿರರ್ಥಕ ಫಲವುಳ್ಳವುಗಳಾದರೆ,

ಇನ್ನೂ ಅಶಾಸ್ತ್ರೀಯವಾಗಿಯೇ ನಡೆಸಿದರೆ ಆಸುರೀ ಎಂದು ಹೇಳಲು ಅಭ್ಯಂತರವೇನಿದೆ? ಎಂದು ಮುಂದೆ ೫-೬ನೆಯ ಶ್ಲೋಕಗಳಲ್ಲಿ "ತಾನ್ವಿದ್ಧ್ಯಾಸುರ ನಿಶ್ಚಿತಾನ್" ಎಂಬಲ್ಲಿ ಹೇಳಿರುವದರಿಂದ, ಶ್ರದ್ಧಾ ತ್ರೈವಿಧ್ಯೋಪದೇಶವು ಶಾಸ್ತ್ರವಿಹಿತಕರ್ಮಗಳೆಂದೇ ಭಾವಿಸತಕ್ಕದ್ದು.

ಮುಂದೆ ೨೩ನೆಯ ಶ್ಲೋಕದಲ್ಲಿ "ಓಂತತ್ಸದಿತಿನಿರ್ದೇಶಃ" ಎಂಬಲ್ಲಿ ಮೋಕ್ಷಾರ್ಥಿಗಳು ಮಾಡುವ ಯಜ್ಞಯಾಗಾದಿಗಳಲ್ಲಿ ಅಂಗವಾಗಿ ಈ ಮನ್ತ್ರವು ಪಠಿತವಾದರೆ ವೀರ್ಯಾತಿಶಯವು ಉಂಟಾಗುವದಕ್ಕಾಗಿ ಉಪದೇಶಿಸುತ್ತಾರೆಂಬ ಅಭಿಪ್ರಾಯವೂ ಸರಿಯಲ್ಲವು; ಏಕೆಂದರೆ ಈ ಮನ್ತ್ರವು ಮುಮುಕ್ಷುಗಳಲ್ಲದವರಿಗೂ ಅನ್ವಯಿಸುತ್ತದೆ ಎಂದಾದುದರಿಂದ. ಹಾಗಾದರೆ ಇಲ್ಲಿ ಉಪದೇಶವೇನು ? ಎಂದರೆ ಈ ಮನ್ತ್ರದಲ್ಲಿರುವ ಮೂರು ಪದಗಳ ಅಭಿಪ್ರಾಯ ಅಥವಾ ಲಕ್ಷಣವನ್ನು ಹೇಳಿ, ಇದು ಮುಮುಕ್ಷು ಬುಭುಕ್ಷು ಪ್ರವೃತ್ತಿಗಳಿಗೂ ಸಾಮಾನ್ಯವಾಗಿ ಅನ್ವಯವಿರುವ ಲಕ್ಷಣವುಳ್ಳದ್ದೆಂದು ತಿಳಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು. ಮನ್ತ್ರವು ಯಜ್ಞಯಾಗಾದಿ ಪ್ರವೃತ್ತಿಗಳಿಗೆ ವೀರ್ಯಾತಿಶಯವನ್ನುಂಟುಮಾಡುತ್ತದೆಂಬುದನ್ನು ನಾವು ವಿರೋಧಿಸುವದಿಲ್ಲವು. ಮುಮುಕ್ಷುಗಳಿಗೆ ಮಾತ್ರವೇ ಎಂಬುದನ್ನು ನಿರಾಕರಿಸುವೆವು. ಮುಮುಕ್ಷು ಬುಭುಕ್ಷುಗಳಿಗನುಸಾರವಾಗಿ ಮನ್ತ್ರವನ್ನು ಓಂ ತತ್ ಓಂ ಸತ್ ಎಂದು ವಿಭಾಗಿಸತಕ್ಕದ್ದೆಂಬ ಕೆಲವರ ಅಭಿಪ್ರಾಯವು ಈ ಮೇಲಿನ ಅಭಿಪ್ರಾಯಕ್ಕಿಂತಲೂ ಅನುಚಿತವಾದುದು. ಏಕೆಂದರೆ ವೇದಮನ್ತ್ರವನ್ನು ವಿಭಾಗಿಸುವ ಅಧಿಕಾರವನ್ನು ಸರ್ವೇಶ್ವರನು ಯಾರಿಗೂ ಕೊಟ್ಟಿರುವದಿಲ್ಲವು.

೧೮ನೆಯ ಅಧ್ಯಾಯದಲ್ಲಿ ಕರ್ಮಸನ್ನ್ಯಾಸ ತ್ಯಾಗ ಶಬ್ದಗಳು ಸಮಾನಾರ್ಥಕಗಳೆಂದೂ ಹಿಂದೆ ಹೇಳಿದ ಫಲಕರ್ತೃತ್ವ ಮಮತಾ ತ್ಯಾಗಗಳೇ ಪುನಃ ಇಲ್ಲಿ ಅನುಸಂಧಾನರೀತ್ಯಾ ಬೋಧಿತವೆಂದೂ, ಯಜ್ಞದಾನ ತಪಸ್ಸೇ ಮೊದಲಾದವುಗಳ ಸ್ವರೂಪತ್ಯಾಗವು ಬೋಧಿತವಲ್ಲವೆಂದೂ, ಮುಮುಕ್ಷುವಿಗೆ ಕಾಮ್ಯಕರ್ಮಗಳ ಸ್ವರೂಪತ್ಯಾಗವನ್ನು ಹೇಳಬಹುದೆಂಬೂ, ಆದರೆ ಈ ಸಂದರ್ಭದಲ್ಲಿ ಅದು ವಿವಕ್ಷಿತವಲ್ಲವೆಂದೂ ನಮ್ಮ ಅಭಿಪ್ರಾಯಗಳಿಗೂ ಅದ್ವೈತಿಗಳ ಅಭಿಪ್ರಾಯಕ್ಕೂ ಏನೊಂದೂ ತುಂಬಾ ವಿರೋಧವಿಲ್ಲವು. ಚರಮಶ್ಲೋಕದಲ್ಲಾದರೋ ವಿಶೇಷವಾಗಿ ಏನೇನನ್ನು ಹೇಳಬಹುದಾಗಿದೆಯೋ ಅದೆಲ್ಲವನ್ನೂ ವಿಸ್ತರಿಸಿ ಇಲ್ಲೂ ಇತರ ಸ್ಥಳಗಳಲ್ಲೂ ಉಪಪಾದಿಸಿರುವೆವು. ಆದರೆ ತಿಳಿಯತಕ್ಕ ವಿಶೇಷ ವಿಷಯಗಳುಂಟು ; ಅವುಗಳನ್ನು ಗ್ರಹಿಸಬಹುದು. ಹೀಗೆ ಹಿಂದೆ ಹೋದುದರಲ್ಲೂ ಮುಂದೆ ಬರುವುದರಲ್ಲೂ ಈ ಗೀತಾ ಭಾಷ್ಯದಲ್ಲೂ ಶ್ರೀ ಯಾಮುನಾಚಾರ್ಯರ ಮತ್ತು ಶ್ರೀ ಯತಿವರ್ಯರ ಮತಾನುಸಾರವಾಗಿ ಎಲ್ಲಾ ಮೋಹರೂಪಾಭಿಪ್ರಾಯಗಳೆಲ್ಲಾ ಶಮನಮಾಡಲ್ಪಟ್ಟಿರುವುವು. ಸಾಕು ಇಲ್ಲಿಗೆ; ಇನ್ನು ಹೆಚ್ಚಿಗೆ ಸಬೇಕಾವಿರ್ತಿಸಗಿರುವದಿಲ್ಲವೆಂದು ನಿಗಮನಮಾಡಿರುತ್ತಾರೆ.

ಆದರೆ ಪಿಶಾಚರನ್ತಿದೇವ ಗುಪ್ತ ಶಂಕರ ಯಾದವಪ್ರಕಾಶ ಭಾಸ್ಕರ ನಾರಾಯಣೀಯ ಇವರೇ ಮೊದಲಾದವರುಗಳ ಭಾಷ್ಯಗಳಿಂದಲೂ ಮತ್ತು ನಮ್ಮ ವಿಶಿಷ್ಟಾದ್ವೈತ ಪ್ರವರ್ತಕರಾದ ಮಹಾನುಭಾವರುಗಳಾದ ಶ್ರೀ ಯಾಮುನ ಮುನಿ ಭಾಷ್ಯಕಾರಾದಿಗಳಿಂದಲೂ (ಇದರಲ್ಲೇ ಮುಖ್ಯವಾಗಿ ಶ್ರೀ ವೇದಾನ್ತ ದೇಶಿಕರೂ ಸೇರಿದರು.) ಗ್ರಾಹ್ಯವಾಗಿ ಸರ್ವಸಾರತಮವಾದ ವಿಷಯವೇನೆಂದರೆ—ಶ್ರೀಮನ್ನಾರಾಯಣನೇ ಪರತತ್ತ್ವವು ; ಅನನ್ಯಶರಣರಾದ ಮೋಕ್ಷಾರ್ಥಿಗಳು ಅವಲಂಬಿಸಬೇಕಾದ ಉಪಾಯಗಳು ಯಥಾಧಿಕಾರವಾಗಿ ಆತನ ಉಪಾಸನ ಅಥವಾ ಪ್ರಪತ್ತಿರೂಪ ಆಶ್ರಯಣವು; ಇವೇ ಈ ಗೀತೆಯಲ್ಲಿ ಉಪಪಾದಿತವೆಂದು ಯಾಮುನಮುನಿಗಳ ಸಂಗ್ರಹ ಶ್ಲೋಕವನ್ನು ಆದಿಯಲ್ಲಿ ಹೇಳಿದುದನ್ನೇ ಈ ನಿಗಮನದಲ್ಲೂ ಉದಾಹರಿಸುವೆವು.

**ಸ್ವಧರ್ಮಜ್ಞಾನವೈರಾಗ್ಯ ಸಾಧ್ಯಭಕ್ತ್ಯೇಕ ಗೋಚರಃ ।**
**ನಾರಾಯಣಃ ಪರಂಬ್ರಹ್ಮ ಗೀತಾಶಾಸ್ತ್ರೇ ಸಮೀರಿತಃ ॥ ೬೬ ॥**

ಆದುದರಿಂದ ಸರ್ವೇಶ್ವರನನ್ನು ಹೊಂದಬೇಕಾದರೆ ಉಪಾಯಗಳು ಎರಡು—(೧) ಕರ್ಮಯೋಗ ಜ್ಞಾನಯೋಗಗಳಿಂದ ಸಹಕೃತವಾದ ಭಕ್ತಿಯೋಗವು ಎಂದರೆ ಉಪಾಸನೆಯು (೨) ಸ್ವತಂತ್ರಪ್ರಪತ್ತಿಯು, ಅಥವಾ ಭರನ್ಯಾಸವು ಇವುಗಳಲ್ಲಿ ಶಕ್ತರಾಗಿರುವ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಮಾತ್ರ [illegible]. ಇತರರಿಗೆಲ್ಲಾ ಭರನ್ಯಾಸವು; ಕಠೇ,

"ಭಕ್ತ್ಯಾ ಪರಮಯಾ ವಾಪಿ ಪ್ರಪತ್ತ್ಯಾ ವಾ [illegible]ನುತೇ ।

ಪ್ರಾಪ್ಯೋಽಹಂ ನ ತಥಾ ಪ್ರಾಪ್ಯಃ ವಮ ಕೃಚ್ಛ್ರ ಲಿಪ್ಸು [illegible] ॥ ಎಂಬಲ್ಲಿ ಹೇಳಲ್ಪಟ್ಟಿರುವದು. ಹೀಗೆಯೇ ಎರಡು ಉಪಾಯಗಳು ಗೀತೆಯಲ್ಲೂ ಹೇಳಲ್ಪಟ್ಟವು. ಆ ಕ್ಷತ್ರಿಯನಾದ ಅರ್ಜುನನಿಗೆ ಮುಷ್ಟನಿಗ್ರಹರೂಪ ಇತಿ ಕರ್ತವ್ಯತೆಯನು ಉಪದೇಶ [illegible] ಯೋಗವು ಅವಶ್ಯಕವಾದುದರಿಂದ ಉಪಾಸನವೇ [illegible] ಹೇಳಲ್ಪಟ್ಟಿತು. ಹಾಗಾದರೆ ಶರಣಾಗತಿಯನ್ನೂ ಅಲ್ಲಲ್ಲೇ ಹೇಳಿ ಕೊನೆಯಲ್ಲೂ "ಸರ್ವಧರ್ಮಾ" ಎಂಬಲ್ಲಿಯೂ ಹೇಳಲು ಕಾರಣವೇನು? ಎಂದು ಪ್ರಶ್ನಿಸಿದರೆ ಅದು ಲಘುವಾದ ಸ್ವತಂತ್ರವಾದ ಉಪಾಯವಾಗಿ [illegible] ಅಧಿಕಾರ ಉಂಟೆಂದು ತಿಳಿಸುವದಕ್ಕಾಗಿ ಅಲ್ಲಲ್ಲಿ ಹೇಳಲ್ಪಟ್ಟಿತು. ಕೊನೆಯಲ್ಲಿ ಹೇ[illegible]ಣವೇನು? ಎಂದರೆ, ಅರ್ಜುನನಿಗೆ ಸರ್ವೇಶ್ವರನು ನಿಗಮನವಾಗಿ ಹೇಳುವಾಗ [illegible] ವನ್ನು ಇನ್ನೊಂದು ಸಲ ಹೇಳುವೆನು ಕೇಳು [illegible] ಉಪಾಸಿಸು ಎಂದು ಉ[illegible] ಆಗ [illegible] ಆದಕ್ಕೆ ಶಕ್ತಿ ಇಲ್ಲವೇ ಎಂದು ಶೋಕಿಸ[illegible] ಆ [illegible] ಶೋಕ [illegible]ರ್ಥವಾಗಿ ಈ ಭರನ್ಯಾಸವನ್ನು ಉಪದೇಶಿಸಿದರು. ಭರನ್ಯಾಸಶಾಸ್ತ್ರವೂ ತುಂಬಾ ವಿಪುಲತರವಾಗಿ ಅನೇಕ ಶಾಸ್ತ್ರಗಳಲ್ಲಿ ಉಪಪಾದಿತವಾಗಿರುವಾಗ ಇಲ್ಲಿ ಒಂದು ಶ್ಲೋಕದಲ್ಲಿ ಸಂಗ್ರಹವಾಗಿ ಹೇಳುವದಕ್ಕೆ ಕಾರಣವೇನೆಂದರೆ ಅದು ಅಪ್ರಸ್ತುತವಾದುದರಿಂದಲೂ ಹಾಗೆ ಹೇಳದಿದ್ದರೆ ಶಾಸ್ತ್ರಪ್ರೋಕ್ತವಾದ ಉಪಾಯವು ಒಂದೇ ಎಂಬ ಭ್ರಮಜ್ಞಾನ ಉಂಟಾಗಬಾರದರಿಂದಲೂ, ಹಾಗೆ ಉಪದೇಶವು ಶರಣಾಗತಿ ಮಾರ್ಗವು ಅನೇಕ ಶಾಸ್ತ್ರಗಳಲ್ಲಿ ಉಪಪಾದಿತವು:—ಎಲ್ಲೆಲ್ಲಿ ಉಪಪಾದಿತವು? ಮತ್ತು ಅವರ ಪರಿಕರಗಳಾವುವು. [illegible]ನುಷ್ಠಾನ ಕ್ರಮವು ಹೇಗೆ? ಇತ್ಯಾದಿ ಸಕಲ ವಿಷಯಗಳೂ ಶ್ರೀ ನಿಗಮಾಂತ ದೇಶಿಕರವರ ವಿಪುಲ ಗ್ರಂಥವಾದ ಶ್ರೀಮದ್ರಹಸ್ಯತ್ರಯಸಾರದಲ್ಲೂ ಅವರ ಮಕ್ಕಳ ಸಂಗ್ರಹ ಗ್ರಂಥವಾದ ಶ್ರೀಮದ್ರಹಸ್ಯತ್ರಯಸಾರ ಸಂಗ್ರಹದಲ್ಲೂ ಕಾಣಬಹುದು.

ಮೊದಲೇ ಶರಣಾಗತಿರೂಪೋಪಾಯವು ಅಸ್ವತಂತ್ರವಾದುದೆಂದು ಹೇಳಲ್ಪಟ್ಟಿತಲ್ಲಾ. ಅದು ಹೇಗೆ? ಎಂದು ಕೇಳಬಹುದು. ಈ ಶರಣಾಗತಿಗೆ ನಿತ್ಯನೈಮಿತ್ತಿಕಗಳ ಅನುಷ್ಠಾನವು, ಉಪಾಸನೆಗೆ ಅಂಗವಾದ ಹಾಗೆ, ಅಂಗವಲ್ಲದ; ಬೇರೆ ವಿಧಿಯಿಂದ ಅವುಗಳು ಅನುಷ್ಠೇಯವು. ಈಗ ಅರ್ಜುನನಿಂದ ಯುದ್ಧಮಾಡಿಸಲು ಕರ್ಮಯೋಗವು ಮುಖ್ಯವಾಗಿ, ತದಂಗಕವಾದ ಉಪಾಸನೆಯು ಉಪದಿಷ್ಟವು. ಎಂಬುದು ಮುಖ್ಯವಾದ ಸಮಾಧಾನವು.

**ಮೂಲಕ್ಕೆ ಅರ್ಥವು** -ಬ್ರಹ್ಮವಿದ್ಯೆಯನ್ನು ಅಧಿಗರಿಸಿದ ಸಚ್ಛಿಷ್ಯನಿಗೆ ಒಂದು ಮುಖ್ಯವಾದ ಇತಿಕರ್ತವ್ಯತೆಯು ಉಂಟು. ಅದೇನೆಂದರೆ ತಾನು ಪಡೆದ ಬ್ರಹ್ಮವಿದ್ಯೆಯನ್ನು ಸಚ್ಛಿಷ್ಯನಾದ ಸತ್ಪಾತ್ರದಲ್ಲಿ ವಿನಿಯೋಗಿಸಬೇಕು. ಸತ್ಸಂಪ್ರದಾಯದಲ್ಲಿದ್ದುಕೊಂಡು ನಿತ್ಯನೈಮಿತ್ತಿಕಗಳನ್ನು ಯಥಾವಿಧಿ ನಡೆಸುತ್ತ ಸದಾಚಾರಸಂಪನ್ನನಾಗಿ ಪರಮಪುರುಷನಲ್ಲಿ ಭಕ್ತಿಯುಳ್ಳವನಾಗಿ ಶ್ರದ್ಧಾಳುವಾಗಿರುವವನಿಗೆ, ಈ ಗುಹ್ಯತಮ ರಹಸ್ಯವನ್ನು ಉಪದೇಶಿಸತಕ್ಕದ್ದೇ ವಿನಾ ಇತರರಿಗೆ ಕೂಡದೆಂಬುವನ್ನು ಮುಂದೆ ತಿಳಿಸುತ್ತಾರೆ. ಗೀತಾಶಾಸ್ತ್ರಕ್ಕೆ ಅಧಿಕಾರಿತ್ವವನ್ನೂ ಅನಧಿಕಾರಿತ್ವವನ್ನೂ ಚರ್ಚಿಸುತ್ತಾರೆ.—ತೇ - ನನ್ನ ಅಂಶವಾಗಿ ನರನೆಂದು ಹೇಳಲ್ಪಡುವ ನಿನಗಾಗಿ ಉಪದೇಶಿಸಲ್ಪಟ್ಟ, ಅದೇನು ಕಾರಣವೆಂದರೆ ನೀನು ನಿತ್ಯನೈಮಿತ್ತಿಕಗಳನ್ನನುಷ್ಠಿಸುತ್ತಾ ಸದಾಚಾರಯುಕ್ತನಾಗಿ, ನನಗೆ ಪರಮಭಕ್ತನಾಗಿ, ನನ್ನ ಪರಮಹಿತೋಪ

**ಮೂ. ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನಚ ಮಾಂ ಯೋಽಭ್ಯಸೂಯತಿ ॥ ೬೭ ॥**

---

ದೇಶವನ್ನು ಕೇಳಲು ತುಂಬಾ ಶ್ರದ್ಧಾಳುವಾಗಿಯೂ ಇರುವದರಿಂದ, ಇಂತಹ ನಿನಗಾಗಿಯೂ, ನಿನ್ನ ಮೂಲಕವಾಗಿ ಸರ್ವ ಮುಮುಕ್ಷು ವರ್ಗಕ್ಕಾಗಿಯೂ, ಉದ್ದೇಶಿಸಲ್ಪಟ್ಟ, **ಇದಂ**- ಈ ಗುಹ್ಯತಮ ರಹಸ್ಯವಾಗಿ ತತ್ವಹಿತ ಪುರುಷಾರ್ಥಗಳನ್ನು ಒಳಗೊಂಡಿರುವ ಮತ್ತು ಕರ್ಮಯೋಗದಿಂದಲಾಗಲಿ, ಅಥವಾ ಕರ್ಮಯೋಗ ಜ್ಞಾನಯೋಗಗಳಿಂದಲಾಗಲಿ ಅನುಗ್ರಹೀತವಾದ ಭಕ್ತಿಯೋಗವಿಷಯದ ಉಪದೇಶವನ್ನು **ಕದಾಚನ** - ಯಾವ ಕಾಲದಲ್ಲೇಯಾಗಲಿ, **ಅತಪಸ್ಕಾಯ** – ತಪಶ್ಚರಣೆಯಿಲ್ಲದ, ಇಲ್ಲಿ ತಪಶ್ಶಬ್ದವು ಇತಿ ಕರ್ತವ್ಯತಾರೂಪ ಸಮಸ್ತ ಕರ್ಮನಿಷ್ಠೆಗೂ ಉಪಲಕ್ಷಣವು, ಆದುದರಿಂದ ಸತ್ಸಂಪ್ರದಾಯಪ್ರಾಪ್ತವಾದ ನಿತ್ಯನೈಮಿತ್ತಿಕಾದಿಗಳನ್ನು ಅನುಷ್ಠಿಸದೇ ಸದಾಚಾರನಿಷ್ಠನಲ್ಲದವನಿಗೆ ಅಥವಾ ಕರ್ಮಯೋಗನಿಷ್ಠನಿಲ್ಲದವನಿಗೆ ಎಂಬ ತಾತ್ಪರ್ಯವು. **ನ ಚ ವಾಚ್ಯಂ** – ಹೇಳತಕ್ಕದ್ದಲ್ಲವು. (ವಿಧಿ ರೂಪದಲ್ಲಿ ಹೇಳಿದುದು), ಮತ್ತು **ಅಭಕ್ತಾಯ** - ಪರಮಹಿತೋಪದೇಶಿಕನಾಗಿರುವ ನನ್ನಲ್ಲಿ ಭಕ್ತಿಯಿಲ್ಲದ ನಿರ್ಭಾಗ್ಯನಿಗಂತೂ ಅಥವಾ ನನ್ನನ್ನು ಹೊಂದಲು ಇಷ್ಟವಿಲ್ಲದವನಿಗೂ, **ತೇ** - ಇಲ್ಲಿ ತೇ ಎಂಬುದು **ತ್ವಯಾ** - ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿರುವದರಿಂದ, ನಿನ್ನಿಂದ, **ನ ಚ ವಾಚ್ಯಂ** - ಹೇಳತಕ್ಕದ್ದಲ್ಲವು. ಮತ್ತು ಒಂದು ವೇಳೆ ಸದಾಚಾರನೇ ಆಗಿರಲಿ ಮತ್ತು ನನ್ನಲ್ಲಿ ಸಾಮಾನ್ಯಭಕ್ತಿಯು ಇರಲಿ ಆದರೆ **ಅಶುಶ್ರೂಷವೇ** – ನೀನು ಹೇಳುವ ಉಪದೇಶವನ್ನು ಕೇಳಿ ತಿಳಿಯಬೇಕೆಂಬ ಶ್ರದ್ಧಾರಹಿತನಿಗೂ ಸಹ, **ನ ಚ ವಾಚ್ಯಂ** -ಹೇಳತಕ್ಕದ್ದಲ್ಲವು. ಇವೆಲ್ಲಾ ಹಾಗಿರಲಿ, ಎಂತವನಿಗೆ ಸರ್ವಾತ್ಮನಾ ಉಪದೇಶಿಸತಕ್ಕದ್ದಲ್ಲವು ಎಂದರೆ ಹೇಳುತ್ತಾರೆ. **ಯಃ ತು** – ಯಾವ ದುಷ್ಟನು, **ಮಾಂ** - ನನ್ನನ್ನು, **ಅಭ್ಯಸೂಯತಿ** – ದ್ವೇಷಿಸುವನೋ, **ತಸ್ಮೈ** - ಅವನಿಗಂತೂ, ಎಂದು ಇಟ್ಟುಕೊಳ್ಳತಕ್ಕದ್ದು, **ನಚವಾಚ್ಯಂ** – ಹೇಳತಕ್ಕದ್ದೇ ಅಲ್ಲವು. ಇಲ್ಲಿ **ಇದಂತೇ** - ಎಂಬಲ್ಲಿರುವ **ತೇ** ಎಂಬ ಪದವನ್ನು **ತೇ ಇದಂ** ಎಂದು ಸೇರಿಸಿ ಅರ್ಥಮಾಡಿ ನಿನಗಾಗಿ ಹೇಳಲ್ಪಟ್ಟ ಈ ರಹಸ್ಯಶಾಸ್ತ್ರವನ್ನು ಎಂದಾಗಲಿ ಅರ್ಥಮಾಡಬಹುದು. ಇದರಿಂದ ಇಂತಹ ದುರ್ಗುಣಗಳಿಲ್ಲದ ಸತ್ಪಾತ್ರನನ್ನು ಪರೀಕ್ಷಿಸಿ, ಅಂತಹ ಸಚ್ಛಿಷ್ಯನಿಗೆ ಉಪದೇಶಿಸತಕ್ಕದ್ದೆಂಬುದೂ ಸೂಚಿತವು. ಸರಿಯಾದ ಬ್ರಹ್ಮವಿದ್ಯಾಧಿಕಾರಿಯು ಅಹುದೋ ಅಲ್ಲವೋ ಎಂದು ಚೆನ್ನಾಗಿ ಪರೀಕ್ಷಿಸಿ, ಅತಪಸ್ಕನಾಗಿಯೂ ಅಭಕ್ತನಾಗಿಯೂ, ಅಶುಶ್ರೂಷವಾಗಿಯೂ ನನ್ನನ್ನು ದ್ವೇಷಿಸುವವನಾಗಿಯೂ ಇರುವವನಿಗೆ ಉಪದೇಶವು ಕೂಡದೆಂದು ನಿಷೇಧಿಸಿದರು. ಇದರಿಂದ ಭಗವದ್ವಿಷಯದಲ್ಲೂ, ಪರಮಾಚಾರ್ಯನಲ್ಲೂ ವಿಶೇಷ ಭಕ್ತಿಯೂ, ಆಚಾರ್ಯನು ಉಪದೇಶಿಸುವದರಲ್ಲಿ ಶಿಷ್ಯನಿಗೆ ತುಂಬಾ ಶ್ರದ್ಧೆಯ ಬ್ರಹ್ಮವಿದ್ಯಾಜ್ಞಾನವಿಲ್ಲವೇ ಎಂಬ ಶೋಕವೂ ಮತ್ತು ಪ್ರಾಪ್ಯವನ್ನು ಹೋಗಿ ಸೇರಬೇಕೆಂಬ ಶ್ರದ್ಧೆಯೂ ಇರಬೇಕೆಂದು ಹೇಳಿದ ಹಾಗಾಯಿತು. ಇಂತಹ ಶಿಷ್ಯನನ್ನೇ ಹುಡುಕಿ ಉಪದೇಶಿಸತಕ್ಕದ್ದೇ ವಿನಾ, ಇವು ಇಲ್ಲದ ಶಿಷ್ಯನು ಬಂದು ಡಂಭಕ್ಕಾಗಿ ಉಪದೇಶಿಸಬೇಕೆಂದು ಪ್ರಾರ್ಥಿಸಿದರೆ ಹೇಳತಕ್ಕದ್ದಲ್ಲವೆಂಬುದು ವಿವರಿಸಲ್ಪಟ್ಟಿತು. ಇಂತಹ ಗುಣಗಳಿಲ್ಲದವನಿಗೆ ಉಪದೇಶಿಸಿದರೂ ಅಂತಹ ಶಿಷ್ಯನಿಗೆ ಬ್ರಹ್ಮಜ್ಞಾನ ಸಂಪತ್ತು ಉಂಟಾಗುವದಿಲ್ಲವು. ಗುರುವಿಗೂ ಕೂಡ ಹಾನಿಕರವು, ಆತನ ಜ್ಞಾನವೂ ಸಹ ಕ್ಷೀಣದೆಶೆಯನ್ನು ಹೊಂದುತ್ತದೆ. ಜಾನುಶ್ರುತಿ ಎಂಬ ಮಹಾಧರ್ಮಿಷ್ಠನಾದ ರಾಜರ್ಷಿಯನ್ನು ವಿಶೇಷವಾಗಿ ಪರೀಕ್ಷಿಸಿಯೇ ಬ್ರಹ್ಮವಿತ್ತಾದ ರೈಕ್ವರು ಉಪದೇಶವನ್ನಿತ್ತರು. ಹಾಗೆ ಪರೀಕ್ಷಿಸದೇ ಈ ಗುಣಗಳು ಯಾವುವೂ ಇಲ್ಲದ ಇಂದ್ರನು ಹೋಗಿ ಚತುರ್ಮುಖನನ್ನು ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕೆಂದು ಕೇಳಲು, ಸ್ವರ್ಗಾಧಿಪತಿಯು

ಬಂದು ಕೇಳಿದನೇ ಎಂದು ಉಪದೇಶಿಸಿದುದರಿಂದ ಚತುರ್ಮುಖನಿಗೆ ಜ್ಞಾನಹಾನಿಯುಂಟಾಗಿ ತನ್ನ ಶಿಷ್ಯನಿಂದ ಪುನಃ ಉಪದೇಶವನ್ನು ಹೊಂದಿದನೆಂಬ ಇತಿಹಾಸವುಂಟು. ಈ ಸಂದರ್ಭದಲ್ಲಿ "ಗುರುಂ ಪ್ರಕಾಶಯೇದ್ಧೀಮಾನ್ ಮನ್ತ್ರಂ ಯತ್ನೇನ ಗೋಪಯೇತ್ । ಅಪ್ರಕಾಶ ಪ್ರಕಾಶಾಭ್ಯಾಂ ಕ್ಷೀಯೇತೇ ಸಂಪದಾಯುಷೀ" ಎಂಬ ಶೇಷ ಸಂಹಿತಾವಾಕ್ಯವು. (೧೪-೫೦) ಅನುಸಂಧೇಯವು. ಇಲ್ಲಿ ಮನ್ತ್ರ ಶಬ್ದವು ಸರ್ವ ಪರ ಬ್ರಹ್ಮಪ್ರಾಪ್ತಿ ವಿಷಯವಾದ ರಹಸ್ಯಕ್ಕೂ ಉಪಲಕ್ಷಣವು. ಬ್ರಹ್ಮವಿದ್ಯೆಯೂ ಗುಹ್ಯತಮ ರಹಸ್ಯವಾಗಿ ಮನ್ತ್ರೋಪದೇಶ ಸಮಾನವೇ ಆದುದರಿಂದ ಗೋಪನಮಾಡಿ ಸತ್ಪಾತ್ರದಲ್ಲಿ ಮಾತ್ರ ಅದನ್ನು ಉಪದೇಶಿಸತಕ್ಕದ್ದು ; ಹಾಗೆ ಮಾಡದ ಆಚಾರ್ಯನಿಗೆ ಸಂಪತ್ತೂ ಆಯುಸ್ಸೂ ಎರಡೂ ಕ್ಷೀಣವಾಗುತ್ತದೆಂದು ಹೇಳಲ್ಪಟ್ಟಿತು. ಆದರೆ ಬ್ರಹ್ಮನಿಷ್ಠನು ಮೃತ್ಯುವನ್ನು ಪ್ರಿಯವಾದ ಅತಿಥಿಯನ್ನಾಗಿ ಭಾವಿಸತಕ್ಕದ್ದೆಂದು ಹೇಳಿರುವಾಗ ಸಂಪತ್ತು ಆಯುಸ್ಸು ಕ್ಷೀಣವಾದರೆ ಆಗಲಿ, ಅದರಿಂದೇನು? ಎಂದರೆ ಹಾಗಲ್ಲವು; ಬ್ರಹ್ಮನಿಷ್ಠನಿಗೆ ಸಂಪತ್ತು ಯಾವುದೆಂದರೆ ಜ್ಞಾನಸಂಪತ್ತು; ಆಯುಸ್ಸು ಯಾವುದೆಂದರೆ ಪರಮಪದದಲ್ಲಿ ವಾಸಿಸುವ ಕಾಲವು ; ಇವು ಕ್ಷೀಣವಾಗುತ್ತವೆಂಬ ಭಾವವು ಆದುದರಿಂದ ಪರೀಕ್ಷಿಸಿ ಎಂತಹ ಶಿಷ್ಯನು ಶಿಕ್ಷಣೀಯನು ಎಂಬ ವಿಷಯದಲ್ಲಿ ಈ ಮುಂದಿನ ಶ್ಲೋಕವೂ ಅನುಸಂಧೇಯವು. (ದೇಶಿಕ ನ್ಯಾಸವಿಂಶತಿ ೩)

"ಸದ್ಬುದ್ಧಿಸ್ಸಾಧುಸೇವೀ ಸಮುಚಿತ ಚರಿತಸ್ತತ್ತ್ವಬೋಧಾಭಿಲಾಷೀ ।
ಶುಶ್ರೂಷುಸ್ತ್ಯಕ್ತಮಾನಃ ಪ್ರಣಿಪತನ ಪರಃ ಪ್ರಶ್ನಕಾಲ ಪ್ರತೀಕ್ಷಃ ।
ಶಾನ್ತೋದಾನ್ತೋಽನಸೂಯುಶ್ಶರಣಮುಪಗತಶ್ಶಾಸ್ತ್ರವಿಶ್ವಾಸಶಾಲೀ ।
ಶಿಷ್ಯಃ ಪ್ರಾಪ್ತಃ ಪರೀಕ್ಷಾಂ ಕೃತವಿದಭಿಮತಂ ತತ್ತ್ವತಶ್ಶಿಕ್ಷಣೀಯಃ ॥"

ಇದರ ಅರ್ಥವು ವ್ಯಕ್ತವು.

ತಪೋನಿಷ್ಠನಾಗಿದ್ದರೂ ಭಕ್ತನಲ್ಲದಿದ್ದರೆ ಆಗಲೂ ಉಪದೇಶಿಸತಕ್ಕದ್ದಲ್ಲವು. ಒಂದು ವೇಳೆ ಭಕ್ತನಾಗಿದ್ದರೂ ಅಶುಶ್ರೂಷುವಾಗಿದ್ದರೂ ಉಪದೇಶಿಸ ತಕ್ಕದ್ದಲ್ಲವು ಎಂಬ ತಾತ್ಪರ್ಯವು; ಆದುದರಿಂದ ಉಪದೇಶಿಸಬೇಕಾದರೆ ತಪೋನಿಷ್ಠನಾಗಿಯೂ, ಗುರುಭಕ್ತಿ ದೇವಭಕ್ತಿಯುಳ್ಳವನಾಗಿಯೂ, ಗುರು ಶುಶ್ರೂಷಾರತನಾಗಿಯೂ ಇರುವ ಸಚ್ಛಿಷ್ಯನಿಗೆ ಮಾತ್ರವೇ ಉಪದೇಶಿಸತಕ್ಕದ್ದು. ಈ ಮೂರರಲ್ಲಿ ಯಾವುದೊಂದು ಇಲ್ಲದಿದ್ದರೂ ಉಪದೇಶಿಸತಕ್ಕದ್ದಲ್ಲವೆಂದು ವಿಧಿಸಿದರು. ಆದರೆ ನನ್ನನ್ನು ದ್ವೇಷಿಸುವವನಿಗಾದರೋ ಸರ್ವಾತ್ಮನಾ ಉಪದೇಶವು ಕೂಡಲೇ ಕೂಡದೆಂಬುದೂ ಹೇಳಲ್ಪಟ್ಟಿತು.

**ಭಾಷ್ಯಾರ್ಥವು**—ಹೀಗೆ ಶ್ರೀಕೃಷ್ಣ ಭಗವಾನರವರು ತಮ್ಮ ಅತ್ಯರ್ಥ ಪ್ರಿಯನಾದ ಅರ್ಜುನನಿಗೆ ಪರಮಪುರುಷಾರ್ಥ ಸಾಧಕನಾದ ಕರ್ಮಜ್ಞಾನಾನುಗೃಹೀತವಾದ ಭಕ್ತಿಯೋಗವಾದ ಪರಮರಹಸ್ಯವನ್ನು ಉಪದೇಶಿಸಿದುದು ಆಯಿತು. ಹೀಗೆ ರಹಸ್ಯವನ್ನು ಗುರುವಿನಿಂದ ಪಡೆದ ಸಚ್ಛಿಷ್ಯನಿಗೆ ಒಂದು ಕೃತಜ್ಞತಾರೂಪವಾದ ಇತಿಕರ್ತವ್ಯತೆಯುಂಟು;ಅದು ಯಾವುದೆಂದರೆ ಇಂತಹ ಉಪದೇಶವು ಪರಮಗೋಪ್ಯವಾದುದರಿಂದ ಸಚ್ಛಿಷ್ಯನನ್ನು ಪರೀಕ್ಷಿಸಿ ಉಪದೇಶಿಸತಕ್ಕದ್ದೇವಿನಾ, ಅನಧಿಕಾರಿಗೆ ಎಂದಿಗೂ ಉಪದೇಶಿಸತಕ್ಕದ್ದಲ್ಲವೆಂದು ಶಿಕ್ಷಿಸುತ್ತಾರೆ—**ಇದಮ್**. ಈ ಎಂದರೆ "**ನತ್ವೇವಾಹಂ ಜಾತುನಾಸಂ**" ಎಂದಾರಂಭಿಸಿ "**ಮಾಶುಚಃ**" ಎಂದು ಮುಗಿಸಿ ಹೇಳಿದ ಕರ್ಮಯೋಗ ಜ್ಞಾನಯೋಗಗಳಿಂದಲಾಗಲಿ ಅಥವಾ ಬರೀ ಕರ್ಮಯೋಗದಿಂದಲಾಗಲಿ ಸಾಧ್ಯವಾದ ಭಕ್ತಿಯೋಗರೂಪ ರಹಸ್ಯೋಪಾಯವಾದ, ಇದಂ ಶಬ್ದ ತಾತ್ಪರ್ಯವು ಇದೇ ಎಂದು ಹೇಳುತ್ತಾರೆ.—**ಪರಮಂ ಗುಹ್ಯಂ ಶಾಸ್ತ್ರಂ ಮಯಾಖ್ಯಾತಮ್** – ನನ್ನಿಂದ ಈಗ ಹೇಳಲ್ಪಟ್ಟ ಅತ್ಯಂತ ರಹಸ್ಯವಾದ ಒಕ್ಕವಿದ್ಯೆ ಎಂದು ಹೇಳಿಸಿಕೊಳ್ಳುವ ಶಾಸ್ತ್ರವನ್ನು,

**ಭಾ-** ಇದಂ ತೇ ಪರಮಂ ಗುಹ್ಯಂ ಶಾಸ್ತ್ರಂ ಮಯಾಖ್ಯಾತಂ, ಅತಪಸ್ಕಾಯ-ಅತಪ್ತತಪಸೇ, ತ್ವಯಾ ನ ವಾಚ್ಯಮ್; ತ್ವಯಿ ವಕ್ತರಿ ಮಯಿ ಚಾಭಕ್ತಾಯ ಕದಾಚನ ನ ವಾಚ್ಯಮ್. ತಪ್ತತಪಸೇ ಚಾಭಕ್ತಾಯ ನ ವಾಚ್ಯಮಿತ್ಯರ್ಥಃ; ನ ಚಾಶುಶ್ರೂಷವೇ-ಭಕ್ತಾಯಾಪ್ಯಶುಶ್ರೂಷವೇ ನ ವಾಚ್ಯಮ್; ನ ಚ ಮಾಂ ಯೋಽಭ್ಯಸೂಯತಿ-ಮತ್ಸ್ವರೂಪೇ ಮದೈಶ್ವರ್ಯೇ ಮದ್ಗುಣೇಷು ಯೋ ದೋಷಮಾವಿಷ್ಕರೋತಿ, ನ ತಸ್ಮೈ ವಾಚ್ಯಮ್; ಅಸಮಾನವಿಭಕ್ತಿ ನಿರ್ದೇಶಸ್ತಸ್ಯಾತ್ಯನ್ತ ಪರಿಹರಣೀಯತಾಜ್ಞಾಪನಾಯ ॥ ೬೭ ॥

**ಅತಪಸ್ಕಾಯ** ಎಂದರೆ **ಅತಪ್ತತಪಸೇ** - ತಪೋನುಷ್ಠಾನ ಮಾಡದವನಿಗೆ, **ತ್ವಯಾ** – ನಿನ್ನಿಂದ **ನವಾಚ್ಯಮ್** - ಉಪದೇಶಿಸತಕ್ಕದ್ದಲ್ಲವು; ಮತ್ತು **ತ್ವಯಿವಕ್ತರಿ** - ಉಪದೇಶಕನಾದ ನಿನ್ನಲ್ಲೂ ಮಯಿಚ-ಲೋಕಗುರುವಾಗಿ ಮೋಕ್ಷಪ್ರದಾತನಾದ ನನ್ನಲ್ಲೂ ಸಹ, **ಅಭಕ್ತಾಯ**-ಭಕ್ತಿಯಿಲ್ಲದ ಅಧಿಕಾರಿಗೂ. **ಕದಾಚನ ನವಾಚ್ಯಮ್** ಎಂದಿಗೂ ಹೇಳತಕ್ಕದ್ದಲ್ಲವು; **ತಪ್ತತಪಸೇಚಾಭಕ್ತಾಯ-ನವಾಚ್ಯಮಿತ್ಯರ್ಥಃ**-ಎಂದು ಹೇಳಿ ತಪೋನುಷ್ಠಾನಮಾಡಿದ್ದಾದರೂ ನನ್ನಲ್ಲಾಗ ಭಕ್ತನಲ್ಲವೋ ಆಗ ಹೇಳತಕ್ಕದ್ದೇ ಅಲ್ಲವು ಎಂಬ ತಾತ್ಪರ್ಯವು. ಇಲ್ಲಿ **ತೇ** ಎಂಬ ಪದವು, **ತ್ವಯಾ** ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದೆಂದೂ, ಇದಂ **ತೇ ಪರಮಂ ಗುಹ್ಯಂ** ಎಂದು ಭಾಷ್ಯದಲ್ಲಿರುವ **ತೇ** ಎಂಬ ಪದವು, ಮುಂದೆ ತೇ ಎಂಬುದರ ಅರ್ಥವಲ್ಲವೆಂದೂ, ಅರವತ್ತಾರನೆಯ ಶ್ಲೋಕದಲ್ಲಿರುವ ಇತಿ **ತೇ** ಜ್ಞಾನಮಾಖ್ಯಾತಮ್ ಎಂಬಲ್ಲಿರುವ **ತೇ** ಪದದ ಆಕರ್ಷಣವೆಂದು ತಾತ್ಪರ್ಯ ಚಂದ್ರಿಕೆಯಲ್ಲಿ ಹೇಳಲ್ಪಟ್ಟಿರುತ್ತದೆ; ಏಕೆಂದರೆ **ತೇ** ಇದಂ ಎಂದು ಅನ್ವಯಿಸಿದರೆ, **ತೇ ಆಖ್ಯಾತಮ್** ಇದಂ, ಎಂದು **ಆಖ್ಯಾತಮ್** ಎಂಬ ಪದವನ್ನು ಅಧ್ಯಾಹಾರವನ್ನು ಮಾಡಿಕೊಳ್ಳಬೇಕಾಗುತ್ತದೆ; ಆದುದರಿಂದ **ತೇ** ಎಂದರೆ **ತ್ವಯಾ** ಎಂದು ಅರ್ಥ ಮಾಡಿರುತ್ತಾರೆ. ಅಂತೂ ಇದಂ **ತೇ** ಎಂಬ ಪ್ರಯೋಗವು ಉಪಿಪ್ರೋಕ್ತವಾಗಿ ಅರ್ಥವು. **ನಚ ಮಾಂ ಯೋಽಭ್ಯಸೂಯತಿ** ಎಂದರೆ **ಕಥಿತೇಷು – ಶ್ರುತಿಸ್ಮೃತಿ ಇತಿಹಾಸ ಪುರಾಣ**ಗಳಲ್ಲಿ ಹೇಳಲ್ಪಟ್ಟ ಅಥವಾ **ಈ** ಗ್ರಂಥದಲ್ಲೇ ನಾನು ನಿನಗೆ ಉಪದೇಶಿಸಿದ ಮತ್ಸ್ವರೂಪದಲ್ಲೂ, **ಮದೈಶ್ವರ್ಯೇ**-ನನ್ನ ಐಶ್ವರ್ಯದಲ್ಲೂ ಎಂದರೆ ನಿಯಾಮ್ಯವಿಭೂತಿಯಲ್ಲೂ, **ಮದ್ಗುಣೇಷು** - ನನ್ನ ಕಲ್ಯಾಣಗುಣಗಳಲ್ಲೂ, **ಯೋ ದೋಷಮಾವಿಷ್ಕರೋತಿ** - ಯಾರು ದೋಷವಿಲ್ಲದ ಸ್ಥಳದಲ್ಲಿ ದೋಷವನ್ನಾರೋಪಿಸುವರೋ, **ನತಸ್ಮೈವಾಚ್ಯಮ್**-ಅಂತವನಿಗಂತೂ ಸರ್ವಾತ್ಮನಾ ಹೇಳತಕ್ಕದ್ದೇ ಅಲ್ಲವು; ಇಲ್ಲಿ "ತಸ್ಮೈ" ಎಂದು ಇಟ್ಟುಕೊಳ್ಳಬೇಕಾಗುತ್ತದೆ. **ಅಸೂಯಾ** ಎಂಬ ಶಬ್ದದ **ಅರ್ಥವೇ**ನೆಂದರೆ—ದೋಷವಿಲ್ಲದ ಸ್ಥಳದಲ್ಲಿ ದೋಷವನ್ನು ಆರೋಪಿಸೋಣವು; ಪರಮಪುರುಷನ ಸ್ವರೂಪರೂಪಗುಣ ವಿಭವೈಶ್ವರ್ಯಗಳೆಲ್ಲಾ ತುಂಬಾ ಮಹತ್ತರವು; ಅಂತಪುಗಳಲ್ಲಿ ದೋಷವನ್ನಾರೋಪಿಸೋಣವು ಅಸೂಯೆಯು; ಇಂತಹ ಅಸೂಯಾಪರನ ವಿಶೇಷಾನರ್ಹನೆಂದು ಮುಂದೆ ತಿಳಿಸುತ್ತಾರೆ. ಇವರಿಂದ ಅವಿದ್ಯಾಗೃಹೀತನು ಪರಮಾತ್ಮನು ಎಂಬ ವಾದವೂ, ವಿಭೂತಿಯೆಲ್ಲಾ ಮಿಥ್ಯಾ ಎಂಬ ವಾದವೂ, ಕಲ್ಯಾಣಗುಣಾಕರನನ್ನು ನಿರ್ಗುಣನೆಂದು ಹೇಳುವ ವಾದವೂ ಸರಿಯಲ್ಲವೆಂಬ ಭಾವವನ್ನು ಮನಸ್ಸಿನಲ್ಲಿಟ್ಟು "**ಮತ್ಸ್ವರೂಪೇ ಮದೈಶ್ವರ್ಯೇ ಮದ್ಗುಣೇಷು ಯೋದೋಷಮಾವಿಷ್ಕರೋತಿ**" ಎಂದು "**ಮಾಂ ಅಭ್ಯಸೂಯತಿ**" ಎಂಬುದಕ್ಕೆ **ವ್ಯಾಖ್ಯಾನ ಮಾಡಿರುತ್ತಾರೆ**. ಹಿಂದೆ ಎಲ್ಲಾ **ನಾತಪಸ್ಕಾಯ, ನಾಭಕ್ತಾಯ** ಎಂದು **ಚತುರ್ಥೀ ವಿಭಕ್ತಿಯನ್ನೇ ಉಪಯೋಗಿಸುತ್ತಾ** ಬಂದುದರಿಂದ **ನಾಭ್ಯಸೂಯವೇ** ಎಂದು **ಅಸೂಯಾಪರನಿಗೂ** ಎಂದರೆ ನನ್ನನ್ನು ನನ್ನ ಐಶ್ವರ್ಯವನ್ನೂ ನನ್ನ ಕಲ್ಯಾಣಗಳನ್ನೂ ದ್ವೇಷಿಸುವವನಿಗೂ ಹೇಳತಕ

ಐಶ್ವರ್ಯವನ್ನು ಹೊಂದಿಸುವ ಪ್ರಭಾವವುಳ್ಳವರಾದುದರಿಂದಲೂ (೫) **ನಿಷ್ಪ್ರತ್ಯೂಹಾ ನೃತಂ ಸ್ಯಾತ್** - ತಡೆಯಿಲ್ಲದಿರುವ ಯಾರನ್ನೂ ಹಿಂಸಿಸದೇ ಇರುವ ಋಜುಸ್ವಭಾವವುಳ್ಳವರಾದುದರಿಂದಲೂ (೬) **ನಿಯತ ರಸತಯಾ ನಿತ್ಯಶೇಷಿತ್ವ ಯೋಗಾತ್**-ನಿಯತವಾದ ಆನಂದಭಾವ ಉಳ್ಳೋಣವರಿಂದ ಸದಾ ಶೇಷಿಯಾಗಿರುವವರಿಂದಲೂ, ಸರ್ವೇಶ್ವರನು ಹೇಗೆ ಉಪಾಸ್ಯನೋ ಹಾಗೆಯೇ ಸದಾಚಾರ್ಯನೂ ಸಚ್ಛಿಷ್ಯನಿಗೆ ಉಪಾಸ್ಯನೆಂದು ಹೇಳಲ್ಪಟ್ಟಿರುತ್ತದೆ. ಒಂದು ವಿಧದಲ್ಲಿ ನೋಡಿದರೆ ಪರಮಪುರುಷನಿಗಿಂತ ಆಚಾರ್ಯನೇ ಸಚ್ಛಿಷ್ಯನಿಗೆ ಮೇಲು. ಪರಮಪುರುಷನ ಉಪದೇಶವೂ ಸುಲಭವಾಗಿ ಗ್ರಾಹ್ಯವಲ್ಲವು; ಅಥವಾ ಅವತಾರ ಕಾಲಗಳಲ್ಲಿ ಮಾತ್ರವೇ. ಆ ಕಾಲದಲ್ಲಿದ್ದು ಅದರಿಂದ ಕೇಳುವ ಕೆಲವರಿಗೆ ಮಾತ್ರ ಉಪಕಾರಕವು. ಸದಾಚಾರ್ಯರು ಹಾಗಲ್ಲವು. ಅವರು ಸದಾ ಕಂಕಣಬದ್ಧರಾಗಿ ವಿ ಮುಕ್ಷುವಾದ ಶಿಷ್ಯರು ಬಂದರೆ ಸಾಕು, ಅವರು ಪರಮ ಪುರುಷನ ಅನುಗ್ರಹಕ್ಕೆ ಪಾತ್ರರಾಗಲಿ ಎಂಬ ಉದಾರ ಮನಸ್ಸಿನಿಂದ ಸದುಪದೇಶಕ್ಕಾಗಿಯೇ ಸದಾ ಕಾದಿರುವರು. ಇದರಿಂದಲೇ ವ್ಯಾಖ್ಯಾನದಲ್ಲಿ **ತ್ವಯಿವಕ್ತರಿ** ಎಂದು ಆಚಾರ್ಯನಾದ ನಿನ್ನಲ್ಲಿ ಎಂದು ಮೊದಲು ಹೇಳಿ, ಅನಂತರ **ಮಯಿಚ** ಎಂದು ಎರಡನೆಯ ಸಲ ಹೇಳಿರುತ್ತಾರೆ. ಇದರಿಂದ ಆಚಾರ್ಯೋಪದೇಶವು ಸಂಸಾರೋತ್ತರಣೆಗೆ ತುಂಬಾ ಆವಶ್ಯಕವೆಂಬ ಭಾವವನ್ನು ಸೂಚಿಸಿರುತ್ತಾರೆ; ಇದರಿಂದ **"ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ । ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್ ॥** ( ) ಪಾಪಿಷ್ಠನಾದ ಕ್ಷತ್ರಬಂಧುವೂ ಹಾಗೆಯೇ ಸುಕೃತಿಯಾದ ಪುಂಡರೀಕನೂ ಇಬ್ಬರು ನಾರದರನ್ನು ಆಚಾರ್ಯರನ್ನಾಗಿ ವರಿಸಿದುದರಿಂದಲೇ ಮುಕ್ತಿಯನ್ನು ಹೊಂದಿದರೆಂಬ ಪ್ರಮಾಣವು ಇಲ್ಲಿ ಅನುಸಂಧೇಯವು. ಮತ್ತು **"ಸಿದ್ಧಿರ್ಭವತಿವಾ ನೇತಿ ಸಂಶಯೋಚ್ಯುತ ಸೇವಿನಾಂ । ನಸಂಶಯೋತ್ರ ತದ್ಭಕ್ತ ಪರಿಚರ್ಯಾರತಾತ್ಮನಾಂ"** ಸಿದ್ಧಿಯುಂಟಾಗುತ್ತದೊ ಇಲ್ಲವೋ ಎಂಬ ಸಂಶಯವು ಒಂದು ವೇಳೆ ಅಚ್ಯುತಸೇವಿಗಳ ವಿಷಯದಲ್ಲಾದರೂ ಇರಬಹುದು; ಆಚಾರ ಸೇವಿಗಳ ವಿಷಯದಲ್ಲಿ ಅಂತಹ ಸಂಶಯವೇ ಇಲ್ಲವೆಂಬ ಇತ್ಯಾದಿ ಅಭಿಪ್ರಾಯಗಳೆಲ್ಲಾ **ತ್ವಯಿ ವಕ್ತರಿ ಮಯಿಚನಾಭಕ್ತಾಯ** ಎಂಬ ಭಾಷ್ಯದಿಂದ ಸೂಚಿತವು. ಆಚಾರ್ಯ ಭಕ್ತಿ ಮತ್ತು ಪರಮಪುರುಷಭಕ್ತಿ ಎರಡೂ ಇರುವವನಿಗೇನೇ ಉಪದೇಶಿಸತಕ್ಕದ್ದೆಂದೂ, ಅದು ಇಲ್ಲದವರಿಗೆ ಕೂಡದೆಂದೂ ಹೇಳಿದಂತಾಯಿತು. ಇಂತಹ ಗುರು ಮಹಾತ್ಮೆಯನ್ನು ತಿಳಿಯದ ಅಭಕ್ತನಿಗೆ ಎಂದಿಗೂ ಉಪದೇಶಿಸತಕ್ಕದ್ದಲ್ಲವೆಂದು ಸೂಚಿಸುವದಕ್ಕಾಗಿ **ತ್ವಯಿವಕ್ತರಿಮಯಿಚ ಅಭಕ್ತಾಯ** ಎಂಬ ಸ್ವಾರಸ್ಯವಾದ ವ್ಯಾಖ್ಯಾನವು, ಮೂಲದಲ್ಲಿ **ಕದಾಚನ** ಎಂಬುದರ ತಾತ್ಪರ್ಯವೂ ಇದುವೇ; ಒಂದುವೇಳೆ ತಪೋನಿಷ್ಠನಾಗಿದ್ದರೂ ಕೂಡ ಭಕ್ತನಲ್ಲದಿದ್ದರೆ ಶಿಷ್ಯನಾಗಿ ವರಿಸಲು ಯೋಗ್ಯನಲ್ಲವೆಂದು ತಿಳಿಸುವುದಕ್ಕಾಗಿ **ತಪ್ತತಪಸಾಚ ಅಭಕ್ತಾಯ** ಎಂಬ ಭಾಷ್ಯವು. ಅತಪ್ತನು ಅಯೋಗ್ಯನು; ಒಂದುವೇಳೆ ತಪ್ತನಾಗಿದ್ದರೂ, ಅಭಕ್ತನೂ ಇನ್ನೂ ಅಯೋಗ್ಯನು, ಭಕ್ತನಾಗಿದ್ದರೂ ಅಶ್ರದ್ಧದಾನನು ಇನ್ನೂ ಅಯೋಗ್ಯನು; ಎಲ್ಲರಿಗಿಂತ ಅಯೋಗ್ಯನು ಭಗವತ್ಯಭ್ಯಸೂಯಕನು ಎಂಬುದು ತಾತ್ಪರ್ಯವು; ಆದುದರಿಂದಲೇ ಈ ಅಭ್ಯಸೂಯಕನು ಅತ್ಯನ್ತಾನರ್ಹನೆಂದು ಭಾಷ್ಯವನ್ನು ಬರೆದಿರುತ್ತಾರೆ. ಇಂತಹ ಭಗವದ್ದ್ವೇಷಿಗಳು ಬಹುವಾಗಿ ಹಿಂದೆ **ನರಾಧಮ**ರೆಂದು ನಿಂದಿಸಲ್ಪಟ್ಟು, ಅಂತವರಿಗೆ ಆಸುರಯೋನಿಜನ್ಮವೂ, ಅಧೋಗತಿಯೂ ಹೇಳಲ್ಪಟ್ಟಿವೆ: **"ತಾನಹಂದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರ ಮಾಸುರೀಷ್ವೇವ ಯೋನಿಷು । ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ । ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾಂತ್ಯಧಮಾಂಗತಿಂ"** ( ) ಎಂಬ ಶ್ಲೋಕಗಳನ್ನು ಜ್ಞಾಪಿಸುವೆವು. ಬ್ರಹ್ಮವಿದ್ಯೆಯನ್ನು ಅಯೋಗ್ಯನಿಗೆ ಉಪದೇಶಿಸಕೂಡದೆಂದು ಅನೇಕ ಕಡೆಗಳಲ್ಲಿ ಹೇಳಲ್ಪಟ್ಟಿವೆ. **"ನ ದೇಯ ಮೇತಚ್ಚ ಕಥಾನ್ಯಕಾತ್ಮನೇ ಕಶಾಯ್ಯ**

**ಮೂ. ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮ ॥**

**ಕ್ಲೀಬಾಯ ನ ಜಿಹ್ಮಬುದ್ಧಯೇ । ನ ಪಂಡಿತಜ್ಞಾಯ ವಿರೋಧಶಾಪಿನೇ ದೇಯಂ ತ್ವಯೇದಂ ವಿನಿಬೋಧ** ಯಾದೃಶೇ ಶ್ರದ್ಧಾನ್ವಿತಾಯಾಥ ಗುಣಾನ್ವಿತಾಯ ಪರ ಪ್ರಾದಾದ್ವಿರ**ತಾಯ ನಿತ್ಯಮ್ ।** ವಿಶುದ್ಧಯೋಗಾಯ ಬುಧಾಯ ಚೈವ ಕ್ರಿಯಾವತೇಽಲಂ **ಕ್ಷಮಿಣೇಹಿತಾಯ" ॥ " "ಅಯೋಗ್ಯೇಷು ವದಞ್ಶಾಸ್ತ್ರಂ** ಸನಾತನಾತ್ ಚ್ಯುತೋ **ಭವೇತ್ । ಊಷರೇ ನಿವಪೇದ್ಬೀಜಂ ಷಣ್ಢೇ** ಕನ್ಯಾಂ **ಪ್ರಯೋಜಯೇತ್ ।** ಸೃಜೇದ್ವಾ ವಾನ**ಮಾಲಾಂ ನಾಪಾತ್ರೇ ಶಾಸ್ತ್ರಮುತ್ಸೃಜೇತ್ ॥ "** ಹೀಗೆ ಶಾಸ್ತ್ರೋಪದೇಶವು ನಿರೋಧಿಸಲ್ಪಟ್ಟಿರುತ್ತದೆ. ಆದುದರಿಂದ ಚನ್ನಾಗಿ ಪರೀಕ್ಷಿಸಿ ಉಪದೇಶಿಸತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ- **"ಸಂವತ್ಸರತದರ್ಧಂ ವಾ** ಮಾಸತ್ರಯ ಮಥಾಪಿ ವಾ । **ಪರೀಕ್ಷ್ಯ ವಿವಿಧೋಪಾಯೈಃ ಕೃಪಯಾ ನಿಸ್ಪೃಹೋ ವದೇತ್ ॥ "** (ಶಾಂ ಸ್ಮೃ) ಶಿಷ್ಯನನ್ನು ಪರೀಕ್ಷಿಸಿ ಉಪದೇಶವನ್ನು ಮಾಡತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ. ಈ ಶ್ಲೋಕದ ಎಂತಹ ಶಿಷ್ಯನಿಗೆ ಇಂತಹ ಪರ ವಿದ್ಯೆಯನ್ನು ಉಪದೇಶಿಸತಕ್ಕದ್ದೆಂದರೆ (೧) ಆತನ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನ ಪರನಾಗಿಯೂ (೨) ದೇವರಲ್ಲೂ ಆಚಾರ್ಯನಾದ ತನ್ನಲ್ಲೂ ವಿಶೇಷ ಭಕ್ತಿಯುಕ್ತನಾಗಿಯೂ (೩) ಶುಶ್ರೂಷಾ ಪರನಾಗಿಯೂ (೪) ಅಸೂಯಾರಹಿತನಲ್ಲದೆಯೂ ಇರಬೇಕು. ಇದನ್ನು ಪರೀಕ್ಷಿಸಿ ತಿಳಿದು ಉಪದೇಶಿಸತಕ್ಕದ್ದು. ಬಂದು ಕೇಳಿದ ಒಡನೆಯೇ ಉಪದೇಶಿಸತಕ್ಕದ್ದಲ್ಲವೆಂಬ **ಭಾವವು.**

**ಮೂಲಕ್ಕೆ ಅರ್ಥವು**—ಹಿಂದೆ ಯಾರು ಯಾರಿಗೆ ಉಪದೇಶಿಸಕೂಡದೆಂದು ವಿಧಿಸಿ, ಯಾರಿಗಾದರೆ ಅವಶ್ಯಕವಾಗಿ ಉಪದೇಶಿಸತಕ್ಕದ್ದೆಂಬುದನ್ನು ತಿಳಿಸುತ್ತಾರೆ. ಯಾರಿಗೆ ಮುಖ್ಯವಾಗಿ ಉಪದೇಶಿಸಿದರ ಪರಮಪ್ರೀತಿಯು ತಮಗೆ ಎಂಬುದನ್ನು ಹೇಳುತ್ತಾರೆ.—**ಯಃ—ಸಮಸ್ತ** ಕರ್ತವ್ಯ ಕರ್ಮಗಳನ್ನು ಫಲಕಾಮನೆಯಿಲ್ಲದೆ ನನ್ನಲ್ಲಿ ಸಮರ್ಪಿಸಿ ನನ್ನ ಆರಾಧನರೂಪದಲ್ಲಿ ಅನುಷ್ಠಿಸಿ, ಅಂತಹ ಕರ್ಮಾನುಷ್ಠಾನದಿಂದ ಅನುಗ್ರಹಿತನಾದ ಉಪಾಯುಸಿಸ್ತನು. **ಇದಂ ಪರಮಂ ಗುಹ್ಯಂ** - ಈಗ ನಾನು ಪರಮ ಕೃಪೆಯಿಂದ ನಿನಗೆ ನಿನ್ನ ಮೂಲಕ ಲೋಕ ಹಿತ **ಧರ್ಮ**ವಾಗಿಯೂ ನನ್ನ ಪ್ರಾಪ್ತಿಗೆ ಸಾಧನವಾಗಿರುವ ವಿಶೇಷ ರಹಸ್ಯವಾದ ಶಾಸ್ತ್ರೋಪದೇಶವನ್ನು ಅದು ಯಾವುದೆಂದರೆ ಕರ್ಮಯೋಗದಿಂದ ಅನುಗ್ರಹೀತವಾದ ಭಕ್ತಿಯೋಗವು ಮತ್ತು ಅಶಕ್ತನಾದವನಿಗೆ ಶರಣಾಗತಿ ಶಾಸ್ತ್ರೋಪದೇಶವನ್ನು, **ಮದ್ಭಕ್ತೇಷು** ನನ್ನನ್ನು ಪ್ರೀತ್ಯತಿಶಯ**ದಿಂದ** ಧ್ಯಾನಿಸುವವರಲ್ಲಿ **ಅಭಿಧಾಸ್ಯತಿ** - ಯಥಾವತ್ತಾಗಿ ಉಪದೇಶಿಸುತ್ತಾನೋ, **ಸಃ** ಎಂದು **ಇಟ್ಟು**ಕೊಳ್ಳತಕ್ಕದ್ದು. ಅಂತವನು (**ಮಯಿ** - ಲೋಕಗುರುವಾಗಿ ಎಲ್ಲರಿಗೂ ನಿಶ್ರೇಯಸ ಫಲವನ್ನು ಅನುಗ್ರಹಿಸುವುದಕ್ಕೆ ಯೋಗ್ಯವಾದ ಈ ಬ್ರಹ್ಮ ವಿದ್ಯಾ ಪ್ರದ ನಾಗಿರುವ ನನ್ನಲ್ಲಿ, **ಪರಾಂ ಭಕ್ತಿಂ** - ತೈಲಧಾರೆಯ ಹಾಗೆ ನನ್ನಲ್ಲೇ ಏಕಾಂತ ಮನಸ್ಸನ್ನಿಟ್ಟು ನನ್ನಲ್ಲೇ **ಪ್ರೀತ್ಯತಿಶಯವನ್ನು ಕೃತ್ವಾ** - ಮಾಡಿ ಇದು ಎರಡು **ಉಪಾಯ**ಗಳಾದ ಭಕ್ತಿ ಪ್ರಪತ್ತಿಗಳಿಗೂ **ಅವಶ್ಯಕವು. ಮಾಮೇವೈಷ್ಯತಿ** - ನನ್ನನ್ನೇ ಬಂದು ಸೇರುವನು **ಅಸಂಶಯಃ** - ಇದರಲ್ಲಿ **ಸಂಶಯವಿಲ್ಲವು.**

ಈ ಶ್ಲೋಕದಲ್ಲಿ ಗ್ರಹಿಸತಕ್ಕ ಕೆಲವು ವಿಷಯಗಳು ತ್ವಂ ಎಂದು ಶ್ಲೋಕದಲ್ಲಿಲ್ಲದೆ **ಯಃ** - ಎಂದಿರುವದರಿಂದ ಈ ಉಪದೇಶವೆಲ್ಲ ಅರ್ಜುನನ ನೆಪದಿಂದ **ಸರ್ವಮೋಕ್ಷಾರ್ಥಿ**ಗಳಿಗೂ ಎಂಬುದ ವ್ಯಕ್ತವು. ಭಕ್ತಿ ಎಂದರೆ ಉಪಾಸನೆ ಮತ್ತು ಪ್ರಪತ್ತಿ **ಈ ಎರಡು ಸಾಧ್ಯೋಪಾಯ** ಶಾಸ್ತ್ರಗಳೂ ಪರಮಗುಹ್ಯವಾದವು. ಎರಡಕ್ಕೂ ಪರಮಾತ್ಮನಲ್ಲಿ **ಪರ ಭಕ್ತಿಯು ಅವಶ್ಯಕವು;** ಅದು ಬೆಳೆದು ಪರಜ್ಞಾನ ಪರಮಾ**ಭಕ್ತಿ** ರೂಪವನ್ನು **ಹೊಂದು**

ಮತ್ತು **"ವಿಹಿತತ್ವಾಚ್ಚಾಶ್ರಮಕರ್ಮಾಪಿ"** (ಶಾ. ಸೂ ೩. ೪. ೩೨) ಎಂಬ ಸೂತ್ರಗಳಿಗೂ ವಿರೋಧವು. ಉಪಾಸನವೂ ಮನೋವ್ಯಾಪಾರವಾಗಿ ತನ್ಮೂಲಕವಾಗಿಯೇ ಪರಮಾತ್ಮ ಸಾಕ್ಷಾತ್ಕಾರ ಉಂಟಾಗುವದರಿಂದಲೇ ಶ್ರೀಪರಾಶರರು **"ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ"** ಎಂದು ಹೇಳಿರುವದರಿಂದ ಜ್ಞಾನಪ್ರಾಪ್ತಿಯು ಇಲ್ಲಿ ಕರ್ಮ ಸಹಾಯ ವಿಲ್ಲದೇ ಇಲ್ಲವು ಎಂಬುದು ಸಿದ್ಧವು. ಆದುದರಿಂದ ಇಲ್ಲಿಯೂ **"ಪರಮಾಂ ಭಕ್ತಿಂಕೃತ್ವಾ"** ಎಂಬ ಪ್ರಯೋಗವು, ಇದು ಅನಂತರ ಪರಮಾತ್ಮಸಾಕ್ಷಾತ್ಕಾರ ರೂಪವಾಗಿ ಜ್ಞಾನರೂಪ ವಾದುದು. ಜ್ಞಾನಕ್ಕೆ ಕರ್ಮವು ಅಂಗವು.

**ಭಾಷ್ಯಾರ್ಥವು** :—ಹಿಂದಿನ ಶ್ಲೋಕದಲ್ಲಿ ಈ ಗೀತಾಶಾಸ್ತ್ರಕ್ಕೆ ಅನಧಿಕಾರಿಗಳನ್ನು ತಿಳಿಸಿ, ಈ ಶ್ಲೋಕದಲ್ಲಿ ಸತ್ಪಾತ್ರರಾದ ಅಧಿಕಾರಿಗಳಿಗೆ ಅವಶ್ಯಕವಾಗಿ ತಿಳಿಸಬೇಕಾದ ಇತಿಕರ್ತವ್ಯ ತೆಯು ಬ್ರಹ್ಮವಿದ್ಯಾನಿಷ್ಠನಿಗೆ ಉಂಟೆಂದೂ, ಅಂತಹ ಉಪದೇಶಕನಿಗೆ ಉಪಾಯ ನಿಷ್ಪತ್ತಿ, ಮೋಕ್ಷಪ್ರಾಪ್ತಿಗಳು ಉಂಟಾಗುತ್ತವೆ ಎಂದು ಹೇಳುತ್ತಾರೆ :—ಅನಧಿಕಾರಿಗಳಿಗೆ ಉಪದೇಶವೂ ಅಧಿಕಾರಿಗಳ ಪ್ರಾರ್ಥನೆಯಲ್ಲಿ ಉಪದೇಶಿಸದೇ ಇರೋಣವೂ ಎರಡೂ ಯದ್ಯಪಿ ದೋಷಾವಹ ಗಳಾದರೂ, ಅನಧಿಕಾರಿಗಳಿಗೆ ಉಪದೇಶವು ಇನ್ನೊಂದಕ್ಕಿಂತ ಅತ್ಯಂತದೋಷಾವಹವೆಂಬ ಭಾವನೆಯಿಂದ ಮೊದಲು ಹಿಂದೆ ಹೇಳಿ, ಅನಂತರ ಈ ಶ್ಲೋಕದ ಮೂಲಕ ತನ್ನ ಭಕ್ತನಿಗೆ ಆವಶ್ಯಕವಾಗಿ ಹೇಳತಕ್ಕದ್ದೆಂದು ತಿಳಿಸಿ, ಅದರಿಂದುಂಟಾಗುವ ಫಲವನ್ನು ಹೇಳುತ್ತಾರೆ.— **ಇದಂ**-ಈಗ ನಿನಗೆ ಕೃಪಯಾ ಉಪದೇಶಿಸಿದ ಮೋಕ್ಷಪ್ರಾಪ್ತಿಗೆ ಸಾಧನವಾದ ಕರ್ಮಯೋಗದಿಂದ ಲಾಗಲಿ ಕರ್ಮಯೋಗಜ್ಞಾನಯೋಗಗಳಿಂದಲಾಗಲಿ ಸಾಧಿಸಲ್ಪಟ್ಟ ಭಕ್ತಿಯೋಗೋಪಾಯವಾದ, **ಪರಮಂ ಗುಹ್ಯಂ** ಸರ್ವೋತ್ಕೃಷ್ಟವಾದ ಬ್ರಹ್ಮವಿದ್ಯೆಯನ್ನು, **ಮದ್ಭಕ್ತೇಷು**-ನನ್ನ ಭಕ್ತರು ಗಳಲ್ಲಿ **ಯಃ**-ಯಾವ ಬ್ರಹ್ಮವಿತ್ತಾದವನು, **ಅಭಿಧಾಸ್ಯತಿ** ಎಂದರೆ **ವ್ಯಾಖ್ಯಾಸ್ಯತಿ**-ಚನ್ನಾಗಿ ತಿಳಿಯುವಹಾಗೆ ಉಪದೇಶಿಸುತ್ತಾನೋ, **ಸಃ**-ಅಂತಹ ಉಪದೇಶಕನು, **ಮಯಿ**-ಅಂತಹ ಸತ್ಕಾರ್ಯದಿಂದ ಪ್ರೀತನಾದ ನನ್ನಲ್ಲಿ, **ಪರಮಾಂ ಭಕ್ತಿಂ ಕೃತ್ವಾ**-ನಿರತಿಶಯವಾದ ನನ್ನ ಸಾಕ್ಷಾ ತ್ಕಾರರೂಪೋಪಾಸನೆಯನ್ನು ಮಾಡಿ ಅಥವಾ ನನ್ನಲ್ಲಿ ನಿರತಿಶಯ ಪ್ರೀತಿಯಿಂದ ಶರಣಾಗತಿ ಯನ್ನುಮಾಡಿ, ಒಟ್ಟಿನಲ್ಲಿ ಯೋಗನಿಷ್ಪತ್ತಿಯನ್ನು ಹೊಂದಿ, **ಮಾಮೇವೈಷ್ಯತಿ**-ನನ್ನ ಅನುಗ್ರಹ ದಿಂದ ಬಂದು ನನ್ನನ್ನೇ ಪ್ರಾಪ್ಯವಾಗಿ ಹೊಂದುವನು. **ನತತ್ರಸಂಶಯಃ**:—ಆ ಸಂದರ್ಭದಲ್ಲಿ ಸಂಶಯವೇ ಇಲ್ಲವು. ಇಲ್ಲಿ **ಮದ್ಭಕ್ತೇಷು** ಎಂದು ಹೇಳಿರುವದರಿಂದ ಇವರಿಗೆ ಹಿಂದೆ ಹೇಳಲ್ಪಟ್ಟ ಅತಪಸ್ಕತ್ವ ಅಶ್ರದ್ಧದಾನತ್ವ, ಭಗವದಭ್ಯಸೂಯುತ್ವಗಳು ಇಲ್ಲವೆಂದು ಹೇಳಿದಂ ತಾಯಿತು. ಇಂತಹ ಯೋಗ್ಯಾಧಿಕಾರಿಯು ದೊರೆತರೆ ಅಂತವನಿಗೆ ಉಪದೇಶಿಸುವದು ಉತ್ತರ ಕೃತ್ಯವಾಗಿ ಬ್ರಹ್ಮವಿತ್ತಿಗೆ ಆಜ್ಞಾನುಜ್ಞಾಕೈಂಕರ್ಯಗಳಲ್ಲೇ ಸೇರಿತೆಂದು ಭಾವಿಸತಕ್ಕದ್ದು. ಅಂತಹ ಶಿಷ್ಯನು ಬಂದು ಪ್ರಾರ್ಥಿಸಿದರೂ ಉಪದೇಶಿಸದೇ ಹೋದರೆ ವಿದ್ಯಾಚೋರನೆಂದೂ ಗುರುದ್ರೋಹಿ ಎಂದೂ ನಿಂದೆಗೆ ಗುರಿಯಾಗುವನು ಹಾಗೆ ಸತ್ಪಾತ್ರನಲ್ಲಿ ಉಪದೇಶಿಸತಕ್ಕ ದ್ದೆಂದು ಆಜ್ಞಾಪಿಸಲ್ಪಟ್ಟಿರುವದರಿಂದ ಆಜ್ಞಾಕೈಂಕರ್ಯವೆಂದು ಹೇಳಲು ಏನೊಂದೂ ನ್ಯೂನತೆ ಯಿಲ್ಲವು. ಒಂದುವೇಳೆ ಆಚಾರ್ಯರು ಶಿಷ್ಯನಿಗೆ ಆಜ್ಞಾಪಿಸದೇ ಇದ್ದರೂ, ಹೀಗೆ ಸತ್ಪಾತ್ರದಲ್ಲಿ ವಿದ್ಯಾದಾನವನ್ನು ಶಾಸ್ತ್ರೋಕ್ತರೀತಿಯಲ್ಲಿ ಮಾಡುವದರಿಂದ ಅದು ಅನುಜ್ಞಾಕೈಂಕರ್ಯವಾಗು ತ್ತದೆ. ಇಲ್ಲಿ **ಭಕ್ತೇಷು**-ಎಂದಿರುವದರಿಂದ ಚತುರ್ವಿಧ ಭಕ್ತರಿಗೂ ಹೇಳಬಹುದೆಂಬ ಅನು ಜ್ಞೆಯೂ ದೊರೆಯಿತು. ಆರ್ತನೂ ಅರ್ಥಾರ್ಥಿಯೂ ಆದ ಭಕ್ತರುಗಳು ಈ ಬ್ರಹ್ಮವಿದ್ಯೆಯನ್ನು ಕೇಳುವದರಿಂದ, ಅಶಾಶ್ವತ ಪ್ರಾರ್ಥನೆಯನ್ನು ತ್ಯಜಿಸಿ ಉಪಾಸನೆಯನ್ನು ಕೈಕೊಂಡು ಮುಕ್ತ ರಾಗಬಹುದು.

ಆದರೆ ತ್ರಿವರ್ಣದವರು ಅಲ್ಲದೇ ಇರುವ ಇತರರಿಗೆ ಈ ಗೀತಾಶಾಸ್ತ್ರವನ್ನು ಉಪದೇಶಿಸ ಬಹುದೋ ? ಎಂಬ ವಿಷಯದಲ್ಲಿ **" ಶ್ರಾವಯೇಚ್ಚತುರೋ ವರ್ಣಾನ್ ಕೃತ್ವಾ ಬ್ರಾಹ್ಮಣ ಮಗ್ರತಃ"** (ಭಾರ. ಮೋ ೩೩೫.೪೮) ಒಬ್ಬ ಬ್ರಾಹ್ಮಣ, ಕ್ಷತ್ರಿಯ, ವೈಶ್ಯನನ್ನು ಉದ್ದೇಶಿಸಿ ನಾಲ್ಕುವರ್ಣದವರಿಗೂ ಉಪದೇಶಿಸಬಹುದೆಂಬ ಅನುಮತಿಯುಂಟು. ಆದುದರಿಂದ ವಿದುರರೇ ನಿಂತು, ಕ್ಷತ್ರಿಯನಾದ ಧೃತರಾಷ್ಟ್ರನಿಗೆ ಸನತ್ಸುಜಾತರಿಂದ ಉಪದೇಶದೊರೆಯುವಹಾಗೆ ಮಾಡಿ ದರು, **ಶ್ರಾವಯೇತ್** ಎಂದಿಷ್ಟುಮಾತ್ರವಿರುವದರಿಂದ ಉಪದೇಶ ಮೂಲಕ ಕೇಳಲು ಮಾತ್ರವೇ ಅವರಿಗೆ ಅಧಿಕಾರವು. ಪರಾಶರ ವ್ಯಾಸ ಶುಕಶೌನಕಾದಿಗಳು ಪರಮೋದಾರರು. ಎಲ್ಲರೂ ಮೋಕ್ಷವನ್ನು ಹೊಂದಲಿ ಎಂಬ ಉದಾರಾಶಯದಿಂದ ಪುರಾಣ ಇತಿಹಾಸಗಳನ್ನು ಬರೆದು ಎಲ್ಲರೂ ಅದನ್ನು ಶ್ರವಣಮಾಡಿ, ಲಘೂಪಾಯುವನ್ನು, ಗೀತೆಯಲ್ಲೂ ಹೇಳಿರುವ ಹಾಗೆ, ಅನುಷ್ಠಿಸಬಹುದೆಂದು ತಿಳಿಸಿರುತ್ತಾರೆ ಈ ಗೀತೆಯಲ್ಲಿ ಹೇಳಿರುವದೂ ಹಾಗೆಯೇ. ಗುರೂ ಪಾಯವಾದ ಉಪಾಸನೆಯು ತ್ರಿವರ್ಣದವರಿಗೆ ಮಾತ್ರವೇ ಲಘೂಪಾಯವಾದ ಪ್ರಪತ್ತಿಯು ಅಶಕ್ತರಿಗೂ ಶೂದ್ರಾದಿಗಳಿಗೆಂದು ತುಂಬಾ ಕನಿಕರದಿಂದ ವಿಧಿಸಲ್ಪಟ್ಟಿರುತ್ತದೆ. ಈ ಸುಲಭ ಧರ್ಮವೂಸಹ ಇಲ್ಲಿ ಹೇಳಲ್ಪಟ್ಟಿರುವದರಿಂದ ಇದನ್ನು ಆತನಿಗೆ ಉಪದೇಶಿಸಬಹುದು. (೧೮-೬೬) ಮಹಾಭಾಗವತ ಸಂಶ್ರಯಣವು ನಾಲ್ಕುವರ್ಣದವರಿಗೂ ಆವಶ್ಯಕವೆಂದು **" ಉಪದೇಕ್ಷ್ಯ ನ್ತಿತೇ ಜ್ಞಾನಂ ಜ್ಞಾನಿನಸ್ತತ್ವದರ್ಶಿನಃ "** ಎಂಬಲ್ಲಿ ಹೇಳಲ್ಪಟ್ಟಿರುವದರಿಂದ, ಭಾಗವತ ಸಂಶ್ರ ಯಣವೇ ನಾಲ್ಕನೆಯವರ್ಣದವನಿಗೆ ಮೋಕ್ಷದಾಯಕವು ; ಹೀನವರ್ಣದವಳಾದ ಶಬರಿಯು ಶ್ರೀರಾಮನಲ್ಲಿ, ತಾನು ತನ್ನ ಗುರುವಾದ ಮತಂಗ ಮಹರ್ಷಿಯ ಶುಶ್ರೂಷಾತತ್ಪರಳೆಂದು **"ಮು ನೀನಾ ಮಾತ್ರಮೇ ಯೇಷಾ ಮಹಂ ಚ ಪರಿಚಾರಿಣೀ"** ಎಂದು ಹೇಳಿಕೊಂಡು, **ತೇಷಾ ಮಿಚ್ಛಾಮ್ಯ ಹಂ ಗಂತುಂ ಸಮೀಪಂ ಭಾವಿತಾತ್ಮನಃ**-ಅಂತಹ ಗುರುವಿರುವ ದಿವ್ಯವೈಕುಂಠ ವನ್ನು ಕುರಿತು ಹೋಗಬೇಕೆಂದು ಪ್ರಾರ್ಥಿಸಿರುತ್ತಾಳೆ. (ರಾಮಾ. ಅರ. ೭೪.೨೯) ಇದರಿಂದ ಈ ಗ್ರನ್ಥದ ಸಾಕ್ಷಾದುಪದೇಶವೂ ಅನುಷ್ಠಾನವೂ ಬ್ರಹ್ಮವಿದ್ಯಾಧಿಕಾರಿಗೆ ಮಾತ್ರವೇವಿನಾ ಇತರ ರಿಗೆ ಕೂಡದೆಂಬುದು ಸೂಚಿತವು. ಸ್ತ್ರೀಯರೂ ಮತ್ತು ಕೀಳುವರ್ಣದವರೂ ಬ್ರಾಹ್ಮಣಾದಿಗಳನ್ನು ಕುರಿತು ಉಪದೇಶಿಸುವಾಗ ಕೇಳಬಹುದೆಂದು ಅನುಮತಿಯನ್ನೂ ಕೊಟ್ಟಹಾಗಾಯಿತು. **ಅಭಿ ಧಾಸ್ಯತಿ** ಎಂದಿರುವದರಿಂದ ಮೇಲೆ ವ್ಯಾಸಾದಿಗಳು ಒಪ್ಪಿರುವಹಾಗೆ ವ್ಯತ್ಯಾಸದಿಂದ ಬ್ರಾಹ್ಮಣಾದಿ ಗಳೂ ಸ್ತ್ರೀ ಶೂದ್ರರೂ ಉಪದೇಶ್ಯರೆಂದು ಭಾವಿಸಬಹುದು ಆದುದರಿಂದಲೇ ಶ್ರೀ ಯತಿವರ್ಯರು **ಅಭಿಧಾಸ್ಯತಿ** ಎಂಬುದಕ್ಕೆ **ವ್ಯಾಖ್ಯಾಸ್ಯತಿ** ಎಂಬ ವ್ಯಾಖ್ಯಾನವು. ಇದರಿಂದ ಸಾಕ್ಷಾದುಪದೇಶಕ್ಕೆ ಅಧಿಕಾರವಿಲ್ಲದವರಿಗೆ, ಇದರ ಅರ್ಥವನ್ನು ಬ್ರಾಹ್ಮಣಾದಿಗಳಿಗೆ ಉಪದೇಶಮಾಡುವ ಸಂದರ್ಭ ದಲ್ಲಿ, ಇದ್ದು ಕೇಳಲು ಅನುಮತಿಯನ್ನು ಕೊಟ್ಟರುತ್ತದೆ. ಆ ಸಂದರ್ಭದಲ್ಲಿ **ಪರಮಾಂಭಕ್ತಿಂ** ಎಂಬುದಕ್ಕೆ ಉಪಾಸನದ ಮೂಲಕ ಪರಮಾತ್ಮಸಾಕ್ಷಾತ್ಕಾರವೆಂಬ ಅಧಿಕಾರಿಗಳ ವಿಷಯದಲ್ಲಿ ಹೇಳುವ ಅರ್ಥವನ್ನು ಹೇಳಲು ಸಾಧ್ಯವಲ್ಲವು ; ಪರಮಾತ್ಮನಲ್ಲಿ ಆಗ ವಿಶೇಷ ಭಕ್ತಿಯುಳ್ಳವ ನಾಗಿ ತನಗೆ ಅರ್ಹವಾದ ಉಪಾಯವಾದ ಭಾಗವತ ಸಂಶ್ರಯಣ ಮೂಲಕ ಅವರು ಮಾಡುವ ಶರಣಾಗತಿಯಮೂಲಕ ಪರಮಾತ್ಮನನ್ನು ಹೊಂದುವನೆಂಬ ಅರ್ಥವು ಇದರಿಂದ ಕೆಲವರು ಬ್ರಾಹ್ಮಣಪಕ್ಷಪಾತಿಗಳಾಗಿ ಬ್ರಾಹ್ಮಣನಿಗೆ ಮಾತ್ರವೇ ಮೋಕ್ಷವು ಇತರರಿಗಿಲ್ಲವೆಂಬ, ಮತ್ತು ಮೂರು ವರ್ಣದವರಿಗೆ ಮಾತ್ರವೇ ಮೋಕ್ಷವು ಇತರರಿಗಿಲ್ಲವೆಂಬ. ಉಪಾಸನಾಧಿಕಾರಿಗಳಿಗೆ ಉಪಾಸನದಿಂದ ಮಾತ್ರವೇ ಮೋಕ್ಷವು, ಉಪಾಸನೆಗೆ ಅನಧಿಕಾರಿಗಳಾದವರಿಗೆ ಮೋಕ್ಷವೇ ಇಲ್ಲ ವೆಂಬ ಇತ್ಯಾದಿ ಅಭಿಪ್ರಾಯಗಳೆಲ್ಲಾ ನಿರಸ್ತವು ; ಏಕೆಂದರೆ ಶ್ರುತಿಯು **" ಸರ್ವಸ್ಯ ಶರಣಂ**

**ಸುಹೃತ್** " ಎಂದೂ ಇದನ್ನನುಸರಿಸಿಯೇ " **ಸಕೃದೇವಪ್ರಪನ್ನಾಯ ತವಾಸ್ಮೀತಿ ಚ ಯಾಚತೇ। ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ**" ಎಂದು ಹೇಳಿರುವ ಇತಿಹಾಸ ವಾಕ್ಯಕ್ಕೂ, ಹಾಗೆಯೇ ಇನ್ನೂ ಅನೇಕ ಪ್ರಮಾಣಗಳಿಗೂ ಈ ಅಭಿಪ್ರಾಯಗಳು ವಿರುದ್ಧವು ಶ್ರೀ ಯತಿವರ್ಯರು **ಸಃ** ಎಂದು ಮೂಲದಲ್ಲಿಲ್ಲದ ಪದವನ್ನು ಹೇಗೆ ಅಧ್ಯಾಹಾರಮಾಡಿಕೊಂಡು ಹೇಳಿದರೆಂದು ಆಕ್ಷೇಪಿಸಿದರೆ, **ಯಃ** ಎಂಬ ಮೂಲದ ಪದವೇ, **ಸಃ** ಎಂಬ ತಚ್ಛಬ್ದವನ್ನು ಅಪೇಕ್ಷಿಸುವದರಿಂದ ಹಾಗೆ ವ್ಯಾಖ್ಯಾನವು. ಮೂಲದಲ್ಲಿ **ಭಕ್ತಿಂ ಮಯಿ ಪರಾಂಕೃತ್ವಾ** ಎಂದು ಇರುವದಕ್ಕೆ, ಶ್ರೀ ಯತಿವರ್ಯರು **ಮಯಿ ಪರಮಾಂ ಭಕ್ತಿಂ ಕೃತ್ವಾ** ಎಂಬ ವ್ಯಾಖ್ಯಾನವು ಹೇಗೆ? ಎಂದೂ ಆಕ್ಷೇಪಿಸಬಹುದು ; ಪರಭಕ್ತಿಶಬ್ದವು ಸಾಧಾರಣವಾಗಿ ಭಕ್ತಿಯೋಗವಾದ ಉಪಾಸನೆಯನ್ನೇ ಬೋಧಿಸುತ್ತದೆ ; "**ಇಪ್ಪಡಿ ಮೋಕ್ಷೋಪಾಯಮಾಗ ವಿಧಿತ್ತ ಭಕ್ತಿಯೋಗಂ ಪರಭಕ್ತಿ ಎನ್ರು ಪೇಶಪಟ್ಟದು** " ಎಂದರೆ ಹೀಗೆ ಮೋಕ್ಷೋಪಾಯವಾಗಿ ಶಾಸ್ತ್ರಗಳಲ್ಲಿ ವಿಧಿಸಿರುವ ಭಕ್ತಿಯೋಗವು ಪರಭಕ್ತಿ ಎಂದು ಹೇಳಲ್ಪಟ್ಟಿತು ಎಂದು ಶ್ರೀ ನಿಗಮಾನ್ತದೇಶಿಕರವರು ಹೇಳಿರುತ್ತಾರೆ. (ಉಪಾಯವಿಭಾಗಾಧಿಕಾರ ರಹಸ್ಯತ್ರಯ) ಶ್ರೀಭಾಷ್ಯಕಾರರೂ ಪ್ರಥಮ ಸೂತ್ರದ ಲಘುಸಿದ್ಧಾನ್ತದಲ್ಲೂ, ವೇದನ, ಉಪಾಸನ, ಧ್ರುವಾನುಸ್ಮೃತಿ ಶಬ್ದಗಳು ಪರ್ಯಾಯ ಪದಗಳೆಂದೂ, " **ಧ್ರುವಾನುಸ್ಮೃತಿ ರೇವ ಭಕ್ತಿ ಶಬ್ದೇನಾಭಿಧೀಯತೇ** " ಎಂದು ಹಾಗೆಯೇ ಹೇಳಿರುತ್ತಾರೆ ಇದರ ಅಭ್ಯಾಸದಿಂದ ಭಕ್ತಿಯೋಗ ನಿಷ್ಪತ್ತಿಯ ಮೂಲಕ ಪರಮಾತ್ಮಸಾಕ್ಷಾತ್ಕಾರ ಉಂಟಾಗುವ ದೆಶೆಯೀಗ ಪರಜ್ಞಾನವೆಂದು ಹೇಳಲ್ಪಟ್ಟು, ಪರಮಾತ್ಮನನ್ನು ಹೋಗಿ ಸೇರಬೇಕೆಂಬ ತೀವ್ರಾಪೇಕ್ಷೆಯ ದೆಶೆಯು **ಪರಮಭಕ್ತಿಯು ;**" ಹೀಗಿರುವಾಗ ಪರಭಕ್ತಿಯು ಪರಮ ಭಕ್ತಿಯನ್ನುಂಟುಮಾಡಿ ಮೋಕ್ಷಹೇತುವಾಗುವದರಿಂದ ಹಾಗೆ ವ್ಯಾಖ್ಯಾನವು. **ಭಕ್ತಿಯೋಗ** ಅಧಿಕಾರಿಯನ್ನು ಕುರಿತು ಅನ್ವಯಿಸುವಾಗ ಮೇಲೆ ಉಪಪಾದಿಸಿದರೀತಿಯಲ್ಲಿ ಅರ್ಥವು. ಅನಧಿಕಾರಿಯಾಗಿರುವವನಿಗೂ ಅನ್ವಯಿಸುವದಕ್ಕಾಗಿ **ಪರಮಾಂ ಭಕ್ತಿಂ** ಎಂಬ ವ್ಯಾಖ್ಯಾನವು ಆಗ ಉಪಾಸನವು ಪರಮಾತ್ಮನಲ್ಲಿ ಸರ್ವೋತ್ಕೃಷ್ಟ ಭಕ್ತಿಯನ್ನುಂಟುಮಾಡುವದಾಗಿ ಅಂತವನೂ ನನ್ನನ್ನೇ ಹೊಂದುವನು ಎಂಬ ತಾತ್ಪರ್ಯವು. ಗೀತಾಶಾಸ್ತ್ರವು ಮೂರುವರ್ಣದವರಿಗೆಮಾತ್ರವೇ ಉದ್ದಿಶ್ಯವಾದ ಗ್ರಂಥವಾಗಿರುವಾಗ ಕಷ್ಟಪಟ್ಟು ಭಕ್ತಿಯೋಗಕ್ಕೆ ಅನಧಿಕಾರಿಗಳ ವಿಷಯವು ಏಕೆ? ಎಂದರೆ ಪ್ರಶ್ನೆಯು ಗೀತಾಶಾಸ್ತ್ರವನ್ನು ವಿಮರ್ಶಿಸಿ ತಿಳಿಯುವವರ ಮಾತಾಗುತ್ತದೆ "**ಸ್ತ್ರಿಯೋವೈಶ್ಯಾಃ ತಥಾ ಶೂದ್ರಾಃ ತೇಪಿಯಾನ್ತಿ ಪರಾಂಗತಿಮ್**" ಎಂಬ ಕೃಪಾಸಾಗರನ ಮಹಿಮೆಯನ್ನು ಮರೆತು ಹೇಳುವ ವಾದವಾಗುತ್ತದೆ ಅಂತಹ ವಾದಮಾಡುವವರು ಗೀತಾ ಚರಮಶ್ಲೋಕದ ಸ್ವಾರಸ್ಯವನ್ನುಗ್ರಹಿಸಲೇ ಇಲ್ಲವೆಂಬುದು ವ್ಯಕ್ತವು. ಶರಣಾಗತಿಯೇ ಆದಿಯಲ್ಲೇ "**ಶಾಧಿಮಾಂ ತ್ವಾಂ ಪ್ರಪನ್ನಮ್**" ಎಂದೂ, "**ನಪ್ರಪದ್ಯಂತೇ ನರಾಧಮಾಃ**" ಮತ್ತು **ಮಾ ಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿ ತೇ**" ಎಂದೂ **ಮತ್ತು** ಗ್ರಂಥಾಂತ್ಯದಲ್ಲೂ ಹೇಳಲು ಕಾರಣವೇನೆಂದು ಕೇಳುವೆವು. **ಮಾಮೇವೈಷ್ಯಸಿ** ಎಂಬಲ್ಲಿರುವ ಏವಕಾರದಿಂದ ನನ್ನ ಗೀತಾವ್ಯಾಖ್ಯಾನಮಾಡಿ ಉಪದೇಶಿಸುವವರಿಗೆ ನನ್ನ ಪ್ರಾಪ್ತಿಗಿಂತ ಭಿನ್ನವಾದ ಕ್ಷುದ್ರಫಲಗಳಲ್ಲಿ ಆಶೆಯುಂಟಾಗದಹಾಗೆ ಮಾಡುತ್ತೇನೆಂಬ ಅಭಿಪ್ರಾಯವು **ತೋರಿಬರುತ್ತದೆ.** ಅಂತವರು ನನ್ನ ಸಾಯುಜ್ಯವನ್ನೇ ಹೊಂದುವರೆಂಬ ಭಾವವು. **ನ ತತ್ರ ಸಂಶಯಃ** ಎಂಬದಾಗಿ ಮೂಲದ **ಅಸಂಶಯಃ** ಎಂಬುದಕ್ಕೆ ವ್ಯಾಖ್ಯಾನವಾಗಿ ಬರೆದಿರುವದರಿಂದ ಆ ಸಂದರ್ಭದಲ್ಲಿ ಸಂಶಯವೇ ಇಲ್ಲವೆಂಬ ಅರ್ಥವು ತೋರಿಬರುತ್ತದೆ.

**ಮೂ. ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥೬೯॥**

**ಮೂಲಕ್ಕೆ ಅರ್ಥವು:**—ಮೊದಲು ಅನಧಿಕಾರಿಗೆ ಹೇಳತಕ್ಕದ್ದೇ ಅಲ್ಲವು; ಹಾಗೆ ಹೇಳಿದುದಾದರೆ ತನ್ನ ನಿಗ್ರಹಕ್ಕೆ ಪಾತ್ರನಾಗುವನೆಂದು ಹೇಳಿದರು. ಅನಂತರ ಅಧಿಕಾರಿಗೆ ಹೇಳಿದುದಾದರೆ ತನ್ನ ಅನುಗ್ರಹಕ್ಕೆ ಪಾತ್ರನಾಗಿ ಅದರಿಂದ ಉಪಾಯಾನುಷ್ಠಾನವು ಲಭಿಸಿ, ನನ್ನನ್ನೇ ಬಂದು ಸೇರುವನೆಂದು ಹೇಳಿದರು ಇಂತಹ ಸತ್ಪಾತ್ರನಾದ ಭಕ್ತನನ್ನು ಹುಡುಕಿ, ತಮ್ಮ ಮತ್ತು ಅರ್ಜುನ ಸಂವಾದ ರೂಪವಾಗಿ ತತ್ವಹಿತ ಪುರುಷಾರ್ಥಗಳನ್ನು ಒಳಗೊಂಡಿರುವ ಈ ಶಾಸ್ತ್ರವನ್ನು ಯಾವ ಮಹನೀಯನು ಉಪದೇಶಿಸುವನೋ ಅಂತವನು ತಮಗೆ ಅತ್ಯರ್ಥ ಪ್ರಿಯನಾಗುವನೆಂದೂ, ಅಂತವನಿಗಿಂತ ಹೆಚ್ಚಾದ ಪ್ರಿಯನು ಈ ಲೋಕದಲ್ಲಿ ಯಾರೂ ದೊರಕುವದಿಲ್ಲವೆಂದೂ ಹೇಳುತ್ತಾರೆ ಈ ಗೀತಾಶಾಸ್ತ್ರವು ಸರ್ವೋತ್ಕೃಷ್ಟವಾದುದು ಹೀಗಿರುವಾಗ ಯಾರಾದರೂ ಬಂದರೆ ಸಾಕು; ಉಪದೇಶಿಸೋಣ ಎಂಬ ಭಾವನೆ ಇರಬೇಕಲ್ಲವೇ? ಅಥವಾ ಇಂತಹ ಗುಣ ಪೂರ್ತಿಯುಳ್ಳ ಶಿಷ್ಯನಿಗೆ ಉಪದೇಶಿಸು ಎಂದು ಅಧಿಕಾರಿಯ ವಿಷಯವಾಗಿ ಹೇಳಿದರೆ, ತದ್ವ್ಯಾವೃತ್ತಿಯಿಂದ ಅನಧಿಕಾರಿಯನ್ನು ಹೇಳಿದಂತಾಗುತ್ತಿತ್ತು. ಹಾಗಲ್ಲದೆ ಅನಧಿಕಾರಿ ಯಾರು ಎಂದು ಮೊದಲು ನಿಷೇಧಿಸಿ ಹೇಳಿದುದು ಹೇಗೆ ನ್ಯಾಯವು? ಎಂದರೆ, ಅಂತವನು ಶಾಸ್ತ್ರಪಙ್ಕ್ತಿಗಳಿಗೆ ಅಪಾರ್ಥವನ್ನು ಮಾಡಿ ಲೋಕದ ಜನರು ಶಾಸ್ತ್ರೋಲ್ಲಂಘನ ಮಾಡುವಹಾಗೆ ನಡೆಸಿ ಲೋಕಕಂಟಕನಾಗುವನು. ಆದುದರಿಂದ **ಸರ್ವಾತ್ಮನಾ**-ಅಂತವರಿಗೆ ಉಪದೇಶ ಕೂಡದೆಂದು ಪ್ರಥಮತಃ ತಿಳಿಸಿದರು. ಅಲ್ಲಿ **"ಕದಾಚನ"** ಎಂಬ ಪ್ರಯೋಗದಿಂದ ಈ ಭಾವವು ತೋರಿಬರುತ್ತದೆ.

**ಮನುಷ್ಯೇಷು**-ಮನುಷ್ಯರಲ್ಲಿ, **ತಸ್ಮಾತ್**-ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಈ ನಮ್ಮಿಬ್ಬರ ಸಂವಾದರೂಪದಲ್ಲಿರುವ ಗೀತಾಶಾಸ್ತ್ರೋಪದೇಶಕನಿಗಿಂತಲೂ, **ಮೇ**-ಈ ಗೀತಾಶಾಸ್ತ್ರವು ಪ್ರಾಚುರ್ಯವನ್ನು ಹೊಂದಿ ಅನೇಕ ಭಕ್ತರು ನನ್ನನ್ನು ಬಂದು ಸೇರುವರೇ ಎಂದು ಅವಸರ ಪ್ರತೀಕ್ಷೆಯಲ್ಲಿರುವ ನನಗೆ, **ಪ್ರಿಯಕೃತ್ತಮಃ**-ಸರ್ವೋತ್ಕೃಷ್ಟವಾದ ಕೈಂಕರ್ಯವನ್ನು ಎಸಗಿದವನು, **ಕಶ್ಚಿತ್**-ಯಾವನೊಬ್ಬ ಭಕ್ತನೂ. **ನಚ**-ಇಲ್ಲವಷ್ಟೇ; ಹಾಗೆಯೇ, **ಭುವಿ**-ಈ ಲೋಕದಲ್ಲಿ, **ತಸ್ಮಾತ್**-ಅಂತಹ ಭಗವದ್ಗೀತೋಪದೇಶಕನಿಗಿಂತ, **ಮೇ**-ನನಗೆ **ಪ್ರಿಯತರಂ** - ಪ್ರಿಯತರನಾದವನು **ಅನ್ಯಃ** - ಬೇರೆ ಯಾವನೊಬ್ಬನೂ, **ನ ಚ ಭವಿತಾ**-ಮುಂದಕ್ಕೂ ಯಾರೂ ಆಗುವದಿಲ್ಲವು; ಎಂದರೆ ಈಗ ನಾನು ಅರ್ಜುನನಿಗೆ ಉಪದೇಶಿಸಿದ ಗುಹ್ಯತಮವಾಗಿ, ದಿವ್ಯ ವೈಕುಂಠಪ್ರಾಪ್ತಿಗೆ ಹೇತುಭೂತವಾದ ಶಾಸ್ತ್ರಾರ್ಥವನ್ನು ಯಥಾರ್ಥವಾಗಿಯೂ ಸರ್ವಸಮಂಜಸವಾಗಿಯೂ ತಿಳಿದು ಸತ್ಪಾತ್ರನಾದ ಅಧಿಕಾರಿಯನ್ನು ಹುಡುಕಿ ಆತನಲ್ಲಿ ವಿನಿಯೋಗಿಸುವನೋ, ಅಂತವನಿಗಿಂತ ಹೆಚ್ಚು ಪ್ರೀತಿಕರವಾದ ಕೈಙ್ಕರ್ಯವನ್ನು ಮಾಡುವವನು ಹಿಂದೆಯೂ ಇಲ್ಲವು, ಮುಂದಕ್ಕೂ ಇಲ್ಲವೆಂಬ ತಾತ್ಪರ್ಯವು ಇಂತಹ ಉಪದೇಶಕನಿಗಿಂತ ಪ್ರಿಯತರನು ಮುಂದೆಯೂ ದೊರೆಯುವುದಿಲ್ಲವು, ಹಿಂದೆಯೂ ಈಗಲೂ ಇರುವವರಲ್ಲಿ ಈತನಿಗಿಂತ ಪ್ರಿಯಕೃತ್ತಮರು ಯಾರೂ ಇಲ್ಲವು. ದಾಸನಿಗೆ ದಾಸನಗುರುಗಳಾದ ಪರಿವ್ರಾಜಕವರ್ಯರಾದ ಶ್ರೀನಿವಾಸಮಹಾದೇಶಿಕರವರಿಂದ ಈ ಗ್ರಂಥದ ಉಪದೇಶವು ಸುಕೃತವಿಶೇಷದಿಂದ ಲಭಿಸಿತು. ಯಾರೊಬ್ಬರೂ ನನ್ನಲ್ಲಿಗೆ ಬಂದು ಉಪದೇಶವನ್ನು ಹೊಂದುವದಿಲ್ಲವೆಂದು ತಿಳಿದು, ನಾವೇ ಇಂತಹ ಗ್ರಂಥಗಳ ಮೂಲಕ ಅವರಲ್ಲಿಗೆ ಹೋಗಿ ಉಪದೇಶಿಸುವುದು ಗುರುಋಣವಿಮೋಚನೆಗೆ ಸಾಧುವಾದುದೆಂದು

ಭಾವಿಸಿ, ನಾನು ಹೊಂದಿದ ಉಪದೇಶವನ್ನೆಲ್ಲಾ ಪ್ರಚುರಪಡಿಸಿರುತ್ತೇನೆ. **"ಮಾ ಮೇ ವ್ಯಸ್ತು ಸಂಶಯಃ"** ಎಂಬ ಅಮೋಘವಾಕ್ಯ ಫಲಿಸುತ್ತದೆಂದು ನಾನು ನಂಬಿರುತ್ತೇನೆ.

ಈ ಶ್ಲೋಕದಲ್ಲಿರುವ **ಪ್ರಿಯಕೃತ್ತಮ ಪ್ರಿಯತರ** ಶಬ್ದಗಳಿಂದ ತೋರುವ ಭಾವವು ಏನೆಂದರೆ (೧) ಚೇತನನ ಸ್ವರೂಪಸ್ವಭಾವಗಳು ಜ್ಞಾನರೂಪವಾದುದರಿಂದ ಅದನ್ನು ಕೊಡುವ ಪ್ರದಾತಾ ಅನ್ನ ಬಟ್ಟೆಗಳನ್ನು ಕೊಡುವ ದಾತೃವಿಗಿಂತ ಸರ್ವಶ್ರೇಷ್ಠನೆಂಬುದು. (೨) ಇಂತಹ ಜ್ಞಾನವನ್ನು ಕೊಟ್ಟು ಆತನು ನಾರಾಯಣ ಸಾಯುಜ್ಯವನ್ನು ಹೊಂದುವಹಾಗೆ ಮಾಡುವ ಕೈಙ್ಕರ್ಯವು, ಈ ದಾಸಭೂತನು ತನ್ನ ಸ್ವಾಮಿಗೆ ಮಾಡುವ ಅನೇಕ ವಿಧ ಕೈಙ್ಕರ್ಯಗಳಲ್ಲೆಲ್ಲಾ ಪರಮ ಭೋಗ್ಯವಾದ ಕೈಙ್ಕರ್ಯವೆಂದು ಆತನು ಭಾವಿಸುವನು ಎಂಬುದು. (೩) **ಉದಾರಾಸ್ಸರ್ವ ಏವೈತೇ** ಎಂದು ಹಿಂದೆ ನಾಲ್ಕುಜನ ಭಕ್ತರೂ ಕೊಂಡಾಡಲ್ಪಟ್ಟು **ಜ್ಞಾನೀತ್ವಾತ್ಮೈವಮೇ ಮತಮ್** ಎಂದು ವಿಶೇಷ ಕೊಂಡಾಡಿದ್ದರು; ಈಗ ಹೇಳಿದುದು ಏನಾಯಿತು ಎಂದರೆ ಆ ಜ್ಞಾನಿಗಳಲ್ಲೂ, ಯೋಗ್ಯನಾದ ಅಧಿಕಾರಿಯನ್ನು ಹುಡುಕಿ ಈ ಬ್ರಹ್ಮವಿದ್ಯೆಯನ್ನು ಪ್ರಚುರಗೊಳಿಸುವ ಜ್ಞಾನಿಯಾದರೋ, ಸರ್ವೋತ್ಕೃಷ್ಟ ಉದಾರಿಯಾಗಿ ಉದಾರತಮನು, ಆದುದರಿಂದ ಪ್ರಿಯಕೃತ್ತಮನು ಎಂದು ಹೇಳಿದಂತಾಯಿತು, (೪) ಆದುದರಿಂದ ಆನೆಯಮೇಲೂ, ಆಂದೋಳನದಲ್ಲೂ, ಸುಪ್ಪತ್ತಿಗೆಮೇಲೆಯೂ ಕೂತು ತಿರುಗಾಡದೆ ಸರ್ವಸಂಗ ಪರಿತ್ಯಾಗವನ್ನು ಮಾಡಿ, ಮಹಾ ವಿರಕ್ತಿಯಿಂದಿರುವ ಯತಿವರ್ಯರುಗಳೂ ಕೂಡ, **ಶಾಧಿಮಾಂ ತ್ವಾಂ ಪ್ರಪನ್ನಂ** ಎಂದು ಬಂದ ಶಿಷ್ಯವರ್ಯನಿಗೆ, **ಬ್ರಹ್ಮವಿದ್ಯೋಪದೇಶವು** ತಮ್ಮ ಮುಖ್ಯವಾದ ಇತಿ ಕರ್ತವ್ಯತೆ ಎಂದು ಭಾವಿಸಿ, ಅದರಲ್ಲಿ ನಿರತಿಶಯ ಪ್ರೀತಿಯನ್ನಿಟ್ಟು ಅದನ್ನು ಉಪದೇಶಿಸುವುದು ಪರಮ ಕೈಙ್ಕರ್ಯವೆಂಬುದು ಅರಣ್ಯದಲ್ಲಿ ಪರ್ಣಶಾಲೆಯನ್ನು ರಚಿಸಿಕೊಂಡಿರುವ ಮುನಿಗಳೂ ಕೂಡ, ಇಂತಹ ಸದುಪದೇಶವು ಭಗವಂತನಿಗೆ ಅತ್ಯರ್ಥಪ್ರಿಯವಾದ ಕೈಙ್ಕರ್ಯವಾಗುತ್ತದೆಂದು ನಂಬಿ, ಅದನ್ನು ಕೈಕೊಂಡಿರುತ್ತಾರೆ. ಇದು ಇತಿಹಾಸ ಪುರಾಣಗಳಲ್ಲಿ ಪರಿಚಯವುಳ್ಳವರಿಗೆ ವ್ಯಕ್ತವು. **"ಪಕ್ಷೀ ಚ ಶಾಖಾನಿಲಯಂ ಪ್ರವಿಷ್ಟಃ"** ಎಂಬ (ರಾಮಾ ಸುಂದರ. ) ಅಮೋಘ ಶ್ಲೋಕವು ಇಲ್ಲಿ ಅನುಸಂಧೇಯವು. ಗುರುವಾದವನು ತನ್ನ ಪ್ರಿಯಶಿಷ್ಯನಿಗೆ ಉಪದೇಶಿಸುವಾಗ **"ದೇಶಿಕೋಮೇ ದಯಾಳುಃ"** ಎಂದು ಹೇಳಿರುವ ಹಾಗೆ ಪರಮ ದಯೆಯಿಂದ ಪ್ರತಿಫಲದ ಆಶೆಯನ್ನೆಲ್ಲಾ ತೊರೆದು, **"ತಸ್ಮೈವಿದ್ವಾನುಪಸನ್ನಾಯ ಸಮ್ಯಕ್ ಪ್ರಶಾನ್ತಚಿತ್ತಾಯ ಶಮಾನ್ವಿತಾಯ। ಯೇನಾಕ್ಷರಂ ಪುರುಷಂ ವೇದಸತ್ಯಂ ಪ್ರೋವಾಚತಾಂ ತತ್ತ್ವತೋ ಬ್ರಹ್ಮವಿದ್ಯಾಮ್"** (ಮುಂ. ೧-೨-೧೩) **ತಾಂ** - ಆ ಬ್ರಹ್ಮವಿದ್ಯೆಯನ್ನು, **ತತ್ತ್ವತಃ**-ಯಥಾರ್ಥವಾಗಿ, **ಪ್ರೋವಾಚತಾಂ** - ಉಪದೇಶಿಸತಕ್ಕದ್ದು ಎಂದು ಹೇಳಲ್ಪಟ್ಟಿರುತ್ತದೆ. ತಾನೇ ಅಜ್ಞನಾಗಿ ಸರಿಯಾಗಿ ಗ್ರಹಿಸದೆ ಇರುವ ಅಯಥಾರ್ಥವಾದ ಉಪದೇಶವನ್ನು ಮಾಡಕೂಡದೆಂಬ ಭಾವವೂ ತೋರಿಬರುತ್ತದೆ. ಆದುದರಿಂದ ಶ್ರೀ ಕೃಷ್ಣಭಗವಾನ್ ಮತ್ತು ವ್ಯಾಸಮಹರ್ಷಿಗಳ ಹೃದಯವನ್ನು ಪೂರ್ವಾಪರ ವಿರೋಧವಿಲ್ಲದ ಹಾಗೆ ಚೆನ್ನಾಗಿ ವಿಮರ್ಶಿಸಿ ತಿಳಿದವರು ಮಾತ್ರವೇ ಉಪದೇಶಕ್ಕೆ ಅರ್ಹರೇ ವಿನಾ, ಎಲ್ಲಾ ಭಗವದ್ಗೀತೆಯನ್ನು ಪಠಿಸಿದವರೂ ಗೀತೋಪದೇಶಕ್ಕೆ ಅರ್ಹರಲ್ಲವೆಂಬುದು ಏರ್ಪಟ್ಟಿತು. ಶ್ರೀಮದ್ಭಗವದ್ಗೀತೆಯು **ಗುಹ್ಯತಮ**ವಾದ ಶಾಸ್ತ್ರವು; ಸದ್ಗುರುವಿನ ಉಪದೇಶದಿಂದ ಚೆನ್ನಾಗಿ ವಿಮರ್ಶಿಸಿ ತಿಳಿಯುವ ಉತ್ಕೃಷ್ಟ ಜ್ಞಾನವಿರುವರು ಮಾತ್ರ ಉಪದೇಶಕ್ಕೆ ಅರ್ಹರೇ ವಿನಾ ಭಗವದ್ಗೀತೆಯನ್ನು ಕೈಯಲ್ಲಿ ಹಿಡಿದವರೆಲ್ಲಾ ಉಪದೇಶಕ್ಕೆ ಅರ್ಹರೆಂದು ನಂಬತಕ್ಕದ್ದಲ್ಲವು ಎಂಬ ತಾತ್ಪರ್ಯವೂ ಸೂಚಿತವು ಉಪದೇಶಿಸುವದರಲ್ಲಿ ಪೂರ್ವಾಪರವಿರೋಧವಿಲ್ಲದೆ ಪ್ರಕರಣ ಸಂಗತಿಗಳ ಸಾಮಂಜಸ್ಯವಿರಬೇಕು.

**ಭಾ. ಸರ್ವೇಷು ಮನುಷ್ಯೇಷ್ವಿತಃ ಪೂರ್ವಂ ತಸ್ಮಾದನ್ಯೋ ಮೇ ನ ಕಶ್ಚಿತ್ ಪ್ರಿಯಕೃತ್ತಮೋಽಭೂತ್, ಇತ ಉತ್ತರಂ ಚ ನ ಭವಿತಾ, ಅಯೋಗ್ಯಾನಾಂ ಪ್ರಥಮ ಮುಪಾದಾನಂ ಯೋಗ್ಯಾನಾ ಮಕಥನಾದ ಪಿ ತತ್ಕಥನಸ್ಯಾ ನಿಷ್ಟತಮತ್ವಾತ್ ॥೬೯॥**

**ಭಾಷ್ಯಾರ್ಥವು :—** ಈಗ ಅರ್ಜುನನಿಗೆ ಉಪದೇಶಿಸುವ ನೆಪದಿಂದ ಲೋಕಹಿತಾರ್ಥವಾಗಿ ಮಾಡಿದ ಉಪದೇಶವು ಫಲಕಾರಿಯಾಗಿ ಅನೇಕ ಬದ್ಧಜೀವರು ಈ ಸಂಸಾರಾರ್ಣವವನ್ನು ದಾಟಿ ತನ್ನನ್ನು ಬಂದು ಸೇರಲೆಂಬ ಕೃಪೌದಾರ್ಯದಿಂದ ಪ್ರತಿಯೊಬ್ಬ ಬ್ರಹ್ಮವಿದ್ಯಾನಿಷ್ಠನಿಗೂ ಇತಿಕರ್ತವ್ಯತೆಯು ಏನೆಂದರೆ ಹೇಳುತ್ತಾರೆ -- ಸದಾ ತಾನು ಆಚಾರ್ಯನ ಮೂಲಕ ಯಥಾರ್ಥವಾದ ಸಮಂಜಸವಾದ ಉಪದೇಶವನ್ನು ಗ್ರಹಿಸಿದವನಾಗಿ ಅದನ್ನು ಸತ್ಪಾತ್ರನನ್ನು ಕುರಿತು ಉಪದೇಶಿಸುವನೀಗ ತನಗೆ ಅತ್ಯಂತ ಪ್ರಿಯವಾದ ಕೈಙ್ಕರ್ಯರತನು ; ಅಂತವನಿಗಿಂತ ಪ್ರಿಯನಾದವನು ತನಗೆ ಯಾರೂ ಇರುವದಿಲ್ಲವೆಂದು ಹೇಳುತ್ತಾರೆ :— **ಸರ್ವೇಷು ಮನುಷ್ಯೇಷು** - ನನಗೆ ನಾನಾವಿಧ ಕೈಙ್ಕರ್ಯಮಾಡಬೇಕೆಂಬ ಮನಸ್ಸುಳ್ಳ ಮನುಷ್ಯರಲ್ಲೂ, **ಇತಃ ಪೂರ್ವಂ** ಇದಕ್ಕೆ ಮುಂದೆ, **ತಸ್ಮಾತ್**-ಗುರು ಕೃಪೆಯಿಂದ ಈ ಗ್ರಂಥದ ಸದುಪದೇಶವನ್ನು ಹೊಂದಿದ ಜ್ಞಾನಿಗಿಂತಲೂ, **ಅನ್ಯಃ**-ಬೇರೆಯಾಗಿ, **ಮೇ**-ನನಗೆ, **ಕಶ್ಚಿತ್ ಪ್ರಿಯಕೃತ್ತಮಃ**-ಯಾವನೊಬ್ಬ ಅತ್ಯನ್ತ ಪ್ರಿಯವಾದ ಕೈಙ್ಕರ್ಯವನ್ನೆಸಗುವವನು, **ನಾಭೂತ್**-ಉಂಟಾಗಲಾರನು ; ಹೀಗೆ ಈ ಗ್ರಂಥವನ್ನು ತತ್ವತಃ ಉಪದೇಶಕನೇ ಸರ್ವೋತ್ಕೃಷ್ಟ ಕೈಂಕರ್ಯವನ್ನು ಮಾಡಿದವನಾಗಿ ಪ್ರಶಸ್ತನಮನು. ಇದರಿಂದ ಯೋಗ್ಯನಾದ ಅಧಿಕಾರಿಯಲ್ಲಿ ಈ ಬ್ರಹ್ಮವಿದ್ಯೆಯನ್ನು ವಿನಿಯೋಗಿಸುವದೇ, ತನಗೆ ಸರ್ವೋತ್ಕೃಷ್ಟ ಕೈಙ್ಕರ್ಯವು ಈ ದಾಸಭೂತನಾದ ಚೇತನನು ಮಾಡುವಂಥಾದ್ದೆಂದು ಹೇಳಲ್ಪಟ್ಟಿತು. ಅನೇಕಮನುಷ್ಯರು ನಾನಾವಿಧವಾದ ಭಗವತ್ಕೈಙ್ಕರ್ಯಗಳನ್ನು ಮಾಡುತ್ತಾರೆ ; ಸರ್ವೇಶ್ವರನಿಗೆ ಆರಾಧನೆ, ದೀಪಾರೋಪಣ, ಮಾಲಾ ಸಮರ್ಪಣೆ, ಉತ್ಸವಾದಿಗಳು, ಭಗವನ್ನಿವೇದನರೂಪಕೈಂಕರ್ಯಗಳು, ಪ್ರಜಾಸಂರಕ್ಷಣೆ, ಆರ್ತರಕಷ್ಟನಿವೃತ್ತಿ, ಮೊದಲಾದ ಅನೇಕ ಕೈಙ್ಕರ್ಯಗಳನ್ನು ನಡೆಸುವರು. ಅಂತಹ ಕೈಙ್ಕರ್ಯಗಳಿಗಿಂತ ಸರ್ವೋತ್ಕೃಷ್ಟವಾದ ಕೈಙ್ಕರ್ಯವಾದರೋ, ನನ್ನ ಈ ಗೀತೋಪದೇಶವನ್ನು ಸತ್ಪಾತ್ರದಲ್ಲಿ ವಿನಿಯೋಗಿಸುವದು ; ಆದುದರಿಂದಲೇ **ಸರ್ವೇಷು ಮನುಷ್ಯೇಷು** ಎಂಬ ಪ್ರಯೋಗದಿಂದ ಸಮಸ್ತ ಕೈಙ್ಕರ್ಯಪರರೇ ಮುಖ್ಯವಾಗಿ ಹೇಳಲ್ಪಟ್ಟರು ಇದು ಮೂಲದಲ್ಲಿರುವ **ಮನುಷ್ಯೇಷು** ಎಂಬ ಮತ್ತು **ಪ್ರಿಯಕೃತ್ತಮಃ** ಎಂಬ, ಪ್ರಯೋಗಗಳಿಂದ ಅರ್ಥವಾಗಿ ತೋರುವ ಭಾವವು ಉತ್ತರಾರ್ಧದ ವ್ಯಾಖ್ಯಾನವು ಮುಂದೆ ಹೇಳಲ್ಪಡುತ್ತದೆ.— **ಇತಉತ್ತರಂಚ ನಭವಿತಾ**-ಇಲ್ಲಿಂದ ಮುಂದಕ್ಕೂ ಇಂತಹ ಕೈಙ್ಕರ್ಯಮಾಡುವನಿಗಿಂತ ಮೇಲಾದವನು ದೊರೆಯುವದಿಲ್ಲವು. **ಅಯೋಗ್ಯಾನಾಂ ಪ್ರಥಮಮುಪಾದಾನಂ**-೬೭ ನೆಯ ಶ್ಲೋಕದಲ್ಲಿ ಈ ಉಪದೇಶಕ್ಕೆ ಯಾರು ಅಯೋಗ್ಯರೆಂದು ಮೊದಲು ಹೇಳಿರುವದು, **ಯೋಗ್ಯಾನಾಂ ಅಕಥನಾದಪಿ**-ಯೋಗ್ಯಾಧಿಕಾರಿಗೆ ಉಪದೇಶಿಸದೇ ಇರುವದಕ್ಕಿಂತ, **ತತ್ಕಥನಸ್ಯ** - ಅಂತಹ ಅಯೋಗ್ಯರಿಗೆ ಉಪದೇಶವು, **ಅನಿಷ್ಟತಮತ್ವಾತ್**-ಶ್ರೀಕೃಷ್ಣಭಗವಾನರವರಿಗೆ ಅತ್ಯನ್ತ ಅನಿಷ್ಟವಾದುದರಿಂದ; ಯಾರಿಗೆ ಹೇಳಕೂಡದೆಂಬುದನ್ನು ಮೊದಲು ೬೭ ನೆಯ ಶ್ಲೋಕದಲ್ಲಿ ಹೇಳಿ ಅನಂತರ ಯಾರಿಗೆ ಹೇಳಬಹುದೆಂಬುದನ್ನು ೬೮ ನೆಯ ಶ್ಲೋಕದಲ್ಲಿ ಹೇಳಿದರು. ಯೋಗ್ಯಾಧಿಕಾರಿಯನ್ನಲ್ಲವೇ ಮೊದಲು ಹೇಳಿ, ಅನಂತರ ಅನರ್ಹರನ್ನು ಹೇಳಬೇಕಾಗಿತ್ತು ; ಹಾಗಲ್ಲದೆ, ಅನರ್ಹರನ್ನು ಮೊದಲು ಹೇಳಿದುದಕ್ಕೆ ಕಾರಣವೇನೆಂದರೆ, ಅಂತಹ ಅಯೋಗ್ಯನಾದ ಅನಧಿಕಾರಿಗೆ ಸರ್ವಾತ್ಮನಾ ಉಪದೇಶವು

**ಮೂ. ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದ ಮಾವಯೋಃ ।**
**ಜ್ಞಾನಯಜ್ಞೇನ ತೇನಾ ಹ ಮಿಷ್ಟ ಸ್ಸ್ಯಾ ಮಿತಿ ಮೇ ಮತಃ ॥೭೦॥**

ಇಷ್ಟವಿಲ್ಲವಾದುದರಿಂದ ಪ್ರಥಮತಃ ಹೇಳಲ್ಪಟ್ಟರೆಂಬ ತಾತ್ಪರ್ಯವು. ರಾಜಸ ತಾಮಸ ಗುಣಾಧಿಕ್ಯದಿಂದ ಅತಪಸ್ಕನಾಗಿ, ಅಭಕ್ತನಾಗಿ, ಅಶುಶ್ರೂಷುವಾಗಿ. ಅಭ್ಯಸೂಯಕರಾಗಿರುವವರಿಗೆ ಈ ಸದ್ಗ್ರಂಥವು ಯೋಗ್ಯವಲ್ಲವು; ಅಂತವರುಗಳ ಕರ್ಮವಿಪಾಕಾನುಗುಣವಾಗಿ ಹಿತವಾಗುವ ಇತರ ಅಸದ್ಗ್ರಂಥಗಳು ಅಸತ್ತುಗಳಿಂದ ರಚಿಸಲ್ಪಡುವಹಾಗೆ ಸರ್ವೇಶ್ವರನೇ ಅವರ ಶಿಕ್ಷಾರ್ಥವಾಗಿ ಮಾಡಿರುತ್ತಾನೆ. ಅವೀಗ ಅವರಿಗೆ ಯೋಗ್ಯವಾದ ಗ್ರಂಥಗಳು ಎಂಬ ಭಾವವೂ ಸೂಚಿತವು ಇಲ್ಲಿ **ಯೋಗ್ಯಾನಾಂ ಅಕಥನಾದಪಿ** ಎಂದಿರುವದರಿಂದ ಎರಡೂ ಅನಿಷ್ಟವೇ ಎಂಬ ಭಾವವು ಸೂಚಿತವು ಅಯೋಗ್ಯನಿಗೆ ಹೇಳುವದು ಅನಿಷ್ಟತಮವಾದರೆ, ಯೋಗ್ಯನಿಗೆ ಹೇಳದಿರುವದು ಅನಿಷ್ಟತರವು. ಆದುದರಿಂದ ಸದ್ಗುರುವನ್ನು ಯೋಗ್ಯನಾದ ಶಿಷ್ಯನು ಬಂದು ಪ್ರಾರ್ಥಿಸಿದರೆ, ಆಗುವದಿಲ್ಲವೆಂದು ಅವರು ಹೇಳುವದು ಸಾಧುವಲ್ಲವು. ಈಶ್ವರಾನುಗ್ರಹಕ್ಕೆ ಕುಂದಕವು ಅನಧಿಕಾರಿಗೆ ಹೇಳುವದು ಹೇಗೆ ಭಗವಂತನಿಗೆ ಅನಿಷ್ಟವೋ, ಹಾಗೆಯೇ ಇದನ್ನು ಸಮಂಜಸವಾಗಿ ಗ್ರಹಿಸಿ ಗುರುವಿನ ಸ್ಥಾನದಲ್ಲಿರುವವನು, ಪ್ರಾಪ್ತನಾದ ಸಚ್ಛಿಷ್ಯನಿಗೆ ಉಪದೇಶಿಸದೇ ಇರುವದೂಸಹ ಅನಿಷ್ಟವಾದ ವಿಷಯವೇ ಎಂದೂ ಇಲ್ಲಿ ಭಾವಿಸಬಹುದು; ಏಕೆಂದರೆ ಹಿಂದೆ ಉದಾಹರಿಸಿದ ಮುಂಡಕಶ್ರುತಿಯು **"ಪ್ರೋವಾಚತಾಂ ತತ್ವತೋ ಬ್ರಹ್ಮವಿದ್ಯಾಮ್"** ಎಂದು ಹೇಳಿರುವದರಲ್ಲಿ **ಪ್ರೋವಾಚ** ಎಂಬ ಕ್ರಿಯಾಪದವು ವಿಧಿಪರವೆಂದು ಶ್ರೀಯತಿವರ್ಯರೂ ನಿಗಮಾನ್ತದೇಶಿಕರವರೂ ಭಾವಿಸಿ, **ಪ್ರಬ್ರೂಯಾತ್** ಎಂದು ವ್ಯಾಖ್ಯಾನಮಾಡಿರುತ್ತಾರೆ ಹೀಗೆ ಅಭಿಪ್ರಾಯವಾಗದೆ, ಅಂತಹ ಶಿಷ್ಯನಿಗೆ ಗುರುವು ಉಪದೇಶಿಸಿಯೇ ತೀರಬೇಕೆಂಬ ವಿಧಿಯಿಲ್ಲದಿದ್ದರೆ, ಶಿಷ್ಯನಿಗೆ **"ಸ ಗುರುಮೇವಾಭಿಗಚ್ಛೇತ್"** ಎಂಬ ವಿಧಿಯು ನಿರರ್ಥಕವಾಗುತ್ತದೆ ಈ ಅಭಿಪ್ರಾಯವು **ಯೋಗ್ಯಾನಾ ಮಕಥನಾದಪಿ** ಎಂಬಲ್ಲಿರುವ ಅಪಿ ಶಬ್ದಸ್ವಾರಸ್ಯದಿಂದ ತೋರಿಬರುತ್ತದೆ. **"ಅಯೋಗ್ಯಾನಾಂ"** ಎಂದಾರಂಭಿಸಿ **"ಅನಿಷ್ಟತಮತ್ವಾತ್"** ಎಂಬುದು ಈ ಶ್ಲೋಕಮಾತ್ರದ ಅಭಿಪ್ರಾಯವಲ್ಲವು; ೬೭, ೬೮, ೬೯ ಈ ಮೂರುಶ್ಲೋಕಗಳಿಂದ ತೋರಿಬರುವ ಅಭಿಪ್ರಾಯವೆಂದು ಭಾವಿಸತಕ್ಕದು. ॥೬೯॥

**ಮೂಲಕ್ಕೆ ಅರ್ಥವು:**—೬೮ ನೆಯ ಶ್ಲೋಕದಲ್ಲಿ ಈ ಗೀತಾರ್ಥಶಾಸ್ತ್ರವನ್ನು ಉಪದೇಶಿಸುವ ಸದ್ಗುರುವಿಗೆ ಪ್ರಾಪ್ತವಾಗುವ ಫಲವು ಹೇಳಲ್ಪಟ್ಟಿತು. ಈಗ ಈ ಶ್ಲೋಕದಿಂದ ಈ ಗೀತಾಶಾಸ್ತ್ರವನ್ನು ಸದ್ಗುರು ಮುಖೇನ ಉಪದೇಶವನ್ನು ಹೊಂದುವ ಸಚ್ಛಿಷ್ಯನಿಗೆ ಉಂಟಾಗುವ ಫಲವು ಹೇಳಲ್ಪಡುತ್ತದೆ—**ಯಃ**-ಯಾವ ಅಧಿಕಾರಿಯು, **ಆವಯೋಃ**-ಅರ್ಜುನನ ಮತ್ತು ನನ್ನ, ಹೀಗೆ ನಮ್ಮಿಬ್ಬರ, **ಸಂವಾದಂ**-ಪ್ರಶ್ನೋತ್ತರ ರೂಪದಲ್ಲಿರುವ, **ಇಮಂ**-ಈ, **ಧರ್ಮ್ಯಂ**-ಧರ್ಮಗಳಿಂದ ಕೂಡಿರುವ ಕರ್ಮಯೋಗ (ಜ್ಞಾನಯೋಗ) ಭಕ್ತಿಯೋಗಗಳಿಂದ **ಬಿಟ್ಟಿಲ್ಲದೇ** ಇರುವ, ಇವುಗಳಿಂದ ಕೂಡಿರುವ ಉಪದೇಶವನ್ನು ಅಥವಾ ಧರ್ಮವು ಸರ್ವ ಶ್ರೇಯಸ್ಸಿಗೂ ಹೇತುವಾದುದರಿಂದ **ಧರ್ಮ್ಯಂ** ಎಂದರೆ ಸರ್ವ ಶ್ರೇಯಸ್ಸಾಧಕವಾದ ಚತುರ್ವಿಧ ಪುರುಷಾರ್ಥಗಳಿಗೂ ಸಾಧನವಾದ, ಅಥವಾ **"ಕೃಷ್ಣಂ ಧರ್ಮಂ ಸನಾತನಂ"** ಎಂದು ಹೇಳಿರುವ ಹಾಗೆ ಶ್ರೀ ಕೃಷ್ಣ ಭಗವಂತನು ಸಿದ್ಧೋಪಾಯನಾಗಿ ನಿಂತು, ಕ್ರಮೇಣ ಸರ್ವಶ್ರೇಯಸ್ಸನ್ನು ಸಾಧಿಸಿಕೊಡುವ, **ಅಧ್ಯೇಷ್ಯತೇ**-ಇದರಲ್ಲಿರುವದೆಲ್ಲಾ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ಬ್ರಹ್ಮವಿದ್ಯೆಯಾಗಿರುವವರಿಂದ ಅದನ್ನು ಗುರುಮುಖೇನ ಉಚ್ಚಾರಣಾನುಚ್ಚಾರಣೆಯ ರೂಪದಲ್ಲಿ ಅಧಿಕರಿ

**ಭಾ. ಯ ಇಮ ಮಾವಯೋ ರ್ಧರ್ಮ್ಯಂ ಸಂವಾದ ಮಧ್ಯೇಷ್ಯತೇ, ತೇನ ಜ್ಞಾನಯ ಜ್ಞೇನಾ ಹ ಮಿಷ್ಟ ಸ್ಸ್ಯಾ ಮಿತಿ ಮೇ ಮತಿಃ-ಅಸ್ಮಿರ್ಯೋ ಜ್ಞಾನಾಯಜ್ಞೋಭಿ ಧೀಯತೇ ತೇನಾಹ ಮೇತದಧ್ಯಯನ ಮಾತ್ರೇಣೇ ಷ್ಟಸ್ಸ್ಯಾಮಿತ್ಯರ್ಥಃ ॥೭೦॥**

ಸುವನೋ, **ಸಃ**-ಅಂತವನು, **ತೇನ**-ಅಂತಹ, **ಜ್ಞಾನಯಜ್ಞೇನ**-ಹಿಂದೆ "**ಜ್ಞಾನ ಯಜ್ಞೇನ ಚಾಪ್ಯನ್ಯೇ ಯಜನ್ತೋ ಮಾ ಮುಪಾಸತೇ**" ಎಂಬಲ್ಲಿ ಹೇಳಿರುವ ಹಾಗೆ ಸರ್ವಜಗತ್ಕಾರಣನು ಧ್ಯೇಯನೆಂಬ ಉಪದೇಶವನ್ನು ಪಠಿಸುವದೇ ಒಂದು ಜ್ಞಾನಯಜ್ಞವು, ಅದರಿಂದ ಆತನಿಗೆ **ಅಹಂ**-ನಾನು, **ಇಷ್ಟಸ್ಸ್ಯಾಮ್**-ತುಂಬಾ ಇಷ್ಟನಾದವನಾಗುವೆನು ; ಆತನು ನನಗೆ ಹೃದ್ಯ ನಾಗುವನು ; ಆತನಲ್ಲಿ ನನ್ನ ಅನುಗ್ರಹವು ಉಂಟಾಗುವದು, **ಇತಿ**-ಎಂಬುದು, **ಮೇ ಮತಿಃ**-ನನ್ನ ದೃಢಸಂಕಲ್ಪವು ; ಯಾವಾಗ ನನ್ನ ಅನುಗ್ರಹ ಉಂಟಾಯಿತೋ, ಆಗ ಅವನು ಅದರ ಅರ್ಥವನ್ನು ಗ್ರಹಿಸುವದಕ್ಕೂ, ಅದರಂತೆ ಅನುಷ್ಠಿಸುವದಕ್ಕೂ ಯೋಗ್ಯತೆಯುಂಟಾಗಿ ಕ್ರಮೇಣ ನನ್ನನ್ನು ಬಂದು ಸೇರುವನೆಂಬ ಭಾವವು ಸೂಚಿತವು **ಧರ್ಮ್ಯಂ** ಎಂದರೆ **ಧರ್ಮಾದನಪೇತಂ** ಎಂಬರ್ಥವಾದುದರಿಂದ, ಈ ಸಂವಾದದಲ್ಲಿ ಸಾಕ್ಷಾದುಪಾಯವಾಗಿ ಹೇಳಲ್ಪಟ್ಟ ಭಕ್ತಿಯೋಗವು (೧) ಕರ್ಮಯೋಗಾನುಗೃಹೀತವಾದುದು ಎಂದೂ (೨) ಉಪಾಸನವು ಜ್ಞಾನರೂಪವಾದರೂ ಮನೋವ್ಯಾಪಾರದಿಂದ ಲಭಿಸುವಂಥಾದ್ದೆಂದೂ ಹೇಳಿದಂತಾಯಿತು. ಇದರಿಂದ ಉಪಾಯವು, ಬರೀ ಜ್ಞಾನರೂಪವಾದುದೇ, ಕರ್ಮವೇ ಬೇಕಿಲ್ಲವೆಂಬ ಕೆಲವರ ಅಭಿಪ್ರಾಯಕ್ಕೆ ಈ **ಧರ್ಮ್ಯಂ** ಎಂಬ ಪ್ರಯೋಗವು ಅನುಕೂಲಿಸುವದಿಲ್ಲವು ; ಹಾಗೆಯೇ **ಜ್ಞಾನಯಜ್ಞೇನ** ಎಂಬ ಪ್ರಯೋಗವೂ ಅವರಿಗೆ ಅನುಕೂಲಿಸುವದಿಲ್ಲವು. ಉಪಾಸನವು ಜ್ಞಾನರೂಪವಾದರೂ ಧ್ಯಾನಾನುಸ್ಮೃತಿ ರೂಪವಾದುದರಿಂದ ಕರ್ಮರೂಪವೂ ಆಗಿ ಮನಸ್ಸಿನ ವ್ಯಾಪಾರವಾಗಿ ಜ್ಞಾನಯಜ್ಞವೆಂದು ಹೇಳಿಸಿಕೊಳ್ಳಲು ಯೋಗ್ಯವೆಂಬುದು ಏರ್ಪಟ್ಟಿತು. ಇದರಿಂದ ತತ್ವಮಸಿ ಇತ್ಯಾದಿ ವಾಕ್ಯ ಜನ್ಯಜ್ಞಾನವೇ ಮೋಕ್ಷಪ್ರದವೆಂದು ಹೇಳುವವರಿಗೆ ಉಪಾಸನದ ಆವಶ್ಯಕತೆ ತಾನೇ ಏತಕ್ಕೆ ? ಅದು ಬೇಕಾಗುವದಿಲ್ಲವು.

**ಭಾಷ್ಯಾರ್ಥವು :—** ಈ ಶ್ಲೋಕದಲ್ಲಿ ಸದ್ಗುರುವಿನ ಮೂಲಕವಾಗಿ ಶಾಬ್ದವಾಗಿಯೂ ಅರ್ಥವಾಗಿಯೂ ಈ ಶ್ರೀ ಕೃಷ್ಣಾರ್ಜುನರ ಸಂವಾದವನ್ನು ಗ್ರಹಿಸುವ ಸಚ್ಛಿಷ್ಯನಿಗೆ ಉಂಟಾಗುವ ಫಲವನ್ನು ಎರಡು ಶ್ಲೋಕಗಳ ಮೂಲಕ ಬೋಧಿಸುತ್ತಾರೆ —**ಯಃ**-ಯಾವನು, **ಇಮಂ**-ಈ ಗೀತೋಪನಿಷತ್ತಾದ, **ಧರ್ಮ್ಯಂ**-ಧರ್ಮವೆಂದರೆ ಶ್ರೇಯಸ್ಸು, ಅದನ್ನು ಸಂಪಾದಿಸಿಕೊಡುವ, **ಆವಯೋಃ**-ನಮ್ಮಿಬ್ಬರ (ಅರ್ಜುನ ಶ್ರೀ ಕೃಷ್ಣಭಗವಾನರವರ) **ಸಂವಾದಂ**-ಪ್ರಶ್ನೋತ್ತರ ರೂಪವಾದ ಬ್ರಹ್ಮವಿದ್ಯೆಯನ್ನು, **ಅಧ್ಯೇಷ್ಯತೇ**-ಸದ್ಗುರುವಿನಮೂಲಕ ಅಧಿಕರಿಸುವನೋ, ಶಾಬ್ದರೂಪದಲ್ಲಾಗಲಿ ಅಥವಾ ಅರ್ಥಸಹಿತವಾಗಿ ಅಧಿಕರಿಸುವನೋ ಎಂಬಭಾವವು ; ಮುಂದೆ **ತೇನ ಜ್ಞಾನಯಜ್ಞೇನ** ಎಂದಿರುವದರಿಂದ ಈ ಎರಡನೆಯ ಅರ್ಥವು ಬೋಧಿತವು ; ಯಾವಾಗ ಬರೀಪಠನಮಾಡುತ್ತಾನೋ ಆಗ ಒಂದುವಿಧವಾದ ಆಪಾತಪ್ರತೀತಿಯುಂಟಾಗಿ,ಅದರ ಸ್ವಾರಸ್ಯ ವನ್ನೂ ಗ್ರಹಿಸಬೇಕೆಂಬ ಉತ್ಕಟೇಚ್ಛೆಯುಂಟಾಗಿ ಅದರ ಅರ್ಥವನ್ನು ಸದ್ಗುರುವಿನ ಮೂಲಕ ಗ್ರಹಿಸುವನೆಂಬ ಭಾವವು ತೋರಿಬರುತ್ತದೆ ; ಸದ್ಗುರುವಿನಿಂದ ಶ್ರವಣವೂ ಸಮಾನಫಲವುಳ್ಳ ದೆಂಬ ಭಾವನೆಯಿಂದ ಕೆಲವರು **ಶೃಣುಯಾತ್** ಎಂಬ ಪಾಠವನ್ನು **ಅಧ್ಯೇಷ್ಯತೇ** ಎಂಬುದಕ್ಕೆ ಬದಲಾಗಿ ಅಂಗೀಕರಿಸಿರುತ್ತಾರೆ.

ಹೀಗೆ ಯಾವನು ಅಧಿಕರಿಸುವನೋ, **ಸಃ**-ಅಂತವನು, **ತೇನ ಜ್ಞಾನಯಜ್ಞೇನ**-ಅಂತಹ ಜ್ಞಾನರೂಪವಾದ ಯಜ್ಞದಿಂದ, ಭಕ್ತಿಯೋಗವಾದ ಉಪಾಸನವು ಒಂದು ಜ್ಞಾನರೂಪವಾದ ಉಪಾಯಾನುಷ್ಠಾನವಾಗಿ **ಏಕಾಂತಮನಃ** ಪ್ರವೃತ್ತಿಯಿಂದ ಸಾಧ್ಯವಾದುದರಿಂದ, ಜ್ಞಾನ ಯಜ್ಞವೆಂದು ಹೇಳಲ್ಪಟ್ಟಿತು; ಇಂತಹ ಪ್ರವೃತ್ತಿಯುಂಟಾಗುವ ಹಾಗೆ ಮಾಡಿ, **ಇಷ್ಟಸ್ಸ್ಯಾಮ್**-ಆತನಿಗೆ ತುಂಬಾ ಇಷ್ಟವುಳ್ಳವನಾಗುವೆನು, ಇತಿ-ಎಂಬುದು, **ಮೇಮತಿಃ**-ನನ್ನ ದೃಢಸಙ್ಕಲ್ಪವು; ಈ ಶ್ಲೋಕದ ಸಙ್ಗ್ರಹಾಭಿಪ್ರಾಯವೇನೆಂದರೆ ತಿಳಿಸುತ್ತಾರೆ:—**ಅಸ್ಮಿನ್**-ಈ ಸಂವಾದರೂಪಗೀತಾಶಾಸ್ತ್ರದಲ್ಲಿ **ಯಃ ಜ್ಞಾನಯಜ್ಞೋಽಭಿಧೀಯತೇ** - ಯಾವ ಜ್ಞಾನ ಯಜ್ಞವು, **"ಜ್ಞಾನಯಜ್ಞೇನ ಚಾಪ್ಯನ್ಯೇ ಯಜನ್ತೋ ಮಾಮುಪಾಸತೇ"** ಎಂದು (೯-೧೫) ಎಂಬದಾಗಿ ಹೇಳಲ್ಪಟ್ಟಿರುತ್ತದೋ **ತೇನ**-ಅಂತಹ ಉಪದೇಶವನ್ನು ಹೊಂದುವದೇ ಒಂದು ಜ್ಞಾನಯಜ್ಞವು, ಅದರಿಂದ **ಅಹಂ** - ನಾನು, **ಏತದಧ್ಯಯನ ಮಾತ್ರೇಣ** - ಈ ಗ್ರಂಥದ ಗುರುಮುಖೇನ ಪಠಣಮಾಡುವದರಿಂದಲೇ, **ಇಷ್ಟಸ್ಸ್ಯಾ ಮಿತ್ಯರ್ಥಃ**-ಹಾಗೆ ಅಧಿಕರಿಸುವವನಿಗೆ ಪ್ರಿಯನಾದವನಾಗುವೆನು, ಎಂದರೆ ಸಿದ್ಧೋಪಾಯನಾಗಿ ನಿಂತು, ಆತನಿಗೆ ಶ್ರೇಯಸ್ಸೆಲ್ಲಾ ಕ್ರಮೇಣ ಉಂಟಾಗುವ ಹಾಗೆ ಮಾಡುವೆನು, ಎಂದರೆ ಕರ್ಮಯೋಗಾದಿ ಪರಂಪರೆಗಳ ಅನುಷ್ಠಾನದಲ್ಲಿ ಪ್ರವೃತ್ತಿಯುಂಟಾಗುವ ಹಾಗೆ ಮಾಡುವೆನೆಂಬುದು ಸೂಚಿತವು. ಆದರೆ ಹಿಂದೆ ಗೀತಾ ೪-೩೩ರಲ್ಲಿ **"ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ"** ಎಂಬಲ್ಲಿ ಹೇಳಲ್ಪಟ್ಟ ಜ್ಞಾನಯಜ್ಞವಾದರೋ ಇಲ್ಲಿ ವಿವಕ್ಷಿತವಲ್ಲವು; ಅದು ಕರ್ಮಯೋಗದಲ್ಲಿ ಸೇರಿದ ಯಜ್ಞಗಳನ್ನು ಕುರಿತ ವಿಷಯವು- ಈ ಜ್ಞಾನಯಜ್ಞವಾದರೋ ಉಪಾಸನವೇ ಪರ್ಯವಸಾನವಾಗಿಯುಳ್ಳದಾದುದರಿಂದ ಭಿನ್ನವು **"ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ"** ಎಂದು ಶ್ರುತಿಯು ಹೇಳಿರುವ ಜ್ಞಾನವೇ ಈ ಜ್ಞಾನ ಯಜ್ಞ ಶಬ್ದದಲ್ಲಿ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು. **"ಸಜ್ಞಾಯತೇ"** ಎಂಬ ಮಹರ್ಷಿಯ **ಉಕ್ತಿ**ಯಲ್ಲಿ (ವಿ. ಪು. ೬.೫.೮೭) ಹೇಳಲ್ಪಟ್ಟ ಜ್ಞಾನವೇ ಇಲ್ಲಿ ವಿವಕ್ಷಿತವೆಂದು ಭಾವಿಸತಕ್ಕದ್ದು. ಇಂತಹ ಜ್ಞಾನವೇ ಗ್ರಂಥದಲ್ಲಿ ಹೇಳಲ್ಪಟ್ಟು, ಅಂತಹ ಗ್ರಂಥದ ಅಧ್ಯಯನವನ್ನು ಒಂದು ಜ್ಞಾನಯಜ್ಞವನ್ನಾಗಿಯೇ ಭಾವಿಸಿ, ಅದರಿಂದ ಅಂತಹ ಗೀತಾಪಠನವನ್ನು ಮಾಡಿದವನನ್ನು ಅನುಗ್ರಹಿಸುವವನಾಗಿ ಆತನಿಗೆ ಶ್ರೇಯಸ್ಸನ್ನುಂಟುಮಾಡುವನೆಂಬುದು ತಾತ್ಪರ್ಯವು ಸದ್ಗುರುವಿನ ಮೂಲಕ ಗೀತೋಪದೇಶವನ್ನು ಹೊಂದಿ ಪಠಿಸುತ್ತಿರುವವನು, ತನ್ನ ಅನುಗ್ರಹಕ್ಕೆ ಪಾತ್ರನಾಗಿ ಶ್ರೇಯಸ್ಸನ್ನು ಹೊಂದುವನೆಂಬುದು ಈ ಶ್ಲೋಕದ ಸಙ್ಗ್ರಹತಾತ್ಪರ್ಯವು. **"ಯೋ ಅಶ್ವಮೇಧೇನ ಯಜತೇ ಯ ಉಚೈನಂವೇದ"** **"ಯಂ ಯಂ ಕ್ರತುಮಧೀತೇ, ತೇನ ತೇನಾಸ್ಯೇಷ್ಟಂಭವತಿ"** ಇವೇ ಮೊದಲಾದವುಗಳಲ್ಲಿ ಹೇಳಿರುವಹಾಗೆ, ಆ ಆ ಕ್ರತುವಿನ ಅಧ್ಯಯನವು ಆ ಆ ಕ್ರತ್ವನುಷ್ಠಾನ ಫಲಕ್ಕೆ ಸಮವೋ, ಹಾಗೆಯೇ ಈ ಗೀತಾ ಪಠನ ವಿಷಯದಲ್ಲೂ ಎಂಬ ಭಾವವು **ಅಧ್ಯೇಷ್ಯತೆ** ಎಂಬುದರಿಂದ ತೋರಿಬರುತ್ತದೆ. ಶ್ರೀಮಚ್ಛಂಕರಾಚಾರ್ಯರವರೂ ಯಜ್ಞಗಳು ವಿಧಿಯಜ್ಞಗಳೆಂದೂ ಜಪಯಜ್ಞಗಳೆಂದೂ ಉಪಾಂಶುಯಜ್ಞಗಳೆಂದೂ ಮಾನಸಯಜ್ಞಗಳೆಂದೂ ನಾಲ್ಕುವಿಧವೆಂದು ಹೇಳಿ, ಜ್ಞಾನಯಜ್ಞವು ಮಾನಸಯಜ್ಞವೆಂದೇ ಹೇಳಿರುತ್ತಾರೆ. ಆದುದರಿಂದ ಪರಮಾತ್ಮೋಪಾಸನರೂಪವಾದ ಜ್ಞಾನಯಜ್ಞವು ಮಾನಸ ಯಜ್ಞವೆಂದು ಅಪ್ಪಣೆಕೊಡಿಸಿರುತ್ತಾರೆ. ಆದುದರಿಂದಲೇ **"ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ"** ಎಂಬ **"ಮನ್ಮನಾಭವ"** ಇತ್ಯಾದಿ ಅನೇಕ ಪ್ರಯೋಗಗಳನ್ನು ಈ ಗೀತೆಯಲ್ಲೇ ಕಾಣಬಹುದು; **ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ"**

ಇತ್ಯಾದಿ ಋಷಿಪ್ರೋಕ್ತ ಪ್ರಮಾಣಗಳೂ ಉಂಟು. ಆದುದರಿಂದ **ಜ್ಞಾನಾನ್ಮೋಕ್ಷಃ** ಎಂಬ **ಉಕ್ತಿಯೇನೋ** ಸಾಧುವಾದುದು ; ಆದರೆ ಆ ಜ್ಞಾನವು ವಾಕ್ಯಜನ್ಯ ಜ್ಞಾನವಲ್ಲವು ; ಧ್ರುವಾನುಸ್ಮೃತಿರೂಪವಾಗಿ ಮನಸ್ಸಿನ ವ್ಯಾಪಾರವಾದುದು ಬದ್ಧಜೀವಾತ್ಮರುಗಳಿಗೆಲ್ಲಾ ಎಂದು ತಿಳಿಯತಕ್ಕದ್ದು.

ಈ ಶ್ಲೋಕದ **ಅಧ್ಯೇಷ್ಯತೇ** ಎಂಬ ಪ್ರಯೋಗದಿಂದ ಇನ್ನೊಂದು ಅರ್ಥವೂ ಸೂಚಿತವು **ಆವಯೋಃ ಸಂವಾದಂ** ಎಂದಿರುವದರಿಂದ ಈ ಭಾರತಯುದ್ಧಾನಂತರವೇ ಈ ಗೀತೆಯು ಪ್ರಾಚುರ್ಯಕ್ಕೆ ಬಂತೆಂಬ ಭಾವವು ತೋರಿಬರುತ್ತದೆ. ಆದರೆ ಹಾಗೆ ಭಾವಿಸತಕ್ಕದಲ್ಲವು, ಏಕೆಂದರೆ ಶ್ರೀ ವ್ಯಾಸಮಹರ್ಷಿರಚಿತ ಪಂಚಮವೇದರೂಪವಾದ ಶ್ರೀಮನ್ಮಹಾಭಾರತವು, ಧೃತರಾಷ್ಟ್ರೋತ್ಪತ್ತಿಗೆ ಮುಂಚೆಯೇ ಸರ್ವಜ್ಞನಾದ ಭಗವಂತನಿಂದ ಅನುಗ್ರಹಿಸಲ್ಪಟ್ಟ ದಿವ್ಯ ಚಕ್ಷುಸ್ಸಿನಿಂದ ಭವಿಷ್ಯದ್ವೃತ್ತಾಂತವೆಲ್ಲಾ ಸಙ್ಗೃಹೀತವಾಗಿ ರಚಿಸಲ್ಪಟ್ಟಿತೆಂದೂ, ಅದು ತಮ್ಮ ಶಿಷ್ಯರಿಗೆ ಉಪದಿಷ್ಟವಾಗಿತ್ತೆಂದೂ ತೋರಿಬರುತ್ತದೆ ; ಏಕೆಂದರೆ **“ನಾರದೋ ಶ್ರಾವಯೇದ್ದೇವಾನ್ ಅಸಿತೋ ದೇವಲಃ ಪಿತೄನ್ । ಗಂಧರ್ವಯಕ್ಷರಕ್ಷಾಂಸಿ ಶ್ರಾವಯಾಮಾಸನ್ವೈಶುಕಃ”** ಎಂದು ಹೇಳಲ್ಪಟ್ಟಿರುತ್ತದೆ ; ಹೀಗೆ ಈ ಗೀತಾರ್ಥವನ್ನು ಇತರಲೋಕಗಳಲ್ಲಿ ಮೇಲೆ ಹೇಳಿದವರು ಪ್ರಕಾಶಪಡಿಸಿದರೆಂದು ತೋರಿಬರುತ್ತದೆ. ಈ ಲೋಕದಲ್ಲಾದರೋ ವೈಶಂಪಾಯನರಿಂದ ಜನಮೇಜಯರಿಗೆ ಉಪದೇಶಿಸಲ್ಪಟ್ಟು ಪ್ರಾಚುರ್ಯಕ್ಕೆ ಬಂತೆಂಬುದೂ ತೋರಿಬರುತ್ತದೆ. ಈ ಅಭಿಪ್ರಾಯಗಳ ಸೂಚನೆಗಾಗಿ **ಅಧ್ಯೇಷ್ಯತೇ** ಎಂಬ ಪ್ರಯೋಗವೆಂದು ಭಾವಿಸಬಹುದು ಶ್ರೀ ಸಂಜಯರೂ ಕೂಡ **ವ್ಯಾಸಪ್ರಸಾದಾಚ್ಛ್ರುತವಾನ್** ಎಂದು ಹೇಳಿಕೊಂಡಿರುತ್ತಾರೆ. ಹಾಗೆ ಮುಂಚಿತವಾಗಿಯೇ ಭವಿಷ್ಯದ್ವೃತ್ತಾನ್ತವೆಲ್ಲಾ ತನ್ನಲ್ಲೇ ಸಕ್ತಮನಸ್ಕರಾದ ಜ್ಞಾನಾಗ್ರೇಸರರಿಗೆ ಭಕ್ತವತ್ಸಲನು ತಿಳಿಸುವನೆಂಬುದರಲ್ಲಿ ಈಷದಪಿಸಂದೇಹವು ಬೇಕಿಲ್ಲವು. ಏಕೆಂದರೆ ತನ್ನನ್ನೇ ನಂಬಿದ ಅರ್ಜುನನಿಗೆ ಮುಂದೆ ನಡೆಯುವದನ್ನೆಲ್ಲಾ ಪ್ರತ್ಯಕ್ಷವಾಗಿಯೇ ತೋರಿಸಿದನೆಂಬುದು **“ಅಮೀಚತ್ವಾಂಧೃತರಾಷ್ಟ್ರಸ್ಯಪುತ್ರಾಃ ಸರ್ವೇಸಹೈವಾವನಿಪಾಲಸಂಘೈಃ । ಭೀಷ್ಮದ್ರೋಣಸ್ಸೂತಪುತ್ರ ಸ್ತಥಾಸೌಸಹಾಸ್ಮದೀಯೈರಪಿ ಯೋಧಮುಖ್ಯೈಃ । ವಕ್ತ್ರಾಣಿ ತೇತ್ವರಮಾಣಾವಿಶನ್ತಿ ”** ಎಂಬ ಅರ್ಜುನೋಕ್ತಿಯಿಂದಲೇ ವ್ಯಕ್ತವು. ಆದುದರಿಂದ ಶ್ರೀ ವ್ಯಾಸರು ಭಗವತ್ಪ್ರಸಾದದಿಂದ ಮೊದಲೇ ತಿಳಿದರೆಂಬ ವಿಷಯದಲ್ಲಿ ಸಂದೇಹವಿಲ್ಲವು. ಜ್ಯೋತಿಶ್ಶಾಸ್ತ್ರಪಂಡಿತರು ನಮ್ಮ ವಿಚಾರದಲ್ಲೇ ಮುಂದೆ ನಡೆಯುವದನ್ನು ಪರಿಶೀಲಿಸಿ ಹೇಳುದುದು ನಮ್ಮಗಳ ಅವಗಾಹನೆಯಲ್ಲೇ ಇರುವಾಗ ಸಂದೇಹವು ಏತಕ್ಕೆ ? **ಆವಯೋಸ್ಸಂವಾದಂ** ಎಂಬುದರಿಂದ ಉಪನಿಷತ್ತುಗಳಲ್ಲೂ ಇತಿಹಾಸಪುರಾಣಗಳಲ್ಲೂ ಎಲ್ಲಾ ಶಾಸ್ತ್ರೋಪದೇಶವು ಶಿಷ್ಯಪ್ರಶ್ನೆಯನ್ನುದ್ದೇಶಿಸಿಗುರುವಿನ ಸದುಪದೇಶವಾಗಿಯೇ ಇರುತ್ತದೆ. ಭಾರತ, ಭಾಗವತ ರಾಮಾಯಣಾದಿಗಳಲ್ಲೂ ವಿಷ್ಣುಪುರಾಣಾದಿಗಳಲ್ಲೂ ಈ ಗುರುಶಿಷ್ಯಸಂವಾದ ರೂಪ ಕಥನವನ್ನು ಕಾಣಬಹುದು. ಈ ಶ್ರೀಮದ್ಭಗವದ್ಗೀತೆಯಲ್ಲಾದರೋ, ಗುರುವು ಲೋಕಗುರುವೇ ಆಗಿ, ಶಿಷ್ಯನೂ ತದಂಶನೇಯಾದುದರಿಂದ ವಿಶೇಷಮಾಹಾತ್ಮ್ಯೆಯುಳ್ಳದ್ದಾಗಿ ಉಪನಿಷತ್ಸಾರಭೂತಾರ್ಥವಾಗಿರುವದರಿಂದ ನಿರತಿಶಯಮಾಹಾತ್ಮ್ಯೆಯು. ಉಪನಿಷತ್ತುಗಳು ಹೇಗೆ ಉಚ್ಚಾರಣಾನೂಚ್ಚಾರಣೆಯರೂಪವಾಗಿ ಅಧ್ಯಯನಮಾಡಲ್ಪಡತಕ್ಕದ್ದೋ, ಹಾಗೆಯೇ ಅವುಗಳ ಸಾರಭೂತವಾದ ಈ ಗ್ರಂಥವೂ ಎಂಬುವನ್ನು ಸೂಚಿಸುವದಕ್ಕಾಗಿ **ಅಧ್ಯೇಷ್ಯತೇ** ಎಂಬ ಪ್ರಯೋಗವು. ಆದುದರಿಂದಲೇ ಈ ಗೀತಾಶಾಸ್ತ್ರದಲ್ಲಿ ಆದರವಿಲ್ಲದ ಮಹನೀಯರೇ ಇಲ್ಲವು. ಎಲ್ಲಾ ದೇಶದ ಪ್ರಾಜ್ಞರೂ ಈ ಗ್ರಂಥದಲ್ಲಿ ಸ್ವಾರಸ್ಯವನ್ನು ಆಸ್ವಾದನಮಾಡಿ ನೈಮರೆತಿರುತ್ತಾರೆ. ಹಾಗೆಯೇ

**ಮೂ. ಶ್ರದ್ಧಾವಾನನ ಸೂಯಶ್ಚ ಶೃಣುಯಾದಪಿಯೋನರಃ ।
ಸೋಽಪಿಮುಕ್ತ ಶ್ಶುಭಾಲ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಮ್ ॥**

ಪರಮಭಾಗವತೋತ್ತಮರಾದ ಸಂಜಯರು ಕೊನೆಯಲ್ಲಿ ಧೃತರಾಷ್ಟ್ರನನ್ನು ಕುರಿತು ವಿಸ್ಮಿತರಾಗಿ ಹೇಳುತ್ತಾರೆ:—"**ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದ ಮಿಮ ಮದ್ಭುತಮ್ । ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿಚ ಮುಹುರ್ಮುಹುಃ**" ಎಂದು ಹೇಳಿ, ಒಂದು ಸಲ ಹೇಳಿದುದು ಸಾಲದೆ, "**ವಿಸ್ಮಯೋಮೇ ಮಹಾರಾಜನ್ ಹೃಷ್ಯಾಮಿಚ ಪುನಃಪುನಃ** ಎಂದು ಇನ್ನೊಂದು ಸಲ ಹೇಳಿ, ವಿಸ್ಮಯವನ್ನೂ ಆನಂದವನ್ನೂ ಪ್ರದರ್ಶಿಸಿರುತ್ತಾರೆ. ಇಂತಹ ವಿಸ್ಮಯವೂ ಆನಂದವೂ ಸಾಧಾರಣವಾಗಿ ಎಲ್ಲರಿಗೂ ಉಂಟಾಗಲಾರದು; ಸಾರ ಗ್ರಾಹಿಗಳಾದ ಮಹಾತ್ಮರೇ ಅನುಭವಿಸಬಲ್ಲರು. "**ಕಲ್ಲುಸಕ್ಕರೆಸವಿ ಬಲ್ಲವರೇ ಬಲ್ಲರು**" ಎಂಬ ದೇವರ ಪದವು ಜ್ಞಾಪಕಕ್ಕೆ ಬರುತ್ತದೆ.

**ಮೂಲಕ್ಕೆ ಅರ್ಥವು**:—ಹಿಂದಿನ ಶ್ಲೋಕದಲ್ಲಿ ಗುರುಮುಖೇನ ಉಪದೇಶವನ್ನು ಹೊಂದಿ ಗೀತೆಯನ್ನು ಪಠಿಸುವವನು ತನ್ನ ಅನುಗ್ರಹಕ್ಕೆ ಪಾತ್ರನಾಗಿ ಇಷ್ಟನಾಗುವನೆಂದು ಹೇಳಿದ ನಂತರ ಕ್ರಮೇಣ ಆ ಶಾಸ್ತ್ರದಲ್ಲೇ ಅಭಿರುಚಿಯುಂಟಾಗಿ ಉಪಾಯಾನುಷ್ಠಾನಾದಿ ಸರ್ವಶ್ರೇಯಸ್ಸುಗಳಿಗೂ ಅರ್ಹನಾಗುವನೆಂದು ಹೇಳಿದಂತಾಯಿತು ಈ ಶ್ಲೋಕದಲ್ಲಿ ಗೀತಾ ಶಾಸ್ತ್ರವನ್ನಾಗಲಿ, ಆ ಶಾಸ್ತ್ರದ ಅರ್ಥವನ್ನಾಗಲಿ ಕೇಳಿದವನಿಗೆ ಫಲವೇನೆಂಬುದನ್ನು ತಿಳಿಸುತ್ತಾರೆ.—ಆದರೆ ಹಾಗೆ ಕೇಳುವವನಲ್ಲಿ ಎರಡು ಗುಣಗಳಿರತಕ್ಕದ್ದು; ಆತನಿಗೆ ಗೀತೆಯು ಏನನ್ನು ಹೇಳುತ್ತದೆ ಎಂದಾಗಲಿ ತಿಳಿಯಬೇಕೆಂದಾಗಲಿ, ಅಥವಾ ಬ್ರಹ್ಮಪ್ರಾಪಕ ಬ್ರಹ್ಮವಿದ್ಯೆ ಎಂದಾಗಲಿ ಅದನ್ನು ಪಠಿಸಬೇಕೆಂಬ ಶ್ರದ್ಧೆಯಿರಬೇಕು. ಮತ್ತು ಗೀತೆಯಲ್ಲ ಏನಿದೆ, ಅದು ಅರಣ್ಯರೋದನವು ಎಂಬಿವೇ ಮೊದಲಾದ ಅಸೂಯೆಯಿರಕೂಡದು; ಅದು ಸದ್ಗ್ರಂಥವು, ಸಾರಭೂತವಾದದು ಎಂಬ ಅಭಿಪ್ರಾಯವಿರಬೇಕು; ಇಂತಹ ಎರಡು ಗುಣಗಳುಳ್ಳವನಾಗಿ ಕೇಳಿದರೆ, ಅಂತವನಿಗೆ ಎಂತಹ ಫಲಪ್ರಾಪ್ತಿಯು ಎಂಬುದನ್ನು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ಅಂತವನಿಗೆ "**ಅಭಿಮುಖ್ಯಂಚಸಾತ್ವಿಕೈಃ । ಸಂಭಾಷಣಂ ಷಡೇತಾನಿಹ್ಯಾಚಾರ್ಯಪ್ರಾಪ್ತಿ ಹೇತವಃ**" ಎಂದು ಹೇಳಿರುವಹಾಗೆ ತನ್ನ ಭಕ್ತರ ಸಂಘವನ್ನು ಸೇರುವ ಹಾಗೆ **ಮಾಡಿ**, ತನ್ಮೂಲಕವಾಗಿ ಬ್ರಹ್ಮವಿದ್ಯೆಯನ್ನು ಅವರಿಂದ ಅಧಿಕರಿಸಿ, ಕಡೆಗೆ ಮುಕ್ತಿ ಹೊಂದುವನೆಂಬ ತಾತ್ಪರ್ಯವು. ಶ್ರವಣಮಾತ್ರ ಫಲವೂಕೂಡ ಅಷ್ಟು ಅಮೋಘವಾದುದೆಂದು ಹೇಳುತ್ತಾರೆ—ಒಡನೆಯೇ ಆತನಿಗೆ ನಿರತಿಶಯ ಫಲಪ್ರಾಪ್ತಿ ಇಲ್ಲದಿದ್ದರೂ ಪರಮ ಪುರುಷನ ಅನುಗ್ರಹಕ್ಕೆ ಪಾತ್ರನಾಗುವದರಿಂದ ವಿಳಂಬದಿಂದಾದರೂ, ಆತನ ಭಕ್ತರ ಮಂಡಲಿಗೆ ಸೇರಿ ಅವರುಗಳೊಂದಿಗೆ ಸಂಭಾಷಾದಿಗಳ ಮಾಹಾತ್ಮ್ಯೆಯಿಂದ ಸದಾಚಾರ್ಯಪ್ರಾಪ್ತಿಯುಂಟಾಗಿ ಮುಕ್ತಿಗೆ ಹೇತುವಾಗುತ್ತದೆಂಬುದು ಅಭಿಪ್ರಾಯವು.

**ಯೋನರಃ**—ಯಾವ ಮನುಷ್ಯನು, ಇಲ್ಲಿ ನರ ಶಬ್ದದಿಂದ ಸಾಧಾರಣವಾಗಿ ಎಲ್ಲಾ ಮನುಷ್ಯರು ಹೇಳಲ್ಪಡಲಿಲ್ಲವು, ಮುಂದೆ **ಶ್ರದ್ಧಾವಾನ್ ಅನಸೂಯಶ್ಚ** ಎಂದು ಇರುವದರಿಂದ, ಐಹಿಕದಲ್ಲಿ **ನರಮತೇತಿ ನರಃ** ಎಂಬ ವ್ಯುತ್ಪತ್ತಿಯಿಂದ ಐಹಿಕವನ್ನು **ತೊರೆದು** ಮೋಕ್ಷಾಪೇಕ್ಷೆಯಿರುವ ಅಧಿಕಾರಿಯು ಹೇಳಲ್ಪಟ್ಟಹಾಗೆ ತೋರುತ್ತದೆ. **ಶ್ರದ್ಧಾವಾನ್**—ಲೀಲಾ ಸಾರಥಿಯ ಅಮೋಘೋಪದೇಶವನ್ನು ಕೇಳಬೇಕೆಂಬ ವಿಶ್ವಾಸವುಳ್ಳವನಾಗಿಯೂ, **ಅನಸೂಯಶ್ಚ**—ಆ ಉಪದೇಶದಲ್ಲಿ ಏನಿದೆ, ನಿಸ್ಸಾರವಾದುದು, ನಮ್ಮ ಹಾಗೆಯೇ ಕೃಷ್ಣನೆಂಬ ಒಬ್ಬ

ಮನುಷ್ಯನು ಹೇಳಿದಮಾತು, ಇತ್ಯಾದಿ ಅಸೂಯಾಪ್ರೇರಿತನಲ್ಲದವನಾಗಿಯೂ, **ಚಕಾರ** ದಿಂದ ಈ ಎರಡು ಗುಣಗಳು ಮುಖ್ಯವಾಗಿ ಶ್ರೋತಾವಿಗೆ ಇರಬೇಕು, ಇಲ್ಲದಿದ್ದರೆ ಆ ಶ್ರವಣವು ಫಲಕಾರಿಯಾಗುವದಿಲ್ಲವು. ಹಿಂದೆ ೯-೩ ರಲ್ಲೇ ಶ್ರದ್ಧೆಯಿಲ್ಲದವನಿಗೆ ತಾನು ಪ್ರಾಪ್ಯನಲ್ಲವು, ಅಂತವನು ಪುನಃ ಪುನಃ ಸಂಸಾರಕೂಪದಲ್ಲೇ ಬಿದ್ದು ನರಳುವನೆಂದು **"ಅಶ್ರದ್ಧಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ। ಅಪ್ರಾಪ್ಯಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ"** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಆದುದರಿಂದ ಕಠಶ್ರುತಿಯು **"ಪ್ರಬ್ರೂಹಿತಗಂ ಶ್ರದ್ದಧಾನಾಯ"** ಎಂದು ಉಪದೇಶಿಸಿರುತ್ತದೆ. ಕೇಳಬೇಕೆಂಬ ಶ್ರದ್ಧೆಯೇನೋ ಇರಬಹುದು, ಅವುಗಳಲ್ಲಿ ದೋಷಗಳಿವೆ ಎಂದು ತಿಳಿಯುವದಕ್ಕಾಗಿಯೂ ಶ್ರದ್ಧೆಯಿರಬಹುದು, ಹಾಗಲ್ಲದೆ ಶ್ರದ್ಧೆಯೊಂದಿಗೆ, ನಿರ್ದುಷ್ಟವಾದ.ದರಲ್ಲಿ ದೋಷವನ್ನು ಹುಡುಕುವ ಅಸೂಯೆಯೂ ಇರಕೂಡದೆಂಬ ತಾತ್ಪರ್ಯವು, **ಶೃಣುಯೊದಪಿ**-ಒಬ್ಬ ಆಚಾರ್ಯನು ಪಠನಮಾಡುವದನ್ನಾಗಲಿ ಉಪನ್ಯಾಸ ಮಾಡುವದನ್ನಾಗಲಿ ಕೇಳಿದರೂಕೂಡ, ತಾನೇ ಪ್ರವಚನ ಪಠನಾದಿಗಳಿಲ್ಲದೆ ಸುಮ್ಮನೆ ಶ್ರವಣ ಮಾಡಿದಮಾತ್ರದಿಂದಲಾದರೂ ಕೂಡ, **ಸೋಽಪಿ**-ಅಂತವನೂ ಕೂಡ, **ಮುಕ್ತಃ**-ಉಪಾಯವಾದ ಭಕ್ತಿಯೋಗಾರಂಭಕ್ಕೆ ವಿರೋಧವಾದ ಪಾಪಗಳಿಂದ, ಬಿಡಲ್ಪಟ್ಟವನಾಗಿ, **ಪುಣ್ಯಕರ್ಮಣಾಂ**-ಸಾಧುಕಾರಿಗಳಾದ ಸುಕೃತಿಗಳಾದ ನನ್ನ ಭಕ್ತರ, **ಶುಭಾನ್**-ಶ್ರೇಯಸ್ಸಾಧನಕ್ಕೆಕಾರಣರಾದ, **ಲೋಕಾನ್**-ಜನರನ್ನು ಕುರಿತು, ಅಂತವರಿರುವ ಗುಂಪನ್ನು, ಮಂಡಲಿಯನ್ನು, **ಪ್ರಾಪ್ನುಯೊತ್**-ಹೊಂದುವನು. ಸಾತ್ವಿಕ ಸಮಾಗಮ ಸಂಭಾಷಣೆಗಳು ಅದರಿಂದ ದೊರೆತು, ಅದು ಸದಾಚಾರ್ಯಪ್ರಾಪ್ತಿಗೆ ಹೇತುವಾಗಿ ಕೊನೆಗೆ ಮೋಕ್ಷಪ್ರಾಪ್ತಿಗೂ ಸಹ ಸಾಧನವಾಗುತ್ತದೆಂಬ ಭಾವವು. ಈ ಶ್ಲೋಕದಲ್ಲಿ ಎರಡು ಅಪಿಶಬ್ದಗಳಿವೆ; ಇವುಗಳ ತಾತ್ಪರ್ಯವನ್ನು ಭಾಷ್ಯದಲ್ಲಿ ವ್ಯಕ್ತಪಡಿಸುವೆವು. ಇಲ್ಲಿರುವ **ಮುಕ್ತಃ**-ಎಂಬ ಶಬ್ದಕ್ಕೆ ಮೋಕ್ಷವನ್ನು ಹೊಂದಿದವನೆಂದಾಗಲಿ, ಅಥವಾ ಪ್ರಾಕೃತ ಶರೀರದಿಂದ ಬಿಡಲ್ಪಟ್ಟವನೆಂದಾಗಲಿ ಅರ್ಥಹೇಳಲು ಸಾಧ್ಯವಿಲ್ಲವು; ಏಕೆಂದರೆ **ಶುಭಾನ್ ಲೋಕಾನ್ ಪ್ರಾಪ್ನುಯೊತ್ಪುಣ್ಯಕರ್ಮಣಾಂ** ಎಂದಿರುತ್ತದೆ. ಆದುದರಿಂದ ಮುಖ್ಯಾರ್ಥವನ್ನು ಹೇಳಲು ಆಗುವದೇ ಇಲ್ಲವು, ಈ ಅಧಿಕಾರಿಯು ಸುಮ್ಮನೆ ಕೇಳುವವನಾದುದರಿಂದ ಪ್ರವಚನ ಪಠನಾದಿ ಫಲಗಳಿಂದ ಕಮ್ಮಿಯಾದ ಫಲವನ್ನು ಹೊಂದುವನೆಂಬುದು ವ್ಯಕ್ತವು; **ಸೋಽಪಿ** ಎಂಬಲ್ಲಿ **ಅಪಿ** ಶಬ್ದವೇ ಅವರುಗಳಿಗಿಂತ ಕಮ್ಮಿಯಾದ ಫಲವನ್ನು ಸೂಚಿಸುತ್ತದೆ; ಆದುದರಿಂದ **ಮುಕ್ತಃ**-ಎಂಬುದಕ್ಕೆ ಲಾಕ್ಷಣಿಕಾರ್ಥವನ್ನೇ ಹೇಳಬೇಕೆಂಬುದು ಏರ್ಪಟ್ಟ ನಂತರ ಇನ್ನೂ ಈತನು ಉಪಾಯಾನುಷ್ಠಾನವನ್ನು ಆರಂಭಿಸಿದವನಾದ ಪ್ರಯುಕ್ತ ತದಾರಂಭಕ್ಕೆ ಪ್ರತಿಬಂಧಕ ಪಾಪಗಳಿಂದ **ಮುಕ್ತಃ** ಎಂದೇ ಅರ್ಥಮಾಡತಕ್ಕದ್ದು ನ್ಯಾಯವು. ಶ್ರವಣವು ಭಕ್ತಿಯೋಗಾರಂಭಕ್ಕೆ ಅನುಗ್ರಾಹಕವಾಗಿ ಪರಿಣಮಿಸುವಹಾಗೆ ಪರಮ ಪುರುಷನು ದಯಪಾಲಿಸುತ್ತಾನೆಂಬುದು ತಾತ್ಪರ್ಯವು, ಇದನ್ನುಂಟುಮಾಡುವ ಬಗೆ ಹೇಗೆ? ಎಂದರೆ ಸಾತ್ವಿಕ ಮಂಡಲಿಯನ್ನು ಹೊಂದಿಸಿ, ಅಂತವರ ಸಂಭಾಷಣೆಯಿಂದ ಸದಾಚಾರ್ಯಪ್ರಾಪ್ತಿಯು ಲಭಿಸಿ, ತನ್ಮೂಲಕ ಉಪಾಯಾರಂಭ ನಿಷ್ಪತ್ತಿಗಳೂ, ದೇಹಾವಸಾನವೂ, ಮೋಕ್ಷವೂ ಎಲ್ಲವೂ ಕ್ರಮವಾಗಿ ಲಭಿಸುತ್ತದೆಂಬ ಭಾವವು. ಲೋಕ ಶಬ್ದಕ್ಕೆ ಸ್ಥಾನವಿಶೇಷಗಳಾದ ಅಗ್ನಿಹೋತ್ರಾದಿಗಳ ಲೋಕವೆಂದರ್ಥ ಮಾಡದೆ, ಸುಕೃತಿಗಳ ಮಂಡಲಿಯನ್ನು ಹೊಂದುತ್ತಾನೆಂಬ ಅರ್ಥ ಹೇಗೆ? ಎಂದರೆ, ಶ್ರೀ ಕೃಷ್ಣಭಗವಾನ್‌ರವರ ದಿವ್ಯಸೂಕ್ತಿ ಶ್ರವಣಕ್ಕೆಅಲ್ಪಾಸ್ಥಿರ ಫಲಗಳಾದ ಸ್ವರ್ಗಾದಿ ಲೋಕಪ್ರಾಪ್ತಿಫಲಗಳಲ್ಲಿ ಪರ್ಯವಸಾನವು ಉಚಿತವಲ್ಲವು; ಎಂದಿದ್ದರೂ ಸ್ವಲ್ಪ ವಿಳಂಬದಿಂದಾಗಲಿ, **ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭ**

**ಭಾ. ಶ್ರದ್ಧಾವಾನನಸೂಯಶ್ಚ ಯೋನರಶ್ಶೃಣುಯಾದಪಿ, ತೇನ ಶ್ರವಣಮಾತ್ರೇಣ ಸೋಽಪಿ, ಭಕ್ತಿವಿರೋಧಿಪಾಪೇಭ್ಯೋ ಮುಕ್ತಃ ಪುಣ್ಯಕರ್ಮಣಾಂ-ಮದ್ಭಕ್ತಾನಾಂ ಲೋಕಾ-ಸಮೂಹಾ, ಪ್ರಾಪ್ನುಯಾತ್ ॥೭೧॥**

---

**ಯಾತ್** ಎಂದು ಹೇಳಿರುವಹಾಗೆ, ಮೋಕ್ಷಪ್ರಾಪ್ತಿಯಲ್ಲೇ ಪರ್ಯವಸಾನವು ಎಂದು ಹೇಳುವದು ಯುಕ್ತವು; ಆದುದರಿಂದ ಮೋಕ್ಷಪ್ರಾಪ್ತಿಗೂ, ಅದಕ್ಕೆ ಬೇಕಾದ ಉಪಾಯಾನುಷ್ಠಾನಕ್ಕೂ ಸಹ ಅತ್ಯವಶ್ಯಕವಾದುದು ಸದಾಚಾರ್ಯಪ್ರಾಪ್ತಿಯು; ಇಂತಹ ಆಚಾರ್ಯಪ್ರಾಪ್ತಿಗೆ ಬೇಕಾದುದು ತದೀಯರೊಂದಿಗೆ ಸಂಭಾಷಣೆಯು; ಇದು ಲಭಿಸುತ್ತದೆಂದು ಅರ್ಥಮಾಡುವದು ಸ್ವಾರಸ್ಯ ಯುಕ್ತವಾದುದು. ಪುಣ್ಯಕರ್ಮಿಗಳ ಲೋಕವೆಂದರೆ ಇಂದ್ರಾದಿ ಲೋಕಗಳೆಂದು ಅರ್ಥ ಮಾಡಲು, "**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ**" ಎಂದು ಹಿಂದೆ ಹೇಳಿ, ಮಹರ್ಷಿಯು ಅನ್ಯತ್ರ "**ಆವಿರಂಚಾದ ಮಂಗಳಂ**" ಎಂದೂ ಹೇಳಿರುವಾಗ, **ಈ ಲೋಕಗಳು ಶುಭಾ** ಎಂದು ಹೇಳಲ್ಪಡಲು ಹೇಗೆ ಅರ್ಹಗಳು? ಅವುಗಳೆಲ್ಲಾ ಅಶುಭಗಳೇ; ಆದುದರಿಂದ ಶ್ರೀ ಯತಿವರ್ಯರ ಅರ್ಥವೇ ಸರ್ವಸಮಂಜಸವಾದುದು. ಅಜಾಮಿಳನ ಸ್ವಪುತ್ರ ನಾಮೋಚ್ಚಾರಣೆಯು ಹೇಗೆ ಆತನಿಗೆ ವಿಳಂಬದಿಂದಾಗಲಿ ಮೋಕ್ಷಕ್ಕೆ ಸಾಧನವಾಯಿತೋ, ಹಾಗೆಯೇ ಕ್ರಮೇಣ ವಿಳಂಬದಿಂದಲಾಗಲಿ ಈ ಲೀಲಾ ಸಾರಥಿಯ ಅಮೋಘೋಪದೇಶ ಶ್ರವಣವೂ ಸಹ ಮೋಕ್ಷಸಾಧನ ಪ್ರಾಪ್ತಿಗೆ ಹೇತುವಾಗುತ್ತದೆಂಬುದು ಮುಖ್ಯತಾತ್ಪರ್ಯವು. ॥೭೧

**ಭಾಷ್ಯಾರ್ಥವು:—ಶ್ರದ್ಧಾವಾ**-ಈ ಅಮೋಘ ಗ್ರಂಥವನ್ನು ಕೇಳಬೇಕೆಂಬ ಉತ್ಸಾಹ ವುಳ್ಳವನಾಗಿಯೂ, **ಅನಸೂಯಶ್ಚ**-ಈ ಗ್ರಂಥದಲ್ಲಿ ಏನಿದೆ, ಪರಸ್ಪರ ವಿರುದ್ಧಾರ್ಥಗಳುಳ್ಳದು, ನಿಸ್ಸಾರವಾದುದು, ಎಂದು ಇಲ್ಲದ ದೋಷಗಳನ್ನು ಆರೋಪಿಸಿ ಹೇಳದಿರುವವನಾಗಿಯೂ, ಇಲ್ಲಿ ಚಕಾರವಿರುವದರಿಂದ ಹಿಂದೆಹೇಳಿದ ಪ್ರಣಿಪಾತ, ಪರಿಪ್ರಶ್ನ, ಸೇವೆಗಳು (ಶ್ಲೋ. ವಿ. ಪು.೧) ಹೇಳಲ್ಪಟ್ಟವು. **ಯೋನರಃ**-ಯಾವ ಅಧಿಕಾರಿಯಾದ ಮನುಷ್ಯನು, **ಶೃಣುಯಾದಪಿ**-ಗುರು ಮೂಲಕವಾಗಿ ಕೇಳುವನಾದರೆ ಕೂಡ, ಅಂತವನೂ ಕೂಡ, **ಮುಕ್ತಃ** ಬಿಡಲ್ಪಟ್ಟವನಾಗಿ ಏತರಿಂದ ಬಿಡಲ್ಪಟ್ಟವನಾಗಿ ಎಂದರೆ **ಭಕ್ತಿವಿರೋಧಿ ಪಾಪೇಭ್ಯಃ ಮುಕ್ತಃ**-ಭಕ್ತಿ ಎಂದರೆ ಭಗವದುಪಾಸನೆಯು. ಅದಕ್ಕೆ ವಿರೋಧಿಗಳಾದ ಪಾಪಗಳಿಂದ ಬಿಡಲ್ಪಟ್ಟವನಾಗಿ, ಶ್ರೀ ಮಚ್ಛಂ ಕರಾಚಾರ್ಯರೂ ಹೀಗೆಯೇ ಅರ್ಥಮಾಡಿರುತ್ತಾರೆ, **ಪುಣ್ಯಕರ್ಮಣಾಂ** ಎಂದರೆ **ಮದ್ಭಕ್ತಾನಾಂ**-ನನ್ನ ಭಕ್ತರುಗಳ, **ಲೋಕಾ** ಎಂದರೆ **ಸಮೂಹಾ** "ಲೋಕಸ್ತು ಭುವನೇಜನೇ" ಎಂದು ನಿಘಂಟು ಇರುವದರಿಂದ, ಅಂತಹ ಜನಸಮೂಹವನ್ನು **ಪ್ರಾಪ್ನುಯಾತ್** ಹೊಂದುವನು. ಗ್ರಂಥವನ್ನು ಒಬ್ಬ ಸದಾಚಾರ್ಯನ ಮುಖೇನ ಕೇಳಿದರೂ, ಆ ಆಚಾರ್ಯನ ಅನುಗ್ರಹವೂ ದೈವಾನುಗ್ರಹವೂ ಉಂಟಾಗಿ, ಆ ಸದ್ಗ್ರಂಥದಲ್ಲಿ ಮಮತೆಯು ಹುಟ್ಟಿ, ಭಾಗವತ ಸಂಭಾಷಣೆಯು ಒದಗಿ, ಉಪಾಯಾರಂಭವಿರೋಧಿ ಪಾಪಗಳೆಲ್ಲಾ ತೊಲಗಿ, ಉಪಾಯಾನುಷ್ಠಾನದಲ್ಲಿ ಅಭಿರುಚಿಯುಂಟಾಗುತ್ತದೆಂಬುದು ಮುಖ್ಯತಾತ್ಪರ್ಯವು. ಸದಾಚಾರ್ಯ ಪ್ರಾಪ್ತಿಯಿಲ್ಲದೆ ತಾನೇ ಗ್ರಂಥವನ್ನು ಅವಲೋಕಿಸಿ ತಿಳಿಯುತ್ತೇನೆಂದೂ, ಅಥವಾ ಯಾವನೋಬ್ಬನು ತಾನೇ ಸ್ವಲ್ಪ ಮಟ್ಟಿಗೆ ಓದಿಕ್ಕೊಂಡು ತಾನು ಉಪದೇಶಕನೆಂದು ಹೇಳಿಕೊಂಡವನ ಮೂಲಕವಾಗಿ ಕೇಳಿ ತಿಳಿದಗೂ ಸರಿಯಾದ ಜ್ಞಾನವು ದೊರೆಯಲಾರದೆಂಬುದೂ ಸೂಚಿತವು. ಶ್ರವಣವಾಗಲಿ. ಉಪದೇಶವಾಗಲಿ ಕಾರ್ಯಕಾರಿಯಾಗಬೇಕಾದರೆ ಸದಾಚಾರ ಪ್ರೋಕ್ತವಾಗಿ ಸಂಸ್ಕಾರ ಯುಕ್ತ ವಾಗಿರಬೇಕು. ಸಂಸ್ಕಾರವಿಲ್ಲದ ಜ್ಞಾನವು ದುಷ್ಟಹಯದಹಾಗೆ ಕುಮಾರ್ಗದಲ್ಲಿ ಎಳದುಕೊಂಡುಹೋಗಿ ಬಿಡುತ್ತದೆ. ಆದುದರಿಂದಲೇ ಶ್ರುತಿಯು "**ತದ್ವಿಜ್ಞಾನಾರ್ಥಂ ಸಗುರುಮೇವಾಭಿ**

**ಮೂ. ಕಚ್ಚಿದೇತಚ್ಛ್ರುತಂ ಪಾರ್ಥತ್ವಯ್ಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನ ಸಮ್ಮೋಹಃ ಪ್ರಣಷ್ಟಸ್ತೇ ಧನಂಜಯ ॥೭೨॥**

**ಗಚ್ಛೇತ್, ಸಮಿತ್ಪಾಣಿಶ್ರೋತ್ರಿಯಂ ಬ್ರಹ್ಮನಿಷ್ಠಮ್"** ಎಂದು ವಿಧಿಸಿರುತ್ತದೆ (ಮುಂ. ೧.೨.೧೨) ಇನ್ನೊಂದು ಕಡೆಯಲ್ಲೂ **"ಆಚಾರಾದ್ಧ್ಯೈವ ವಿದ್ಯಾ ವಿದಿತಾಸಾಧಿಷ್ಠಂ ಪ್ರಾಪತ್** (ಛಾಂ. ೪. ೯. ೩) ಆಚಾರ್ಯರಿಂದುಪದಿಷ್ಟವಾದ ವಿದ್ಯೆಯು ಸಾಧುತಮತ್ವವನ್ನು ಹೊಂದುತ್ತದೆ. ಹಾಗೆ ಸಂಸ್ಕಾರವಿಲ್ಲದ ವಿದ್ಯೆಯು ಕಾರ್ಯಕಾರಿಯಾಗುವದಿಲ್ಲವೆಂಬಭಾವವು. ಹಾಗೆಯೇ **"ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ । ಆಚಾರ್ಯವತ್ತ್ರಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್"** ಬಹುಪಾಪಿಯಾದ ಕ್ಷತ್ರಬಂಧುವಿಗೂ, ಸುಕೃತಿಯಾದ ಪುಂಡರೀಕನಿಗೂ, ಮುಕ್ತಿಯು ನಾರದರನ್ನು ಇಬ್ಬರೂ ಆಚಾರ್ಯರನ್ನಾಗಿ ವರಿಸಿದುದರಿಂದ ಉಂಟಾದುದರಿಂದ ಆಚಾರ್ಯಯುಕ್ತನಾಗು ಎಂದು ಹೇಳಲ್ಪಟ್ಟಿರುತ್ತದೆ. ಈ ಅಭಿಪ್ರಾಯವು **ಶೃಣುಯಾತ್** ಎಂಬಪ್ರಯೋಗದಿಂದ ತೋರಿಬರುತ್ತದೆ. **ಶೃಣುಯಾದಪಿ** ಎಂಬಲ್ಲಿರುವ **ಅಪಿ** ಶಬ್ದವು ಪ್ರವಚನ ಪಠನಾದಿಗಳಿಗಿಂತ ಶ್ರವಣವು ಫಲದಲ್ಲಿ ಸ್ವಲ್ಪ ನ್ಯೂನತೆಯುಳ್ಳದೆಂಬುದನ್ನು ಸೂಚಿಸುತ್ತದೆ, **ಸೋಽಪಿ** ಎಂಬಲ್ಲಿರುವ ಅಪಿ ಶಬ್ದವಾದರೋ ಫಲವಿಳಂಬವನ್ನು ಸೂಚಿಸುತ್ತದೆ; ಆದುದರಿಂದಲೇ **ಮುಕ್ತಃ** ಎಂಬುದಕ್ಕೆ **ಭಕ್ತಿವಿರೋಧಿ ಪಾಪೇಭ್ಯೋ ಮುಕ್ತಃ** ಎಂದು ವ್ಯಾಖ್ಯಾನಮಾಡಲ್ಪಟ್ಟಿತು. ಇನ್ನೂ ಉಪಾಯಾನುಷ್ಠಾನ ದೆಶೆಯ ಪ್ರಾಪ್ತಿಯೂ ಇಲ್ಲವೆಂಬುದು ತೋರಿಬರುತ್ತದೆ. ಹಾಗೆಯೇ ಅಭಿಪ್ರಾಯವೆಂದು ಗ್ರಹಿಸದಿದ್ದರೆ ಭಗವದ್ಗೀತೆಯನ್ನು ಕೇಳಿದರೇ ಸಾಕು; ಮುಕ್ತಿಯುಂಟಾಗುವದೆಂದು ಅರ್ಥಮಾಡಿದರೆ ಆಗ ಭಕ್ತಿಯೋಗವು ನಿರರ್ಥಕವಾಗುತ್ತದೆ. ಬರೀಗ್ರಂಥಶ್ರವಣಕ್ಕೇ ಇಂತಹ ಫಲವು ದೈವಾನುಗ್ರಹದಿಂದುಂಟಾದರೆ, ಅರ್ಥಜ್ಞಾನದಿಂದ ಕೇಳುವವರಿಗೆ ಎಂದರೆ ಉಪದೇಶ ಹೊಂದುವವರಿಗೆ ಕ್ಷಿಪ್ರದಲ್ಲೇ ಫಲಪ್ರಾಪ್ತಿ ಎಂಬುದು ಕೈಮುತಿಕನ್ಯಾಯ ಸಿದ್ಧವು; ಇದು **ಸೋಽಪಿ** ಎಂಬಲ್ಲಿರುವ ಅಪಿಶಬ್ದದಿಂದ ತೋರಿಬರುತ್ತದೆ. ಅವನಿಗೂ ಕೂಡ ಉಂಟು ಎಂದರೆ ಇವನಿಗಾದರೋ ಉಂಟೇಉಂಟೆಂಬಭಾವವು ಸ್ವತಸ್ಸಿದ್ಧವು. ಅರ್ಥಾನುಸಂಧಾನದೊಂದಿಗೆ ಕೇಳುವದಾದರೆ ಪರಿಕರಗಳೊಂದಿಗೆ ಉಪಾಯಾನುಷ್ಠಾನಕ್ಕೆ ಹೇತುವಾಗುವದರಲ್ಲಿ ಸಂದೇಹವಿಲ್ಲವು, ಎಂಬುದು ತಾತ್ಪರ್ಯವು. ಇದಕ್ಕೆ ಅರ್ಜುನನೇ ಸಾಕ್ಷಿಯು. ಲೋಕಗುರುವಿನಿಂದ ಅರ್ಥಸಹಿತವಾದ ಉಪದೇಶವನ್ನು ಕೇಳಿದ್ದಾನೆ; ಹೇಗೆ ಕೇಳಬೇಕೋ **"ಪ್ರಣಿಪತ್ಯಾಭಿವಾದ್ಯಚ"** ಎಂದೂ (ವಿ. ಪು. ಪ್ರಥಮ ಶ್ಲೋಕವು) ಹೇಳಿರುವ ಹಾಗೆ ಕೇಳಿರುತ್ತಾನೆ. ಆದುದರಿಂದಲೇ ಮುಂದೆಯೇ ೭೩ ನೆಯ ಶ್ಲೋಕದಲ್ಲೇ **"ಕರಿಷ್ಯೇ ವಚನಂ ತವ"** ಎಂದು ಯುದ್ಧೋನ್ಮುಖನಾಗುತ್ತಾನೆ.

**ಮೂಲಕ್ಕೆ ಅರ್ಥವು:**—ಹೀಗೆ ಉಪನಿಷತ್ಸಾರಭೂತವಾದ ಬ್ರಹ್ಮವಿದ್ಯೆಯನ್ನೆಲ್ಲಾ ಉಪದೇಶಿಸಿ, ಆದರ ಅನುಷ್ಠಾನ, ಪಠನ, ಶ್ರವಣ ಮೊದಲಾದವುಗಳಿಗೆಲ್ಲಾ ಫಲವನ್ನೂ ಹೇಳಿ ಉಪದೇಶವನ್ನು ಪೂರೈಸುವ ಕಾಲದಲ್ಲಿ, ಅರ್ಜುನನನ್ನು ಕುರಿತು ಶ್ರೀ ಕೃಷ್ಣಭಗವಾನರವರು **ಕೇಳುತ್ತಾರೇನೆಂದರೆ:**—ಓ ಪಾರ್ಥನೇ! ಐಕಾಗ್ರ್ಯಮನಸ್ಸಿನಿಂದ ನಾನು ಹೇಳಿದ ಉಪದೇಶವನ್ನೆಲ್ಲಾ ಗ್ರಹಿಸಿದೆಯಾ, ನೀನು ಯುದ್ಧಮಾಡುವದಿಲ್ಲವೆಂದು, ಯಾವ ದೇಹವೇ ಆತ್ಮಾ ಎಂಬ ಅಜ್ಞಾನವೇನು; ಅದರಿಂದುಂಟಾಗುವ ಅಧರ್ಮಪ್ರಾಪ್ತಿ ಮೊದಲಾದ ಭ್ರಮವೇನು; ಇವೆಲ್ಲಾ

**ತೊಲಗಿತೇ?** ಮೋಕ್ಷೋಪಾಯಕ್ಕೆ ಸಹಕಾರಿಯಾಗಿರುವ, ಕ್ಷತ್ರಿಯನ ಇತಿಕರ್ತವ್ಯತೆಯಲ್ಲಿ ಸೇರಿದ, ದುಷ್ಟನಿಗ್ರಹ ಶಿಷ್ಟಪರಿಪಾಲನೆಗೆ ಅವಶ್ಯಕವಾದ, ಈ ಬಿಟ್ಟಿರುವ ಯುದ್ಧವನ್ನು ಪುನಃ ಆರಂಭಿಸುತ್ತೀಯಾ ಎಂದು ಪ್ರಶ್ನಿಸುತ್ತಾರೆ.—ಬಾಂಧವ್ಯವನ್ನೂ, ತನ್ಮೂಲಕವಾಗಿ ಉಂಟಾಗಿರುವ ವಿಶೇಷ ಪ್ರೀತಿಯನ್ನೂ ಉದ್ದೇಶಿಸಿ, ಓ ಪೃಥುವಿನ ಪುತ್ರನೇ ಎಂದು ಪಾರ್ಥ ಎಂಬ ಸಂಬೋಧನೆಯು. ಪುನಃ **ಧನಂಜಯನೇ** ಎಂದು ಎರಡು ಸಲ ಸಂಬೋಧನೆಯು ವಿಶೇಷ ಕೃಪೆಯನ್ನು ಸೂಚಿಸುತ್ತದೆ. **ಹೇ ಪಾರ್ಥ**-ಓ ಕುನ್ತೀಪುತ್ರನೇ, **ತ್ವಯಾ**-ಪ್ರಾಣಪ್ರಿಯನಾದ ನಿನ್ನಿಂದ, **ಏಕಾಗ್ರೇಣ ಚೇತಸಾ**-ಏಕಾಗ್ರಮನಸ್ಸಿನಿಂದ, ಉಪದೇಶವನ್ನು ವಿಮರ್ಶಿಸಿ ಅನುಷ್ಠಾನಕ್ಕೆ ತರುವ ಹಾಗೆ ಸಾವಧಾನದಿಂದ, **ಏತತ್** - ಈ ಗುಹ್ಯತಮವಾದ ಶಾಸ್ತ್ರಾರ್ಥವು **ಶ್ರುತಂ ಕಚ್ಚಿತ್**-ಕೇಳಲ್ಪಟ್ಟಿತೇ ಏನು ? **ಹೇ ಧನಂಜಯ**-ಓ ಅರ್ಜುನನೇ, **ತೇ**-ಅಜ್ಞಾನದಿಂದುಂಟಾದ ಸಮ್ಮೋಹದ ನಿವೃತ್ತಿಗಾಗಿ **ಶಾಧಿಮಾಂ** ಎಂದು ಶರಣಾಗತನಾದ ನಿನ್ನ **ಅಜ್ಞಾನ ಸಂಮೋಹಃ**-ದೇಹವೇ ಆತ್ಮಾ ಎಂದು ಭಾವಿಸಿ, ಈಗ ಎದುರು ಕಕ್ಷಿಯಲ್ಲಿರುವವರು ನನಗೆ ಗುರುವು, ನನಗೆ ಬಂಧುವು ಎಂಬ ಅಜ್ಞಾನದಿಂದ ಉಂಟಾದ ವಿಶೇಷ ಭ್ರಮವು, **ಪ್ರಣಷ್ಟಃ ಕಚ್ಚಿತ್**-ಸಂಪೂರ್ಣವಾಗಿ ನಷ್ಟವಾಯಿತೇ ಏನು ? ಇಲ್ಲಿ ಶ್ರೀ ಕೃಷ್ಣಭಗವಾನ್ ಸರ್ವಜ್ಞರು, ಅರ್ಜುನನ ಅಜ್ಞಾನ ಮತ್ತು ಭ್ರಮಸಹತೊಲಗುವ ಹಾಗೆ ಮಾಡುವ ಶಕ್ತಿಯು ತಮ್ಮಲ್ಲಿಲ್ಲವೇ? ಆದರೂ ಏತಕ್ಕೆ ಕೇಳಿದರೆಂದರೆ ಲೋಕವಿಡಂಬನಾರ್ಥವಾಗಿ ಎಂದು ತಿಳಿಯತಕ್ಕದ್ದು. ಆತನು ಮಾಡುವ ವ್ಯಾಪಾರವು ಆತನ ಪ್ರಥಮ ಸಙ್ಕಲ್ಪಕ್ಕೆ ಅಧೀನವಾಗಿರುವದರಿಂದ ಅದನ್ನು ಸರ್ವೇಶ್ವರನು ಅನುಮೋದಿಸಿ, ಹೀಗೆ ಆತನ ಸಙ್ಕಲ್ಪವೂ ಈತನ ಪ್ರೇರಣವೂ ಎರಡೂ ಸೇರಿದರೇನೇ ಚೇತನನ ಪ್ರವೃತ್ತಿಯುಂಟೆಂದು ಹಿಂದೆ ೧೪ ನೆಯ ಶ್ಲೋಕದಲ್ಲಿ ಹೇಳಿರುವ ಪ್ರಕಾರವಾದುದರಿಂದ, ಅರ್ಜುನನು “ **ಕರಿಷ್ಯೇ ವಚನಂ ತವ** ” ಎಂದು ಸಙ್ಕಲ್ಪಿಸಬೇಕೆಂಬ ಆಶಯದಿಂದ ಪ್ರಶ್ನೆಯೆಂದು ಭಾವಿಸತಕ್ಕದ್ದು ಅರ್ಜುನನಿಗೆ **ಅಜ್ಞಾನ ಸಮ್ಮೋಹವು** ಜೀವಾತ್ಮ ಯಾಥಾತ್ಮ್ಯವಿಷಯದಲ್ಲಿ ಮಾತ್ರವೇ ಅಲ್ಲವು. ತತ್ವತ್ರಯಗಳಾದ ಅಚಿತ್ತು, ಚಿತ್ತು ಈಶ್ವರ ಈ ಮೂರುತತ್ವಗಳ ಯಾಥಾತ್ಮ್ಯವು ಲೋಕದಲ್ಲಿ ಬಹುಜನರಿಗೆ ತಿಳಿಯದೇ ಇರುವ ಹಾಗೆ, ಅರ್ಜುನನಿಗೂ ಇತ್ತು, ಎಂದು ಅರ್ಜುನನ ವಿಡಂಬನೆಯು ಆತನ ಪ್ರಶ್ನೆಗಳಿಂದ ತೋರಿಬರುತ್ತದೆ ಸರ್ವೇಶ್ವರನ ವಿಭೂತಿಯ ಮಾಹಾತ್ಮ್ಯೆಯು ವಿಷಯದಲ್ಲೂ ಅಜ್ಞಾನವಿತ್ತು. ಅದೂ ಅಲ್ಲದೆ ಸರ್ವೇಶ್ವರನು ವಿಶದವಾಗಿ ಹೇಳುತ್ತಿದ್ದರೂ ಉಪಾಯವಾದ ಭಕ್ತಿಯೋಗಕ್ಕೆ ಸಾಧನವು ಕರ್ಮಯೋಗವೇ ಅಥವಾ ಅದೇಸ್ವತಃ ಉಪಾಯವಾಗಿ ಯಾವುದಾದರೂಒಂದನ್ನು ಅವಲಂಬಿಸಬಹುದೇ? ಉತ್ತಮೋಪಾಯವು ಪರಮಾತ್ಮೋಪಾಸನೆಯೇ ಅಥವಾ ಬ್ರಹ್ಮಾತ್ಮಕ ಜೀವಾತ್ಮೋಪಾಸನೆಯೇ ? ವಿಹಿತಕರ್ಮಪರಿತ್ಯಾಗವು ಸಾಧ್ಯವೇ ಸಾಧ್ಯವಲ್ಲವೇ ? ಉಪಾಸನಕ್ಕೆ ಶಕ್ತಿಯಿಲ್ಲದವರಿಗೆ ಬೇರೆ ಉಪಾಯವುಂಟೋ ಇಲ್ಲವೋ ? ಇತ್ಯಾದ್ಯನೇಕ ವಿಷಯಗಳಲ್ಲಿ ಸರಿಯಾದ ಜ್ಞಾನವಿಲ್ಲದೆ ಭ್ರಮಜ್ಞಾನಯುಕ್ತನಾಗಿರುವ ಹಾಗೆ ಲೋಕೋಪಕಾರಕ್ಕಾಗಿ ನಟಿಸಿರುತ್ತಾನೆ. ಇಂತಹ ಸಮಸ್ತ ಅಜ್ಞಾನಗಳಿಂದುಂಟಾಗುವ ಭ್ರಮದ ನಿವೃತ್ತಿಯು ಉಂಟಾಗುವಹಾಗೆ ಸರ್ವೇಶ್ವರನು ಇಲ್ಲಿ ಉಪದೇಶಿಸಿರುತ್ತಾನೆಂಬ ಭಾವವೂ, ಅಂತಹ ಉಪದೇಶವನ್ನೆಲ್ಲಾ ಮೊದಲು ಒಂಭತ್ತು ಅಧ್ಯಾಯಗಳಲ್ಲಿ ಹೇಳಿ ಮುಗಿಸಿ, ಪುನಃ ಆತನ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುವ ಹಾಗೆ ಇನ್ನು ಒಂಭತ್ತು ಅಧ್ಯಾಯಗಳಿಂದ ಉಪಪಾದನೆಯಿಂದ ವಿಸ್ತರಿಸಿ ಹೇಳುವದರ ಮೂಲಕ ಭಗವದುಪದೇಶವು ಸರ್ವಭ್ರಮ ನಿವಾರಕವೆಂಬ ಭಾವವೂ ಅವು ಅರ್ಜುನನ ಶ್ರೋತೃಪಥಕ್ಕೆ ನಿರರ್ಥಕವಾಗಿ ಬೀಳಲಿಲ್ಲವೆಂಬ ಭಾವವೂ, ಇವೆಲ್ಲವೂ ವ್ಯಕ್ತಪಡುವದಕ್ಕಾಗಿ ಭಗವಂತನ ಪ್ರಶ್ನೆಯೆಂದು ಭಾವಿಸತಕ್ಕದ್ದು. ಇಲ್ಲಿ ಗುರು

ವಾದವನೂ ಕೂಡ ತನ್ನ ಶಿಷ್ಯನ ಮನಸ್ಸು ಚನ್ನಾಗಿ ಗ್ರಹಿಸುವಹಾಗೆ ಮೊದಲು ಸಙ್ಗ್ರಹವಾಗಿಯೂ ಅನಂತರ ವಿಸ್ತರಿಸಿಯೂ ಉಪದೇಶಿಸಿ, ಆತನು ಬ್ರಹ್ಮವಿತ್ತಾದನೇ, ಇಲ್ಲವೇ ; ಎಂಬುದನ್ನು ಪ್ರಶ್ನಿಸಿ ತಿಳಿದು, ಹಾಗೆ ಚನ್ನಾಗಿ ತಿಳಿಯದಿದ್ದರೆ ಪುನಃ ಪುನಃ **"ಚೋದಯತೀವ ಹೃಷ್ಟಃ"** ಎಂಬಲ್ಲಿ ಹೇಳಿರುವಹಾಗೆ ಬೇಸರಗೊಳ್ಳದೆ ಪುನಃ ಪುನಃ ಸಂತೋಷ ಚಿತ್ತದಿಂದುಪದೇಶಿಸತಕ್ಕದೆಂಬುದು ಪ್ರದರ್ಶಿಸಲ್ಪಟ್ಟಿತು ಶಿಷ್ಯನೂ ಸಹ ತನಗಿರುವ ಸಂಶಯಗಳೆಲ್ಲಾ ತೊಲಗುವಹಾಗೆ ಏಕಾಂತಮನಸ್ಕನಾಗಿ ಸಾವಧಾನದಿಂದ ಗ್ರಹಿಸತಕ್ಕದ್ದೆಂಬುದೂ, ಹೀಗೆ ಗುರುಶಿಷ್ಯ ಕ್ರಮವು ಈ ಶ್ಲೋಕದಿಂದ ಏರ್ಪಟ್ಟಿತು. ಸರ್ವೇಶ್ವರನು ಹೇ ಪಾರ್ಥ, ಧನಂಜಯ ಇತ್ಯಾದಿ ಸಂಬೋಧನೆಗಳಿಂದ ತನಗೆ ಅರ್ಜುನನಲ್ಲಿರುವ ಪ್ರೀತ್ಯತಿಶಯವನ್ನು ಪ್ರಕಟಿಸಿದಹಾಗೆ, ಗುರುವು ಶಿಷ್ಯನಲ್ಲಿ ಪರಮದಯಾಳುತ್ವವನ್ನೂ, ಶಿಷ್ಯನು ಸರ್ವೇಶ್ವರನಲ್ಲಿರುವಷ್ಟು ಭಕ್ತಿಯನ್ನೂ ತನ್ನ ಗುರುವಿನಲ್ಲಿ ತೋರ್ಪಡಿಸತಕ್ಕದ್ದೆಂಬ ಭಾವವೂ ಸೂಚಿತವು. **ಕಿಂ** ಶಬ್ದಕ್ಕಿಂತ ಕಚ್ಚಿಚ್ಛಬ್ದವು ಪ್ರಶ್ನಿಸುವದರಲ್ಲಿರುವ ಅನುರಾಗವ್ಯಂಜಕವು. ಸಾಧಾರಣವಾಗಿ ಕುಶಲ ಪ್ರಶ್ನೆಯಲ್ಲಿಕಚ್ಚಿಚ್ಛಬ್ದವನ್ನು ಪ್ರಯೋಗಿಸುವ ವಾಡಿಕೆಯನ್ನು ರಾಮಾಯಣಾದಿಗಳಲ್ಲಿ ಕಂಡಿರುವೆವು. **ಪ್ರಣಷ್ಟಃ** ಎಂಬಲ್ಲಿರುವ ಉಪಸರ್ಗದಿಂದ ಅಜ್ಞಾನದಿಂದುಂಟಾದ ಈ ಸಮ್ಮೋಹವು ಹೋಯಿತು ಎಂದು ದಾಕ್ಷಿಣ್ಯಕ್ಕಾಗಿಗುರುವು ಶಿಷ್ಯನನ್ನು ಕುರಿತು ಕೇಳುತ್ತಾನಲ್ಲಾ ಎಂದು ಒಪ್ಪತಕ್ಕದ್ದಲ್ಲವು ನಿಶ್ಚಯವಾಗಿಯೂ ನಿನ್ನ ಮನಸ್ಸಿನ ಸರ್ವಸಂಶಯ ವಿಪರ್ಯಯರೂಪ ಕಶ್ಮಲವೆಲ್ಲಾ ಸಂಪೂರ್ಣವಾಗಿ ತೊಲಗಿತೋ ಇಲ್ಲವೋ ಹೇಳು ಎಂಬ ಭಾವವು ತೋರಿಬರುತ್ತದೆ ಪ್ರಕರ್ಷೇಣ ನಷ್ಟವಾಯಿತೇ ಹೇಳು, ದಾಕ್ಷಿಣ್ಯವೇನೂ ಬೇಡ ಎಂಬುದು ವ್ಯಕ್ತವು ; ಸ್ಕೂಲಿನಲ್ಲಿ ಉಪಾಧ್ಯಾಯನು ತನ್ನ ಉಪದೇಶವನ್ನು ಚನ್ನಾಗಿ ಗಮನಿಸದ ಶಿಷ್ಯನನ್ನು ಚನ್ನಾಗಿ ತಿಳಿದಿಯಾ ? ಸಂಶಯವು ಹೋಯಿತೋ ? ಎಂದು ಕೇಳಿದರೆ, ಆತನು ದಾಕ್ಷಿಣ್ಯಕ್ಕಾಗಿ ತಿಳಿಯಿತು ಎಂದು ಹೇಳಿದಹಾಗೆ ಹೇಳದೆ, ಸಂಪೂರ್ಣವಾಗಿ ಮೋಹವು ನಷ್ಟವಾಯಿತೇ ಹೇಗೆ. ತಿಳಿಸು ಎಂಬುದು ಅಭಿಪ್ರಾಯವು.

ಈ ಶ್ಲೋಕದಲ್ಲಿ ಇನ್ನೊಂದು ಆಚಾರ್ಯಕೃತ್ಯವೂ ಉಪದೇಶಿಸಲ್ಪಟ್ಟಿತು. ಇಂತಹ ಬ್ರಹ್ಮವಿದ್ಯಾರೂಪವಾದ ಉಪದೇಶವನ್ನು ಮಾಡಿದನಂತರ ವಿಷಯವೆಲ್ಲಾ ಚೆನ್ನಾಗಿ ಅವಗಾಹನೆಗೆ ಬಂತೇ ಎಂದು ಶಿಷ್ಯನನ್ನೂ ಪ್ರಶ್ನಿಸಿ, ಪರೀಕ್ಷಿಸಿ, ಚನ್ನಾಗಿ ತಿಳಿಯದಿದ್ದ ಪಕ್ಷದಲ್ಲಿ ಮನಸ್ಸು ಹಿಡಿಯುವಹಾಗೆ ಪುನಃ ಇನ್ನೊಂದು ವಿಧವಾಗಿ ಉಪದೇಶಿಸತಕ್ಕದ್ದು ಎಂಬ ಭಾವವು ಸೂಚಿತವು. ಅರ್ಜುನನೂ ಮಧ್ಯೆ ಮಧ್ಯೆ ತನಗೆ ಚನ್ನಾಗಿ ತಿಳಿಯದಂಶವನ್ನು ಕೇಳಿ ತಿಳಿದಿರುತ್ತಾನೆ. ಈ ಕೊನೆಯಲ್ಲೂಹಾಗೆಯೇ **ಕಚ್ಚಿದಜ್ಞಾನ ಸಂಮೋಹಃ ಪ್ರಣಷ್ಟಃ** ಎಂದು ಕೇಳಿದನಂತರವೂ ಸಂದೇಹವನ್ನು ತೋರ್ಪಡಿಸಿದ್ದ ಪಕ್ಷದಲ್ಲಿ ಕರುಣಾಳುವಾದ ಶ್ರೀ ಕೃಷ್ಣಭಗವಾನರವರು ಆ ಸಂದೇಹವನ್ನು ಹೋಗಲಾಡಿಸಲು ಸಿದ್ಧವಾಗಿದ್ದರು. ಮುಂದೇ **ನಷ್ಟೋಮೋಹಃ ಸ್ಮೃತಿರ್ಲಬ್ಧಾ** ಎಂದು ಹೇಳುವದರಿಂದ ಅಲ್ಲಿಗೆ ಉಪದೇಶವನ್ನು ಮುಗಿಸಿದರು. ಹಾಗೆಯೇ ಗುರುವೂಕೂಡ ಶಿಷ್ಯನ ಪ್ರಶ್ನೆಗೆ ಕೋಪಿಸದೆ ಶಿಷ್ಯನು ತಿಳಿಯುವ ಹಾಗೆ ಪುನಃ ಪುನಃ ಉಪದೇಶಿಸತಕ್ಕದ್ದೆಂಬುದನ್ನು ಸಹ ಊಹಿಸಬಹುದು. ಅನೇಕ ಮಹನೀಯರು ತಿಳಿಯದ ಶಿಷ್ಯನು ಪೂರ್ವಪಕ್ಷವನ್ನು ಮಾಡಿದರೆ ಅದಕ್ಕೆ ಕೋಪಿಸಿ, ನಿಂದಿಸುವರು. ಅಂತವರು ಗುರುಸ್ಥಾನಕ್ಕೆ ಅರ್ಹತೆಯನ್ನು ಇನ್ನೂ ಸಂಪಾದಿಸಲಿಲ್ಲವೆಂಬುದು ವ್ಯಕ್ತವು. ||೭೨||

**ಭಾಷ್ಯಾರ್ಥವು :**—ಸರ್ವೇಶ್ವರನು ಸರ್ವಜ್ಞನಾಗಿ ಅರ್ಜುನನು ಹೇಗೆ ಉಪದೇಶವನ್ನು ಗ್ರಹಿಸಿದನೆಂಬುದು ತನಗೆ ತಿಳಿದಿದ್ದರೂ, ತಿಳಿಯದವನಹಾಗೆ ತನ್ನ ಉಪದೇಶವು ಸಾಫಲ್ಯವನ್ನು ಹೊಂದಿತೇ ಎಂದು ತಿಳಿಯಬೇಕೆಂಬ ಕುತೂಹಲವುಳ್ಳವನಾಗಿ ಪ್ರಶ್ನಿಸುತ್ತಾನೆ :—

**ಭಾ. ಮಯಾ ಕಥಿತ ಮೇತತ್ಪಾರ್ಥ ತ್ವಯಾ ವಹಿತೇನ ಚೇತಸಾ ಕಚ್ಚಿಚ್ಛ್ರುತಮ್? ತವಾಜ್ಞಾನ ಸಮ್ಮೋಹಃ ಕಚ್ಚಿತ್ಪ್ರಣಷ್ಟಃ, ಯೇನಾಜ್ಞಾನೇನ ಮೂಢೋನ ಯೋತ್ಸ್ಯಾಮೀತ್ಯುಕ್ತವಾನ್? ॥೭೨॥**

**ಮಯಾ**–ಧರ್ಮಸಂಸ್ಥಾಪನಕ್ಕಾಗಿ ನಿನ್ನನ್ನು ವ್ಯಾಜೀಕರಿಸಿ ಉಪದೇಶಿಸಬೇಕೆಂಬ ಕುತೂಹಲವುಳ್ಳ ನನ್ನಿಂದ, **ಕಥಿತಂ**–ಉಪದೇಶಿಸಲ್ಪಟ್ಟ, **ಏತತ್**-ಈ ಗುಹ್ಯತಮವಾಗಿ ಉಪನಿಷತ್ಸಾರಭೂತಾರ್ಥವು, **ಹೇ ಪಾರ್ಥ**–ಓ ಕುಂತೀಪುತ್ರನೇ, **ತ್ವಯಾ**-ನನಗೆ ಅತ್ಯರ್ಥ ಪ್ರಿಯನಾದ ನಿನ್ನಿಂದ, **ಅವಹಿತೇನ ಚೇತಸಾ**-ಸಮಾಹಿತ ಮನಸ್ಸಿನಿಂದ ಎಂದರೆ ಚಿತ್ತೈಕಾಗ್ರತೆಯಿಂದ, **ಕಚ್ಚಿಚ್ಛ್ರುತಮ್**-ಕೇಳಲ್ಪಟ್ಟಿತೇ ಏನು? **ತವ**-ನಿನ್ನ ಎಂದರೆ ಹಿಂದೆ ನಿನಗಿದ್ದ, **ಅಜ್ಞಾನ ಸಮ್ಮೋಹಃ**-ಆ ಅಜ್ಞಾನಕ್ಕೆ ಹೇತುವಾಗಿದ್ದ ವಿಶೇಷಭ್ರಮೆಯು, ಬಂಧುಗಳನ್ನೂ ಗುರುಗಳನ್ನೂ ಕೊಲ್ಲುವದು ನ್ಯಾಯವೇ ಎಂದು ಯುದ್ಧಮಾಡುವದಿಲ್ಲವೆಂದು ತಿಳಿಸಿದ ಭ್ರಮಜ್ಞಾನವು, **ಯೇನ ಅಜ್ಞಾನೇನ**-ಯಾವ ಅಜ್ಞಾನದಿಂದ, **ಮೂಢಃ**-ತಿಳುವಳಿಕೆಯಿಲ್ಲದವನಾಗಿ, **ನಯೋತ್ಸ್ಯಾಮಿ** ನಾನು ಯುದ್ಧಮಾಡುವದಿಲ್ಲವು, **ಇತ್ಯುಕ್ತವಾನ್**-ಎಂದು ಹೇಳಿದವನಾದೆಯೋ, ಅಂತಹ ಸಮ್ಮೋಹವು, **ಪ್ರಣಷ್ಟಃ ಕಚ್ಚಿತ್**-ಸಂಪೂರ್ಣವಾಗಿ ನಾಶವಾಯಿತೇ ಏನು? ಎಂದು ಶ್ರೀ ಕೃಷ್ಣಭಗವಾನರವರು ಪರಮ ವಿಶ್ವಾಸದಿಂದ ಕುಶಲಪ್ರಶ್ನೆಯನ್ನು ಮಾಡುವ ತೆರದಿ ಕೇಳುತ್ತಾರೆ. ಮೊದಲು ಆ ಜ್ಞಾನವಿತ್ತು ಅದು ಯಾವುದೆಂದರೆ ದೇಹದಿಂದಿರುವ ಈ ಆತ್ಮರುಗಳು ತನಗೆ ಬಂಧುವು, ಗುರುವು ಇತ್ಯಾದಿ, ಆತ್ಮಾವಿಗೆ ಈಗ ಪ್ರಾಪ್ತವಾಗಿರುವ ದೇಹವು ಉಪಾಧಿನಿಮಿತ್ತವಾದುದು ಎಂಬ ಜ್ಞಾನವಿಲ್ಲದೆ, ಇವರು ಯಾವಾಗಲೂ ತನಗೆ ಬಂಧುವು, ಗುರುವು ಎಂಬ ಅಜ್ಞಾನವು; ಅದರಿಂದುಂಟಾಗುವದು ಭ್ರಮವು; ಹೇಗೆ ಎಂದರೆ ದುಷ್ಟನಿಗ್ರಹವು ತನ್ಮೂಲಕ ಶಿಷ್ಟಪರಿಪಾಲನೆಯು ಕ್ಷತ್ರಿಯನಾದ ತನಗೆ ವಿಹಿತವಾದುದು; ಅಜ್ಞಾನದಿಂದ ಅದನ್ನು ಅಧರ್ಮವೆಂದು ಭಾವಿಸಿದುದರಿಂದ ತಾನು ಅಧರ್ಮಿಯಾಗುವನೆಂಬ ಭ್ರಮವು; ಈ ಭ್ರಮದಿಂದ ನಾನು ಯುದ್ಧವನ್ನು ಮಾಡುವದಿಲ್ಲವೆಂದು ಧನುಸ್ಸನ್ನು ಕೆಳಗೆ ಹಾಕಿದುದು ಎಂಬ ಭಾವವು. ಇಂತಹ ಅಜ್ಞಾನವೂ ಅದರಿಂದುಂಟಾದ ಸಮ್ಮೋಹವೂ ತೊಲಗಿದವೇ? ವಿವೇಕಜ್ಞಾನ ಉಂಟಾಯಿತೇ? ಎಂಬ ಭಾವವು. ನಾನು ಹೇಳಿದುದನ್ನೆಲ್ಲಾ ಪರಮ ಹಿತೋಪದೇಶವೆಂದು ತಿಳಿದು ಜ್ಞಾಪಕದಲ್ಲೂ ಇಟ್ಟಿರುತ್ತೀಯಾ? ಎಂಬ ಭಾವವೂ ಸಹ ಸೂಚಿತವು. ಅಧರ್ಮನಿರ್ಮೂಲನಕ್ಕಾಗಿಯಲ್ಲವೇ ಕ್ಷತ್ರಿಯನು ಧನುಸ್ಸನ್ನು ಹಿಡಿದಿರುವದು? ಅಧರ್ಮ ಮೂಲೋತ್ಪಾಟನವು ಕ್ಷತ್ರಿಯನಿಗೆ ಇತಿಕರ್ತವ್ಯತೆಯಲ್ಲಿ ಸೇರಿದುದೇ? ಅದನ್ನು ತ್ಯಜಿಸಬಹುದೋ? ಇತ್ಯಾದಿ ಅಭಿಪ್ರಾಯಗಳೆಲ್ಲಾ ಸೂಚಿತವು. ಇಲ್ಲಿ **ಶ್ರುತಂ ಕಚ್ಚಿತ್**-ಎಂಬ ಪ್ರಶ್ನೆಯಲ್ಲಿ ಸಂಶಯ ವಿಪರ್ಯಯಗಳು ಯಾವುದೂ ಇಲ್ಲದೆ ವಿಮರ್ಶಿಸಿ ತಿಳಿದೆಯಾ? ಎಂಬರ್ಥದಲ್ಲಿ **ಶ್ರುತಂ**-ಎಂಬ ಶಬ್ದಪ್ರಯೋಗವು. ಬರಿಕೇಳುವದು ಮಾತ್ರವೇ ಅಲ್ಲದೆ ತದನುಗುಣವಾದ ಪ್ರವೃತ್ತಿಗೆ ಹೇತುವಾಗಿರತಕ್ಕದ್ದು ಆ ಕೇಳೋಣವು, ಎಂಬ ಭಾವವೂ ಸೂಚಿತವು; ಏತಕ್ಕೆಂದರೆ ಪ್ರಶ್ನೆಯ ಅಭಿಪ್ರಾಯವು, ತನ್ನ ಹಿತೋಪದೇಶವು ನಿರರ್ಥಕವಾಗಿ ಈತನ ಶ್ರುತಿಪಥಕ್ಕೇನಾದರೂ ಬಿತ್ತೋ ಎಂಬ ಆಶಯದಿಂದಲ್ಲವೇ? ಆದುದರಿಂದಲೇ ಮೂಲದಲ್ಲಿ **ಏಕಾಗ್ರೇಣ ಚೇತಸಾ** ಎಂದೂ, ವ್ಯಾಖ್ಯಾನದಲ್ಲಿ **ಅವಹಿತೇನಾ ಚೇತಸಾ** ಎಂದೂ ಪ್ರಯೋಗವು.

ಅರ್ಜುನ ಉವಾಚ—

**ಮೂ ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥೭೩॥**

**ಮೂಲಕ್ಕೆ ಅರ್ಥವು:**—ಅರ್ಜುನನು ಈ ಮೇಲಿನ ಪ್ರಶ್ನೆಗಳಿಗೆ ಉತ್ತರವನ್ನು ಹೇಳುತ್ತಾನೆ, ಅರ್ಜುನನು ಮಹಾಪ್ರಾಜ್ಞನು. ಸರ್ವಸಂಶಯಗಳೆಲ್ಲಾ ತೊಲಗುವ ಹಾಗೆ **ಪರಿಪ್ರಶ್ನೇನ ಸೇವಯಾ** ಎಂಬಲ್ಲಿ ಹೇಳಿರುವಹಾಗೆ ಕೇಳಿ ತಿಳಿದವನಾದ ಪ್ರಯುಕ್ತ ಭಗವಂತನ ಅನುಗ್ರಹದಿಂದ ಸಂಶಯವಿಪರ್ಯಯಗಳೆಲ್ಲಾ ಸಂಪೂರ್ಣವಾಗಿ ತೊಲಗಿದವು; ಯಥಾರ್ಥ ಜ್ಞಾನವು ಲಭಿಸಿತು ಎಂದು ಹೇಳಿ, ನಿನ್ನ ಸಾರಭೂತವಾದ ಉಪದೇಶವನ್ನು ಕೇಳಿ ಅಲ್ಲಿಗೇನೇ ನಿಲ್ಲಿಸದೆ, ತದನುಗುಣವಾಗಿ ಅನುಷ್ಠಿಸುವೆನೆಂದು ಪ್ರತಿಜ್ಞೆಯನ್ನು ಮಾಡುತ್ತಾನೆ. **ಹೇ ಅಚ್ಯುತ**-ಓ ನಾಶರಹಿತನೇ, ಈ ಅರ್ಥಕ್ಕಿಂತ ಈ ಪ್ರಕರಣಕ್ಕೆ ಅನುಗುಣವಾದ ಅರ್ಥವೇನೆಂದರೆ **ಚ್ಯುತಃ**-ಪ್ರಪನ್ನರೂಪಗಳಿಂದ ತಪ್ಪಿಸಿಕೊಂಡು ಹೋಗುವನು **ನ**-ಅಲ್ಲವು, ಆದುದರಿಂದ **ಅಚ್ಯುತನು**; ಇದೇ ಗೀತೆಯಲ್ಲೇ "**ತಸ್ಯಾಹಂ ನ ಪ್ರಣಶ್ಯಾಮಿ**" (ಗೀ. ) ಎಂದೂ, **ಮಿತ್ರಭಾವೇನ ಸಂಪ್ರಾಪ್ತಂ ನ ತ್ಯಜೇಯಂ ಕಥಂಚನ** (ರಾ. ಯುದ್ಧ ೧೮.೩) ಎಂದೂ ಶ್ರೀಕೃಷ್ಣಭಗವಾನ್ ಆಗಿಯೂ ಶ್ರೀ ರಾಮನಾಗಿಯೂ ಹೇಳಿಕೊಂಡಿರುವದರಿಂದ, ನಮ್ಮಂತಹ ಭಕ್ತರನ್ನು ತ್ಯಜಿಸದ ಓ ಶ್ರೀಕೃಷ್ಣನೇ, **ಮಯಾ**-ಅಜ್ಞಾನಾಂಧಕಾರದಲ್ಲಿ ಕಣ್ಣುಕಾಣದೆ ತೊಳಲುತ್ತಿದ್ದ ನನ್ನಿಂದ, **ತ್ವತ್ಪ್ರಸಾದಾತ್**-ನಿಮ್ಮ ಅನುಗ್ರಹದಿಂದ, ತನಗೆ ಮೋಹವಿತ್ತೆಂದೂ ಅದು ಹೋಯಿತೆಂದೂ **ನಷ್ಟೋ ಮೋಹಃ**-ಮೋಹವು ಕಳೆಯಿತು, ಮೋಹವು ಯಾವುದು ಎಂದರೆ ದೇಹವೇ ಆತ್ಮಾ ಎಂಬ ಅಜ್ಞಾನದಿಂದ ಇವರು ನನಗೆ ಬಂಧುಗಳು, ಗುರುಗಳು, ಆದುದರಿಂದ ಅವರನ್ನು ಯುದ್ಧದಲ್ಲಿ ಕೊಲ್ಲುವದು ಅಧರ್ಮವೆಂಬ ಮೋಹಜ್ಞಾನವು ತೊಲಗಿತು, ಕ್ಷತ್ರಿಯನ ಇತಿಕರ್ತವ್ಯತೆಯು ದುಷ್ಟನಿಗ್ರಹ ಶಿಷ್ಟಪರಿಪಾಲನವು, ಇದಕ್ಕಾಗಿ ಆತನು ಧನುಸ್ಸನ್ನು ಹಿಡಿದಿರುವನೆಂಬ ಸರಿಯಾದ ಜ್ಞಾನವು ಉತ್ಪನ್ನವಾಯಿತೆಂಬ ಭಾವವು. **ಸ್ಮೃತಿರ್ಲಬ್ಧಾ**-ಶಾಸ್ತ್ರಜನ್ಯ ವಿವೇಕಜನ್ಯಜ್ಞಾನಗಳ ಸ್ಮೃತಿಯು ಪ್ರಾಪ್ತವಾಯಿತು; ಅದು ಎಂತಾದ್ದೆಂದರೆ–ತನಗೆ ಸಂಬಂಧಿಸಿಕೊಂಡಿರುವ ದೇಹರೂಪ ಪ್ರಕೃತಿಯ ಮತ್ತು ಚಿತ್ತಾದ ತನ್ನ, ಮತ್ತು ಪರಮಪುರುಷನ ಹೀಗೆ ತತ್ವತ್ರಯಗಳ ಸ್ವರೂಪಸ್ವಭಾವಗಳು ಯಾವುವು? ತನಗೆ ಪ್ರಾಪ್ತವಾಗಿರುವ ಹೇಯವಾದ ದೇಹದ ಸಂಬಂಧಕ್ಕೆ ಕಾರಣವೇನು? ಅದನ್ನು ತಾನು ಹೇಗೆ ಉಪಯೋಗಿಸತಕ್ಕದ್ದು? ಈ ಹೇಯಸಂಬಂಧದ ಬಿಡುಗಡೆಯು ಹೇಗೆ? ಪರಮಪುರುಷನಿಗೂ ತನಗೂ ಸಂಬಂಧವೇನು? ತಾನು ಆತನಿಗೆ ದಾಸಭೂತನಾಗಿ ಅಸ್ವತಂತ್ರನಾಗಿ ದೀನನಾಗಿರುವಾಗ, ತನ್ನ ರಕ್ಷಣೆಯು ಹೇಗೆ? ಅದಕ್ಕಾಗಿ ತಾನು ಏನನ್ನು ಮಾಡತಕ್ಕದ್ದು? ಸಾಕ್ಷಾದುಪಾಯವಾವುದು? ಅದಕ್ಕೆ ಸಾಧನಗಳಾವುವು? ಈಗ ಒದಗಿರುವ ಯುದ್ಧಕಾರ್ಯವು ಆವಶ್ಯಕವಾಗಿ ಮಾಡಿಯೇ ತೀರಬೇಕೇ? ಮಾಡುವದು ತನ್ನ ನಿಶ್ಶ್ರೇಯಸ್ಸಿಗೆ ಸಾಧನವೇ? ಇವುಗಳನ್ನೆಲ್ಲಾ ನಿಸ್ಸಂಶಯವಾಗಿ ನಿರ್ಹೇತುಕ ಕೃಪಾನಿಧಿಯಾದ ತಮ್ಮಿಂದ ಕೇಳಿ ತಿಳಿದೆನಾದುದರಿಂದ, **ಸ್ಮೃತಿರ್ಲಬ್ಧಾ**-ಯಥಾವತ್ತಾದ ತತ್ವಜ್ಞಾನೋದಯವು ಲಭಿಸಿತು. ಶ್ರೀ ಯತಿವರ್ಯರು ಮುಂದೆ ಅವರ ಭಾಷ್ಯದಲ್ಲಿ ಕಳೆದುಹೋದ ಮೋಹವೆಂತಾದ್ದು, ಪ್ರಾಪ್ತವಾದ ಸ್ಮೃತಿಯು ಎಂತಾದ್ದೆಂದು ವ್ಯಕ್ತವಾಗಿ ವಿಸ್ತರಿಸಿ ಹೇಳುವದರಿಂದ ಇಲ್ಲಿ ಅವುಗಳನ್ನು ಉಪಪಾದಿಸಿ ಹೇಳುವ ಆವಶ್ಯಕವಿಲ್ಲವು. ಹೀಗೆ ಮೋಹವು ತೊಲಗಿ ಸುಜ್ಞಾನವು

ಪ್ರಾಪ್ತವಾದ್ದರಿಂದಲೇ, **ಗತಸಂದೇಹಃ**-ತೊಲಗಿದ ಎಲ್ಲಾ ಸಂದೇಹಗಳುಳ್ಳವನಾಗಿ, **ಸ್ಥಿತೋಸ್ಮಿ**-ಪ್ರತಿಷ್ಠಿತ ಜ್ಞಾನವುಳ್ಳವನಾಗಿರುವದರಿಂದ ಸ್ವಸ್ಥಚಿತ್ತನಾಗಿರುತ್ತೇನೆ. ಯುದ್ಧವನ್ನು ಮಾಡುವದು ಧರ್ಮವೋ ಬಿಡುವದು ಧರ್ಮವೋ ಎಂಬ ಸಂದೇಹವಿತ್ತು. ಅದು ತೊಲಗಿತು. **ಸ್ಥಿತೋಸ್ಮಿ**-ಎಂಬುದರಿಂದ ಜ್ಞಾನವಂತನ ಬಾಳೇ ಬಾಳು; ಇತರರು ಬದುಕಿದ್ದರೂ ವ್ಯರ್ಥವು ಎಂಬ ಭಾವವು ಸೂಚಿತವು; ಏಕೆಂದರೆ ಅಧರ್ಮವು ಅವನಿಗೆ ಧರ್ಮವಾಗುತ್ತದೆ, ಧರ್ಮವು ಅಧರ್ಮವಾಗುತ್ತದೆ. ಆದುದರಿಂದ **ಕರಿಷ್ಯೇವಚನಂತವ**-ಈ ದುಷ್ಟನಿಗ್ರಹವನ್ನು ಅವಶ್ಯಕವಾಗಿ ಮಾಡತಕ್ಕದ್ದೆಂದೂ, ಆದುದರಿಂದ ಯುದ್ಧವು ನನ್ನ ಇತಿ ಕರ್ತವ್ಯತೆಯು ಎಂದು ಏರ್ಪಟ್ಟಿತು; **ಯುಧ್ಯಸ್ವ ವಿಗತಜ್ವರಃ**-ಎಂಬ ತಮ್ಮ ಆಜ್ಞೆಯನ್ನು ನಡೆಸುವೆನು ಎಂಬ ಭಾವವು. **ಕರಿಷ್ಯೇ ವಚನಂ ತವ** ಎಂಬದಾಗಿ ಯಾವಾಗ ತನ್ನ ಸ್ಥಿರಸಙ್ಕಲ್ಪವನ್ನು ಹೇಳಿಕೊಂಡನೋ, ಅಂತಹ ಸ್ಥಿರ ಸಂಕಲ್ಪದ ಸೂಚನಾರ್ಥವಾಗಿ ಬಿಸಾಡಿದ್ದ ಗಾಂಡೀವ ಬತ್ತಳಿಕೆಗಳನ್ನು ಪುನಃ ಧರಿಸಿದನೆಂಬುದನ್ನು ಗ್ರಹಿಸಬಹುದು; ಏಕೆಂದರೆ **ಯತ್ರ ಪಾರ್ಥೋ ಧನುರ್ಧರಃ** ಎಂದು ಕೊನೆಯ ಶ್ಲೋಕದಲ್ಲಿ ಹೇಳಿರುವದರಿಂದ, ಧನುರ್ಧಾರಿಯಾಗಿ ಯುದ್ಧಕ್ಕೆ ಸಿದ್ಧನಾಗಿ ನಿಂತನೆಂಬುದು **ಸೂಚಿತ**ವಾಗುತ್ತದೆ. ಹೀಗೆ ತನ್ನ ದೃಢಸಂಕಲ್ಪವನ್ನು ಸರ್ವೇಶ್ವರನಲ್ಲಿ ಅರಿಕೆಮಾಡಿಕೊಂಡನು. ಇಲ್ಲಿ **ಕರಿಷ್ಯೇ ವಚನಂ ತವ**-ಎಂಬುದರಿಂದ, ಭಗವಂತನಿಗೆ ಅರ್ಜುನನು ಯುದ್ಧಮಾಡುವದರಲ್ಲಿ ಮಾತ್ರವೇ ತಾತ್ಪರ್ಯವಿಲ್ಲವಾದುದರಿಂದ ತನ್ನ ಭಕ್ತನು ತನ್ನನ್ನು ಬಂದು ಸೇರಬೇಕೆಂಬ ಆಶೆಯಿಂದಲೇ ಯಾವಾಗಲೂ ಸರ್ವೇಶ್ವರನು ಇರುತ್ತಾನಾದುದರಿಂದ, ನೀನು ಉಪದೇಶಿಸಿದ ರೀತಿಯಲ್ಲಿ ಕರ್ಮಯೋಗ ಭಕ್ತಿಯೋಗಗಳನ್ನೂ ಅನುಷ್ಠಿಸಿ ನಿನ್ನ ಪಾದಾರವಿಂದವನ್ನು ಬಂದು ಸೇರುವ ಪ್ರಯತ್ನವನ್ನೂ ಮಾಡುವೆನು; ಹಾಗೆ ಕರ್ಮಯೋಗ ಭಕ್ತಿಯೋಗಗಳಿಗೆ ಅಶಕ್ತನೆಂದು ತೋರಿದರೆ, ಕೊನೆಯಲ್ಲಿ ಹೇಳಿದ ಭರನ್ಯಾಸವನ್ನಾಗಲಿ ಅನುಷ್ಠಿಸುವೆನೆಂಬರ್ಥವೂ ಸೂಚಿತವು. ಹೀಗೆ ಅರ್ಜುನನ ಕೈಯಲ್ಲಿ **ಕರಿಷ್ಯೇ ವಚನಂ ತವ**-ಎಂದು ಭಗವಂತನು ಹೇಳಿಸಿದ ಹಾಗೆ, ಈ ತನ್ನ ಗುಹ್ಯತಮಶಾಸ್ತ್ರವನ್ನು ಅಧಿಕರಿಸಿದ ಸರ್ವರೂ ಸಹ **ಕರಿಷ್ಯೇ ವಚನಂ ತವ** - ಎಂದು ಹೇಳಿ ಉಪಾಯಾನುಷ್ಠಾನವನ್ನು ಅನುಷ್ಠಿಸಬೇಕೆಂಬುದೇ **ಭಗವಂತನ ಮುಖ್ಯೋದ್ದೇಶವು.** ಈ ಗೀತಾಶಾಸ್ತ್ರದಲ್ಲಿ ಮುಖ್ಯವಾಗಿ ಹೇಳಲ್ಪಟ್ಟಿದುದು ಪ್ರತಿಯೊಬ್ಬ ಪುರುಷನು ತನ್ನ ಇತಿಕರ್ತವ್ಯತೆಗಳನ್ನು ಚನ್ನಾಗಿ ಅರಿತು ಅರ್ಜುನನು ಯುದ್ಧವನ್ನು ನಡೆಸಿದಹಾಗೆ ನಡೆಸತಕ್ಕದ್ದೆಂಬುದು ಅದರಿಂದ ಪ್ರೀತನಾದ ಕೃಪಾಸಾಗರನು ತಾನೇ ಸಿದ್ಧೋಪಾಯನಾಗಿ ನಿಂತು, ಆತನ ಮೂಲಕ ಗೀತಾ ಚರಮಶ್ಲೋಕದಲ್ಲಿ ಹೇಳಲ್ಪಟ್ಟಹಾಗೆ ಶರಣಾಗತಿಯು ಅಙ್ಗವಾಗಿರುವ ಭಕ್ತಿಯೋಗವನ್ನಾಗಲಿ, ಅಥವಾ ಶರಣಾಗತಿಯು ಅಙ್ಗಿಯಾಗಿರುವ ಭರನ್ಯಾಸವನ್ನಾಗಲಿ, ಅನುಷ್ಠಿಸುವಹಾಗೆ ಮಾಡಿ, ಹೀಗೆ ಈ ಎರಡು ಉಪಾಯಗಳಲ್ಲಿ ಯಾವುದಾದರೂ ಒಂದನ್ನು ಮಾಡಿಸುವನು ಎಂಬ ಭಾವವು **ಕರಿಷ್ಯೇ** ಎಂಬ ಕ್ರಿಯಾಪದದಿಂದ ತೋರಿಬರುತ್ತದೆ ಹೀಗೆ **ಕರಿಷ್ಯೇ**-ಎಂದು ಸಙ್ಕಲ್ಪಿಸಿ ಈ ಎರಡು ಉಪಾಯಗಳಲ್ಲಿ ಯಾವುದಾದರೂ ಒಂದನ್ನು ತನಗೆ ವಿಹಿತವಾದುದನ್ನು ಅನುಷ್ಠಿಸದಿದ್ದರೆ ಈತನಿಗೆ ಪರಮ ನಿಶ್ರೇಯಸಪ್ರಾಪ್ತಿಗೆ ಅವಕಾಶವಿಲ್ಲವೆಂಬ ಶಾಸ್ತ್ರಾರ್ಥವು ಇದರಿಂದ **ದ್ಯೋತಿತವು. ಕರಿಷ್ಯೇ**-ಎಂಬುದರಿಂದ ಉಪಾಸನಾದಿ ಉಪಾಯಾನುಷ್ಠಾನವೂ ಕರ್ಮರೂಪವಾದುದೇ; ಬರೀ ಜ್ಞಾನರೂಪಮಾತ್ರವೇ ಅಲ್ಲವೆಂದು ಹೇಳಲ್ಪಟ್ಟಿತು; **ಮಾಡುವೆನು** ಎಂದು ಹೇಳಿದನೇ ವಿನಾ **ತಿಳಿಯುವೆನು** ಎಂದು ಹೇಳಲಿಲ್ಲವು. ಉಪಾಸನವು ಬರೀ ಜ್ಞಾನರೂಪವೇ ಆಗಿದ್ದ ಪಕ್ಷದಲ್ಲಿ **ಜ್ಞಾತಾಸ್ಮಿ**-ಎಂದು ಅರ್ಜುನನು ಹೇಳಬೇಕಾಗಿತ್ತು. ಹಾಗೆ ಹೇಳದೆ " **ಕರಿಷ್ಯೇ ವಚನಂ ತವ** " ಎಂದು ಹೇಳಿರುವದು ಜ್ಞಾನಮಾತ್ರದಿಂದ ಮೋಕ್ಷವೆಂಬ

ಭಾವಕ್ಕೆ ವಿರೋಧವು. ನಿತ್ಯನೈಮಿತ್ತಿಕಗಳು ವಿಹಿತಕರ್ಮಗಳಾಗಿ ಉಪಾಯಾನುಷ್ಠಾನಕ್ಕೆ ಸಹಕಾರಿಯಾದುದರಿಂದ ಆವಶ್ಯಕವಾಗಿ ದೇಹಾವಸಾನದವರೆಗೂ ಮಾಡಲೇ ತೀರಬೇಕೆಂಬ ಅಂಶವೂ, ಹಾಗೆಯೇ ವಿಧೇಯಗಳಾದ ಎಲ್ಲಾ ಇತಿಕರ್ತವ್ಯತೆಗಳನ್ನೂ ನಡೆಸುತ್ತೇನೆಂಬುದೂ **ಕರಿಷ್ಯೇ ವಚನಂ ತವ** - ಎಂಬಲ್ಲೇ ಅಂತರ್ಗತವು; ಏಕೆಂದರೆ **ಯಜ್ಞದಾನತಪಃಕರ್ಮ ನತ್ಯಾಜ್ಯಂ ಕಾರ್ಯಮೇವತತ್**" ಎಂಬುದೂ ಕೂಡ ಭಗವದ್ವಚನವಷ್ಟೇ? ಗೃಹಸ್ಥನಾಗಿರುವವನಿಗೆ ಸಂಬಂಧಿಸಿದವರಾಗಿ ದಾರಪುತ್ರಸಹೋದರ ಮಿತ್ರಭೃತ್ಯಾದಿಗಳ ವಿಷಯದಲ್ಲೂ ಆವಶ್ಯಕವಾಗಿ ಮಾಡತಕ್ಕ ವಿಧೇಯಾಂಶ ವಿಷಯವೂ ಪೌರಜಾನಪದ ಸಮೂಹಕ್ಕೆ ಸೇರಿದವನಾಗಿ **ಸರ್ವಭೂತಹಿತೇರತಃ** ಎಂಬ ಉಪದೇಶವೂ, ಭಗವದ್ವಚನದಲ್ಲೇ ಸೇರಿದವಾದ ಪ್ರಯುಕ್ತ, ಇವೂ ಕೂಡ **ಕರಿಷ್ಯೇವಚನಂತವ** ಎಂಬ ಸಙ್ಕಲ್ಪದಲ್ಲೇ ಅಂತರ್ಗತವೆಂದು ಭಾವಿಸತಕ್ಕದ್ದು. ಆದುದರಿಂದ ಶ್ರೀಮದ್ಭಗವದ್ಗೀತೆಯಾದ ಲೀಲಾಸಾರಥಿಯ ಅಮೋಘೋಪದೇಶವು ಏನೆಂದರೆ ಮನುಷ್ಯನು ತನ್ನ ಸರ್ವವಿಧ ಇತಿಕರ್ತವ್ಯತೆಯನ್ನು ಗಮನಿಸಿ ಅವುಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟು ಭಗವತ್ಪ್ರೀತಿಗಾಗಿ, ಫಲಕರ್ತೃತ್ವಮಮತೆಗಳನ್ನೆಲ್ಲಾ ತ್ಯಜಿಸಿ ಅನುಷ್ಠಿಸಿ, ಪರಮಾತ್ಮನಲ್ಲಿ ಸಮರ್ಪಿಸಿ ಆರಾಧಿಸಿದುದಾದರೆ ಅದರಿಂದ ಪ್ರೀತನಾದ ಭಗವಂತನು ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪಗಳನ್ನು ಹೋಗಲಾಡಿಸಿ, ಉಪಾಯವನ್ನು ಅನುಷ್ಠಿಸುವಹಾಗೆ ಮಾಡಿ, ದಿವ್ಯವೈಕುಂಠಲೋಕಪ್ರಾಪ್ತಿಯುಂಟಾಗುವಹಾಗೆ ಮಾಡಿ, ಪುನಃ ಈ ಹೇಯದೇಹಪ್ರಾಪ್ತಿಯಿಲ್ಲದ ಹಾಗೆ ಮಾಡುವನು; ಇದನ್ನೆಲ್ಲಾ ಮನಸ್ಸಿನಲ್ಲಿಟ್ಟೇ ಅರ್ಜುನನು **ಕರಿಷ್ಯೇ ವಚನಂ ತವ** ಎಂಬ ಅಮೋಘವಾದ ಉತ್ತರವನ್ನು ಹೇಳಿದನು. **ಕರಿಷ್ಯೇ ವಚನಂ ತವ** ಎಂಬ ಹೇಳಿಕೆಯು ಯುದ್ಧಾನುಷ್ಠಾನದಲ್ಲಿ ಮಾತ್ರವೇ ಪರ್ಯವಸಾನವನ್ನುಹೊಂದಿದರೆ ಭಗವಂತನ ಉಪದೇಶವು ನಿರರ್ಥಕವಾಯಿತೆಂದೇ ಧಾರಾಳವಾಗಿ ಹೇಳಬಹುದು. ಇಷ್ಟುಮಾತ್ರವೇ ಅರ್ಥವೆಂದು ಸಾರಗ್ರಾಹಿಗಳಲ್ಲದವರು ಅರ್ಥಮಾಡಿರುತ್ತಾರೆ. **ಕರಿಷ್ಯೇ ವಚನಂ ತವ** ಎಂಬುದಕ್ಕೆ ನನ್ನ ಉಪದೇಶಾನುಗುಣವಾಗಿ ನಡೆಸುತ್ತೇನೆಂಬ ಸರಸವಾದ ವ್ಯಾಖ್ಯಾನವಾಗಿರುವಾಗ ಅದನ್ನು ಪರಿತ್ಯಾಗಮಾಡಿ **ನಮೇಕರ್ತವ್ಯಮಸ್ತಿ ಇತ್ಯಭಿಪ್ರಾಯಃ** ಎಂಬ ಅರ್ಥವು ಹೇಗೆಯೋ ತಿಳಿಯಲು ಸಾಧ್ಯವಲ್ಲವು. ಮೋಕ್ಷವು ಜ್ಞಾನದಿಂದೆಂಬ ಅಭಿಪ್ರಾಯಕ್ಕೆ ವಿರುದ್ಧವಾಗುತ್ತದೆಂಬ ಭಾವನೆಯಿಂದಲೋ ಅಥವಾ **ಸರ್ವಧರ್ಮಾನ್ ಪರಿತ್ಯಜ್ಯ** ಎಂಬಲ್ಲಿ ಸರ್ವಕರ್ಮಗಳ ಸ್ವರೂಪತ್ಯಾಗವು ಹೇಳಿದೆ ಎಂಬ ಭಾವನೆಯಿಂದಲೋ ಹೀಗೆ ವ್ಯಾಖ್ಯಾನವೆಂದರೆ ಎರಡೂ ಸರಿಯಾದ ಅಭಿಪ್ರಾಯವಾಗುವದಿಲ್ಲವು. ಮೋಕ್ಷವು ಜ್ಞಾನಮೂಲಕವೇ ಎಂಬ ಅಭಿಪ್ರಾಯವು ನಮಗೂ ಸಾಧುವಾದುದು. ಆದರೆ ಅದು ಆ ಏಕಾಂತವಾದ ಮನಸ್ಸಿನ ವ್ಯಾಪಾರದಿಂದುಂಟಾಗಿರುವ ಧ್ಯಾನ ಉಪಾಸನಾದಿ ಶಬ್ದಗಳಿಂದ ಹೇಳಲ್ಪಟ್ಟ ತೈಲಧಾರೆಯಹಾಗೆ ಅವಿಚ್ಛಿನ್ನಸ್ಮೃತಿಸಂತಾನರೂಪವಾದುದು; ಮತ್ತು **ಸರ್ವಧರ್ಮಾನ್ ಪರಿತ್ಯಜ್ಯ** ಎಂಬಲ್ಲಿ ಕರ್ಮಗಳ ಪರಿತ್ಯಾಗವು ಶಾಸ್ತ್ರಸಮ್ಮತವಲ್ಲದ ವಿಷಯವೆಂದು ತೋರಿರುವೆವು. ಆದುದರಿಂದ ಪ್ರಾಜ್ಞನಾದ ಅರ್ಜುನನು "**ನಮೇಕರ್ತವ್ಯಮಸ್ತಿ**" ಎಂದು ಹೇಳಿದರೆ "**ಕರಿಷ್ಯೇವಚನಂತವ**" ಎಂದು ಹೇಳಿರುತ್ತಾನೆ. **ಕರಿಷ್ಯೇ ವಚನಂತವ** ಎಂಬುದರಿಂದ ತೋರುವ ಅರ್ಥವೂ, "**ನಮೇಕರ್ತವ್ಯಮಸ್ತಿ**" ಎಂಬಲ್ಲಿನ ಅರ್ಥವೂ ಪರಸ್ಪರ ವ್ಯತ್ಯಸ್ತವಾದುವಾಗಿ ನಮ್ಮ ಮನಸ್ಸಿಗೆ ತೋರುತ್ತದೆ. ಎರಡೂ ಒಂದೇ ಅರ್ಥವುಳ್ಳವು ಎಂದರೆ ನಾವು ಹೇಳತಕ್ಕದ್ದೇನೂ ಇರುವದಿಲ್ಲವು. ಅವರವರುಗಳ ಅರ್ಥವು ಅವರವರಿಗೆ ಗ್ರಾಹ್ಯವು. ಶ್ರೀ ವಿದುರರೂ ಕೂಡ "**ಯಾವಜ್ಜೀವಂತು ತತ್ಕುರ್ಯಾತ್ ಯೇನ**

**ಭಾ. ಮೋಹಃ—ವಿಪರೀತಜ್ಞಾನಂ, ತ್ವತ್ಪ್ರಸಾದಾನ್ಮಮ ತದ್ವಿನಷ್ಟಂ ; ಸ್ಮೃತಿಃ-ಯಥಾವಸ್ಥಿತತತ್ತ್ವಜ್ಞಾನಂ, ತ್ವತ್ಪ್ರಸಾದಾದೇವತಚ್ಚ ಲಬ್ಧಂ, ಅನಾತ್ಮನಿ ಪ್ರಕೃತಾವಾತ್ಮಾಭಿಮಾನ**

**ಪ್ರೇತ್ಯಸುಖಂವಸೇತ್** " ಎಂದು ಹೇಳಿರುವದೂ ಅರ್ಜುನನೂ **ಕರಿಷ್ಯೇವಚನಂತವ** ಎಂದು ಹೇಳಿರುವದನ್ನು ಸಮರ್ಥಿಸುತ್ತದೆ. ಉಪಾಸನವ್ಯತಿರಿಕ್ತಕಾಲಗಳಲ್ಲೂ ಹಾಗೆಯೇ ಸಕೃತ್ ಶರಣಾಗತಿಯನ್ನು ಅನುಷ್ಠಿಸಿದನಂತರವೂ ಮಾಡಬೇಕಾದ ಇತಿಕರ್ತವ್ಯಗಳೆಲ್ಲಾ ಈ ಗ್ರಂಥದಲ್ಲೇ ಉಪದಿಷ್ಟವು ಅವುಗಳೆಲ್ಲವೂ ಈ " **ಕರಿಷ್ಯೇವಚನಂತವ** " ಎಂಬಲ್ಲೇ ಅಂತರ್ಗತವು. **ತ್ವತ್ಪ್ರಸಾದಾತ್‌ನಷ್ಟೋಮೋಹಃ** ಎಂದು ಹೇಳಿರುವದರಿಂದ ಅನುಗ್ರಹಿಸುವ ಸ್ವಾಮಿಯೇ ಬೇರೇ, ಅನುಗ್ರಹವನ್ನು ಹೊಂದುವ ಶೇಷನೇ ಬೇರೆ; ಹೀಗೆ ಸ್ವಾಮಿಯು ತನಗೆ ಶೇಷಭೂತನಾದವನಿಗೆ ಅನುಗ್ರಹಿಸಿ ಸಂತೋಷಿಸುವನೆಂಬ ಭಾವವು ತೋರಿಬರುವುದರಿಂದ ಏಕಾತ್ಮವಾದಕ್ಕೆ ಈ ಶ್ಲೋಕದಲ್ಲಿ ಅವಕಾಶವಿಲ್ಲವು. ತಾನೇ ಒಂದು ಅವಸ್ಥೆಯಲ್ಲಿ, ಅನುಗ್ರಹಿಸುವದು ತನಗೇನೇ ಇನ್ನೊಂದವಸ್ಥೆಯಲ್ಲಿ ಅನುಗ್ರಹವೆಂಬುದು ಹಾಸ್ಯಾಸ್ಪದವಾಗಿ ತೋರುತ್ತದೆ "**ನಿತ್ಯಃ ಚೇತನಃ ಏಕಃ ನಿತ್ಯಾನಾಂ ಬಹೂನಾಂ ಚೇತನಾನಾಂ ಕಾಮಾನ್ವಿದಧಾತಿ**" ಎಂದಲ್ಲವೇ ಶ್ರುತ್ಯರ್ಥವು. ಈ ಶ್ಲೋಕದಲ್ಲಿ ಅರ್ಜುನನು ತನಗೆ ಮೋಹವಿತ್ತೆಂದೂ, ಸಂದೇಹವಿತ್ತೆಂದೂ, ಸ್ಮೃತಿ ಇರಲಿಲ್ಲವೆಂದೂ, ಋಜುಭಾವದಿಂದ ಒಪ್ಪಿಕೊಂಡಿರುತ್ತಾನೆ. ತಮ್ಮ ಗುರುಗಳು ಏನಾದರೂ ತಪ್ಪುಗಳನ್ನು ಶಿಷ್ಯರಲ್ಲಿ ತೋರ್ಪಡಿಸಿ ತಿದ್ದಿದರೆ ಅವುಗಳನ್ನು ಸಹೃದಯರಾಗಿ ಗ್ರಹಿಸಿ ತಿದ್ದಿಕ್ಕೊಂಡು ಅದಕ್ಕಾಗಿ ಗುರುಗಳಲ್ಲಿ ಕೃತಜ್ಞತಾಭಾವವನ್ನು ಇಡತಕ್ಕದ್ದೆಂಬುದನ್ನು ಅರ್ಜುನ ಪ್ರವೃತ್ತಿಯಿಂದ ಮುಖ್ಯವಾಗಿ ಗ್ರಹಿಸತಕ್ಕದ್ದಾಗಿರುತ್ತದೆ. ತನ್ನ ಅಭಿಪ್ರಾಯವನ್ನು ಖಂಡಿಸಿದರೇ ಎಂಬುದರಿಂದ ಅಹಂಭಾವ ಕೋಪ ಅಗೌರವಾದಿಗಳನ್ನು ಸಂಪೂರ್ಣವಾಗಿ ತ್ಯಜಿಸತಕ್ಕದ್ದು. ಗುರೂಪದೇಶದಲ್ಲಿ ಮಾಹಾತ್ಮ್ಯೆಯುಂಟೆಂದು ಭಾವಿಸಿ, ಸಂಪೂರ್ಣವಾಗಿ ಗೌರವವನ್ನು ಕೊಟ್ಟು ಅದಕ್ಕೆ ಯಾವಜ್ಜೀವವೂ ಕೃತಜ್ಞತಾಭಾವವನ್ನು ಪ್ರದರ್ಶಿಸಬೇಕೆಂಬ ಭಾವವನ್ನೂ ಸಹ ಈ ಅರ್ಜುನನ **ಕರಿಷ್ಯೇವಚನಂತವ** ಎಂಬ ಅನೋಘೋಕ್ತಿಯಿಂದ ಗ್ರಹಿಸತಕ್ಕದ್ದಾಗಿರುತ್ತದೆ. ತಮ್ಮ ಅಪಾರ್ಥಗಳನ್ನು ಶಾಸ್ತ್ರಜ್ಞರು ಖಂಡಿಸಿದರೆ, ಬಿದ್ದರೂ ಮೀಸೆ ಮಣ್ಣಾಗಲಿಲ್ಲವೆಂದು ಹೇಳುವ ಹಾಗೆ ತಮ್ಮ ಅಭಿಪ್ರಾಯವನ್ನೇ ಯುಕ್ತಿಗಳಿಂದಲೂ ಕುತರ್ಕಗಳಿಂದಲೂ ಸಾಧಿಸಲು ಪ್ರವರ್ತಿಸುವದನ್ನು ಕಂಡಿರುವೆವು. ಇಂತಹ ಕುತರ್ಕಗಳನ್ನೆಲ್ಲಾ ಶಿಷ್ಯನು ತನ್ನ ವಿವೇಕದಿಂದ ದೂರೀಕೃತಮಾಡಿ ಗುರುಗಳು ಉಪದೇಶಿಸಿದ ಶಾಸ್ತ್ರಸಮ್ಮತಗಳಾದ ಅಭಿಪ್ರಾಯಾನುಗುಣವಾಗಿ ವರ್ತಿಸತಕ್ಕದ್ದೆಂಬುದನ್ನು ಅರ್ಜುನನ **ಕರಿಷ್ಯೇವಚನಂತವ** ಎಂಬ ಅಮೋಘೋಕ್ತಿಯಿಂದ ಗ್ರಹಿಸತಕ್ಕದ್ದಾಗಿರುತ್ತದೆ.

**ಭಾಷ್ಯಾರ್ಥವು :**—ಇಷ್ಟುದೂರ ತತ್ವಹಿತ ಪುರುಷಾರ್ಥಗಳ ಉಪದೇಶವೇನು ಮತ್ತು ವಿಶೇಷವಾದ ಸಂಶಯ ವಿಪರ್ಯಯಜ್ಞಾನಗಳಿದ್ದರೂ ಅವುಗಳ ನಿಮಿತ್ತವಾಗಿ ಮಾಡಿದ ಪ್ರಶ್ನೆಗಳಿಗೆಲ್ಲಾ ಬಹು ಶಾನ್ತತೆಯಿಂದ ಸದುತ್ತರಗಳನ್ನು ಕೊಟ್ಟು ಹೋಗಲಾಡಿಸಿದುದೇನು, ಅರ್ಜುನನ ಕೈಯ್ಯಲ್ಲಿ ಯುದ್ಧಮಾಡಿಸುವ ನೆಪದಿಂದ ತನ್ನನ್ನು ಹೊಂದುವ ಮೋಕ್ಷದಾಯಕವಾದ ಬ್ರಹ್ಮವಿದ್ಯೆಯನ್ನೆಲ್ಲಾ ಪರಮ ದಯಾವಾತ್ಸಲ್ಯದಿಂದ ಉಪದೇಶಿಸುದುದು ಏನು, ಲೋಕದ ಸರ್ವಾಧಿಕಾರಿಗಳಿಗೂ ಅನುಕೂಲವಾಗುವ ಹಾಗೆ ಉಪಾಯದ್ವಯವನ್ನು ಬೋಧಿಸುವ ರಹಸ್ಯವನ್ನು ಕೊನೆಯಲ್ಲಿ ೬೫,೬೬ರಲ್ಲಿಉಪದೇಶಿಸಿದುದು ಏನು, ಇಷ್ಟೆಲ್ಲಾ ಮಹತ್ತಾದ ಉಪಕಾರವನ್ನು ಮಾಡಿದ ಕೃಪಾಜಲನಿಧಿಗೆ ನಾವು ಮಾಡತಕ್ಕದ್ದೇನಿರುತ್ತದೆ? ಏನೂ ಇಲ್ಲವೆಂದು ಭಾವಿಸಿ, ತನ್ನ

**ಭಾ. ರೂಪೋ ಮೋಹಃ ಪರಮಪುರುಷಶರೀರತಯಾ ತದಾತ್ಮಕಸ್ಯ ಕೃತ್ಸ್ನಸ್ಯ ಚಿದಚಿದ್ವಸ್ತುನಃ ಅತದಾತ್ಮಾಭಿಮಾನರೂಪಶ್ಚ ; ನಿತ್ಯನೈಮಿತ್ತಿಕರೂಪಸ್ಯ ಕರ್ಮಣಃ**

ಕೃತಜ್ಞತೆಯನ್ನು ಪ್ರದರ್ಶಿಸುವದಕ್ಕಾಗಿ, ಲೋಕದಲ್ಲಿ ಪಿತಾವಾದವನು ತನ್ನ ಪ್ರಿಯಪುತ್ರನಿಗೆ ಮಾಡಿದ ಸಮಸ್ತ ಉಪಕಾರಗಳಿಗೂ ಯೋಗ್ಯವಾಗಿ ಏನನ್ನು ಮಾಡಲು ಅಸಮರ್ಥನಾಗಿ, ಆತನು ಏನಾದರೂ ಉಪದೇಶಿಸಿದರೆ "**ಬಾಢಂ**" ಎಂದು ಹೇಳಿ ಅಙ್ಗೀಕರಿಸುವದು ಹೇಗೆ ಪುತ್ರನ ಇತಿಕರ್ತವ್ಯವೋ, ಹಾಗೆಯೇ ಇಲ್ಲೂ ಲೋಕಪಿತಾವಿನ ಉಪದೇಶವನ್ನು ಸ್ವೀಕರಿಸಿ "**ಬಾಢಮ್**" ಎಂದು ಹೇಳುವ ಹಾಗೆ **ಕರಿಷ್ಯೇ ವಚನಂ ತವ** ಎಂದು ಹೇಳಿ ಸರ್ವೋಪದೇಶವನ್ನು ಶಿರಸಾವಹಿಸುತ್ತಾನೆ. **ಮೋಹ**ವೆಂದರೆ **ವಿಪರೀತಜ್ಞಾನಂ**-ಯಥಾರ್ಥವಾದುದಕ್ಕೆ ವ್ಯತ್ಯಸ್ತವಾದ ಜ್ಞಾನವು; **ತ್ವತ್ಪ್ರಸಾದಾತ್**-ತಮ್ಮ ಅನುಗ್ರಹದಿಂದ, **ತದ್ವಿನಷ್ಟಂ**-ಆ ವಿಪರೀತಜ್ಞಾನವು ನಷ್ಟವಾಯಿತು; **ಸ್ಮೃತಿಃ**-ಎಂದರೆ **ಯಥಾವಸ್ಥಿತ ತತ್ತ್ವಜ್ಞಾನಂ**-ಸತ್ಯವಾಗಿರುವ ತತ್ವತ್ರಯಗಳ ಯಥಾರ್ಥಜ್ಞಾನವು, **ತಚ್ಚ**-ಅದೂಕೂಡ **ಲಬ್ಧಂ**-ದೊರೆಯಿತು. ಇಲ್ಲಿ ಸ್ಮೃತಿ ಶಬ್ದಕ್ಕೆ ಯಥಾವಸ್ಥಿತತತ್ವಜ್ಞಾನವೆಂಬ ಭಾಷ್ಯವು ಹೇಗೆ ಎಂದರೆ "**ಸನೋದೇವಶ್ಶುಭಯಾ ಸ್ಮೃತ್ಯಾ ಸಂಯುನಕ್ತು**" ಎಂಬ ತೈತ್ತರೀಯ ವಾಕ್ಯವೇ ಶ್ವೇತಾಶ್ವತರದಲ್ಲಿಯೂ, "**ಸನೋಬುದ್ಧ್ಯಾಶುಭಯಾ ಸಂಯುನಕ್ತು**"ಎಂದುಹೇಳಲ್ಪಟ್ಟಿರುವುದರಿಂದ **ಸ್ಮೃತಿ** ಮತ್ತು **ಯಥಾರ್ಥಬುದ್ಧಿ** ಅಥವಾ ಯಥಾರ್ಥಜ್ಞಾನವು ಪರ್ಯಾಯಪದಗಳಾದವು. ನಷ್ಟವಾದ ವಿಪರೀತಜ್ಞಾನವು ಎಂಥಾದ್ದು, ಪ್ರಾಪ್ತವಾದ ಯಥಾರ್ಥಜ್ಞಾನವು ಎಂಥಾದ್ದೆಂದರೆ. ಮುಂದೆವ್ಯಕ್ತಪಡಿಸುತ್ತಾರೆ—(೧) **ಅನಾತ್ಮನಿ-ಪ್ರಕೃತೌ**, ಆತ್ಮಾವಲ್ಲದ ಶರೀರದಲ್ಲಿ, **ಆತ್ಮಾಭಿಮಾನ ರೂಪೋ ಮೋಹಃ**—ಆತ್ಮಾ ಎಂಬ ಅಭಿಮಾನರೂಪವಾದ ಭ್ರಮೆಯು, ಇಷ್ಟು ಮಾತ್ರವೇ ಅಲ್ಲದೆ ಇನ್ನೂಯಾವ ಯಾವವಿಧ ಭ್ರಮೆಯು ಎಂದರೆ ಹೇಳುತ್ತಾರೆ.-(೨) **ಪರಮ ಪುರುಷ ಶರೀರತಯಾ**—ಪರಮಪುರುಷನಿಗೆ ಶರೀರವಾಗಿರುವದರಿಂದ, **ತದಾತ್ಮಕಸ್ಯ**—ಆ ಪರಮ ಪುರುಷನನ್ನೇ ಆತ್ಮಾವಾಗಿವುಳ್ಳ, **ಕೃತ್ಸ್ನಸ್ಯ**—ಸಮಸ್ತವಾದ, **ಚಿದಚಿದ್ವಸ್ತುನಃ**—ಚಿದಚಿದ್ವಸ್ತುಗಳಿಗೆ, **ಅತದಾತ್ಮಾಭಿಮಾನರೂಪಶ್ಚ ಮೋಹಃ**—ಆ ಪರಮಪುರುಷನು ಆತ್ಮಾವಲ್ಲವೆಂಬ ಮೋಹವೂ ಸಹ ; ಎಂದರೆ ಪ್ರಕೃತಿಯೂ ಸ್ವತಂತ್ರವೂ ತಾನೂ ಮತ್ತು ಇತರ ಜೀವಾತ್ಮರೂ ಎಲ್ಲರೂ ಸ್ವತಂತ್ರರೂ ಎಂಬ ಭ್ರಮೆಯು, ಶ್ರುತಿಯು ಜಗತ್ತಿನ ವಸ್ತುವಾದ ಚಿದಚಿತ್ತುಗಳೆಲ್ಲಾ ಸರ್ವೇಶ್ವರನಿಗೆ ಶರೀರವೆಂದೂ ಅವುಗಳಿಗೆಲ್ಲಾ ಸರ್ವೇಶ್ವರನು ಆತ್ಮಾವೆಂದೂ ಬೋಧಿಸುತ್ತದೆ (ಗೀ. ೧೦-೨೦ ಪರಾಂಬರಿಸಿ) "**ತತ್ಸರ್ವಂ ವೈ ಹರೇಸ್ತನುಃ**" "**ಜಗತ್ಸರ್ವಂ ಶರೀರಂ ತೇ**" ಇತ್ಯಾದ್ಯನೇಕ ಮಹರ್ಷಿವಾಕ್ಯಗಳುಂಟು, ಜಗತ್ತಿನ ಸತ್ತಾಸ್ಥಿತಿ ನಿಯಮಗಳಿಗೆಲ್ಲಾ ಸರ್ವೇಶ್ವರನೇ ಕಾರಣವು ಎಂಬುದೇ ಸ್ಮೃತಿಯು ಹೀಗೆ ಎರಡು ವಿಧಗಳಾದ ಭ್ರಮಗಳುಂಟು ಅವು ಯಾವುದೆಂದರೆ—(೧) ದೇಹಾತ್ಮಭ್ರಾನ್ತಿಯು—ಶರೀರವೇ ಆತ್ಮಾ ಎಂಬುದು ; (೨) ಸ್ವತಂತ್ರಾತ್ಮಭ್ರಾಂತಿಯು ; ಯಥಾರ್ಥವಾದ ತತ್ವತ್ರಯಜ್ಞಾನ ಉಂಟಾದರೆ ಇವೆರಡೂ ತೊಲಗುತ್ತವೆ. ಹೇಗೆಂದರೆ ದೇಹವು ಜ್ಞಾನವಿಲ್ಲದುದು ಆತ್ಮಾಜ್ಞಾನವಿರುವುದು, ತನ್ನನ್ನು ತಾನೇ ತಿಳಿಯುವದು, ಹೀಗೆ ಲಕ್ಷಣಗಳಿರುವದರಿಂದ ಪೃಥಕ್ ಎಂಬ ಜ್ಞಾನ ಉಂಟಾದರೆ ಅಂತಹಮೋಹವು ಹೋಗುತ್ತದೆ. ಸ್ವತಂತ್ರಾತ್ಮಭ್ರಾನ್ತಿಯು ತೊಲಗಬೇಕಾದರೆ, ಅನೇಕ ಸಂದರ್ಭಗಳಲ್ಲಿ ತನ್ನ ಸಙ್ಕಲ್ಪವು ನೆರವೇರದೆ ಹೋಗುವದಕ್ಕೆ ಕಾರಣವೇನೆಂದು ವಿಮರ್ಶಿಸಿ. ಪ್ರತಿಯೊಂದು ತನ್ನ ಪ್ರವರ್ತಿಗೂ ತನ್ನ ಸಙ್ಕಲ್ಪವೂ ಪರಮಾತ್ಮ ಪ್ರೇರಣೆಯೂ ಸಹ ಅವಶ್ಯಕ

**ಭಾ. ಪರಮಪುರುಷಾರಾಧನತಯಾ ತತ್ಪ್ರಾಪ್ತ್ಯುಪಾಯ ಭೂತಸ್ಯ ಬಂಧಕತ್ವ ಬುದ್ಧಿ ರೂಪಶ್ಚ ಸರ್ವೋಽವಿನಷ್ಟಃ; ಆತ್ಮನಃ ಪ್ರಕೃತಿ ವಿಲಕ್ಷಣತ್ವ ತತ್ಸ್ವಭಾವ ರಹಿತತಾ,**

---

ವೆಂದು ಗೀ. ೧೮-೧೪, ೧೬ನೆಯ ಶ್ಲೋಕದಲ್ಲಿ ಹೇಳಿರುವ ಜ್ಞಾನದಿಂದಲೂ, "ದ್ವಾಸುಪರ್ಣಾ" (ಮುಂ. ೩.೩.೧) ದ್ವಾವಜಾವೀಶನೀಶೌ" (ಶ್ವೇ ೧. ೯.) ಮತ್ತು ಈ ಗ್ರಂಥದಲ್ಲೇ ಹೇಳಿರುವ ಹಾಗೆ "ಉತ್ತಮಃ ಪುರುಷಸ್ತ್ವನ್ಯಃ" (ಗೀ. ೧೫ ) ಇತ್ಯಾದಿ ಪ್ರಮಾಣಗಳ ಜ್ಞಾನದಿಂದಲೂ ತೊಲಗುತ್ತದೆ. ಈ ಸ್ವತಂತ್ರಾತ್ಮಭ್ರಾಂತಿಗೇನೇ ಸೇರಿದ ಇನ್ನೊಂದು ಭ್ರಾಂತಿ ಯಾವುದೆಂದರೆ ದಾಸನಾದ ತಾನೂ ಸ್ವಾಮಿಯಾದ ಪರಮ ಪುರುಷನೂ ಇಬ್ಬರೂ ಒಂದೇ ಎಂಬ (೩) ಜೀವೇ ಶೈಕ್ಯಭ್ರಾಂತಿಯು- ಆತ್ಮಾ ಎಂದಿರುವವನು ಒಬ್ಬನೇ ಎಂಬ ಮೋಹವು. **"ಭೋಕ್ತಾ ಭೋಗ್ಯಂ ಪ್ರೇರಿತಾರಂಚ ಮತ್ವಾ"** (ಶ್ವೇ೧-೧೨) **ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ** (ಶ್ವೇ. ೬.೧೬) **"ಪೃಥಗಾತ್ಮಾನಂ ಪ್ರೇರಿತಾರಂ ಚಮತ್ವಾ** ( ) **"ಕ್ಷರಂ ಪ್ರಧಾನಂ ಅಮೃತಾಕ್ಷರಂ ಹರಃ। ಕ್ಷರಾತ್ಮಾನಾವೀಶತೇ ದೇವ ಏಕಃ"** (ಮುಂ ) ಇತ್ಯಾದ್ಯನೇಕ ಭೇದಶ್ರುತಿ ಪ್ರಮಾಣಗಳಿಂದ ಈ ವಿಧ ಸ್ವತಂತ್ರಾತ್ಮ ಭ್ರಾಂತಿಯನ್ನು ಕಳೆದು ಕೊಳ್ಳಬಹುದು. ಆದುದ ರಿಂದಲೇ ತತ್ವತ್ರಯದ ಸ್ವರೂಪ ಸ್ವಭಾವಗಳನ್ನು ವಿಮರ್ಶಿಸಿ ತಿಳಿದ ಜ್ಞಾನವು ಈ ಮೂರುವಿಧ ಭ್ರಮುಗಳನ್ನೂ ನಾಶಪಡಿಸುತ್ತದೆ. ಇವೆಲ್ಲಾ ಹಿಂದೆ ಈ ಗ್ರಂಥದಲ್ಲೇ ವ್ಯಕ್ತವಾಗಿ ಹೇಳಿರು ವದರಿಂದ **ನಷ್ಟೋ ಮೋಹಃ** ಎಂದು ಅರ್ಜುನನು ಹೇಳಿದನು. ಇಷ್ಟೇ ಅಲ್ಲವು; ಇನ್ನೂ ಒಂದು ಭ್ರಮೆಯು ತೊಲಗಿತು ವಿಂಬುದೂ ತೋರಿಬರುತ್ತದೆಂದು ಹೇಳುತ್ತಾರೆ.—ವಿಹಿತ ಗಳಾದ ನಿತ್ಯನೈಮಿತ್ತಿಕಗಳೂ ಮತ್ತು ತನಗೆ ಸೇರಿದ ವಿಷಯದಲ್ಲಿನ ಇತಿಕರ್ತವ್ಯತೆಗಳಲ್ಲೇ ಸೇರಿದ ಕಾಮ್ಯ ಕರ್ಮಗಳೂ ಬಂಧಕಗಳೆಂದು ಅರ್ಜುನನು ತಿಳಿದಿದ್ದನು; ಇದೂ ಒಂದು ಭ್ರಮುವು; ಅವುಗಳನ್ನು ಭಗವಂತನ ಪ್ರೀತ್ಯರ್ಥವಾಗಿ ಫಲ, ಕರ್ತೃತ್ವ ಮಮತೆಗಳಿಲ್ಲದೆ ಭಗವ ದಾರಾಧನೆಯ ರೂಪದಲ್ಲಿ ಮಾಡಿ, ಆತನಲ್ಲಿ ಸಮರ್ಪಿಸಿದರೆ ಬಂಧಕವಲ್ಲವೆಂಬ ಜ್ಞಾನದಿಂದ ಆ ಭ್ರಮೆಯೂ ತೊಲಗಿತು ಎಂದು **ನಷ್ಟೋ ಮೋಹಃ** ಎಂಬುದರಿಂದ ಹೇಳಲ್ಪಟ್ಟಿತೆಂದೂ ಭಾವಿಸಬಹುದೆಂದು ಮುಂದಿನವಾಕ್ಯದಿಂದ ತಿಳಿಸುತ್ತಾರೆ.— **ನಿತ್ಯ ನೈಮಿತ್ತಿಕ ರೂಪಸ್ಯ ಕರ್ಮಣಃ**—ನಿತ್ಯನೈಮಿತ್ತಿಕ ರೂಪದಲ್ಲಿರುವ ಕರ್ಮವು, **ಪರಮಪುರುಷಾರಾಧನತಯಾ** ಪರಮ ಪುರುಷನ ಆರಾಧನೆಯ ರೂಪವಾದುದರಿಂದ, **ತತ್ಪ್ರಾಪ್ತ್ಯುಪಾಯ ಭೂತಸ್ಯ**—ಆ ಪರಮ ಪುರುಷನ ಪ್ರಾಪ್ತಿಗೆ ಸಾಧನ ಭೂತವಾದುದಕ್ಕೆ, **ಬಂಧಕತ್ವ ಬುದ್ಧಿರೂಪಶ್ಚ ಮೋಹಃ** ಆ ಪುನಸಂಸಾರಕ್ಕೆ ಹೇತುಭೂತವಾಗುತ್ತದೆಂಬ ತಿಳಿವಳಿಕೆಯಾದ ಭ್ರಮುವೂ ಸಹ, ಹೀಗೆ **ಸರ್ವೋಽವಿನಷ್ಟಃ**—ಸಮಸ್ತಭ್ರಮುವೂ ನಷ್ಟವಾಯಿತು. ನಿತ್ಯನೈಮಿತ್ತಿಕ ರೂಪೇತಿಕರ್ತವ್ಯಗಳು ಕೆಲವರ ಅಭಿಪ್ರಾಯದ ಪ್ರಕಾರ ಬಂಧಕಗಳು ಅಥವಾ ಅನಾವಶ್ಯಕಗಳು ಅವುಗಳು ನಿವೃತ್ತಿ ಧರ್ಮಗಳಾಗುವುದಿಲ್ಲವು ಎಂಬ ಈ ಅಭಿಪ್ರಾಯವು ಪ್ರಥಮತಃ ಶ್ರುತಿವಿರುದ್ಧವು; ಯಾಕೆಂದರೆ ಶ್ರುತಿಯು **"ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತ‌ಗ್ಂ ಸಮಾಃ। ಏವಂತ್ವಯಿ ನಾನ್ಯಥೇತೋಽಸ್ತಿ ನಕರ್ಮ ಲಿಪ್ಯತೇನರೇ** (ಈಶಾ. ೨) ಯಾವಜ್ಜೀವವೂ ನಿತ್ಯನೈಮಿತ್ತಿಕ ಗಳನ್ನು ಮಾಡತಕ್ಕದ್ದು; ಭಗವತ್ಪ್ರೀತ್ಯರ್ಥವಾಗಿ ಮಾಡಲ್ಪಟ್ಟು ಭಗವಂತನಲ್ಲೇ ಸಮರ್ಪಿಸಿ ದರೆ, ಆ ಕರ್ಮಫಲವು ಬಂಧಕವಾಗಿ ಪರಿಣಮಿಸುವದಿಲ್ಲವು ಎಂದು ಹೇಳಿರುತ್ತದೆ. ಈ ಗ್ರಂಥದಲ್ಲೇ ಅವು ಅಗತ್ಯ ಮಾಡತಕ್ಕದ್ದು ಎಂದು **ನತ್ಯಾಜ್ಯಂ ಕಾರ್ಯಮೇವತತ್** (ಗೀ. ೧೮) ಎಂಬಲ್ಲೂ, **ಸ್ವೇಸ್ವೇಕರ್ಮಣ್ಯಭಿರತಃ ಸಂಸಿದ್ಧಿಂಲಭತೇನರಃ** (ಗೀ. ೧೮. ೪೫) ಎಂಬಲ್ಲೂ

**ಭಾ. ಜ್ಞಾತೃತ್ವೈಕ ಸ್ವಭಾವತಾ, ಪರಮಪುರುಷಶೇಷತಾ ತನ್ನಿಯಾಮ್ಯತ್ವೈಕ ಸ್ವರೂಪತಾಜ್ಞಾನಂ, ನಿಖಿಲ ಜಗದುದ್ಭವ ಸ್ಥಿತಿ ಪ್ರಲಯ ಲೀಲಾಶೇಷದೋಷ**

ಹೇಳಲ್ಪಟ್ಟಿರುತ್ತದೆ. ಬ್ರಹ್ಮಸೂತ್ರದಲ್ಲಿ ಬ್ರಹ್ಮವಿದ್ಯಾಙ್ಗವಾಗಿ ಇವು ಮಾಡತಕ್ಕದೆಂದೂ (ಶಾ ಸೂ. ೩ ೪.೨೬+೩೨) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಹೀಗಿರುವಾಗ ನಿತ್ಯನೈಮಿತ್ತಿಕಗಳು ಬಂಧಕಗಳೆಂದಾಗಲಿ ಅನಾವಶ್ಯಕ ವೆಂದಾಗಲಿ ಉಂಟಾಗುವ ಅಭಿಪ್ರಾಯಕ್ಕೆ ಕಾರಣವೇನೋ ತಿಳಿಯದು. ನಿತ್ಯನೈಮಿತ್ತಿಕಾದಿಗಳ ಅನುಷ್ಠಾನದಿಂದ, ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪನಿವೃತ್ತಿಯಾದರಲ್ಲವೇ, ಉಪಾಯಾರಂಭಕ್ಕೆ ಅರ್ಹತೆಯು? **“ಕಷಾಯೇ ಕರ್ಮಭಿಃ ಪಕ್ವೇ ತತೋ ಜ್ಞಾನಂ ಪ್ರವರ್ತತೇ”** ಎಂದು ಶ್ರುತಿಯು **“ಅನಭಿಭವಂದರ್ಶಯತಿ”** ಎಂಬ (೩.೪.೩೫) ಬ್ರಹ್ಮಸೂತ್ರದಲ್ಲೂ ಹೇಳಿರುತ್ತದೆ. ಹೀಗೆ ಸರ್ವವಿಧವಾದ ಭ್ರಮಗಳೆಲ್ಲವೂ ತತ್ವತ್ರಯದ ಯಥಾರ್ಥಜ್ಞಾನದಿಂದ ತೊಲಗುತ್ತವೆ ಎಂದು ಹೇಳಲ್ಪಟ್ಟಿತು. ಮುಂದೆ **ಸ್ಮೃತಿ**ಯು ಉಂಟಾಯಿತು ಎಂದು ಹೇಳಲ್ಪಟ್ಟಿತಲ್ಲವೇ, ಭ್ರಮವು ಯದ್ರೂಪವೆಂದು ಉಪದೇಶಿಸಿದಹಾಗೆ, ಆ ಸ್ಮೃತಿಯು ಯದ್ರೂಪವಾದುದು ಎಂಬುದನ್ನು ವ್ಯಕ್ತಪಡಿಸುತ್ತಾರೆ. ಯಾವ ಯಾವ ಜ್ಞಾನಗಳು ಲಭಿಸಿದವೆಂಬುದನ್ನು ತಿಳಿಯಪಡಿಸುತ್ತಾರೆ. (೧) **ಆತ್ಮನಃ** ಜೀವಾತ್ಮನ, **ಪ್ರಕೃತಿ ವಿಲಕ್ಷಣತ್ವ**-ಪ್ರಕೃತಿಗಿಂತ ವಿಲಕ್ಷಣವಾಗಿರೋಣವೇನು, (೨) **ತತ್ಸ್ವಭಾವರಹಿತತಾ**-ಅದರ ಸ್ವಭಾವವಾದ ಸತತ ವಿಕಾರವನ್ನು ಹೊಂದುವದೇನು, ಜ್ಞಾನಶೂನ್ಯತೆಯೇನು, ಇತರರಿಗೆ ಮಾತ್ರವೇ ಪ್ರಕಾಶಿಸುವದಾಗಿ ತನಗೆ ತಾನೇ ಪ್ರಕಾಶಿಸದೇ ಇರುವದೇನು, ಇವುಗಳು ಇಲ್ಲದಿರುವಿಕೆಯು, (೩) **ಜಾತೃತ್ವೈಕಸ್ವಭಾವತಾ**—ತಿಳಿಯುವಿಕೆ ಮಾತ್ರವೇ ಮುಖ್ಯಸ್ವಭಾವವಾಗಿರೋಣವೇನು, ಇತರವಸ್ತುಗಳನ್ನೂ ತನ್ನನ್ನೂ ಸಹ ತಿಳಿಯುವ ಸ್ವಭಾವವುಳ್ಳೋಣವು, (೪) **ಪರಮಪುರುಷಶೇಷತಾ**—ತಾನು ಪರಮಪುರುಷನಿಗೆ ಶೇಷಭೂತನು, **ತನ್ನಿಯಾಮ್ಯತ್ವೈಕ ಸ್ವರೂಪತಾ**—ಆ ಪರಮ ಪುರುಷನಿಂದ ನಿಯಮಿಸಲ್ಪಟ್ಟು ಆತನಿಗೆ ಅಧೀನವಾಗಿರುವ ಸ್ವರೂಪವುಳ್ಳವನು. ಹೀಗೆ ಈ ನಾಲ್ಕು ವಿಧವಾದ ಜ್ಞಾನವೂ ಉಂಟಾಯಿತು ಎಂದು **ಸ್ಮೃತಿರ್ಲಬ್ಧಾ** ಎಂಬುದರಿಂದ ಹೇಳಲ್ಪಟ್ಟಿತೆಂಬ ಭಾವವು, **ಪ್ರಕೃತಿವಿಲಕ್ಷಣತ್ವವು** ಎರಡನೆಯ ಅಧ್ಯಾಯದ ೧೫ ರಿಂದ ೩೦ ರ ವರೆಗೂ ಮತ್ತು ೧೩ ನೆಯ ಅಧ್ಯಾಯದಲ್ಲೂ ಹೇಳಲ್ಪಟ್ಟಿರುತ್ತದೆ. **ಜ್ಞಾತೃತ್ವೈಕಸ್ವರೂಪತಾ**ಕ್ಕೆ ೧೩-೧೭ ನ್ನು ನೋಡಿ; **ಪರಮಪುರುಷಶೇಷತಾ**ವನ್ನೂ ಮತ್ತು ತನ್ನಿಯಾಮ್ಯತ್ವೈಕ ಸ್ವರೂಪತಾ ಜ್ಞಾನಕ್ಕೂ, ೩.೩೦ ರಲ್ಲೂ ೭-೭ ರಲ್ಲೂ, ಮತ್ತು ೧೮-೬೦, ೬೧ ರಲ್ಲೂ ವ್ಯಕ್ತವು. ಇದರಿಂದ ಪ್ರಕೃತಿಯ ಹಾಗೆ ಸ್ವರೂಪ ವಿಕಾರ ವಿಲ್ಲದೆ ಜಡಸ್ವಭಾವನಲ್ಲದೆ ಇರುವದರಿಂದ ದೇಹಕ್ಕಿಂತ ತಾನು ವಿಲಕ್ಷಣನು; ತಾನು ಜ್ಞಾನಸ್ವರೂಪನಾಗಿ ಜ್ಞಾನಗುಣಕನಾಗಿ ಮಹಾಪರಿಶುದ್ಧನು, ಈಗ ಈ ಹೇಯ ಪ್ರಕೃತಿ ಸಂಬಂಧದಿಂದ ತಪ್ಪಿಸಿಕೊಳ್ಳುವದಕ್ಕಾಗಿ ಉಪಾಯಾನುಷ್ಠಾನವನ್ನು ಮಾಡಬೇಕೆಂಬ ಜ್ಞಾನವೂ, ಮತ್ತು ತಾನು ಸ್ವತಂತ್ರನಲ್ಲವು, ಪರಮಾತ್ಮನಿಗೆ ಸ್ವರೂಪತಃ ಶೇಷಭೂತನಾಗಿ ಅಧೀನನು, ಆತನಿಂದ ನಿಯಾಮ್ಯನು ಏಕೆಂದರೆ, ತಾನೂ ತನ್ನ ದೇಹವೂ ಹಾಗೆಯೇ ಸರ್ವ ಚಿದಚಿತ್ತೂ ಆತನಿಗೆ ಶರೀರವಾಗಿ ಆತನು ಅವುಗಳಿಗೆಲ್ಲಾ ಆತ್ಮಾವಾಗಿರುವದರಿಂದ ಎಂಬ ಭಾವವು, ಇಂತಹ ಜೀವಾತ್ಮ ವಿಷಯದ ನಾಲ್ಕುವಿಧ ಜ್ಞಾನವೂ, (೨) ಮತ್ತು **ಪರಮಪುರುಷ ಯಾಥಾತ್ಮ್ಯಜ್ಞಾನಂ** ೫ ಪರಮಪುರುಷನ ಸ್ವರೂಪ ಸ್ವಭಾವಗಳ ಯಥಾರ್ಥವಾದ ಜ್ಞಾನವೂ ಸಹ, ಅದು ಎಂಥಾದ್ದೆಂ... ..ಪಪಾದಿಸಿ ಹೇಳುತ್ತಾರೆ.—**ನಿಖಿಲಜಗದುದ್ಭವಸ್ಥಿತಿಪ್ರಲಯ**

**ಭಾ. ಪ್ರತ್ಯನೀಕ ಕಲ್ಯಾಣೈಕ ಸ್ವರೂಪ ಸ್ವಾಭಾವಿಕಾತಿಶಯಜ್ಞಾನಬಲೈಶ್ವರ್ಯ ವೀರ್ಯಶಕ್ತಿ ತೇಜಃ ಪ್ರಭೃತಿ ಸಮಸ್ತ ಕಲ್ಯಾಣ ಗುಣಗಣ ಮಹಾರ್ಣವ ಪರಬ್ರಹ್ಮ ಶಬ್ದಾಭಿಧೇಯ ಪರಮ ಪುರುಷ ಯಾಥಾತ್ಮ್ಯಜ್ಞಾನಂಚ, ಏವಂರೂಪ ಪರಾಪರತತ್ತ್ವ**

---

**ಲೀಲ** — ಈ ಜಗತ್ತು ಮಾತ್ರವೇ ಅಲ್ಲದೆ ಸಮಸ್ತ ಜಗತ್ತುಗಳ ಉತ್ಪತ್ತಿ ಸ್ಥಿತಿ ಪ್ರಲಯಗಳನ್ನೇ ಲೀಲೆಯಾಗಿವುಳ್ಳ (7–4, 5, 6, 7) **ಅಶೇಷದೋಷಪ್ರತ್ಯನೀಕ**-ಸಮಸ್ತ ಹೇಯ ಗುಣಗಳಿಗೂ ಶತ್ರುವಾಗಿ, (ಗೀ ೯-೯) **ಕಲ್ಯಾಣೈಕಸ್ವರೂಪ**–ಕಲ್ಯಾಣಗುಣಗಳಿಂದ ಕೂಡಿರುವದೇ ಸ್ವರೂಪವಾಗಿ, (ಗೀ. ೯-೧೭-೧೮), **ಸ್ವಾಭಾವಿಕಾನವಧಿಕಾತಿಶಯ ಜ್ಞಾನಬಲೈಶ್ವರ್ಯ ತೇಜಃ ಪ್ರಭೃತಿಗುಣಗಣಮಹಾರ್ಣವ**- ಸ್ವಾಭಾವಿಕವಾದ ಅವಧಿಯಿಲ್ಲದ ಅತಿಶಯವುಳ್ಳ ಷಾಡ್ಗುಣ್ಯಾದಿ ಕಲ್ಯಾಣಗುಣಗಳುಳ್ಳ ಸಮೂಹಕ್ಕೆ ಸಮುದ್ರಪ್ರಾಯನಾಗಿರುವ, **ಪರಬ್ರಹ್ಮ ಶಬ್ದಾಭಿಧೇಯ**-ಪರಬ್ರಹ್ಮನೆಂಬ ಶಬ್ದದಿಂದ ಹೇಳಲ್ಪಡುವ, **ಪರಮ ಪುರುಷಯಾಥಾತ್ಮ್ಯ** ಜ್ಞಾನವೂ ಸಹ; ತಮ್ಮ ಸಿದ್ಧಾಂತಕ್ಕೂ ಇತರರ ಸಿದ್ಧಾಂತಕ್ಕೂ ಇರುವ ವೈಲಕ್ಷಣ್ಯವನ್ನು ಇನ್ನೊಂದುಸಲ ಸ್ಪಷ್ಟವಾಗಿ ಅವತಾರಿಕೆಯಲ್ಲಿ ಹೇಳಿದುದನ್ನೆಲ್ಲಾ ಸಙ್ಗ್ರಹಿಸಿ ಇಲ್ಲಿ ತಿಳಿಸುತ್ತಾರೆ. ಈ ಪರಬ್ರಹ್ಮನು ಸತ್ಯವಾದ ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಕಾರಣನು; ಈ ಜಗತ್ತಿನಲ್ಲಿರುವದು ಇತರರು ಹೇಳುವಹಾಗೆ ಒಂದೇ ತತ್ತ್ವವಲ್ಲವು. ಹೀಗೆ ಜಗತ್ತಿನಲ್ಲಿರುವ ಚಿದಚಿತ್ತುಗಳೊಂದಿಗೆ ಸೇರಿ ಏಕೀಭವಿಸಿರುವವನು. ಆದುದರಿಂದ ಜಗತ್ತು ಮಿಥ್ಯಾ ಎಂಬ ವಾದವು ಸರಿಯಲ್ಲವೆಂದು ತಿಳಿಸುವದಕ್ಕಾಗಿ ಹಾಗೆ ಪ್ರಯೋಗವು; ಆತನೇ ಅವಿದ್ಯಾಗೃಹೀತನಾಗಿ ಜೀವಾತ್ಮನಾಗಿದ್ದಾನೆಂಬ ವಾದ ನಿರಾಸಕ್ಕಾಗಿ **ಹೇಯಪ್ರತ್ಯನೀಕನೆಂದೂ ಕಲ್ಯಾಣ ಗುಣಕಾರನೆಂದೂ** ಹೇಳಿದರು; ಅವಿದ್ಯಾಗೃಹೀತನೆಂದು ಒಪ್ಪಿದರೆ ಪರಮಾತ್ಮನಿಗೇನೇ ಹೇಯ ಸಂಬಂಧವನ್ನು ಹೇಳಿದಂತಾಗುತ್ತದೆಂಬ ಭಾವವು; ಆತನು ಇತರರು ಹೇಳುವಹಾಗೆ ನಿರ್ವಿಶೇಷನಲ್ಲವು; ಕಲ್ಯಾಣಗುಣಗಳಿಂದ ವಿಶಿಷ್ಟನು; ನಿರ್ವಿಶೇಷನೆಂದು ಒಪ್ಪಿದರೆ ಶಾಸ್ತ್ರಕ್ಕೆ ಬೋಧಕತ್ವವೂ ಸಲ್ಲುವುದಿಲ್ಲವು; ಶ್ರೀ ಕೃಷ್ಣಭಗವಾನರವರೂ ಅರ್ಜುನನಿಗೆ ತನ್ನ ಸ್ವರೂಪವನ್ನು ತಿಳಿಯಪಡಿಸಲು ಶಕ್ತರಾಗುವದಿಲ್ಲವು; ಷಾಡ್ಗುಣ್ಯಾದಿಯುಕ್ತತೆಯೂ ಸ್ವರೂಪಕ್ಕೆ ಸಂಬಂಧಿಸಿದವು ಎಂದು ಶ್ರೀ ಪರಾಶರಾದಿಮಹರ್ಷಿಗಳ ವಾಕ್ಯಕ್ಕೆ ವಿರೋಧವಾಗುತ್ತವೆಂಬ ಭಾವವನ್ನು ಪ್ರದರ್ಶಿಸುವದಕ್ಕಾಗಿ **ಜ್ಞಾನಬಲೈಶ್ವರ್ಯತೇಜಃ ಪ್ರಭೃತಿ** ಎಂಬ ಪ್ರಯೋಗವು; ಹಾಗೆ ನಿರ್ವಿಶೇಷನಾದರೆ ಭಗವಚ್ಛಬ್ದವೂ ಪರಬ್ರಹ್ಮಶಬ್ದವೂ ಎರಡೂ ಸಾರ್ಥವತ್ತಾಗುವದಿಲ್ಲವು; ಹಾಗೆಯೇ ಇತರಪುರುಷರಿದ್ದರೆ ಅಲ್ಲವೇ ಪರಮ ಪುರುಷಶಬ್ದವೂ ಸಾರ್ಥವತ್ತಾಗುತ್ತದೆ, ಹಾಗಲ್ಲದೇ ಒಬ್ಬನೇ ಇರುವದಾದರೆ ನಿಸ್ಸಮಾಭ್ಯಧಿಕತ್ವವನ್ನು ಬೋಧಿಸುವ ಶ್ರುತಿಯೂ ಕೂಡ ನಿರರ್ಥಕವಾಗುತ್ತದೆ ಪರಮಾತ್ಮನು **ಜ್ಞಾತೃತ್ವೈಕಸ್ವಭಾವನು** ಎಂದು ಏಕೆ ಇಲ್ಲಿ ಹೇಳಲ್ಪಟ್ಟಿತೆಂದರೆ, “**ವಿಜ್ಞಾನಂ ಯಜ್ಞಂ ತನುತೇ**” (ತೈ. ಆನಂ. ೫) ಎಂದು ಶ್ರುತಿಯಲ್ಲಿ ಹೇಳಿರುವದರಿಂದ ಆತ್ಮಾ ಬರೀಜ್ಞಾನಸ್ವರೂಪಮಾತ್ರನು, ಆತನಿಗೆ ಜ್ಞಾತೃತ್ವವೂ ಇಲ್ಲವು ಜ್ಞೇಯತ್ವವೂ ಇಲ್ಲ ಎಂಬ ಪಕ್ಷವನ್ನು ನಿರಾಕರಿಸಿ ಹೇಳುವದಕ್ಕಾಗಿ “**ಅಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ**” (ಛಾ. ೮-೨-೫) ಇತ್ಯಾದಿ: ಶ್ರುತಿಗಳಿಂದಲೂ, **ಜ್ಞೋಽತ ಏವ** ಎಂಬ ಬ್ರಹ್ಮಸೂತ್ರದಿಂದಲೂ, ಜೀವಾತ್ಮ ಪರಮಾತ್ಮರುಗಳಿಗೆ ಜ್ಞಾತೃತ್ವ ಉಂಟೆಂದು ತಿಳಿಸುವದಕ್ಕಾಗಿ ಹಾಗೆ ಪ್ರಯೋಗವು; ಆದರೆ ಆತ್ಮಾವಿಗೆ ವಿಜ್ಞಾನಂ ಎಂದು ಹೇಳಿರುವದಕ್ಕೆ ಕಾರಣವೇನೆಂದರೆ ಜೀವಾತ್ಮನಾಗಲಿ ಪರಮಾತ್ಮನಾಗಲಿ ಜ್ಞಾನಸ್ವರೂಪರಾಗಿ ವಿಭುವಾದ ಧರ್ಮಭೂತ

**ಭಾ. ಯಾಥಾತ್ಮ್ಯ ವಿಜ್ಞಾನ ತದಭ್ಯಾಸ ಪೂರ್ವಕಾಹರಹರುಪಚೀಯಮಾನ ಪರಮ ಪುರುಷ ಪ್ರೀತ್ಯೈಕ ಫಲ ನಿತ್ಯನೈಮಿತ್ತಿಕ ಕರ್ಮ ನಿಷಿದ್ಧಪರಿಹಾರ ಶಮದಮಾಧ್ಯಾತ್ಮಗುಣ ನಿರ್ವರ್ತ್ಯ ಭಕ್ತಿರೂಪತಾ ಪನ್ನ ಪರಮಪುರಷೋಪಾಸನೈಕಲಭ್ಯೋ ವೇದಾನ್ತವೇದ್ಯಃ ಪರಮಪುರುಷೋ ವಾಸುದೇವ ಸ್ತ್ವಮಿತಿಜ್ಞಾನಂಚ ಲಬ್ಧಮ್.**

---

ಜ್ಞಾನಯುಕ್ತರಾಗಿರುವದರಿಂದ ಜ್ಞಾನವೇ ಪ್ರಧಾನಸ್ವರೂಪವಾದುದರಿಂದ ವಿಜ್ಞಾನಂ ಎಂದು ಶ್ರುತಿಯಲ್ಲಿ ಜೀವಾತ್ಮನಿಗೆ ಪ್ರಯೋಗವು. ಆದರೆ ಜ್ಞಾತೃತ್ವವನ್ನು, ಅನೇಕ ಶ್ರುತಿಗಳು ಪರಮಾತ್ಮನಿಗೆ ಉಂಟು ಎಂದು ಹೇಳುವದರಿಂದ **ಜ್ಞಾತೃತ್ವೈಕಸ್ವಭಾವನೆಂದು** ತಮ್ಮ ಸಿದ್ಧಾನ್ತವನ್ನು ಪ್ರಕಟಿಸಿರುತ್ತಾರೆ; ಈ ಅಭಿಪ್ರಾಯವೆಲ್ಲಾ ಈ ಗ್ರಂಥದಲ್ಲೇ ಉಪದೇಶಿಸಲ್ಪಟ್ಟಿರುವದರಿಂದ **ಸ್ಮೃತಿರ್ಲಬ್ಧಾ** ಎಂಬಲ್ಲೇ **ಅಂತರ್ಗತವು** ಇನ್ನೂ ಯಾವಜ್ಞಾನವೂ ಆದರಲ್ಲೇ ಅಂತರ್ಗತವೆಂದರೆ ಹೇಳುತ್ತಾರೆ.—(೩) **ಏವಂರೂಪ ಪರಾವರತತ್ವಯಾಥಾತ್ಮ್ಯವಿಜ್ಞಾನ ತದಭ್ಯಾಸಪೂರ್ವಕ**-ಹೀಗೆ ಮೂರುತತ್ವಗಳುಂಟು ಚಿದಚಿದೀಶ್ವರ ರೆಂಬದಾಗಿ: ಅವುಗಳಲ್ಲಿ ಈಶ್ವರನು ಪರತತ್ವವು, ಮಿಕ್ಕ ಎರಡಾದ ತತ್ವಗಳಾದ ಚಿದಚಿತ್ತುಗಳು ಅವರ ತತ್ವಗಳು, ಈ ಅವರ ತತ್ವಗಳ ಸತ್ತಾಸ್ಥಿತಿನಿಯಮನಾದಿಗಳಿಗೆಲ್ಲಾ **ಈಶ್ವರನೇ ಕಾರಣವು**; ಆತನೇ ಆ ಕಾರಣದಿಂದ ಶೇಷಿಯು, ಅವರ ತತ್ವವಾದ ಜೀವಾತ್ಮನಾದ ತಾನು ಶೇಷನು, ಆದುದರಿಂದ ತಾನು ಅಂತವನ ಆರಾಧನರೂಪವಾಗಿಯೇ **ಸಮಸ್ತ** ಕರ್ಮಗಳನ್ನೂ ಎಸೆಗತಕ್ಕದೆಂಬ ಯಥಾರ್ಥವಾದ ಜ್ಞಾನವೇನು, **ತದಭ್ಯಾಸ**-ಅಂತಹ ಆತ್ಮನು ತಾನು ಎಂಬ ಚಿನ್ತನವೇನು, ಇವುಗಳ ಪೂರ್ವಕವಾಗಿ ಪ್ರತಿದಿನದಲ್ಲೂ **ಉಪಚೀಯಮಾನ ಪರಮ ಪುರುಷ ಪ್ರೀತ್ಯೈಕಫಲ**-ವೃದ್ಧಿಹೊಂದುವ ಸ್ವಭಾವವುಳ್ಳ ಪರಮಪುರುಷ ಪ್ರೀತಿಯೇ ಮುಖ್ಯವಾದ ಫಲವಾಗಿವುಳ್ಳ **ನಿತ್ಯನೈಮಿತ್ತಿಕ ಕರ್ಮಗಳೇನು, ನಿಷಿದ್ಧಪರಿಹಾರ**-ಕೆಟ್ಟಕರ್ಮಗಳೆಂದು ಶಾಸ್ತ್ರಗಳಲ್ಲಿ ನಿಷಿದ್ಧಗಳಾದ ಕರ್ಮಗಳನ್ನು ತ್ಯಜಿಸೋಣವೇನು, **ಶಮ**-ಬಾಹ್ಯೇಂದ್ರಿಯಗಳ ಜಯವೇನು, **ದಮ**. ಅಂತರಿಂದ್ರಿಯಗಳ ಜಯವೇನು, **ಆಧ್ಯಾತ್ಮಗುಣ**-ಎಂಬಿವೇ ಮೊದಲಾದ ಆತ್ಮಗುಣದಿಂದ, **ನಿರ್ವರ್ತ್ಯ** - ನಿರ್ವಹಿಸಲ್ಪಟ್ಟ, **ಭಕ್ತಿರೂಪಾಪನ್ನ** - ಭಗವಂತನಲ್ಲಿ ವಿಶೇಷ ಪ್ರೀತಿಯನ್ನು ಹೊಂದಿದ, **ಪರಮ ಪುರುಷೋಪಾಸನೈಕಲಭ್ಯಃ**-ಪರಮ ಪುರುಷನ ಉಪಾಸನದಿಂದಲೇ ಮುಖ್ಯವಾಗಿ ಹೊಂದಲ್ಪಡುವ, **ವೇದಾನ್ತವೇದ್ಯಃ**-ಉಪನಿಷತ್ತುಗಳಿಂದಲೇ ತಿಳಿಯಲು ಸಾಧ್ಯವಾದ, **ಪರಮ ಪುರುಷನಾದ, ವಾಸುದೇವನೇ, ತ್ವಮಿತಿಜ್ಞಾನಂ ಚ ಲಬ್ಧಮ್**-ವಸುದೇವ ಪುತ್ರನಾಗಿ ಅವತರಿಸಿರುವ ಶ್ರೀಕೃಷ್ಣನೆಂದು ಕರೆಯಲ್ಪಡುವವನೇ ನೀನು ಎಂಬ ಜ್ಞಾನವೂ, **ಲಬ್ಧಮ್** - ದೊರೆಯಿತು, ಇಷ್ಟು ಜ್ಞಾನವೂವುಳ್ಳ **ಸ್ಮೃತಿರ್ಲಬ್ಧಾ**-ಎಂದು ಹೇಳಲ್ಪಟ್ಟಿತು. ಮೋಹವೂಹೋಗಿ ಮೋಕ್ಷಪ್ರಾಪ್ತಿಗೆ ಸಾಧಕವಾದ ಜ್ಞಾನವೂ ಲಭಿಸಿತು ಎಂದು ಹೇಳಿಕೊಳ್ಳುತ್ತಾನೆ:—೧. ದೇಹಕ್ಕೇ ಸರ್ವವಿಧ ವಿಕಾರಗಳಾದ ಛೇದನಾದಿ ವಿಕಾರಗಳು, ಉತ್ಪತ್ತಿ, ಸ್ಥಿತಿನಾಶಗಳು. ೨. ಆತ್ಮಾವಿಗೆ ಈ ವಿಕಾರಗಳು ಇಲ್ಲವು, ಇಂತಹ ದೇಹ ಪ್ರಾಪ್ತಿಯಿಂದ ಆತನ ಧರ್ಮಭೂತಜ್ಞಾನದ ತಿರೋಧಾನವು ಆತನು ಪರಮಾತ್ಮನಿಗೆ ಶರೀರವಾಗಿ ಆತನಿಗೆ ಅಧೀನವು. ೩. ಪರಮಪುರುಷನು ಸ್ವರೂಪ ಸ್ವಭಾವ ವಿಕಾರಗಳಿಲ್ಲದೆ, ಚಿದಚಿತ್ತುಗಳನ್ನೂ ವ್ಯಾಪಿಸಿ ಅವುಗಳೊಂದಿಗೇನೇ ಯಾವಾಗಲೂ ವಿಶಿಷ್ಟನಾಗಿರುವನು, ಆದರೂ ಅವುಗಳ ಹೇಯಗುಣಗಳು ಈ ಪರಮಾತ್ಮನಿಗೆ ಸಂಬಂಧಿಸುವದಿಲ್ಲವು. ಆದುದರಿಂದ ಚೇತನರೆಲ್ಲರೂ ಪರಮಾತ್ಮನಿಂದ ಸತ್ತೆಯನ್ನು ಹೊಂದಿ ಆತನಿಗೆ ಅಧೀನರಾಗಿರುವರು.

**ತತಶ್ಚ ಬಂಧುಸ್ನೇಹ ಕಾರುಣ್ಯ ಪ್ರವೃದ್ಧ ವಿಪರೀತ ಜ್ಞಾನಮೂಲಾತ್ಸರ್ವಸ್ಮಾದವಸಾದಾದ್ವಿಮುಕ್ತೋಽ ಗತಸಂದೇಹಃ ಸ್ವಸ್ಥಃಸ್ಥಿತೋಽಸ್ಮಿ; ಇದಾನೀಮೇವ ಯುದ್ಧಾದಿ ಕರ್ತ್ರವ್ಯತಾ ವಿಷಯಂ ತವ ವಚನಂ ಕರಿಷ್ಯೇ - ಯಥೋಕ್ತಂ ಯುದ್ಧಾದಿಕಂ ಕರಿಷ್ಯೆ ಇತ್ಯರ್ಥಃ ॥ ೭೩ ॥**

---

೪. ಪರಮಪುರುಷನ ಪ್ರೀತ್ಯರ್ಥವಾಗಿಯೇ ಜೀವಾತ್ಮನು ನಿತ್ಯನೈಮಿತ್ತಿಕ ವಿಹಿತ ಕಾಮ್ಯ ಕರ್ಮಗಳನ್ನು ನಡೆಸತಕ್ಕದ್ದು. ನಿಷಿದ್ಧಕರ್ಮಗಳನ್ನು ತ್ಯಜಿಸತಕ್ಕದ್ದು. ಶಮದಮಾದಿ ಆತ್ಮ ಗುಣಗಳನ್ನು ಹೊಂದಿ ಐಹಿಕದಲ್ಲಿ ವೈರಾಗ್ಯವನ್ನು ಹೊಂದತಕ್ಕದ್ದು. ೫. ಈ ಹೇಯದೇಹ ವಿಯೋಗಕ್ಕಾಗಿಯೂ ನಿರತಿಶಯಸುಖ ಪ್ರಾಪ್ತಿಗಾಗಿಯೂ ನಿತ್ಯನೈಮಿತ್ತಿಕಾದಿ ವಿಹಿತ ಕರ್ಮಗಳಿಂದ ಸಾಧ್ಯವಾದ ಭಕ್ತಿರೂಪವನ್ನು ಪರಮಪುರುಷನ ಉಪಾಸನವನ್ನು ಮಾಡಿ ಆತನನ್ನು ಹೊಂದತಕ್ಕದ್ದು. ಇಂತಹ ಜ್ಞಾನವು ಲಬ್ಧವಾಯಿತೆಂದು **ಸ್ಮೃತಿರ್ಲಬ್ಧಾ** ಎಂಬುದರಿಂದ ಹೇಳಲ್ಪಟ್ಟಿತು. ಹೀಗೆ ಪೂರ್ವಾರ್ಧಾರ್ಥವನ್ನು ವಿಸ್ತರಿಸಿ ಹೇಳಿದರು. ಮುಂದೆ **ಸ್ಥಿತೋಽಸ್ಮಿ ಗತಸಂದೇಹಃ** ಎಂಬ ಅರ್ಥವನ್ನು ತಿಳಿಸುತ್ತಾರೆ. **ತತಶ್ಚ**-ಹೀಗೆ ಮೋಹಜ್ಞಾನವು ಕಳೆದು ಯಥಾರ್ಥಜ್ಞಾನವು ಲಭಿಸಿದುದರಿಂದಲೇ. **ಬಂಧುಸ್ನೇಹ ಕಾರುಣ್ಯಪ್ರವೃದ್ಧ ವಿಪರೀತ ಜ್ಞಾನಮೂಲಾತ್ ಸರ್ವಸ್ಮಾತ್ ಅವಸಾದಾತ್**-ಬಂಧುಗಳಲ್ಲಿ ಸ್ನೇಹ ಮತ್ತು ಕರುಣೆಯಿಂದ ವೃದ್ಧಿಯನ್ನು ಹೊಂದಿದ, ಭ್ರಮರೂಪಜ್ಞಾನವೇ ಕಾರಣವಾಗಿವುಳ್ಳ ಸಮಸ್ತ ದೈನ್ಯಭಾವದಿಂದ, **ಗತಸಂದೇಹಃ** - ಹೋಗಲ್ಪಟ್ಟ ಸಂದೇಹವುಳ್ಳವನಾಗಿ, **ಸ್ವಸ್ಥಃ ಸ್ಥಿತೋಽಸ್ಮಿ**-ಸ್ವಸ್ಥಚಿತ್ತನಾಗಿದ್ದೇನೆ, ನಾನು ಶಾಂತ ಮನಸ್ಕನಾಗಿದ್ದೇನೆಂಬ ಭಾವವು. ಮುಂದೆ **ಕರಿಷ್ಯೇ ವಚನಂತವ**-ಎಂಬುದಕ್ಕೆ ವ್ಯಾಖ್ಯಾನವನ್ನು ಬರೆಯುತ್ತಾರೆ. **ಇದಾನೀಮೇವ** - ಈಗಲೇ ಒಡನೆಯೇ, **ಯುದ್ಧಾದಿಕರ್ತ್ರವ್ಯತಾ ವಿಷಯಂ** - ಯುದ್ಧವೇ ಮೊದಲಾದ ಕರ್ಮಯೋಗಕ್ಕೆ ಆವಶ್ಯಕ ಮಾಡಬೇಕಾದ ನಿತ್ಯನೈಮಿತ್ತಿಕಗಳಿಂದ ಕೂಡಿದ ಕರ್ಮಾನುಷ್ಠಾನುಷ್ಠಾನದ ವಿಷಯವಾದ, **ತವ ವಚನಂ**-ತಮ್ಮ ಮಾತನ್ನು ಎಂದರೆ ತಮ್ಮ ವಿಶಿಷ್ಟೋಪದೇಶವನ್ನೂ, **ಕರಿಷ್ಯೇ**-ನಡೆಸುವೆನು; **ಯಥೋಕ್ತಮ್**-ತಮ್ಮ ಉಪದೇಶಾನುಗುಣವಾದ, **ಯುದ್ಧಾದಿಕಮ್**-ಯುದ್ಧವೇ ಮೊದಲಾದವನ್ನು, **ಕರಿಷ್ಯೇ ಇತ್ಯರ್ಥಃ** - ಮಾಡುತ್ತೇನೆಂಬ ತಾತ್ಪರ್ಯವು. **ಕರಿಷ್ಯೇ ವಚನಂತವ** - ಎಂದರೆ ತಮ್ಮ ಹೇಳಿಕೆಯ ಪ್ರಕಾರ ಯುದ್ಧಮಾಡುತ್ತೇನೆಂಬರ್ಥ ಮಾತ್ರವೇ ಅಲ್ಲವು, ಆ ಯುದ್ಧವು ಒಂದುಮಹತ್ತಾದ ಮೋಕ್ಷಪ್ರಾಪ್ತಿಗೆ ಅಙ್ಗವು. ಇದರೊಂದಿಗೆ ಭಕ್ತಿಯೋಗಕ್ಕೆ ಸಾಧನವೆಂದು ಹೇಳಿದ ಕರ್ಮಯೋಗವನ್ನೂ ಅದರಿಂದ ಅನುಗ್ರಹಿತವಾದ ಭಕ್ತಿಯೋಗವನ್ನೂ, ಇವುಗಳಿಗೆ ಅಙ್ಗವಾದ ನಿತ್ಯನೈಮಿತ್ತಿಕಗಳೊಂದಿಗೆ ಅನುಷ್ಠಿಸಿ ಪರಮಪದವನ್ನು ಹೊಂದುವ ಪ್ರಯತ್ನವನ್ನು ಮಾಡುವೆನು. ಅದು ಕಷ್ಟವಾದರೆ, ನಿತ್ಯನೈಮಿತ್ತಿಕಗಳು ಅವಶ್ಯ ನಡೆಸಬೇಕಾದವಾದುದರಿಂದ ಅವುಗಳನ್ನು ಪ್ರಥಮತಃ ಅನುಷ್ಠಿಸಿಕೊಂಡು ಲಘೂಪಾಯವಾದ ಭರನ್ಯಾಸವನ್ನಾಗಲಿ ಅನುಷ್ಠಿಸುವೆನು. ಈ ದುಷ್ಟನಿಗ್ರಹವು ಕ್ಷತ್ರಿಯ ಧರ್ಮವಾದುದರಿಂದ, ಅದನ್ನು ಬ್ರಹ್ಮವಿದ್ಯೆಗೆ ಉಪಕಾರವಾಗಿಯೂ ನಿನ್ನ ಪ್ರೀತ್ಯತಿಶಯವನ್ನು ಸಂಪಾದಿಸುವದಕ್ಕಾಗಿಯೂ ಯುದ್ಧವನ್ನು ನಡೆಸುವೆನು ಎಂಬ ಅರ್ಥವು. ಆದರೆ ಹೀಗೆ ಭಾಷೆಯನ್ನು ಕೊಟ್ಟಿದ್ದರೂ ಅರ್ಜುನನು ಯುದ್ಧವನ್ನು ಮಾತ್ರನಡೆಸಿ ಮುಂದಕ್ಕೆ ಕರ್ಮಯೋಗ ಭಕ್ತಿಯೋಗಾನುಷ್ಠಾನಗಳನ್ನು ನಡೆಸಲಿಲ್ಲವು. ಸ್ಮೃತಿಯು ಲಬ್ಧವಾಗಿದ್ದರೆ ಶ್ರುತಿಯು ಹೇಳಿರುವದು "**ಸ್ಮೃತಿಲಂಬೇ ಸರ್ವಗ್ರನ್ಥೀನಾಂ ವಿಪ್ರಮೋಕ್ಷಃ**" (ಛಾಂ.

೭ ೨೬.೨.) ಎಂಬ ಪ್ರಮಾಣಾನುಸಾರವಾಗಿ ಉಪಾಯಾರಂಭಮೂಲಕ ಅವಿದ್ಯಾರಾಗಾದಿಗಳಿಗೆ ಹೇತುವಾದ ಹೇಯಪ್ರಕೃತಿಯಿಂದ ಬಿಡುಗಡೆಯು ಮತ್ತು ಮೋಕ್ಷಪ್ರಾಪ್ತಿಯು. ಆದರೆ ಭಾರತ ಅಶ್ವಮೇಧ ಪರ್ವದಲ್ಲಿ ಹೇಳಿರುವದೇನೆಂದರೆ " **ಯತ್ತು ತದ್ಭವತಾಪ್ರೋಕ್ತಂ ಪುರಾಕೇಶವ ಸೌಹೃದಾತ್ । ತತ್ಸರ್ವಮ್ ಪುರುಷವ್ಯಾಘ್ರ ಭ್ರಷ್ಟಂ ಮೇ ನಷ್ಟಚೇತಸಃ** " ನಷ್ಟ ಚೇತಸ್ಕನಾದುದರಿಂದ ಓ ಕೇಶವನೇ ಓ ಪುರುಷನೇ ನೀನು ಸೌಹಾರ್ದತೆಯಿಂದ ಮಾಡಿದ ಉಪದೇಶವು ಯಾವುದೋ ಅವೆಲ್ಲವನ್ನು ಮರೆತೆನು ಎಂದು ಅರ್ಜುನನು ಹೇಳಿಕೊಂಡಿರುತ್ತಾನೆ. ಅದಕ್ಕೆ ಶ್ರೀ ಕೃಷ್ಣಭಗವಾನರ ಉತ್ತರವು —" **ಶ್ರಾವಿತಸ್ತ್ವಂ ಮಯಾ ಗುಹ್ಯಂ ಜ್ಞಾಪಿತಶ್ಚ ಸನಾತನಮ್ ॥ ಧರ್ಮಸ್ವರೂಪಿಣಂ ಪಾರ್ಥ ಸರ್ವಲೋಕಾಂಶ್ಚ ಶಾಶ್ವತಾನ್ । ಅಬುದ್ಧ್ಯಾ ನಾಗ್ರಹೀರ್ಯಸ್ತ್ವಂ ತನ್ಮೇ ಸುಮಹದಪ್ರಿಯಮ್ ..... ಸಾಹಿ ಧರ್ಮೋ ಸುಪರ್ಯಾಪ್ತೋ ಬ್ರಹ್ಮಣಃ ಪರವೇದನೇ ॥** ಶ್ರೀ ಕೃಷ್ಣಭಗವಾನರವರು ಹೇಳುತ್ತಾರೆ. ಪರಮರಹಸ್ಯವಾದ ಉಪದೇಶಮಾಡಿ ಪುನಃ ನಿನಗೆ ಪರಮ ವಾತ್ಸಲ್ಯದಿಂದ ಆ ಅನಾದಿಯಾಗಿ ಬಂದ ಉಪದೇಶವನ್ನು ಜ್ಞಾಪಕಕ್ಕೆ ತಂದೆನು. ಆದರೂ ನೀನು ವಿವೇಕಜನ್ಯ ಜ್ಞಾನದಿಂದ ಗ್ರಹಿಸದಿರುವದು ನನಗೆ ತುಂಬಾ ಅತೃಪ್ತಿಯನ್ನುಂಟುಮಾಡಿರುತ್ತದೆ. ಬ್ರಹ್ಮವಿತ್ತಾಗಬೇಕಾದವನು, ಎಷ್ಟು ವಿವೇಕಿಸಿ ತಿಳಿಯಬೇಕೋ ಅಷ್ಟೆಲ್ಲಾ ಉಪದೇಶಿಸಿದ್ದೆನೆಂದು ಪರಿತಾಪ ಪಡುತ್ತಾರೆ.

ಅರ್ಜುನನು **ಶಾಧಿ ಮಾಂ ತ್ವಾಂ ಪ್ರಪನ್ನಮ್** ಎಂದು ಶರಣಾಗತಿಯನ್ನು ಮಾಡಿ ಸಾರಭೂತವಾಗಿ ಗುಹ್ಯತಮವಾದ ಉಪದೇಶವನ್ನು ಹೊಂದಿದರೂ, ಯುದ್ಧವನ್ನುಮಾತ್ರ ನೆರವೇರಿಸಿಬಿಟ್ಟು ಮುಂದೆ **ಭಜಸ್ವಮಾಂ** ಎಂದು ಹೇಳಿದ ವಾಕ್ಯವನ್ನೂ ಅದಕ್ಕೆ ಸಾಧನವಾದ ಕರ್ಮಗಳನ್ನೂ ಅನುಷ್ಠಿಸಲಿಲ್ಲವು. ಇದಕ್ಕೆ ಕಾರಣವೇನೆಂದರೆ, ರಾಜ್ಯಪ್ರಾಪ್ತಿ ಮೊದಲಾದವುಗಳು ಉಂಟಾದುದರಿಂದ ವಿವೇಕಜ್ಞಾನವೂ, ಐಹಿಕದಲ್ಲಿ ವಿರಕ್ತಿಯೂ ಉಂಟಾಗದೇ ಇದ್ದುದರಿಂದ " **ಭಜಸ್ವಮಾಂ** " ಎಂದು ಹೇಳಿದಂತೆ ನಡೆಸಲು ಕಾಲವಿಳಂಬವುಂಟಾಯಿತು. ಅರ್ಜುನನು ಸಾರಾರ್ಥವನ್ನು ಗ್ರಹಿಸಲಿಲ್ಲವು, ತತ್ವತ್ರಯಜ್ಞಾನ ಉಂಟಾಗಲಿಲ್ಲವು ಪರಾವರ ತತ್ವಜ್ಞಾನವನ್ನು ಗ್ರಹಿಸಲಿಲ್ಲವು, ತಾನು ಅಣುವಾಗಿ ಅಸ್ವತಂತ್ರನು, ಪರಮಾತ್ಮನಿಗೆ ಅಧೀನನು; ಉಪಾಯವು ಆತನ ಉಪಾಸನವೇ, ಅದಕ್ಕೆ ಉಪಕಾರಕವಾಗಿ ಐಹಿಕದಲ್ಲಿ ವೈರಾಗ್ಯ, ವಿಹಿತಕರ್ಮಾನುಷ್ಠಾನವು. ಎಂಬೀ ವಿಷಯಗಳಿಗನುಸಾರವಾಗಿ ನಡೆಯಲಿಲ್ಲವು. ಎಂದು ಹೀಗೆಲ್ಲಾ ಹೇಳಲಾಗುವದಿಲ್ಲವು; ಏಕೆಂದರೆ **ನಷ್ಟೋಮೋಹಃ, ಸ್ಮೃತಿರ್ಲಬ್ಧಾ, ಗತಸಂದೇಹಃ** ಹೀಗೆಲ್ಲಾ ಹೇಳಿಕೊಂಡಿರುತ್ತಾನೆ; ಭಗವದನುಗ್ರಹವು ಇಲ್ಲವೆಂದೂ ಅಲ್ಲವು; ಅದೂ ಪೂರ್ಣವಾಗಿರುತ್ತದೆ. ಆದರೂ ಏತಕ್ಕೆ ಒಡನೆ ಕೈಗೂಡಲಿಲ್ಲವು ? ಎಂದು ಕೇಳಿದರೆ ಸ್ಮೃತಿಯು ಪ್ರವಾಹದ ಹಾಗೆಯೇ ಬರುತ್ತಲಿರಬೇಕು. ಐಹಿಕಸಂಬಂಧವನ್ನು ಸ್ಥಿರಸಙ್ಕಲ್ಪದಿಂದ ಶ್ರೀ ಯಾಮುನೇಯರು ರಾಜ್ಯತ್ಯಾಗವಮಾಡಿ ಹೊರಟುಹೋದ ಹಾಗೆ ಹೋಗಲಿಲ್ಲವಾಗಿ ಐಹಿಕವಾದ ರಾಜ್ಯಪ್ರಾಪ್ತಿ ಮೊದಲಾದ ಸಂಬಂಧವೇ ಮೊದಲಾದುವು ಉಂಟಾದುದರಿಂದ ಒಡನೆ ಸಿದ್ಧಿಸಲಿಲ್ಲವು. ಅಪರಾಧನಿವೃತ್ತಿಗಾಗಿ **ಪ್ರಣಿಧಾಯ ಕಾಯಂ ಪ್ರಸಾದಯೇ** ಎಂದು ಶರಣಾಗತಿಯನ್ನು ಅನುಷ್ಠಿಸಿರುತ್ತಾನೆ. ಆದರೆ ಅನುಸರಿಸಿಬಂದ ಭಗವದನುಗ್ರಹವು ಕೊನೆಗಾದರೂ ಫಲಕಾರಿಯಾಗುವದರಿಂದ ಕೊನೆಗೆ ಬದರಿಕಾಶ್ರಮವನ್ನು ಸೇರಿ ಉಪಾಸನೆಯನ್ನು ಕೈಕೊಂಡು ಮುಕ್ತಿಹೊಂದಿದನೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಅರ್ಜುನನು **ಕರಿಷ್ಯೇ ವಚನಂ ತವ** ಎಂದು ಹೇಳಿಕೊಂಡರೂ, ಒಂದು ಅಂಶವನ್ನು ಮಾತ್ರ ನಡೆಸಿದನೇ

ವಿನಾ, ಎಲ್ಲವನ್ನೂ ಒಡನೆಯೇ ನಡೆಸಲಿಲ್ಲವು. ಕ್ರಮೇಣ ನಡೆಸಿದುದರಿಂದ **ಕರಿಷ್ಯೇವಚನಂತವ** ಎಂಬ ಉಕ್ತಿಯೂ ಸಾಧುವೇ ಎಂದು ಗ್ರಹಿಸಬಹುದು.

ಈ ಶ್ಲೋಕದಲ್ಲಿ ಶ್ರೀ ಯತಿವರ್ಯರು ಶ್ರೀಮದ್ಗೀತಾಭಿಪ್ರಾಯದ ಸಾರಾಂಶವನ್ನು ವ್ಯಕ್ತಪಡಿಸಿರುತ್ತಾರೆ. ಭ್ರಮಜ್ಞಾನವು ಯಾವುದು; ಯಥಾರ್ಥಜ್ಞಾನವು ಯಾವುದು ಎಂಬುದನ್ನು ಸೂಕ್ಷ್ಮವಾಗಿ ಹೇಳಿದರೂ ಬಹುಸ್ಫುಟವಾಗಿ ವ್ಯಕ್ತಪಡಿಸಿರುತ್ತಾರೆ. ಆದುದರಿಂದಲೇ ಶ್ರೀ ದೇಶಿಕವರ್ಯರು ತಾತ್ಪರ್ಯಚಂದ್ರಿಕೆಯಲ್ಲಿ ವಿಸ್ತರಿಸಲಿಲ್ಲವು

ಈ ಶ್ಲೋಕದಲ್ಲಿ ಮೋಹವು ಅರ್ಜುನನಿಗೆ ಪ್ರಾಪ್ತವಾದುದು ೪ ವಿಧವಾದುದು ಎಂದು ಹೇಳಲ್ಪಟ್ಟಿತು:—(೧) ದೇಹವೇ ಆತ್ಮಾ ಎಂಬ ಭ್ರಾನ್ತಿಯು; ಪ್ರತಿಕಕ್ಷಿಯಾಗಿ ಯುದ್ಧಕ್ಕೆ ಬಂದಿರುವವರು ತನಗೆ ಬಂಧುಗಳು, ಗುರುಗಳು ಎಂದು ಭಾವಿಸಿದುದರಿಂದ; ಇವರಲ್ಲಿರುವ ಆತ್ಮರುಗಳಿಗೆ ಉಪಾಧಿಯಿಂದ ಅನಿಮಿತ್ತವಾಗಿ ಪ್ರಾಪ್ತವಾಗಿರುವುವು ಈ ಶರೀರಗಳು ಎಂಬ ಜ್ಞಾನವಿಲ್ಲದೆ ಹಾಗೆ ಭ್ರಮಜ್ಞಾನವು. (೨) ತಾನು ಯುದ್ಧಮಾಡುವದಿಲ್ಲವೆಂದು ಹೇಳಿ ಬಿಲ್ಲನ್ನು ಕೆಳಗೆ ಹಾಕಿದುದರಿಂದ ತಾನು ಸ್ವತಂತ್ರನೆಂಬ ಭ್ರಮವು. (೩) ಹಾಗೆ ಸ್ವತಂತ್ರಿಸಿ ನಡೆದುದರಿಂದಲೇ ಪರಮಾತ್ಮನಿಗೆ ತಾನು ಅಧೀನವಲ್ಲವೆಂಬ ಭ್ರಮವು. (೪) ಜ್ಞಾನಯೋಗವನ್ನೇ ಮಾಡಬಹುದೇ ಮತ್ತು ಕರ್ಮಸಂನ್ಯಾಸವೆಂದರೇನು ಎಂಬ ಪ್ರಶ್ನೆಯನ್ನು ಎರಡು ಸಂದರ್ಭದಲ್ಲಿ ಮಾಡಿದುದರಿಂದ ವಿಹಿತ ಕರ್ಮಗಳ ಪರಿತ್ಯಾಗ ಮಾಡಬಹುದೆಂಬ ಭ್ರಮೆಯು.

ಲಬ್ಧವಾದ ಯಥಾರ್ಥಜ್ಞಾನವು ಯಾವುದೆಂದರೆ:—(೧) ಚಿತ್ ಅಚಿತ್ ಈಶ್ವರರೆಂಬ ಮೂರು ತತ್ವಗಳುಂಟೆಂದೂ ಚಿದಚಿತ್ತುಗಳು ಭಗವಂತನಿಗೆ ಶರೀರವಾಗಿ, ಭಗವಂತನು ಅವುಗಳ ಆತ್ಮಾವಾಗಿ ನಿಯಾಮಕನಾಗಿದ್ದಾನೆ. (೨) ಈ ಮೂರುತತ್ವಗಳೂ ಸತ್ಯವಾಗಿ ನಿತ್ಯವಾಗಿವೆ. (೩) ಇವುಗಳಲ್ಲಿ ಅಚಿತ್ತುಸ್ವರೂಪ ಸ್ವಭಾವಗಳ ವಿಕಾರಉಳ್ಳದು - ಬದ್ಧಚೇತನನು ಸಸ್ವರೂಪವಿಕಾರವಿಲ್ಲದೆ ಸ್ವಭಾವವಿಕಾರಉಳ್ಳವನು; ನಿತ್ಯರು ಯಾವಾಗಲೂ ವಿಕಾರವಿಲ್ಲದೆ, ಅವರುಗಳು ನಿತ್ಯರಾಗಿರಲಿ ಎಂಬ ಸರ್ವೇಶ್ವರ ಸಙ್ಕಲ್ಪಕ್ಕೆ ಒಳಗಾದವರು. ಮುಕ್ತರು ಸ್ವಾಮಿಯ ಅನುಗ್ರಹವನ್ನು ಉಪಾಯಾನುಷ್ಠಾನವನ್ನು ಹೊಂದಿ ತಮಗೆ ಉಂಟಾಗಿದ್ದ ಸ್ವಭಾವ ವಿಕಾರವನ್ನು ಕಳೆದುಕೊಂಡವರು. ಸರ್ವೇಶ್ವರನೂ ಸ್ವರೂಪ ಸ್ವಭಾವ ಎರಡರಲ್ಲೂ ವಿಕಾರವಿಲ್ಲದವನು, ಅಚಿತ್ತು ಚಿತ್ತುಗಳಿಗೆ ಆತ್ಮಾವಾಗಿರುವದರಿಂದ ಅವುಗಳಿಗೆ ನಿಯಾಮಕನು; (೪) ಜೀವಾತ್ಮರುಗಳೆಲ್ಲಾ ಜ್ಞಾನಸ್ವರೂಪ ಜ್ಞಾನಗುಣವುಳ್ಳವರಾಗಿ ಎಲ್ಲರೂ ಸಮವು; ಅವರುಗಳಿಗೆ ಸ್ವಸ್ಮೈಭಾಸಮಾನತ್ವ (ಪ್ರತ್ಯಕ್ತ್ವ) ಉಂಟು; ವರುಗಳೆಲ್ಲಾ ಅಣುಸ್ವರೂಪರಾದರೂ ಅವರ ಧರ್ಮಭೂತಜ್ಞಾನವು ವಿಭುವು; ಬದ್ಧದೆಶೆಯಲ್ಲಿಮಾತ್ರ ಈ ಧರ್ಮಭೂತಜ್ಞಾನಕ್ಕೆ ಸಙ್ಕೋಚವು, ಮುಕ್ತದೆಶೆಯಲ್ಲಿ ಸಙ್ಕೋಚವಿಲ್ಲವು. (೫) ಜಗತ್ತಿನ ಸೃಷ್ಟಿಸ್ಥಿತಿ ಲಯಾದಿಗಳಿಗೆಲ್ಲಾ ಕಾರಣನು ಸರ್ವೇಶ್ವರನು, ಜೀವಾತ್ಮನಿಗೆ ಈ ಶಕ್ತಿಯಿಲ್ಲವು. ಆತನು ಜಗತ್ತನ್ನು ಸೃಷ್ಟಿಸಿ ವ್ಯಾಪಿಸಿರುವನು; ಹೀಗೆ ವ್ಯಾಪಿಸಿದ್ದರೂ ಹೇಯಸಂಬಂಧವೂ ಆತನಿಗಿಲ್ಲವು, ಆತನಲ್ಲಿ ಹೇಯಗುಣವೇ ಇಲ್ಲವು; ಕಲ್ಯಾಣಗುಣಗಣಮಹೋದಧಿಯು. ಕೃಪಾಮಹೋದಧಿಯಾಗಿ ಜೀವಾತ್ಮನಿಗೆ ಸರ್ವವಿಧಶ್ರೇಯಸ್ಸನ್ನು ಉಂಟುಮಾಡುವವನು ಅವನೇ (೬) ಈಗಿನ ನಮ್ಮ ಬದ್ಧದೆಶೆಯು ಹೇಯವಾದುದು; ನಾವು ಪ್ರಕೃತಿಸಂಬಂಧ ತೊಲಗುವಯತ್ನವನ್ನು ಮಾಡಬೇಕು; ಇದಕ್ಕೆ ಸಿದ್ಧೋಪಾಯನು ಅವನೇ; ಆದುದರಿಂದ

**ಭಾ. ಅವ. ಧೃತರಾಷ್ಟ್ರಸ್ಯ ಸ್ವಪುತ್ರಾಃ ಪಾಂಡವಾಶ್ಚಯುದ್ಧೇಕಿಂಕರಿಷ್ಯನ್ತೀತಿಪೃಚ್ಛತೇ, ಸಂಜಯಉವಾಚ.**

**ಮೂ. ಇತ್ಯಹಂ ವಾಸುದೇವಸ್ಯ ಪಾರ್ಥಸ್ಯಚ ಮಹಾತ್ಮನಃ ।**
**ಸಂವಾದ ಮಿಮಮಶ್ರೌಷ ಮದ್ಭುತಂ ರೋಮಹರ್ಷಣಂ ॥ ೭೪ ॥**

ಅವನ ಅನುಗ್ರಹವನ್ನು ಸಂಪಾದಿಸುವುದಕ್ಕಾಗಿ, ಆತನ ಆರಾಧನಾರೂಪದಲ್ಲಿ ಆತನಿಂದ ವಿಹಿತಕರ್ಮಗಳಾದ ನಿತ್ಯನೈಮಿತ್ತಿಕಗಳನ್ನು ಇನ್ನೂ ಇತರ ಇತಿಕರ್ತವ್ಯತಾರೂಪ ಕರ್ಮಗಳನ್ನೂ, ಫಲ, ಕರ್ತೃತ್ವ ಸಙ್ಗಗಳ ತ್ಯಾಗಪೂರ್ವಕವಾಗಿ ಭಗವತ್ಪ್ರೀತಿಗಾಗಿ ಆತನಲ್ಲಿ ಸಮರ್ಪಿಸಿ ಯಾವಜ್ಜೀವವೂ ಅನುಷ್ಠಿಸತಕ್ಕದ್ದು. (೭) ಇಂತಹ ಕರ್ಮಯೋಗದಿಂದ ಪ್ರೀತನಾದ ಭಗವಂತನು ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳನ್ನೆಲ್ಲಾ ಹೋಗಲಾಡಿಸಿ, ತನ್ನ ಉಪಾಸನವು ಕೈಗೂಡುವಹಾಗೆ ಮಾಡಿ, ತನ್ನ ಲೋಕವಾದ ದಿವ್ಯ ವೈಕುಂಠಕ್ಕೆ ಕರೆಸಿಕೊಂಡು, ಪರಿಪೂರ್ಣಬ್ರಹ್ಮಾನುಭವರೂಪ ಆನಂದವನ್ನೂ ತನಗೆ ಸರ್ವವಿಧ ಕೈಂಕರ್ಯವನ್ನು ಮಾಡುವ ಸುಕೃತವನ್ನೂ ಉಂಟುಮಾಡುವನು; ಎಂಬುದು.

**ಭಾಷ್ಯಾವತಾರಿಕೆಯ ಅರ್ಥವು :—** ಇದು ಮುಂದಿನ ಐದು ಶ್ಲೋಕಗಳಿಗೂ ಅವತಾರಿಕೆಯು. ಗೀತಾಪ್ರಥಮಶ್ಲೋಕದಲ್ಲಿ ಧೃತರಾಷ್ಟ್ರನು ಸಂಜಯರನ್ನು **"ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ । ಮಾಮಕಾಃ ಪಾಂಡವಾಶ್ಚೈವ ಕಿಮ ಕುರ್ವತ ಸಂಜಯ"** ತನ್ನವರಾದ ದುರ್ಯೋಧನಾದಿಗಳೂ ಪಾಂಡವರೂ ಯುದ್ಧಮಾಡುವ ಅಪೇಕ್ಷೆಯುಳ್ಳವರಾಗಿ ಎದುರಿಸಿ ನಿಂತಿದ್ದರಲ್ಲಾ' ಏನಾಯಿತು ಎಂದು ಪ್ರಶ್ನಿಸಿದ್ದನು; ಸಂಜಯರು ಬ್ರಹ್ಮವಿತ್ತಾದುದರಿಂದ, ಆತನಿಗೆ ಅಂತಹ ಬ್ರಹ್ಮಜ್ಞಾನವನ್ನುಂಟುಮಾಡಬೇಕೆಂಬ ಉದಾರಭಾವದಿಂದ, ಅಯ್ಯೋ ಈ ಧೃತರಾಷ್ಟ್ರನಿಗೆ ಹೀಗೆ ವೃದ್ಧನಾಗಿ ಕುರುಡನಾಗಿದ್ದರೂ ಐಹಿಕದಲ್ಲಿ ಮಮತೆಯು ಕಳೆಯದೆ, ಪಾಂಡವರು ತನ್ನಿಂದ ಪೋಷಿತರಾಗಿದ್ದರೂ, ಅವರನ್ನು ಹೊರಗಿನವರಂತೆ ತನ್ನ ಪುತ್ರರಾದ ಮಾಮಕರಿಗೆ ಜಯವನ್ನೂ ಪಾಂಡವರಿಗೆ ಅನಿಷ್ಟವನ್ನೂ ಕೋರುತ್ತಾ ಇದ್ದಾನಲ್ಲಾ; ಈತನು ಎಂತಹ ನಿರ್ಭಾಗ್ಯನು, ಸರ್ವೇಶ್ವರನು ಧಾರ್ಮಿಕರಿಗೇನೇ ಸಹಾಯವು, ಅಧರ್ಮಿಗಳಿಗೆ ನಿಗ್ರಹರೂಪವೇ ಎಂಬೀ ಅರ್ಥವನ್ನು ತಿಳಿಯದೇ ಇರುತ್ತಾನಲ್ಲಾ ಎಂಬ ಪರಿತಾಪದಿಂದ, ಈ ಕೃಷ್ಣಾರ್ಜುನಸಂವಾದರೂಪ ಉಪದೇಶವನ್ನು ಹೊಂದಿದರೆ ಸ್ವಾಮಿಸಙ್ಕಲ್ಪರೀತ್ಯಾ ಸಮಸ್ತವೂ ನಡೆದು ಹೋಗುತ್ತದೆ, ಐಹಿಕಾಭಿಮಾನವೆಲ್ಲಾ ತೊಲಗಿ ವೈರಾಗ್ಯವು ಪ್ರಾಪ್ತವಾಗುತ್ತದೆಂದು ಭಾವಿಸಿ, ಈ ಭಗವದ್ಗೀತೆಯ ಉಪದೇಶವನ್ನೆಲ್ಲಾ ಸಾಙ್ಗೋಪಾಙ್ಗವಾಗಿ ತಿಳಿಯಪಡಿಸಿ, ಆತನ ಪ್ರಶ್ನೆಗೆ ಸಾಕ್ಷಾತ್ತಾದ ಉತ್ತರವನ್ನು ಹೇಳಲು ಹೊರಟು, ಭಗದ್ಗೀತಾಮಾಹಾತ್ಮ್ಯೆಯನ್ನು ಕೇಳಿ, ಸ್ಮರಿಸಿ, ರೋಮಾಂಚವುಂಟಾಗಿ ಅದರಿಂದುಂಟಾದ ಆಶ್ಚರ್ಯವನ್ನೂ ಆನಂದವನ್ನೂ ಮೊದಲು ನಾಲ್ಕು ಶ್ಲೋಕಗಳಿಂದ ವ್ಯಕ್ತಪಡಿಸಿ ಅಮೋಘಾರ್ಥವನ್ನು ಒಳಗೊಂಡಿರುವ ಕೊನೆಯ ಶ್ಲೋಕದಿಂದ ಸಾಕ್ಷಾತ್ತಾಗಿ ಉತ್ತರವನ್ನು ಹೇಳುತ್ತಾರೆಂದು ತಿಳಿಸುವದಕ್ಕಾಗಿ ಸಙ್ಗ್ರಹವಾಗಿ ಅವತಾರಿಕೆಯನ್ನು ದಯಪಾಲಿಸುತ್ತಾರೆ. **ಧೃತರಾಷ್ಟ್ರಸ್ಯ**-ಧೃತರಾಷ್ಟ್ರನ, **ಸ್ವಪುತ್ರಾಃ**-ತನ್ನ ಸ್ವಂತಪುತ್ರರೂ, **ಪಾಂಡವಾಶ್ಚ**-ಪಾಂಡವರೂ ಸಹ, **ಯುದ್ಧೇ ಕಿಂ ಕರಿಷ್ಯನ್ತಿ**-ಯುದ್ಧದಲ್ಲಿ ಏನುಮಾಡುತ್ತಿದ್ದಾರೆ, **ಇತಿ**-ಎಂಬದಾಗಿ, **ಪೃಚ್ಛತೇ**-ಕೇಳುವವನಾಗಲಾಗಿ, **ಸಂಜಯ ಉವಾಚ**-ಸಂಜಯನು ಹೇಳುತ್ತಾನೆಂದರೆ ಇಲ್ಲಿ **ಸ್ವಪುತ್ರಾಃ**-ಎಂಬ ಪ್ರಯೋಗವು **ಮಾಮಕಾಃ** ಎಂದು ಗೀತಾ ಪ್ರಥಮಶ್ಲೋಕದಲ್ಲಿರುವದನ್ನು

ಅನುಸರಿಸಿದುದೆಂದು ಭಾವಿಸತಕ್ಕದ್ದು. ಗೀತಾಶಾಸ್ತ್ರವೆಲ್ಲಾ ಶ್ರೀ ಕೃಷ್ಣಾರ್ಜುನರ ಸಂವಾದವು; ಅದನ್ನು ಶ್ರೀ ವ್ಯಾಸಮಹರ್ಷಿಯು ತಮ್ಮ ದಿವ್ಯ ಚಕ್ಷುಸ್ಸಿನಿಂದ ಗ್ರಹಿಸಿ ಹೇಳಿದುದು. ಶ್ರೀ ವ್ಯಾಸ ಮಹರ್ಷಿಯು ಮಹಾಭಾಗವತ ಶಿಖಾಮಣಿಯಾದ ಸಂಜಯನಿಗೆ ತಿಳಿಸಿದರು. ಅದನ್ನೇ ಸಮಗ್ರವಾಗಿ ಸಂಜಯರು ಧೃತರಾಷ್ಟ್ರನಿಗೆ ಉಪದೇಶಿಸಿದುದು. ಹೀಗಿರುವಾಗ ಅಲ್ಲಲ್ಲೇ **ಸಂಜಯ ಉವಾಚ**-ಎಂದು ಪೃಥಕ್ಕಾಗಿ ಹೇಳುವದಕ್ಕೇನು ಕಾರಣವೆಂದು ಪ್ರಶ್ನಿಸಬಹುದು; ಪ್ರಾಪ್ತಸ್ಥಳಗಳಲ್ಲಿ ಕಾರಣವನ್ನು ತಿಳಿಸಿರುವೆವು. ಮೊದಲು ಪ್ರಾರಂಭದಲ್ಲೂ "**ಧರ್ಮಕ್ಷೇತ್ರೇ ಕುರಕ್ಷೇತ್ರೇ**" ಎಂಬ ಧೃತರಾಷ್ಟ್ರ ಪ್ರಶ್ನೆಗೆ, "**ಸಂಜಯ ಉವಾಚ, ದೃಷ್ಟ್ವಾತು ಪಾಂಡವಾನೀಕಂ**" ಎಂದಿರುವದರಿಂದ ನಿಗಮನದಲ್ಲೂ **ಸಂಜಯ ಉವಾಚ** ಎಂದು ಹೇಳಿ ಮುಗಿಸಿದರೆ ಸಮಸ್ತವೂ ಸಂಜಯವಾಕ್ಯವೇ ಎಂದು ಏರ್ಪಡುತ್ತದೆ ಎಂಬದನ್ನು ಪ್ರದರ್ಶಿಸುವದಕ್ಕಾಗಿ ಸಂಜಯ ವಾಕ್ಯವೆಂದು ಭಾವಿಸತಕ್ಕದ್ದು. ಹಿಂದೆ ಪ್ರಥಮಶ್ಲೋಕದ ಪ್ರಶ್ನೆಗೆ ಇದೀಗ ಸಾಕ್ಷಾದುತ್ತರವೆಂದು ತೋರಿಸುವದಕ್ಕಾಗಿ ಎಂಬುದೂ ಇನ್ನೊಂದು ಅಭಿಪ್ರಾಯವು. ಮೂರನೆಯ ವಿಷಯವೇನೆಂದರೆ ಯಾರಿಗೆ ಜಯವೆಂಬುದನ್ನು ಕೇಳಬೇಕೇ, ಪ್ರಾಜ್ಞನಾಗಿರುವವನಿಗೆ ಯಾರಿಗೆ ಜಯವೆಂಬುದು ಸ್ವತಸ್ಸಿದ್ಧವಾದ ವಿಷಯವು, ಈ ವಿಷಯದಲ್ಲಿ ನೀನು ನನ್ನನ್ನು ಕೇಳಬೇಕೇ ಎಂದು ಪ್ರಾಜ್ಞನಾದ **ಮಹಾಮತಿಯಾದ ಸಂಜಯನು** ಅಲ್ಪಜ್ಞನಾಗಿ ಮಂದ ಮತಿಯನ್ನು ಕುರಿತು ಹೇಳುವದು ನ್ಯಾಯವೆಂಬಂಶವನ್ನು ಪ್ರಕಟಿಸುವದಕ್ಕಾಗಿಯೂ **ಸಂಜಯ ಉವಾಚ** ಎಂದು ಇಲ್ಲಿ ಹೇಳಲ್ಪಟ್ಟಿರುತ್ತದೆ. ಸರ್ವೇಶ್ವರನಲ್ಲಿ ಅರ್ಜುನನ ಹಾಗೆ ಶರಣಾಗತಿಯನ್ನು ಮಾಡಿ, ಆತನನ್ನೇ ಸಿದ್ಧೋಪಾಯನನ್ನಾಗಿ ವರಿಸಿ, ಆತನ ಪ್ರೀತಿಯನ್ನು ಸಂಪಾದಿಸಿಕೊಂಡವನಿಗೇನೆ ಸರ್ವವಿಧ ಶ್ರೇಯಸ್ಸೇ ವಿನಾ ಹಾಗೆ ಮಾಡದವನಿಗೆ ಎಂದಿಗೂ ಇಲ್ಲವೆಂಬ ಅಮೋಘಾರ್ಥವನ್ನು ಉಪದೇಶಿಸುವದಕ್ಕೆ **ಸಂಜಯರಾದ**, ಚನ್ನಾಗಿ ಇಂದ್ರಿಯಗಳನ್ನೆಲ್ಲಾ ಜಯಿಸಿ ಮಹಾವಿರಕ್ತಿಯಿಂದ ಇದ್ದುಕೊಂಡು ಬ್ರಹ್ಮವಿದ್ಯೆಯನ್ನೆಲ್ಲಾ ಮಹಾಗುರುವಿನಿಂದ ಅಧಿಕರಿಸಿದ ಮಹಾನುಭಾವರೇಸರಿ ಎಂಬರ್ಥವನ್ನು ನಿಗಮನದಲ್ಲಿ ಪ್ರಕಟಿಸುವದಕ್ಕಾಗಿಯೂ **ಸಂಜಯ ಉವಾಚ** ಎಂಬ ಪ್ರಯೋಗವು.

**ಇತಿ**- ಈ ಪ್ರಕಾರವಾಗಿ, **ಅಹಮ್**-ಇಂತಹ ಪರಮಭಾಗ್ಯೋದಯವನ್ನು ಮಹರ್ಷಿಯಿಂದ ಪಡೆದ ನಾನು, **ವಾಸುದೇವಸ್ಯ**-ವಸುದೇವಪುತ್ರನಾಗಿ ಅವತರಿಸಿದ ಶ್ರೀ ಕೃಷ್ಣ ಭಗವಾನರವರ ಮತ್ತು **ಮಹಾತ್ಮನಃ**-ಉದಾರಮನಸ್ಕನಾದ ಅಥವಾ ಮಹಾಪ್ರಾಜ್ಞನಾದ ವಾಸುದೇವ ಸಹೋದರಿಯಾದ, **ಪಾರ್ಥಸ್ಯ**-ಪೃಥುವಿನ ಪುತ್ರನಾದ ಅರ್ಜುನನ, **ಅದ್ಭುತಂ**-ಅತ್ಯಾಶ್ಚರ್ಯಕರವಾಗಿ, **ರೋಮಹರ್ಷಣಂ**-ಹೀಗೆ ಅದ್ಭುತವಾಗಿರುವದರಿಂದಲೇ ಮೈಯ್ಯಲ್ಲೆಲ್ಲಾ ತುಂಬಾ ಆನಂದದಿಂದ ರೋಮಾಂಚವನ್ನುಂಟುಮಾಡುವ, **ಇಮಂಸಂವಾದಂ**-ಇವರಿಬ್ಬರ ಈ ಪ್ರಶ್ನೋತ್ತರ ರೂಪವಾದ ಸಂವಾದವನ್ನು **ಅಶ್ರೌಷಮ್**-ಕೇಳಿತಿಳಿದೆನು,ಅರ್ಜುನನು ಮಹಾತ್ಮನಾದುದರಿಂದಲೇ ಆತನಿಗೆ ಉಪದೇಶವು, ಯುಧಿಷ್ಠಿರನು ಮಹಾತ್ಮನಲ್ಲವೋ ಆತನನ್ನು ಕುರಿತು ಏಕೆ ಉಪದೇಶಿಸಲಿಲ್ಲವು? ಎಂದರೆ ಅರ್ಜುನನೂ ತನ್ನ ಅಂಶಾವತಾರಿಯಾಗಿ ತನ್ನ ಉದ್ದೇಶ್ಯಗಳಿಂದ ಶಿಷ್ಟಪರಿಪಾಲನೆ ದುಷ್ಟಸಂಹಾರ ಧರ್ಮಸಂಸ್ಥಾಪನಾದಿಗಳನ್ನು ನಡೆಸುವದಕ್ಕಾಗಿಯೇ ನರಾವತಾರಿಯಾದುದರಿಂದ ಆತನನ್ನು ಕುರಿತೇ ಉಪದೇಶವು. **ಪಾರ್ಥನು**-ಮಹಾತ್ಮನೆಂದು ಇನ್ನೂ ಏಕೆ ಹೇಳಲ್ಪಟ್ಟಿತು ಎಂದರೆ ಹಿಂದೆ "**ವಾಸುದೇವಸ್ಸರ್ವಮಿತಿ ಸಮಹಾತ್ಮಾ ಸುದುರ್ಲಭಃ**" ವಾಸುದೇವನೇ ಸರ್ವವೆಂಬ ಜ್ಞಾನ ಉಂಟಾಗುವದು ಬಹಳ ಕಷ್ಟವೆಂದು ಹೇಳಲ್ಪಟ್ಟಿತ್ತು (ಗೀ　　) ಈ ಅರ್ಜು

ನನಾದರೋ ವಾಸುದೇವನೇ ತನಗೆ ಸರ್ವವೂ ಎಂದು ತಿಳಿದ ಮಹಾಪ್ರಾಜ್ಞನು: ಅದು ಹೇಗೆಂದರೆ —ದುರ್ಯೋಧನನೂ ಅರ್ಜುನನೂ ಇಬ್ಬರೂ ಶ್ರೀ ಕೃಷ್ಣನಿಂದ ಸಹಾಯವನ್ನು ಬಯಿಸುವವರಾಗಿ ಶ್ರೀ ಕೃಷ್ಣನು ಮಲಗಿರುವಾಗ ಆತನ ತಲೆಯ ಕಡೆಯಲ್ಲಿ ದುರ್ಯೋಧನನೂ ಪಾದವನ್ನಾಶ್ರಯಿಸಿ ಅರ್ಜುನನೂ ಕುಳಿತು, ಶ್ರೀ ಕೃಷ್ಣನು ತನ್ನಲ್ಲಿರುವ ಸರ್ವಸೈನ್ಯವೂ ಬೇಕೇ, ಯುದ್ಧದಲ್ಲಿ ಏನೊಂದು ಸ್ವಾತಂತ್ರ್ಯವನ್ನೂ ತೆಗೆದುಕೊಳ್ಳದೆ ತಾನು ಬೇಕೇ ಎಂದು ಕೇಳಲು; ಮಂದಮತಿಯಾದ ದುರ್ಯೋಧನನು ಏಳು ಅಕ್ಷೋಹಿಣಿಯಿಂದ ಪ್ರೀತನಾಗಿ ತೆರಳಿದನಂತರ, **ವಾಸುದೇವಸ್ಸರ್ವಂ**-ಎಂಬಭಿಪ್ರಾಯದಿಂದ ತಾವು ಯುದ್ಧಮಾಡದಿದ್ದರೂ ಸುಮ್ಮನೆ ಬಂದರೆ ಸಾಕೆಂದು ಹೇಳಿದ ಪ್ರಾಜ್ಞನಾದುದರಿಂದ **ಮಹಾತ್ಮನು;** ಮತ್ತು ಬಂಧುಗಳೊಂದಿಗೂ ಗುರುಗಳೊಂದಿಗೂ ಯುದ್ಧಮಾಡುವುದು ಧರ್ಮವೋ ಎಂದು ತಿಳಿಯಬೇಕಾದರೆ ಶ್ರೀ ಕೃಷ್ಣನಲ್ಲಿ ಶರಣಾಗತಿಮಾಡಿ ತಿಳಿಯದಲ್ಲದೆ ಅಜ್ಞಾನನಿವೃತ್ತಿಯುಂಟಾಗುವದಿಲ್ಲವೆಂದು ಭಾವಿಸಿ, ಅಮೋಘವಾದ ಉಪದೇಶವನ್ನು ಪದೇಪದೇ ಪ್ರಶ್ನಿಸಿ ನಿಸ್ಸಂದೇಹವಾಗಿ ತಿಳಿದು ಇತಿಕರ್ತವ್ಯತಾರೂಪವಾದ ಅನುಷ್ಠಾನವು ಹೇಗೆ ಲೋಕಹಿತಕ್ಕೂ ಮೋಕ್ಷಪ್ರಾಪ್ತಿಗೂ ಹೇತುವಾಗುತ್ತದೆಂದು ತಿಳಿದವನಾದುದರಿಂದಲೂ ಮಹಾಪ್ರಾಜ್ಞನಾಗಿ **ಮಹಾತ್ಮನು.** ಈ ಸಂವಾದದಲ್ಲಿ ಸರ್ವೇಶ್ವರಪ್ರೀತಿಯನ್ನು ಪುನಃ ೧೧ ನೆಯ ಅಧ್ಯಾಯೋಪದೇಶಕಾಲದಲ್ಲಿ **"ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ ಪ್ರಸಾದಯೇ"** ಎಂದು ಶರಣಾಗತಿಯನ್ನು ಮಾಡಿ, ಅದರ ಮಾಹಾತ್ಮ್ಯೆಯನ್ನು ಪ್ರಕಟಿಸಿ ಸರ್ವೇಶ್ವರನು ಸಾಧಾರಣವಾಗಿ ಎಲ್ಲರಿಗೂ ಪ್ರದರ್ಶಿಸದೇ ಇರುವ ದಿವ್ಯರೂಪಗಳನ್ನು ಪ್ರತ್ಯಕ್ಷದಿಂದ ನೋಡುವ ಸುಕೃತವನ್ನು ಹೊಂದಿದ್ದಲ್ಲದೆ, -ಗೀತಾಚರಮಶ್ಲೋಕದಲ್ಲಿ ಆ ಶರಣಾಗತಿಯ ಮಾಹಾತ್ಮ್ಯೆಯನ್ನು ಸರ್ವೇಶ್ವರನು ತಾನೇ ಪ್ರಕಟಿಸುವ ಹಾಗೆ ಮಾಡಿದುದರಿಂದಲೂ ಮಹಾಪ್ರಾಜ್ಞನಾದುದರಿಂದ **ಮಹಾತ್ಮನಃ**-ಎಂಬ ಪ್ರಯೋಗವು. ಹೀಗೆ **ವಾಸುದೇವಸ್ಸರ್ವಂ** ಎಂಬ ಅಭಿಪ್ರಾಯವು ಏತರಿಂದೆಂದರೆ ಆ ಪರವಾಸುದೇವನೇ, ಈಗಲೂ ವಸುದೇವಪುತ್ರವಾಸುದೇವನಾಗಿ ಅವತರಿಸಿರುತ್ತಾನೆಂದು ದೃಢವಾಗಿ ತಿಳಿದಿರುವದರಿಂದಲೂ ಮಹಾತ್ಮನು. ಹೀಗೆ ಎರಡು ವಿಧವಾಗಿಯೂ ಅರ್ಥವಿವರಣವುಂಟಾಗಲೆಂದೇ **ವಾಸುದೇವಸ್ಯ ಪಾರ್ಥಸ್ಯ** ಎಂಬ ಮಹರ್ಷಿಯ ಪ್ರಯೋಗವು. **ವಾಸುದೇವಸ್ಯ ಪಾರ್ಥಸ್ಯ ಚ ಸಂವಾದಂ** ಎಂಬುದರಿಂದ ಸೋದರತ್ತೆ ಸೋದರಮಾವಂದಿರ ಮಕ್ಕಳಾಗಿರುವದರಿಂದ ಬಾಂಧವ್ಯವೂ ಪರಮ ಪ್ರೀತಿಯೂ ದ್ಯೋತಿತವಾಗುವದರಿಂದ ಹಾಗೆಯೇ ಮುಕ್ತಿಯನ್ನು ಕೊಡುವ ಪರವಾಸುದೇವಮೂರ್ತಿಗೂ ಮುಕ್ತಿಗೆ ಅರ್ಹನಾಗಿರುವ ಭಕ್ತನಾದ ನಿತ್ಯಹೃದ್ಯನಾಗಿರುವ ಬದ್ಧಜೀವನಿಗೂ ಪರಮಸೌಹಾರ್ದವು ಉಂಟೆಂದು ತೋರಿಬರುತ್ತದೆ. ಮುಕ್ತಿದಾಯಕನಾದ ಮುಕುಂದನಿಗೆ ಅಷ್ಟುಪ್ರೀತಿಯು ಈ ಕೌಸ್ತುಭಸ್ಥಾನೀಯನಾದ ಜೀವನಲ್ಲಿ ಉಂಟೆಂಬುದು ವ್ಯಕ್ತವು. ಹಾಗಿಲ್ಲದಿದ್ದರೆ, ಇಂತಹ ಅದ್ಭುತವಾದ ರೋಮಹರ್ಷಣವಾದ ಸಂವಾದವನ್ನು ನಮ್ಮೆಲ್ಲರ ಉತ್ತಾರಣಾರ್ಥವಾಗಿ ಎಂದಿಗೂ ಈ ಲೀಲಾಸಾರಥಿಯು ದಯಪಾಲಿಸುತ್ತಿರಲಿಲ್ಲವು. ಇದು ಅದ್ಭುತವಾಗಿ ರೋಮಹರ್ಷಣವು ಹೇಗೆಂದರೆ (೧) ತನ್ನ ನೈಜಸ್ವರೂಪವು ಎಷ್ಟು ಅದ್ಭುತವಾದ ಜ್ಯೋತಿಸ್ಸ್ವರೂಪವಾದುದಾಗಿ ಅದಕ್ಕೆ ಸ್ವಸ್ಮೈಭಾಸಮಾನವಾದ ಶಕ್ತಿ ಏನು, ವಿಭುವಾದ ಧರ್ಮಭೂತ ಜ್ಞಾನವೇನು? ಸರ್ವವನ್ನೂ ಏಕಕಾಲದಲ್ಲೇ ತಿಳಿಯುವ ಅದ್ಭುತಶಕ್ತಿಯೇನು? ಇದರಿಂದ ತಾನು ಪರಮಾತ್ಮನೊಂದಿಗೆ ಸಮಾನ ಧರ್ಮವನ್ನು ಹೊಂದಿದವನು; ಮತ್ತು ಪರಮಾತ್ಮನ ಸ್ವರೂಪವು ಇನ್ನೂ ಅತ್ಯದ್ಭುತವಾದುದು; ಎಲ್ಲಾ ಜಗತ್ತಿಗೂ ಆತ್ಮಾವಾಗಿ ಅವುಗಳ ಸತ್ತಾಸ್ಥಿತಿ ನಿಯಮನಾದಿ ಕಾರಣಭೂತ

**ಛಾ.** ಇತಿ-ಏವಂ, ವಾಸುದೇವಸ್ಯ-ವಸುದೇವ ಸೂನೋಃ, ಪಾರ್ಥಸ್ಯ ಚ-ತತ್ಪಿತೃಷ್ವಸುಃ ಪುತ್ರಸ್ಯ ಚ, ಮಹಾತ್ಮನೋ- ಮಹಾಬುದ್ಧೇಸ್ತತ್ಪದದ್ವಂದ್ವಮಾಶ್ರಿತಸ್ಯೇಮಂ ರೋಮಹರ್ಷಣ ಮದ್ಭುತಂ ಸಂವಾದ ಮಹಂ ಯಥೋಕ್ತ ಮಶ್ರೌಷಂ - ಶ್ರುತ ವಾನ ಹಮ್ ॥ ೭೪ ॥

---

ನಾಗಿರುವದು, ಹಾಗಿದ್ದರೂ ಹೇಯಗಂಧವಿಲ್ಲದೆ ಕಲ್ಯಾಣಗುಣನಾಗಿರುವದೂ ರೂಪಗಳು ಐದು ತೆರನಾಗಿರುವದೂ, ತನಗೇನೇ ಅಸಾಧಾರಣನಾಗಿ ನಿತ್ಯವಾಗಿರುವ ದಿವ್ಯಮಙ್ಗಳ ವಿಗ್ರಹವೂ ಅವತಾರಗಳಲ್ಲಿ ಅತ್ಯದ್ಭುತ ರೂಪಗಳೂ, ಅಜಹತ್ಸ್ವಸ್ವಭಾವವೂ ದಿವ್ಯಚೇಷ್ಟಿತ ಗಳೂ, ಹಾಗೆಯೇ ಅಗಾಧ ವಿಭೂತಿದ್ವಯಗಳಿಂದ ಯುಕ್ತನಾಗಿರುವದೂ, ಇವುಗಳನ್ನು ಅರ್ಜುನನಿಗೆ ವಿಶ್ವರೂಪದರ್ಶನ ರೂಪದಲ್ಲಿ ಪ್ರದರ್ಶಿಸಿರುವದೂ, ನಿತ್ಯಮುಕ್ತರುಗಳಿಗೆ ದಿವ್ಯ ಸೇವೆಯನ್ನು ಕೊಡುತ್ತಿರುವ ಪ್ರಕಾರವೂ, ಅದನ್ನು ಹೊಂದಲು ಉಪಾಯದ ಉಪ ದೇಶವೂ, ಇವೆಲ್ಲವೂ ಅದ್ಭುತವೂ ಮತ್ತು ರೋಮಹರ್ಷಣವೆಂಬ ಭಾವವು. ಸಾಧಾರಣವಾದ ಐಹಿಕ ಗುರುಗಳ ಉಪದೇಶವೇ ಅದ್ಭುತವಾಗಿಯೂ ರೋಮಹರ್ಷಣವಾಗಿಯೂ ಇರುವದನ್ನು ನಾವೇ ಕಂಡಿರುವೆವು ; ಅದರಲ್ಲಿ ಲೋಕಗುರುವೇ ಸ್ವಯಂ ವಕ್ತಾವಾಗಿ ಶ್ರೋತಾತನ್ನಂಶಾವ ತಾರಿಯಾಗಿ ನರನಾಗಿ ಸರ್ವೋತ್ತಮನಾಗಿದ್ದ ಪಕ್ಷದಲ್ಲಿ ಆ ಸಂವಾದವು ಅದ್ಭುತವಾಗಿ ರೋಮ ಹರ್ಷಣವಾಗಿತ್ತು ಎಂಬುದು ನಿಸ್ಸಂದೇಹವಷ್ಟೇ. ಇಲ್ಲಿ **ಅರ್ಜುನಸ್ಯ ಮಹಾತ್ಮನಃ** ಎಂಬ ಸಂಜಯ ಪ್ರಯೋಗವು ಸಾರ್ಥವತ್ತಾದುದು. ತನ್ನ ಮಕ್ಕಳಿಗೇ ಜಯವನ್ನು ಆಶಿಸುವ ಧೃತರಾಷ್ಟ್ರನನ್ನು ಕುರಿತು ಮಹಾತ್ಮನಾದ ಅರ್ಜುನನಲ್ಲೇ ಶ್ರೀ ವಾಸುದೇವನಿಗೆ ವಿಶೇಷಕೃಪೆ ಯಾದುದರಿಂದ ಯಾರಿಗೆ ಜಯವೆಂಬುದರಲ್ಲಿ ನಿನಗೆ ಸಂದೇಹವೇತಕ್ಕೆ ? ಮಹಾತ್ಮನಾದ ಅರ್ಜುನನಿಗೇ ಜಯವೇ ವಿನಾ ನಿನ್ನ ಮಕ್ಕಳಾದ ಅಧರ್ಮಿಗಳಾದ ದುರಾತ್ಮರಿಗೆ ಜಯವೆಲ್ಲಿ ಯದು ಎಂಬ ಭಾವವು ವ್ಯಕ್ತವಾಗಿ ತೋರಿಬರುತ್ತದೆ.

**ಭಾಷ್ಯಾರ್ಥವು:—" ಮಾಮಕಾಃ, ಪಾಂಡವಾಶ್ಚೈವ ಕಿಮಕುರ್ವತ ಸಂಜಯ "** ಎಂಬ ಧೃತರಾಷ್ಟ್ರನ ಪ್ರಶ್ನೆಗೆ, ಹೀಗೆ ಗೀತಾ ಶಾಸ್ತ್ರವನ್ನೆಲ್ಲಾ ಹೇಳಿ ಸಾಕ್ಷಾತ್ತಾದ ಉತ್ತರವನ್ನು ಹೇಳಿ ನಿಗಮನಮಾಡುತ್ತಾರೆ —ಸಂಜಯನು ಧೃತರಾಷ್ಟ್ರನನ್ನು ಕುರಿತು ನಿಗಮನದಲ್ಲಿ ಹೇಳುವನು ಏನೆಂದರೆ, **ಇತಿ**-ಈ ಪ್ರಕಾರವಾಗಿ **ವಸುದೇವಸೂನೋಃ**-ವಸುದೇವ ಪುತ್ರನಾಗಿ ಅವತರಿಸಿದ ಶ್ರೀ ಕೃಷ್ಣಭಗವಾನರವರಿಗೂ, **ಪಾರ್ಥಸ್ಯಚ**-ಅರ್ಜುನನಿಗೂ, ಆತನು ಎಂತವ ನೆಂದರೆ, **ತತ್ಪಿತೃಷ್ವಸುಃ ಪುತ್ರಸ್ಯಚ**-ತನ್ನ ಅತ್ತೆಯಮಗನಾದ ಅರ್ಜುನನಿಗೂ, ಕುನ್ತಿಯು ವಸುದೇವ ಸಹೋದರಿಯು, ಆದುದರಿಂದ **ಪಿತೃಷ್ವಸುಃ ಪುತ್ರಸ್ಯ ಚ**-ಎಂಬ ಪ್ರಯೋಗವು, ಹೀಗೆ ಪರಸ್ಪರ ಬಾಂಧವ್ಯವಿರುವದರಿಂದ ಲೋಕಗುರುವಿಗೆ ತನ್ನ ಶಿಷ್ಯನಲ್ಲಿ ವಿಶೇಷಪ್ರೀತಿ ಎಂಬುದು ಸೂಚಿತವು, ಈ ಅರ್ಜುನನು ಇನ್ನು ಎಂತವನೆಂದರೆ **ಮಹಾತ್ಮನಃ**-ಎಂದರೆ **ಮಹಾಬುದ್ಧೇಃ**-ಪರಮಪ್ರಾಜ್ಞನಾದವನು, ಅದು ಹೇಗೆ ಎಂದರೆ **ತತ್ಪದದ್ವಂದ್ವಮಾಶ್ರಿತಸ್ಯ**-ತನ್ನ ಮಾವನ ಮಗನು ಸರ್ವೇಶ್ವರನೆಂಬುದನ್ನರಿತು **" ಶಾಧಿ ಮಾಂ "** ಎಂದು ಆತನ ಪಾದ ಕಮಲಯುಗ್ಮವನ್ನು ಆಶ್ರಯಿಸಿದುದರಿಂದ ಮಹಾಪ್ರಾಜ್ಞನಾದ ಅರ್ಜುನನಿಗೂ ನಡೆದ, **ಇಮಂ ರೋಮ ಹರ್ಷಣಂ ಅದ್ಭುತಂ ಸಂವಾದಂ**-ಹರ್ಷದಿಂದಲೂ, ಆಶ್ಚರ್ಯದಿಂದಲೂ ರೋಮಾಂಚ ವನ್ನುಂಟುಮಾಡುವ ಅದ್ಭುತವಾದ ಈ ಪ್ರಶ್ನೋತ್ತರ ರೂಪ ಸಂವಾದವನ್ನೂ, **ಅಹಂ**-ನಾನು **ಯಥೋಕ್ತಂ** - ಈಗ ಎಲ್ಲವನ್ನೂ ವಿಸ್ತರವಾಗಿ ತಿಳಿಸಿದ ರೀತ್ಯಾ, **ಅಶ್ರೌಷಮ್** - ಎಂದರೆ

**ಮೂ. ವ್ಯಾಸ ಪ್ರಸಾದಾ ಚ್ಛ್ರುತ ವಾ ಏತದ್ಗುಹ್ಯಮಹಂ ಪರಂ।**
**ಯೋಗಂ ಯೋಗೇಶ್ವರಾ ತ್ಕೃಷ್ಣಾ ತ್ಸಾಕ್ಷಾತ್ಕಥಯತ ಸ್ಸ್ವಯಮ್ ॥ ೭೫ ॥**

**ಶ್ರುತವಾನಹಮ್**-ಕೇಳಿತಿಳಿದೆನು ; ಯಾರಿಂದ ಕೇಳಿ ತಿಳಿದೆನೆಂಬುದು ಮುಂದಿನ ಶ್ಲೋಕದಲ್ಲಿ ವ್ಯಕ್ತವು. ಪಾರ್ಥನು ಮಹಾತ್ಮನು ಎಂದು ಹೇಳಲ್ಪಡಲು ಕಾರಣವೇನೆಂಬುದನ್ನು ವ್ಯಕ್ತ ಪಡಿಸುವದಕ್ಕಾಗಿ, ಪರಮಾತ್ಮನ ಪಾದಕಮಲದ್ವಂದ್ವವನ್ನು ಆಶ್ರಯಿಸುವದರ ಮಾಹಾತ್ಮ್ಯ ವನ್ನರಿತವನಾದುದರಿಂದ ಆತನು ಮಹಾಪ್ರಾಜ್ಞನೆಂದು ಹೇಳಲ್ಪಟ್ಟಿತೆಂದು **ತತ್ಪಾದದ್ವಂದ್ವ ಮಾಶ್ರಿತಸ್ಯ**-ಎಂಬ ವ್ಯಾಖ್ಯಾನವು, ಹೀಗೆ ಅನೇಕಾವರ್ತಿ ಆಶ್ರಯಿಸಿರುತ್ತಾನೆ. ಯುದ್ಧಕ್ಕೆ ಏನೊಂದು ಸಾಕ್ಷಾತ್ತಾಗಿ ಸಹಾಯವಿಲ್ಲದಿದ್ದರೂ ಸ್ವಾಮಿ ಶ್ರೀ ಕೃಷ್ಣಭಗವಾನರವರ ಸಾನ್ನಿಧ್ಯ ವನ್ನು ಬಯಸುವಾಗ ಆ ಪಾದದ್ವಂದ್ವವನ್ನು ಆಶ್ರಯಿಸಿದನು. ಸರಿಯಾದ ಜ್ಞಾನವಿಲ್ಲವೇ ಎಂದು ಶೋಕಿಸಿ "**ಶಾಧಿಮಾಂ**" (ಗೀ ೨-೭೮) ಎಂದು ಹೇಳಿ ಆಶ್ರಯಿಸಿದನು. ಪುನಃ ವಿಶ್ವರೂಪ ಪ್ರದರ್ಶನಪೂರ್ವಕ ತನ್ನ ವಿಭವದ ಮಹಿಮೆಯನ್ನು ಶ್ರೀ ಕೃಷ್ಣನು ತೋರಿದಾಗ, ಸಾಧಾರಣನಾದ ಬಂಧುವೆಂದು ಭಾವಿಸಿ ನಾನಾವಿಧಾಪಚಾರಗಳಿಗೆ ಗುರಿಯಾದೆನೇ ಎಂಬ ಪರಿತಾಪದಿಂದ ಕ್ಷಮಾಪಣೆಯನ್ನು ಕೇಳಿ ಕೊಳ್ಳುವ ಸಂದರ್ಭದಲ್ಲೂ ಮತ್ತು ವಿಶ್ವರೂಪ ದರ್ಶನಮಾತ್ರದಿಂದ ಸಂತುಷ್ಟನಾಗದೆ ಪ್ರಾಪ್ಯವಾದ ವಾಸುದೇವ ರೂಪವನ್ನು ಪ್ರದರ್ಶಿಸು ಎಂದೂ ಪಾದದ್ವಂದ್ವವನ್ನು ಆಶ್ರಯಿಸಿದವನು ಹೀಗೆಯೇ ಇನ್ನೂ ಕೆಲವು ಸಂದರ್ಭಗಳಲ್ಲೂ ಆಶ್ರಯಿಸಿರುತ್ತಾನೆ. ಅರ್ಜುನನೂ ಹಾಗೆಯೇ ಇತರ ಪಾಂಡವರೂ ಸಹ "**ಕೃಷ್ಣಾಶ್ರಯಾಃ ಕೃಷ್ಣಬಲಾಃ ಕೃಷ್ಣನಾಥಾಶ್ಚ ಪಾಂಡವಾಃ**" ಕೃಷ್ಣನನ್ನೇ ಆಶ್ರಯವಾಗಿವುಳ್ಳವರೆಂದೂ, ಕೃಷ್ಣನನ್ನೇ ನಾಥನಾಗಿವುಳ್ಳವರೆಂದೂ, ಮಹಾಭಾರತದಲ್ಲಿ ಹೇಳಲ್ಪಟ್ಟಿರುತ್ತದೆ **ಯಥೋಕ್ತ ಮಶ್ರೌಷಂ** ಎಂಬುದರಿಂದ ಅವರಿಬ್ಬರ ಸಂವಾದದಿಂದ ಯಥಾರ್ಥಾಭಿಪ್ರಾಯಗಳು ಪ್ರಶ್ನ ಪ್ರತ್ಯುತ್ತರದಿಂದ ಹೇಗೆ ವ್ಯಕ್ತವೋ ಹಾಗೆಯೇ ಯಥಾರ್ಥಾಭಿಪ್ರಾಯವು ನನ್ನಿಂದ ಕೇಳಲ್ಪಟ್ಟಿ ತೆಂಬ ಅಭಿಪ್ರಾಯವು ; ಅಥವಾ, ಉಪಾಯಾನುಷ್ಠಾನಕ್ಕೆ ಬೇಕಾದ ಸರ್ವಾಂಶವೂ ಹೇಗ ನನ್ನಿಂದ ಯಥಾರ್ಥವಾಗಿ ಗ್ರಹಿಸಲ್ಪಟ್ಟಿತೋ ಅದನ್ನೇ ನಿನಗೆ ಉಪದೇಶಿಸಿರುತ್ತೇನೆಂದಾಗಲಿ ಆಗ ಬಹುದು ; ಅಥವಾ ಈಗ ನಿನಗೆ ಹೇಗೆ ತಿಳಿಸಿರುತ್ತೇನೆಯೋ, ಹಾಗೆಯೇ ನಾನೂ ಕೇಳಿ ತಿಳಿ ದುದೂ ಸಹ ; ಆದುದರಿಂದ ಈಗ ನಿನಗೆ ಹೇಳಿರುವದರಲ್ಲಿ ಏನೊಂದೂ ವ್ಯತ್ಯಾಸ ವಿಲ್ಲವೆಂಬ ಭಾವವು ; ನೀನು ಸಂಪೂರ್ಣವಾಗಿ ನನ್ನ ಹೇಳಿಕೆಯಲ್ಲಿ ನಂಬಿಕೆಯನ್ನಿಡಬಹುದೆಂಬ ಭಾವವು ; ಏತಕ್ಕೆಂದರೆ ತನಗೆ ಉಪದೇಷ್ಟಾ ಸಾಧಾರಣದವರಲ್ಲವು, ಸರ್ವಜ್ಞರಾಗಿ "**ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ**" ಎಂದು ತುಂಬಾ ಪ್ರಸಿದ್ಧರಾದ **ಪಾರಾ ಶರ್ಯರು,** ಪರಾಶರಪುತ್ರರು ಎಂದು ಮುಂದಿನ ಶ್ಲೋಕದಲ್ಲಿ ತಿಳಿಸುತ್ತಾರೆ ॥ ೭೪ ॥

**ಮೂಲಕ್ಕೆ ಅರ್ಥವು :**— ಹಿಂದಿನ ಶ್ಲೋಕದಲ್ಲಿ **ಇಮಂ ಸಂವಾದಂ ಅದ್ಭುತಂ ರೋಮಹರ್ಷಣಂ** ಎಂದು ವಿಶೇಷ ಮಹಿಮೆಯುಂಟು ತಾವು ಹೇಳಿದುದರಲ್ಲಿ ಎಂದ್ಯ ಸಂಜಯರು ಧೃತರಾಷ್ಟ್ರನಿಗೆ ತಿಳಿಸಿದರು ; ಹಾಗಾದರೆ ಇದಕ್ಕೆ ಮಹಿಮೆ ಹೇಗೆ ಎಂದರೆ ತಿಳಿಸುತ್ತಾರೆ. ಈ ಗುಹ್ಯತಮವಾದ ಮಹತ್ತಾದ ಉಪದೇಶಕರು ಯಾರು ಎಂದರೆ ಎಲ್ಲಾ ಗುರುಗಳಿಗೂ ಗುರುವಾದ ಸರ್ವೇಶ್ವರನೇ ಸ್ವಯಂವಕ್ತಾ. ಅದನ್ನು ಯಥಾರ್ಥವಾಗಿ ಆ ಕಾಲದಲ್ಲಿ ಶ್ರೀ ವೇದವ್ಯಾಸರು ನನಗೂ ದಿವ್ಯ ಶ್ರೋತೃಚಕ್ಷುಸ್ಸುಗಳನ್ನು ದಯಪಾಲಿಸಿ ದುದರಿಂದ ಶ್ರೀ ಕೃಷ್ಣಭಗವಾನರವರು ಅರ್ಜುನನನ್ನುದ್ದೇಶಿಸಿ ಹೇಳಿದ ಉಪದೇಶವನ್ನೆಲ್ಲಾ

ನಾನೇ ಸಾಕ್ಷಾತ್ತಾಗಿ ಕೇಳಿ ತಿಳಿದುಕೊಂಡೆನು ಎಂದು ಸಂಜಯರು ಹೇಳುತ್ತಾರೆ. ಇನ್ಯಾರಾದರೂ ಹೀಗೆ ಶ್ರೀಕೃಷ್ಣಭಗವಾನರವರು ಉಪದೇಶಿಸಿದರು ಎಂದು ಬಂದು ನನಗೆ ಹೇಳಿ ಅದನ್ನು ನಿನಗೆ ತಿಳಿಸಿದ್ದರೆ ನಿನ್ನ ನಂಬಿಕೆಗೆ ಅಷ್ಟು ಅರ್ಹತೆಯಿಲ್ಲದೆ ಹೋಗಬಹುದಾಗಿತ್ತು; ಹಾಗಲ್ಲವು; ನನಗೆ ವ್ಯಾಸಾನುಗ್ರಹದಿಂದುಂಟಾದ ದಿವ್ಯ ಶ್ರೋತ್ರ ಚಕ್ಷುಸ್ಸುಗಳಿಂದ ನಾನೇ ಪ್ರತ್ಯಕ್ಷವಾಗಿ ಈ ಸಂವಾದವು ನಡೆದಿದ್ದನ್ನೂ ಕಂಡು ಕೇಳಿರುವದರಿಂದ ಸಂಶಯಕ್ಕೆ ಕಾರಣವೇ ಇಲ್ಲವೆಂಬ ಭಾವವು. ಪ್ರತ್ಯಕ್ಷವಾಗಿ ನೋಡಿದವನ ಸಾಕ್ಷ್ಯವು ಕೋರ್ಟಿನಲ್ಲಿ ಒಪ್ಪುತ್ತಾರೆ. ಆದರೆ ಪ್ರತ್ಯಕ್ಷವಾಗಿ ನೋಡಿದವನು ಒಬ್ಬನು ತನಗೆ ಹೇಳಿದನೆಂಬ ಸಾಕ್ಷ್ಯವು ಅಷ್ಟು ಉಪಾದೇಯವಲ್ಲವು. ಇಲ್ಲಿ ಸಂಜಯರು ಶ್ರೀ ಕೃಷ್ಣಭಗವಾನರವರ ಉಪದೇಶವನ್ನು ಪ್ರತ್ಯಕ್ಷವಾಗಿ ಕೇಳಿ ತಿಳಿದುದರಿಂದ ಧೃತರಾಷ್ಟ್ರನ ನಂಬಿಕೆಗೆ ಅರ್ಹವಾದುದೆಂಬ ಭಾವವು. **ವ್ಯಾಸ ಪ್ರಸಾದಾತ್**—ಶ್ರೀ ವೇದವ್ಯಾಸರ ಅನುಗ್ರಹದಿಂದ, ಎಂದರೆ ಅವರು ದಯಪಾಲಿಸಿದ ದಿವ್ಯ ಶ್ರೋತ್ರ ಚಕ್ಷುಸ್ಸುಗಳಿಂದ, **ಏತತ್ ಪರಂ**–ಈ ಪರಮ ನಿಶ್ರೇಯಸ ಸಾಧಕವಾಗಿ ಸರ್ವೋತ್ಕೃಷ್ಟವಾದ ಪರಮ ರಹಸ್ಯವಾದ **ಯೋಗಂ**—ಯೋಗಶಾಸ್ತ್ರವೆಂದು ಹೇಳಿಸಿಕೊಳ್ಳುವ ಬ್ರಹ್ಮವಿದ್ಯಾರೂಪವಾದ ಭಕ್ತಿಯೋಗವು, **ಸ್ವಯಂ**–ತಾನಾಗಿಯೇ, **ಕಥಯತಃ**–ಅದನ್ನು ಉಪದೇಶಿಸುತ್ತಿರುವ, **ಯೋಗೇಶ್ವರಾತ್**-ಶ್ರೀ ಯತಿವರ್ಯರು ಇದಕ್ಕೆ ಜ್ಞಾನಬಲೈಶ್ವರ್ಯ ವೀರ್ಯ ಶಕ್ತಿ ತೇಜಸ್ಸುಗಳಿಗೆ ನಿಧಿಯಾದ ಎಂದು ಅರ್ಥಮಾಡಿರುತ್ತಾರೆ, ಹೀಗೆ ಹೇಳಿದುದರಿಂದ, ಶ್ರಿಯಃ ಪತಿಯಾಗಿ, ಸಮಸ್ತ ಕಲ್ಯಾಣಗುಣಗಣ ಮಹೋದಧಿಯಾಗಿ, ಸೌಂದರ್ಯ ಲಾವಣ್ಯಾದಿ ಸಮಸ್ತರೂಪ ಗುಣೋಪೇತನಾಗಿ, ಸಮಸ್ತ ಚಿದಚಿದ್ವಸ್ತುಗಳಿಗೆ ಸತ್ತಾಸ್ಥಿತಿ ಮೊದಲಾದ ಸರ್ವವಿಧಯೋಗಕ್ಕೆ ಕಾರಣನಾಗಿ, ಉಭಯ ವಿಭೂತಿಗೆ ನಿಯಾಮಕನಾಗಿ ಹೀಗೆ ಸರ್ವವಿಧಪರಿಪೂರ್ಣತೆಯಿಂದ ವಿಶಿಷ್ಟನಾಗಿ ಸರ್ವವಿಧಯೋಗವನ್ನು ಹೊಂದಿರುವ, **ಕೃಷ್ಣಾತ್**-ಶ್ರೀ ಕೃಷ್ಣಭಗವಾನರ ಮೂಲಕವಾಗಿ, **ಸಾಕ್ಷಾತ್**-ಪ್ರತ್ಯಕ್ಷದಲ್ಲೇ, **ವ್ಯಾಸಪ್ರಸಾದಾತ್**-ವಿಷ್ಣ್ವಂಶಭೂತರಾದ ಶ್ರೀ ವೇದವ್ಯಾಸರ ಅನುಗ್ರಹದಿಂದ, **ಶ್ರುತವಾ೯**-ಕೇಳಿ ತಿಳಿದೆನು. ವಿಷಯವು ಅತ್ಯದ್ಭುತವಾದ ವಿಷಯವು, ಪರಮರಹಸ್ಯವಾಗಿ ಅಪರಿಮಿತ ಪುರುಷಾರ್ಥವಾದ ಮೋಕ್ಷವನ್ನೇ ಸಾಧಿಸಿ ಕೊಡುವಂತಾದ್ದು. ಪರಮ ಭಾಗವತರಾಗಿ ವಿಷ್ಣುವಿನ ಅಂಶವುಳ್ಳ ಶ್ರೀ ವೇದವ್ಯಾಸರ ಅನುಗ್ರಹರೂಪ ಸುಕೃತವೂ ಮತ್ತು ಪರಮ ಪುರುಷನೇ ಉಪದೇಶಕನಾಗಿರುವ ಸುಕೃತವೂ, ಹೀಗೆ ಇವೆರಡರಿಂದಲೂ ನನಗೆ ಅತ್ಯದ್ಭುತವಾಗಿಯೂ ರೋಮಹರ್ಷಣವಾಗಿಯೂ ಇತ್ತೆಂಬ ಭಾವವು ॥ ೭೫ ॥

**ವ್ಯಾಸಪ್ರಸಾದಾತ್** ಎಂಬ ಪ್ರಯೋಗದಿಂದ ಪರಮ ಭಾಗವತೋತ್ತಮರನ್ನು ಆಶ್ರಯಿಸುವದರಿಂದ ಉಂಟಾಗುವ ಅನುಗ್ರಹವು ಪರಮ ಮಹತ್ತರವಾದುದರಿಂದ ಅವರು "**ಯಥಾದೇವೇತಥಾಗುರೌ**" ಎಂಬಲ್ಲಿ ಹೇಳಿರುವ ಹಾಗೆ ವಿಶೇಷ ಪೂಜ್ಯರು ಎಂಬ ಅಂಶವನ್ನು ಗ್ರಹಿಸಬಹುದು ಅವರುಗಳು ಈಶ್ವರನಹಾಗೆ ಪರಮ ದಯಾಳುಗಳು. ಕ್ಷತ್ರಬಂಧು, ಪುಂಡರೀಕ, ಇಂದ್ರ, ವಾಲ್ಮೀಕಿ, ಶ್ರೀ ಪರಾಶರರೇ ಮೊದಲಾದವರ ವೃತ್ತಾಂತಗಳು ಇದಕ್ಕೆ ನಿದರ್ಶನಗಳು. ಇವರೆಲ್ಲರೂ ಪರಮಾಚಾರ್ಯರುಗಳಿಂದ ಶ್ರೇಯಸ್ಸನ್ನು ಹೊಂದಿದವರು. **ಪರಂಗುಹ್ಯಂ**-ಎಂದು ಹೇಳಿರುವದರಿಂದ ವಿಶೇಷ ಮಹಿಮೆಯುಳ್ಳ ಇಂತಹ ದಿವ್ಯರಹಸ್ಯವನ್ನು, **ಅಹಂ ಶ್ರುತವಾ೯**-ನನ್ನಂತಹ ಸಾಮಾನ್ಯನಾಗಿ ಪೂರಾ ಅರ್ಹತೆ ಇಲ್ಲದವನೂ ಸಾಕ್ಷಾತ್ತಾಗಿ ಗ್ರಹಿಸಿದರೆ ಗುರು ಕೃಪೆಯು ಎಷ್ಟು ಮಹತ್ತಾದ್ದೆಂಬುದು ವ್ಯಕ್ತವು.

**ಭಾ. ವ್ಯಾಸಪ್ರಸಾದಾತ್-ವ್ಯಾಸಾನುಗ್ರಹೇಣ ದಿವ್ಯಚಕ್ಷುಶ್ಶ್ರೋತ್ರಲಾಭಾತ್ ಏತತ್ಪರಂ ಯೋಗಾಖ್ಯಂ ಗುಹ್ಯಂ ಯೋಗೇಶ್ವರಾತ್-ಜ್ಞಾನಬಲೈಶ್ವರ್ಯವೀರ್ಯಶಕ್ತಿತೇಜಸಾಂ**

**ಭಾಷ್ಯಾರ್ಥವು**—ಮೊದಲು ಸರಿಯಾದ ಜ್ಞಾನವಿಲ್ಲದೆ ಅನಂತರ ಈ ಲೋಕದ ಗುರುಗಳಿಂದ ಉಪದೇಶದ ಮೂಲಕ ಜ್ಞಾನವನ್ನು ಹೊಂದಿಬಂದ ವಿಷಯವೇನೂ ಇದಲ್ಲವು; ಜ್ಞಾನನಿಧಿಗಳಾದ ಶ್ರೀವ್ಯಾಸಮಹರ್ಷಿಯ ಅನುಗ್ರಹದಿಂದಲೇ ಸಾಕ್ಷಾತ್ತಾಗಿ ಶ್ರೀ ಕೃಷ್ಣಭಗವಾನರವರಿಂದಲೇ ಕೇಳಿ ತಿಳಿದ ವಿಷಯುವೆಂದು ಹೇಳಿಕೊಳ್ಳುತ್ತಾರೆ-**ವ್ಯಾಸಪ್ರಸಾದಾತ್** ಎಂದರೆ **ವ್ಯಾಸಾನುಗ್ರಹೇಣ**-ಶ್ರೀ ವ್ಯಾಸಮಹರ್ಷಿಯ ಅನುಗ್ರಹದಿಂದ, **ದಿವ್ಯಚಕ್ಷುಶ್ಶ್ರೋತ್ರಲಾಭಾತ್**-ಈ ಪ್ರಾಕೃತಚಕ್ಷುಸ್ಸಶ್ರೋತ್ರಗಳಿಂದ ಅವರಿಬ್ಬರ ಸಂವಾದವನ್ನು ಕೇಳಿ ತಿಳಿಯುವದು ಸಾಧ್ಯವಿಲ್ಲದುದರಿಂದ, ಅವರ ದಯೆಯಿಂದ ದಿವ್ಯಚಕ್ಷುಸ್ಸು ಶ್ರೋತ್ರಗಳು ಲಭಿಸಿದ್ದುದರಿಂದ, **ಏತತ್ ಪರಂ**-ಈ ಸರ್ವೋತ್ಕೃಷ್ಟವಾದ **ಯೋಗಾಖ್ಯಂ**-ಯೋಗಶಾಸ್ತ್ರವೆಂದು ಹೇಳಿಸಿಕೊಳ್ಳುವ, **ಗುಹ್ಯಂ**-ರಹಸ್ಯವನ್ನು, **ಯೋಗೇಶ್ವರಾತ್**-ಎಂದರೆ **ಜ್ಞಾನ ಬಲ ಐಶ್ವರ್ಯ ವೀರ್ಯಶಕ್ತಿ ತೇಜಸಾಂ ನಿಧೇಃ**-ಈ ಷಡ್ಗುಣಗಳಿಂದ ಕಲ್ಯಾಣಗುಣಗಣ ಯೋಗಕ್ಕೆ ಸ್ವಾಮಿಯಾದ ಇಂತಹ ಪರಮ ರಹಸ್ಯವು ನನ್ನಿಂದ ಕೇಳಿ ತಿಳಿಯಲ್ಪಟ್ಟಿತ್ತೆಂಬ ಭಾವವು. **ಭಗವತಃ ಕೃಷ್ಣಾತ್**-ಶ್ರೀ ಕೃಷ್ಣಭಗವಾನರವರಿಂದ, **ಸ್ವಯಮೇವ ಕಥಯತಃ**-ಅವರು ತಾವೇ ಸ್ವಂತವಾಗಿ ಅರ್ಜುನನಿಗೆ ಉಪದೇಶಿಸುವರಾಗಿರುವಾಗಲೇ, **ಸಾಕ್ಷಾತ್**-ಸಾಕ್ಷಾತ್ತಾಗಿ, ಅವರು ಹೇಳುತ್ತಿರುವದು ನೋಡುತ್ತಾ **ಅಹಂ**-ನಾನ, **ಶ್ರುತವಾನ್**-ಕೇಳಿ ತಿಳಿಯಲ್ಪಟ್ಟವನಾದೆನು. ಹೀಗೆ ಯೋಗೇಶ್ವರನೆಂದು ಹೇಳಿದುದು ವಿಭೂತಿಯೋಗಕ್ಕೂ ಉಪಲಕ್ಷಣವಾಗಿ ಸರ್ವವಿಧ ಪರಿಪೂರ್ಣತೆಯ ಯೋಗವು ಹೇಳಲ್ಪಟ್ಟಿತು. ಮುಂದೆ ಕೊನೆಯ ಶ್ಲೋಕದಲ್ಲೂ "**ಯೋಗೇಶ್ವರಃ**" ಎಂಬ ಪ್ರಯೋಗವಿರುತ್ತದೆ. ಅಲ್ಲಿ ಶ್ರೀ ಭಾಷ್ಯಕಾರರ ವ್ಯಾಖ್ಯಾನಕ್ಕೂ ಇಲ್ಲಿನ ವ್ಯಾಖ್ಯಾನಕ್ಕೂ ಏನೊಂದೂ ವ್ಯತ್ಯಾಸವಿಲ್ಲವು ಇಲ್ಲಿಗುಣಗಳನ್ನು ಹೇಳಿದುದು ಮಿಕ್ಕವುಗಳಿಗೂ ಉಪಲಕ್ಷಣವು; ಅಲ್ಲಾದರೋ ವಿಸ್ತಾರವಾಗಿ ಸರ್ವಪರಿಪೂರ್ಣತೆಯ ಉಪಪಾದನೆಯು. ಮೂಲದಲ್ಲಿ **ವ್ಯಾಸಪ್ರಸಾದಾತ್**-ಎಂದು ಇಷ್ಟೇ ಇರುತ್ತದೆ, ಮೂಲದಲ್ಲಿಲ್ಲದ **ದಿವ್ಯಚಕ್ಷುಶ್ಶ್ರೋತ್ರಲಾಭಾತ್** ಎಂದು ಹೇಗೆ ವ್ಯಾಖ್ಯಾನವು ಎಂದರೆ, **ಕೃಷ್ಣಾತ್ ಸಾಕ್ಷಾತ್ ಶ್ರುತವಾನ್** ಎಂದು ಹೇಳಿಕೊಂಡಿರುವದರಿಂದ, ದೂರದಲ್ಲಿದ್ದಾಗಲೇ ಹಾಗೆ ಅವರನ್ನು ನೋಡುತ್ತಾ ಅವರ ಉಪದೇಶವನ್ನು ಕೇಳಬೇಕಾದರೆ ತಮ್ಮ ಗುರುಗಳಾದ ಶ್ರೀ ವ್ಯಾಸರಿಂದ ಅನುಗ್ರಹಿಸಲ್ಪಟ್ಟ ದಿವ್ಯ ಚಕ್ಷುಶ್ಶ್ರೋತ್ರಗಳ ಲಾಭವಿಲ್ಲದೆ ಸಾಧ್ಯವಿಲ್ಲವಾದುದರಿಂದ ಹಾಗೆ ಭಾಷ್ಯವು. **ದಿವ್ಯಚಕ್ಷುಶ್ಶ್ರೋತ್ರ**ವೆಂಬಲ್ಲಿನ ದಿವ್ಯಶಬ್ದವು ಪ್ರಾಕೃತ ಚಕ್ಷುಶ್ಶ್ರೋತ್ರಗಳ ಮೂಲಕ ಸಂವಾದವನ್ನು ಸಾಕ್ಷಾತ್ತಾಗಿ ಗ್ರಹಿಸುವದು ಅಸಾಧ್ಯವೆಂಬುದನ್ನು ಸೂಚಿಸುತ್ತದೆ. ಆಗಲಿ, ಸಂವಾದವನ್ನು ಕೇಳುವದಕ್ಕೇನೋ ದಿವ್ಯಶ್ರೋತ್ರವು ಬೇಕೆಂದು ಒಪ್ಪಬಹುದು; ದಿವ್ಯ ಚಕ್ಷುಸ್ಸನ್ನು ವ್ಯಾಸ ಪ್ರಸಾದದಿಂದ ಹೊಂದಿದರು ಎಂದು ಏಕೆ ವ್ಯಾಖ್ಯಾನವು? ಎಂದರೆ ಮುಂದೆ ೭೭ ನೆಯ ಶ್ಲೋಕದಲ್ಲಿ "**ಸಂಸ್ಮೃತ್ಯ ರೂಪಮತ್ಯದ್ಭುತಂಹರೇಃ**"ಎಂದಿರುವದರಿಂದ ಈ ಅತ್ಯದ್ಭುತವಾದ ವಿಶ್ವರೂಪವನ್ನೂ ನೋಡಲಿ ಎಂಬ ಉದಾರಭಾವದಿಂದ ದಿವ್ಯಚಕ್ಷುಸ್ಸು ಸಹ ವ್ಯಾಸಪ್ರಸಾದದಿಂದ ಕೊಡಲ್ಪಟ್ಟಿರಬೇಕೆಂದು ಭಾವಿಸಿ ಹಾಗೆ ಪ್ರಯೋಗವು **ಯೋಗಂ**—ಎಂದು ಮೂಲದಲ್ಲಿರುವದರಿಂದ ಮೋಕ್ಷಪ್ರಾಪ್ತಿಗೆ ಅವ್ಯವಹಿತೋಪಾಯವಾದ ಭಕ್ತಿಯೋಗವಿಲ್ಲದೆ ಸಾಧ್ಯವಿಲ್ಲದುದರಿಂದ ಇಲ್ಲಿ ಯೋಗಶಬ್ದವು ಭಕ್ತಿಯೋಗವನ್ನು ಬೋಧಿಸುತ್ತದೆ; ಅ

**ನಿಧೇ ರ್ಭಗವತಃ ಕೃಷ್ಣಾತ್ ಸ್ವಯಮೇವ ಕಥಯತಃ ಸಾಕ್ಷಾಚ್ಛ್ರುತ ವಾನಹಮ್ ॥ ೭೫ ॥**

**ಕಾರಣದಿಂದಲೇ** ಈ ಗೀತಾ ಶಾಸ್ತ್ರವು ಯೋಗಶಾಸ್ತ್ರವೆನ್ನಿಸುತ್ತದೆ; ಅದಕ್ಕೆ ಸಾಧನವಾದ ವ್ಯವಹಿತೋಪಾಯವಾದ ಕರ್ಮಯೋಗಾದಿಗಳೂ ಆ ಯೋಗಶಬ್ದದಿಂದಲೇ ಬೋಧಿತವಾಗುವ ದರಿಂದಲೂ ಯೋಗಶಾಸ್ತ್ರವು; ಅಥವಾ ಮೋಕ್ಷದ ಯೋಗವನ್ನು ಈ ಶಾಸ್ತ್ರವು ಉಂಟುಮಾ ಡುವದರಿಂದಾಗಲಿ ಯೋಗಶಾಸ್ತ್ರವು. **ಯೋಗೇಶ್ವರಾತ್** ಎಂಬಲ್ಲಿನ ಯೋಗಶಬ್ದವು, ಕಲ್ಯಾಣಗುಣಗಳ ಯೋಗವೆಂಬ ಭಾವದಿಂದ ಅವುಗಳಿಗೆಲ್ಲಾ ಹೇತುವಾದ ಷಡ್ಗುಣಗಳು ಹೇಳಲ್ಪಟ್ಟವು. ಹೀಗೆ ಈ ಎರಡು ಯೋಗ ಶಬ್ದಗಳು ಭಿನ್ನ ತಾತ್ಪರ್ಯವುಳ್ಳವು. ಈ ಯೋಗೇಶ್ವರ ಶಬ್ದವು ವಿಶಿಷ್ಟಾದ್ವೈತವನ್ನು ಬೋಧಿಸುತ್ತದೆಂದೂ ಆತನು ನಿರ್ಗುಣನಲ್ಲವೆಂದೂ ತೋರಿಸುತ್ತದೆ ಎಂಬ ಭಾವದಿಂದ ಕಲ್ಯಾಣಗುಣಗಳಿಗೆ ನಿಧಿ ಎಂಬದಾಗಿ ವ್ಯಾಖ್ಯಾನ ಮಾಡಿದರು. ಹೀಗೆ ವ್ಯಾಖ್ಯಾನಮಾಡಿರುವದು ಸರ್ವವಿಶಿಷ್ಟನಾದ ಪರಿಪೂರ್ಣಬ್ರಹ್ಮನೆಂಬ ಭಾವಕ್ಕೂ ಉಪಲಕ್ಷಣವು. ಲಕ್ಷ್ಮೀ ವಿಶಿಷ್ಟತೆ ಏನು, ಮಹತ್ತಾದ ರೂಪಗಳ ಮತ್ತು ರೂಪಗುಣ ಗಳವಿಶಿಷ್ಟತೆ ಏನು ಉಭಯ ವಿಭೂತಿವಿಶಿಷ್ಟತೆ ಏನು, ಸಕಲ ಚಿದಚಿತ್ತುಗಳ ಈಶ್ವರತ್ವವಿಶಿಷ್ಟತೆ ಏನು, ಹೀಗೆ ಸಕಲ ಪರಿಪೂರ್ಣತಾ ವಿಶಿಷ್ಟನು ಪರಬ್ರಹ್ಮವು ಎಂದು ತಿಳಿಸುವದಕ್ಕಾಗಿ ಹಾಗೆ ವ್ಯಾಖ್ಯಾನವೆಂದು ಭಾವಿಸತಕ್ಕದ್ದು. ಈ ಅಭಿಪ್ರಾಯವನ್ನು "**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ವತಃ । ಸೋಽವಿಕಂಪ್ಯೇನ ಯೋಗೇನ ಯುಜ್ಯತೇ ನಾತ್ರಸಂಶಯಃ**" (ಗೀ. ೧೦ ೭) ಎಂಬ ಶ್ಲೋಕಾರ್ಥವನ್ನುಮನಸ್ಸಿನಲ್ಲಿಟ್ಟೇ ಶ್ರೀ ಯತಿವರ್ಯರ ವ್ಯಾಖ್ಯಾನವೆಂದು ಶ್ರೀ ದೇಶಿಕರವರ ಅಭಿಪ್ರಾಯವು; ಇಂತಹ **ಯೋಗೇಶ್ವರನನ್ನು** ಏನೊಂದೂ ಇಲ್ಲದೆ ಪರಮಾಶ್ಚರ್ಯಾಹ್ಲಾದಕರವಾದ ನವಿಲುಗರಿಯನ್ನೆಲ್ಲಾ ಕಿತ್ತುಹಾಕಿದ ನವಿಲಿನಂತೆ ಭಾವಿಸಿ ಚಿನ್ಮಾತ್ರಬ್ರಹ್ಮವೆಂದು ಹೇಳಲು ಹೇಗೆ ಮನಸ್ಸು ಒಪ್ಪುತ್ತದೋ ತಿಳಿಯದು ನಮ್ಮ ಸಿದ್ಧಾಂತಕ್ಕೆ ಪರಬ್ರಹ್ಮನು ಪರಿಪೂರ್ಣನು; ಅಂತಹ ಪರಿಪೂರ್ಣ ಬ್ರಹ್ಮಾನುಭವವನ್ನು ಸಾಕ್ಷಾತ್ತಾಗಿ ಹೊಂದುವದೇ ಮತ್ತು ಅಂತವನಿಗೆ ಕೈಂಕರ್ಯವನ್ನು ಎಸಗುತ್ತಾ ಆನಂದದಿಂದಿರುವದೇ ನಮಗೆ ಮೋಕ್ಷವು ಈ ಶಾಸ್ತ್ರವು ಪರಮ ಗುಹ್ಯ ವಾದುದೆಂಬುದನ್ನು ಓ ಧೃತರಾಷ್ಟ್ರನೇ ನೀನು ನಂಬಬಹುದು ಎಂದು ತಿಳಿಸುವದಕ್ಕಾಗಿ **ಕೃಷ್ಣಾತ್ಸಾಕ್ಷಾತ್ಕಥಯತಸ್ಸ್ವಯಂ** ಎಂಬ ಪ್ರಯೋಗವು ಉಪದೇಶಕನೇ ಲೋಕ ಗುರುವಾಗಿ ಅದನ್ನೇ ಸಾಕ್ಷಾತ್ತಾಗಿ ನೋಡಿ ಕೇಳಿದ್ದರೆ ಅದಕ್ಕೆ ಮಾಹಾತ್ಮ್ಯೆಯು ನಿರತಿಶಯ ವಾದುದು, ಆದುದರಿಂದ ಈ ಗುರೂಪದೇಶದಲ್ಲಿ ಪರಮ ವೈಲಕ್ಷಣ್ಯವನ್ನು ಬೋಧಿಸುತ್ತಾರೆ. ಅಂತಹ ವೈಲಕ್ಷಣ್ಯದಿಂದುಂಟಾದ ಆಶ್ಚರ್ಯವನ್ನೂ ಆನಂದವನ್ನೂ ಮುಂದಿನ ಎರಡು ಶ್ಲೋಕ ಗಳಿಂದ ಧೃತರಾಷ್ಟ್ರನಿಗೆ ತಿಳಿಸುತ್ತಾರೆ. ಪರಮಾತ್ಮನೇ ಸ್ವಯಂವಕ್ತಾವಾಗಿ ಇಂತಹ ವೈಲಕ್ಷಣ್ಯ ವಿರುವದರಿಂದಲೇ **ಪಂಚರಾತ್ರ** ಶಾಸ್ತ್ರಕ್ಕೂ ತುಂಬಾ ಮಾಹಾತ್ಮ್ಯೆಯುಂಟು **ಪಂಚರಾತ್ರಸ್ಯ ಕೃತ್ಸ್ನಸ್ಯವಕ್ತಾನಾರಾಯಣಸ್ಸ್ವಯಮ್** (ಭಾರ. ಶಾಸ್ತ್ರಿ ೩೫೯ ೬೮) ಎಂದು ಪಂಚರಾತ್ರ ಶಾಸ್ತ್ರವು ಮೋಕ್ಷಧರ್ಮದಲ್ಲಿ ಕೊಂಡಾಡಲ್ಪಟ್ಟಿರುತ್ತದೆ. ಮಿಕ್ಕ ಮತಗಳಿಗಿಂತ ಈ ಪಂಚರಾತ್ರವು ಶ್ರೇಷ್ಠವಾದುದು ಏಕೆಂದರೆ **ವಕ್ತಾನಾರಾಯಣಸ್ಸ್ವಯಮ್**. ಹಾಗೆಯೇ ಇಲ್ಲೂ ವಕ್ತಾ ಕೃಷ್ಣಾವತಾರಿಯಾಗಿ ಶ್ರೀಮನ್ನಾರಾಯಣನೇ ಆಗಿ, ಆತನ ಶಿಷ್ಯಪ್ರಶಿಷ್ಯರುಗಳಿಂದಲ್ಲದೆ ಸಾಕ್ಷಾತ್ತಾಗಿ ತಿಳಿದುದರಿಂದ, ಯಥಾರ್ಥವಾದುದಾಗಿ ವೈಲಕ್ಷಣ್ಯವು ಹೆಚ್ಚು ಎಂಬ ಭಾವವು.

**ಮೂ. ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದ ಮಿಮ ಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥ ೭೬ ॥**

**ಭಾ. ಕೇಶವಾರ್ಜುನಯೋ ರಿಮಂ ಪುಣ್ಯಮದ್ಭುತಂ ಸಂವಾದಂ ಸಾಕ್ಷಾಚ್ಛ್ರುತಂ ಸ್ಮೃತ್ವಾ ಮುಹುರ್ಮುಹು ರ್ಹೃಷ್ಯಾಮಿ ॥೭೬॥**

**ಮೂಲಕ್ಕೆ ಅರ್ಥವು**—ಹಿಂದೆ ಈ ಸಂವಾದವು ಅದ್ಭುತವಾದುದೆಂದೂ ರೋಮಹರ್ಷ ವಾದುದೆಂದೂ ಹೇಳಿದ್ದರು. ಅದನ್ನೇ ಈ ಮುಂದಿನ ಎರಡು ಶ್ಲೋಕಗಳಿಂದಲೂ ಉಪಪಾದಿ ಸುತ್ತಾರೆ. ಶ್ರೀ ಕೃಷ್ಣಾರ್ಜುನರ ಸಂವಾದವನ್ನು ಪ್ರತ್ಯಕ್ಷವಾಗಿ ಕೇಳಿದುದು ಪುನಃಪುನಃ ಸ್ಮೃತಿಪಥಕ್ಕೆ ತೋರಿಬರುತ್ತದೆ; ಹಾಗೆ ಸ್ಮರಿಸಿದ ಸ್ಮರಿಸಿದ ಹಾಗೆಲ್ಲಾ ನನಗೆ ಪದೇಪದೇ ಉಂಟಾಗುವ ಆನಂದವನ್ನು ಹೇಳಲು ಸಾಧ್ಯವಿಲ್ಲವೆಂದು ಧೃತರಾಷ್ಟ್ರನಿಗೆ ಸಂಜಯರು ಹೇಳುತ್ತಾರೆ. **ಹೇ ರಾಜನ್**-ಓ ರಾಜನಾದ ಧೃತರಾಷ್ಟ್ರನೇ, **ಕೇಶವಾರ್ಜುನಯೋಃ**-ಚತುರ್ಮುಖ ಬ್ರಹ್ಮಶಿವರಿಗೂ ಕೂಡ ಸ್ವಾಮಿಯಾದ ಶ್ರೀ ಕೃಷ್ಣಭಗವಾನರವರ ಮತ್ತುಅರ್ಜುನನ, **ಪುಣ್ಯಂಚ**-ಪಾಪವಿಮೋಚನ ಮೂಲಕ ಪವಿತ್ರಕರವಾದುದೂ ಆದ **ಇಮಂ**-ಈಗ ನಿನಗೆ ತಿಳಿಸಿರುವ, **ಅದ್ಭುತಂ**-ಅತ್ಯಾಶ್ಚರ್ಯಕರವಾದ, **ಸಂವಾದಂ**-ಸಂವಾದವನ್ನು, **ಸಂಸ್ಮೃತ್ಯ ಸಂಸ್ಮೃತ್ಯ**-ಸಾಕ್ಷಾತ್ತಾಗಿ ಕೇಳಿ ತಿಳಿದುದನ್ನು ಸ್ಮರಿಸುತ್ತಾ ಸ್ಮರಿಸುತ್ತಾ, **ಮುಹುರ್ಮುಹುಃ**-ಬಾರಿಬಾರಿಗೂ, **ಹೃಷ್ಯಾಮಿ**-ಆನಂದಿಸುವವನಾಗಿದ್ದೇನೆ. ಆನಂದವು ಇಷ್ಟೆಂದು ಹೇಳಲು ಸಾಧ್ಯವಿಲ್ಲವೆಂಬ ಭಾವವು. **ಕೇಶವ**-ಶಬ್ದವು ಶ್ರೀಕೃಷ್ಣಭಗವಾನರವರ ನಿಸ್ಸಮಾಭ್ಯಧಿಕತ್ವವನ್ನೂ ಪರತ್ವವನ್ನೂ ಬೋಧಿಸುತ್ತದೆ. “**ಕ ಇತಿಬ್ರಹ್ಮಣೋ ನಾಮ ಈಶೋಹವಾ ಸರ್ವದೇಹಿ ನಾಮ್ । ಆವಾಂತವಾಂಗೇಸಂಭೂತೌ ತಸ್ಮಾತ್ಕೇಶವನಾಮವಾನ್**” ಎಂಬ ಶ್ಲೋಕವು ಕೇಶವಶಬ್ದದಿಂದ ಬೋಧಿತಾರ್ಥವನ್ನು ವ್ಯಕ್ತಪಡಿಸುತ್ತದೆ. ॥೭೬॥

**ಭಾಷ್ಯಾರ್ಥವು**—ಈ ಕೃಷ್ಣಾರ್ಜುನ ಸಂವಾದವು ಅದ್ಭುತವಾದುದು ಆಶ್ಚರ್ಯವಾದುದು ಎಂಬುದನ್ನೇ ಪುನಃ ಸಮರ್ಥಿಸಿ ಪ್ರತ್ಯಕ್ಷವಾಗಿ ನೋಡಿ ಕೇಳಿದುದರ ಆನಂದವು ಇಷ್ಟೆಂದು ಹೇಳಲಾರೆ ಎಂದು ತಿಳಿಸುತ್ತಾರೆ. **ಕೇಶವಾರ್ಜುನಯೋಃ**-ಶ್ರೀ ಕೃಷ್ಣನೇ ಪರತತ್ವವು, ಬ್ರಹ್ಮ ರುದ್ರಾದಿಗಳಿಗೂ ಸ್ವಾಮಿಯು ಎಂದು ತಿಳಿಸುವದಕ್ಕಾಗಿ ಕೇಶವಶಬ್ದವು, ಶ್ರೀಕೃಷ್ಣಾರ್ಜುನರ, **ಇಮಂ**-ಈ ಎಂದರೆ ಈಗ ನಾನು ಕೇಳಿದ ಹಾಗೆ ಯಥಾರ್ಥವಾಗಿಯೂ ವಿಸ್ತರಿಸಿಯೂ ತಿಳಿಸಿದ ಈ, **ಪುಣ್ಯಂ**-ಸ್ಮರಣಮಾತ್ರದಿಂದಲೇ ಜ್ಞಾನಯಜ್ಞದೋಪಾದಿಯಲ್ಲಿ ಪಾಪಪರಿಹಾರವಾದ, **ಅದ್ಭುತಂ**-ಶಬ್ದತಃ ಮತ್ತು ಅರ್ಥತಃ ಸಹ ಪರಮಾಶ್ಚರ್ಯಕರವಾದ ಸಂವಾದವನ್ನು, **ಸಾಕ್ಷಾಚ್ಛ್ರುತಂ** - ಸಾಕ್ಷಾತ್ತಾಗಿ ನಾನೇ ಕೇಳಿದುದನ್ನು **ಸ್ಮೃತ್ವಾ**-ಸ್ಮರಿಸಿ ಸ್ಮರಿಸಿ, **ಮುಹುರ್ಮುಹುಃ**-ಸ್ಮರಿಸಿದ ಹಾಗೆಲ್ಲಾ ಬಾರಿಬಾರಿಗೂ, **ಹೃಷ್ಯಾಮಿ**-ಆನಂದಿಸುವೆನು. ಸಾಧಾರಣವಾಗಿ ವಾಕ್ಪಟುತ್ವವೂ ಇದ್ದು ವಿಷಯವೂ ಸರ್ವೇಶ್ವರ ಚೇಷ್ಟಿತ ವಿಷಯವಾಗಿದ್ದರೆ ಪ್ರಾಜ್ಞರುಗಳು ಮಾಡುವ ಉಪನ್ಯಾಸವು ಅತ್ಯದ್ಭುತವಾಗಿಯೂ ಆಶ್ಚರ್ಯಕರವಾಗಿರುತ್ತದೆ. ವಕ್ತಾಸ್ವಯಂಲೋಕ ಗುರುವೇ ಆಗಿ, ವಿಷಯವೂ ಪರಮ ರಹಸ್ಯವಾಗಿ ದಿವ್ಯ ವೈಕುಂಠ ಪ್ರಾಪ್ತಿಯನ್ನು ಹೊಂದಿಸುವದಾಗಿದ್ದ ಪಕ್ಷದಲ್ಲಿ ಅತ್ಯದ್ಭುತವೆಂದೂ ಸ್ಮರಿಸಿದ ಹಾಗೆಲ್ಲಾ ಆನಂದ ಕರವೆಂದೂ ಹೇಳಬೇಕೇ ಎಂಬ ಭಾವದಿಂದ ಈ ಶ್ಲೋಕದಲ್ಲೇ ಮೂಲದಲ್ಲಿಲ್ಲದಿದ್ದರೂ, **ಸಾಕ್ಷಾಚ್ಛ್ರುತಂ** ಎಂದು ಹಿಂದೆ ಹೇಳಿದುದನ್ನೇ ಇಲ್ಲಿಯೂ ಅನುವಾದ ಮಾಡಿ ಹೇಳಿರುತ್ತಾರೆ.

**ಮೂ. ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।
ವಿಸ್ಮಯೋ ಮೇ ಮಹಾರಾಜನ್ ಹೃಷ್ಯಾಮಿ ಚ ಪುನಃಪುನಃ ॥ ೭೭ ॥**

ಸಂಜಯರು ಪರಮಬ್ರಹ್ಮವಿತ್ತಾದುದರಿಂದ "**ಮಾನಸೇ ರಮನ್ತೇ**" ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಆನಂದಿಸುವರಾದುದರಿಂದ, ತಮ್ಮ ಅನುಭವವನ್ನು ತಾವೇ **ಹೃಷ್ಯಾಮಿ** ಎಂದು ಹೇಳಿಕೊಂಡಿರುತ್ತಾರೆ. ಇಂತಹ ಅಮೋಘಾನುಭವವು ನನಗೇ ವೇದ್ಯವೇ ವಿನಾ ಧೃತರಾಷ್ಟ್ರನಾದ ನಿನಗೆ ಉಂಟಾಗಲಾರದು; ಎಂಬ ಭಾವವು. ಏತಕ್ಕೆಂದರೆ ಇನ್ನೊಂದು ಸಂದರ್ಭದಲ್ಲಿ ಇದೇ ಸಂಜಯರೇ ಧೃತರಾಷ್ಟ್ರನಿಗೆ ಆತನಲ್ಲಿರುವ ನ್ಯೂನತೆಯನ್ನು ಪ್ರದರ್ಶಿಸುವದಕ್ಕಾಗಿ "**ಮಾಯಾಂ ನ ಸೇವೇ ಭದ್ರಂತೇ ನ ವೃಥಾಧರ್ಮಮಾಚರೇ । ಶುದ್ಧಭಾವಂ ಗತೋಽಭಕ್ತ್ಯಾ ಶಾಸ್ತ್ರಾದ್ವೇದ್ಮಿ ಜನಾರ್ದನಂ**" ಎಂದು ಹೇಳಿದ ಮಹನೀಯರಾದುದರಿಂದ ಇಂತಹ ಆನಂದವು ಬ್ರಹ್ಮವಿತ್ತುಗಳಾದ ಸಂಜಯಾದಿಗಳಿಗೆ ವಿನಾ ಸಾಧಾರಣರಾದ ಧೃತರಾಷ್ಟ್ರಾದಿಗಳಿಗಿಲ್ಲವೆಂಬ ಭಾವವನ್ನು ಗ್ರಹಿಸಬಹುದು. ಆದರೂ ಸಂಜಯರಿಗೆ ಧೃತರಾಷ್ಟ್ರನಲ್ಲಿದ್ದ ಪ್ರೀತ್ಯತಿಶಯದಿಂದ ತನಗುಂಟಾಗಿರುವ ಆನಂದವು ನಿರತಿಶಯವಾದುದು ಎಂದು ಹೇಳಿರುತ್ತಾರೆ. ಇದರಿಂದ ಆತನಿಗೆ ಶ್ರೀಕೃಷ್ಣಭಗವಾನರವರಲ್ಲಿ ಭಕ್ತಿಯು ವೃದ್ಧಿಹೊಂದಲಿ ಎಂಬುದು ಈ ಪರಮಭಾಗವತರ ಆಶಯವು ಸತ್ಪುರುಷರ ಉದ್ದೇಶವೆಲ್ಲಾ ಎಲ್ಲರೂ ಶ್ರೇಯಸ್ಸನ್ನು ಹೊಂದಲಿ ಎಂಬುದೇ. ಇಂತಹ ವಿಷಯವನ್ನೆಲ್ಲಾ ಗ್ರಹಿಸಿ, ಶ್ರೀಕೃಷ್ಣಭಗವಾನರವರಿಗೆ ಅರ್ಜುನನಲ್ಲಿರುವ ಪ್ರೀತ್ಯತಿಶಯವು ಅಮೋಘವಾಗಿರುವಾಗ, ಅರ್ಜುನಾದಿಗಳಲ್ಲಿ ದ್ವೇಷಬುದ್ಧಿಯನ್ನು ಬಿಟ್ಟು ಬಿಟ್ಟು ಅವರ ರಾಜ್ಯಗಳನ್ನು ಅವರಿಗೆ ಒಪ್ಪಿಸಿ ಬಿಟ್ಟು "**ವಸೇಮ ರಾಜನ್ ಇಹವೀತಶೋಕಾಃ**" ಎಂಬಲ್ಲಿ ಹೇಳಿರುವ ಹಾಗೆ ತನ್ನ ಮಗನಿಗೆ ಹಿತೋಪದೇಶವನ್ನು ಮಾಡಲಿ ಎಂಬ ಆಶಯದಿಂದಲೂ ಸಂಜಯರು ಈರೀತಿ ಧೃತರಾಷ್ಟ್ರನಿಗೆ ಹೇಳುತ್ತಾರೆ.

**ಮೂಲಕ್ಕೆ ಅರ್ಥವು**—ಹಿಂದಿನ ಶ್ಲೋಕದಲ್ಲಿ ಕೇಶವಾರ್ಜುನ ಸಂವಾದದಲ್ಲಿ ಕೇಳಿದುದು ಅದ್ಭುತವಾದುದು, ಅದನ್ನು ಸ್ಮರಿಸುತ್ತಾ ಸ್ಮರಿಸುತ್ತಾ ಉಂಟಾಗುವ ಆನಂದವು ಅಪ್ಪಿಷ್ಟಲ್ಲವೆಂದು ಹೇಳಿದರು. ಈ ಶ್ಲೋಕದಲ್ಲಾದರೋ ಆ ಸಂವಾದಕಾಲದಲ್ಲಿ ಅರ್ಜುನನಿಗೆ ತೋರಿಸಿದ ಅತ್ಯದ್ಭುತರೂಪವನ್ನು ಪ್ರತ್ಯಕ್ಷಕಂಡುದದನ್ನು ಸ್ಮರಿಸುತ್ತಾ ಸ್ಮರಿಸುತ್ತಾ ಉಂಟಾಗುವ ಆನಂದವೂ ಅಪ್ಪಿಷ್ಟಲ್ಲವೆಂದು ಹೇಳುತ್ತಾರೆ—**ಹೇ ರಾಜನ್**-ಓರಾಜನಾದ ಧೃತರಾಷ್ಟ್ರನೇ **ಹರೇಃ**— ಪ್ರಪನ್ನ ಪಾಪಹರನಾದ ವಿಷ್ಣುವಿನ, ಅತ್ಯದ್ಭುತನಾದ, **ತಚ್ಚರೂಪಮ್** - ಅರ್ಜುನನಿಗೆ ತೋರಿದ ತನ್ನ ವಿಭೂತಿವಿಸ್ತರ ಪ್ರದರ್ಶಕವಾದ ವಿಶ್ವರೂಪವನ್ನು, **ಸಂಸ್ಮೃತ್ಯ ಸಂಸ್ಮೃತ್ಯ**-ಸಾಕ್ಷಾತ್ತಾಗಿ ನೋಡಿದೆನಾದುದರಿಂದ ಅದನ್ನು ಸ್ಮರಣೆಗೆ ಪದೇ ಪದೇ ತಂದುಕೊಂಡು, **ಮೇ**-ನನಗೆ, **ವಿಸ್ಮಯಃ**-ಆಶ್ಚರ್ಯವು, **ಮಹಾನ್**—ಮಹತ್ತಾದುದು **ಚ**-ಹಾಗೆಯೇ **ಪುನಃ ಪುನಃ ಹೃಷ್ಯಾಮಿ**-ಆನಂದಿಸುತ್ತಿದ್ದೇನೆ. ಈ ರೂಪವು ಹನ್ನೊಂದನೆಯ ಅಧ್ಯಾಯದಲ್ಲಿ ವಿಶೇಷಾದ್ಭುತವೆಂದು ವರ್ಣಿಸಲ್ಪಟ್ಟಿರುತ್ತದೆ. ಅರ್ಜುನನೂ ಸಹ **ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ** (ಗೀ. ೧೧-೨೦) ಎಂದು ಅದ್ಭುತವೆಂದೇ ವರ್ಣಿಸಿರುತ್ತಾನೆ; ಮತ್ತು "**ಹೃಷಿತೋಽಸ್ಮಿ**" ಎಂದೂ ಹೇಳಿಕೊಂಡಿರುತ್ತಾನೆ. (ಗೀ. ೧೧-೪೫) ಈ ಅಭಿಪ್ರಾಯಗಳನ್ನೇ ಸಂಜಯರು ತಿಳಿಸಿರುತ್ತಾರೆ **ರಾಜನ್**-ಎಂಬ ಸಂಬೋಧನೆಯಿಂದ ರಾಜ್ಯಾಡಳಿತೆಯ ವೃತ್ತಾನ್ತದಲ್ಲೇ ಮಗ್ನನಾದ ನೀನು ತಿಳಿಯಲಾರೆ; ಅಂತಹ ಐಹಿಕಗಳನ್ನೆಲ್ಲಾ ಸಂಪೂರ್ಣವಾಗಿ ಪರಿತ್ಯಾಗ ಮಾಡಿರುವ ವೈರಾಗ್ಯದಿಂದಿರುವ ನನಗಾದರೋ ಆ ರೂಪದ ಸ್ಮರಣೆಯಿಂದುಂಟಾಗುವ ವಿಸ್ಮ

**ಭಾ. ತಚ್ಚ-ಅರ್ಜುನಾಯ ಪ್ರಕಾಶಿತ ನ್ಮೈಶ್ವರಂ, ಹರೇರತ್ಯದ್ಭುತಂ ರೂಪಂ ಮಯೊ**

ಯವೂ ಆನಂದವೂ ಸಹ ವೇದ್ಯವು ಎಂಬ ಭಾವವು ಸೂಚಿತವು; ಈ ಅರ್ಥವು **ಮೇಮಹಾ** ಎಂಬುದರಿಂದ **ನತುತವ**-ಎಂಬುದು ಸೂಚಿತವಾಗುವದರಿಂದಲೂ ವ್ಯಕ್ತವು. **ಹೃಷ್ಯಾಮಿ**-ಎಂಬುದರಿಂದ ತಾನು ಪರಮ ಸುಕೃತಿಯು; ವ್ಯಾಸಪ್ರಸಾದವುಂಟಾಗಿ ಅವರಿಂದ ದಿವ್ಯ ಚಕ್ಷುಸ್ಸು ಶ್ರೋತ್ರಲಾಭವೂ, ಪರಮಪುರುಷನೇ ಸ್ವಯಂ ಉಪದೇಶಿಸಿದ ಪರಮ ಗುಹ್ಯವಾದ ಗಳನ್ನು ಕೇಳೋಣವೂ, ಆತನ ಅತ್ಯದ್ಭುತವಾದ ರೂಪವನ್ನು ಸಾಕ್ಷಾತ್ತಾಗಿ ನೋಡೋಣವೂ ಇವೆಲ್ಲಾ ತನ್ನ ಸುಕೃತ ಪರಿಪಾಕದ ಫಲವಲ್ಲವೇ ಎಂದಾಗಲಿ **ಹೃಷ್ಯಾಮಿ ಚ ಪುನಃ ಪುನಃ.** ಎಂದು ಹೇಳಲ್ಪಟ್ಟಿತೆಂದಾದರೂ ಆಗಬಹುದು ಇಂತಹ ಪರಮ ಸುಕೃತವು ಯಾವಾಗ ಒದಗಿತೋ, ಆಗ ಭಗವಂತನ ಅನುಗ್ರಹವು ತನಗೆ ಉಂಟೆಂಬುದೂ, ಅದರಿಂದ ತನಗೆ ಪರಮ ನಿಶ್ರೇಯಸ್ಸೂ ಉಂಟೆಂಬುದೂ ವ್ಯಕ್ತವೆಂದು ಭಾವಿಸಿಯೂ **ಹೃಷ್ಯಾಮಿ ಚ ಪುನಃ ಪುನಃ**-ಅರ್ಜುನನಿಗೋಸ್ಕರ ತೋರಿದ ಅದ್ಭುತರೂಪವು ತನಗೂಕೂಡ ಸಾಕ್ಷಾತ್ತಾಗಿ ದೃಷ್ಟಿಪಥಕ್ಕೆ ಬೀಳಬೇಕಾದರೆ ಶ್ರೀ ಕೃಷ್ಣಭಗವಾನರವರು ನನಗೆ ಪ್ರಸನ್ನರು; **"ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಮ್"** (ವಿ. ಪು. ) ಆತನು ಪ್ರಸನ್ನನಾದರೆ ನನಗೇನು ಕಮ್ಮಿ ಎಂಬ **ಹೃಷ್ಯಾಮಿ ಚ ಪುನಃ** ಎಂದು ಹೇಳಿಕೊಂಡರು.

ಇಲ್ಲಿ **ರೂಪಮತ್ಯದ್ಭುತಂಹರೇಃ** ಎಂದು ಏಕವಚನ ಪ್ರಯೋಗವಿರುತ್ತದೆ ವಿಶ್ವರೂಪ ಒಂದು, ದಿವ್ಯ ವೈಕುಂಠರೂಪ ಒಂದು, ಹೀಗೆ ಎರಡು ರೂಪಗಳನ್ನು ತೋರಿಸಿರುವದೆಂಬುದು ಏಕವಚನಕ್ಕೆ ವಿರೋಧವಲ್ಲವೇ? ಎಂದರೆ ಪರಮಪುರುಷನಾದ ಶ್ರಿಯಃಪತಿಯ ಪ್ರತಿಯೊಂದು ರೂಪವೂ ಅತ್ಯದ್ಭುತವಾದುದೇ ಎಂಬುದರಲ್ಲಿ ಸಂದೇಹವಿಲ್ಲವೆಂಬ ಭಾವವು ತೋರಿಬರುತ್ತದೆ. ಅರ್ಜುನನು ಹೇಗೆ **"ಭಯೇನಚ ಪ್ರವ್ಯಥಿತಂ ಮನೋಮೇ"** ಎಂದು ವಿಶ್ವರೂಪ ದರ್ಶನದಿಂದ ಹೇಳಿ, **"ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ ತದೇವ ಮೇ ರೂಪಮಿದಂ ಪ್ರಪಶ್ಯ"** ಎಂದು ಶ್ರೀಕೃಷ್ಣಭಗವಾನರವರು ಹೇಳಿ ಪರರೂಪವನ್ನು ತೋರಿ ಸಮಾಧಾನಮಾಡಿದ ನಂತರ ಸೌಮ್ಯ ಭಾವವನ್ನು ಹೊಂದಿ ಹರ್ಷಿತನಾದನೋ, ಹಾಗೆಯೇ ಮಹಾನುಭಾವರಾದ ಸಂಜಯರು ಮೊದಲಿನ ವಿಶ್ವರೂಪವನ್ನು ಕುರಿತು ಅತ್ಯದ್ಭುತವೆಂದು ಹೇಳಿ ತಮಗೆ ಮಹತ್ತಾದ ವಿಸ್ಮಯ ಉಂಟಾಯಿತೆಂದು ಧೃತರಾಷ್ಟ್ರನಿಗೆ ತಿಳಿಸಿ, **ಚ** ಶಬ್ದಸ್ವಾರಸ್ಯದಿಂದ. **ಹೃಷ್ಯಾಮಿ ಚ ಪುನಃ ಪುನಃ** ಎಂಬುದರಿಂದ ಪರರೂಪದರ್ಶನದಿಂದ ಉಂಟಾದ ಹರ್ಷೋತ್ಕರ್ಷವನ್ನು ತಿಳಿಸುತ್ತಾರೆಂದು ಭಾವಿಸಬಹುದು. ಆಗಲಿ, ಹನ್ನೊಂದನೆಯ ಅಧ್ಯಾಯದಲ್ಲಿ ಈ ಪರರೂಪವನ್ನು ಈ ನೃಲೋಕದಲ್ಲಿ ಯಾರಿಗೂ ತೋರಿಸಲಿಲ್ಲವೆಂದು ಹೇಳಿ ಶ್ರೀವ್ಯಾಸರಿಗೂ ಮತ್ತು ಅವರ ಪ್ರಸಾದದಿಂದ ಸಂಜಯನಿಗೂ ತೋರಿದುದು ಸರಿಯೇ? ಎಂದರೆ ಮಹಾಭಾರತಗೀತಾ ಗ್ರಂಥಕರ್ತ್ರರಾಗಿ ಅವಶ್ಯಕವಾಯಿತೆಂದು ಭಾವಿಸತಕ್ಕದ್ದು.

**ಭಾಷ್ಯಾರ್ಥವು**—ಆ ಗೀತಾಮೃತ ಮಹೋದಧಿಯ ಮಧುರವಾಕ್ಯನ್ನು ಸ್ಮರಿಸಿದ ಹಾಗೆಲ್ಲಾ ಆಶ್ಚರ್ಯವೂ ಪರಮಾನಂದವೂ ಉಂಟಾಗುತ್ತವೆಂದೇನೋ ಹೇಳಿದನು; ಆತನು ತೋರಿದ ದಿವ್ಯರೂಪವನ್ನು ಸ್ಮರಿಸಿದರೂ ಅದೇ ಪ್ರಕಾರ ವಿಸ್ಮಯವೂ, ನಿರತಿಶಯ ಹರ್ಷವೂ ಉಂಟಾಗುತ್ತದೆಂದು ಹೇಳುತ್ತಾರೆ. **ತಚ್ಚ**-ಅದೂಕೂಡ, ಯಾವುದು ಎಂದರೆ **ಅರ್ಜುನಾಯ ಪ್ರಕಾಶಿತಮೈಶ್ವರಂ** ಅರ್ಜುನನಿಗಾಗಿ ಪ್ರದರ್ಶಿಸಲ್ಪಟ್ಟ, ಎಲ್ಲಾ ಚಿದಚಿತ್ತುಗಳನ್ನೂ ವ್ಯಾಪಿಸಿ

**ಭಾ. ಸಾಕ್ಷಾತ್ಕೃತಂ, ಸಂಸ್ಮೃತ್ಯ ಹೃಷ್ಯತೋ ಮೇ ಮಹಾನ್ ವಿಸ್ಮಯೋಽಜಾಯತೇ, ಪುನಃಪುನಶ್ಚ ಹೃಷ್ಯಾಮಿ ॥ ೭೭ ॥**

**ಭಾ. ಅವ. ಕಿಮತ್ರಬಹುನೋಕ್ತೇನ—**

ಅವುಗಳಿಗೆಲ್ಲಾ ಆತ್ಮಾವಾಗಿ, ಅವುಗಳೆಲ್ಲಾ ತನಗೆ ಶರೀರವಾಗಿರುವದರಿಂದ ಉಭಯ ವಿಭೂತಿ ನಾಯಕತ್ವವನ್ನು ಪ್ರದರ್ಶಿಸುವ, **ಹರೇಃ** - ಶ್ರೀಹರಿಯು, **ಅತ್ಯದ್ಭುತಂರೂಪಂ**-ಅತ್ಯದ್ಭುತವಾದ ದಿವ್ಯ ಮಙ್ಗಳವಿಗ್ರಹವು, **ಮಯಾ**-ನನ್ನಿಂದ, **ಸಾಕ್ಷಾತ್ಕೃತಂ**-ಸಾಕ್ಷಾತ್ತಾಗಿ ನೋಡಲ್ಪಟ್ಟಿತು; **ಸಂಸ್ಮೃತ್ಯ ಸಂಸ್ಮೃತ್ಯ**-ಅದನ್ನು ಸ್ಮರಿಸಿ ಸ್ಮರಿಸಿ, **ಹೃಷ್ಯತೋಮೇ**-ಸಂತೋಷಿಸುತ್ತಿರುವ ನನಗೆ, **ಮಹಾನ್‌ವಿಸ್ಮಯೋಽಜಾಯತೇ**-ಮಹತ್ತಾದ ಆಶ್ಚರ್ಯವು ಉಂಟಾಗಿರುತ್ತದೆ, ಆದರಿಂದ **ಪುನಃಪುನಶ್ಚ**-ಬಾರಿಬಾರಿಗೂ, **ಹೃಷ್ಯಾಮಿ**-ಆನಂದಿಸುತ್ತಿದ್ದೇನೆ. **ಅರ್ಜುನಾಯ ಪ್ರಕಾಶಿತಂ** ಎಂಬುದರಿಂದ ಸಾಧಾರಣವಾಗಿ ವಸುದೇವ ಪುತ್ರನಾದ ಶ್ರೀಕೃಷ್ಣರೂಪದಲ್ಲಿ ಎಲ್ಲರಿಗೂ ಹೀಗೆ ಕಾಣಿಸಿಕೊಳ್ಳುವನಲ್ಲವೆಂದು ತಿಳಿಸುವದಕ್ಕಾಗಿ ಎಂದು ಗ್ರಹಿಸತಕ್ಕದ್ದು. ಆದರೆ ಸಂಜಯರಿಗೂ ಅದನ್ನು ತೋರಿದುದು ಹೇಗೆ? ಎಂದರೆ ಹಾಗೆಯೇ ವ್ಯಾಸರ ಅನುಗ್ರಹಕ್ಕೆ ಪಾತ್ರರಾದುದರಿಂದ ಸಂಜಯರೂ ಆ ಅದ್ಭುತ ರೂಪವನ್ನು ನೋಡಿದರು ; ಮತ್ತು ಮಹಾನ್‌ಗಳಿಗೂ ಸಹ ವಿಶ್ವರೂಪವನ್ನು ಅನುಗ್ರಹಮಯನು ದಯೆಯಿಂದ ತೋರಿರುತ್ತಾನೆಂಬುದು ವ್ಯಕ್ತವು. ಸರ್ವೇಶ್ವರನ ಅವತಾರಕಾಲದಲ್ಲಿ ಜನ್ಮವನ್ನು ಎತ್ತಿದ ಸುಕೃತಿಗಳಿಗೆ ಇಂತಹ ನಿರತಿಶಯ ಪ್ರಯೋಜನದ ಲಾಭವುಂಟು. **ಹೃಷ್ಯತೋಮೇ**-ಎಂಬ ವ್ಯಾಖ್ಯಾನದ ಸ್ವಾರಸ್ಯವೇನೆಂದರೆ, ಆನಂದದಿಂದ ಆಶ್ಚರ್ಯವೂ, ಆಶ್ಚರ್ಯದಿಂದ ಆನಂದವೂ, ಹೀಗೆ ಪುನಃ ಪುನಃ ಉಂಟಾಗುತ್ತದೆಂದು ತಿಳಿಸುವದಕ್ಕಾಗಿ **ಮೇ**-ಎಂಬುದಕ್ಕೆ **ಹೃಷ್ಯತಃ ಮೇ**-ಎಂಬ ಭಾಷ್ಯವು.

**ಭಾಷ್ಯಾವತಾರಿಕೆಯ ಅರ್ಥವು.** ಶ್ರೀ ಯತಿವರ್ಯರು ತಾವು ಈ ಗ್ರಂಥಕ್ಕೆ ಕೊಟ್ಟ ಅವತಾರಿಕೆಯಲ್ಲಿ, **ಏವಂಜ್ಞಾತ್ವಾಪಿ ಸರ್ವಾತ್ಮನಾಂಧೋ ಧೃತರಾಷ್ಟ್ರಸ್ಸುಯೋಧನವಿಜಯಬುಭುತ್ಸಯಾ ಸಂಜಯಂ ಪಪ್ರಚ್ಛ**" ಎಂದು "**ಮಾಮಕಾಃ ಪಾಂಡವಾಶ್ಚೈವ ಕಿ ಮಕುರ್ವತ ಸಂಜಯ**"ಎಂಬ ಪ್ರಥಮಶ್ಲೋಕದಲ್ಲಿರುವ ಪ್ರಶ್ನೆಗೆ, ಈ ಕೊನೆಯ ಶ್ಲೋಕವೇ ಉತ್ತರವು ಎಂಬ ಭಾವದಿಂದ, **ಕಿಮತ್ರಬಹುನೋಕ್ತೇನ** ಎಂಬ ಅವತಾರಿಕೆಯು ಎಂಬ ಭಾವವು. **ಕಿಮತ್ರಬಹುನೋಕ್ತೇನ**-ತುಂಬಾ ಹೇಳುವದರಿಂದ ಈ ಸಂದರ್ಭದಲ್ಲಿ ಪ್ರಯೋಜನವೇನೆಂದು ಸಙ್ಗ್ರಹವಾಗಿ ಚನ್ನಾಗಿ ತಿಳಿಯುವ ಹಾಗೆ ಸಂಜಯರು ಆ ಧೃತರಾಷ್ಟ್ರನ ಪ್ರಶ್ನೆಗೆ ಸಾಕ್ಷಾತ್ತಾಗಿ ಉತ್ತರವನ್ನು ಹೇಳುತ್ತಾರೆ. ಧೃತರಾಷ್ಟ್ರನು ಹಿಂದೆ ವಿಶ್ವರೂಪವನ್ನು ಕಂಡುದುದನ್ನು ವರ್ಣಿಸುವಾಗಲೇ ತನ್ನ ಮಕ್ಕಳಿಗೆ ವಿಜಯವಿಲ್ಲವೆಂಬುದನ್ನು ಗ್ರಹಿಸಬಹುದಾಗಿತ್ತು ೧೧ ನೆಯ ಅಧ್ಯಾಯದ ೨೬-೨೭ ನೆಯ ಶ್ಲೋಕಗಳಲ್ಲಿ "**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**" ಎಂದಾರಂಭಿಸಿ, ತನ್ನ ಪುತ್ರರೆಲ್ಲರೂ ಭೀಷ್ಮದ್ರೋಣಸೂತಪುತ್ರರೆಲ್ಲರೂ ವಿಶ್ವರೂಪನ ಬಾಯಲ್ಲಿ ಚೂರ್ಣಿತರಾದ ಹಾಗೆ ಕಾಣುತ್ತಾರೆಂಬ ಅರ್ಜುನವಾಕ್ಯದಿಂದಲೇ, ಅರ್ಜುನನಿಗೆ ವಿಜಯವೂ ತನ್ನ ಮಕ್ಕಳಿಗೆ ನಾಶವೂ ಪ್ರಾಪ್ತವಾಗುತ್ತದೆಂಬುದು ವ್ಯಕ್ತವು. ಇದನ್ನೂ ಗ್ರಹಿಸಲಿಲ್ಲವು. ಶ್ರೀ ಕೃಷ್ಣನು ಸಾಧಾರಣನಲ್ಲವು ; ಅರ್ಜುನನಿಗೆ ಸಾರಥಿಯಾಗಿ ಬಂದಿರುವದರಿಂದ ಅರ್ಜುನನ ವಿಜಯದಲ್ಲೇ ಕೃಷ್ಣನು ಗ್ರಹವೆಂದಾಗಲಿ ತಿಳಿಯಬಹುದಿತ್ತು. ಸಾಕ್ಷಾತ್ತಾಗಿ ತನ್ನ ಮಕ್ಕಳಿಗೆ ನಾಶವೆಂಬುದನ್ನು ಚನ್ನಾಗಿ ತಿಳಿಯಲೆಂದೇ ಸಂಜಯರು

**ಮೂ. ಯತ್ರಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ |**
**ತತ್ರ ಶ್ರೀರ್ವಿಜಯೋ ಭೂತಿ ರ್ಧ್ರುವಾ ನೀತಿ ರ್ಮತಿ ರ್ಮಮ ॥ ೭೮ ॥**

**॥ ಓಂ ತತ್ಸದಿತಿ ॥**

ಇದಕ್ಕೆ ಹಿಂದಿನ ಶ್ಲೋಕದಲ್ಲಿ "**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯರೂಪ ಮತ್ಯದ್ಭುತಂ ಹರೇಃ**" ಎಂದು ಹೇಳಿದರು ; ಮತ್ತು ಹಿಂದೆ ೭೪ ನೆಯ ಶ್ಲೋಕದಲ್ಲಿ ಪಾರ್ಥನಿಗೇನೇ ಶ್ರೀ ಕೃಷ್ಣಾನುಗ್ರಹವು ಎಂದು ಸೂಚಿತವಾಗುವ ಹಾಗೆ ಪಾರ್ಥನು ಶ್ರೀ ಕೃಷ್ಣನ ಪಾದವನ್ನು ಆಶ್ರಯಿಸಿರುವವನಾದುದರಿಂದ **ಪಾರ್ಥಸ್ಯ ಚ ಮಹಾತ್ಮನಃ** ಎಂದೂ ಸೂಚಿಸಿದರು ತನ್ನ ದುಷ್ಟಪುತ್ರರಲ್ಲಿದ್ದ ಮಮತೆಯಿಂದ **ಮಾಮಕರಾದ** ತನ್ನವರಿಗೆ ಜಯವು ಸಂಭವಿಸಿತೋ ಎಂಬ ಆಶೆಯಿಂದ ಸರ್ವಾತ್ಮನಾ ಅಂಧನಾದ ಧೃತರಾಷ್ಟ್ರನು ಸಿಶ್ಚಯವನ್ನು ಗ್ರಹಿಸದೇ ಹೋದುದರಿಂದ, ನಿನ್ನ ಮಕ್ಕಳಿಗೆ ಜಯ ಉಂಟಾಗಲಾರದು, ಪಾಂಡವರಿಗೇನೇ ಜಯವು ಎಂದು ಸಕಾರಣವಾಗಿ ತಿಳಿಸುತ್ತಾರೆ.

**ಮೂಲಕ್ಕೆ ಅರ್ಥವು**—ಧೃತರಾಷ್ಟ್ರನು ತನ್ನ ಮಕ್ಕಳಿಗೆ ಜಯವಾಗಬೇಕೆಂಬ ಆಶೆಯಿಂದ ಯುದ್ಧರಂಗದಲ್ಲಿ ಏನು ನಡೆಯಿತು ಎಂದು ಪ್ರಥಮ ಶ್ಲೋಕದಲ್ಲಿ ಕೇಳಿದುದಕ್ಕೆ ಈ ಕೊನೆಯ ಶ್ಲೋಕವು ಉತ್ತರವು. ಹಿಂದೆ ಹನ್ನೊಂದನೆಯ ಅಧ್ಯಾಯದಲ್ಲಿ ಅರ್ಜುನ ವಾಕ್ಯದಿಂದಲೇ ದುರ್ಯೋಧನಾದಿಗಳು ದುಷ್ಟರಾದುದರಿಂದ ಅವರಿಗೆ ಶ್ರೀ ಕೃಷ್ಣಾನುಗ್ರಹವಿಲ್ಲವು ಎಂಬುದು ವ್ಯಕ್ತವು ; ಸಾಧುಗಳಾದ ಪಾಂಡವರಿಗೇನೇ ಸರ್ವಶ್ರೇಯಸ್ಸು ಎಂಬುದೂ ವ್ಯಕ್ತವು ; ಅರ್ಜುನನಿಗೆ ದಿವ್ಯಚಕ್ಷುಸ್ಸನ್ನು ಕೊಟ್ಟು ವಿಶ್ವರೂಪವನ್ನೂ ಸ್ವಮಾಹಾತ್ಮ್ಯೆಯನ್ನೂ ಪ್ರದರ್ಶಿಸಿ, ಮುಂದೆ ನಡೆಯುವದನ್ನೆಲ್ಲಾ ವ್ಯಕ್ತಪಡಿಸಿ, ಯುದ್ಧವನ್ನು ಮಾಡು ನಿನಗೆ ಸರ್ವವಿಧದಲ್ಲೂ ಹಿತವೇ ಉಂಟಾಗುತ್ತದೆಂದೂ, ಅದನ್ನೆಲ್ಲಾ ತಾನೇ ನಡೆಸಿಕೊಡುವೆನೆಂದೂ, ಆದುದರಿಂದ ನೀನು "**ನಿಮಿತ್ತಮಾತ್ರಂ ಭವ ಸವ್ಯಸಾಚಿನ್**" ಹೀಗೆಲ್ಲಾ ಹೇಳಿದುದನ್ನು ಶ್ರೀ ಸಂಜಯರು ತಿಳಿಸಿದ್ದರೂ ಆತನಿಗೆ ಜ್ಞಾನ ಉಂಟಾಗಲಿಲ್ಲವು ; ಸಂಜಯರು ಅದನ್ನೇ ಜ್ಞಾಪಿಸುವದಕ್ಕಾಗಿ ತಾನು ಪ್ರತ್ಯಕ್ಷವಾಗಿ ಕಂಡ ವಿಶ್ವರೂಪದ ವಿಷಯವನ್ನು ಪುನಃ ಅನುವಾದಮಾಡಿ ಹಿಂದಿನ ಶ್ಲೋಕದಲ್ಲಿ ಹೇಳಿದರು ಆದುದರಿಂದ ಈ ಧೃತರಾಷ್ಟ್ರನಿಗೆ ಎಷ್ಟು ಹೇಳಿದರೆ ತಾನೇ ಏನು? ಜ್ಞಾನೋದಯವಾಗುವ ಸಂಭವವೇ ಇಲ್ಲವೆಂದು ಯೋಚಿಸಿ ಕೊನೆಗೆ ಈ ಶ್ಲೋಕದಲ್ಲಿ ಅರ್ಜುನನಿಗೇನೇ ಜಯವೆಂದು ಹೇಳಿ ಮುಗಿಸುತ್ತಾರೆ

**ಯತ್ರ**-ಈ ಯುದ್ಧಮಾಡುವ ಎರಡು ಕಕ್ಷಿಯಲ್ಲಿ ಯಾವ ಕಡೆಯಲ್ಲಿ, **ಯೋಗೇಶ್ವರಃ**-ಲೋಕದಲ್ಲಿನ ತ್ರಿವಿಧ ಚೇತನಾಚೇತನಗಳ ಯೋಗ ಸತ್ತಾಸ್ಥಿತಿನಿಯಮನಾದಿ ಯೋಗಗಳಿಗೆಲ್ಲಾ ಸ್ವಾಮಿಯಾದ, **ಕೃಷ್ಣಃ**-ಶ್ರೀಕೃಷ್ಣಭಗವಾನರವರು ಇರುತ್ತಾರೋ, **ಯತ್ರ**-ಯಾವ ಕಡೆಯಲ್ಲಿ, **ಪಾರ್ಥಃ**-ಪೃಥುಪುತ್ರನಾದ ಅರ್ಜುನನು, **ಧನುರ್ಧರಃ**-ಗಾಂಢೀವ ಧನುಸ್ಸನ್ನು ಹಿಡಿದು ಎದುರಾಳಿಯಾಗಿ ನಿಂತಿರುವನೋ, **ತತ್ರ**-ಆ ಕಡೆಯಲ್ಲೇ, **ಶ್ರೀಃ**-ರಾಜ್ಯಧನಧಾನ್ಯಭೋಗಾದಿ ಸಮೃದ್ಧಿಯು, ಸಮಸ್ತವಾದ ಲಕ್ಷ್ಮಿಯ ಅನುಗ್ರಹದಿಂದುಂಟಾಗುವ ಸಂಪತ್ತೂ, **ವಿಜಯಃ**-ಅದಕ್ಕಾಗಿ ಯುದ್ಧದಲ್ಲಿ ಶತ್ರುನಾಶದೊಂದಿಗೆ ಜಯವೂ, **ಭೂತಿಃ**-ಉಂಟಾದ ಐಶ್ವರ್ಯದ ಉತ್ತರೋತ್ತರಾಭಿವೃದ್ಧಿಯೂ, **ಧ್ರುವಾ**-ಅಚಾಲ್ಯವಾದ, **ನೀತಿಃ**-ಧರ್ಮವನ್ನಾಚರಿಸುವ ಅಧರ್ಮವನ್ನು ಪರಿತ್ಯಾಗಮಾಡಬೇಕೆಂಬ ನಿಷ್ಕರ್ಷೆಯೂ ಸಹ ಎಂಬುದು, **ಮಮ**-ನನ್ನ, **ಮತಿಃ**-ಅಭಿಪ್ರಾಯವು. ಪ್ರಾಜ್ಞರ ಅಭಿಪ್ರಾಯವೆಲ್ಲಾ ಋಜುವಾಗಿ ಯಥಾರ್ಥವಾಗಿರು

ವದರಿಂದ **ಮತಿಃ**-ಎಂಬುದರಿಂದ ನಿಸ್ಸಂಶಯವೆಂಬ ಭಾವವು. **ಯತ್ರಯೋಗೇಶ್ವರಃಕೃಷ್ಣಃ**-ಯಾವ ಕಡೆಯಲ್ಲಿ ಶ್ರೀ ಕೃಷ್ಣನಿದ್ದಾನೋ ಆ ಕಡೆಯಲ್ಲಿ ಎಂಬುದರಿಂದ ದ್ಯೋತಿತವಾಗುವ ಅರ್ಥವೇನೆಂದರೆ, ಯಾವನೇ ಆಗಲಿ ಶ್ರೀಕೃಷ್ಣಭಗವಾನರವರನ್ನು ಆಶ್ರಯಿಸಿ ವಶಮಾಡಿ ಕೊಂಡಿರುತ್ತಾನೋ, ಅಂತಹ ಪ್ರಪನ್ನನ ವಿಷಯದಲ್ಲಿ ಪ್ರಸನ್ನನಾಗಿ ಅನುಗ್ರಹಿಸುವನು. ಹಾಗೆ ಆತನನ್ನು ವಶಮಾಡಿಕೊಳ್ಳಬೇಕಾದರೆ **ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ** ಎಂಬ ಪ್ರಮಾಣಾನುಸಾರವಾಗಿ ಸ್ವಾಮಿಯ ಪಾದದಕಡೆ ಕೂತು ಪಾದವನ್ನಾಶ್ರಯಿಸಿ, ಯುದ್ಧ ಮಾಡದಿದ್ದರೂ ತಮ್ಮ ಕಡೆ ಇರಬೇಕೆಂದು ಪ್ರಾರ್ಥಿಸಿ ಕರೆತಂದ ಪ್ರಾಜ್ಞನು ಅರ್ಜುನನು ಅದೂ ಅಲ್ಲದೆ ಈ ಉಪದೇಶಾದಿಯಲ್ಲೇ **ಶಾಧಿಮಾಂ ತ್ವಾಂ ಪ್ರಪನ್ನಂ** ಎಂದು ಶರಣಾಗತನಾದವನು. ಪುನಃ ಅಪರಾಧ ಕ್ಷಾಪಣಕ್ಕಾಗಿ ಹನ್ನೊಂದನೆಯ ಅಧ್ಯಾಯದಲ್ಲಿ ಶರಣಾಗತನಾದವನು. ಪುನಃ ಪ್ರಾಪ್ಯರೂಪಪ್ರದರ್ಶನಕ್ಕಾಗಿ ಶರಣಾಗತನಾದವನು ಹೀಗೆ ಆಶ್ರಯಿಸಿದುದರಿಂದ ಶ್ರೀಕೃಷ್ಣಾನುಗ್ರಹವು ಯಾವ ಕಡೆಯುಂಟೋ ಆ ಕಡೆಗೇನೆ "**ಶ್ರೀ ವಿಜಯೋಭೂತಿ ರ್ಧ್ರುವಾನೀತಿಃ**"ಎಂದು ಹೇಳಲ್ಪಟ್ಟಿತು.ಆದುದರಿಂದಲೇ ಪಾಂಡವರು "**ಕೃಷ್ಣಾಶ್ರಯಾಃ ಕೃಷ್ಣಬಲಾಃ ಕೃಷ್ಣನಾಥಾಶ್ಚ ಪಾಂಡವಾಃ । ಕೃಷ್ಣಃ ಪರಾಯಣಂ ತೇಷಾಂ**" ಎಂದು ಕೊಂಡಾಡಲ್ಪಟ್ಟಿರುತ್ತಾರೆ. (ಭಾರ. ದ್ರೋ. ೧೮೩-೨೪) ಶ್ರೀ ಪರಾಶರರು "**ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಮ್**" ಎಂದರೆ ಆ ಪರಮಪುರುಷನು ಪ್ರಸನ್ನನಾದರೆ ಯಾವದು ತಾನೇ ಲಭ್ಯವಲ್ಲವು? ಚತುರ್ವಿಧ ಪುರುಷಾರ್ಥಗಳೂ ಲಭಿಸುವುವು. ಹೀಗೆ ಸಂಜಯರು ಈ ಶ್ಲೋಕದ ಮೂಲಕ ಹೇಳಿರುವದರಲ್ಲಿ ಆಶಯವೇನು? ಆತನ ಪುತ್ರರ ವಿನಾಶ ಉಂಟಾಗುವದೆಂದು ದುಃಖಿಸಲಿ, ಆತನಿಗೆ ವಿಷಾದ ಉಂಟಾಗಲಿ ಎಂಬ ಭಾವದಿಂದಲೇ "**ಸತ್ಯಂಬ್ರೂಯಾತ್ಪ್ರಿಯಂಬ್ರೂಯಾತ್ ನ ಬ್ರೂಯಾತ್ಸತ್ಯ ಮಪ್ರಿಯಮ್**" ಸತ್ಯವಾದರೂ ಅಪ್ರಿಯವಾದುದನ್ನು ಹೇಳಬಾರದು ಧರ್ಮೋಪದೇಶಕ್ಕೆ ವಿರುದ್ಧವಾಗಿ ಶ್ರೀ ಸಂಜಯರು ನಿನ್ನ ಮಕ್ಕಳಿಗೆ ಅಪಜಯವೇ ಎಂದು ಹೇಳ ಬಹುದೇ? ಎಂದರೆ ಪರಮಭಾಗವತರಾದ ಸಂಜಯರಿಗೆ ಅಂತಹ ಅನರ್ಥವನ್ನುಂಟುಮಾಡ ಬೇಕೆಂಬ ಬುದ್ಧಿಯು ಎಂದಿಗೂ ಇಲ್ಲವು. ಪರಮಹಿತವನ್ನು ಬೋಧಿಸುವದಕ್ಕಾಗಿ ತುಂಬಾ ಕನಿಕರದಿಂದ ಹೇಳಿದ ಮಾತಾಗಿರುತ್ತದೆ. ಈಗಲಾದರೂ ಶ್ರೀಕೃಷ್ಣನನ್ನಾಶ್ರಯಿಸಿ ಆತನಲ್ಲಿ ಶರಣಾಗತಿಯನ್ನು ಮಾಡುವಹಾಗೆ ತನ್ನ ಮಕ್ಕಳಾದ ದುರ್ಯೋಧನಾದಿಗಳಿಗೆ ವಿಶೇಷವಾಗಿ ಬೋಧಿಸಿ ಯುದ್ಧದಿಂದ ನಿವೃತ್ತರಾಗಿ ಸಮಸ್ತ ಮಂಗಳವನ್ನು ಹೊಂದಲಿ ಎಂಬ ಉದಾರ ಭಾವದಿಂದ ಹೇಳಿದ ಮಾತು ಎಂದು ಭಾವಿಸತಕ್ಕದ್ದು. ಆದರೆ ದುಷ್ಕೃತಿಗಳ ಪರಿಪಾಕದಿಂದ ಕಾಲಚೋದಿತನಾದ ದುರ್ಯೋಧನನು, ರಾವಣನ ಹಾಗೆ ಯಾರು ಯಾರು ಎಷ್ಟೆಷ್ಟು ವಿವೇಕವನ್ನು ಹೇಳಿದರೂ ಪರಿಗಣಿಸದೆ ನಷ್ಟನಾದನು; "**ದ್ವಾವಿಮೌ ಪುರುಷೌ ಮೂಢೌ ದುರ್ಯೋಧನದಶಾನನೌ**" ಎಂದು ಹೇಳಿರುವ ಹಾಗೆ ಹಿತೈಷಿಗಳ ವಾಕ್ಯಕ್ಕೆ ಮನಸ್ಸನ್ನು ಕೊಡದೆ, ಸುಲಭರಾಗಿ ಅವತಾರ ಪುರುಷರು ಎದುರಿಗಿದ್ದರೂ ಅಂತಹ ಪರಮಪುರುಷನನ್ನಾಶ್ರಯಿಸದೆ ಕೆಟ್ಟುಹೋದವರು ಇಬ್ಬರು; ದುರ್ಯೋಧನ ರಾವಣರು ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿ ಸಂಜಯರ ಹಿತೋಪದೇಶದಹಾಗೆ ರಾವಣನಿಗೇನೆ ಸಾಕ್ಷಾತ್ತಾಗಿ ಮಹಾ ಪ್ರಾಜ್ಞರಾದ ಸೀತಾ ವಿಭೀಷಣಾಂಜನೇಯರುಗಳ ಉಪದೇಶವು ಸೀತೆಯು "**ವಿದಿತಸ್ಸ ಹಿ ಧರ್ಮಜ್ಞ ಶ್ಶರಣಾಗತ ವತ್ಸಲಃ**" ಎಂದಾರಂಭಿಸಿ (ರಾ. ಸುಂ ೨೧-೨೧.) ಹೇಳುತ್ತಾಳೆ ಆಂಜನೇಯನು "**ಪರ ದಾರಾನ್ ಮಹಾ ಪ್ರಾಜ್ಞ ನೋ ಪರೋದ್ಧುಂ ತ್ವ ಮರ್ಹಸಿ**" "**ನರದೇವಾಯು**

**ಜಾನಕೀಂ ಪ್ರತಿದೀಯತಾಂ** " ಎಂದು ಬುದ್ಧಿವಾದವನ್ನು ಹೇಳಿದನು. ವಿಭೀಷಣನು **"ಸೀತಾಂ ಚ ರಾಮಾಯ ನಿವೇದ್ಯ ದೇವೀಂ । ವಸೇಮ ವೀತ ಶೋಕಾಃ"** ಎಂದು ವಿವೇಕವನ್ನು ಬೋಧಿಸಿದನು ಎಲ್ಲವೂ ವ್ಯರ್ಥವಾಯಿತು- ಹಾಗೆಯೇ ದುಷ್ಕರ್ಮವಾಸನಾ ದೂಷಿತ ಮತಿಯುಳ್ಳವರಿಗೆ ಹಿತೈಷಿಗಳ ಉಪದೇಶವು ರುಚಿಸದು. ಆದ್ದರಿಂದ ಈ ಸಂಜಯ ವಾಕ್ಯದಿಂದ ಧೃತರಾಷ್ಟ್ರನು ಜಾಗರೂಕನಾಗಿ ನಿಂತು ತನ್ನ ಮಕ್ಕಳನ್ನು ಯುದ್ಧದಿಂದ ಹಿಂತಿರುಗಿ ಸಲಿಲ್ಲವು. ಆದುದರಿಂದಲೇ ಆತನು " **ಸರ್ವಾತ್ಮನಾ ಅಂಧ** "ನೆಂದು ಹೇಳಲ್ಪಟ್ಟಿತು. ಇಲ್ಲಿ **ಶ್ರೀಃ** ಎಂಬುದರಿಂದ ಮೋಕ್ಷಲಕ್ಷ್ಮಿಯು ಹೇಳಲ್ಪಟ್ಟಿತೆಂದು ಭಾವಿಸಬಹುದು ಅಥವಾ ಐಹಿಕ ಸರ್ವ ಭೋಗಸಮೃದ್ಧಿ ಎಂಬರ್ಥವು **ವಿಜಯಃ** - ಯುದ್ಧದಲ್ಲೂ ಮತ್ತು ಸರ್ವ ವ್ಯಾಪಾರದಲ್ಲೂ ವಿಜಯವೂ ಸಿದ್ಧಿಯೂಭೂತಿ ಶಬ್ದವು ಐಶ್ವರ್ಯವನ್ನೇ ಬೋಧಿಸುತ್ತದೆ ಇದರಿಂದ ಅನುಕೂಲ ವಿಭೂತಿ ಪ್ರಾಪ್ತಿಯು ಹೇಳಲ್ಪಟ್ಟಿತೆಂದು ಭಾವಿಸಬಹುದು. **"ವಿಭೂತಿರ್ಭೂತಿರೈಶ್ವರ್ಯಂ"** ಎಂದು ನಿಘಂಟು ಇದೆ, **ನೀತಿಃ** – ಧರ್ಮವು ಶ್ರೇಯಸ್ಸಾಧನಭೂತ ಪ್ರವೃತ್ತಿಯು ; ಹೀಗೆ ಚತುರ್ವಿಧ ಪುರುಷಾರ್ಥಗಳ ಪ್ರಾಪ್ತಿಯೂ ಹೇಳಲ್ಪಟ್ಟವೆಂದು ಭಾವಿಸಬಹುದು. ಸರ್ವೇಶ್ವರ ನನ್ನು ಶರಣಾಗತಿಯ ಮೂಲಕ ಆಶ್ರಯಿಸಿದವನಿಗೇನೇ ಈ ಚತುರ್ವಿಧ ಪುರುಷಾರ್ಥ ಪ್ರಾಪ್ತಿಯು ಎಂಬ ಅಮೋಘಾರ್ಥವು **ಯತ್ರಯೋಗೇಶ್ವರಃ ಕೃಷ್ಣಃ** ಎಂಬುದರಿಂದ ಬೋಧಿ ತವು. ಇಲ್ಲಿ ಯೋಗಶಬ್ದದಿಂದ ಕಲ್ಯಾಣಗುಣಯೋಗ ವಿಭೂತಿದ್ವಯ ಯೋಗಾದಿಗಳು ಹೇಳ ಲ್ಪಟ್ಟವು. ಅದನ್ನು ಮುಖ್ಯವಾಗಿ ತಿಳಿಸುವದಕ್ಕಾಗಿಯೇ **"ಸರ್ವಧರ್ಮಾನ್ ಪರಿತ್ಯಜ್ಯ"** ಎಂಬಲ್ಲಿ ಶರಣಾಗತಿಯು ಉಪದೇಶಾಂತ್ಯದಲ್ಲಿ ಹೇಳಲ್ಪಟ್ಟಿತು. ಇದು ಭಗವದುಪಾಸನ ಭರನ್ಯಾಸಗಳಾದ ಎರಡುವಿಧ ಉಪಾಯಗಳಿಗೂ ಆವಶ್ಯಕವು ನಮ್ಮ ಕಡೆ ಯೋಗೇಶ್ವರನಾದ ಕೃಷ್ಣನಿದ್ದು ಆತನ ಅನುಗ್ರಹವಿರಬೇಕಾದರೆ ಆತನನ್ನು ಶರಣಹೊಂದತಕ್ಕದ್ದಾವಶ್ಯಕವೆಂಬ ಭಾವವನ್ನು **ಯತ್ರಯೋಗೇಶ್ವರಃ ಕೃಷ್ಣಃ** ಎಂಬ ಪ್ರಯೋಗವು ಸೂಚಿಸುತ್ತದ **ಯತ್ರ ಪಾರ್ಥೋಧನುರ್ಧರಃ** ಎಂಬುದರಿಂದ ತೋರುವುದೇನೆಂದರೆ, ಸುಮ್ಮನೆ ಆಶ್ರಯಿಸಿದುದೂ ಅಲ್ಲದೆ, ಆ ಪ್ರಾಪ್ತಿಗಳಿಗಾಗಿ ಇತಿಕರ್ತವ್ಯತೆಗಳುಂಟು - ಅವುಗಳೂ ಸಹ ಅನುಷ್ಠೇಯಗಳೆಂಬ ಧರ್ಮಸೂಕ್ಷ್ಮವನ್ನು ಆ ಪ್ರಯೋಗವು ಬೋಧಿಸುತ್ತದೆ; ಅರ್ಜುನನು ಸರ್ವೇಶ್ವರನಿಯಮನಾನು ಸಾರ ಧನುರ್ಧರನಾಗಿ ನಿಂತು ಯುದ್ಧಾದಿಕರ್ಮಗಳನ್ನು ಮಾಡದೇ ಇದ್ದರೆ, ಶ್ರೀ ವಿಜಯವೇ ಮುಂತಾದಿಗಳು ಯಾವುವು ಇಲ್ಲವು. ಇದರಿಂದ ನಾವು ಮುಖ್ಯವಾಗಿ ಗ್ರಹಿಸತಕ್ಕ ಭಾವವು ಈ ಶ್ಲೋಕದಲ್ಲಿ ಅಡಗಿದೆ ಎಂದು ತಿಳಿಯತಕ್ಕದ್ದು ಏನೆಂದರೆ–ಚತುರ್ವಿಧಪುರುಷಾರ್ಥಗಳ ಪ್ರಾಪ್ತಿಗೆ ಉಪಾಯವು ಆವಶ್ಯಕವು ಈ ಉಪಾಯವು ಎರಡು ತೆರನಾಗಿರುವದು ಸಿದ್ಧೋಪಾಯ ಸಾಧ್ಯೋ ಪಾಯವೆಂಬದಾಗಿ ಸಿದ್ಧೋಪಾಯನಾದರೋ " **ಕೃಷ್ಣಂ ಧರ್ಮಂ ಸನಾತನಂ** " ಎಂದೂ ಹಾಗೆ ಯೇ " **ಅಮೃತಸ್ಯೇಷಸೇತುಃ** " "**ಯಮೇವೈಷವೃಣುತೇತೇನಲಭ್ಯಃ**"ಎಂದು ಶ್ರುತಿಯಲ್ಲಿ ಪ್ರತಿಪಾದ್ಯನಾದ ಶ್ರೀ ಕೃಷ್ಣನೇ. ಸಾಧ್ಯೋಪಾಯಗಳಾದರೋ ಅಸಮರ್ಥರಾದ ತ್ರಿವರ್ಣ ದವರು ಮೊದಲಾಗಿ ಸರ್ವರಿಗೂ ಭರನ್ಯಾಸವು. ತ್ರಿವರ್ಣಸಮರ್ಥರಿಗೆ ಕರ್ಮಯೋಗಾಙ್ಗಕವಾದ ಭಕ್ತಿಯೋಗರೂಪ ಉಪಾಸನೆಯು. ಇಲ್ಲಿ **ಯತ್ರಯೋಗೇಶ್ವರಃ ಕೃಷ್ಣಃ** ಎಂಬುದರಿಂದ ಸಿದ್ಧೋಪಾಯನನ್ನಾಗಿ ಶ್ರೀ ಕೃಷ್ಣನನ್ನು ವರಿಸತಕ್ಕದ್ದು ಎಂಬುದು ಬೋಧಿತವು. **ಯತ್ರ ಪಾರ್ಥೋ ಧನುರ್ಧರಃ** ಎಂಬುದರಿಂದ ಕರ್ಮಯೋಗಾರಂಭವು ಹೇಳಿದುದರಿಂದ ಅದರಿಂದ ಅನುಗೃಹೀತವಾದ ಸಾಧ್ಯೋಪಾಯವು ಬೋಧಿತವು ಹೀಗೆ ಆತನನ್ನು ಸಿದ್ಧೋಪಾಯನನ್ನಾಗಿ ವರಿಸಿ, ಉಪಾಸನ ಅಥವಾ ಶರಣಾಗತಿಗಳಿಂದ ಆಶ್ರಯಿಸಿದರೆ, ಚತುರ್ವಿಧ ಪುರುಷಾರ್ಥಗಳೂ,

ಲಭಿಸುತ್ತವೆಂಬ ಗುಹ್ಯಾರ್ಥವು ಈ ಅಮೋಘವಾದ ಕೊನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ **ಯತ್ರಪಾರ್ಥೋಧನುರ್ಧರನಾದರೆ** ಎಂದರೆ ಮುಂದೆ ವ್ಯಕ್ತಪಡಿಸುವ ಹಾಗೆ "**ಪ್ರಣವೋ ಧನು ಶ್ಶರೋ ಹ್ಯಾತ್ಮಾ**" ಎಂಬ ಶ್ರುತಿಯಲ್ಲಿ ಹೇಳಿರುವ ಹಾಗೆ ಶರಣಾಗತಿಯನ್ನು ಅನುಷ್ಠಿಸುವದರಿಂದ, "**ಯತ್ರಯೋಗೇಶ್ವರಃ ಕೃಷ್ಣಃ**" ಯಾವನಲ್ಲಿ ಶ್ರೀ ಕೃಷ್ಣಾನುಗ್ರಹ ಉಂಟಾಗುತ್ತದೋ ಅವನಿಗೇ ಸರ್ವಶ್ರೇಯಸ್ಸುಗಳು ಎಂಬ ಭಾವವು. ಎರಡನೆಯ ಪಾದಕ್ಕೂ ಪ್ರಥಮ ಪಾದಕ್ಕೂ ಹೇತು ಹೇತುಮದ್ಭಾವವು. ಇದನ್ನೇ ಮಹರ್ಷಿಯು ಅಯೋಧ್ಯಾಕಾಂಡದಲ್ಲಿ "**ಯಶ್ಚ ರಾಮೋ ನ ಪಶ್ಯೇತ್ತು ಯಂ ಚ ರಾಮೋ ನ ಪಶ್ಯತಿ**" ಉಪಪಾದಿಸಲ್ಪಟ್ಟಿರುತ್ತದೆ. ಯಾವನು ತನಗೆ ಸರ್ವಶ್ರೇಯಸ್ಸನ್ನು ಅನುಗ್ರಹಿಸುವನೆಂದು ನೋಡುವದಿಲ್ಲವೋ ಎಂದರೆ ಶರಣಾಗತಿಯನ್ನನುಷ್ಠಿಸುವದಿಲ್ಲವೊ, ಅಂತವನನ್ನು "**ಯಂಚರಾಮೋನಪಶ್ಯತಿ**" ಆ ಕಾರಣ ದಿಂದ ಕೃಪಾಪೂರ್ವಕವಾಗಿ ನೋಡುವದಿಲ್ಲವೋ ಎಂಬರ್ಥವು. ಈ ಶಾಸ್ತ್ರಾರ್ಥವನ್ನು ಮುಂದಿನ ಶ್ಲೋಕದಿಂದ ಗ್ರಹಿಸಬಹುದು :-"**ಉಪಾಯ ಸ್ಸ್ವಪ್ರಾಪ್ತೇ ರುಪನಿಷದಧೀತ ಸ್ಸ ಭಗವಾನ್ ಪ್ರಪತ್ತ್ಯೈತಸ್ಯೋಕ್ತೇ ಪ್ರಪದನನಿಧಿಧ್ಯಾಸನಗ(ಸ)ತೀ**" ॥ ಉಪನಿಷತ್ತುಗಳಲ್ಲಿ ಹೇಳಿರುವದು ತನ್ನ ಪ್ರಾಪ್ತಿಗೆ ತಾನೇ ಸಿದ್ಧೋಪಾಯನು ; **ತಸ್ಯಪ್ರಸತ್ತ್ಯೈ**-ಅಂತಹ ಸಿದ್ಧೋಪಾಯನ ಪ್ರಸನ್ನತೆಯನ್ನು ಸಂಪಾದಿಸುವದಕ್ಕಾಗಿ ಎರಡು ಸಾಧ್ಯೋಪಾಯಗಳು ಶಾಸ್ತ್ರಗಳಲ್ಲಿ **ಉಕ್ತೇ**-ಹೇಳಲ್ಪಟ್ಟವು ; ಅವು ಯಾವುವೆಂದರೆ **ಪ್ರಪದನವು** ಒಂದು, **ನಿಧಿಧ್ಯಾಸನವೆಂದರೆ ಉಪಾಸನವು** ಒಂದು, ಹೀಗೆ ಎರಡು ಮಾರ್ಗಗಳು ಎಂಬುದು ಈ ಶ್ಲೋಕಾರ್ಥವು.

ಶ್ರೀ ಮದ್ಭಗವದ್ಗೀತೆಯ ಪ್ರಥಮ ಶ್ಲೋಕವಾದ ಧರ್ಮಕ್ಷೇತ್ರೇ ಕುರುಕ್ಷೇತ್ರೆ ಎಂಬ ಶ್ಲೋಕಕ್ಕೆ, ಧರ್ಮಕ್ಷೇತ್ರವೂ ಕುರುಕ್ಷೇತ್ರವೂ ಆದುದು ನಮ್ಮ ದೇಹವೇ, ಧರ್ಮಾನುಷ್ಠಾನಕ್ಕೆ ಯೋಗ್ಯವಾದ ಕ್ಷೇತ್ರವೆಂದೂ, ಪರಮಾತ್ಮ ಜೀವಾತ್ಮರುಗಳಿಗೆ ಆವಾಸವಾಗಿರುವದರಿಂದ ಪವಿತ್ರವಾದ ಕ್ಷೇತ್ರವೆಂದೂ, ಅಲ್ಲಿ **ಮಾಮಕಾಃ** ಎಂಬುದರಿಂದ ಅಹಂಕಾರ ಮಮಕಾರಾದಿ ಅರಿಷಡ್ವರ್ಗಗಳಿಗೂ **ಪಾಂಡವಾಃ** ಎಂಬುದರಿಂದ ಸತ್ವವೃದ್ಧಿಯಿಂದ ಬೆಳೆಗಿರುವ **ವಿವೇಕಾದಿ**ಗಳಿಗೂ ಯುದ್ಧವು ಕ್ಷೇತ್ರದಲ್ಲಿ ನಡೆಯುತ್ತದೆಂದೂ ಹೇಳಲ್ಪಟ್ಟು ಇವುಗಳಲ್ಲಿ ಯಾರಿಗೆ ಜಯವು ? ಎಂಬ ಪ್ರಶ್ನೆಗೆ ಈ ಶ್ಲೋಕವು ಉತ್ತರವಾಗುತ್ತದೆ. ಆಗ ಅರ್ಥ ಹೇಗೆಂದರೆ ;-**ಯತ್ರ ಯೋಗೇಶ್ವರಃ ಕೃಷ್ಣಃ** - ಯಾರ ಕಡೆಯಲ್ಲಿ ಶರಣಾಗತಿಯಿಂದ ಪ್ರೀತನಾದ ಪರಮ ಪುರುಷನು ನಿರತಿಶಯ ಯೋಗಕ್ಕೆ ಸ್ವಾಮಿಯಾಗಿರುವನೋ ಯಾರ ಕಡೆಯಲ್ಲಿ ಆಶ್ರಯಿಸಿದವನು **ಧನುರ್ಧರಃ** ಪರಮಾತ್ಮನೇ ತನಗೆ ಲಕ್ಷ್ಯವೆಂದು ಪ್ರಾಪ್ಯವೆಂದು ಭಾವಿಸಿ, ಪ್ರಣವವನ್ನೇ ಧನುಸ್ಸೆಂದೂ ತನ್ನ ಆತ್ಮವೇ ಶರವೆಂದೂ ಭಾವಿಸಿ, **ಓಮಿತ್ಯಾತ್ಮಾನಂ ಯುಞ್ಜೀತ** ಎಂದು ತೈತ್ತರೀಯದಲ್ಲಿ ಹೇಳಿರುವ ಹಾಗೆ ಗುರಿಯಿಟ್ಟು ಐಕಾನ್ತ್ಯ ಭಕ್ತಿಯಿಂದ ಶರವಾದ ಆತ್ಮಾವನ್ನು ಪರಮಾತ್ಮನ ಪಾದವೇ ಲಕ್ಷ್ಯವಾಗಿ ಪ್ರಯೋಗಿಸುವನೋ ಎಂದರೆ ಅಙ್ಗಶರಣಾಗತಿಯನ್ನಾಗಲಿ, ಅದಕ್ಕೆ ಶಕ್ತಿಯಿಲ್ಲದಿದ್ದರೆ ಅಙ್ಗಿಶರಣಾಗತಿಯನ್ನಾಗಲೀ "**ಸರ್ವ ಧರ್ಮಾನ್ ಪರಿತ್ಯಜ್ಯ**" ವೆಂಬ ಚರಮ ಶ್ಲೋಕದಲ್ಲಿ ಅನುಷ್ಠಿಸುವವನಿಗೆ ಕೌರವಸೇನೆಯು ನಾಶವಾದ ತೆರದಿ ಅಹಂಕಾರ ಮಮಕಾರ ಮುಂತಾದ ಅರಿಷಡ್ವರ್ಗಗಳೆಲ್ಲಾ ನಾಶವಾಗುತ್ತವೆ ; ಮತ್ತು ಪಾಂಡವರಿಗೆ ಜಯವಾಗುವ ತೆರದಿ ಸತ್ವವೃದ್ಧಿಯ ಮೂಲಕ ಪ್ರಾಪ್ತವಾದ ವಿವೇಕಾದಿಗಳಿಗೆ ಜಯವಾಗುವದರಿಂದ, ಪರಮ ಪುರುಷನು ಅದರಿಂದ ಪ್ರಸನ್ನನಾಗುವದರಿಂದ, **ತತ್ರ**-ಅಂತವನ ವಿಷಯದಲ್ಲೇ, **ಶ್ರೀಃ**-ಮೋಕ್ಷಲಕ್ಷ್ಮಿಯೂ, **ಅಥವಾ**

**ಶ್ರೀ ವೈಷ್ಣವಲಕ್ಷ್ಮಿಯಾದ** ಜ್ಞಾನ ಭಕ್ತಿ ವೈರಾಗ್ಯವೂ ಮತ್ತು ಅದರಿಂದುಂಟಾಗುವ **ಮೋಕ್ಷವೂ, "ಅಂತರಿಕ್ಷಗತಶ್ಶ್ರೀಮಾನ್" "ಸತುನಾಗವರ ಶ್ರೀಮಾನ್"** ಎಂಬಲ್ಲೂ ಸರ್ವವನ್ನೂ ತ್ಯಾಗಮಾಡಿ ಬಂದ ವಿಭೀಷಣನಿಗೂ, **ಮತ್ತು ಮೊಸಳೆಯ** ಬಾಯಿಗೆ ಸಿಕ್ಕಿ **ದೈನ್ಯದಿಂದಿ** ರುವ ಗಜೇಂದ್ರನಿಗೂ ಪ್ರಾಪ್ತವಾದ ಶ್ರೀ ಎಂಬ ಭಾವವು **ವಿಜಯಃ ಭೂತಿಃ ನೀತಿಃ**-ಐಹಿಕಾದಿ ಕಾಮಪೂರಣವೂ, ಅರ್ಥಾದಿ ಪ್ರಾಪ್ತಿಯೂ ಧರ್ಮಪ್ರಾಪ್ತಿಯೂ ಉಂಟಾಗುತ್ತವೆ; ಪ್ರಪನ್ನನು ಅಪೇಕ್ಷಿಸದೆ ಇದ್ದರೂ ಪರಮಪುರುಷನೇ ಕುಚೇಲರಿಗೆ ಕೊಟ್ಟತೆರದಿ ಕೊಡುವನು ಎಂಬ ಸ್ವಾರಸ್ಯಾರ್ಥವೂ ಸಹ ದ್ಯೋತಿತವು **ಯತ್ರ ಪಾರ್ಥೋ ಧನುರ್ಧರಃ** ಎಂಬುದು ಸಾಧ್ಯೋಪಾಯವಾದ ಆತ್ಮಸಮರ್ಪಣವನ್ನು ಬೋಧಿಸುತ್ತದೆಂದು ಹೀಗೆ ಅರ್ಥಮಾಡಲು ಪ್ರಮಾಣ ಉಂಟೋ? ಎಂದರೆ **"ಪ್ರಣವೋ ಧನುಶ್ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್"** ಎಂಬ ಶ್ರುತ್ಯರ್ಥವೇ ಈ ಅಭಿಪ್ರಾಯಕ್ಕೆ ಆಧಾರವು. (ಮುಂಡಕ. ೨. ೪) ಪ್ರಣವವನ್ನು ಉಚ್ಚರಿಸುತ್ತಾ ಈ ಪ್ರತ್ಯಗಾತ್ಮವನ್ನು ಪರಮಾತ್ಮನ ಪಾದಾರವಿಂದದಲ್ಲಿ ಸಮರ್ಪಿಸತಕ್ಕದ್ದಾದುದರಿಂದ ಓಂ ಎಂಬ ಪ್ರಣವವೇ ಧನುಸ್ಸು, ಆತ್ಮಾವೇ ಶರವು ಬಾಣವು, ಈ ಬಾಣಕ್ಕೆ ಲಕ್ಷ್ಯವು ಯಾವುದು ಎಂದರೆ ಪರಬ್ರಹ್ಮವು ಎಂದು ರೂಪಕ ಮಾಡಿ ಹೇಳಿ, **ಅಪ್ರಮತ್ತೇನ**-ಐಹಿಕಗಳಲ್ಲಿ ಆಶೆಯುಡದೆ ಭ್ರಮಜ್ಞಾನಾದಿಗಳನ್ನೂ ತ್ಯಾಗಮಾಡಿ, **ವೇದ್ಧವ್ಯಂ** ಗುರಿ ಇಡುವವನು ಹೇಗೆ ಆಕಡೆ ಈಕಡೆ ನೋಡದೆ ಲಕ್ಷ್ಯವನ್ನೇ ನೋಡುವನೋ ಹಾಗೆ ಐಕಾಂತ್ಯದಿಂದ ಧ್ಯಾನಿಸತಕ್ಕದ್ದು, ಹೀಗೆ ಮಾಡಿದರೆ **ಶರವತ್**-ಬಾಣವುಹೋಗಿ ಲಕ್ಷ್ಯದಲ್ಲಿ ಹೇಗೆ ಏಕೀಭವಿಸುತ್ತದೋ, ಹಾಗೆಯೇ ಈ ಆತ್ಮನು ಜ್ಞಾನಸ್ವರೂಪ ಜ್ಞಾನಗುಣಕನಾಗಿ ದೇವ ಮನುಷ್ಯದೇಹಗಳಿಗೆ ಕಾರಣಭೂತವಾದ ಪ್ರಕೃತಿಯಿಂದ ಬಿಡುಗಡೆಯನ್ನು ಹೊಂದಿ, **ತನ್ಮಯೋ ಭವೇತ್**-**"ಮಮ ಸಾಧರ್ಮ್ಯಮಾಗತಾಃ"** ಎಂಬಲ್ಲೂ, **ಪರಮಂ ಸಾಮ್ಯಮುಪೈತಿ** ಎಂಬಲ್ಲೂ ಹೇಳಿರುವಹಾಗೆ ಪರಮಾತ್ಮನ ಹಾಗೆ ಆಗುವನು ಸ್ವರೂಪೈಕ್ಯವನ್ನು ಹೊಂದುವನು ಎಂಬರ್ಥವಲ್ಲವು; ಏಕೆಂದರೆ ಲಕ್ಷ್ಯವೇ ಬೇರೆ ಶರವೇ ಬೇರೆ ಹೇಗೋ, ಹಾಗೆ ಪರಮಾತ್ಮಾ ಪ್ರತ್ಯಗಾತ್ಮಾವೂ, **"ಪೃಥಗಾತ್ಮಾನಂ ಪ್ರೇರಿತಾರಂಚಮತ್ವಾ"** ಎಂಬಲ್ಲಿ ಹೇಳಿರುವಹಾಗೆ ಬೇರೆಬೇರೆಯೇ. ಹೇಗೆ ಐಕ್ಯವೆಂದರೆ **"ರಾಮ ಸುಗ್ರೀವಯೋರೈಕ್ಯಂ ದೇವ್ಯೇಯಂ ಸಮಜಾಯತ"** (ರಾಮಾ. ಸುಂದ ) ಮಹರ್ಷಿಯು ಮಹಾಪ್ರಾಜ್ಞನಾದ ಆಂಜನೇಯನ ದಿವ್ಯ ಸೂಕ್ತಿಯಲ್ಲಿ ಉಪಪಾದಿಸಿರುವ ಹಾಗೆ **ತನ್ಮಯತ್ವವು.** ಪರಮ ಮೈತ್ರಿಯಿಂದಲೂ ಸಾಧರ್ಮ್ಯದಿಂದಲೂ ತನ್ಮಯತ್ವವು. ಅರ್ಜುನನು **ಇಂತಹ** ಆತ್ಮಸಮರ್ಪಣರೂಪವಿದ್ಯೆಯನ್ನು ಗೀತಾಚರಮ ಶ್ಲೋಕದಿಂದ ಗ್ರಹಿಸಿದನಾದುದರಿಂದ **ಯತ್ರ ಪಾರ್ಥೋ ಧನುರ್ಧರಃ** ಎಂದು ಹೇಳಿರುವುದರಿಂದ **ಗಾಂಡೀವಧರನೆಂದು** ಇಷ್ಟುಮಾತ್ರವನ್ನೇ ಜ್ಞಾನಾಗ್ರೇಸರರಲ್ಲಿ ಅಗ್ರಗಣ್ಯರಾದ ವ್ಯಾಸಮಹರ್ಷಿಯು ತಿಳಿಸಲಿಲ್ಲವು. ಗಾಂಡೀವವು ತುಚ್ಛವಾದ ಧನುಸ್ಸು. ಈ ಭಾವವನ್ನು ಅರ್ಜುನನು ಶ್ರೀಕೃಷ್ಣನ ಅವತಾರ ಸಮಾಪ್ತ್ಯನಂತರ ತಾನೇ ತಿಳಿಯುವನು. ಶಾಶ್ವತವಾದ ಧನುಸ್ಸಾದರೋ ಮೂಲಮಂತ್ರದ ಪ್ರಣವಾಕ್ಷರವು; ಇದರ ಮಾಹಾತ್ಮ್ಯೆಯಿಂದ ಪರಮ ಪುರುಷನಿಗೇನೇ ತಾನು ಶೇಷಭೂತನೆಂದು ತಿಳಿದು, ತನ್ನ ಆತ್ಮಾವನ್ನು ಪರಮಾತ್ಮನಲ್ಲಿ ಕರಣ ಮಂತ್ರನಾದ ದ್ವಯದಿಂದ ಸಮರ್ಪಿಸಿ, ಈ ಅರ್ಥವನ್ನಲ್ಲವೇ ಗೀತಾಚರಮ ಶ್ಲೋಕವು ಉಪಪಾದಿಸುತ್ತದೆಂದು ತಿಳಿದ ಪ್ರಾಜ್ಞನು. ಈ ಕ್ಷತ್ರಿಯನಾದ ಧನುರ್ಧರನಿಗಿಂತ ಶ್ರೇಷ್ಠನಾದ **ಮಹೇಷ್ವಾಸನು** ಎಂಬ **ಅಮೋಘಾರ್ಥವೂ**

**ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಪರಮಹಂಸ್ಯಾಂ ಶ್ರೀ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಪರಬ್ರಹ್ಮ ವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಸಕಲ ಶಾಸ್ತ್ರಾರ್ಥಕಥನ ಮೋಕ್ಷೋಪದೇಶ ಯೋಗೋನಾಮ ಅಷ್ಟಾದಶೋಽಧ್ಯಾಯಃ**

**ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ**

---

ಸಹ ಇಲ್ಲಿ ಸೂಚಿತವು. ಈ ಅಭಿಪ್ರಾಯವನ್ನು ಗೂಢಾರ್ಥವಾಗಿ ವಾಲ್ಮೀಕಿ ಮಹರ್ಷಿಯು ಅಯೋಧ್ಯಾಕಾಂಡದ ೯೭—೨ ನೆಯ ಶ್ಲೋಕದಲ್ಲಿ ಪ್ರದರ್ಶಿಸಿರುತ್ತಾರೆ. **“ ಕಿಮತ್ರಧನುಷಾ ಕಾರ್ಯ ಮಸಿನಾ ವಾ ಸಚರ್ಮಣಾ । ಮಹೇಷ್ವಾಸೇ ಮಹಾಪ್ರಾಜ್ಞೇ ಭರತೇ ಸ್ವಯಮಾಗ ತೇ ”** ಎಂಬುದು ಶ್ಲೋಕವು. ಪ್ರಕರಣವೇನೆಂದರೆ ಭ್ರಾತಾ ವನಂಗತನಾಗಿ ಪಿತಾ ದಿವಂಗತ ನಾದುದರಿಂದ ಪರಮ ದುಃಖಿತನಾದ ಭಕ್ತಿ ಭಾಕ್ಕುಗಳಲ್ಲಿ ಅಗ್ರೇಸರನಾದ ಭರತನು ಶ್ರೀ ರಾಮನಲ್ಲಿ ಶರಣಾಗತಿಯನ್ನು ಮಾಡಿ ಸಸೈನ್ಯ ಮಂತ್ರಿ ಪುರಜನ ಕೋಶವನ್ನೆಲ್ಲಾ ಆತನ ಪಾದದಲ್ಲಿ ಸಮರ್ಪಿಸಿ ಹಿಂತಿರುಗಿ ಬಂದು ಪಟ್ಟಾಭಿಷಿಕ್ತನಾಗೆಂದು ಪ್ರಾರ್ಥಿಸಲು ಬರಲು ; ಅದನ್ನು ಕಂಡು ಲಕ್ಷ್ಮಣನು ಆತನಲ್ಲಿ ದ್ವೇಷಬುದ್ಧಿಯನ್ನು ಆರೋಪಿಸಿ, ಆತನನ್ನು ವಧಿಸಲು ಶ್ರೀ ರಾಮನ ಅನುಜ್ಞೆಯನ್ನು ಪ್ರಾರ್ಥಿಸುವ ಸಂದರ್ಭದಲ್ಲಿ, ಲಕ್ಷ್ಮಣನನ್ನು ನಿರಾಕರಿಸಿ ಹೇಳುವ ಶ್ರೀರಾಮಚಂದ್ರನ ಅಮೋಘೋಕ್ತಿಯು ಸರ್ವಜ್ಞರಾದುದರಿಂದ ಭರತರು ಬಂದಿ ರುವದು ತನ್ನಲ್ಲಿ ಶರಣಾಗತಿಯನ್ನು ಅನುಷ್ಠಿಸುವದಕ್ಕಾಗಿ ಎಂದು ತಿಳಿದವರಾಗಿ ಹೇಳುತ್ತಾರೆ. ಓ ಲಕ್ಷ್ಮಣನೇ ಭಕ್ತಾಗ್ರೇಸರನಾದ ಭರತನು ನಮಗೆ ತೊಂದರೆಯನ್ನು ಮಾಡುವನಲ್ಲವು ; ಆತನಿಗೆ ರಾಜ್ಯವು ಬೇಕಿಲ್ಲವು, ನಿನಗೆ ರಾಜ್ಯ ಬೇಕಾದರೆ ಕೇಳು, ಆತನಿಗೆ ಹೇಳಿ ಕೊಡಿಸು ವೆನು ಎಂದು ಹೇಳಲು ತೊಡಗಿ, ಭರತನ ವಿಷಯದಲ್ಲಿ ನಿನ್ನ ಬಾಣವಾಗಲಿ ಕತ್ತಿಯಾಗಲಿ ಕಾರ್ಯಕಾರಿಯಾಗುವದಿಲ್ಲವು ; ಏಕೆಂದರೆ ಭರತನು **ಮಹೇಷ್ವಾಸನು ಮಹಾಪ್ರಾಜ್ಞನು** ಎಂದು ಶ್ಲಾಘಿಸಿರುತ್ತಾರೆ. ಆತನ ಬಾಣವು ಮಹತ್ತಾದುದು ; ಪ್ರಣವಧನುಸ್ಸಿನಲ್ಲಿ ತನ್ನ ಆತ್ಮಾವೆಂಬ ಶರವನ್ನು ಹೂಡಿ, ಅದನ್ನು ನನ್ನಲ್ಲಿ ಪ್ರಯೋಗಿಸಿ, ನನ್ನಲ್ಲಿ ಆತ್ಮಸಮರ್ಪಣೆಯನ್ನು ಮಾಡುವದಕ್ಕಾಗಿ ಬಂದವನು ; ನಿನ್ನ ಬಾಣವು ಆತನ ಮೇಲೆ ಯಾವ ಕೆಲಸವನ್ನೂ ಮಾಡಲಾರದು ಏತಕ್ಕೆಂದರೆ ಆತನು ಮಹಾಪ್ರಾಜ್ಞನು ; ಭರತನು ಹೀಗೀಗ ಮಹೇಷ್ವಾಸ ನೆಂದು ಹೇಳಲ್ಪಟ್ಟಿತು ಅಥವಾ, **ಯತ್ರಪಾರ್ಥೋಧನುರ್ಧರಃ** ಎಂಬುದಕ್ಕೆ ಇನ್ನೊಂದು ವಿಧವಾಗಿಯೂ ಅರ್ಥಹೇಳಬಹುದು :— ಹತ್ತು ಇಂದ್ರಿಯಗಳನ್ನೇ ಮುಖಗಳಾಗಿವುಳ್ಳ ಘೋರ ರಾವಣನಾದ ಮನಸ್ಸೆಂಬ ಶತ್ರುವನ್ನೂ, ಬುದ್ಧಿಎಂಬ ಧನುಸ್ಸಿನಲ್ಲಿ ವಿವೇಕವೆಂಬ ಬಾಣ ಸಮೂಹದಿಂದ ಶಾಂತ ಶತ್ರುನಾಗಿ ಯಾವನು ಮಾಡಿಕೊಳ್ಳುವನೋ ಅವನಿಗೇ ಮೋಕ್ಷಶ್ರೀ ಮುಂತಾದ್ದೆಂದಾಗಲೀ ಅರ್ಥಮಾಡಬಹುದು, ಇದಕ್ಕೆ ಸಾತ್ವತದ ಶೌನಕ ವಾಕ್ಯವನ್ನಾಧಾರ ವಾಗಿ ಭಾವಿಸಬಹುದು. **“ ದಶೇನ್ದ್ರಿಯಾನನಂ ಘೋರಂ ಯೋಮನೋರಜನೀಚ ರಮ್ । ವಿವೇಕ ಶರಜಾಲೇನ ಶಮಂ ನಯತಿ ಯೋಗಿನಾಮ್ ॥ ”** ಹೀಗೆ ವ್ಯಂಗ್ಯಾರ್ಥ ಗಳನ್ನಿಟ್ಟೇ ಬರೆಯುವದರಿಂದಲೇ ವಾಲ್ಮೀಕಿ, ಶ್ರೀ ವ್ಯಾಸಾದಿಗಳು ಮಹಾಕವಿಗಳೆಂದು ಹೇಳಿಸಿ ಕೊಳ್ಳುವರು ; ಅವರ ಗ್ರಂಥಗಳು ಮಹಾಕಾವ್ಯಗಳು ॥ ೭೮ ॥

**ಭಾ. ಯತ್ರಯೋಗೇಶ್ವರಃ–ಕೃತ್ಸ್ನಸ್ಯೋಚ್ಚಾವಚರೂಪೇಣಾ ವಸ್ಥಿತಸ್ಯ ವಸ್ತುನಃ ಯೇಯೇ ಸ್ವಭಾವಯೋಗಾಃ, ತೇಷಾಂ ಸರ್ವೇಷಾಂ ಯೋಗಾನಾಮೀಶ್ವರಃ ಸ್ವಸಙ್ಕಲ್ಪಾಯತ್ತ ಸ್ವೇತರ ಸಮಸ್ತ ವಸ್ತುಸ್ವರೂಪ ಸ್ಥಿತಿ ಪ್ರವೃತ್ತಿ ಭೇದಃ, ಕೃಷ್ಣಃ–ವಸುದೇವಸೂನುಃ ಯತ್ರ ಚ ಪಾರ್ಥೋ ಧನುರ್ಧರಃ–ತತ್ಪಿತೃಷ್ವಸುಃ**

---

**ಭಾಷ್ಯಾರ್ಥವು:**—ದುರ್ಯೋಧನನಿಗೇನಾದರೂ ಜಯವುಂಟೋ ಎಂದು ತಿಳಿಯುವ ಆಶೆಯಿಂದ ಧೃತರಾಷ್ಟ್ರನು ಸಂಜಯರನ್ನು ಕುರಿತು ಕೇಳಿದ್ದಕ್ಕೆ ಸಾಕ್ಷಾತ್ತಾಗಿ ನಿಮ್ಮ ಮಕ್ಕಳಿಗೆ ಜಯವು ಸಾಧ್ಯವಿಲ್ಲವು, ಪಾಂಡವರಿಗೇನೇ ಜಯವುಂಟಾಗಬಹುದೆಂದು ತಿಳಿಸಲು ಇಷ್ಟವಿಲ್ಲದೆ ಶ್ರೀ ಕೃಷ್ಣಾರ್ಜುನರಿಗೆ ನಡೆದ ಸಂವಾದವನ್ನೆಲ್ಲಾ ತಿಳಿಸಿದರು ವಿಶ್ವರೂಪದರ್ಶನ ಸಂದರ್ಭದಲ್ಲಿ ನಡೆದ ಉಕ್ತಿಪ್ರತ್ಯುಕ್ತಿಗಳಿಂದ ಗ್ರಹಿಸಿರಬಹುದೆಂದು ಊಹಿಸಿದರು ಕೊನೆಗೆ ಆ ಸಂವಾದದ ಮತ್ತು ವಿಶ್ವರೂಪದ ಅದ್ಭುತವನ್ನು ಉಪಪಾದಿಸಿದರು. ಅಷ್ಟುಮಾತ್ರವೇ ಅಲ್ಲದೆ, ಅರ್ಜುನನು ಪ್ರಾಪ್ಯವಾದ ದಿವ್ಯ ವೈಕುಂಠರೂಪವನ್ನು ತೋರಿಸು ಎಂದು ಪ್ರಾರ್ಥಿಸಲು ; ಆಶ್ರಿತವತ್ಸಲನು ಆ ರೂಪವನ್ನು ಸಹ ತೋರಿಸಿದನು ; ಆದುದರಿಂದ ಪಾಂಡವರಲ್ಲಿ ಶ್ರೀಕೃಷ್ಣ ಭಗವಾನರವರಿಗೆ ಪರಮಾನುಗ್ರಹವು ಎಂದು ಹೇಳಿದುದರಿಂದ ಧೃತರಾಷ್ಟ್ರನು ತನ್ನ ಮಕ್ಕಳಿಗೆ ಜಯವಿಲ್ಲವು ಎಂಬುದನ್ನು ಚನ್ನಾಗಿತಿಳಿದು ಈಗಲಾದರೂ ದುರ್ಯೋಧನನಿಗೆ ಬುದ್ಧಿಹೇಳಿ ಬದುಕಲಿ ಎಂಬ ಭಾವದಿಂದ ಈ ಕೊನೆಯ ಶ್ಲೋಕವನ್ನು ಸಂಜಯರು ದಯಪಾಲಿಸಿರುತ್ತಾರೆ. ಇದು ಅರ್ಜುನನಿಗೆ ಮಾತ್ರವೇ ಮಾಡಿದ ಕರುಣಾನಿಧಿಯ ಉಪದೇಶವಲ್ಲವು. ಯಾರು, ಆತನಿಗೆ ಶರಣಾಗತರಾಗಿ, ಅರ್ಜುನನು ಪ್ರಾರ್ಥಿಸಿದ ತೆರದಿ, ಸಿದ್ಧೋಪಾಯನಾಗಿ ಬಂದು ನಮಗೆ ಸರ್ವ ಶ್ರೇಯಸ್ಸನ್ನೂ ಉಂಟುಮಾಡು ಎಂಬ ಯಾಚ್ಞಾ ಇದ್ದುದಾದರೆ, ಅವರಿಗೇ ತಾನು ಪ್ರಸನ್ನನಾಗಿ ಸರ್ವ ಶ್ರೇಯಸ್ಸನ್ನೂ ತಾನು ಉಂಟುಮಾಡುವನೆಂಬುದರಲ್ಲಿ ಸಂದೇಹವಿಲ್ಲವೆಂದು ಬ್ರಹ್ಮವಿತ್ತಾದ ಸಂಜಯರ ಉಪದೇಶವಾಗಿರುತ್ತದೆ. ಧೃತರಾಷ್ಟ್ರನು "**ಸರ್ವಾತ್ಮನಾ**" ಅಂಥನಾದ ಪ್ರಯುಕ್ತ ಇದನ್ನು ಗ್ರಹಿಸದೆ ಹೋದುದರಿಂದ ಈ ಶ್ಲೋಕದಲ್ಲಿ ಆತನ ಪ್ರಶ್ನೆಗೆ ಸಾಕ್ಷಾತ್ತಾದ ಉತ್ತರವನ್ನು ಹೇಳುತ್ತಾರೆ—**ಯತ್ರ**-ಯಾವ ಕಡೆಯಲ್ಲಿ, **ಯೋಗೇಶ್ವರಃ** ಎಂಬುದಕ್ಕೆ **ಕೃತ್ಸ್ನಸ್ಯೋಚ್ಚಾವಚರೂಪೇಣಾವ ಸ್ಥಿತಸ್ಯ ಚೇತನಸ್ಯಾ ಚೇತನಸ್ಯ ಚ ವಸ್ತುನಃ ಯೇ ಯೇ ಸ್ವಭಾವಯೋಗಾಃ, ತೇಷಾಂಸರ್ವೇಷಾಂ ಯೋಗಾನಾಮೀಶ್ವರಃ** ಎಂದು ವ್ಯಾಖ್ಯಾನವು **ಕೃತ್ಸ್ನಸ್ಯ**–ಸಮಸ್ತಗಳಾದ, **ಉಚ್ಚಾವಚರೂಪೇಣಾವಸ್ಥಿತಸ್ಯ**–ಕೆಲವು ಉತ್ಕೃಷ್ಟವಾಗಿಯೂ ಕೆಲವು ನಿಕೃಷ್ಟವಾಗಿಯೂ ಇರುವ, **ಚೇತನಾಚೇತನಸ್ಯ-ಚ ವಸ್ತುನಃ** ಚೇತನ ಮತ್ತು ಅಚೇತನ ರೂಪದಲ್ಲಿರುವ ವಸ್ತುಗಳ, **ಯೇಯೇಸ್ವಭಾವಾಃ**-ಯಾವ ಯಾವ ಸ್ವಭಾವ ಉಂಟೋ, **ತೇಷಾಂ ಸರ್ವೇಷಾಂ ಯೋಗಾನಾಂ**-ಅಂತಹ ಸಮಸ್ತಯೋಗಗಳಿಗೂ, **ಈಶ್ವರಃ**-ನಿಯಾಮಕನಾಗಿರುವ, ಇದರ ತಾತ್ಪರ್ಯವನ್ನು ವ್ಯಕ್ತಪಡಿಸುತ್ತಾರೆ—**ಸ್ವಸಙ್ಕಲ್ಪಾಯತ್ತ ಸ್ವೇತರಸಮಸ್ತವಸ್ತುಸ್ವರೂಪಸ್ಥಿತಿಪ್ರವೃತ್ತಿಭೇದಃ**-ತನ್ನ ಸಙ್ಕಲ್ಪಕ್ಕೆ ಅಧೀನವಾದ, ತನಗಿಂತಲೂ ಬೇರೆಯಾದ ಸಮಸ್ತ ವಸ್ತುಗಳ ಸ್ವರೂಪಸ್ಥಿತಿ ಪ್ರವೃತ್ತಿ ಭೇದಗಳುಳ್ಳ **ಕೃಷ್ಣಃ**-ಎಂದರೆ **ವಸುದೇವಸೂನುಃ**-ವಸುದೇವ ಪುತ್ರನಾಗಿ ಅವತರಿಸಿದ ಶ್ರೀ ಕೃಷ್ಣನು, ಇದರಿಂದ ಅವತರಿಸಿದ ಕಾಲದಲ್ಲೂ ಅಜಹತ್ಸ್ವಸ್ವಭಾವನಾಗಿ ಯೋಗೇಶ್ವರನು ; ಕಲ್ಯಾಣಗುಣಾಕರನು ಮತ್ತು ಉಭಯ ವಿಭೂತಿನಾಯಕನು, ಹೀಗೆ ಪರಿಪೂರ್ಣನೆಂಬ ಭಾವವು. **ಯತ್ರಚಪಾರ್ಥೋ ಧನುರ್ಧರಃ**-ಯಾವ ಕಡೆಯಲ್ಲಿ ಪಾರ್ಥನು ಧನುರ್ಧಾರಿಯಾಗಿದ್ದಾನೋ, **ಎಂದರೆ**

**ಪುತ್ರಃ ತತ್ಪದದ್ವಂದ್ವೈಕಾಶ್ರಯಃ; ತತ್ರಶ್ರೀ ರ್ವಿಜಯೋ ಭೂತಿ ರ್ನೀತಿ ರ್ಧ್ರುವಾ-ನಿಶ್ಚಲಾ, ಇತಿ ಮತಿ ರ್ಮಮೇತಿ ॥ ೭೮ ॥**

ಇತಿ ಶ್ರೀ ಭಗವದ್ರಾಮಾನುಜ ವಿರಚಿತೇ ಶ್ರೀಮದ್ಗೀತಾಭಾಷ್ಯೇ

ಅಷ್ಟಾದಶೋಽಧ್ಯಾಯಃ

ಶ್ರೀಮತೇ ರಾಮಾನುಜಾಯನಮಃ

---

**ತಸ್ಯಪಿತೃಷ್ವಸುಃಪುತ್ರಃ**-ಆತನಿಗೆ ಅತ್ತೆಯ ಮಗನಾದ ಅರ್ಜುನನು, **ತತ್ಪದದ್ವಂದ್ವೈಕಾಶ್ರಯಃ**-ಆತನ ಚರಣಯುಗಳವನ್ನು ಆಶ್ರಯಿಸಿದವನಾಗಿದ್ದಾನೋ ಇದು **ಧನುರ್ಧರಃ** ಎಂಬುದರಿಂದ ಉಂಟಾಗುವ ಅರ್ಥವು ಆತ್ಮಾವನ್ನು ಶರವನ್ನಾಗಿ ಮಾಡಿಕೊಂಡು, ಪ್ರಣವವನ್ನು ಧನುಸ್ಸಾಗಿ ಮಾಡಿಕೊಂಡು, ಪರಮಪುರುಷನನ್ನು ಲಕ್ಷ್ಯವನ್ನಾಗಿ ಭಾವಿಸಿ, ಅಂತಹ ಶರವಾದ **ಆತ್ಮವನ್ನು** ಪರಮಾತ್ಮನಲ್ಲಿಗೆ ಕಳುಹಿಸುತ್ತಾನೋ, ಎಂದರೆ ಆತ್ಮಸಮರ್ಪಣರೂಪ ಶರಣಾಗತಿಯನ್ನು **ಅನುಷ್ಠಿಸುತ್ತಾನೋ** ಎಂಬ ಭಾವವನ್ನು ಶ್ರೀ ಯತಿವರ್ಯರು ಇಲ್ಲಿ ವಿಶದವಾಗಿ **ಸೂಚಿಸಿ** ಉಪನಿಷದರ್ಥವನ್ನು ಪ್ರಕಟಿಸಿರುತ್ತಾರೆ. **ತತ್ರ**-ಆ ಕಡೆಯಲ್ಲೇ, **ಶ್ರೀಃ**-ರಾಜ್ಯಾದಿಭೋಗ್ಯ ಸಮೃದ್ಧಿಯೂ, **ವಿಜಯಃ**-ಶತ್ರುನಾಶವೂ, **ಭೂತಿಃ**-ಐಶ್ವರ್ಯವೂ, ಎಂದರೆ ಎಲ್ಲಾ ಆಡಳಿತವನ್ನೂ ನಿರ್ವಹಿಸುವ ಶಕ್ತಿಯೂ, ಅಥವಾ, ಉಂಟಾದ ಐಶ್ವರ್ಯವು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದೋಣವೂ, **ನೀತಿಃ**-ಅರ್ಥಶಾಸ್ತ್ರದಿಂದುಂಟಾದ ಇತಿಕರ್ತವ್ಯತೆಯು ಅಥವಾ ಅಂತಹ ಶಾಸ್ತ್ರದಿಂದ ತೋರಿಬರುವ ಅಧರ್ಮವಿಲ್ಲದ ಪ್ರವೃತ್ತಿಯೂ ಸಹ, **ಧ್ರುವಾ**-ಎಂದರೆ, **ನಿಶ್ಚಲಾ**-ಶಾಶ್ವತವಾದುದು, **ಇತಿ**-ಎಂಬುದಾಗಿ, **ಮತಿರ್ಮಮ**-ನನ್ನ ಅಭಿಪ್ರಾಯವು, **ಇತಿ**-ಎಂಬದಾಗಿ ಸಂಜಯರು ಧೃತರಾಷ್ಟ್ರನಿಗೆ ಹೇಳಿದರು. ಹಿಂದೆ ೭೫ ನೆಯ ಶ್ಲೋಕದಲ್ಲಿರುವ **ಯೋಗೇಶ್ವರ** ಶಬ್ದಕ್ಕೆ **ಜ್ಞಾನಬಲೈಶ್ವರ್ಯ ವೀರ್ಯಶಕ್ತಿತೇಜಸಾಂ** ನಿಧಿಃ ಎಂದೂ, ಇಲ್ಲಿ **ಕೃತ್ಸ್ನಸ್ಯೋಚ್ಚಾವಚ ರೂಪೇಣಾವಸ್ಥಿತಸ್ಯ ಚೇತನಸ್ಯಾಚೇತನಸ್ಯಚ ವಸ್ತುನೋ ಯೇಯೇಸ್ವಭಾವಯೋಗಾಃ, ತೇಷಾಂ ಸರ್ವೇಷಾಂ ಯೋಗಾನಾಂ ಈಶ್ವರಃ** ಎಂದೂ ಭಿನ್ನವ್ಯಾಖ್ಯಾನಗಳು ಹೇಗೆ? ಎಂದರೆ ಆಯಾ ಪ್ರಕರಣಕ್ಕೆ ಯುಕ್ತವಾದ ತಾತ್ಪರ್ಯಗಳನ್ನು ಒಳಗೊಂಡ ವ್ಯಾಖ್ಯಾನವು ಯುಕ್ತವೇ; ಅಥವಾ **ಕಲ್ಯಾಣಗುಣಯೋಗನಿಧಿ**ಯೆಂದು ಅರ್ಥಮಾಡಿರುವದು ರೂಪವಿಭವೈಶ್ವರ್ಯ ಯೋಗಕ್ಕೂ ಉಪಲಕ್ಷಣವೆಂದು ಭಾವಿಸಿ ಎರಡು ವ್ಯಾಖ್ಯಾನಗಳೂ ಸಮಾನಾರ್ಥಕಗಳೆಂದೂ ಭಾವಿಸಬಹುದು. **ಯೋಗಾನಾಂ ಈಶ್ವರಃ** ಎಂಬ ವ್ಯಾಖ್ಯಾನವು ಪರಮಾತ್ಮನು ಸವಿಶೇಷನೆಂದೇ ಉಪಪಾದಿಸಿದ ಹಾಗಾಯಿತು; ನಿರ್ವಿಶೇಷನೆಂಬ ಅಭಿಪ್ರಾಯಕ್ಕೆ ಅನುಕೂಲ ವಿಲ್ಲವು **ಈಶ್ವರಃ** ಎಂಬ ಪ್ರಯೋಗವು ನಿಯಮನ ಶಕ್ತಿಯುಳ್ಳವನನ್ನು ಬೋಧಿಸುವದರಿಂದ **ನಿಯಾಮ್ಯವರ್ಗವು** ಉಂಟೇ ಉಂಟು ಎಂಬುದು ಸ್ಥಾಪಿತವು. ಆದುದರಿಂದ ಪರಮಾತ್ಮನೊಬ್ಬನೇ ಸತ್ಯವು, ಮಿಕ್ಕವೆಲ್ಲಾ ಮಿಥ್ಯೆಯು ಎಂಬ ವಾದವು ಶಾಸ್ತ್ರಸಮ್ಮತವಾದುದಲ್ಲವು. **ಈಶಿ** ತವ್ಯಗಳಿಲ್ಲದೆ ಈಶ್ವರನಾಗುವದಿಲ್ಲವು ಇಲ್ಲಿ **ಧನುರ್ಧರಃ** ಎಂಬ ಪ್ರಯೋಗದಿಂದ ಅರ್ಜುನನು ಯಾವಾಗ **ಕರಿಷ್ಯೇ ವಚನಂತವ** (ಗೀ. ೧೮-೭೩) ಎಂದು ಸಙ್ಕಲ್ಪಿಸಿದನೋ ಒಡನೆ ತಾನು "**ವಿಸೃಜ್ಯಸಶರಂ ಚಾಪಮ್**" (ಗೀ. ೧-೪೭) ಎಂಬಲ್ಲಿ ಹೇಳಿ ಬಿಸಾಡಿದ್ದ ಗಾಂಡಿವವನ್ನು **ಪುನಃ** ಧರಿಸಿದನು ಎಂಬರ್ಥವನ್ನು ಗ್ರಹಿಸತಕ್ಕದ್ದಾಗಿರುತ್ತದೆ **ಮತಿರ್ಮಮ** ಎಂಬುದರಿಂದ ನಿನ್ನ ಅಭಿಪ್ರಾಯವು ಹೇಗಾದರೂ ಇರಲಿ, ನನ್ನ ಅಭಿಪ್ರಾಯವಂತೂ ಪರಮಾತ್ಮನನ್ನು

ಶರಣಾಗತಿಯ ಮೂಲಕ ಆಶ್ರಯಿಸಿದವರಿಗೇ ಚತುರ್ವಿಧ ಪುರುಷಾರ್ಥವೇ ವಿನಾ ಇತರರಿಗಿಲ್ಲವೆಂಬುದು ತಾತ್ಪರ್ಯವು. ಈ ಅಭಿಪ್ರಾಯವನ್ನು ಹಿಂದೆಯೂ ಸಂಜಯರು ಧೃತರಾಷ್ಟ್ರನಿಗೆ ತಿಳಿಸಿರುತ್ತಾರೆ—**ಶೃಣು ರಾಜನ್ನತೇ ವಿದ್ಯಾಮಮ ವಿದ್ಯಾ ನ ಹೀಯತೇ । ವಿದ್ಯಾಹೀನಸ್ತಮೋಧ್ವಸ್ತೋ ನಾಭಿಜಾನಾಸಿ ಕೇಶವಮ್ । ಮಾಯಾಂ ನ ಸೇವೇ ಭದ್ರಂ ತೇ ನವೃಥಾ ಧರ್ಮಮಾಚರೇ । ಶುದ್ಧಭಾವಂ ಗತೋ ಭಕ್ತ್ಯಾ ಶಾಸ್ತ್ರಾದ್ವೇದ್ಮಿ ಜನಾರ್ದನಮ್" ಓ** ಧೃತರಾಷ್ಟ್ರನೇ ಕೇಳು ನೀನು ತಿಳಿದಿರುವದು ವಿದ್ಯೆಯಲ್ಲವು; ಬ್ರಹ್ಮವಿದ್ಯೆಯೇ ವಿದ್ಯೆಯು; ಅಂತಹ ವಿದ್ಯೆಯಿಲ್ಲದೆ ತಮೋಗುಣಕ್ಕೆ ವಶನಾಗಿ ಕೇಶವನನ್ನು ನೀನು ತಿಳಿಯಲಾರೆ; ನಾನು ಪ್ರಕೃತಿಭೋಗವನ್ನು ಸೇವಿಸುವದಿಲ್ಲವು, ನಾನು ವ್ಯರ್ಥವಾಗಿ ಅಲ್ಲದೆ ಪರಮಾತ್ಮನು ಸುಪ್ರೀತನಾಗುವುದಕ್ಕಾಗಿ ವಿಹಿತಕರ್ಮವನ್ನೆಸಗಿ ಪರಮಾತ್ಮನಲ್ಲಿ ಸಮರ್ಪಿಸುವೆನು; ಶಾಸ್ತ್ರದಲ್ಲಿ ಹೇಳಿರುವ ಕರ್ಮಯೋಗ ಪರಂಪರೆಗಳ ಮೂಲಕ ಉಪಾಸನೆಗೆ ಪ್ರತಿಬಂಧಕಗಳಾದ ಪಾಪಗಳನ್ನು ಹೋಗಲಾಡಿಸಿಕೊಂಡು ಪರಿಶುದ್ಧಾಂತಃಕರಣನಾಗಿ ಪರಮಾತ್ಮನನ್ನು ಆಶ್ರಯಿಸಿ ಉಪಾಸನವನ್ನು ಐಕಾಂತ್ಯ ಭಕ್ತಿಯಿಂದ ಮಾಡುತ್ತೇನೆ" ಎಂದು ಹೇಳಿರುತ್ತಾರೆ ಆ ಕಾರಣದಿಂದಲೇ ನಿನ್ನ ಮತಿಯು **ಧ್ರುವಾ**-ಅಲ್ಲವು; ನನ್ನ ಮತಿಯಾದರೋ ಹಾಗಲ್ಲವು; ಕರ್ಮಯೋಗಾದಿಗಳಿಂದ ಅನುಗೃಹೀತವಾದ ಭಕ್ತಿಯೋಗದಲ್ಲಿ ನಾನು ಇರುವದರಿಂದ, ನನ್ನ ಮತಿಯು ಸಮೀಚೀನವಾದುದಾಗಿ ಈಗ ನಾನು ಹೇಳಿರುವ ತತ್ವಾಭಿಪ್ರಾಯವು ನನಗೆ ಸ್ಫುಟವು; ನಿನಗೆ ವ್ಯಕ್ತವಿಲ್ಲದಿರಬಹುದು, ನನ್ನದು ಸ್ಥಿರವಾದುದು, ನಿನ್ನದು ಹಾಗಲ್ಲವೆಂಬುದು ಸೂಚಿತವು.

ಈ ೧೮ನೆ ಅಧ್ಯಾಯವು ನಾನಾವಿಧ ನಾಮಕರಣವನ್ನು ಹೊಂದಿರುತ್ತದೆ. ಇದರಿಂದ ಅಧ್ಯಾಯಕ್ಕೆ ಕೊಟ್ಟಿರುವ ಹೆಸರುಗಳು ಶ್ರೀ ವ್ಯಾಸರವರು ಕೊಟ್ಟಿದ್ದಲ್ಲವೆಂದು ತೋರಿಬರುತ್ತದೆ; ಏಕೆಂದರೆ ಅನೇಕ ಕೋಶಗಳಲ್ಲಿ ಭಿನ್ನಭಿನ್ನವಾಗಿರುತ್ತದೆ. ಕೆಲವರು **ಶ್ರದ್ಧಾತ್ರಯಯೋಗೋನಾಮ**ವೆಂಬ ಹೆಸರನ್ನು ಕೊಟ್ಟಿರುತ್ತಾರೆ. ಶಾಸ್ತ್ರಸಾರಾರ್ಥವು ಉಪಪಾದಿತವಾಗಿರುವದು ಬಿಟ್ಟುಹೋಗಿ ಎಲ್ಲೋ ಒಂದು ವಿಷಯ ಮಾತ್ರ ಸೂಚಿತವಾಗುವದರಿಂದ ಈ ಹೆಸರು ಯುಕ್ತವಾಗಿ ತೋರುವದಿಲ್ಲವು ಇನ್ನು ಕೆಲವರು **ಸನ್ಯಾಸಯೋಗ**ವೆಂಬ ಹೆಸರನ್ನೂ, ಇನ್ನು ಕೆಲವರು **ಕರ್ಮಸನ್ಯಾಸ**ವೆಂಬ ಹೆಸರನ್ನೂ ಕೊಟ್ಟಿರುತ್ತಾರೆ. ಕರ್ಮಸ್ವರೂಪ ಸನ್ಯಾಸವೆಂಬುದು ಅರ್ಥವಾದರೆ ಅಪಾರ್ಥವಾಗುತ್ತದೆ; ಏಕೆಂದರೆ "**ಯಜ್ಞೋದಾನತಪಶ್ಚೈವ ನ ತ್ಯಾಜ್ಯಂ ಕಾರ್ಯಮೇವತತ್**" ಎಂಬ ಉಪದೇಶಕ್ಕೆ ವಿರೋಧವು; ಕರ್ಮಸನ್ಯಾಸವೆಂದರೆ ಕರ್ತೃತ್ವಫಲ ಮಮತಾ ತ್ಯಾಗಪೂರ್ವಕ ವಿಹಿತ ಕರ್ಮಾನುಷ್ಠಾನವೆಂದರೆ ಇದು ಹಿಂದೆ ಐದನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿರುವದರಿಂದ ಆ ಅಧ್ಯಾಯಕ್ಕೆ ಈ ಹೆಸರನ್ನು ಕೊಟ್ಟಿರುವದರಿಂದ ಇಲ್ಲಿ ಪುನಃ ಆ ಹೆಸರನ್ನೇ ಕೊಡುವದು ಯುಕ್ತವಲ್ಲವು; ಮತ್ತು ಈ ಅಂಶ ಮಾತ್ರವೇ ಈ ಅಧ್ಯಾಯದಲ್ಲಿ ಹೇಳಲ್ಪಡಲಿಲ್ಲವು, ಅದು ಪ್ರಧಾನ ವಿಷಯವೂ ಅಲ್ಲವು. ಈ ಅಧ್ಯಾಯವು ಮೋಕ್ಷಪ್ರಾಪ್ತಿಯನ್ನು ಉಪದೇಶಿಸುವದರಿಂದ **ಮೋಕ್ಷೋಪಾಯಯೋಗ**ವೆಂದು ಹೇಳಿದರೆ, ೯ ನೆಯ ಅಧ್ಯಾಯುವೂ ಮೋಕ್ಷೋಪಾಯವನ್ನು ಹೇಳುವದರಿಂದ ಅದಕ್ಕೂ ಈ ಹೆಸರು ಸಲ್ಲುತ್ತದೆ ಆದುದರಿಂದ ಈ ದೊಡ್ಡ ಅಧ್ಯಾಯಕ್ಕೆ "**ಸಕಲಶಾಸ್ತ್ರಾರ್ಥಕಥನ ಮೋಕ್ಷೋಪದೇಶಯೋಗ**"ವೆಂಬ ಹೆಸರು ಉಚಿತವಾಗಿಯೂ ಸಾರ್ಥವತ್ತಾಗಿಯೂ ಇರುತ್ತದೆ. ಏಕೆಂದರೆ ಹಿಂದಿನ ೧೭ ಅಧ್ಯಾಯಗಳಿಂದಲೂ ಉಪಪಾದಿಸಿ ಹೇಳಿದುದನ್ನೆಲ್ಲಾ ಸಙ್ಗ್ರಹವಾಗಿ ಅನುವಾದಮಾಡಿ ಹೇಳಿ ಶಾಸ್ತ್ರದಲ್ಲಿ ಸಾರತಮವಾಗಿ ಗುಹ್ಯತಮವಾದುವು ಮೋಕ್ಷೋಪಾಯಗಳಾದುದರಿಂದ, ಇದರಲ್ಲಿ ಸಕಲ ಶಾಸ್ತ್ರಾರ್ಥವೂ ಉಂಟು;

ಮೋಕ್ಷೋಪದೇಶವೂ ಉಂಟು ಎಂದು ಹೇಳಲ್ಪಟ್ಟಿತು ಆ ಮೋಕ್ಷಪ್ರಾಪ್ತ್ಯುಪದೇಶವು ಯಾವುದು ಎಂದರೆ—1. ೬೫ ನೆಯ ಶ್ಲೋಕದಲ್ಲಿ ಹೇಳಿರುವ ತ್ರೈವರ್ಣಿಕರಿಗೂ ಶಕ್ತರಿಗೂ ಅಧಿಕಾರವಿರುವ ಉಪಾಸನೆಯೂ, ೨. ಹಾಗೆ ಶಕ್ತರಲ್ಲದ ತ್ರೈವರ್ಣಿಕರಿಗೂ ಸ್ತ್ರೀ ಶೂದ್ರಾದಿ ಸರ್ವರಿಗೂ ಅಧಿಕಾರವಿರುವ ೬೬ ನೆಯ ಶ್ಲೋಕದಲ್ಲಿ ಹೇಳಿರುವ ಶರಣಾಗತಿಯೂ ಎಂಬುದು.

॥ ಶ್ರೀ ಕೃಷ್ಣಾರ್ಪಣಮಸ್ತು ॥

ಶ್ರೀಮತೇ ನಿಗಮಾನ್ತ ಮಹಾದೇಶಿಕಾಯನಮಃ

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯನಮಃ

## ೧೮ ನೆ ಅಧ್ಯಾಯ ಶ್ಲೋಕಗಳ ಸಂಗ್ರಹಾರ್ಥವು.

ಅವ—ಹಿಂದಿನ ಎರಡು ಅಧ್ಯಾಯಗಳಲ್ಲಿ ಐಹಿಕ ಸ್ವರ್ಗಾದಿ ಶ್ರೇಯಸ್ಸಿಗೂ, ಮೋಕ್ಷ ಸಾಮ್ರಾಜ್ಯ ಪ್ರಾಪ್ತಿಗೂ ಸಹ ಯಜ್ಞ, ದಾನ ತಪಸ್ಸೇ ಮೊದಲಾದ ವೈದಿಕ ಕರ್ಮಗಳೇ ಸಾಧನವೆಂದು ಹೇಳಲ್ಪಟ್ಟಿತು. ವೈದಿಕಕರ್ಮಗಳಿಗೆಲ್ಲಾ ಸಾಮಾನ್ಯ ಲಕ್ಷಣವು ಅವುಗಳ ಆರಂಭದಲ್ಲೂ ಸಮಾಪ್ತಿಯಲ್ಲೂ ಓಂ ತತ್ ಸತ್ ಎಂದು ಹೇಳುವದರ ಮೂಲಕ, ಓಂ ಎಂಬುದರಿಂದ ಸಾಮಾನ್ಯ ವೈದಿಕ ಕರ್ಮವಿಶೇಷವೆಂಬುದನ್ನೂ, ತಚ್ಛಬ್ದವಿರುವದರಿಂದ ಮೋಕ್ಷಾರ್ಹ ಕರ್ಮವೆಂಬುದನ್ನೂ, ಸಚ್ಛಬ್ದವಿರುವದರಿಂದ ಐಹಿಕಾದಿ ಶ್ರೇಯಸ್ಸಾಧಕ ಕರ್ಮವೆಂಬುದನ್ನೂ ಪ್ರಕಟಿಸುತ್ತದೆಂದು ಹೇಳಲ್ಪಟ್ಟಿತು. ಐಹಿಕಾದಿಗಳಲ್ಲಿ ಮಮತೆಯಿರುವ ಬುಭುಕ್ಷುವು ಫಲಾಕಾಂಕ್ಷಿಯೆಂದೂ, ಮೋಕ್ಷಾರ್ಥಿಯ ಕರ್ಮವು ಫಲಮಮತಾದಿಯುಕ್ತವಾಗಿರಕೂಡದೆಂದೂ ಹಿಂದೆಯೇ ಹೇಳಲ್ಪಟ್ಟಿತು.

ಈ ಅಧ್ಯಾಯದಲ್ಲಿ ಹೇಳುವದೇನೆಂದರೆ? ಶಾಸ್ತ್ರಗಳಲ್ಲಿ ಮೋಕ್ಷಕ್ಕೆ ಸಾಧನವೆಂದು ಹೇಳಿರುವ ಕರ್ಮಸನ್ಯಾಸ ಮತ್ತು ಕರ್ಮತ್ಯಾಗ ಶಬ್ದಗಳು ಏಕಾರ್ಥವುಳ್ಳವೆಂದೂ, ಸರ್ವೇಶ್ವರನೇ ಸರ್ವ ಕರ್ಮಗಳಿಗೂ ಪ್ರಧಾನಕರ್ತೃವೆಂಬ ಅನುಸಂಧಾನವೂ, ಪ್ರಧಾನಫಲಿಯೂ ಆತನೇ ಎಂದೂ, ಸತ್ವಗುಣವೇ ಮುಖ್ಯವಾಗಿ ಉಪಾದೇಯವೆಂದೂ, ಪರಮಪುರುಷಾರಾಧನಭೂತಗಳಾದ ಕರ್ಮಗಳೇ ಮೋಕ್ಷಪ್ರಾಪ್ತಿಗೆ ವ್ಯವಹಿತಸಾಧನಗಳೆಂದೂ, ಈ ಗೀತಾಶಾಸ್ತ್ರದಲ್ಲೆಲ್ಲಾ ಪರಮ ಸಾರಭೂತವಾಗಿ ಮೋಕ್ಷಪ್ರಾಪ್ತಿಗೆ ಅವ್ಯವಹಿತಸಾಧನಗಳು ಗುರುಲಘೂಪಾಯಗಳ ರೂಪದಲ್ಲಿ ಭಕ್ತಿಯಿಂದ ಕೂಡಿದ ಭಗವದುಪಾಸನ ಮತ್ತು ಆತನ ಪಾದದಲ್ಲಿ ಶರಣಾಗತಿ ಹೀಗೆ ಎರಡೇ ಉಪಾಯಗಳೆಂದೂ, ಗುರೂಪಾಯವು ತನಗೆ ಸಾಧ್ಯವಿಲ್ಲವೇ ಎಂದು ಶೋಕಿಸುವವನಿಗೆ ಲಘೂಪಾಯವೆಂದೂ ಉಪದೇಶಿಸಲ್ಪಡುತ್ತದೆ

೧. ಹಿಂದೆ **ಓಂ ತತ್ಸತ್** ಎಂದು ಹೇಳಿ ಆರಂಭಿಸುವ ವೈದಿಕ ಕರ್ಮವು, ಯಜ್ಞ ದಾನ ತಪೋರೂಪವಾದುದೆಂದೂ, ಪರಮಪುರುಷಾರಾಧನ ರೂಪವಾದುದೆಂದೂ "**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ**" ಇತ್ಯಾದಿ ಉಪದೇಶದಿಂದ ಕರ್ತೃತ್ವಫಲ ಮಮತಾದಿಗಳು ಕೂಡದೆಂದೇ ಹೇಳಲ್ಪಟ್ಟಿತು ಆದರೆ ಶ್ರುತಿಯಲ್ಲಿ "**ತ್ಯಾಗೇನೈಕೇಽಮೃತತ್ವಮಾನಶುಃ**" ಎಂಬಲ್ಲಿ ತ್ಯಾಗಶಬ್ದವೂ, ಇನ್ನೊಂದು ಕಡೆಯಲ್ಲಿ "**ಸನ್ನ್ಯಾಸಯೋಗಾದ್ಯತಯಃ ಶುದ್ಧಸತ್ವಾಃ ಪರಿಮುಚ್ಯಂತಿಸರ್ವೇ**" ಎಂಬಲ್ಲಿ ಸನ್ನ್ಯಾಸ ಶಬ್ದವೂ ಉಪಯೋಗಿಸಲ್ಪಟ್ಟು, ಇವು

ಮೋಕ್ಷದಾಯಕವೆಂದು ಹೇಳಲ್ಪಟ್ಟಿದೆಯಲ್ಲಾ; ಓ ಬಾಹುಪರಾಕ್ರಮವುಳ್ಳ ಪರಮಪುರುಷನೇ ಈ ಶಬ್ದಗಳು ಏಕಾರ್ಥವುಳ್ಳವೇ? ಅವುಗಳ ಸ್ವರೂಪವೇನು? ಇಲ್ಲವೇ ಭಿನ್ನಾರ್ಥವುಳ್ಳವೇ? ಆಗ ತ್ಯಾಗವೆಂದರೇನು? ಸನ್ನ್ಯಾಸವೆಂದರೇನು? ಓ ಕೇಶಿ ಎಂಬ ರಾಕ್ಷಸನನ್ನು ಕೊಂದ ಪರಮಪುರುಷನೇ, ದಯವಿಟ್ಟು ತಿಳಿಸು ಎಂದು ಅರ್ಜುನನು ಪ್ರಾರ್ಥಿಸುತ್ತಾನೆ.

೨. ಶ್ರೀ ಕೃಷ್ಣಭಗವಾನರವರು ಉತ್ತರವನ್ನು ದಯಪಾಲಿಸುತ್ತಾರೆ. ಕರ್ಮತ್ಯಾಗ ಮತ್ತು ಕರ್ಮಸನ್ಯಾಸವೆರಡೂ ಒಂದೇ ಅಭಿಪ್ರಾಯವುಳ್ಳವೆಂದು ನಿರ್ಧರಿಸಿ ಹೇಳುವದಕ್ಕೆ ಪೂರ್ವಭಾವಿಯಾಗಿ ಅನೇಕ ಪ್ರಾಜ್ಞರೂ ಕೂಡ ಇವುಗಳಿಗೆ ಅರ್ಥಹೇಳುವದರಲ್ಲಿ ಭ್ರಮಾಭಿಪ್ರಾಯ ಉಂಟಾಗುವ ಹಾಗೆ ಹೇಳುವದರಿಂದ ಅವುಗಳು ಸರಿಯಾದ ಅಭಿಪ್ರಾಯಗಳಲ್ಲವೆಂದು ಅನಂತರ ತಿಳಿಸುತ್ತಾರೆ. ಕಾಮ್ಯಕರ್ಮಗಳು ತುಚ್ಛಫಲಗಳನ್ನು ಕೊಡುವದರಿಂದ ಅವು ಅನುಷ್ಠಿಸತಕ್ಕವಲ್ಲವೆಂಬುದು ಸನ್ನ್ಯಾಸ ಶಬ್ದಾರ್ಥವೆಂದು ಕೆಲವರು ಹೇಳುವರು. ಆದರೆ ಕರ್ಮಸನ್ಯಾಸದಿಂದಲೇ ಮೋಕ್ಷವೆಂದರೆ ಉಪಾಸನ ನಿರರ್ಥಕವೆಂಬ ಅರ್ಥ ಉಂಟಾಗುವದರಿಂದ ಸರಿಯಲ್ಲವೆಂಬ ಭಾವವು. ಇನ್ನು ಕೆಲವರು ನಿತ್ಯನೈಮಿತ್ತಿಕ ಕಾಮ್ಯಗಳಾದ ಸಮಸ್ತ ಕರ್ಮಗಳ ಫಲತ್ಯಾಗವೇ ತ್ಯಾಗವೆಂದು ಹೇಳುವರು. ಇಲ್ಲಿಯೂ ಮೇಲೆ ಹೇಳಿದ ಭಾವನೆಯೇ ಉಂಟಾಗುವದರಿಂದ ಸರಿಯಲ್ಲವು.

೩. ಇನ್ನೂ ಕೆಲವು ಜ್ಞಾನಿಗಳೇ ಎಲ್ಲಾ ಕರ್ಮಗಳೂ ವಿಷಯಾದಿಗಳಲ್ಲಿ ಸಂಗದ್ವೇಷಾದಿಗಳನ್ನುಂಟುಮಾಡುವದರಿಂದ ಬಂಧಕಗಳೇ; ಆದುದರಿಂದ ಇವುಗಳನ್ನು ಅನುಷ್ಠಿಸತಕ್ಕದ್ದಲ್ಲವೆನ್ನುವರು ಇವರು ಕಾಪಿಲರು. ಇನ್ನೂ ಕೆಲವು ಪಂಡಿತರು ಯಜ್ಞದಾನ ತಪಸ್ಸುಗಳು ಅನುಷ್ಠಿಸತಕ್ಕವೇ ವಿನಾ ಬಿಡತಕ್ಕದ್ದಲ್ಲವು. ಆದುದರಿಂದ ತ್ಯಾಗಸನ್ನ್ಯಾಸ ಶಬ್ದಗಳು ಭಿನ್ನಾರ್ಥಗಳನ್ನುಳ್ಳವು.

೪. ಹೀಗೆ ವಿವಾದಾಸ್ಪದಗಳಾದ ಭಿನ್ನಾಭಿಪ್ರಾಯಗಳಿರುವಾಗ ತ್ಯಾಗ ಶಬ್ದದ ಸರಿಯಾದ ಅಭಿಪ್ರಾಯವನ್ನು ನೀನು ಸರ್ವಜ್ಞನಾದ ನನ್ನಿಂದಲೇ ಕೇಳಿ ತಿಳಿಯತಕ್ಕದ್ದು ನರಾವತಾರಿಯಾಗಿ ಪುರುಷಶ್ರೇಷ್ಠನಾದ ಅರ್ಜುನನೇ ಹಿಂದೆಯೇ (೩-೩೦) ರಲ್ಲಿ ಕರ್ಮ, ಕರ್ತೃತ್ವ, ಫಲ ಮೂರರ ವಿಷಯದಲ್ಲೂ ಸಂಗವು ನಿನಗೆ ಕೂಡದೆಂದು ಹೇಳಿದ್ದರೂ, ಅವುಗಳ ಜ್ಞಾಪಕವನ್ನೇ ಪುನಃ ಕೊಟ್ಟು ನೀನು ಮೋಕ್ಷಕ್ಕಾಗಿ ಉಪಾಸಿಸಿ, ಮೂರು ವಿಧಗಳನ್ನುಳ್ಳ ತ್ಯಾಗವನ್ನು ಹೇಳತಕ್ಕದ್ದು. ಈ ಕರ್ಮ ಮಾಡುವದರಿಂದ ನಾನು ಫಲವನ್ನು ಸಾಧಿಸಿಕೊಳ್ಳುವ ಈ ಕರ್ಮವೆಂಬ ಭಾವನೆಯಿಲ್ಲದಿರುವದರಿಂದ ಮಮತೆಯ ತ್ಯಾಗ. ಈ ಕರ್ಮ ನಾನು ಮಾಡಿದ್ದಲ್ಲ, ಸರ್ವೇಶ್ವರನೇ ಮಾಡಿಸಿದ್ದು ಎಂಬುದರಿಂದ ಕರ್ಮತ್ಯಾಗವು ಈ ಕರ್ಮದಿಂದುಂಟಾಗುವ ಸ್ವರ್ಗಾದಿ ಫಲವು ನನಗೆ ಬೇಕಿಲ್ಲವು ಎಂಬುದರಿಂದ ಫಲತ್ಯಾಗವು. ಹೀಗೆ ತ್ಯಾಗವು ಈ ಮೂರನ್ನೂ ಒಳಗೊಂಡಿದುದು.

೫. ಯಜ್ಞದಾನತಪಸ್ಸೇ ಮೊದಲಾದ ವರ್ಣಾಶ್ರಮ ವೈದಿಕಕರ್ಮಗಳೆಲ್ಲಾ ಆವಶ್ಯಕವಾಗಿ ಸಾಯುಜ್ಯವತನಕ ಅನುಷ್ಠೇಯಗಳೇ ಬಿಡತಕ್ಕವುಗಳಲ್ಲವು. ಏಕೆಂದರೆ ವಿಚಾರಪರರಾಗಿ ಮನನಶೀಲರಾದ ವಿದ್ವಾಂಸರುಗಳಿಗೆ ಭಕ್ತಿಯೋಗದ ಮೂಲಕವಾಗಿ ಮೋಕ್ಷಾಪೇಕ್ಷೆಯುಳ್ಳವರಿಗೆ ಉಪಾಯಸಾಧನೆಗೆ ಬೇಕಾದ ಪ್ರತಿಬಂಧಕಪಾಪಗಳನ್ನು ಹೋಗಲಾಡಿಸುವುವು.

೬. ಹೀಗೆ ಪ್ರಾಜ್ಞರಾದ ಮೋಕ್ಷಾರ್ಥಿಗಳಿಗೆ ಈ ಯಜ್ಞದಾನ ತಪಸ್ಸುಗಳೇ ಮೊದಲಾದ ನಿತ್ಯ ನೈಮಿತ್ತಿಕ ಕರ್ಮಗಳು ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪಗಳನ್ನು

ಹೋಗಲಾಡಿಸುವದರಿಂದ ತುಂಬಾ ಪವಿತ್ರಕರವಾದುವೋ, ಆ ಕಾರಣದಿಂದ, ಭಗವದುಪಾಸನವನ್ನು ನಿತ್ಯವೂ ಹೇಗೆ ಅನುಷ್ಠಿಸತಕ್ಕದ್ದೋ, ಹಾಗೆಯೇ ಈ ಕರ್ಮಗಳೂ ನನ್ನ ಆರಾಧನರೂಪವಾದ ಕೈಂಕರ್ಯಗಳಾದುದರಿಂದ ಅವುಗಳಲ್ಲಿ ನಾನು ಮಾಡಿದೆನೆಂಬ ಮಮತೆಯನ್ನೂ, ಫಲವನ್ನೂ ತ್ಯಾಗಮಾಡಿ ಎಂದರೆ ಬಿಟ್ಟು, ಪರಮಾತ್ಮನಾದ ನನ್ನಲ್ಲಿ ಸಮರ್ಪಿಸಿ, ಪ್ರತಿದಿನವೂ, ದೇಹವಿಯೋಗವಾಗಿ ಮುಂದಿನ ಗತಿಯುಂಟಾಗುವ ತನಕ, ಮೋಕ್ಷಾರ್ಥಿಯಿಂದ ಅವಶ್ಯಕವಾಗಿ ಅನುಷ್ಠಿಸತಕ್ಕವು ಎಂದು ಭಗವಂತನಾದ ನನ್ನಿಂದ ನಿಶ್ಚಯಿಸಲ್ಪಟ್ಟ ಅಭಿಪ್ರಾಯವು.

೭. ಮಾಡತಕ್ಕ ಕರ್ಮವನ್ನು ತ್ಯಾಗಮಾಡಿದವನಿಗೆ ಶರೀರಯಾತ್ರೆಯು ಸಿದ್ಧಿಸುವದಿಲ್ಲವೆಂದೂ, ಶರೀರಯಾತ್ರೆಯು ಯಜ್ಞಶಿಷ್ಟಾಶನದಿಂದ ನಡೆದರೆ ಒಳ್ಳೆಯ ಜ್ಞಾನವನ್ನುಂಟುಮಾಡುತ್ತದೆಂದೂ, ಹಾಗೆ ನಡೆಸದವನು ಪಾಪವನ್ನೇ ಭುಂಜಿಸಿ ಪಾಪಿಯಾಗಿ ವಿಪರೀತ ಜ್ಞಾನವನ್ನು ಹೊಂದುವನೆಂದೂ ಹೇಳಲ್ಪಟ್ಟಿತು. ಶ್ರುತಿಯಲ್ಲಿ ಈ ಅಭಿಪ್ರಾಯಗಳೇ ಆಹಾರಶುದ್ಧವಾಗಿದ್ದರೆ ಸತ್ವಶುದ್ಧಿಯುಂಟಾಗುತ್ತದೆಂದೂ ಹೀಗೆ ಸತ್ವಗುಣಾಭಿವೃದ್ಧಿಯುಂಟಾದರೆ ನಿಶ್ಚಲವಾದ ಸ್ಮೃತಿಯುಂಟಾಗುತ್ತದೆಂದೂ, ಹೀಗೆ ಇದು ಲಭಿಸಿದರೇ ಸರ್ವಬಂಧನಿವೃತ್ತಿಯೆಂದೂ ಮತ್ತು ಅನ್ನವು ಭಗವನ್ನಿವೇದನದಿಂದ ಪರಿಶುದ್ಧವಾದುದಾದರೆ ಮನಸ್ಸು ಪರಿಶುದ್ಧವೆಂದೂ ಹೇಳಿರುವ ಮೇರೆಗೆ, ವರ್ಣಾಶ್ರಮ ಧರ್ಮಗಳು ಅವಶ್ಯಕವೆಂದು ಹಿಂದೆ ಹೇಳಿದುದನ್ನೇ ಇಲ್ಲೂ ಜ್ಞಾಪಕಕ್ಕೆ ತರುತ್ತಾರೆ.—ಹೀಗೆ ಕರ್ಮಗಳಿಂದ ಪಾವನತ್ವವು ದೊರೆಯುವದರಿಂದ ಮಹಾಯಜ್ಞಾದಿ ನಿತ್ಯನೈಮಿತ್ತಿಕ ಕರ್ಮಗಳನ್ನು, ಶರೀರವನ್ನು ಬಿಟ್ಟು ಹೋಗುವವರೆಗೂ ಪರಬ್ರಹ್ಮಸಾಕ್ಷಾತ್ಕಾರರೂಪ ಜ್ಞಾನಕ್ಕೆ ಅಗತ್ಯವಾಗಿ ಅನುಷ್ಠಿಸತಕ್ಕವುಗಳು. ಆ ಕಾರಣದಿಂದ ಅವುಗಳನ್ನು ಬಿಟ್ಟುಬಿಡಲು ಸಾಧ್ಯವಿಲ್ಲವು ಹೀಗೆ ಸುಜ್ಞಾನವನ್ನುಂಟುಮಾಡುವ ಈ ಕರ್ಮಗಳು ಬಂಧಕಗಳು ಹೇಗೆ ಆಗುತ್ತವೆ? ಅವುಗಳು ಬಂಧಕಗಳೆಂದು ಮೋಹ ಬುದ್ಧಿಯಿಂದ ಅವುಗಳನ್ನು ತ್ಯಾಗಮಾಡುವದು ತಾಮಸತ್ಯಾಗವೆನಿಸಿ ತುಂಬಾ ನಿಂದಿತವು.

೮. ಮುಂದೆ ರಾಜಸತ್ಯಾಗವು ಯಾವುದೆಂಬುದನ್ನು ತಿಳಿಸುತ್ತಾರೆ.—ಈ ರಾಜಸತ್ಯಾಗಿಗೆ ಯದ್ಯಪಿ ಪರಂಪರೆಯಿಂದ ಕ್ರಮೇಣ ಕರ್ಮವು ಮೋಕ್ಷಕ್ಕೆ ಸಾಧನಭೂತವಾಗಬಹುದು ಎಂದು ತಿಳಿದಿದ್ದರೂ, ಈ ಯಜ್ಞಾದಿ ನಿತ್ಯನೈಮಿತ್ತಿಕ ಕರ್ಮಗಳನ್ನೆಲ್ಲಾ ಬಿಡುತ್ತಾನೆಂದು ಹೇಳುತ್ತಾರೆ. ಈ ಕರ್ಮಗಳನ್ನೆಲ್ಲಾ ಅನುಷ್ಠಿಸಬೇಕಾದರೆ, ಧರ್ಮದಿಂದ ದ್ರವ್ಯಾರ್ಜನಾದಿಗಳನ್ನು ಮಾಡಬೇಕು; ಅದು ತುಂಬಾ ದುಃಖಕರವಾದುದು, ತುಂಬಾ ಆಯಾಸಕರವಾದುದು, ಬಹು ಕಾಯಕ್ಲೇಶವುಳ್ಳದು ಎಂಬ ಭೀತಿಯಿಂದ ಕರ್ಮಗಳನ್ನು ಬಿಟ್ಟುಬಿಟ್ಟು ಜ್ಞಾನರೂಪ ಉಪಾಸನದಿಂದಲೇ ಮೋಕ್ಷವು ಸಾಧ್ಯವೆಂದು ತಿಳಿಯೋಣವು ರಾಜಸತ್ಯಾಗವೆನಿಸುತ್ತದೆ. ಇದೂ ಶಾಸ್ತ್ರವಿರುದ್ಧಾಭಿಪ್ರಾಯವಾದುದರಿಂದ ಇದಕ್ಕೂ ತ್ಯಾಗಫಲವಾದ ಭಗವದನುಗ್ರಹವಿಲ್ಲವು. ಭಗವದನುಗ್ರಹ ಉಂಟಾಗಬೇಕಾದರೆ ನಿತ್ಯನೈಮಿತ್ತಿಕಾದಿಗಳನ್ನನುಷ್ಠಿಸಿ, ಅದರಿಂದ ಪ್ರೀತನಾದ ಭಗವಾನ್ ಉಪಾಯಾನುಷ್ಠಾನಕ್ಕೆ ವಿರೋಧಿಗಳಾದ ಪಾಪಗಳನ್ನು ಹೋಗಲಾಡಿಸಿ, ಉಪಾಸ ಕೈಗೂಡುವದರ ಮೂಲಕ ಪ್ರಸನ್ನನಾದ ಭಗವಂತನ ಮೂಲಕವಾಗಿಯೇ ಮನಶ್ಶಾಂತತೆಯೇ ವಿನಾ ಕರ್ಮವು ಕ್ಲೇಶಕರವೆಂದು ಬಿಟ್ಟಿದುದರಿಂದಲ್ಲವು. ಕರ್ಮಮಾಡಿ ಪ್ರೀತನಾದರೇನೇ ಭಗವಂತನ ಅನುಗ್ರಹವೂ ಮನಶ್ಶಾಂತತೆಯೂ ಎಂಬ ಭಾವವು.

೯. ಮುಂದೆ ಸಾತ್ವಿಕತ್ಯಾಗವೆಂಬುದು ಯಾವುದು, ಅದು ಭಗವಂತನ ಅನುಗ್ರಹ ಸಂಪಾದಕವಾಗಿ ಹೇಗೆ ಮೋಕ್ಷಕ್ಕೆ ಸಾಧನವೆಂಬುದನ್ನು ತಿಳಿಸುತ್ತಾರೆ.—ಓ ಅರ್ಜುನನೇ!

ಬ್ರಾಹ್ಮಣ ಮೊದಲಾದ ವರ್ಣಗಳಿಗೂ ಬ್ರಹ್ಮಚಾರಿ ಮೊದಲಾದ ಆಶ್ರಮಗಳಿಗೂ ಶಾಸ್ತ್ರದಲ್ಲಿ ವಿಧಿಸಿರುವ ಪವಿತ್ರವಾದ ಯಾವ ನಿತ್ಯ ನೈಮಿತ್ತಿಕ ಕರ್ಮಗಳು ಅವಶ್ಯಕವಾಗಿ ಅನುಷ್ಠಿಸತಕ್ಕವು ಎಂದು ತಿಳಿದವನಾಗಿ ಅವುಗಳಲ್ಲಿ ಮಮತಾಕರ್ತೃತ್ವ ಫಲಗಳನ್ನು ಯಾವನು ತ್ಯಾಗಮಾಡ ವನೋ, ಅದು ಸಾತ್ವಿಕತ್ಯಾಗವೆನಿಸುತ್ತದೆ ಅದೇ ಕರ್ಮ ಸನ್ನ್ಯಾಸವೂ, ತ್ಯಾಗವೂ, ಎಂಬ ಭಾವವು.

೧೦. ಪರಮಪುರುಷಾರಾಧನರೂಪವಾದ ಕರ್ಮಗಳು ಪ್ರವೃತ್ತಿ ನಿವೃತ್ತಿರೂಪದಲ್ಲಿ ಎರಡು ವಿಧವು. ಪ್ರವೃತ್ತಿಧರ್ಮಗಳು ಬಂಧಕಗಳು; ನಿವೃತ್ತಿ ಧರ್ಮಗಳು ಮೋಕ್ಷಕ್ಕೆ ಹೇತುವಾದವು. ಇವು ಅಕುಶಲ, ಕುಶಲಗಳೆಂದು ಇಲ್ಲಿ ಹೇಳಲ್ಪಟ್ಟಿವೆ. ಈ ಮೇಲೆ ಹೇಳಿದ ಸಾತ್ವಿಕ ತ್ಯಾಗಿಯು ಅಕುಶಲವಾದ ಕಾಮ್ಯವಾದ ಪ್ರವೃತ್ತಿಧರ್ಮವನ್ನಾಚರಿಸಬೇಕಾಗಿ ಬಂದರೂ, ಮಮತಾಕರ್ತೃತ್ವ ಫಲಗಳನ್ನು ತ್ಯಾಗಮಾಡಿ ಅನುಷ್ಠಿಸುವದರಿಂದ ಆತನು ಅದನ್ನು ದ್ವೇಷಿಸುವುದಿಲ್ಲವು ಕುಶಲಿ ಗಳಾದ ನಿವೃತ್ತಿಧರ್ಮವನ್ನು ಆಚರಿಸಿದರೂ, ಫಲ ಕರ್ತೃತ್ವ ಮಮತೆಗಳನ್ನು ತ್ಯಾಗಮಾಡುವು ದರಿಂದ ಅದರೊಂದಿಗೆ ಆತನಿಗೆ ಸಂಗವಿಲ್ಲವು ಆದುದರಿಂದ ಅಂತಹ ತ್ಯಾಗಿಯೇ ಮಹಾ ಪ್ರಾಜ್ಞನು, ಆತನೇ ಸತ್ವಾಧಿಕ್ಯದಿಂದ ಕೂಡಿದವನು. ಆತನೇ ಸಂಶಯವನ್ನು ದೂರೀಕರಿಸಿದವನು.

೧೧. ಹಿಂದೆ ಹೇಳಿದುದನ್ನೇ ಸಮರ್ಥಿಸಿ ಹೇಳುತ್ತಾರೆ :—ಈ ಮೇಲೆ ಹೇಳಿದ ಎರಡು ವಿಧ ಕರ್ಮಗಳನ್ನೂ ಮೋಕ್ಷಾರ್ಥಿಯೂ ಮಾಡಬೇಕಾಗಿ ಬರುತ್ತದೆಯಾದುದರಿಂದ ಶರೀರವನ್ನು ಧರಿಸಿರುವ ಅವರಿಗೆ ಕರ್ಮಗಳನ್ನೆಲ್ಲಾ ಪ್ರವೃತ್ತಿಧರ್ಮಗಳೆಂದು ಬಿಡಲು ಸಾಧ್ಯವಿಲ್ಲವು. ದೇಹ ಧಾರಣಾದಿಗಳೂ ನಡೆಯಬೇಕಲ್ಲವೇ. ಆದುದರಿಂದ ಯಾವ ಮೋಕ್ಷಾರ್ಥಿಯು ಮೇಲೆ ಹೇಳಿದ ರೀತಿಯಲ್ಲಿ ಮಮತೆ ಕರ್ತೃತ್ವ ಫಲಗಳನ್ನು ತೊರೆದು ಕರ್ಮಗಳನ್ನು ನಡೆಸುವನೋ ಅವನೇ ಸಾತ್ವಿಕತ್ಯಾಗಿಯು.

೧೨. ಮೋಕ್ಷೇತರ ಸಾಧನಕರ್ಮಗಳನ್ನು ಅನುಷ್ಠಿಸಿಬಿಟ್ಟು, ಮೇಲೆ ಹೇಳಿದ ಮೂರನ್ನು ತ್ಯಾಗಮಾಡಿದರೆ, ಹೇಗೆ ಅವುಗಳ ಫಲಗಳನ್ನು ಕೊಡದೆ ಹೋಗುವುವು? ಬೀಜವನ್ನು ಬಿತ್ತಿದರೆ ತದನುಗುಣವಾದ ಸಸ್ಯವು ಹುಟ್ಟಲೇಬೇಕಲ್ಲವೇ ಎಂದರೆ ಸಮಾಧಾನವನ್ನು ಹೇಳುತ್ತಾರೆ.— ಕರ್ಮಗಳಿಗೆ ಮೂರು ವಿಧಗಳಾದ ಫಲಗಳುಂಟು. ೧. ಅನಿಷ್ಟಫಲ. ೨. ಇಷ್ಟಫಲ. ೩. ಮಿಶ್ರ ಫಲವೆಂಬದಾಗಿ. ಕರ್ಮದಿಂದುಂಟಾಗುವ ಅನಿಷ್ಟಫಲವು ನರಕಾದಿ ಫಲವು; ಇಷ್ಟವಾದುದು ಸ್ವರ್ಗಾದಿ ಫಲವು; ಮಿಶ್ರವಾದುದು ಪುತ್ರಪೌತ್ರಾದಿ ಧನ ಮೊದಲಾದ ಇಷ್ಟಗಳೊಂದಿಗೆ ಅನಿಷ್ಟವಾದ ದುಃಖದೊಂದಿಗೆ ಸೇರಿದುದು. ಈ ಮೂರು ಫಲಗಳೂ ಸಾತ್ವಿಕ ತ್ಯಾಗವನ್ನು ಹೇಳಿ ಅನುಷ್ಠಿಸಿದವನಿಗೆ ಓ ಕುಂತೀಪುತ್ರನೇ! ಮೋಕ್ಷಾರ್ಥಿಯಾದ ಸಾತ್ವಿಕ ತ್ಯಾಗಿಗಾದರೋ, ಬೀಜವನ್ನು ಹುರಿದುಬಿಟ್ಟ ಹಾಗೆ ಈ ಮೂರು ಫಲಗಳೂ ಇಲ್ಲವು. ಹಾಗಾದರೆ ಅಂತಹ ನಿರರ್ಥಕಗಳಾದವುಗಳ ಅನುಷ್ಠಾನ ತಾನೆ ಏಕೆ? ಎಂದರೆ ದೇಹಧಾರಣಾದಿಗಳು ನಡೆಯಬೇಕಾಗಿರುವದರಿಂದ ಅನುಷ್ಠೇಯಗಳೆಂಬ ಭಾವವು.

೧೩. ಕೆಲವು ಕರ್ಮಗಳು ಅನಿಷ್ಟ ಇಷ್ಟ ಮಿಶ್ರಗಳಾದ ಮೂರು ವಿಧ ಫಲಗಳನ್ನು ಕೊಡು ವಂತಾದ್ದಾಗಿದ್ದರೂ ಮೋಕ್ಷಾರ್ಥಿಯು ಸರ್ವಕರ್ಮಗಳಲ್ಲೂ ಕರ್ತೃತ್ವ ಮಮತಾ ಫಲಗಳನ್ನು ತ್ಯಾಗಮಾಡಿ ನಡೆಸುವದರಿಂದ ಅವು ಬಂಧಕಗಳಾಗುವುದಿಲ್ಲವೆಂದು ಹೇಳಲ್ಪಟ್ಟಿತು. ಆಗಲಿ ಈ ಮೂರನ್ನೂ ತ್ಯಾಗಮಾಡಿದ ಅನುಸಂಧಾನವೇನು ಅಯಥಾರ್ಥವಾದುದೇ ಅಥವಾ ಯಥಾರ್ಥವಾದುದೇ ಎಂಬ ಚರ್ಚೆಯಲ್ಲಿ ಯಥಾರ್ಥವೆಂದು ಹೇಳಲು ಹೊರಟು, ಈ ಅಧಿ

ಕಾರಿಯು ಕಾರ್ಯಕ್ಕೆ ಸಂಪೂರ್ಣ ಕರ್ತಾವಲ್ಲವೆಂದೂ ಐದು ಹೇತುಗಳು ಸೇರಿದರೆ ಒಂದು ಕೆಲಸ ನಡೆಯುತ್ತದೆಂದು ಪ್ರಥಮತಃ ತಿಳಿಸುತ್ತಾರೆ.— ತ್ಯಾಗವನ್ನು ಹೇಳುವದು ಹೇಗೆ ಸತ್ಯವು, ಅದರ ಅನುಸಂಧಾನವು ಹೇಗೆ ಯಥಾರ್ಥವೆಂದರೆ? ಪರಮಪುರುಷನು ಪ್ರತಿಯೊಬ್ಬನ ಶರೀರ ದಲ್ಲೂ ಅಂತರ್ಯಾಮಿಯಾಗಿ ಇರುತ್ತಾನೆ. ನಾವು ಕರ್ಮಸಙ್ಕಲ್ಪವನ್ನು ಮಾಡಿದರೂ ಆತನೇ ನಿಂತು ನಡೆಸಿಕೊಡಬೇಕಾಗಿರುವುದರಿಂದ, ತನ್ನ ಕರ್ತೃತ್ವತ್ಯಾಗವು ಯಥಾರ್ಥವಾದುದೇ, ಆದು ದರಿಂದ ಓ ಬಾಹುಪರಾಕ್ರಮವುಳ್ಳ ಅರ್ಜುನನೇ! ಸಮಸ್ತ ಕರ್ಮಗಳ ಸಿದ್ಧಿಗೂ ಮುಂದೆ ಹೇಳುವ ಐದು ಕಾರಣಗಳೂ ವೇದಶಾಸ್ತ್ರಗಳ ಉಪಬ್ರಹ್ಮಣಗಳಾದ ಉಪನಿಷತ್ತುಗಳಲ್ಲಿ ಹೇಳ ಲ್ಪಟ್ಟವುಗಳಾಗಿ ಅತ್ಯಾವಶ್ಯಕವಾದವುಗಳು. ಅವುಗಳನ್ನು ನನ್ನಿಂದ ಚನ್ನಾಗಿ ಕೇಳಿ ತಿಳಿ.

೧೪. ಆ ಐದು ಕಾರಣಗಳು ಯಾವುವೆಂದರೆ—(೧) ಈ ಚೇತನನಿಗೆ ಆಶ್ರಯವಾದ ಶರೀರವು, ಶರೀರವಿಲ್ಲದಿದ್ದರೆ ಈ ಅಣುವಾದ ಆತ್ಮನು ಏನನ್ನೂ ಮಾಡಲಾರನು (೨) ತಾನೇ ಕರ್ತಾ ಎಂದೆನಿಸುವವನು. ಅಹಂ ಎಂದು ತೋರಿಬರುವ ಜೀವಾತ್ಮಾ. ಶರೀರವನ್ನು ಬಿಟ್ಟು ಹೋಗದೆ ಅಲ್ಲೇ ಇರಬೇಕು. (೩) ಹೀಗೆ ಇವು ಇದ್ದರೂ ಇಂದ್ರಿಯಗಳೂ ಸರಿಯಾಗಿರ ಬೇಕು. (೪) ಪ್ರಾಣವಾಯುಗಳೂ ಈತನ ಚೇಷ್ಟೆಗಳಿಗೆ ಸಹಾಯವಾಗಿರಬೇಕು, ಜ್ಞಾನ ಸಙ್ಕಲ್ಪಯತನಾದಿಗಳು ನಡೆಯಬೇಕು. (೫) ಇವಷ್ಟಕ್ಕೂ ಮೇಲಾದ ಕಾರಣವು ದೈವಸಙ್ಕ ಲ್ಪವು; ಅದು ಮುಖ್ಯವಾಗಿರಬೇಕು.

೧೫. ಹೀಗೆ ಶರೀರ ವಾಕ್ಕು ಮನಸ್ಸುಗಳ ಮೂಲಕ ಮನುಷ್ಯನು ಯಾವ ಕರ್ಮ ವನ್ನು ಅದು ಶಾಸ್ತ್ರವಿಹಿತವಾದುದೇಯಾಗಲಿ ಅದಕ್ಕೆ ವ್ಯತಿರಿಕ್ತವಾದುದೇಯಾಗಲಿ ಆರಂಭಿಸು ವನೋ, ಅದಕ್ಕೆ ಈ ಮೇಲೆ ಹೇಳಿದ ಐದೂ ಕಾರಣಗಳೆಂದು ತಿಳಿ ಇದುದರಿಂದ ಮುಖ್ಯ ವಾಗಿ ಜೀವಾತ್ಮನು ಒಂದು ಕಾರ್ಯಕ್ಕೆ ತಾನೊಬ್ಬನೇ ಕರ್ತಾವಲ್ಲವಾದುದರಿಂದ ಕರ್ತಾ ಎಂಬ ಅನುಸಂಧಾನವು ಕೂಡದು. ಇದರಿಂದಲೇ ತಾನು ಪರಮಾತ್ಮನಿಗೆ ಅಧೀನನಾದ ಕರ್ತಾ ಎಂಬ ಅನುಸಂಧಾನವನ್ನು ಹೊಂದಿ, ಪರಮಾತ್ಮನೇ ಮುಖ್ಯಕರ್ತಾ ಎಂಬ ಭಾವನೆಯಿಂದಲೂ, ಫಲಕರ್ತೃತ್ವ ಮಮತಾ ತ್ಯಾಗಮಾಡಿ ಕರ್ಮವನ್ನು ಭಗವತ್ಪ್ರೀತಿಗಾಗಿ ಮಾಡಲ್ಪಟ್ಟಿತೆಂಬ ಭಾವನೆಯಿಂದಲೂ, ಭಗವಂತನಲ್ಲೇ ಸಮರ್ಪಿಸತಕ್ಕದ್ದು. ಇಬ್ಬರ ಸಙ್ಕಲ್ಪವೂ ಸೇರಿದರೇನೇ ಕಾರ್ಯವೂ ಕಾರ್ಯಸಿದ್ಧಿಯೂ.

೧೬. ಹೀಗೆ ಕಾರ್ಯಕ್ಕೆ ತಾನು ಸ್ವತಂತ್ರಕರ್ತಾವಲ್ಲವೆಂದೂ ಸರ್ವೇಶ್ವರನ ಸಂಕಲ್ಪಕ್ಕೆ ಅಧೀನವಾಗಿ, ಆತನು ಪೂರ್ವಕರ್ಮಾನುಭವಕ್ಕಾಗಿ ದಯಪಾಲಿಸಿದ ಕರಣ ಕಳೇಬರಾದಿಗಳಿ ಗನುಗುಣವಾಗಿ ನಡೆಯುತ್ತದೆಂಬುದು ನಿಶ್ಚಿತವಾಗಿದ್ದರೂ, ಅಂತಹ ಯಥಾವಸ್ಥಿತ ಅಧ್ಯಾತ್ಮ ಶಾಸ್ತ್ರಜ್ಞಾನಶೂನ್ಯನು ಕೇವಲ ತಾನೇ ಸ್ವತಂತ್ರಕರ್ತೃವೆಂದು ಭಾವಿಸಿಕೊಳ್ಳುವನು. ಆತನು ದುರ್ಮತಿಯು ಎಂದರೆ ವಿಪರೀತ ಬುದ್ಧಿಯುಳ್ಳವನು. ಏಕೆಂದರೆ ಆತನಿಗೆ ಅಧ್ಯಾತ್ಮಶಾಸ್ತ್ರ ಜ್ಞಾನವಿಲ್ಲದವನಾದುದರಿಂದ ಯಥಾವತ್ತಾದ ಸ್ವತಂತ್ರಕರ್ತಾ ಯಾರು ಎಂಬುದನ್ನು ತಿಳಿಯ ಲಾರನು.

೧೭. ಹಿಂದಿನ ಶ್ಲೋಕದ ಜ್ಞಾನಶೂನ್ಯನು **ದುರ್ಮತಿಯು** ಎಂದು ಹೇಳಲ್ಪಟ್ಟನು. **ಸನ್ಮತಿಯು** ಯಾವನು ಎಂದರೆ ಹೇಳುತ್ತಾರೆ. — ಅಧ್ಯಾತ್ಮಶಾಸ್ತ್ರಜ್ಞಾನವುಳ್ಳ ಪ್ರಾಜ್ಞ ನಾದರೋ ತಾನು ಸ್ವತಃ ಕರ್ತಾವಲ್ಲವು. ಸ್ವಾಮಿ ಸಂಕಲ್ಪಾನುಸಾರ ನಡೆಯುತ್ತದೆಂಬ ನಿಶ್ಚಯಜ್ಞಾನವುಳ್ಳವನಾಗಿರುವದರಿಂದ, ತಾನೇ ಮಾಡಿದೆ ಎಂಬ ಅಹಂಭಾವವಿಲ್ಲದವನಾಗಿರು

ತ್ತಾನೋ, ಮತ್ತು ಆ ಕಾರಣದಿಂದ ಯಾವನಿಗೆ ಆ ಕರ್ಮವು ಲೇಪಿಸುವದಿಲ್ಲವೋ, ಅಂತವನು ಕೇವಲ ಭೀಷ್ಮ ದ್ರೋಣರನ್ನು ಮಾತ್ರವೇ ಅಲ್ಲದೆ ಈ ಲೋಕವನ್ನೆಲ್ಲಾ ನನ್ನ ಪ್ರೇರಣೆ ಯಿಂದ ಕೊಂದರೂ ಆತನೇನೂ ಕೊಂದ ದೋಷವನ್ನು ಹೊಂದುವದೂ ಇಲ್ಲವು; ಅಂತ ವನಿಗೆ ಪುನಃ ಬಂಧವೂ ಇಲ್ಲವು. ಆದುದರಿಂದ ನೀನೂ ಸಹ ಅಂತಹ ಜ್ಞಾನವುಳ್ಳವನಾಗಿ ಯುದ್ಧಕ್ಕೆ ಸನ್ನದ್ಧನಾಗಬೇಕೆಂಬ ಭಾವವು. ಆದುದರಿಂದ ಭೀಷ್ಮಾದಿಗಳ ಹನನವು ನನ್ನ ಆಜ್ಞೆಯಾಗಿ ನಿನಗೆ ಬಂಧಕವಲ್ಲವು ಎಂಬ ಭಾವವು ಸೂಚಿತವು.

೧೮. ಮೇಲೆ ಹೇಳಿದ ಅಕರ್ತೃತ್ವಾನುಸಂಧಾನವು ಸಾತ್ವಿಕಗುಣವೃದ್ಧಿಯಿಂದಲೇ ಆಗುತ್ತದೆಂದೂ, ಅಂತಹ ಸಾತ್ವಿಕಗುಣವೃದ್ಧಿಯುಳ್ಳ ಸಾತ್ವಿಕಕರ್ಮದ ಲಕ್ಷಣವೆಂದೂ, ಹಾಗೆ ಯೇ ರಾಜಸ ತಾಮಸ ಲಕ್ಷಣಗಳುಳ್ಳ ಕರ್ಮಗಳಿಗಿಂತ ಇದಕ್ಕಿರುವ ವೈಲಕ್ಷಣ್ಯವನ್ನು ಮುಂದೆ ಉಪದೇಶಿಸಲು ಹೊರಟು ಮುಂದಿನ ಎರಡು ಶ್ಲೋಕಗಳಿಂದ ಎಲ್ಲಾ ಕರ್ಮಗಳಲ್ಲಿ ಸಂಕಲ್ಪವು ಉಂಟಾಗುವ ಬಗೆಯನ್ನು ಮೊದಲು ತಿಳಿಸುತ್ತಾರೆ—ಸಾಧಾರಣವಾಗಿ ಕರ್ಮವನ್ನು ಮಾಡ ಬೇಕೆಂಬ ಸಂಕಲ್ಪಕ್ಕೆ ವಿಧಿಯು ಮೂರನ್ನು ಒಳಗೊಂಡಿರುತ್ತದೆ.—(೧) ಮಾಡಬೇಕೆಂದಿರುವ ಕರ್ಮದ ಜ್ಞಾನವೆಂದರೆ ತಿಳುವಳಿಕೆಯು. (೨) ಮಾಡಬೇಕಾದ ಕರ್ಮವು. (೩) ಅಂತಹ ತಿಳುವಳಿಕೆಯುಳ್ಳ ಕರ್ಮವನ್ನು ಮಾಡಬೇಕೆಂದಿರುವ ಅಧಿಕಾರಿಯು; ಎಂದರೆ ಕರ್ಮವಿಷಯ ತಿಳುವಳಿಕೆಯು, ತಿಳಿಯತಕ್ಕ ಕರ್ಮವಿಶೇಷ, ತಿಳಿಯುವವನು ಹೀಗೆ ಮೂರು ವಿಷಯ ಗಳುಂಟು. ಅವುಗಳಲ್ಲಿ ಆ ತಿಳಿಯಬೇಕಾದ ಕರ್ಮದ ವಿಷಯದಲ್ಲೂ ಮೂರಂಶವುಂಟು. ಅವು ಯಾವುವೆಂದರೆ—(೧) ಕರ್ಮಕ್ಕೆ ದ್ರವ್ಯಾದಿ ಸಾಧನಗಳು. (೨) ಯಾಗಾದಿ ಕರ್ಮ ಸ್ವರೂಪವು. (೩) ಕರ್ಮವನ್ನನುಷ್ಠಿಸುವವನು.

೧೯. ಹೀಗೆ ಮೇಲೆ ಹೇಳಿದ ತಿಳಿಯಬೇಕಾದ ಕರ್ತವ್ಯವಿಷಯದ ಜ್ಞಾನವೂ, ಅನು ಷ್ಠಿಸಬೇಕಾದ ಕರ್ಮವೂ, ಅನುಷ್ಠಿಸುವವನೂ ಈ ಮೂರೂ ಸಾತ್ವಿಕ ರಾಜಸ ತಾಮಸ ಗುಣ ಭೇದಗಳಿಂದ ಅಂತಹ ಕರ್ಮಗಳೆಂಬ ಪರಿಗಣನೆಯಲ್ಲಿ ಲಕ್ಷಣಗಳು ಹೇಳಲ್ಪಡುವುವು. ಅವು ಗಳನ್ನು ನೀನು ಯಥಾವತ್ತಾಗಿ ಕೇಳಿ ತಿಳಿಯತಕ್ಕದ್ದು. ಅವು ಜ್ಞಾನ ಮೊದಲಾದವುಗಳಲ್ಲಿ ಹೇಗೆ ವ್ಯತ್ಯಸ್ತವಾದವೆಂದು ಚನ್ನಾಗಿ ತಿಳಿಯತಕ್ಕದ್ದೆಂಬ ಭಾವವು.

೨೦. ಸಾತ್ವಿಕಜ್ಞಾನವೆಂತಾದ್ದೆಂಬುದನ್ನು ಮುಂದೆ ತಿಳಿಸುತ್ತಾರೆ.—ಬ್ರಾಹ್ಮಣ ಕ್ಷತ್ರಿ ಯಾದಿ ವರ್ಣಾಧಿಕಾರಿಗಳಲ್ಲೂ ಬ್ರಹ್ಮಚರ್ಯ, ಗೃಹಸ್ಥ ಮೊದಲಾದ ಆಶ್ರಮಿಗಳಲ್ಲೂ ಹೀಗೆ ವಿಭಾಗಿಸಲ್ಪಟ್ಟ ಎಲ್ಲಾ ಕರ್ಮಾಧಿಕಾರಿಗಳಲ್ಲೂ ಯಾವ ಜ್ಞಾನದಿಂದ ಬೇರೆಬೇರೆಯಾದ ಪರಿ ಣಾಮ ಹೊಂದುವ ಪ್ರತಿ ಶರೀರಗಳಲ್ಲೂ ಭಿನ್ನವಾಗಿರುವ ಆತ್ಮರುಗಳು ವಿಕಾರಹೊಂದುವ ಶರೀರದಲ್ಲಿದ್ದರೂ ಜ್ಞಾನೈಕಾಕಾರತೆಯಿಂದ ಒಂದೇ ವಿಧವಾದ ಸ್ವರೂಪವುಳ್ಳವರನ್ನಾಗಿ ಯಾವ ಅಧಿಕಾರಿಯಿಂದ ಅನುಸಂಧಾನದೊಡನೆ ಫಲಕರ್ತೃತ್ವ ಮಮತಾ ತ್ಯಾಗಪೂರ್ವಕವಾಗಿ ಕರ್ಮವು ಮಾಡಲ್ಪಡುತ್ತದೋ, ಅಂತವನ ಆ ಜ್ಞಾನವು ಸಾತ್ವಿಕವೆಂದು ತಿಳಿ. ಈ ಜ್ಞಾನವು ಮೋಕ್ಷ ಸಾಧಕವು ಎಂಬ ಭಾವವು. ಇದು ೫–೧೮ ರ ಅನುವಾದವು.

೨೧. ಹಾಗಲ್ಲದೆ, ಬ್ರಾಹ್ಮಣಾದಿ ಬ್ರಹ್ಮಚರ್ಯಾದಿ ಬೇರೆಬೇರೆಯಾದ ವರ್ಣಾಶ್ರಮಾಧಿ ಕಾರಿಗಳಲ್ಲಿರುವ ಬೇರೆಬೇರೆಯಾದ ಶರೀರಗಳಲ್ಲಿರುವ ಆತ್ಮರುಗಳೆಲ್ಲಾ ಸ್ವರೂಪತಃ ಕೂಡ ಬೇರೆಬೇರೆಯೇ ಎಂದು ಭಾವಿಸಿ ಬೇರೆಬೇರೆಯಾದ ಫಲಗಳನ್ನನುಭವಿಸಲು ಯೋಗ್ಯರೆಂದು ಕರ್ಮಾಧಿಕಾರ ಉಂಟಾದ ವೇಳೆಯಲ್ಲಿ ಯಾವ ಜ್ಞಾನದಿಂದ ತಿಳಿಯುವರೋ, ಅಂತಹ ಜ್ಞಾನ ವನ್ನು ರಾಜಸವೆಂದು ತಿಳಿ. ಅಂತಹ ಜ್ಞಾನವು ಮೋಕ್ಷಸಾಧಕವಲ್ಲವೆಂಬ ಭಾವವು.

೨೨ ಯಾವ ಜ್ಞಾನವಾದರೋ, ಒಂದೇ ಮಾಡಬೇಕಾದ ಕರ್ಮದಲ್ಲಿ ಅದು ಪ್ರೇತ ಭೂತ ಗಣವೇ ಮೊದಲಾದವುಗಳ ಆರಾಧನರೂಪವಾದುದಾಗಿ ಅತ್ಯಲ್ಪಫಲ ಕೊಡುವದನ್ನೇ ಮಹತ್ಫಲದಾಯಕವೆಂದು ಭಾವಿಸಿ, ಅದರೊಂದಿಗೆ ಶಾಸ್ತ್ರಜ್ಞಾನರೂಪ ಸರಿಯಾದ ಕಾರಣವಿಲ್ಲ ದೆಯೂ ಮತ್ತು ಹಿಂದಿನ ರಾಜಸಿಯ ಹಾಗೆಯೇ ಆತ್ಮಾವೆಲ್ಲರೂ ಸ್ವರೂಪತಃ ಬೇರೆಬೇರೆ ಯೆಂದೇ ಭಾವಿಸುವ ಅಂತಹ ಕರ್ಮದಲ್ಲಿ ಸಂಗವನ್ನಿಟ್ಟಿರುವ ಮತ್ತು ಯಥಾರ್ಥವಾದ ಪ್ರಯೋ ಜನವೇನೂ ಇಲ್ಲದೆ ಪ್ರೇತಭೂತಾರಾಧನೆ ರೂಪವಾದುದರಿಂದ ಅಲ್ಪಫಲದಾಯಕವಾದುದೋ, ಅಂತಹ ಜ್ಞಾನವು ತಾಮಸವೆನಿಸುತ್ತದೆ ಈ ಜ್ಞಾನವು ಮೋಕ್ಷಪ್ರಾಪ್ತಿಗೆ ಇನ್ನೂ ದೂರತರ ವಾದುದು.

೨೩. ಹೀಗೆ ಮಾಡಬೇಕಾದ ಕರ್ಮದ ಆರಂಭ ದೆಶೆಯಲ್ಲಿ ಅಧಿಕಾರಿಯ ಜ್ಞಾನವು ಸಾತ್ವಿಕ ರಾಜಸ ತಾಮಸವೆಂದು ಮೂರುವಿಧವೆಂದೂ ಸಾತ್ವಿಕಜ್ಞಾನವೇ ನಿರತಿಶಯಫಲ ದಾಯಕವೇ ವಿನಾ ರಾಜಸ ತಾಮಸ ಜ್ಞಾನಗಳಿಗೆ ಅಶಾಶ್ವತ ಫಲಗಳೆಂದು ಹೇಳಲ್ಪಟ್ಟಿತು. ಮುಂದೆ ಕರ್ಮವೂ ತದನುಗುಣವಾಗಿ ಮೂರು ವಿಧವೆಂದು ಮೂರು ಶ್ಲೋಕಗಳಿಂದ ಹೇಳು ತ್ತಾರೆ. ತನ್ನ ವರ್ಣಾಶ್ರಮ ಧರ್ಮಕ್ಕೆ ಅನುಗುಣವಾದ ನಿತ್ಯನೈಮಿತ್ತಿಕಾದಿ ಕರ್ಮಗಳನ್ನು ಫಲಾದಿಗಳ ಕಾಮನೆ ಇಲ್ಲದಿರುವ ಅಧಿಕಾರಿಯಿಂದ ಕರ್ತೃತ್ವ ಮಮತಾ ರಹಿತವಾಗಿ ರಾಗ ದ್ವೇಷಾದಿಗಳಿಲ್ಲದೆ ವಿಧ್ಯನುಸಾರ ಮಾಡತಕ್ಕದ್ದು ಎಂಬ ಭಾವದಿಂದ ಅನುಷ್ಠಿಸಲ್ಪಟ್ಟ ಯಾವ ಕರ್ಮ ಉಂಟೋ ಅದು ಮೋಕ್ಷಸಾಧಕವಾಗಿ ಸಾತ್ವಿಕವೆನಿಸುತ್ತದೆ.

೨೪. ಹಾಗಲ್ಲದೆ, ಫಲಾಪೇಕ್ಷೆಯುಳ್ಳ ಅಧಿಕಾರಿಯಿಂದ ಬಹು ಪ್ರಯಾಸವುಳ್ಳ ಆ ಕಾರಣದಿಂದ ತಾನೇ ಸರ್ವವನ್ನೂ ನಿರ್ವಹಿಸಿರುತ್ತೇನೆಂಬ ಅಹಂಕಾರದಿಂದ ಕೂಡಿದ ಮತ್ತು ಕರ್ತೃತ್ವಾಭಿಮಾನದಿಂದ ಕೂಡಿದ, ಯಾವ ಕರ್ಮವು ಮಾಡಲ್ಪಡುತ್ತದೋ, ಅದು ರಾಜಸ ವೆಂದು ಹೇಳಲ್ಪಟ್ಟಿತು. ಅಂತಹ ಕರ್ಮವು ಬಂಧಕವೆಂಬ ಭಾವವು.

೨೫. ತಾಮಸಕರ್ಮಲಕ್ಷಣವು ಹೇಳಲ್ಪಡುತ್ತದೆ. ಮಾಡಬೇಕೆಂದಿರುವ ಕರ್ಮದ ವಿಷಯದಲ್ಲಿ ಯಾವ ಕ್ಲೇಶಗಳಿವೆ, ಅದಕ್ಕೆ ಎಷ್ಟರಮಟ್ಟಿಗೆ ದ್ರವ್ಯಾದಿಗಳ ಖರ್ಚು ಬೇಕು, ಕೆಲಸ ನಡೆಯುವಾಗ ಪ್ರಾಣಿಗಳಿಗುಂಟಾಗುವ ತೊಂದರೆ ಏನು, ಕಾರ್ಯವನ್ನು ಮುಗಿಸುವದಕ್ಕೆ ಸಾಮರ್ಥ್ಯ ಎಷ್ಟಿರಬೇಕು, ಇಷ್ಟೆಲ್ಲಾ ವಿಮರ್ಶಿಸಿ ತಿಳಿಯದೆ ಆ ಪರಮಪುರುಷನ ಅನುಗ್ರಹ ಬೇಕೆಂಬ ಜ್ಞಾನವಿಲ್ಲದೆ ಮೋಹ ಬುದ್ಧಿಯಿಂದ ಯಾವ ಕರ್ಮವು ಮಾಡಲ್ಪಡುತ್ತದೋ, ಅದು ತಾಮಸಕರ್ಮವೆನಿಸುತ್ತದೆ. ಅಂತಹ ಕರ್ಮವು ಅನಿಷ್ಟಫಲದಾಯಕವೆಂಬ ಭಾವವು.

೨೬. ಹಾಗೆಯೇ ಅಧಿಕಾರಿಯಾದ ಕರ್ತಾ ಸಹ ಸಾತ್ವಿಕ ರಾಜಸ ತಾಮಸ ಎಂದು ಮೂರು ವಿಧವೆಂದು ಹೇಳುತ್ತಾರೆ ಫಲಸಙ್ಗರಹಿತನಾಗಿಯೂ, ಕರ್ತೃತ್ವಾಭಿಮಾನರಹಿತ ನಾಗಿಯೂ, ಪ್ರಾರಂಭಿಸಿದ ಕರ್ಮದಲ್ಲಿ ಕರ್ಮವು ಪೂರೈಸುವವರೆಗೂ ಕಷ್ಟಗಳನ್ನೆಲ್ಲ ಸಹಿಸಿಕ್ಕೊಂಡು ಉತ್ಸಾಹಯುಕ್ತನಾಗಿ, ಯುದ್ಧಾದಿ ಕರ್ಮದಲ್ಲೂ ಇತರ ಮಾಡಬೇಕಾದ ಕರ್ಮದಲ್ಲೂ ಫಲ ಸಿದ್ಧಿಸಲಿ ಸಿದ್ಧಿಸದಿರಲಿ ಮನೋವಿಕಾರ ರಹಿತನಾಗಿ ಯಾವನು ವಿಹಿತಕರ್ಮವನ್ನು ಆಚರಿ ಸುವನೋ, ಆತನು ಸಾತ್ವಿಕಕರ್ತಾವೆನಿಸುವನು. ಅಂತವನು ಸರ್ವಶ್ರೇಯಸ್ಸನ್ನೂ ಹೊಂದುವನು.

೨೭. ಹಾಗಲ್ಲದೆ ಯಶಸ್ಸನ್ನೂ ಅಪೇಕ್ಷಿಸುವವನಾಗಿ, ತಾನು ಮಾಡುವ ಕರ್ಮಫಲವನ್ನು ಹೊಂದಬೇಕೆಂಬ ಆಶೆಯುಳ್ಳವನಾಗಿ, ಕರ್ಮಕ್ಕೆ ಬೇಕಾದ ದ್ರವ್ಯವನ್ನು ಸತ್ಪಾತ್ರದಲ್ಲಿ ವಿನಿಯೋ ಗಿಸಲು ಇಷ್ಟವಿಲ್ಲದವನಾಗಿ, ತನ್ನನ್ನು ನಂಬಿದ ಭಾರ್ಯಾಪುತ್ರ ಸಂಬಂಧಿಜನ ಸೇವಕಜನರನ್ನೇ

ಲ್ಲಾ ಹಿಂಸಿಸಿ ಕೆಲಸ ನಡೆಸುವವನಾಗಿ, ಕರ್ಮಕ್ಕೆ ಬೇಕಾದ ಮನಸ್ಸಿನ ನೈರ್ಮಲ್ಯ, ಆಹಾರದ ಶುಚಿ, ದೇಹದ ಸ್ನಾನಾದಿ ಪವಿತ್ರತೆ ಇಲ್ಲದವನಾಗಿ ಯುದ್ಧಾದಿ ಇತರ ಕರ್ಮಗಳಲ್ಲೂ ಫಲಸಿದ್ಧಿ ಅಸಿದ್ಧಿಗಳಲ್ಲಿ ಹರ್ಷಶೋಕಗಳಿಂದ ಕೂಡಿದವನಾಗಿ ಕರ್ಮವನ್ನೆಸಗುವ ಕರ್ತಾ ರಾಜಸನೆಂದು ಹೇಳಲ್ಪಡುವನು

೨೮. ತಾಮಸಾಧಿಕಾರಿಯ ಲಕ್ಷಣವನ್ನು ಹೇಳುತ್ತಾರೆ.— ಶಾಸ್ತ್ರೀಯಕರ್ಮ ಮಾಡಲು ಅಯೋಗ್ಯನಾಗಿಯೂ ಎಂದರೆ ಶಾಸ್ತ್ರಕ್ಕೆ ವಿರುದ್ಧವಾದ ಕರ್ಮಗಳನ್ನು ಅನುಷ್ಠಿಸುವನಾಗಿಯೂ, ಬ್ರಹ್ಮವಿದ್ಯೆಗೆ ಬೇಕಾದ ಒಳ್ಳೇ ಜ್ಞಾನವನ್ನು ಹೊಂದದವನಾಗಿಯೂ. ಪೂಜ್ಯರನ್ನು ಸೇರಿ ಪ್ರಣಾಮಾದಿಗಳನ್ನು ಮಾಡಿ ಉಪದೇಶ ಹೊಂದಲು ಇಷ್ಟವಿಲ್ಲದವನಾಗಿಯೂ, ಗೂಢವಾಗಿ ಅಭಿಚಾರಾದಿ ಕರ್ಮಗಳ ಮೂಲಕ ಇತರರಿಗೆ ಕೆಟ್ಟದ್ದನ್ನು ಬಯಸುವವನಾಗಿಯೂ, ಲೌಕಿಕ ವ್ಯಾಪಾರಗಳಲ್ಲಿ ಇತರರಿಗೆ ವಂಚನೆಯನ್ನು ಮಾಡುವ ಸ್ವಭಾವನಾಗಿಯೂ, ಆರಂಭಿಸಿದ ಕೆಲಸ ಗಳಲ್ಲಿ ಉತ್ಸಾಹ ಶ್ರದ್ಧಾ ಇಲ್ಲದೆ ಮಂದಪ್ರವೃತ್ತಿಯುಳ್ಳವನಾಗಿಯೂ, ಹೆಚ್ಚಾದ ದೈನ್ಯವನ್ನು ಹೊಂದಿದವನಾಗಿಯೂ, ಇತರರಿಗೆ ದೀರ್ಘಕಾಲ ಕೆಟ್ಟದ್ದನ್ನೇ ಬಯಸುವ ಶೀಲವುಳ್ಳವನಾಗಿ ಯೂ, ಇರುವ ಕರ್ತಾ ಯಾರೋ ಆತನು ತಾಮಸೀ ಎಂದು ಹೇಳಿಸಿಕೊಳ್ಳುವನು.

೨೯. ಹೀಗೆ (೧) ಮಾಡಬೇಕಾದ ಕಾರ್ಯದ ಜ್ಞಾನ ವಿಷಯದಲ್ಲೂ (೨) ಮಾಡಬೇಕಾದ ಕರ್ಮದಲ್ಲೂ (೩) ಕರ್ಮವನ್ನು ಅನುಷ್ಠಿಸುವ ಕರ್ತಾವಿನಲ್ಲೂ ಗುಣಭೇದದಿಂದ ಮೂರು ವಿಧ ವೆಂದು ಹೇಳಿ ಮುಂದೆ ಸರ್ವತತ್ವ ಮತ್ತು ಸರ್ವಪುರುಷಾರ್ಥಗಳನ್ನು ನಿಶ್ಚಯಿಸುವ ಬುದ್ಧಿಯ ವಿಷಯದಲ್ಲೂ, ಆರಂಭಿಸಿದ ಕರ್ಮವನ್ನು ವಿಘ್ನಗಳು ಬಂದರೆ ಹಿಡಿದು ಸಾಧಿಸುವ ಧೃತಿಯಲ್ಲೂ, ಗುಣಭೇದದಿಂದುಂಟಾಗುವ ಮೂರು ವಿಧಗಳನ್ನು ಉಪದೇಶಿಸುತ್ತಾರೆ.—ತತ್ವಹಿತಗಳ ವಿಷಯ ದಲ್ಲಿ ವಿವೇಕದಿಂದ ನಿಶ್ಚಯಿಸಿ ತಿಳಿಯುವ ಜ್ಞಾನದಲ್ಲಿರುವ ಮೂರು ಭೇದವನ್ನೂ ಮತ್ತು ಕರ್ಮಗಳನ್ನೂ ಹಿಡಿದು ನಿರ್ವಹಿಸುವ ಧೃತಿಯಲ್ಲಿರುವ ಭೇದವನ್ನು ಸಾತ್ವಿಕ ರಾಜಸ ತಾಮಸ ಗುಣಗಳಿಂದ ಹೇಗೆ ಮೂರು ವಿಧವಾಗಿ ವ್ಯತ್ಯಾಸವಾಗುತ್ತವೋ, ಓ ಧನಂಜಯನೇ ನಿನಗೆ ಸಂಪೂರ್ಣವಾಗಿ ಅವನ್ನೆಲ್ಲಾ ನಿಶ್ಶೇಷವಾಗಿ ಬೇರೆಬೇರೆಯಾಗಿ ಉಪದೇಶಿಸುವೆನು ಕೇಳು.

೩೦. ಐಹಿಕ ಸುಖಗಳಿಗೂ ಸ್ವರ್ಗಾದಿ ಭೋಗಗಳಿಗೂ ಸಾಧನವಾದ ಪ್ರವೃತ್ತಿಧರ್ಮ ಲಕ್ಷಣವನ್ನೂ ಮೋಕ್ಷಸಾಧನಭೂತವಾದ ನಿವೃತ್ತಿಧರ್ಮದ ಲಕ್ಷಣವನ್ನು ಯಥಾವತ್ತಾಗಿ ಯಾವ ವಿವೇಕಜ್ಞಾನವು ತಿಳಿಯುತ್ತದೋ, ಸಮಸ್ತ ವರ್ಣದವರಿಗೂ ಪ್ರವೃತ್ತಿ ನಿವೃತ್ತಿರೂಪ ಧರ್ಮಗಳಲ್ಲಿ ದೇಶಕಾಲಾವಸ್ಥೆಗಳಿಗೆ ಅನುಗುಣವಾಗಿ ಇದನ್ನು ಮಾಡತಕ್ಕದ್ದು ಇದನ್ನು ಮಾಡ ತಕ್ಕದ್ದಲ್ಲವೆಂದು ವಿವೇಕಿಸಿ ಯಾವ ಜ್ಞಾನವು ತಿಳಿಯುತ್ತದೋ, ಶಾಸ್ತ್ರಾನುಗುಣವಾಗಿ ನಡೆ ಯದೇ ಇರುವದರಿಂದ ಭಗವನ್ನಿಗ್ರಹರೂಪಭಯ ಉಂಟೆಂದೂ, ಶಾಸ್ತ್ರಾನುಗುಣವಾಗಿ ನಡೆ ಯುವದರ ಮೂಲಕವಾಗಿ ಭಗವದನುಗ್ರಹರೂಪವಾದ ಅಭಯ ಉಂಟೆಂದೂ, ಯಾವ ಬುದ್ಧಿ ಯು ತಿಳಿಯುತ್ತದೋ ಅಂತಹ ಬುದ್ಧಿಯನ್ನು ಸಾತ್ವಿಕವೆಂದು ತಿಳಿ.

೩೧. ಯಾವ ಬುದ್ಧಿಯಿಂದ ಪೂರ್ವೋಕ್ತವಾದ ಪ್ರವೃತ್ತಿ ನಿವೃತ್ತಿರೂಪ ಧರ್ಮಗಳಲ್ಲಿ ಯಾವುದು ಹೇಗೆ ನಡಿಸಿದರೆ ಬಂಧಕವು ಯಾವುದು ಮೋಕ್ಷದಾಯಕವೆಂದು ತಿಳಿಯದೆ ದೇಶ ಕಾಲಾವಸ್ಥೆಗಳಲ್ಲಿ ಹೇಗೆ ನಡೆಸತಕ್ಕದ್ದು, ಹೇಗೆ ಕೂಡದು ಎಂಬ ಯಥಾರ್ಥಜ್ಞಾನವಿಲ್ಲವೋ ಅಂತಹ ಬುದ್ಧಿಯು ರಾಜಸೀ ಎನಿಸುತ್ತದೆ

೩೨. ತಾಮಸಬುದ್ಧಿ ಎಂತಾದ್ದೆಂದರೆ ಹೇಳುತ್ತಾರೆ —ತಾಮಸಗುಣಾಧಿಕ್ಯದಿಂದ ಎಲ್ಲ ವನ್ನೂ ವಿಪರೀತವಾಗಿ ಎಂದರೆ ವ್ಯತ್ಯಸ್ತವಾಗಿ ತಿಳಿಯುತ್ತದೆ. ಆದಕ್ಕೆ ಅಧರ್ಮವೇ ಧರ್ಮವು,

ಧರ್ಮವೇ ಅಧರ್ಮವು; ಇರುವದನ್ನು ಇಲ್ಲವೆಂದು ಹೇಳುವದು; ಇಲ್ಲದುದನ್ನು ಇದೆ ಎಂದು ಸಾಧಿಸುವದು. ಪರತತ್ವವು ಅವರ ತತ್ವವೆಂದೂ, ಅವರ ತತ್ವವನ್ನು ಪರತತ್ವವೆಂಬ ಭಾವನೆಯುಳ್ಳ ಭಯ, ಶೋಕ, ವಿಷಾದಗಳೇ ಮೊದಲಾದ ಹೀಗೆ ಭಾವಿಸುವ ಬುದ್ಧಿಯು ತಾಮಸವು. ಇದರಿಂದ ಬಾಹ್ಯ ಕುದೃಷ್ಟಿಗಳ ಮತವು ದೂಷಿತವೆಂದು ಶ್ರೀ ನಿಗಮಾಂತರ ಅಭಿಪ್ರಾಯವು.

೩೩. ಧೃತಿಯೂ ಎಂದರೆ ಸಂಕಲ್ಪಿಸಿ ಪ್ರಾರಂಭಿಸಿದುದನ್ನು ಹಿಡಿದು ನಡೆಸುವದೂ ಸಹ ಮೂರು ವಿಧವೆಂದು ಹೇಳುತ್ತಾರೆ — ಪುರುಷನು ಹಿಡಿದುದನ್ನು ನಡೆಸಿಯೇ ತೀರಬೇಕೆಂಬ ಪ್ರತಿಜ್ಞೆಯನ್ನು, ಮನಸ್ಸು, ಪ್ರಾಣ ಇಂದ್ರಿಯಗಳ ವ್ಯಾಪಾರಗಳನ್ನು ನಿರೋಧಿಸಿ, ವಶದಲ್ಲಿಟ್ಟುಕೊಂಡು ಮೋಕ್ಷಸಾಧನಭೂತವಾದ ಉಪಾಸನದಲ್ಲೇ ನಿಲ್ಲಿಸಿ, ವಿಷಯಾದಿ ಸುಖಗಳಲ್ಲಿ ಪ್ರವರ್ತಿಸದ ಹಾಗೆ ನೋಡಿ ಅವ್ಯಭಿರತ ಐಕಾಗ್ರ್ಯಚಿತ್ತದಿಂದ ಪರಮಾತ್ಮಧ್ಯಾನದಲ್ಲೇ ಇರುವಹಾಗೆ ಮಾಡುತ್ತಾನೋ, ಅಂತಹ ಧೃತಿಯು ಸಾತ್ವಿಕವೆನಿಸುತ್ತದೆ.

೩೪. ರಾಜಸಧೃತಿಗೆ ಮೋಕ್ಷಾಕಾಂಕ್ಷೆ ಇಲ್ಲವು; ಧರ್ಮಾರ್ಥಕಾಮಗಳಲ್ಲಿ ಸಕ್ತನಾಗಿ ಪುರುಷನು ಅಂತಹ ಫಲಗಳನ್ನು ಹೊಂದುವದಕ್ಕಾಗಿ, ಮನಃಪ್ರಾಣೇಂದ್ರಿಯಗಳ ಕ್ರಿಯೆಯುಳ್ಳವನಾಗಿ, ವಿಶೇಷವಾಗಿ ಅವುಗಳಲ್ಲೇ ಸಕ್ತನಾಗಿ ಹಿಡಿದು ನಡೆಸುವ ಯಾವ ಧೃತಿಯುಂಟೋ ಅದು ರಾಜಸವೆನಿಸುತ್ತದೆ.

೩೫. ಯಾವ ಪುರುಷನು ಸ್ವಪ್ನ ಸುಷುಪ್ತಿ ಭಯವೇನು, ಬಂಧು ಪುತ್ರ ಮೊದಲಾದವರಿಂದುಂಟಾಗುವ ಶೋಕವೇನು, ಧನಾದಿಗಳ ಮೂಲಕವಾಗಿ ಬರುವ ವಿಷಾದವೇನು, ಇಂತವುಗಳನ್ನುಂಟುಮಾಡುವ ಮನಃಪ್ರಾಣೇಂದ್ರಿಯ ಕರ್ಮಗಳನ್ನು ಸರಿಯಾದ ಪ್ರಜ್ಞೆಯಿಲ್ಲದವನಾದುದರಿಂದ ಇಂತಹ ಕೆಟ್ಟ ಫಲವನ್ನು ಕೊಡುವದರಿಂದ ಅವುಗಳನ್ನು ಬಿಟ್ಟುಬಿಡದೆ ಯಾವ ಧೃತಿಯಿಂದ ಅದನ್ನೇ ಸಾಧಿಸುವನೋ ಅಂತಹ ಧೃತಿಯು, ಓ ಪಾರ್ಥನೇ, ತಾಮಸವೆಂದು ಹೇಳಲ್ಪಡುತ್ತದೆ.

೩೬. ಹಿಂದೆ ಜ್ಞಾನಕರ್ಮಕರ್ತಾ ಬುದ್ಧಿಧೃತಿಗಳು ಸಾತ್ವಿಕ ರಾಜಸ ತಾಮಸ ಗುಣಭೇದಗಳಿಂದ ಮೂರು ಮೂರು ವಿಧಗಳೆಂದು ಹೇಳಿ, ಅವುಗಳಿಂದುಂಟಾದ ಸುಖವೂ ಕೂಡ ಆ ಕಾರಣಗಳಿಂದಲೇ ಮೂರು ವಿಧವೆಂದು ಮುಂದೆ ಹೇಳುತ್ತಾರೆ. ಓ ಭರತಕುಲ ಶ್ರೇಷ್ಠನಾದ ಅರ್ಜುನನೇ, ನಿನಗೆ ಪರಮಹಿತೋಪದೇಶವನ್ನು ಮಾಡುತ್ತಿರುವ ನನ್ನಿಂದಲೇ ಹಿಂದೆ ಹೇಳಿದವುಗಳಿಂದುಂಟಾಗುವ ಸುಖವೂ ಕೂಡ ಮೂರು ವಿಧವೆಂದು ವಿಭಾಗಿಸಿ ಹೇಳುವೆನು; ಚೆನ್ನಾಗಿ ಕೇಳು. ಯಾವ ಸುಖದಲ್ಲಿ ಕರ್ಮಯೋಗ ಭಕ್ತಿಯೋಗಗಳಲ್ಲಿನ ಧ್ಯಾನದಿಂದ ಕ್ರಮೇಣ ಆನಂದದಿಂದ ರಮಿಸಬಹುದೋ ಮತ್ತು ಸಾಂಸಾರಿಕ ದುಃಖದ ಕೊನೆಯನ್ನು ಹೊಂದಬಹುದೋ, ಅಂತಹ ಸುಖದ ಸ್ವರೂಪವನ್ನು ತಿಳಿಸುವೆನು.

೩೭. ಆ ಸುಖವೆಂಥಾದ್ದೆಂಬುದನ್ನು ವಿಶೇಷಿಸಿ ತಿಳಿಸುತ್ತಾರೆ — ಯಾವ ಸುಖವು ಕರ್ಮಯೋಗದ ಮೂಲಕ ಭಕ್ತಿಯೋಗಾರಂಭ ದೆಶೆಯಲ್ಲೇ ಬಹು ಆಯಾಸದಿಂದ ಸಾಧ್ಯವಾದುದಾಗಿ ಅಂತಹ ಆತ್ಮಸ್ವರೂಪಾನುಸಂಧಾನವು ಇನ್ನೂ ಉಂಟಾಗದೇ ಇರುವದರಿಂದಲೂ, ಮಂದಪ್ರಜ್ಞತೆಯಿಂದ ದುಃಖವಾಗಿ ತೋರುವದರ ಮೂಲಕ ವಿಷದ ಹಾಗೂ ಅನಂತರ ತನ್ನ ಪ್ರಕೃತಿವಿಯುಕ್ತ ದೆಶೆಯಲ್ಲಿ ಸ್ವಸ್ವರೂಪಾವಿರ್ಭಾವ ಉಂಟಾಗಿ ಜನನ ಮರಣಾದಿ ದುಃಖಗಳೆಲ್ಲಾ ಕಳೆದುಹೋಗುವುವೆಂಬ ಅನುಸಂಧಾನದಿಂದ ಅವ್ಯತದಹಾಗೆ ಭೋಗ್ಯಭೂತವಾಗಿಯೂ, ಹೀಗೆ ತನ್ನ ಆತ್ಮಕ್ಕೆ ಸಂಬಂಧಿಸಿದ ಬುದ್ಧಿಪ್ರಸನ್ನತೆಯಿಂದುಂಟಾಗುವ ಸುಖವು ಸಾತ್ವಿಕಸುಖವೆನಿಸುತ್ತದೆ. ಇದು ಪ್ರಸನ್ನನ ಸುಖವು.

೩೮. ವಿಷಯಗಳನ್ನನುಭವಿಸುವ ವೇಳೆಯಲ್ಲಿ ವಿಷಯಗಳಿಗೂ ಇಂದ್ರಿಯಗಳಿಗೂ ಸಂಯೋಗ ಉಂಟಾಗುವದರಿಂದ ಯಾವ ಸುಖವು ಅಮೃತದಹಾಗೆ ಭೋಗ್ಯಭೂತವಾಗಿಯೂ ಅನಂತರ ಪರಿಣಾಮದಲ್ಲಿ ಸುಖಾನುಭವ ತೀರಿದ ನಂತರ ವಿಷದಹಾಗೆ ಕ್ಲೇಶಕರವಾಗಿ ತೋರುತ್ತದೋ, ಅಂತಹ ಸುಖವು ರಾಜಸವೆನಿಸುತ್ತದೆ. ಇದು ಬುಭುಕ್ಷುವಿನ ಸುಖವು.

೩೯. ತಾಮಸಸುಖಲಕ್ಷಣವನ್ನು ತಿಳಿಸುತ್ತಾರೆ.—ಹಿಂದಿನ ರಾಜಸ ಸುಖದ ಹಾಗಲ್ಲದೆ ವಿಷಯಾನುಭವ ಕಾಲದಲ್ಲೂ ಪರಿಣಾಮ ಕಾಲದಲ್ಲೂ ಸಹ ತನಗೆ ಮೋಹಜ್ಞಾನಕ್ಕೆ ಕಾರಣವಾಗಿ ನಿದ್ರಾ ಆಲಸ್ಯ ಪ್ರಮಾದಗಳಿಂದುಂಟಾದುದಾಗಿ ಯಾವ ಸುಖವಿರುತ್ತದೋ, ಅದು ತಾಮಸಸುಖವೆನಿಸುತ್ತದೆ. ಇಂತಹ ದುಃಸ್ಥಿತಿಯಿಂದ ತಪ್ಪಿಸಿಕೊಳ್ಳುವದು ತುಂಬಾ ಕಷ್ಟವೆಂಬ ಭಾವವು. ಭಂಗೀ, ಮದ್ಯ ಮೊದಲಾದವುಗಳಿಂದಲೂ, ಸ್ತ್ರೀ ಕಾಮಾತುರಾವಸ್ಥೆಯಿಂದಲೂ ಉಂಟಾದ ಸುಖಗಳು ಈ ತರಗತಿಗೆ ಸೇರಿದವು. ಇದು ಕೆಟ್ಟ ಅಭ್ಯಾಸದಿಂದ ಬಂದ ಸುಖವು. ದುರ್ಗತಿಗೆ ಕಾರಣವು. ಹೀಗೆ ಸಾತ್ವಿಕ ರಾಜಸ ತಾಮಸ ಸುಖಗಳ ನಿರೂಪಣೆಯಿಂದ, ಸಾತ್ವಿಕ ಸುಖವೇ ಉಪಾದೇಯವೇ ವಿನಾ, ರಾಜಸ ತಾಮಸ ಸುಖಗಳಲ್ಲವೆಂದು ಹೇಳಿದರು.

೪೦. ಈ ಸತ್ವರಜಸ್ತಮೋಗುಣಗಳಿಂದುಂಟಾಗುವ ಜ್ಞಾನಕರ್ಮಕರ್ತಾ ಬುದ್ಧಿ ಧೃತಿ ಸುಖಗಳಲ್ಲಿ ತಾರತಮ್ಯ ಉಂಟೆಂದು ಹೇಳಿ ನಿಗಮನ ಮಾಡುವ ಸಂದರ್ಭದಲ್ಲಿ ಸಂಗ್ರಹಿಸುತ್ತಾರೇನೆಂದರೆ—ಈ ಲೋಕದ ಮನುಷ್ಯಾದಿ ಪ್ರಾಣಿಗಳಲ್ಲೇಯಾಗಲಿ, ನಮ್ಮಹಾಗೆ ಚತುರ್ಮುಖ ಮೊದಲುಗೊಂಡು ಕ್ರಿಮಿ ಕೀಟಗಳ ವರೆಗೂ ಎಲ್ಲಾ ಪ್ರಾಣಿವರ್ಗದಲ್ಲೂ ಯಾವ ಒಬ್ಬ ಚೇತನನೇಯಾಗಲಿ, ಈ ಪ್ರಕೃತಿ ಸಂಬಂಧದ ಸತ್ವರಜಸ್ತಮೋಗುಣಗಳ ತಾರತಮ್ಯದಿಂದ ಬಿಡಲ್ಪಟ್ಟವರಾಗಿರಲು ಸಾಧ್ಯವೇ ಇಲ್ಲವು. ಬಿಡುಗಡೆಯಾದರೋ ಉಪಾಯಾನುಷ್ಠಾನದ ಮೂಲಕ ಆತನನ್ನು ಆಶ್ರಯಿಸಿ ಅರ್ಚಿರಾದಿ ಮಾರ್ಗದಲ್ಲಿ ಹೋಗಿ ವಿರಜಾನದಿಯಲ್ಲಿ ಅವಗಾಹನೆಯಾದ ನಂತರ ಈ ತ್ರಿಗುಣಗಳಿಂದ ಬಿಡುಗಡೆಯೇ ವಿನಾ, ಅದಕ್ಕೆ ಮುಂಚಿತವಾಗಿ ಇಲ್ಲವು. ಇದರಿಂದ ಸ್ವರ್ಗದಲ್ಲಿರುವ ದೇವತೆಗಳೂ ಕೂಡ ನಮ್ಮ ಹಾಗೆ ತ್ರಿಗುಣಭೇದಯುಕ್ತರಾಗಿ ಬದ್ಧರೆಂದು ಹೇಳಲ್ಪಟ್ಟಿತು. ಈ ಗುಣ ಪ್ರವೃತ್ತ್ಯಾದಿ ಭೇದಗಳಿಂದ ಪ್ರಾಣಿಜಾತರೆಲ್ಲಾ ಸ್ವಭಾವತಃ ಭಿನ್ನರೇ ವಿನಾ ಸಮತ್ವವಿಲ್ಲವೆಂದು ಹೇಳಿದಂತಾಯಿತು.

೪೧. ಪ್ರಥಮತಃ ಈ ಅಧ್ಯಾಯದಲ್ಲಿ ತ್ಯಾಗ ಕರ್ಮಸನ್ಯಾಸ ಒಂದೇ ಅರ್ಥವುಳ್ಳವೆಂದೂ, ಅದು ಮಾಡತಕ್ಕ ಕೆಲಸದಲ್ಲೇ ತನ್ನ ಕರ್ತೃತ್ವ, ಫಲ, ತನ್ನ ಕರ್ಮವೆಂಬ ಮೂರು ವಿಧ ಅಭಿಮಾನವನ್ನು ಬಿಟ್ಟು ಪರಮಾತ್ಮನಲ್ಲಿ ಅದರ ಸಮರ್ಪಣೆಯೆಂದೂ, ತಾನೇ ಕರ್ಮವನ್ನು ಮಾಡಿಯೂ ತನ್ನ ಕರ್ತೃತ್ವದ ಅನುಸಂಧಾನ ಕೂಡದೆಂದು ಹೇಳಿರುವದು ಪರಮಪುರುಷನ ಕರ್ತೃತ್ವವಿಲ್ಲದೆ ನಡೆಯುವುದಿಲ್ಲವೆಂದು ಹೇಳಲ್ಪಟ್ಟಿತು. ಅನಂತರ ಹೀಗೆ ಗುಣತಾರತಮ್ಯದಿಂದ ಸಮಸ್ತ ಬದ್ಧರಿಗೂ ಇರುವ ತಾರತಮ್ಯವನ್ನು ಹೇಳಿ ಸಾತ್ವಿಕವೇ ಉಪಾದೇಯವೆಂದು ತಿಳಿಸಿದರು. ಈಗ ಇಂತಹ ಗುಣಕರ್ಮ ಭೇದದಿಂದ ನಾಲ್ಕಾಗಿ ವಿಭಾಗಿಸಿ ಹೇಳಿದ ವರ್ಣಾಶ್ರಮಿಗಳಿಗಿರುವ ಶಾಸ್ತ್ರವಿಹಿತವಾದ ಕರ್ಮವ್ಯತ್ಯಾಸಗಳು ಮುಂದೆ ವಿವರಿಸಲ್ಪಟ್ಟು ಅವು ಹೇಗೆ ಪರಮಪುರುಷಾರಾಧನ ರೂಪವನ್ನು ಹೊಂದುತ್ತದೆಂಬುದನ್ನು ತಿಳಿಸುತ್ತಾರೆ. ಬ್ರಾಹ್ಮಣ ಕ್ಷತ್ರಿಯ ವೈಶ್ಯರುಗಳ ಸ್ವಭಾವವು ಎಂದರೆ ಅವರುಗಳ ಸ್ವಕೀಯವಾದ ಆಯಾ ಜನ್ಮಗಳಿಗೆ ಕಾರಣಭೂತವಾದ ಪ್ರಾಚೀನಕರ್ಮವು ಎಂದರೆ ಸತ್ವರಜಸ್ತಮೋಗುಣಗಳ ಆಧಿಕ್ಯವಿರುವ

ಭಾವವು, ಬ್ರಾಹ್ಮಣನಿಗೆ ಈ ಮೂರು ಗುಣಗಳಲ್ಲಿ ಸತ್ವಾಧಿಕ್ಯವೂ, ಕ್ಷತ್ರಿಯನಿಗೆ ರಜೋಗುಣಾಧಿಕ್ಯವೂ, ವೈಶ್ಯನಿಗೆ ಈ ರಜೋಗುಣದೊಂದಿಗೆ ಅಲ್ಪವಾದ ತಮೋಗುಣ ಸೇರಿರುವಿಕೆಯೂ, ಹಾಗೆಯೇ ಶೂದ್ರನಿಗೂ ಸಹ ಸ್ವಭಾವದಿಂದುಂಟಾದ ತಮೋಗುಣಾಧಿಕ್ಯವೂ ಇರುವದರಿಂದ ಈ ಶತ್ರುನಾಶಕನಾದ ಅರ್ಜುನನೇ! ಶಾಸ್ತ್ರಗಳಲ್ಲಿ ಈ ಕರ್ಮಗಳು ಈ ಗುಣಾಧಿಕ್ಯದಿಂದ ಸ್ವಾಭಾವಿಕವಾಗಿ ಪ್ರಾಪ್ತವಾದುದೆಂದು ಹೇಳಲ್ಪಡುತ್ತವೆ.

೪೨ ಬ್ರಾಹ್ಮಣನಿಗೆ ಸಂಬಂಧಿಸಿದ ಸ್ವಾಭಾವಿಕವಾದ ಕರ್ಮಗಳ ವಿಷಯವನ್ನು ಹೇಳುತ್ತಾರೆ—ಬಾಹ್ಯೇಂದ್ರಿಯಗಳ ನಿಯಮನವೂ, ಅಂತರಿಂದ್ರಿಯವಾದ ಮನಸ್ಸನ್ನು ನಿಗ್ರಹಿಸೋಣವೂ, ಭೋಗಗಳನ್ನು ತ್ಯಾಗಮಾಡಿ ಶಾಸ್ತ್ರಗಳಲ್ಲಿ ವಿಹಿತವಾದ ಏಕಾದಶೀ ಉಪವಾಸ ಮೊದಲಾದ ಕಾಯಕ್ಲೇಶಗಳೂ ಶಾಸ್ತ್ರೀಯ ಕರ್ಮಗಳನ್ನು ಅನುಷ್ಠಿಸಲು ಬೇಕಾದ ಪರಿಶುದ್ಧತೆಯೂ ಇದು ಸ್ನಾನ ಸಂಧ್ಯಾವಂದನಾದಿಗಳಿಂದ ಉಂಟಾಗತಕ್ಕವು, ಇತರರಿಂದ ಪೀಡಿಸಲ್ಪಟ್ಟರೂ ವಿಕಾರಹೊಂದದ ಚಿತ್ತವನ್ನು ಕ್ಷೋಣವೂ, ಇತರರ ವಿಷಯದಲ್ಲಿ ಮನಸ್ಸು, ವಾಕ್ಕು, ಪ್ರವೃತ್ತಿಗಳಲ್ಲೆಲ್ಲಾ ಒಂದೇ ವಿಧವಾಗಿರೋಣವೂ, ಪರತತ್ವವಿಷಯದಲ್ಲೂ ಅವರ ತತ್ವವಾದ, ತನ್ನ ವಿಷಯದಲ್ಲೂ ಯಥಾರ್ಥವಾಗಿ ಶಾಸ್ತ್ರವಿಹಿತವಾದ ಸಮಂಜಸವಾದ ಜ್ಞಾನವೂ ಮತ್ತು ವಿಶೇಷ ಜ್ಞಾನವೂ, ಸಮಸ್ತ ವೇದಪ್ರಮಾಣಗಳು ಸತ್ಯವೆಂಬ ನಿಷ್ಕೃಷ್ಟವಾದ ಜ್ಞಾನವೂ, ಅವು ಯಾವುವೆಂದರೆ ಶ್ರೀಮನ್ನಾರಾಯಣನೇ ಪರತತ್ವವು, ಆತನು ಹೇಯ ಪ್ರತ್ಯನೀಕನು, ಕಲ್ಯಾಣಗುಣಾಕರನು, ನಿಖಿಲವೇದವೇದಾಂತವೇದ್ಯನು, ಆತನು ಅಖಿಲ ಜಗತ್ತಿಗೂ ಉಪಾದಾನ ನಿಮಿತ್ತಾದಿ ಕಾರಣನು, ಉಭಯ ವಿಭೂತಿನಾಯಕನು, ಅವುಗಳಿಗೆಲ್ಲಾ ಅಂತರ್ಯಾಮಿಯಾಗಿ ಆತ್ಮಾ, ಎಲ್ಲಕ್ಕೂ ಆಧಾರಭೂತನು, ಸತ್ತಾದಾಯಕನು, ಪ್ರವರ್ತಕನು, ಶೇಷಿಯು, ಜೀವಾತ್ಮನು ಮಾಡುವ ಸಕಲ ಶಾಸ್ತ್ರಚೋದಿತ ಕರ್ಮಗಳಿಂದ ಆರಾಧ್ಯನು, ಅವರಿಗೆಲ್ಲಾ ಸಿದ್ಧೋಪಾಯನಾಗಿ ಹಿತಪ್ರವರ್ತಕನು, ಅದರಿಂದ ಪ್ರೀತನಾಗಿ ಚತುರ್ವಿಧ ಫಲದಾಯಕನು, ಇತ್ಯಾದಿ ಆಸ್ತಿಕ್ಯ ಬುದ್ಧಿಯು, ಇವೆಲ್ಲವೂ ಬ್ರಾಹ್ಮಣನು ಮಾಡುವ ಕರ್ಮಗಳಿಗೆ ಸ್ವಾಭಾವಿಕವಾಗಿ ಸಂಬಂಧಿಸಿದುವು ಎಂದು ಭಾವಿಸಬಹುದು, ಬ್ರಾಹ್ಮಣವೃತ್ತಿಯು ವೇದಾಧ್ಯಯನವು, ಅಧ್ಯಾಪನವೆಂದರೆ ಅಧ್ಯಯನಮಾಡಿಸುವದು; ದಾನಪರಿಗ್ರಹವೇ ಮೊದಲಾದ ಕರ್ಮಗಳು

೪೩. ಯುದ್ಧದಲ್ಲಿ ನಿರ್ಭಯವಾಗಿ ಪ್ರವೇಶಿಸೋಣವೂ, ಪ್ರವೇಶಮಾತ್ರವೇ ಅಲ್ಲದೆ ಶತ್ರುಗಳಿಂದ ಪರಾಭವವನ್ನು ಹೊಂದದೇ ಇರೋಣವೂ, ಕ್ಷತ್ರಿಯನಿಗೆ ವಿಹಿತವಾದ ಕರ್ಮವನ್ನು ಆರಂಭಿಸಿದರೆ ಅದಕ್ಕೆ ವಿಘ್ನಗಳು ಒದಗಿದರೂ ಹಿಂಜರಿಯದಿರೋಣವೂ, ಅಂತಹ ಕಾರ್ಯಗಳನ್ನೆಲ್ಲಾ ನಿರ್ವಹಿಸುವ ಸಾಮರ್ಥ್ಯವೂ, ಯುದ್ಧಕ್ಕೆ ನಿಂತು ಭಯದಿಂದ ಬೆನ್ನುತೋರಿಸಿ ಓಡಿಹೋಗದೇ ಇರೋಣವೂ, ತನ್ನ ಧನಕನಕವಸ್ತ್ರಕ್ಷೇತ್ರಾದಿಗಳನ್ನು ಇತರರಿಗೆ ದಾನ ಕೊಡೋಣವೂ, ತನಗೆ ಅಧೀನರಾದ ಜನರನ್ನೆಲ್ಲಾ ಸರಿಯಾಗಿ ನಿಯಮನ ಮಾಡೋಣವೂ, ಇವೆಲ್ಲವೂ ಕ್ಷತ್ರಿಯನಿಗೆ ಸ್ವಾಭಾವಿಕವಾಗಿ ಉಂಟಾದವು.

೪೪. ಕೃಷಿಯೂ, ಗೋರಕ್ಷಣೆಯೂ, ಪದಾರ್ಥಗಳ ವಸ್ತ್ರ ಬೆಳ್ಳಿ ಚಿನ್ನ ಇವುಗಳ ಕ್ರಯವಿಕ್ರಯಗಳು, ಇವುಗಳಿಂದ ಧನಾರ್ಜನೆಯ ರೂಪಕರ್ಮವು ವೈಶ್ಯನಾಗಿ ಹುಟ್ಟಿದವನಿಗೆ ಸ್ವಾಭಾವಿಕವಾಗಿ ಉಂಟಾದ ಕರ್ಮವು.

ಮೇಲೆ ಹೇಳಿದ ಮೂರು ವರ್ಣದವರಿಗೂ ಪರಿಚರ್ಯೆಯನ್ನು ಮಾಡಿ ಅದರಿಂದುಂಟಾದ ಧನದಿಂದ ಜೀವನವು ಶೂದ್ರನಿಗೆ ಸ್ವಾಭಾವಿಕವಾಗಿ ಉಂಟಾದ ಕರ್ಮವು.

ಹೀಗೆ ನಾಲ್ಕುವರ್ಣದವರ ವ್ಯಾಪಾರಗಳೊಂದಿಗೆ, ಅವರುಗಳಿಗೆ ಶಾಸ್ತ್ರದಲ್ಲಿ ವಿಧಿಸಲ್ಪಟ್ಟ ಯಜ್ಞಾದಿ ಕರ್ಮಗಳಿಗೂ ಉಪಲಕ್ಷಣವಾಗಿ ಕರ್ತವ್ಯಗಳು ಹೇಳಲ್ಪಟ್ಟವು ಶಮದಮಾದಿಗಳು ಬ್ರಾಹ್ಮಣನಿಗೆ ಹೇಳಲ್ಪಟ್ಟರೂ ಮೋಕ್ಷಾರ್ಥಿಗಳಿಂದ ಈ ವರ್ಣದವರಿಗೂ ಸಾಧಾರಣವಾಗಿ ಆವಶ್ಯಕವಾದವು. ಬ್ರಾಹ್ಮಣನಿಗಾದರೋ ಸತ್ವೋದ್ರೇಕದಿಂದ ಶಮದಮಾದಿ ಸ್ವಾಭಾವಿಕವಾದುದರಿಂದ ಹಾಗೆ ಹೇಳಲ್ಪಟ್ಟವು. ಕ್ಷತ್ರಿಯ ವೈಶ್ಯರಿಗಾದರೋ ಅವರುಗಳ ರಜಸ್ತಮೋ ಗುಣಗಳ ಆಧಿಕ್ಯದಿಂದ ಸ್ವಲ್ಪ ಕಷ್ಟವಾಗಿ ಉಂಟಾಗತಕ್ಕವುಗಳಾದುದರಿಂದ ಅವರಿಗೆ ಅವು ಹೇಳಲ್ಪಡಲಿಲ್ಲವು. ಬ್ರಾಹ್ಮಣನ ವೃತ್ತಿಯಾದರೋ ಯಜ್ಞವನ್ನು ಮಾಡುವದೂ, ಮಾಡಿಸೋಣವೂ, ಅಧ್ಯಯನ ಮಾಡುವದೂ ಮಾಡಿಸುವದೂ, ದಾನಮಾಡುವದೂ ಪರಿಗ್ರಹಿಸುವದೂ ಆಗಿವೆ; ಕ್ಷತ್ರಿಯನಿಗೆ ಪ್ರಜಾಪರಿಪಾಲನವು; ವೈಶ್ಯನಿಗೆ ಕೃಷ್ಯಾದಿಗಳು; ಶೂದ್ರನಿಗೆ ವರ್ಣತ್ರಯರಿಗೆ ಪರಿಚರ್ಯೆಯೂ ಎಂದು ತಿಳಿಯತಕ್ಕದ್ದು. ಹೀಗೆ ನಾಲ್ಕು ವರ್ಣದವರೂ ಪರಸ್ಪರ ಸಹಾಯಕರು.

ಹೀಗೆ ಬ್ರಾಹ್ಮಣನು ಶುಭ ಶೋಭನಾದಿಗಳಲ್ಲಿ ಇತರ ಮೂರು ವರ್ಣದವರಿಗೂ ಬೇಕಾದವನು ಕ್ಷತ್ರಿಯನು ಪ್ರಜಾಪರಿಪಾಲನದ್ವಾರಾ ಇನ್ನು ಮೂವರಿಗೂ ಬೇಕಾದವನು. ವೈಶ್ಯನೂ ಹಾಗೆಯೇ ಇತರ ಮೂರು ಪಂಗಡದವರಿಗೂ ಬೇಕಾದ ಸಾಮಗ್ರಿಯನ್ನೂ, ಗೋರಕ್ಷಣೆ, ಕೃಷಿ, ವಾಣಿಜ್ಯ ಮೊದಲಾದವುಗಳ ದ್ವಾರಾ ಸಹಾಯಕನು. ಶೂದ್ರನು ಇತರ ಮೂರು ಪಂಗಡದವರಿಗೂ ಮನೆ ಕಟ್ಟೋಣ, ಕೂಲಿ, ದಾಸವೃತ್ತಿಗಳ ಮೂಲಕ ಸಹಾಯಕನಾಗಿರುವದು. ಹೀಗೆ ಪರಮ ಮೈತ್ರಿಯಿಂದಲೂ ನಾಲ್ಕು ಪಂಗಡದವರೂ ವರ್ತಿಸತಕ್ಕದ್ದೆಂದು ಸ್ವಾಮಿಯಿಂದ ಆಜ್ಞಪ್ತವಾದುದಾಗಿ ಸರ್ವಸಮಂಜಸವಾದ ಏರ್ಪಾಡೆಂದು ಭಾವಿಸತಕ್ಕದ್ದು. ಆಯಾ ವರ್ಣದಲ್ಲಿ ಸ್ವಾಮಿಯಿಂದ ಜನಿಸಲ್ಪಟ್ಟಿದ್ದರೂ ಆಯಾ ವರ್ಣದ ನಿಯತಕರ್ಮಗಳನ್ನು ಈಗ ಈ ಜನ್ಮದಲ್ಲಿ ಅನುಷ್ಠಿಸದೇ ಹೋದರೆ ಭಗವನ್ನಿಗ್ರಹವೂ ಅದಕ್ಕಿಂತ ಕೀಳಾದ ಜನ್ಮವು ಮುಂದಕ್ಕೆ ಕಾದಿದೆ ಎಂಬುದೂ ಇದರಿಂದ ವ್ಯಕ್ತವು. ಆದುದರಿಂದ ಮುಂದಿನ ಶ್ಲೋಕದಲ್ಲಿ ಅವರವರಿಗೆ ವಿಹಿತಕರ್ಮಗಳನ್ನು ಅನುಷ್ಠಿಸಲೇಬೇಕೆಂದು ವಿಧಿಸಿ, ಅಂತಹ ವಿಹಿತಕರ್ಮಗಳನ್ನು ಅನುಷ್ಠಾನದಿಂದಲೇ ನಾಲ್ಕು ವರ್ಣದವರೂ ಕ್ರಮೇಣ ಮೋಕ್ಷವನ್ನು ಹೊಂದಬಹುದೆಂದು ಉಪದೇಶಿಸುತ್ತಾರೆ.

೪೫. ಮೋಕ್ಷಾರ್ಥಿಯಾದ ಮನುಷ್ಯನು ತನಗೆ ವಿಹಿತವಾದ ಕರ್ಮದಲ್ಲೇ ಆಸಕ್ತಿಯುಳ್ಳವನಾದರೆ ಕ್ರಮೇಣ ಮೋಕ್ಷವನ್ನು ಹೊಂದುವನು. ಹಾಗೆ ಸ್ವಕರ್ಮನಿರತನಾದವನು ಹೇಗೆ ಮೋಕ್ಷವನ್ನು ಹೊಂದುವನು ಎಂಬುದನ್ನು ಹೇಳುವೆನು; ಅದನ್ನು ನೀನು ಸಾವಧಾನದಿಂದ ಕೇಳತಕ್ಕದ್ದು.

೪೬. ನಿತ್ಯನೈಮಿತ್ತಿಕಾದಿ ಅನುಷ್ಠಾನಗಳಲ್ಲಿ ಅನ್ಯದೇವತೆಗಳನ್ನು ಉದ್ದೇಶಿಸಿದ ಕರ್ಮಗಳಿಂದ ಮೋಕ್ಷಪ್ರಾಪ್ತಿಯು ಹೇಗಾದೀತೆಂಬ ಸಂದೇಹವು ನಿನಗಿರಬಹುದು. ಎಲ್ಲಾ ಪ್ರಾಣಿಗಳಿಗೂ ಅವರ ವ್ಯಾಪಾರಗಳಿಗೂ ನಾನೇ ಕಾರಣಭೂತನು. ನಾನೇ ಆ ದೇವತೆಗಳಿಗೂ ನಿನಗೂ ಎಲ್ಲಾ ಪ್ರಾಣಿಗಳಿಗೂ ಅಂತರಾತ್ಮಾವಾಗಿ ಅವೆಲ್ಲವನ್ನೂ ಸರ್ವಜಗತ್ತನ್ನೂ ವ್ಯಾಪಿಸಿರುವನಾದುದರಿಂದ ಅವರವರ ವರ್ಣಾಶ್ರಮಧರ್ಮಗಳಿಂದ ಸೂರ್ಯಾಗ್ನಿ ಇಂದ್ರಾದಿಗಳೂ ಆರಾಧಿ

ಸಲ್ಪಟ್ಟರೂ ಅವರಿಗೆ ಅಂತರ್ಯಾಮಿಯಾಗಿರುವ ನಾನೇ ಆರಾಧಿಸಲ್ಪಡುವವನಾಗಿ ನಾನೇ ಪ್ರೀತ ನಾಗುವೆನು ನಿನ್ನ ದೇಹದ ಮೇಲೆ ನಿನ್ನ ಕುತ್ತಿಗೆಗೆ ಹೂವಿನಹಾರವನ್ನು ಹಾಕಿದರೆ ನಿನ್ನ ದೇಹಕ್ಕೆ ಆತ್ಮಾವಾದ ನೀನು ಹೇಗೆ ಪ್ರೀತಿಸುವೆಯೋ ಹಾಗೆ ಎಂಬ ಭಾವವು

ಆದುದರಿಂದ ನಿನಗೆ ಹಿಂದೆ ಮೂರನೆಯ ಅಧ್ಯಾಯದಲ್ಲಿ ಉಪದೇಶಿಸಿದುದನ್ನೇ ಈಗಲೂ ಜ್ಞಾಪಿಸುವೆನು. ಹೀಗೆ ನಿರಾಕ್ಷೇಪವುಳ್ಳ, ದೇಹೇಂದ್ರಿಯಗಳನ್ನು ಹೊಂದಿರುವ, ನಿನಗೆ ಸಹಜ ಧರ್ಮವಾದ ಕರ್ಮಯೋಗವನ್ನೇ ನೀನು ಅನುಷ್ಠಿಸು ಇದು ದೇಹೇಂದ್ರಿಯಗಳನ್ನುಳ್ಳ ನಿನಗೆ ಸಹಜವಲ್ಲದೆ ಎಲ್ಲೋ ಒಂದೊಂದು ಸಂದರ್ಭದಲ್ಲಿ ಸರಿಯಾಗಿ ಅನುಷ್ಠಿಸಬಹುದಾದ ಜ್ಞಾನಯೋಗಕ್ಕಿಂತ ಸುಲಭವಾಗಿ ಪ್ರಮಾದರಹಿತವಾಗಿ ಇರುವದರಿಂದ ಕರ್ಮಯೋಗವೇ ನಿನಗೆ ಶ್ರೇಯಸ್ಕರವಾದುದು.

೪೭. ಅರ್ಜುನನಿಗೆ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಸುಲಭವಾಗಿ ಸುಕರವಾಗಿ ಪ್ರಮಾದರಹಿತವಾಗಿ ಇದೆ ಎಂದು (ಗೀ. ೩-೩೫) ಹೇಳಿ ಕರ್ಮಯೋಗವನ್ನೇ ಅನುಷ್ಠಿಸು ಎಂದು ಹೇಳಿದುದನ್ನೇ ಪುನಃ ಅನುವಾದಮಾಡಿ ಹೇಳುತ್ತಾರೆ. ದೇಹೇಂದ್ರಿಯಗಳ ಸಹಾಯವಿರುವ ನಿನಗೆ ಸುಕರವಲ್ಲದೆ ಪ್ರಮಾದಗರ್ಭಿತವಾಗಿರುವದರಿಂದ ಪರಧರ್ಮವಾದ ಜ್ಞಾನಯೋಗಕ್ಕಿಂತ ದೇಹೇಂದ್ರಿಯಗಳ ಸಹಾಯದಿಂದ ಸುಕರವಾಗಿಯೂ ಪ್ರಮಾದರಹಿತವಾಗಿಯೂ ಇರುವದರಿಂದ ನಿನಗೆ ಕರ್ಮಯೋಗವೇ ಶ್ರೇಯಸ್ಕರವು. ಕರ್ಮಯೋಗವು, ಚನ್ನಾಗಿ ಎಲ್ಲೋ ಒಬ್ಬರಿಬ್ಬರು ಅನುಷ್ಠಿಸುವ ಜ್ಞಾನಯೋಗಕ್ಕಿಂತ ಸ್ವಲ್ಪ **ವಿಗುಣೋಽಪಿ** ನಿಕೃಷ್ಟವಾದುದು. ಆದರೂ ಕೂಡ ಪ್ರಮಾದವಿಲ್ಲದಿರುವದರಿಂದ ಶ್ರೇಷ್ಠವೇ ಸರಿ. **ವಿಗುಣಃ** ಎಂಬಲ್ಲಿ ಅಪಿ ಶಬ್ದವಿಲ್ಲದಿರುವದರಿಂದ ಇನ್ನೊಂದು ವಿಧವಾಗಿಯೂ ಅರ್ಥ ಹೇಳಬಹುದು. ಹೇಗೆಂದರೆ— ಜ್ಞಾನಯೋಗಕ್ಕಿಂತ ಕರ್ಮಯೋಗವು **ವಿಗುಣಃ**-ವಿಶೇಷ ಗುಣವುಳ್ಳದ್ದೆಂದು ನಿನಗೆ ಹತ್ತು ಕಾರಣಗಳಿಂದ ಹಿಂದೆ ಮೂರನೆಯ ಅಧ್ಯಾಯದಲ್ಲಿ ಉಪದೇಶಿಸಿದ್ದೆನು. ಹೀಗೆ ಕರ್ಮಯೋಗವೇ ಜ್ಞಾನಯೋಗಕ್ಕಿಂತ ವಿಶೇಷಗುಣಗಳನ್ನುಳ್ಳದಾದುದರಿಂದ, ಅದೇ ನಿನಗೆ **ಶ್ರೇಯಾನ್**-ಶ್ರೇಯಸ್ಕರವಾದುದು ಎಂದೂ ಅರ್ಥಮಾಡಬಹುದು ವಿಕರ್ಮ ಶಬ್ದಕ್ಕೆ ಹಿಂದೆ ಹಾಗೆಯೇ ಅರ್ಥ ಮಾಡಲ್ಪಟ್ಟಿರುತ್ತದೆ.

೪೭. ಮುಖ್ಯವಾದ ವಿಷಯವಾದುದರಿಂದ ಪುನಃ ಅದನ್ನೇ ಉಪಪಾದಿಸಿ ಹೇಳುತ್ತಾರೆ. ಪ್ರಕೃತಿಯಿಂದ ಸೇರಿದವನಾಗಿ ದೇಹೇಂದ್ರಿಯಾದಿಗಳಿಂದ ಕೂಡಿದವನಾಗಿ, ಇಂದ್ರಿಯಾದಿಗಳಿಗೆ ವಶವಾಗುವ ಸ್ವಭಾವವನ್ನು ಹೊಂದಿದ್ದ ನಿನಗೆ ನಿಯತವಾದ ನಿತ್ಯನೈಮಿತ್ತಿಕಗಳೊಂದಿಗೆ ಕರ್ಮಯೋಗವನ್ನು ಅನುಷ್ಠಿಸಿ, ಅದು ಮದಾರಾಧನೆಯೆಂದು ತಿಳಿದು ನನ್ನಲ್ಲಿ ಸಮರ್ಪಿಸುವದರಿಂದ ನಿನಗೆ ಪುನಃ ಸಂಸಾರವನ್ನು ಹೊಂದುವ ಅಪರಾಧಗಳು ಯಾವುವೂ ಸೇರುವದಿಲ್ಲವು. ಜ್ಞಾನಯೋಗಕ್ಕಾದರೋ ಸಕಲೇಂದ್ರಿಯೋಪರತಿಯು ಆವಶ್ಯಕವಾದುದರಿಂದ ಹಿಂದೆಯೇ ಪ್ರಮಾದಗರ್ಭಿತವು ಜ್ಞಾನಯೋಗವೆಂದು ತಿಳಿಸಿದ್ದೆವು. ಆದುದರಿಂದ ನಾನು ಹೇಳಿದ ರೀತಿಯಲ್ಲಿ ಕರ್ಮಯೋಗವನ್ನೇ ನೀನು ಅನುಷ್ಠಿಸತಕ್ಕದ್ದು.

೪೮ ಕರ್ಮಯೋಗವು ಕಾಯಕ್ಲೇಶಾದಿಗಳ ಮೂಲಕ ದುಃಖಕರವಾಗಿ ದೋಷಾವಹವಲ್ಲವೇ ? ಜ್ಞಾನಯೋಗದಲ್ಲಿ ಅಂತಹ ಕ್ಲೇಶವಿಲ್ಲವಲ್ಲಾ ಎಂದರೆ ಸಮಾಧಾನವನ್ನು ಹೇಳುತ್ತಾರೆ.— ಕರ್ಮಯೋಗವು ಸುಕರವೆಂದು ಪ್ರಮಾದರಹಿತವಾದುದೆಂದೂ, ಮತ್ತು ದೇಹಿಗೆ ಸಹಜ ಕರ್ಮವೆಂದೂ ಹೇಳಿದೆನು. ಆದರೆ ಎಲ್ಲಾ ಕರ್ಮಾರಂಭಗಳಿಗೂ ಈ ಕಾಯಕ್ಲೇಶರೂಪ

ದೋಷವು ತಪ್ಪಿದ್ದಲ್ಲವು ಅಗ್ನಿಗೆ ಹೊಗೆಯು ಹೇಗೆ ತಪ್ಪಿದ್ದಲ್ಲವೋ ಹಾಗೆ ಕರ್ಮಯೋಗಕ್ಕೆ ಕಾಯಕ್ಲೇಶಾದಿಗಳು ತಪ್ಪಿದ್ದಲ್ಲವು. ಆದರೂ ಅವುಗಳು ಬಿಡತಕ್ಕದ್ದಲ್ಲವು. ಕಾಯಕ್ಲೇಶರೂಪ ದೋಷವಿದ್ದರೂ ಕರ್ಮಯೋಗವೇ ಅನುಷ್ಠಿಸತಕ್ಕದ್ದು. ಏಕೆಂದರೆ–ವಿಹಿತಕರ್ಮಗಳು ಮುಖ್ಯವು. ಅವು ಎಂದಿಗೂ ಬಿಡತಕ್ಕವಲ್ಲವು

೪೯. ಕರ್ಮಗಳ ಫಲ ಕರ್ತೃತ್ವ ಮಮತೆಗಳಲ್ಲಿ ಸಕ್ತನಾಗದ ಬುದ್ಧಿಯುಳ್ಳವನಾಗಿ, ಜಯಿಸಲ್ಪಟ್ಟ ಮನಸ್ಸುಳ್ಳವನಾಗಿ, ಪರಮಪುರುಷಕರ್ತೃತ್ವಾನುಸಂಧಾನದಿಂದ ತನ್ನ ಕರ್ತೃತ್ವ ದಲ್ಲಿ ಆಶಾರಹಿತನಾಗಿ, ಹೀಗೆ ತ್ಯಾಗ ಹೇಳಿ ಮಾಡುವ ಕರ್ಮಸನ್ನ್ಯಾಸದಿಂದ ಕೂಡಿ ಕರ್ಮಯೋಗ ವನ್ನು ಅನುಷ್ಠಿಸುವವನು ಜ್ಞಾನಯೋಗದಿಂದುಂಟಾಗುವ ಫಲವಾದ ಉಪಾಸನಾರಂಭ ಸಿದ್ಧಿ ಯನ್ನೇ ಹೊಂದುವನು ; ಸರ್ವೇಂದ್ರಿಯೋಪರತಿಯುಳ್ಳ ಮುಂದೆ ಹೇಳುವ ಧ್ಯಾನಯೋಗಾ ರ್ಹತೆಯನ್ನೇ ಹೊಂದುವನೆಂಬ ತಾತ್ಪರ್ಯವು

೫೦. ದೇಹಾವಸಾನದವರೆಗೂ ಪ್ರತಿದಿನವೂ ಅನುಷ್ಠಿಸಬೇಕಾದ ನಿತ್ಯನೈಮಿತ್ತಿಕ ಗಳಿಂದ ಕೂಡಿದ ಕರ್ಮಯೋಗಾನುಷ್ಠಾನದಿಂದುಂಟಾದ ಉಪಾಸನದಲ್ಲಿ ಅಭಿನಿವೇಶವನ್ನು ಹೊಂದಿದವನು ಹೇಗೆ ವರ್ತಿಸುವನಾಗಿ, ತನ್ನ ಪ್ರಕೃತಿವಿಯುಕ್ತ ಆತ್ಮಯಾಥಾತ್ಮ್ಯಸ್ವರೂಪ ಜ್ಞಾನವುಳ್ಳವನಾಗುವನೆಂಬುದನ್ನು ಹಾಗೆಯೇ ಸಂಗ್ರಹವಾಗಿ ತಿಳಿಸುವೆನು, ಅದನ್ನು ನನ್ನಿಂದ ಕೇಳಿ ತಿಳಿ. ಯಾವ ಜ್ಞಾನವು ಪರಮಪುರುಷನ ಉಪಾಸನರೂಪ ಜ್ಞಾನಕ್ಕೆ ಸರ್ವೋತ್ಕೃಷ್ಟ ಹೇತುವೋ ಅದನ್ನಲ್ಲವೇ ನಾನು ಈಗ ಹಿಂದೆ ಹೇಳಿದುದನ್ನೇ ಸಂಗ್ರಹಿಸಿ ಹೇಳುವೆನು.

೫೧, ೫೨, ೫೩ —ಪರಿಶುದ್ಧವಾಗಿರುವ ಯಥಾವಸ್ಥಿತ ಆತ್ಮನ ಸ್ವರೂಪ ಜ್ಞಾನವನ್ನು ಹೊಂದುವ ಪ್ರಕಾರವು ಈ ಮೂರು ಶ್ಲೋಕಗಳಿಂದ ಹೇಳಲ್ಪಡುತ್ತದೆ. ವಿಶುದ್ಧವಾದ ಬುದ್ಧಿ ಯಿಂದ ಯುಕ್ತನಾಗಿ ಎಂದರೆ ತನ್ನ ಆತ್ಮತತ್ತ್ವವು ಜ್ಞಾನಸ್ವರೂಪಜ್ಞಾನ ಗುಣಗಳಿಂದ ಕೂಡಿರು ವದರಿಂದ ಮಹಾ ಪರಿಶುದ್ಧವೆಂಬ ಯಥಾವಸ್ಥಿತ ಜ್ಞಾನವುಳ್ಳವನಾಗಿ, ಸಾತ್ವಿಕ ಧೃತಿಯಿಂದ ಮನಸ್ಸನ್ನು ನಿಗ್ರಹಿಸಿದವನಾಗಿ, ಶಬ್ದಾದಿ ವಿಷಯೋಪಭೋಗಗಳನ್ನೆಲ್ಲಾ ತ್ಯಾಗಮಾಡಿದವ ನಾಗಿ ಆ ಕಾರಣದಿಂದ ವಿಷಯಗಳಲ್ಲಿ ಸಂಗವನ್ನೂ, ದ್ವೇಷವನ್ನೂ ತ್ಯಜಿಸಿ, ಧ್ಯಾನಕ್ಕೆ ಏನೊಂದೂ ವಿಘಾತ ಉಂಟಾಗದ ಹಾಗೆ ನಿರ್ಜನಪ್ರದೇಶವನ್ನು ಆಶ್ರಯಿಸಿ, ಮಿತಾಹಾರಾದಿ ಗಳಿಂದ ಕೂಡಿದವನಾಗಿ, ವಾಕ್ಕು, ದೇಹ ಮನಸ್ಸುಗಳನ್ನು ಜಯಿಸಿದವನಾಗಿ, ಪ್ರತಿದಿನವೂ ತನ್ನ ದಿವ್ಯಾತ್ಮಸ್ವರೂಪದ ಯಾಥಾತ್ಮ್ಯವನ್ನು ಚಿಂತಿಸುವನಾಗಿ, ಹೀಗೆ ವೈರಾಗ್ಯವನ್ನು ಚನ್ನಾಗಿ ಆಶ್ರಯಿಸಿದವನಾಗಿ, ಆತ್ಮವಲ್ಲದಿರುವದನ್ನು ಆತ್ಮಾವೆಂಬ ಅಹಂಭಾವವನ್ನು ಪೂರ್ವ ಜನ್ಮ ಕರ್ಮವಾಸನಾ ಬಲವನ್ನೂ ಐಹಿಕವಿಷಯೋಪಭೋಗಗಳ ಸಂಗವನ್ನೂ, ಅದು ಲಭಿಸದೇ ಇದ್ದ ಪಕ್ಷದಲ್ಲಿ ಕೋಪವನ್ನೂ, ದುರ್ದಾನವನ್ನೂ ಇವುಗಳನ್ನೆಲ್ಲಾ ತ್ಯಜಿಸಿದವನಾಗಿ, ಮಮ ಕಾರವನ್ನು ಬಿಟ್ಟವನಾಗಿ, ಆತ್ಮಾನುಭವವೇ ಮುಖ್ಯವಾದ ಸುಖವೆಂದು ಭಾವಿಸಿದವನಾಗಿ, ಹೀಗೆ ಇದ್ದುಕೊಂಡು ಆತ್ಮಚಿನ್ತನಮಾಡಿದವನು ಸರ್ವಬಂಧದಿಂದ ಎಂದರೆ ಪ್ರಕೃತಿಯಿಂದ ಬಿಡಲ್ಪಟ್ಟ ಜೀವಾತ್ಮನು ಮಹಾ ಪರಿಶುದ್ಧನಾದ ಆತ್ಮನು ಎಂಬ ಅನುಭವವನ್ನು ಹೊಂದು ವನು. ಇದೇ ಕರ್ಮಯೋಗದಿಂದುಂಟಾಗುವ ಆತ್ಮಾವಲೋಕನವು ಇವೆಲ್ಲಾ ಹಿಂದೆ ಹೇಳಿ ರುವದರ ಅನುವಾದವು.

೫೪. ಹೀಗೆ ಆವಿರ್ಭವಿಸಿದ ಅಪರಿಚ್ಛಿನ್ನವಾದ ಜ್ಞಾನೈಕಾಕಾರನಾಗಿ ನನಗೆ ಶೇಷ ಭೂತನೆಂಬ ಜ್ಞಾನದಿಂದ ಆತ್ಮಾವಲೋಕನ ಸಿದ್ಧಿಯನ್ನು ಹೊಂದಿದವನು ಕ್ಲೇಶಕರ್ಮಗಳಿಂದ

ಕಲುಷಿತವಾಗದ ಸ್ವರೂಪವನ್ನುಳ್ಳವನಾಗಿ, ನಾನಲ್ಲದೆ ಇನ್ನು ಯಾವ ವಸ್ತುವಿಗಾಗಿ ಶೋಕಿಸದೇ, ಯಾವುದನ್ನೂ ಅಪೇಕ್ಷಿಸದೇ, ಹೀಗೆ ಸರ್ವವಸ್ತು ಅನಾದರಣೆಯಲ್ಲಿ ಸಮವಾಗಿ ಕಾಣುತ್ತಾ ಇರುವನೋ, ಅವನು ನನ್ನಲ್ಲಿ ವಿಶೇಷರೂಪ ಪ್ರೀತಿಯಿಂದ ಮಾಡುವ ಉಪಾಸನಾಧಿಕಾರಿಯಾಗುವನು ಹೀಗೆ ಕರ್ಮಯೋಗದ ಫಲವಾಗಿ ಉಂಟಾದ ಆತ್ಮಾವಲೋಕನವು ಭಕ್ತಿಯೋಗದ ಉಪಾಸನೆಗೆ ಶ್ರೇಷ್ಠಾಧಿಕಾರವನ್ನುಂಟುಮಾಡಿ, ತನಗೆ ಸ್ವಾಮಿಯಾದ ಪರಮಪುರುಷನಲ್ಲೇ ವಿಶೇಷಪ್ರೀತಿಯನ್ನುಂಟುಮಾಡಿ, ಪರಭಕ್ತಿ ಎಂದು ಹೇಳಿಸಿಕೊಳ್ಳುವ ಅವಸ್ಥೆಯನ್ನುಂಟುಮಾಡುತ್ತದೆಂಬ ಭಾವವು.

೫೫ ಈ ಪರಭಕ್ತಿ ಎಂದೆನಿಸುವ ಅವಸ್ಥೆಯಿಂದುಂಟಾಗುವ ಫಲವೇನೆಂಬುದನ್ನು ಉಪದೇಶಿಸುತ್ತಾರೆ ಸ್ವರೂಪದಿಂದಲೂ ಸ್ವಭಾವದಿಂದಲೂ ನಾನು ಹೇಗಿರುವೆನೆಂದೂ, ಗುಣದಿಂದಲೂ ಉಭಯ ವಿಭೂತಿಗಳನ್ನು ಹೊಂದಿರುವದರಿಂದಲೂ ನಾನು ಹೇಗೆ ಪರಿಪೂರ್ಣನಾಗಿರುವವನೆಂದೂ, ತಿಳಿದು ನನ್ನನ್ನು ಇಂತಹ (ಪರಭಕ್ತಿ) ಶ್ರೇಷ್ಠವಾದ ಭಕ್ತಿಯಿಂದ ಯಥಾರ್ಥವಾಗಿ ತಿಳಿಯುವನು. ಹೀಗೆ ಪರಭಕ್ತಿಯಿಂದ ನನ್ನನ್ನು ತಿಳಿದು ಉಪಾಸನೆಯ ಮೂಲಕ ಸಾಕ್ಷಾತ್ಕರಿಸಿದರೆ ಆಗ ಪರಜ್ಞಾನವು ಲಭಿಸಿ, ತನ್ಮೂಲಕವಾಗಿ ಭಕ್ತಿಯು ನಿರತಿಶಯವಾಗಿ ಪರಮಭಕ್ತಿ ಎಂದು ಹೇಳಿಸಿಕೊಂಡು ನನ್ನ ಸಾಯುಜ್ಯವು ಲಭಿಸುತ್ತದೆ.

೫೬. ಮೇಲೆ ಹೇಳಿದ ರೀತಿಯಲ್ಲಿ ನಿತ್ಯನೈಮಿತ್ತಿಕಗಳಾದ ಆಜ್ಞಾಕೈಂಕರ್ಯಗಳನ್ನು ಕರ್ತೃತ್ವಮಮತಾ ಫಲತ್ಯಾಗಪೂರ್ವಕವಾಗಿ ನನ್ನ ಆರಾಧನಾರೂಪವೆಂದು ಭಾವಿಸಿ ಅನುಷ್ಠಿಸಿ ಉಪಾಸನೆಯನ್ನು ಮಾಡುತ್ತಾ ಬಂದರೆ, ನನ್ನ ಭಕ್ತಿಯು ವೃದ್ಧಿಯಾಗುತ್ತಾ ಬಂದು, ಮೊದಲು ಪರಭಕ್ತಿ ಎಂದೆನಿಸಿ ನನ್ನ ಸಾಕ್ಷಾತ್ಕಾರಕ್ಕೆ ಹೇತುವಾಗಿ, ಪರಜ್ಞಾನವೆನಿಸುತ್ತದೆಂದೂ, ಅದು ಇನ್ನೂ ವೃದ್ಧಿಯಾಗುತ್ತಾ ಬಂದು ನಿರತಿಶಯ ರೂಪವನ್ನು ಹೊಂದಿ ಪರಮಭಕ್ತಿಯೆಂದು ಹೇಳಲ್ಪಟ್ಟು ಪರಮ ಪ್ರಾಪ್ಯವನ್ನು ಹೊಂದಲು ಹೇತುವಾಗುತ್ತದೆಂದೂ ಹೇಳಲ್ಪಟ್ಟಿತು. ಪ್ರಪನ್ನನಿಗೂ ಕೂಡ ಕೆಲವು ಐಹಿಕ ಶಾಸ್ತ್ರೋಕ್ತ ಕರ್ಮಗಳು, ದೇಹಯಾತ್ರೆ, ಹೆಂಡತಿ ಮಕ್ಕಳ ಪೋಷಣೆ, ಸುತದುಹಿತೃಗಳ ವಿವಾಹ ಮೊದಲಾದವುಗಳು ತಪ್ಪಿದ್ದಲ್ಲವು. ಅವುಗಳು ಬಂಧಕಗಳಾಗುವುದಿಲ್ಲವೋ, ಎಂಬ ವಿಚಾರದಲ್ಲಿ ಹೇಳುತ್ತಾರೆ. ಇಂತಹ ಮೇಲೆ ಹೇಳಿದ ಕರ್ಮಗಳು ಮಾತ್ರವೇ ಅಲ್ಲದೆ ಎಲ್ಲಾ ಕರ್ಮಗಳನ್ನು ಎಂದರೆ ಕಾಮ್ಯಕರ್ಮಗಳನ್ನೂ ಕೂಡ ಈ ಪ್ರಪನ್ನನು ನನ್ನ ಆರಾಧನ ರೂಪದಲ್ಲಿ ಫಲಕರ್ತೃತ್ವಾದಿಗಳನ್ನು ತ್ಯಾಗಮಾಡಿ ನಡೆಸುವದರಿಂದ ಬಂಧಕಗಳಾಗದೆ, ನನ್ನ ಅನುಗ್ರಹದಿಂದ ಅವು ಶಾಶ್ವತಪದ ಪ್ರಾಪ್ತಿಗೇ ಹೇತುವಾಗುತ್ತವೆ. (೩.೩೦)

೫೭. ಹೀಗೆ ನನ್ನ ಸಙ್ಕಲ್ಪವಾದುದರಿಂದ, ಓ ಅರ್ಜುನನೇ ನೀನು ಮಾಡತಕ್ಕದ್ದೇನೆಂಬುದನ್ನು ಹೇಳುವೆನು ಕೇಳು—ನಿನಗೆ ನಾನೇ ನಿಯಾಮಕನು ಶೇಷಿಯು ಎಂಬ ಬುದ್ಧಿಯುಳ್ಳವನಾಗಿ, ನೀನು ಮಾಡುವ ಎಲ್ಲಾ ಶಾಸ್ತ್ರೋಕ್ತ ಕರ್ಮಗಳು ಅವು ನಿತ್ಯನೈಮಿತ್ತಿಕಗಳೇ ಆಗಲಿ, ಐಹಿಕವಾದವೇ ಆಗಲಿ, ಅವೆಲ್ಲವನ್ನೂ ನನ್ನ ಆರಾಧನ ರೂಪವೆಂದು ಭಾವಿಸಿ ಅವು ನನ್ನ ಪ್ರೀತ್ಯರ್ಥವಾದುವೆಂದು ನನ್ನಲ್ಲೇ ಸಮರ್ಪಿಸಿ, ಹೀಗೆ ಫಲಕರ್ತೃತ್ವಾದಿಗಳನ್ನು ತೊರೆದು ನಾನೇ ನಿನಗೆ ಪ್ರಾಪ್ಯನೆಂದು ತಿಳಿದವನಾಗಿ, ಇಂತಹ ಬುದ್ಧಿಯೋಗವನ್ನು ಹೊಂದಿ ನನ್ನನ್ನೇ ಐಕಾಂತ್ಯದಿಂದ ಧ್ಯಾನಿಸತಕ್ಕದ್ದು.

೫೮. ಹೀಗೆ ನನ್ನಲ್ಲೇ ಮನಸ್ಸನ್ನಿಟ್ಟು ನೀನು ಮಾಡಬೇಕಾದ ಆಜ್ಞಾಕೈಙ್ಕರ್ಯಗಳೇನು, ನಿನ್ನ ಇತಿಕರ್ತವ್ಯತಾರೂಪಗಳಾದ ಇತರ ಸಾಂಸಾರಿಕ ಕಾಮ್ಯಕರ್ಮಗಳೇನು, ಇವುಗಳನ್ನು

ನಾನು ಹೇಳಿದ ಹಾಗೆ ಫಲಾಭಿಸಂಧಿರಹಿತವಾಗಿ ನಡೆಸಿ ನನ್ನಲ್ಲಿ ಸಮರ್ಪಿಸಿದರೆ, ನನ್ನ ಅನುಗ್ರಹವು ದೊರೆತು, ನಿನಗೆ ಸಮಸ್ತ ದಾಟಲು ಅಸಾಧ್ಯಗಳಾದ ಪ್ರತಿಬಂಧಕಗಳನ್ನು ದಾಟುವಿ. ಹಾಗಲ್ಲದೆ ನನ್ನ ಹಿತೋಪದೇಶವನ್ನುಲ್ಲಂಘಿಸಿ, ನಾನೇ ಯಾವುದನ್ನು ಮಾಡಬೇಕು ಯಾವುದನ್ನು ಬಿಡಬೇಕೆಂಬ ವಿಷಯವನ್ನು ಅರಿತವನು ಎಂಬ ಅಹಂಭಾವದಿಂದ ನನ್ನ ಉಪದೇಶವನ್ನು ಕೇಳದೆ ಹೋದರೆ ನೀನು ವೃಥಾ ಆತ್ಮನಾಶವನ್ನು ಮಾಡಿಕೊಳ್ಳುವಿ ನಾನಲ್ಲದೆ ಇನ್ನು ಯಾರೂ ಇದು ಮಾಡತಕ್ಕದ್ದು, ಇದು ಅಲ್ಲವು ಎಂದು ತಿಳಿಸಲು ಜ್ಞಾನವುಳ್ಳವರು ಇರುವದಿಲ್ಲವೆಂಬ ತಾತ್ಪರ್ಯವು.

೫೯ ಇನ್ನೂ ಹೇಳುವೆನು ಕೇಳು—ನೀನು ನನ್ನ ಹಿತೋಕ್ತಿಯನ್ನು ಕೇಳದೆ ಹೋಗಿ ನಿನ್ನ ಇತಿಕರ್ತವ್ಯತೆಯನ್ನು ತ್ಯಜಿಸಿದರೆ, ನಿನಗೆ ಅಶ್ರೇಯಸ್ಸಿಗೆ ಕಾರಣವೆಂದು ಹೇಳಿದರು. ಮುಂದೆ ಹಾಗೆ ಸ್ವತಂತ್ರನಾಗಿ ನೀನು ನಡೆಸಲೂ ಸಾಧ್ಯವಿಲ್ಲವು. ಏಕೆಂದರೆ ನನ್ನ ಸಂಕಲ್ಪಾನುಸಾರವಾಗಿಯೇ ನಿನ್ನ ಪ್ರಕೃತಿಯು ನಡೆಯುವ ಹಾಗೆ ಮಾಡುತ್ತದೆಂದು ಶ್ರೀಕೃಷ್ಣನು ತಿಳಿಸುತ್ತಾರೆ ಹಿತಾಹಿತ ಜ್ಞಾನವಿಷಯದಲ್ಲಿ ನನಗೇನೇ ಸ್ವಾತಂತ್ರ್ಯ ಉಂಟೆಂಬ ಅಹಂಭಾವವನ್ನು ಆಶ್ರಯಿಸಿ, ನನ್ನ ಹಿತೋಪದೇಶವನ್ನು ನಿರಾಕರಿಸಿ, ನಾನು ಯುದ್ಧಮಾಡುವದಿಲ್ಲವೆಂದು ನೀನು ಪ್ರತಿಜ್ಞೆಯನ್ನು ಮಾಡಿದರೂ, ಈ ನಿನ್ನ ಸಙ್ಕಲ್ಪವು ಸುಳ್ಳಾಗಿ ವ್ಯರ್ಥವಾದುದು ಆಗುವದು; ಏಕೆಂದರೆ ನಿನ್ನ ಪ್ರಾರಬ್ಧಕರ್ಮರೂಪ ಪ್ರಕೃತಿಯೇ ನಿನ್ನನ್ನು ಅಸ್ವತಂತ್ರನನ್ನಾಗಿ ಮಾಡಿ ನನ್ನ ಸಙ್ಕಲ್ಪಾನುರೂಪವಾಗಿ, ನಿನ್ನನ್ನು ಯುದ್ಧಮಾಡುವಹಾಗೆ ನಿಯಮಿಸುತ್ತದೆ. ಯುದ್ಧಮಾಡುವದಿಲ್ಲವೆಂದು ಹಿಂತಿರುಗಿದರೆ ದುರ್ಯೋಧನನಿಂದ ಹೇಡಿ ಎಂದು ಅವಮಾನಿಸಲ್ಪಡುವದರಿಂದ ಪುನಃ ನೀನೇ ಯುದ್ಧಕ್ಕೆ ನಿಲ್ಲುವಿ ಎಂಬ ಭಾವವು.

೬೦ ಹಿಂದಿನ ಅಭಿಪ್ರಾಯವನ್ನೇ ಪುನಃ ಉಪಪಾದಿಸಿ ಹೇಳುತ್ತಾರೆ—ಓ ಕುಂತೀಪುತ್ರನಾದ ಅರ್ಜುನನೇ. ನಿನಗೆ ಪೂರ್ವಕರ್ಮಾನುಸಾರ ಪ್ರಾಪ್ತವಾಗಿರುವ ಕ್ಷತ್ರಿಯ ದೇಹಕ್ಕೆ ಸಲ್ಲುವ ಶೌರ್ಯಾದಿ ಸ್ವಭಾವದಿಂದಲೇ ನೀನು ನಿನ್ನ ಪ್ರವೃತ್ತಿಯಲ್ಲಿ ಸಂಪೂರ್ಣವಾಗಿ ಬಂಧಿಸಲ್ಪಟ್ಟಿರುವಿ. ಯಾವುದನ್ನು ನೀನು ಮೋಹ ಬುದ್ಧಿಯಾದ ಸ್ವಾತಂತ್ರ್ಯದಿಂದ ಮಾಡಲಿಷ್ಟವಿಲ್ಲವೋ, ಹೀಗೆ ನೀನು ಪೂರ್ವಕರ್ಮಕ್ಕೆ ಅಸ್ವತಂತ್ರನಾಗಿ, ಅದನ್ನೇ ಇತರರು ಲಾಘವದಿಂದ ಹೀಯಾಳಿಸಿದುದನ್ನು ಸಹಿಸದೇ, ನೀನು ಮಾಡಬೇಕಾಗಿರುತ್ತದೆ. ಹೀಗೆ ನಡೆಸುವನು ನೀನು ಮಾತ್ರವೇ ಅಲ್ಲವು. ಸಕಲ ಪ್ರಾಣಿಗಳು ಅವರವರುಗಳ ಪ್ರಾರಬ್ಧ ಕರ್ಮಾನುಗುಣವಾಗಿ ಅವರಿಗೇನೇ ತಿಳಿಯದೆ ಪ್ರವೃತ್ತಿಯುಳ್ಳವರಾಗುತ್ತಾರೆ ಎಂದು ಮುಂದೆ ಹೇಳುತ್ತಾರೆ :—

೬೧ ಹೀಗೆ ಪ್ರಾಣಿಜಾತವೆಲ್ಲಾ ಅವರುಗಳ ಕರ್ಮಾನುಗುಣವಾಗಿ ಪ್ರಕೃತಿಯಿಂದ ಹೇಗೆ ನಿಬದ್ಧರಾಗಿರುವರು ಎಂಬುದನ್ನು ಹೇಳುವೆನು ಕೇಳು—ಸರ್ವಪ್ರಾಣಿವರ್ಗವನ್ನುನಾನೇ ವ್ಯಾಪಿಸಿ ಅವರಿಗೆ ಆತ್ಮವಾಗಿ ಭರಿಸಿ, ಅವರೆಲ್ಲಾ ನನ್ನ ಸ್ವತ್ತಾಗಿ ನಾನು ಅವಕ್ಕೆಲ್ಲಾ ಸ್ವಾಮಿಯಾಗಿರುವದರಿಂದ ಅವಕ್ಕೆಲ್ಲಾ ವಾಸುದೇವನಾದ ನಾನು ಈಶ್ವರನು. ನಾನು ಆ ಕಾರಣದಿಂದ ಅವುಗಳ ಸರ್ವಪ್ರವೃತ್ತಿಗಳಿಗೂ ಮೂಲವಾದ ಜ್ಞಾನವನ್ನುಂಟುಮಾಡುವದಕ್ಕಾಗಿ ಹೃದಯದಲ್ಲೇ ಓ ಅರ್ಜುನನೇ ಯಾವಾಗಲೂ ಇರುವೆನು ಹೀಗೆ ಆ ಪ್ರಾಣಿವರ್ಗವನ್ನೆಲ್ಲಾ ಪ್ರಕೃತಿಯುಂಟಾದ ದೇಹವೆಂಬ ಯಂತ್ರದಲ್ಲಿಟ್ಟು ಅವರವರುಗಳ ಸಾತ್ವಿಕಾದಿಗುಣಗಳಿಗನುಸಾರವಾಗಿ ಪ್ರವೃತ್ತಿಯುಂಟಾಗುವ ಹಾಗೆ ಮಾಡುವೆನು ಇದನ್ನು ನಿನಗೆ ಹಿಂದೆಯೇ

" ಸರ್ವಸ್ಯಚಾಹಂ " ಎಂಬ (ಗೀ ೧೫-೧೫) ರಲ್ಲೂ ಮತ್ತು " ಮತ್ತಸ್ಸರ್ವಂ ಪ್ರವರ್ತತೇ " (ಗೀ ೧೦-೮) ರಲ್ಲೂ ಉಪದೇಶಿಸಿರುತ್ತೇನೆ. " ಯ ಆತ್ಮನಿ ತಿಷ್ಠನ್ " ಎಂಬ ಶ್ರುತಿಯೂ (ಬೃ. ೫-೭-೨೨) ಹಾಗೆಯೇ ಬೋಧಿಸುತ್ತದೆ.

೬೨. ಹೀಗೆ ಪ್ರಾರಬ್ಧಕರ್ಮಕ್ಕೂ, ತನ್ಮೂಲಕ ಪ್ರಕೃತಿಗೂ, ವಶವಾಗಿ ಹೋದರೆ ಗತಿ ಏನು ? ಪ್ರಾರಬ್ಧಕರ್ಮವು ಸುಕೃತವಾಗಿ ಐಹಿಕ ಸುಖಾನುಭವಕ್ಕಾಗಿ ತನ್ಮೂಲಕ ಬಂಧ ವಾದರೂ ಚಿಂತೆಯಿಲ್ಲವೆನ್ನಬಹುದು. ದುಃಖರೂಪ ಪ್ರಾರಬ್ಧಾನುಭವವು, ಅಗ್ನಿ ಮಧ್ಯ ದಲ್ಲಿದ್ದ ಹಾಗಾಗುವದಿಲ್ಲವೇ ? ಅದನ್ನು ಕಳೆದುಕೊಳ್ಳಲು ಉಪಾಯವುಂಟೋ ? ಎಂದರೆ ಉಂಟೆಂದು ಹೇಳುತ್ತಾರೆ. ಪ್ರಾರಬ್ಧಾನುಭವಕ್ಕಾಗಿ ಪ್ರಕೃತಿಸಂಬಂಧವೆಂದು ಏರ್ಪಟ್ಟನಂತರ, ಸರ್ವರಿಗೂ ಅಂತರ್ಯಾಮಿಯಾಗಿ ಪ್ರೇರಕನಾಗಿ, ಆಶ್ರಿತವಾತ್ಸಲ್ಯೈಕ ಜಲಧಿಯಾಗಿ, ನಿನಗೆ ಸಾರಥಿಯಾಗಿ ಬಂದು ಹೀಗೆ ಮಾಡು ಎಂದು ನಿಯಮಿಸುತ್ತಿರುವ ನನ್ನನ್ನು ಸರ್ವ ಪ್ರವೃತ್ತಿ ಗಳಿಗಾಗಿಯೂ ಶರಣವನ್ನು ಹೊಂದಿದರೆ, ಅನಿಷ್ಟ (ಪಾಪಗಳ) ನಿವೃತ್ತಿಯೂ, ಇಷ್ಟಪ್ರಾಪ್ತಿಯೂ ಲಭಿಸಿ ಕೊನೆಗೆ ಶಾಶ್ವತವಾದ ದಿವ್ಯ ವೈಕುಂಠಪ್ರಾಪ್ತಿಯನ್ನು " ತದ್ವಿಷ್ಣೋಃ " ಎಂಬ ಮನ್ತ್ರದಲ್ಲಿ ಹೇಳಿರುವ ಹಾಗೆ ಹೊಂದುವಿ.

೬೩. ಈ ಪ್ರಕಾರವಾಗಿ ಭಕ್ತರಲ್ಲಿ ಪರಮಾನುಗ್ರಹವನ್ನು ತೋರಿಸಬೇಕೆಂದು ಕಾದಿರುವ ನಾನು, ಪ್ರಿಯಭಕ್ತನಾದ ನಿನಗೆ " ನತ್ವೇವಾಹಂ ಜಾತುನಾಸಂ " ಎಂದಾರಂಭಿಸಿ, ನನ್ನನ್ನು ಹೊಂದಲು ಉಪಾಯವಾದ ಭಕ್ತಿಯೋಗವನ್ನೂ, ಅದಕ್ಕೆ ಅಂಗಗಳಾದ ಕರ್ಮಯೋಗ ಜ್ಞಾನ ಯೋಗಗಳನ್ನೂ ಸಮಸ್ತವನ್ನು ವಿಸ್ತರಿಸಿ ಉಪದೇಶಿಸಿದೆನು. ಈ ನನ್ನ ಉಪದೇಶವನ್ನೆಲ್ಲಾ ಸಮಗ್ರವಾಗಿ ವಿಮರ್ಶಿಸಿ, ನೀನು ಮಹಾ ಪ್ರಾಜ್ಞನಾಗಿ ಉಪದೇಶಿಸಿದ ರೀತ್ಯಾ ಅನಿಷ್ಟ ನಿವೃತ್ತಿಯನ್ನು ಇಷ್ಟಪ್ರಾಪ್ತಿಯನ್ನು ಹೇಗೆ ಅಪೇಕ್ಷಿಸಬೇಕೋ, ಹಾಗೆ ನೀನು ಆ ಕರ್ಮಯೋಗ ದಿಂದಾಗಲಿ ಅಥವಾ ಕರ್ಮಯೋಗ ಜ್ಞಾನಯೋಗಗಳಿಂದಾಗಲಿ ಸಾಧಿಸಲ್ಪಟ್ಟ ಭಕ್ತಿಯೋಗವನ್ನೇ ಅನುಷ್ಠಿಸತಕ್ಕದ್ದು.

೬೪. ಈ ಭಕ್ತಿಯೋಗವೆಂಬುದು ಎಲ್ಲಾ ರಹಸ್ಯಗಳಿಗಿಂತ ಸರ್ವಶ್ರೇಷ್ಠವಾದ ಪರಮ ರಹಸ್ಯವಾದುದು. ಆದುದರಿಂದ ಹಿಂದೆಯೆ ೯ನೆಯ ಅಧ್ಯಾಯಾಂತ್ಯದಲ್ಲೂ ೧೧ನೆಯ ಅಧ್ಯಾಯಾಂತ್ಯದಲ್ಲೂ ನಿನಗೆ ಉಪದೇಶಿಸಿದ್ದರೂ, ಕೊನೆಯಲ್ಲಿ ಇನ್ನೊಂದು ಸಲ ಆ ಸರ್ವೋತ್ಕೃಷ್ಟ ಉಪದೇಶವನ್ನು ಮಾಡುವೆನು. ಗಮನಿಸಿ ಕೇಳು. ಅದೇನು ಇಷ್ಟುದೂರ ಒತ್ತಿ ಹೇಳುತ್ತೀ ಎನ್ನುತ್ತೀಯೋ ? ನೀನು ನನಗೆ ಭಕ್ತನಾಗಿ ಪರಮ ಆಪ್ತನು ಎಂಬುದು ಸತ್ಯವಾದ ವಿಷಯವು. ಆದುದರಿಂದ ಸರ್ವೋತ್ಕೃಷ್ಟವಾದ ಈ ಉಪದೇಶವನ್ನು ಪುನಃ ಮಾಡುವೆನು. ಇಷ್ಟುದೂರ ಓ ಅರ್ಜುನನೇ ನಿನಗೆ ಉಪದೇಶಿಸಿದ ಸಾರಾಂಶವನ್ನು ಇನ್ನೊಂದು ಸಲ ಹೇಳುವೆನು.

೬೫ ವೇದಾಂತಗಳಲ್ಲಿ ಪರಮಪುರುಷನನ್ನು ಹೊಂದುವ ಉಪಾಯವು, ಧ್ಯಾನ, ಉಪಾ ಸನ, ವೇದನಾದಿ ಪದಗಳಿಂದ ಹೇಳಲ್ಪಟ್ಟು, ಸರ್ವೇಶ್ವರನ ದಿವ್ಯಮಂಗಳ ವಿಗ್ರಹವನ್ನು ಐಕಾಂತ್ಯ ಮನಸ್ಸಿನಿಂದ ಸಾಕ್ಷಾತ್ಕರಿಸೋಣವು. ಆದುದರಿಂದ ನನ್ನನ್ನು ಐಕಾಂತ್ಯದಿಂದ ಉಪಾಸನ ಮೂಲಕ ಭಜಿಸು. ಮದ್ಭಕ್ತನಾಗು ಎಂದರೆ ಇಷ್ಟೆಂದು ಹೇಳಲು ಅಳವಿಲ್ಲದಷ್ಟು ಪ್ರೀತಿಯನ್ನು ನನ್ನಲ್ಲಿ ಮಾಡುವವನಾಗಿ, ನನಗೆ ನಿರತಿಶಯ ಪ್ರೀತಿಯನ್ನುಂಟುಮಾಡುವ, ಮತ್ತು ನಿನಗೆ ನಿರತಿಶಯಾನಂದದಾಯಿಕನಾದ ನನ್ನನ್ನು ಅನವರತ ಸ್ಮರಿಸುವವನಾಗು ; ಅದರೊಂದಿಗೆ

**ಮದ್ಯಾಜೀ** ಎಂದರೆ ನನಗೆ ವಿಶೇಷ ಪ್ರೀತಿದಾಯಕವಾದ ನನ್ನ ಆರಾಧನೆ ಮೊದಲಾದ ಆಜ್ಞಾನುಜ್ಞಾಕೈಂಕರ್ಯಗಳಲ್ಲಿ ನಿರತನಾಗಿ, ಅವುಗಳಲ್ಲಿ ಮಮತೆ, ಫಲ ಮೊದಲಾದವುಗಳನ್ನು ತೊರೆದು ಅನುಷ್ಠಿಸಿ, ನನ್ನಲ್ಲಿ ಅವುಗಳನ್ನು ಸಮರ್ಪಿಸು ; ನಿನ್ನ ಎಲ್ಲಾ ಪ್ರವೃತ್ತಿಗಳಲ್ಲೂ ನನ್ನನ್ನು ಶರಣಹೊಂದಿ ನಮಸ್ಕರಿಸು ; ಹೀಗೆಲ್ಲಾ ನಡೆಸಿದುದಾದರೆ ನನ್ನ ದಿವ್ಯ ವೈಕುಂಠವನ್ನು ಬಂದು ಸೇರಿ ನನ್ನ ಸಾಯುಜ್ಯವನ್ನು ಹೊಂದುವಿ ಇದು ನನ್ನ ಸತ್ಯಪ್ರತಿಜ್ಞೆಯು ಎಂದು ನಿನಗೆ ಪ್ರಮಾಣಮಾಡಿ ಪರಮಹಿತವನ್ನು ಉಪದೇಶಿಸಿರುವೆನು ; ಏಕೆಂದರೆ ನೀನು ನನಗೆ ಪ್ರಿಯ ಭಕ್ತನಾಗಿ ವಿಶೇಷ ಪ್ರಿಯನಾಗಿರುತ್ತೀಯೆ.

೬೬ ಹೀಗೆ ಇಷ್ಟುದೂರ ವಿಸ್ತರಿಸಿ, ಇಹದಲ್ಲೂ ಮತ್ತು ದೇಹಾವಸಾನಾನಂತರವೂ ಪರಮಾನಂದದಾಯಕವಾದ ಉಪಾಯವಾದ ಭಕ್ತಿಯೋಗವನ್ನು ಉಪದೇಶಿಸಿದರೂ, ಉಪಾಸನಕ್ಕೆ ತಾನು ಅಶಕ್ತನೇ ಎಂದು ಅರ್ಜುನನು, ಇಷ್ಟಪ್ರಾಪ್ತಿಯೂ ಅನಿಷ್ಟಗಳಾದ ಪಾಪಗಳ ನಿವೃತ್ತಿಯೂ ಉಂಟಾಗುವ ಬಗೆಹೇಗೆ ಎಂದು ಶೋಕಾಕುಲನಾಗಲು, ಆಗ ಪಾಪಪರಿಹಾರಕ್ಕೆ ಶರಣಾಗತಿಯನ್ನು ಬಿಟ್ಟರೆ ಬೇರೆ ಮಾರ್ಗವೇ ಇಲ್ಲವು ಎಂಬ ಪರಮರಹಸ್ಯವನ್ನು ಗ್ರಹಿಸಿ, ನನ್ನನ್ನು ಶರಣಹೊಂದಿದರೆ ಎರಡು ಉಪಾಯಗಳಲ್ಲಿ ಯಾವುದನ್ನು ಅವಲಂಬಿಸಿದರೂ ಅನಿಷ್ಟ ನಿವೃತ್ತಿಮೂಲಕ ಇಷ್ಟಪ್ರಾಪ್ತಿಯೂ ಉಂಟಾಗುತ್ತದೆ. ನೀನು ಶೋಕಿಸಬೇಡವೆನ್ನುತ್ತಾರೆ.— ಇದು ಗೀತೆಯ ಪರಮ ರಹಸ್ಯವಾದ ಕೊನೆಯ ಶ್ಲೋಕವಾದುದರಿಂದ ಚರಮಶ್ಲೋಕವೆಂದು ಹೇಳಲ್ಪಟ್ಟು, ಮೂರು ರಹಸ್ಯಗಳಲ್ಲೊಂದಾಗಿ, ವಿಶೇಷಾರ್ಥಗಳುಳ್ಳ ಶ್ಲೋಕವೆಂದು ಹೇಳಲ್ಪಡುತ್ತದೆ; ಆದುದರಿಂದ ಎರಡುವಿಧ ಉಪಾಯಕ್ಕೂ ಅನ್ವಯಿಸುವ ಹಾಗೆ ಅರ್ಥಗಳಿವೆ. ದಿವ್ಯವೈಕುಂಠಪ್ರಾಪ್ತಿಗೆ ವ್ಯವಹಿತ ಮತ್ತು ಅವ್ಯವಹಿತ ಸಾಧನಗಳಾದ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ಧರ್ಮಗಳನ್ನೆಲ್ಲವನ್ನೂ ಮದಾರಾಧನ ಭೂತವಾಗಿ ನನಗೆ ಅತ್ಯಂತ ಪ್ರೀತಿಕರವಾದುದೆಂದು ಭಾವಿಸಿ, ನಿನ್ನ ಅಧಿಕಾರಾನುಗುಣವಾಗಿ ಅವುಗಳನ್ನು ಅನುಷ್ಠಿಸಿ ಎಂದರೆ ನಿನಗೆ ಜ್ಞಾನಯೋಗಕ್ಕೆ ಶಕ್ತಿಯಿದ್ದರೆ ಅದರೊಂದಿಗೂ, ಹಾಗಿಲ್ಲದಿದ್ದರೆ ಅದನ್ನು ಬಿಟ್ಟು ಬರೀ ಕರ್ಮಯೋಗದಿಂದಲೇ, ಭಕ್ತಿಯೋಗವನ್ನವಲಂಬಿಸಿ, ಅವುಗಳಲ್ಲಿ ಕರ್ತೃತ್ವ, ಮಮತೆ, ಫಲಗಳನ್ನು ತ್ಯಾಗಮಾಡಿ, ನಾನೊಬ್ಬನೇ ಎಲ್ಲವನ್ನೂ ನಡೆಸಿ ಕೊಡುವವನು ; ಅವುಗಳಿಂದ ನಾನೇ ಆರಾಧ್ಯನು ; ನಾನೇ ಉಪಾಯನು ; ನಾನೇ ಪ್ರಾಪ್ಯನು ಎಂದು ಅನುಸಂಧಾನದಿಂದ ಶರಣಾಗತಿಯನ್ನನುಷ್ಠಿಸು. ಅದರಿಂದ ಪ್ರೀತನಾದ ನಾನು, ನಿನ್ನ ಸರ್ವಾಪರಾಧಗಳಿಂದಲೂ ಬಿಡುಗಡೆಯನ್ನು ಹೊಂದಿಸುವೆನು. ಅಳಬೇಡ, ಅದರಿಂದಲೇ ನಿನ್ನ ಉಪಾಸನೆಯು ಕೈಗೂಡಿ, ಇಷ್ಟಪ್ರಾಪ್ತಿಯೂ ಲಭಿಸುತ್ತದೆ. ಇದು ಹಿಂದಿನ ಶ್ಲೋಕದಲ್ಲಿ ಹೇಳಿದ ಉಪಾಸನದಲ್ಲಿ ಶಕ್ತಿಯೂ ಅಧಿಕಾರವೂ ಇರುವವನಿಗೆ ಹೇಳಿದ ಗುರೂಪಾಯವು. ಅಥವಾ ಇದಕ್ಕೆ ತನಗೆ ಅಧಿಕಾರವಿಲ್ಲದೆ ಶಕ್ತಿಯಿಲ್ಲವೇ ಎಂದು ಶೋಕಿಸುತ್ತಿದ್ದ ಅರ್ಜುನನಿಗೆ ಹೇಳುವ ಲಘೂಪಾಯವು ಯಾವುದೆಂದರೆ ಹೇಳುತ್ತಾರೆ. ಅಥವಾ ಇಂತಹ ಕಷ್ಟತರವಾದ ಉಪಾಯವಾದ, ಕರ್ಮಯೋಗ ಜ್ಞಾನಯೋಗಗಳಿಂದಲಾಗಲಿ ಅಥವಾ ಬರೀ ಕರ್ಮಯೋಗದಿಂದಲಾಗಲಿ ಸಹಕರಿಸಲ್ಪಟ್ಟು ಭಕ್ತಿಯೋಗಾನುಷ್ಠಾನಕ್ಕೆ ಮನಸ್ಸು ಚಂಚಲವೇ, ಐಕಾಂತ್ಯವು ಸಾಧ್ಯವಿಲ್ಲವೇ ಪಾಪಗಳು ಕಳೆಯುವ ಬಗೆ ಹೇಗೆ ಎಂದೇನಾದರೂ ನೀನು ಶೋಕಿಸುವ ಪಕ್ಷದಲ್ಲಿ, ಸುಲಭೋಪಾಯವನ್ನು ಹೇಳುವೆನು ಕೇಳು. ಪಾಪಗಳ ನಿವೃತ್ತಿಗೆ ಅನೇಕ ಪ್ರಾಯಶ್ಚಿತ್ತಗಳು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ ; ಸಹಸ್ರಾಪರಾಧಗಳಿಗೂ ಪ್ರಾಯಶ್ಚಿತ್ತಕ್ಕೆ ಕಾಲವೂ ಅನುಕೂಲವೂ ಇಲ್ಲವೆ ಎಂದು ಶೋಕಿಸಬೇಕಿಲ್ಲವು. ನನ್ನಲ್ಲಿ ಶರಣಾಗತಿಯನ್ನನುಷ್ಠಿಸಿ, ನಿನ್ನ ಆತ್ಮರಕ್ಷಣೆಯ

ಭರವನ್ನು ನನ್ನಲ್ಲಿ ಸಮರ್ಪಿಸಿ ಬಿಡು ಅದು ಸರ್ವಪ್ರಾಯಶ್ಚಿತ್ತರೂಪ ಯಜ್ಞವಾದುದರಿಂದ ಸರ್ವಪಾಪಗಳೂ ತೊಲಗಿ ನಿನಗೆ ಪರಮ ಶ್ರೇಯಸ್ಸುಂಟಾಗುತ್ತದೆ, ಅಳಬೇಡವೆಂದು ಸಮಾಧಾನ ಮಾಡಿದರು. ಇದರ ತಾತ್ಪರ್ಯವೇನೆಂದರೆ ತನಗೆ ಸರ್ವೇಶ್ವರನೇ ಗತಿ ಇನ್ನು ಯಾರೂ ರಕ್ಷಕರಿಲ್ಲವೆಂಬ ಆಕಿಂಚನ್ಯ, ಅನನ್ಯಗತಿರೂಪ ಮಹಾ ವಿಶ್ವಾಸದಿಂದ ಆತನಲ್ಲಿ ತನ್ನ ಆತ್ಮಾವನ್ನು ಸಮರ್ಪಿಸಿಬಿಟ್ಟರೆ, ಆತನು ಪ್ರೀತನಾಗಿ ಮುಕ್ತಿಯನ್ನು ಕೊಡುವನು ಎಂಬುದು ಸಾರಭೂತಾರ್ಥವು.

ಈ ಶ್ಲೋಕದಲ್ಲಿ ಪಂಚಾಂಗ ಸಂಯುತವಾದ ಆತ್ಮನಿಕ್ಷೇಪವು ಹೇಳಲ್ಪಟ್ಟಿರುತ್ತದೆ. ಸರ್ವಧರ್ಮಾನ್ ಪರಿತ್ಯಜ್ಯ ಎಂಬಲ್ಲಿ ಆಕಿಂಚನ್ಯವೂ, **ಮಾಮೇಕಂ** ಎಂಬಲ್ಲಿ ಅನನ್ಯಗತಿತ್ವವೂ, **ಶರಣಂವ್ರಜ** ಎಂಬಲ್ಲಿ ಆನುಕೂಲ್ಯ ಸಂಕಲ್ಪ ಪ್ರಾತಿಕೂಲ್ಯವರ್ಜನದೊಂದಿಗೆ ಆತ್ಮನಿಕ್ಷೇಪವೂ, **ಮಾಶುಚಃ** ಎಂಬಲ್ಲಿ ಆಕಿಂಚನ್ಯವೂ, ಮಹಾವಿಶ್ವಾಸವೂ, **ಮೋಕ್ಷಯಿಷ್ಯಾಮಿ** ಎಂಬಲ್ಲಿ ಗೋಪ್ತೃತ್ವವರಣವೂ ಬೋಧಿತಗಳು.

ಹೀಗೆ ಪ್ರಾಪ್ಯವನ್ನು ಹೊಂದಲು ಉಪಾಸನೆ ಭರನ್ಯಾಸವೆಂಬದಾಗಿ ಎರಡು ಉಪಾಯಗಳಿಂದು ಈ ಗೀತಾಶಾಸ್ತ್ರದ ಕೊನೆಯ ಎರಡು ಶ್ಲೋಕಗಳಲ್ಲಿ ಎಂದರೆ ೬೫ ರಲ್ಲಿ ಭಕ್ತಿಯೋಗವಾದ ಉಪಾಸನೆಯೂ ೬೬ ರಲ್ಲಿ ಶರಣಾಗತಿಯೂ ಹೇಳಲ್ಪಟ್ಟವು. ಇವೆರಡೂ ಹಿತೋಪದೇಶಗಳಾಗಿ ಸಾರಭೂತವಾದ ಶ್ಲೋಕಗಳು ಈ ಗೀತೋಪನಿಷತ್ತಿನಲ್ಲಿ ಎಂದು ಭಾವಿಸತಕ್ಕದ್ದು.

೬೭ ಈ ಗೀತೋಪದೇಶ ಶ್ರವಣದಿಂದ ನಿನಗುಂಟಾದ ಇತಿಕರ್ತ್ತವ್ಯತೆ ಏನೆಂದರೆ ನೀನು ಇದನ್ನು ಸತ್ಪಾತ್ರನಲ್ಲಿ ವಿನಿಯೋಗಿಸಿ ಉಪದೇಶಿಸತಕ್ಕದ್ದು. ಹಾಗೆ ಮಾಡದಿದ್ದರೆ ವಿದ್ಯಾಚೋರನಾಗಿ ಗುರುದ್ರೋಹಿ ಎಂದೆನಿಸುವಿ ಎಂದು ಹೇಳಲು ಹೊರಟು ಪ್ರಥಮತಃ ಅಪಾತ್ರನಿಗೆ ಸರ್ವಥೈವ ಉಪದೇಶಿಸತಕ್ಕದ್ದಲ್ಲವೆಂದು ಹೇಳುತ್ತಾರೆ. ಈಗ ನಿನಗೆ ನನ್ನಿಂದ ಉಪದೇಶಿಸಲ್ಪಟ್ಟ ಪರಮ ಗುಹ್ಯವಾದ ತತ್ವಹಿತ ಪುರುಷಾರ್ಥಗಳನ್ನು ಒಳಗೊಂಡಿರುವ ಈ ಶಾಸ್ತ್ರಾರ್ಥವನ್ನು ಕರ್ಮಯೋಗಾದಿಗಳಿಗೆ ಅನಧಿಕಾರಿಯಾಗಿರುವವನಿಗೆ ಹೇಳತಕ್ಕದ್ದಲ್ಲವು. ಒಂದುವೇಳೆ ಅಧಿಕಾರಿಯಾದರೂ ಉಪದೇಶಕನಾಗಿ ಗುರುವಾದ ನಿನ್ನಲ್ಲೂ, ಲೋಕಗುರುವಾದ ನನ್ನಲ್ಲೂ ಸಹ ಭಕ್ತಿಯಿಲ್ಲದವನಿಗೂ ಎಂದಿಗೂ ಹೇಳಬೇಡ; ಅಧಿಕಾರಿಯೂ ಆಗಿ ಒಂದುವೇಳೆ ಭಕ್ತಿಯೂ ಇದ್ದರೂ, ಗುರುಶುಶ್ರೂಷೆಯ ಮಹಿಮೆ ತಿಳಿಯದಿದ್ದರೂ ಉಪದೇಶಿಸಬೇಡ; ಇವೆಲ್ಲಾ ಇದ್ದರೂ ನನ್ನ ಸ್ವರೂಪರೂಪಗುಣ ವಿಭವೈಶ್ವರ್ಯಾದಿಗಳಲ್ಲಿ ದೋಷವನ್ನು ಎಣಿಸುವವನಿಗೆ ಸರ್ವಾತ್ಮನಾ ಉಪದೇಶಿಸತಕ್ಕದ್ದಲ್ಲವು.

೬೮. ಹೀಗೆ ಅಪಾತ್ರರನ್ನು ತ್ಯಜಿಸಿ ಇಂತಹ ದುರ್ಗುಣಗಳಿಲ್ಲದ ಸತ್ಪಾತ್ರನಲ್ಲಿ ಈ ವಿದ್ಯೆಯನ್ನು ವಿನಿಯೋಗಿಸಿದರೆ ಉಂಟಾಗುವ ಫಲವನ್ನು ಹೇಳುವೆನು ಕೇಳು ಎನ್ನುತ್ತಾರೆ. ಯಾರು ಈ ಪರಮ ಗುಹ್ಯವಾದ ತತ್ವಹಿತ ಪುರುಷಾರ್ಥಗಳ ಉಪದೇಶವನ್ನು ನನ್ನ ಭಕ್ತರಲ್ಲಿ ವಿನಿಯೋಗಿಸುತ್ತಾರೋ, ಅವರು ನನ್ನಲ್ಲಿ ವಿಶೇಷ ಭಕ್ತಿಯಿಂದ ಹಿತಾಚರಣೆಯನ್ನು ಮಾಡಿ ನನ್ನನ್ನೇ ಕುರಿತು ದಿವ್ಯವೈಕುಂಠವನ್ನು ಬಂದು ಸೇರುವರು. ಇದರಲ್ಲಿ ನಿನಗೆ ಸಂಶಯವು ಬೇಕಿಲ್ಲವು.

೬೯. ಹೀಗೆ ತನ್ನ ಉಪದೇಶವನ್ನು ಸತ್ಪಾತ್ರನಲ್ಲಿ ಉಪದೇಶಿಸಿದವನಿಗಿಂತ ಪ್ರಿಯತರವಾದ ಮನುಷ್ಯನೇ ಇಲ್ಲವೆಂದು ಶ್ಲಾಘಿಸುತ್ತಾರೆ— ಸಮಸ್ತ ಮನುಷ್ಯರಲ್ಲೂ ಹೀಗೆ ನನ್ನ

ಭಕ್ತರಲ್ಲಿ ಈ ನನ್ನ ದಿವ್ಯಸೂಕ್ತಿಯನ್ನು ಉಪದೇಶಿಸುವವನಿಗಿಂತಲೂ ಮೇಲಾದವನಾಗಿ ನನಗೆ ಪ್ರಿಯನಾಗಿರುವವನು ಹಿಂದೆ ಯಾರೂ ಇರಲಿಲ್ಲವೆಂದು ಭಾವಿಸುವೆನು ಈ ಭೂಮಂಡಲದಲ್ಲಿ ಹಾಗೆಯೇ ಇಂತಹ ಉಪದೇಶಕನಿಗಿಂತ ಮೇಲಾದವರು ಯಾರೂ ಆಗಲಾರರೆಂದೂ, ಪ್ರಿಯ ತರರಾದವರು ಎಂದಿಗೂ ಮುಂದಕ್ಕೂ ಇಲ್ಲವೆಂದೂ, ಭಾವಿಸುವೆನು; ಎಂದರೆ ಹೀಗೆ ನಿನ್ನ ಉಪದೇಶವನ್ನು ಸರಿಯಾಗಿ ವಿನಿಯೋಗಿಸಿದವನು ಯಾವಾಗಲೂ ಸರ್ವ ಶ್ರೇಷ್ಠನೆಂಬ ಭಾವವು.

೭೦. ಹಿಂದೆ ಉಪದೇಶಿಸುವವನಿಗೆ ಉಂಟಾಗುವ ಫಲವು ಹೇಳಲ್ಪಟ್ಟಿತು. ಮುಂದಿನ ಎರಡು ಶ್ಲೋಕಗಳಿಂದ ಗುರುಮುಖದಿಂದ ಶಬ್ದರೂಪವಾಗಿಯಾಗಲಿ ಅರ್ಥಸಹಿತವಾಗಲಿ ಈ ಗ್ರಂಥದ ಉಪದೇಶವನ್ನು ಹೊಂದುವವನಿಗುಂಟಾಗುವ ಫಲವು ಹೇಳಲ್ಪಡುತ್ತದೆ. ಯಾರು ಈ ನಮ್ಮಿಬ್ಬರ ಸಂವಾದರೂಪವಾದ ಪರಮ ಶ್ರೇಯಸ್ಸನ್ನುಂಟುಮಾಡುವ ಧರ್ಮದಿಂದ ಕೂಡಿದ ಗೀತೋಪನಿಷತ್ತನ್ನು ಗುರುಮೂಲಕ ಅಧ್ಯಯನ ಮಾಡುತ್ತಾರೋ, ಅಂತಹ ಮಹನೀಯರು ಮಾಡುವ ಈ ಜ್ಞಾನಯಜ್ಞದಿಂದ ಪ್ರೀತನಾಗಿ, ನಾನು ಅವರಿಗೆ ತುಂಬಾ ಪ್ರಿಯವಾದವನಾಗು ವನೆಂಬುದು ನನ್ನ ಅಭಿಪ್ರಾಯವು ಎಂದರೆ ನನ್ನ ಸಂಕಲ್ಪವೆಂಬ ಭಾವವು.

೭೧. ಹೋಗಲಿ, ತಾನೇ ಹೀಗೆ ಅಧ್ಯಯನಮಾಡಲು ಅಶಕ್ತನಾಗಿ ಶ್ರದ್ಧಾನ್ವಿತ ನಾಗಿಯೂ ನನ್ನಲ್ಲಿ ದ್ವೇಷಬುದ್ಧಿಯಿಲ್ಲದವನಾಗಿಯೂ, ಯಾವ ಮನುಷ್ಯನು ಈ ಸಂವಾದ ವನ್ನು ಕೇಳಿದರೂ ಕೂಡ, ಅಂತವನೂ ಸಹ ಭಕ್ತಿವಿರೋಧಿ ಪಾಪಗಳಿಂದ ಬಿಡಲ್ಪಟ್ಟವನಾಗಿ, ಪುಣ್ಯಕರ್ಮಿಗಳಾದ ನನ್ನ ಭಕ್ತರುಗಳು ಇರುವ ಸಂಘವನ್ನು ಹೊಂದುವನು ಅಂತವರ ಸಂಬಂಧದಿಂದ ಕ್ರಮೇಣ ನನ್ನನ್ನೇ ಬಂದು ಸೇರುವನೆಂಬ ಭಾವವು.

೭೨. ಓ ಪ್ರಿಯನಾದ ಅರ್ಜುನನೇ, ಈಗ ನಿನ್ನನ್ನು ಕುರಿತು ಕೇಳುತ್ತೇನೆ—ನನ್ನಿಂದ ಈಗ ಇಷ್ಟುದೂರ ಹೇಳಲ್ಪಟ್ಟಿದುದನ್ನೆಲ್ಲಾ ಏಕಾಗ್ರಚಿತ್ತದಿಂದ ಸಾವಧಾನದಿಂದ ಕೇಳಿ ತಿಳಿದೆಯೋ? ನೀನು ದೇಹಾತ್ಮಭ್ರಮೆಯಿಂದಲೂ ಸ್ವತಂತ್ರನೆಂಬ ಭ್ರಮೆಯಿಂದಲೂ ಯುದ್ಧ ಮಾಡುವದಿಲ್ಲವೆಂದು ಹೇಳಿದ ಅಜ್ಞಾನವೆಲ್ಲಾ ಕಳೆದುಹೋಯಿತೇ ಏನು?

೭೩. ಈ ಪ್ರಶ್ನೆಗೆ ಅರ್ಜುನನು ಉತ್ತರವನ್ನು ಹೇಳುತ್ತಾನೆ—ಈ ಅದ್ಭುತವಾದ ಉಪದೇಶರೂಪಾನುಗ್ರಹದಿಂದ ಓ ಭಕ್ತರನ್ನು ಕೈಬಿಡದ ಸ್ವಾಮಿಯೇ, ನನಗಿದ್ದ ವಿಪರೀತವಾದ ಭ್ರಮಜ್ಞಾನವು ನಷ್ಟವಾಯಿತು; ಸರಿಯಾದ ಜ್ಞಾನವು ದೊರೆಯಿತು. ಅಚೇತನವಾದ ದೇಹದಲ್ಲಿ ಆತ್ಮಾ ಎಂಬ ಭ್ರಮೆಯು ನನಗೆ ಇತ್ತು. ಪರಮಪುರುಷನಿಗೆ ಶರೀರವಾಗಿಯೂ ಆತನೇ ಎಲ್ಲಾ ಚಿದಚಿತ್ತುಗಳಿಗೂ ಆತ್ಮವಾಗಿದ್ದಾನೆಂಬ ಜ್ಞಾನವು ನನಗೆ ಇರಲಿಲ್ಲವು; ತಾನೇ ಸ್ವತಂತ್ರನೆಂಬ ಭ್ರಮೆಯೂ ನನಗೆ ಇತ್ತು ನಿತ್ಯನೈಮಿತ್ತಿಕ ಕರ್ಮಗಳೆಲ್ಲಾ ಬಂಧಕಗಳೆಂಬ ಭ್ರಮೆಯೂ ಇತ್ತು ಅವುಗಳನ್ನು ಫಲಾಭಿಸಂಧಿಯಿಲ್ಲದೆ ನಡೆಸಿದರೆ ಭಗವದಾರಾಧನರೂಪ ವಾಗಿ ಪರಿಣಮಿಸಿ, ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪಗಳು ತೊಲಗುವುವು ಎಂಬ ಜ್ಞಾನವೂ ಇರಲಿಲ್ಲವು; ಇನ್ನೂ ಯಾವ ಜ್ಞಾನಗಳು ಲಭಿಸಿದವು ಎಂದರೆ ಆತ್ಮಾ, ಜ್ಞಾನ ಸ್ವರೂಪನು ಜ್ಞಾನಗುಣಕನೆಂಬ ಪ್ರಕೃತಿವಿಯುಕ್ತ ದೆಶೆಯಲ್ಲಿ ತುಂಬಾ ಪರಿಶುದ್ಧನೆಂಬ, ಪರಮಪುರುಷನಿಗೆ ಶೇಷಭೂತನೆಂಬ ಜ್ಞಾನ ಉಂಟಾಯಿತು. ಸಮಸ್ತ ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿಗಳಿಗೂ ಕಾರಣಭೂತನಾಗಿ ಪರಮಪುರುಷನಿದ್ದಾನೆಂಬ, ಆತನು ಹೇಯ ಪ್ರತ್ಯನೀಕನಾಗಿ ಕಲ್ಯಾಣಗುಣಾಕರನೆಂಬ ಯಥಾರ್ಥಜ್ಞಾನವೂ, ವೇದಾಂತಗಳಲ್ಲಿ ವಾಸು

ದೇವಶಬ್ದ ಮೊದಲಾದವುಗಳಿಂದ ಹೇಳಲ್ಪಟ್ಟ ಪ್ರಾಪಕನೂ ನೀನೇ ಎಂಬ ಜ್ಞಾನವೂ ಲಭಿಸಿತು. ಆತನು ತನ್ನ ಆರಾಧನ ರೂಪವಾದ ನಿತ್ಯನೈಮಿತ್ತಿಕಾಜ್ಞಾರೂಪ ಕೈಂಕರ್ಯಗಳಿಂದ ಸಾಧ್ಯವಾದ ಉಪಾಸನದಿಂದಲಾಗಲಿ ಭರನ್ಯಾಸದಿಂದಲಾಗಲಿ ವಶ್ಯನಾಗಿ ಮುಕ್ತಿಯನ್ನು ಕೊಡುವನೆಂಬ ಜ್ಞಾನವೂ ಲಭಿಸಿತು ಆದುದರಿಂದ ಬಂಧುಗಳಲ್ಲಿ ಸ್ನೇಹಕಾರುಣ್ಯಾದಿಂದುಂಟಾದ ವಿಪರೀತ ಜ್ಞಾನಕ್ಕೆ ಸಂಬಂಧಿಸಿದ ಶೋಕ ಮೊದಲಾದವುಗಳಿಂದ ಬಿಡಲ್ಪಟ್ಟವನಾಗಿ ಗತಸಂದೇಹನಾಗಿ ಈಗ ಸ್ವಸ್ಥಚಿತ್ತನಾಗಿರುತ್ತೇನೆ. ಒಡನೆಯೇ ದುಷ್ಟರೊಡನೆ ಧರ್ಮ್ಯಯುದ್ಧವನ್ನು ಮಾಡು ಎಂಬ ತಮ್ಮ ಆಜ್ಞೆಯನ್ನು ಶಿರಸಾವಹಿಸಿ ನಡೆಸುವನು.

೭೬. ಇಲ್ಲಿಗೆ ಗೀತೋಪದೇಶವು ಮುಗಿಯಿತು. ಧೃತರಾಷ್ಟ್ರನು ಸಂಜಯರನ್ನು ಕುರಿತು ಆದಿಯಲ್ಲಿ ತನ್ನ ಪುತ್ರರಿಗೂ ಪಾಂಡವರಿಗೂ ನಡೆಯುವ ಯುದ್ಧದ ಪರಿಣಾಮವೇನಾದೀತು ಎಂದು ಕೇಳಿದ್ದನು. ಅದಕ್ಕೆ ಸಂಜಯರು ಈ ಶ್ಲೋಕದ ಮೂಲಕ ಉತ್ತರವನ್ನು ಹೇಳುತ್ತಾರೆ.— ಹೀಗೆ ವಸುದೇವ ಪುತ್ರನಾಗಿ ಅವತರಿಸಿರುವ ಪರವಾಸುದೇವಮೂರ್ತಿಗೂ ಆತನ ಅತ್ತೆಯ ಮಗನಾಗಿ ಅವತರಿಸಿ ಆತನಲ್ಲಿ ಶರಣಾಗತಿಯನ್ನು ಅನುಷ್ಠಿಸಿರುವ ಅರ್ಜುನನಿಗೂ ಎಂದರೆ ಮಹಾತ್ಮರಾಗಿ ಮಹಾಪ್ರಾಜ್ಞರಾದ ನರನಾರಾಯಣರಿಗೂ ನಡೆದ ರೋಮಾಂಚವನ್ನುಂಟುಮಾಡುವ ಅದ್ಭುತವಾದ ಈ ಸಂವಾದವನ್ನು ಮೇಲೆ ಹೇಳಿದ ರೀತಿಯಲ್ಲಿ ಸಾಕ್ಷಾತ್ತಾಗಿ ಕೇಳಿ ತಿಳಿದೆನು.

೭೫. ಶ್ರೀ ವ್ಯಾಸಮಹರ್ಷಿಗಳ ಅನುಗ್ರಹದಿಂದುಂಟಾದ ದಿವ್ಯಚಕ್ಷುಶ್ರೋತ್ರಲಾಭದಿಂದ ಈ ಶ್ರೇಷ್ಠತಮವಾದ ಭಕ್ತಿಯೋಗವೆಂದು ಹೇಳಿಸಿಕೊಳ್ಳುವ ಅದ್ಭುತ ರಹಸ್ಯದ ಉಪದೇಶವನ್ನು ಜ್ಞಾನಬಲೈಶ್ವರ್ಯ ವೀರ್ಯಶಕ್ತಿ ತೇಜಸ್ಸೇ ಮೊದಲಾದ ಕಲ್ಯಾಣಗುಣ, ಉಭಯವಿಭೂತಿ ಇವುಗಳಿಂದ ಪರಿಪೂರ್ಣನಾದ ಶ್ರೀ ಕೃಷ್ಣ ಭಗವಾನರವರೇ ಸಾಕ್ಷಾತ್ತಾಗಿ ತಾವೇ ಹೇಳಿದ ದಿವ್ಯಸೂಕ್ತಿಯನ್ನು ಕೇಳಿ ತಿಳಿದೆನು.

೭೬. ಓ ಧೃತರಾಷ್ಟ್ರ ಮಹಾರಾಜನೇ, ಹೀಗೆ ಶ್ರೀ ಚತುರ್ಮುಖ ರುದ್ರರಿಗೂ ಈಶನಾದ ಶ್ರೀ ಹರಿಗೂ ಅರ್ಜುನನಿಗೂ ನಡೆದ ಸಂವಾದವು ತುಂಬಾ ಪುಣ್ಯಕರವಾದುದಾಗಿ ಕಿವಿಗಳಿಗೆ ಶ್ರಾವ್ಯವಾಗಿ ಆಹ್ಲಾದಕರವಾದ ದಿವ್ಯಸೂಕ್ತಿಗಳನ್ನು ಪದೇ ಪದೇ ಸ್ಮರಿಸುತ್ತಾ ನಾನು ಮಹತ್ತಾದ ಆಶ್ಚರ್ಯವನ್ನೂ ಆನಂದನ್ನೂ ಹೊಂದಿರುವೆನು.

೭೭. ಆ ಸಂವಾದದ ಸ್ಮರಣೆ ಮಾತ್ರವೇ ಅಲ್ಲದೆ ಆತನ ದಿವ್ಯಮಂಗಳ ವಿಗ್ರಹದ ದರ್ಶನವನ್ನು ಪದೇ ಪದೇ ಹೀಗೆಯೇ ಸ್ಮರಿಸಿದುದಾದರೆ ಪುನಃ ಪುನಃ ಹೊಸಹೊಸದಾಗಿ ತೋರಿ ತುಂಬಾ ಆನಂದವನ್ನು ಹೊಂದಿದವನಾಗುತ್ತೇನೆ.

೭೮. ಓ ರಾಜನೇ, ಇನ್ನು ತುಂಬಾ ಹೇಳತಕ್ಕದ್ದೇನಿರುತ್ತದೆ. ಸಂಕ್ಷೇಪವಾಗಿ ಶ್ರುತಿ ಪ್ರತಿಪಾದ್ಯವಾದ ಮುಖ್ಯವಾದ ವಿಷಯವನ್ನು ಹೇಳುವೆನು ಕೇಳು ಯಾವ ಕಡೆಯಲ್ಲಿ ಸಮಸ್ತವಾದ ಉತ್ಕೃಷ್ಟ ನಿಕೃಷ್ಟ ರೂಪವಿರುವ ಚೇತನಾಚೇತನ ವಸ್ತುಗಳ ಯಾವ ಯಾವ ಉತ್ಪತ್ತಿ ಸ್ಥಿತಿ ಪ್ರವೃತ್ತಿಗಳುಂಟೋ, ಅಂತಹ ಎಲ್ಲಾ ಯೋಗಗಳಿಗೂ ನಿಯಾಮಕನಾಗಿರುವ ಸರ್ವೇಶ್ವರನಾದ ಶ್ರೀ ಕೃಷ್ಣನಿರುವನೊ, ಯಾರ ಕಡೆಯುಲ್ಲಿ ಗಾಂಡೀವ ಧನುಸ್ಸನ್ನು ಧರಿಸಿರುವ ಶ್ರೀ ಕೃಷ್ಣನಲ್ಲಿ ಶರಣಾಗತಿಯನ್ನು ಅನುಷ್ಠಿಸಿರುವ ಅರ್ಜುನನಿದ್ದಾನೊ, ಆ ಕಡೆಯಲ್ಲೇ

ರಾಜ್ಯಾದಿ ಭೋಗ್ಯ ಸಮೃದ್ಧಿಯಿರುವ ಲಕ್ಷ್ಮಿಯೂ, ಶತ್ರುಗಳನ್ನು ಎದುರಿಸಿ ಹೊಂದುವ ಜಯವೂ, ಸರ್ವವಿಧವಾದ ಐಶ್ವರ್ಯವೂ, ಸಮಸ್ತ ನ್ಯಾಯ ಧರ್ಮವೂ ಎಲ್ಲವೂ ಶಾಶ್ವತವಾಗಿ ರುವುವು ಎಂಬುದು ನನ್ನ ದೃಢವಾದ ನಂಬಿಕೆಯು.

ಅಥವಾ ಯಾವಕಡೆ ಎಂದರೆ ಯಾವನಿಗೆ ಸಿದ್ಧೋಪಾಯನಾಗಿ ಸಮಸ್ತ ಯೋಗಗಳಾದ ಸ್ವರೂಪರೂಪ ವಿಭವೈಶ್ವರ್ಯಾದಿಗಳಿಂದ ಯುಕ್ತನಾಗಿರುವ ಶ್ರೀ ಕೃಷ್ಣನಿರುತ್ತಾನೋ, ಹಾಗೆ ಸಿದ್ಧೋಪಾಯನಾಗಿರಲು ಯಾವನು ಪ್ರಣವ ಎಂಬ ಧನುಸ್ಸಿನ ಮೂಲಕ, ಬಾಣವಾದ ತನ್ನ ಆತ್ಮಾವನ್ನು ಪರಬ್ರಹ್ಮವೆಂಬ ಲಕ್ಷ್ಯದಲ್ಲಿ ಸೇರುವಹಾಗೆ ಆತ್ಮನಿಕ್ಷೇಪವನ್ನು ಮಾಡಿ, ಹೀಗೆ ಧನುರ್ಧಾರಿಯಾಗಿರುವನೋ, ಇಂತಹ ಶರಣಾಗತನಿಗೆ ಶರಣಾಗತವತ್ಸಲನಾದ ಶ್ರೀಕೃಷ್ಣನು ಇಹದಲ್ಲಿ ಸಮಸ್ತ ಐಶ್ವರ್ಯಗಳೂ, ಸ್ವರ್ಗಾದಿ ಭೋಗಗಳೂ, ಕೊನೆಗೆ ಪರಮಪದವನ್ನೂ ಹೊಂದುವ ಭೂತಿಯೂ ಎಲ್ಲವೂ ಲಭಿಸುವುವು ಎಂದು ನನ್ನ ಧೃಢನಂಬಿಕೆಯು.

ಇದರಿಂದ ಧೃತರಾಷ್ಟ್ರನು ಗ್ರಹಿಸತಕ್ಕ ವಿಷಯವೇನೆಂದರೆ—ನಿನ್ನ ಮಕ್ಕಳೂ ಸಹ ಅರ್ಜುನನಹಾಗೆ **ಕೃಷ್ಣಂ ಧರ್ಮಂ ಸನಾತನಮ್** ಎಂಬಲ್ಲಿ ಹೇಳಿರುವಹಾಗೆ ಶ್ರೀ ಕೃಷ್ಣನನ್ನು ಸಿದ್ಧೋಪಾಯನನ್ನಾಗಿ ಭಾವಿಸಿ ಆತನ ಪಾದಗಳಲ್ಲಿ ಶರಣಾಗತಿಯನ್ನನುಷ್ಠಿಸಿ, ಪಾಂಡವರ ರಾಜ್ಯಗಳನ್ನು ಅವರಿಗೆ ಒಪ್ಪಿಸಿಬಿಟ್ಟು, ಯುದ್ಧದಿಂದ ನಿವೃತ್ತರಾದರೆ ಸುಖದಿಂದ ಇಲ್ಲೂ, ದಿವ್ಯ ವೈಕುಂಠದಲ್ಲೂ, ಬಾಳಬಹುದು ಎಂಬುದು.

೧೮ ನೆಯ ಅಧ್ಯಾಯ ಶ್ಲೋಕಗಳ ಸಂಗ್ರಹಾರ್ಥಗಳು ಸಂಪೂರ್ಣವು.

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ.



ಶ್ರೀಮದ್ಯಾಮುನಮುನಯೇ ನಮಃ

# ಶ್ರೀಮದ್ಗೀತಾರ್ಥಸಂಗ್ರಹೇ ಅಷ್ಟಾದಶಾಧ್ಯಾಯ ಸಂಗ್ರಹಶ್ಲೋಕಃ ಇತರೇ ಶ್ಲೋಕಾಶ್ಚ

---

**ಈಶ್ವರೇ ಕರ್ತೃತಾ ಬುದ್ಧಿ ಸ್ಸತ್ತ್ವೋಪಾದೇಯತಾಽನ್ತಿಮೇ ।**
**ಸ್ವಕರ್ಮ ಪರಿಣಾಮಶ್ಚ ಶಾಸ್ತ್ರಸಾರಾರ್ಥ ಉಚ್ಯತೇ ॥ ೨೨ ॥**

**ಅನ್ತಿಮೇ-**ಈ ಕೊನೆಯ ಹದಿನೆಂಟನೆಯ ಅಧ್ಯಾಯದಲ್ಲಿ ಹೇಳಿರುವದು ನಾಲ್ಕು ವಿಷಯಗಳು, **ಉಚ್ಯತೇ** - ಹೇಳಲ್ಪಟ್ಟಿರುತ್ತವೆ ೧. **ಈಶ್ವರೇ ಕರ್ತೃತಾಬುದ್ಧಿಃ**-ಈಶ್ವರನೇ ಪ್ರಧಾನಕರ್ತಾ ಎಂಬ ಬುದ್ಧಿಯು; ಇದು ೧೩, ೧೪, ೧೫ ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟಿತು; **ದೈವಂಚೈವಾತ್ರಪಂಚಮಂ** ಎಂಬಲ್ಲಿ ಸರ್ವೇಶ್ವರನು ಪ್ರಧಾನಕಾರಣವೆಂದು ಹೇಳಲ್ಪಟ್ಟಿರುತ್ತದೆ. ಇದಲ್ಲದೆ ತಾನು, ತನ್ನ ಕಳೇಬರ, ಇಂದ್ರಿಯಗಳೂ ಪ್ರಾಣಚೇಷ್ಟಿತವು, ಹೀಗೆ ನಾಲ್ಕು ಕಾರಣಗಳು. ಹಾಗೆಯೇ ಇಲ್ಲಿ ತನಗೂ ಕರ್ತೃತ್ವವುಂಟೆಂದು ಭಾವಿಸಿ, ತಾನು ಮಾತ್ರವೇ ಕರ್ತಾ ಎಂದು ತಿಳಿಯುವವನು ಮೂಢನೆಂದು ೧೬ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. **ಅಧಿಷ್ಠಾನಂತಥಾಕರ್ತಾ** ಎಂಬ ಶ್ಲೋಕದಲ್ಲಿ ಕ್ಷೇತ್ರಜ್ಞನಿಗೆ ಕರ್ತೃತ್ವ ಉಂಟೆಂದು ಹೇಳಿರುವ ಅಭಿಪ್ರಾಯವೇ **ಕರ್ತಾಶಾಸ್ತ್ರಾರ್ಥವತ್ವಾತ್** ಎಂಬ (ಶಾ. ೨. ೩. ೩೩) ಸೂತ್ರದಲ್ಲಿ ಉಪಪಾದಿತವು. ಆದರೆ ಅದೇ ಶ್ಲೋಕದಲ್ಲೇ **ದೈವಂಚೈವಾತ್ರಪಂಚಮ**ಂ ಎಂದಿರುವದರಿಂದ ಅದು ಪರಮಾತ್ಮಾಧೀನವೆಂದು ಹೇಳಲ್ಪಟ್ಟಿತು, ಈ ಅಭಿಪ್ರಾಯವು "**ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ । ಭ್ರಾಮಯನ್ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ** ॥ ಎಂದು ಈ ಅಧ್ಯಾಯದಲ್ಲೂ ಮತ್ತು **ಸರ್ವಸ್ಯಚಾಹಂ ಹೃದಿಸನ್ನಿವಿಷ್ಟಃ ಮತ್ತಃ ಸ್ಮೃತಿರ್ಜ್ಞಾನಮಪೋಹನಂಚ** ಎಂದು ಹಿಂದೆಯೂ (ಗೀ ೧೫. ೧೫) ಹೇಳಲ್ಪಟ್ಟಿರುತ್ತದೆ. "**ಪರಾತ್ತುತಚ್ಛ್ರುತೇಃ**" ಎಂಬ ಬ್ರಹ್ಮಸೂತ್ರವೂ ಇದನ್ನೇ ಉಪಪಾದಿಸುತ್ತದೆ. ಈತನು ಮಾಡುವ ಕರ್ಮವೆಲ್ಲ ಪರಮಾತ್ಮಾಧೀನವೇ ಆದರೆ, ಶಾಸ್ತ್ರದ ವಿಧಿನಿಷೇಧವಾಕ್ಯಗಳೆಲ್ಲಾ ನಿರರ್ಥಕವಾದವು ಆಗುವದಿಲ್ಲವೇ? ಆಗ ಸದ್ಗುರುವಿನಿಂದಾಗತಕ್ಕದ್ದು ಯಾವುದೂ ಇಲ್ಲವು, ಎಂಬ ಶಙ್ಕೆಗಳ ನಿವೃತ್ತಿಗಾಗಿ "**ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧವೈಯರ್ಥ್ಯಾದಿಭ್ಯಃ**" (ಶಾರೀ. ೨ ೩ ೪೧) ಎಂಬ ಸೂತ್ರವು ಹೇಳಲ್ಪಟ್ಟಿರುತ್ತದೆ. ಇದರಿಂದ ಶಾಸ್ತ್ರಾಭಿಪ್ರಾಯವೇನೆಂದರೆ— ಪರಮಾತ್ಮನಿಂದ ಕೊಡಲ್ಪಟ್ಟ ಕರಣ ಕಳೇಬರಾದಿಗಳ ಮೂಲಕವಾಗಿ ಆತನಿಂದ ಕೊಡಲ್ಪಟ್ಟ ಸತ್ತಾಜ್ಞಾನ ವಿವೇಕಾದಿಗಳಿಂದ ಕರ್ಮನಿಷ್ಪತ್ತಿಗಾಗಿ ಆತನಿಂದ ದಯಪಾಲಿಸಲ್ಪಟ್ಟ ಸ್ವೇಚ್ಛೆಯಿಂದ ಪ್ರಥಮದಲ್ಲಿ ಸಙ್ಕಲ್ಪಿಸಿ ಕೆಲಸವನ್ನಾರಂಭಿಸುತ್ತಾನೆ. ಆದುದರಿಂದ ವಿಧಿನಿಷೇಧಶಾಸ್ತ್ರವೈಯರ್ಥ್ಯವೂ ಇಲ್ಲವು; ಗುರೂಪದೇಶವೈಯರ್ಥ್ಯವೂ ಇಲ್ಲವು. ಅನಂತರ ಪರಮಾತ್ಮನು ತನ್ನ ಅನುಮತಿಯನ್ನು ಕೊಡುವದರ ಮೂಲಕ ಪ್ರೇರಕನಾಗಿ ಕೆಲಸವನ್ನು ನಡೆಸುವನು. ಹೀಗೆ ಇಬ್ಬರ ಸಙ್ಕಲ್ಪವೂ ಕೂಡಿದರೇನೇ ಕಾರ್ಯನಿಷ್ಪತ್ತಿಯು, ಇದೇ ೧೩ ರಿಂದ ೧೬ ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟಿತು

೨ **ಸತ್ತ್ವೋಪಾದೇಯತಾ** - ೧೮ ನೆಯ ಶ್ಲೋಕ ಮೊದಲುಗೊಂಡು ಮೂರು ಮೂರು ಶ್ಲೋಕಗಳ ಮೂಲಕ, ಜ್ಞಾನ, ಕರ್ಮ, ಕರ್ತೃ, ಬುದ್ಧಿ, ಧೃತಿಗಳೆಲ್ಲಾ ಸಾತ್ವಿಕರಾಜಸತಾಮಸಗಳಾಗಿ ಮೂರು ವಿಧಗಳೆಂದು ಹೇಳಿ, ಆದರಲ್ಲಿ **ಸಾತ್ವಿಕವೇ ಉಪಾದೇಯವೆಂದು ಉಪದೇಶಿಸ**ಲ್ಪಟ್ಟಿತು (೧೮ ರಿಂದ ೩೫). ರಾಜಸ ತಾಮಸ ಗುಣಗಳಿದ್ದರೂ, ಅವುಗಳನ್ನಡಗಿಸಿ ಸಾತ್ವಿಕವನ್ನು ವೃದ್ಧಿಗೊಳಿಸತಕ್ಕದ್ದೆಂಬ ಉಪದೇಶವು.

೩. **ಸ್ವಕರ್ಮಪರಿಣಾಮಶ್ಚ.** ಹೀಗೆ ಸಾತ್ವಿಕರಾಜಸಾದಿ ಭೇದಗಳಿಂದ ನಾಲ್ಕುವರ್ಣಗಳಿಂದೂ ಅವರುಗಳ ಸ್ವಭಾವದಿಂದುಂಟಾದ ಪ್ರವೃತ್ತಿಗಳೂ ಮತ್ತು ಸ್ವಕರ್ಮನಿರತರಾಗಿದ್ದುಕೊಂಡು ಸಿದ್ಧಿಯನ್ನು ಹೊಂದುವ ಪ್ರಕಾರಗಳು ೩೬ ರಿಂದ ೪೬ ರ ವರೆಗೂ ಹೇಳಲ್ಪಟ್ಟವು ಅನಂತರ ೫೭ ನೆಯ ಶ್ಲೋಕದವರೆಗೂ ಇದರಿಂದ ಸಂಸಿದ್ಧಿಯನ್ನು ಹೊಂದುವ ಪ್ರಕಾರವು ಹೇಳಲ್ಪಟ್ಟಿತು.

೪. **ಶಾಸ್ತ್ರಸಾರಾರ್ಥವು— " ತ ಮೇವ ಶರಣಂ ಗಚ್ಛಸರ್ವಭಾವೇನ ಭಾರತ "** (ಗೀ ೧೮-೬೨) ಎಂದು ಪ್ರಾರಂಭಿಸಿ ಅಙ್ಗಶರಣಾಗತಿಯನ್ನು ವಿಧಿಸಿ, ಆದರಿಂದ ಅನುಗ್ರಹೀತವಾದ ಭಕ್ತಿಯೋಗವೆಂದರೆ ಉಪಾಸನವನ್ನು ಮಾಡು ಎಂದು ಪರಮ ಹಿತೋಪದೇಶವನ್ನು ಮಾಡಿದರು. ನೀನು ಇದನ್ನು ಮುಖ್ಯವಾಗಿ ಮಾಡತಕ್ಕದ್ದು. ಇದು ಗುಹ್ಯತಮವಾದ ಉಪದೇಶವು ನೀನು ನನಗೆ ಪ್ರಿಯತಮನಾಗಿರುವದರಿಂದ ತಿಳಿಸಿರುತ್ತೇನೆಂದು ಹೇಳಿದರು. ೬೫ ನೆಯ ಶ್ಲೋಕವು. ಆದರೆ ಅರ್ಜುನನು ಆದು ಅನನ್ಯಭಕ್ತಿಯಿಂದ ದೊರೆಯತಕ್ಕದ್ದೇ, ಅಂತಹ ಉಪಾಸನಕ್ಕೆ ತನಗೆ ಯೋಗ್ಯತೆಯಿಲ್ಲವೇ ಎಂದು ಶೋಕಿಸಲು, ಆಗ ಕರುಣಾದ್ರ್ರಹೃದಯನು ಎಲ್ಲರಿಗೂ ಅಧಿಕಾರವಿರುವ ಸುಕರವಾದ ಶರಣಾಗತಿ ಎಂದರೆ ಭರನ್ಯಾಸವನ್ನು ಉಪದೇಶಿಸಿದರು. (ಇದು ೬೬ ನೆಯ ಶ್ಲೋಕವು.) ಉಪಾಯಗಳೆರಡೆಂದೂ ಒಂದು ಭಕ್ತಿಯೋಗವು, ಉಪಾಸನೆಯು ತ್ರಿವರ್ಣರಲ್ಲಿ ಶಕ್ತನಿಗೂ, ಇನ್ನೊಂದು ಪ್ರಪತ್ತಿಯು, ಶರಣಾಗತಿಯು ತ್ರಿವರ್ಣರಲ್ಲಿ ಅಶಕ್ತರಿಗೂ ಸ್ತ್ರೀಗಳು, ಶೂದ್ರರು, ಪಂಚಮರು ಮೊದಲಾಗಿ ಸರ್ವರಿಗೂ ಎಂಬ ಶಾಸ್ತ್ರಸಾರಾಂಶವು ಹೇಳಲ್ಪಟ್ಟಿತು. ಪುರುಷಾರ್ಥಗಳು ನಾಲ್ಕು. ಈ ನಾಲ್ಕು ಪುರುಷಾರ್ಥಗಳಲ್ಲಿ ಯಾವುದು ಅಪೇಕ್ಷಿತವಾಗಿ ಅದು ಇಲ್ಲವೇ ಎಂದು ಶೋಕಿಸುತ್ತಾನೋ ಅದಕ್ಕೆ ತಾನೇ ಸಿದ್ಧೋಪಾಯನಾಗಿ ನಿಂತು ನಾನೇ ನಡೆಸಿಕೊಡುವೆನು ಎಂದು ಲೀಲಾಸಾರಥಿಯು ಸತ್ಯಪ್ರತಿಜ್ಞೆಯನ್ನು ಮಾಡಿರುತ್ತಾರೆಂಬುದೇ ಸರ್ವಶಾಸ್ತ್ರ ಸಾರಾಂಶವು. ಇದು ೬೬ ನೆಯ ಶ್ಲೋಕದಲ್ಲಿ ಉಪಪಾದಿತವು. ಆದುದರಿಂದ ಶಾಸ್ತ್ರಸಾರಾಂಶವು ೬೫ ಮತ್ತು ೬೬ ನೆಯ ಶ್ಲೋಕಗಳಲ್ಲಿ ಹೇಳಲ್ಪಟ್ಟವು. ಇವೆರಡೇ ಭಗವಂತನನ್ನು ನಿತ್ಯವಿಭೂತಿಯಲ್ಲಿ ಹೋಗಿ ಸೇರುವ ಉಪಾಯಗಳು. ಈ ೬೬ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟ ಸಾಧ್ಯೋಪಾಯಾನುಷ್ಠಾನದಲ್ಲಿ ಸಮಸ್ತರಿಗೂ ಏನೊಂದೂ ವ್ಯತ್ಯಾಸವಿಲ್ಲದೆ ಅಧಿಕಾರವಿರುವದರಿಂದ, ಸರ್ವರೂ ಅನುಷ್ಠಿಸಿ, ಭಗವಂತನ ಕೃಪೆಯನ್ನು ಹೊಂದಬಹುದು. ಹೀಗಿದ್ದರೂ ಅನೇಕರು ಅನುಷ್ಠಿಸುವದಿಲ್ಲವೇ ಎಂಬುದು ಶೋಚನೀಯ ವಿಷಯವು. ||೨೨||

# ಶ್ರೀಮದ್ಗೀತಾರ್ಥಸಙ್ಗ್ರಹೇ
## ಉತ್ತರಶ್ಲೋಕಾಃ

---

**ಮೂ. ಕರ್ಮಯೋಗಸ್ತಪಸ್ತೀರ್ಥದಾನಯಜ್ಞಾದಿ ಸೇವನಮ್ ।**
**ಜ್ಞಾನಯೋಗೋ ಜಿತಸ್ವಾಂತೈಃ ಪರಿಶುದ್ಧಾತ್ಮನಿಸ್ಥಿತಿಃ ॥ ೨೩ ॥**

---

**ಮೂಲಕ್ಕೆ ಅರ್ಥವು:**—ಹೀಗೆ ಪ್ರತಿಯೊಂದು ಅಧ್ಯಾಯದ ಸಙ್ಗ್ರಹಾರ್ಥವನ್ನೂ ಹೇಳಿ, ಮುಂದೆ ಹತ್ತು ಶ್ಲೋಕಗಳ ಮೂಲಕ ಕರ್ಮಯೋಗಾದಿಗಳ ಸ್ವರೂಪಾದಿಗಳನ್ನು ತಿಳಿಸುತ್ತಾರೆ ಒಂದೊಂದು ಅರ್ಥಶ್ಲೋಕದ ಮೂಲಕ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗದ ಸ್ವರೂಪವನ್ನು ಹೇಳುತ್ತಾರೆ ಹಿಂದೆ ಪ್ರಥಮಶ್ಲೋಕದಲ್ಲೇ ಕರ್ಮಯೋಗ ಜ್ಞಾನಯೋಗಗಳು ಅಙ್ಗಗಳಾಗಿ ಭಕ್ತಿಯೋಗಕ್ಕೆ ಸಾಧನಗಳೆಂಬ **ಸ್ವಧರ್ಮಜ್ಞಾನವೈರಾಗ್ಯಸಾಧ್ಯಭಕ್ತ್ಯೇಕಗೋಚರಃ** ಎಂಬ ವಾಕ್ಯಕ್ಕೆ ವಿರುದ್ಧವಾಗದ ಹಾಗೆ ಮುಂದಿನ ಎರಡು ಶ್ಲೋಕಗಳನ್ನು ಅನ್ವಯಿಸತಕ್ಕದ್ದಾಗಿರುತ್ತದೆ **ಕರ್ಮಯೋಗವು**, ತಪಸ್ಸು, ತೀರ್ಥಯಾತ್ರೆ, ದಾನ ಯಜ್ಞವೆಂದರೆ ದೇವತಾರ್ಚನೆಯಿಂದ ಕೂಡಿದ ಪಂಚಮಹಾಯಜ್ಞವಾಗಲಿ, ಅಥವಾ ಯಜ್ಞಯಾಗಾದಿಗಳಾಗಲಿ, **ಸೇವನಂ**-ಕರ್ಮಯೋಗದಿಂದುಂಟಾಗುವ ಆತ್ಮಯಾಥಾತ್ಮ್ಯಜ್ಞಾನ, ಆತ್ಮಸಮತ್ವಜ್ಞಾನಾದಿಗಳು ಲಭಿಸಿ, ತಾನು ಪರಮಾತ್ಮನಿಗೇನೇ ಶೇಷಭೂತನು. ತಾನು ಅವನಿಗೇನೇ ಭೋಗ್ಯನು ತಾನು ಮಾಡುವದೆಲ್ಲಾ ಆತನ ಪ್ರೀತಿಗಾಗಿ ಎಂಬ ಜ್ಞಾನವು ಲಭಿಸುವವರೆಗೂ ಅನುಷ್ಠಿಸೋಣವು. **ಸೇವನ** ವೆಂದರೆ ಫಲಸಿದ್ಧಿಯುಂಟಾಗುವವರೆಗೂ ಸಾಯುವವರೆಗೂ ಅನುಷ್ಠಿಸೋಣವು. ನಾಲ್ಕನೆಯ ಅಧ್ಯಾಯದಲ್ಲಿ ಕರ್ಮಯೋಗಕ್ಕೆ ಸಂಬಂಧಿಸಿದ ಅನುಷ್ಠಾನಪ್ರಕಾರಗಳೆಲ್ಲಾ ಹೇಳಲ್ಪಟ್ಟವು. ಅವುಗಳಲ್ಲಿ ತನಗೆ ಶಕ್ತಿಯಿರುವ ಯಾವುದಾದರೂ ಒಂದನ್ನು ನಡೆಸಬಹುದೆಂದು ಹೇಳಲ್ಪಟ್ಟಿತು.; **ಯಜ್ಞಾದಿ** ಎಂಬಲ್ಲಿ ಆದಿಶಬ್ದದಿಂದ ಮಿಕ್ಕ ಅನುಷ್ಠಾನಪ್ರಕಾರಗಳು ಹೇಳಲ್ಪಟ್ಟವು. ಇದರಿಂದುಂಟಾಗುವಫಲವು ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಗಳಾದ ಪಾಪಗಳ ಪರಿಹಾರವೂ ಭಕ್ತಿಯೋಗಾನುಷ್ಠಾನಕ್ಕೆ ಅರ್ಹತೆಯೂ ಸಹ ಜೀವಾತ್ಮಯಾಥಾತ್ಮ್ಯಜ್ಞಾನವೂ ಸಹ ಇವುಗಳೇ ಕರ್ಮಯೋಗದಿಂದುಂಟಾಗುವ ಫಲಗಳು **ಜ್ಞಾನಯೋಗವಾದರೋ, ಪರಿಶುದ್ಧಾತ್ಮನಿಸ್ಥಿತಿಃ** –ಪ್ರಕೃತಿಯುಕ್ತವಾಗಿರುವದರಿಂದ ಪರಿಶುದ್ಧವಾದ ಆತ್ಮಚಿನ್ತನದಲ್ಲಿರೋಣವು ಇದು ಎಲ್ಲರಿಗೂ ಸಾಧ್ಯವಿಲ್ಲವು. ಆದುದರಿಂದ ಎಂತಹವರಿಗೆ ಮಾತ್ರ ಉಪಾದೇಯವೆಂದರೆ, **ಜಿತಸ್ವಾಂತೈಃ**– ಮನಸ್ಸು ವಿಷಯಗಳಲ್ಲಿ ಪ್ರವರ್ತಿಸದ ಹಾಗೆ ಸರ್ವೇನ್ದ್ರಿಯೋಪರತಿಯುಂಟಾಗುವ ಹಾಗೆ ಮನಸ್ಸನ್ನು ಜಯಿಸಿರುವದರಿಂದ ಮಾತ್ರ ಅನುಷ್ಠೇಯವು ಅರ್ಜುನನ ವಿಷಯದಲ್ಲಿ ಜ್ಞಾನಯೋಗ ಸಾಧ್ಯವಿಲ್ಲವೆಂದು ತಿಳಿದು ಮೊದಲು ೧೦ ಕಾರಣಗಳಿಂದ ಆತನನ್ನು ಕರ್ಮಯೋಗವನ್ನೇ ಮಾಡು ಅದರ ಫಲವಾದ ಆತ್ಮಾವಲೋಕನಸಿದ್ಧಿಯು ಕರ್ಮಯೋಗ ಮಾತ್ರದಿಂದಲೇ ಲಭಿಸುತ್ತದೆಂದು ಮೂರನೆಯ ಅಧ್ಯಾಯದಲ್ಲಿ ಹೇಳಿ, ಪುನಃ ಐದನೆಯ ಅಧ್ಯಾಯದಲ್ಲಿ ಆತ್ಮಾವಲೋಕನಸಿದ್ಧಿಯು ಕರ್ಮಯೋಗದಲ್ಲಿ ಸುಕರವಾಗಿಯೂ ಕ್ಷಿಪ್ರದಲ್ಲಿಯೂ ಲಭಿಸುತ್ತದೆಂದು ಉಪದೇಶಿಸಿ, ಪುನಃ ೧೮ ನೆಯ ಅಧ್ಯಾಯದಲ್ಲಿ ೪೬-೪೭ ನೆಯ

**ಮೂ. ಭಕ್ತಿಯೋಗಃ ಪರೈಕಾನ್ತ್ಯಪ್ರೀತ್ಯಾಧ್ಯಾನಾದಿಷುಸ್ಥಿತಾಃ ।**
**ತ್ರಯಾಣಾಮಪಿ ಯೋಗಾನಾಂ ತ್ರಿಭಿರನ್ಯೋನ್ಯ ಸಙ್ಗ್ರಹಃ ॥೨೪॥**

ಶ್ಲೋಕಗಳಲ್ಲಿ ಜ್ಞಾಪಕಕ್ಕೆ ಕೊಡುವದರಿಂದ, ಅರ್ಜುನಾದಿ ಸಾಧಾರಣಜನರಿಗೆ ಜ್ಞಾನಯೋಗವು ಸಪ್ರಮಾದವೆಂದು ಹೇಳಿರುವದರಿಂದ ಇಲ್ಲಿ ಸಙ್ಗ್ರಹವಾಗಿ **ಜಿತೆಸ್ವಾಂತೈಃ** ಎಂಬ ಪ್ರಯೋಗವು. ಈ ಪರಿಶುದ್ಧಾತ್ಮನ ಸ್ಥಿತಿಯು ಬರೀ ಕರ್ಮಯೋಗದಿಂದಲೇ ಜ್ಞಾನಯೋಗಕ್ಕೆ ಅಸಮರ್ಥನಾಗಿರುವವನಿಗೂ ಸುಕರವಾಗಿಯೂ ಕ್ಷಿಪ್ರದಲ್ಲೂ ಲಭಿಸುತ್ತದೆ. ಆದರೆ ಜ್ಞಾನಯೋಗಿಗುಂಟಾಗುವ ಆತ್ಮರತಿಯು ಎಂದರೆ ಆನಂದವು ಕರ್ಮಯೋಗಿಗಿಲ್ಲವು ॥೨೩॥

ಬರೀ ಕರ್ಮಯೋಗದಿಂದಾಗಲಿ ಅಥವಾ ಕರ್ಮಯೋಗ ಜ್ಞಾನಯೋಗಗಳಿಂದಾಗಲಿ ಉಪಾಯವಾದ ಭಕ್ತಿಯೋಗದಲ್ಲಿ ಅರ್ಹತೆಯುಂಟಾಗುತ್ತದೆ. ಏಕೆಂದರೆ ಕರ್ಮಯೋಗದಿಂದ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪಗಳು ತೊಲಗುವದರಿಂದ. ಮುಂದೆ ಭಕ್ತಿಯೋಗವೆಂದರೇನೆಂಬುದನ್ನು ತಿಳಿಸುತ್ತಾರೆ—ಭಕ್ತಿಯೋಗವು **ಪರೈಕಾನ್ತ್ಯಪ್ರೀತ್ಯಾ** - ಪರಬ್ರಹ್ಮನಲ್ಲಿ ಏಕಾಂತವಾದ ಪ್ರೀತಿಯಿಂದ, **ಧ್ಯಾನಾದಿಷುಸ್ಥಿತಿಃ** - ಧ್ಯಾನವೆಂದರೆ ಉಪಾಸನೆ ಮೊದಲಾದವುಗಳ ಅನುಷ್ಠಾನವು ಭಕ್ತಿ, ಧ್ಯಾನ, ವೇದನ, ಜ್ಞಾನ, ಉಪಾಸನ, ಧ್ರುವಾನುಸ್ಮೃತಿ ಇತ್ಯಾದಿ ಪದಗಳೆಲ್ಲಾ ಪರ್ಯಾಯಪದಗಳು; ಆದುದರಿಂದ ಭಕ್ತಿಶಬ್ದಕ್ಕೆ ಧ್ಯಾನವೆಂದು ವ್ಯಾಖ್ಯಾನಮಾಡಲ್ಪಟ್ಟಿತು. ಆದುದರಿಂದ ಭಕ್ತಿಯೋಗವೆಂದರೆ ಐಕಾನ್ತ್ಯಪ್ರೀತಿಯಿಂದ ಮನಸ್ಸನ್ನು ತೈಲಧಾರೆಯ ಹಾಗೆ ಪರಮಾತ್ಮನಲ್ಲಿಟ್ಟು ಉಪಾಸಿಸೋಣವು. ಸಾಧಾರಣವಾಗಿ ಭಕ್ತಿ ಎಂದರೆ ಮಹನೀಯರಲ್ಲಿ ಮಾಡುವ ಪ್ರೀತಿಯು; ಆದುದರಿಂದ ಪರಮಾತ್ಮನನ್ನು ಐಕಾನ್ತ್ಯಮನಸ್ಸಿನಿಂದ ಪ್ರೀತಿಸೋಣವು; "**ಪ್ರೀತಿರೂಪಮನುಧ್ಯಾನಂ ಭಕ್ತಿರಿತ್ಯಭಿಧೀಯತೇ**" ಎಂದು ಹೇಳಲ್ಪಟ್ಟಿರುತ್ತದೆ; ಇದೇ ಉಪಾಸನ ಶಬ್ದದಿಂದ ಬೋಧಿತವಾದುದು; ಇಲ್ಲಿ **ಧ್ಯಾನಾದಿಷುಸ್ಥಿತಿಃ** ಎಂಬಲ್ಲಿ ಆದಿಶಬ್ದದಿಂದ "**ಸತತಂ ಕೀರ್ತಯನ್ತೋ ಮಾಂ ಯತನ್ತಶ್ಚ ದೃಢವ್ರತಾಃ । "ನಮಸ್ಯನ್ತಶ್ಚ ಮಾಂ ಭಕ್ತ್ಯಾನಿತ್ಯಯುಕ್ತಾ ಉಪಾಸತೇ**" ಎಂಬಲ್ಲೂ ಮತ್ತು "**ಮಚ್ಚಿತ್ತಾಮದ್ಗತಪ್ರಾಣಾಃ ಬೋಧಯನ್ತಃ ಪರಸ್ಪರಮ್ । ಕಥಯನ್ತಶ್ಚಮಾಂ ನಿತ್ಯಂ ತುಷ್ಯನ್ತಿಚ ರಮನ್ತಿಚ**" ಎಂಬಲ್ಲೂ ಉಪಾಸನವ್ಯತಿರಿಕ್ತ ವ್ಯಾಪಾರಗಳಾದ, ನಮಸ್ಕಾರ, ಕೀರ್ತನ, ಶ್ರವಣಾದಿಗಳು ಹೇಳಲ್ಪಟ್ಟವು ಇದಕ್ಕೆ ಮನಸ್ಸನ್ನು ಸ್ಥಿರವಾಗಿ ಉಪಾಸ್ಯವಾದ ಪರಮಪುರುಷನ ದಿವ್ಯಮಙ್ಗಳ ವಿಗ್ರಹದಲ್ಲಿ ಇಡುವದು ಆವಶ್ಯಕವೆಂದೂ, ಅಂತಹ ಮನಸ್ಸಿನ ಐಕಾಂತ್ಯವು ಅಭ್ಯಾಸದಿಂದಾಗಲಿ, ಆತನಿಗೆ ಕೈಂಕರ್ಯಮಾಡುತ್ತಾ ಬಂದರಾಗಲಿ ಅಥವಾ ಕರ್ಮಯೋಗದಿಂದಲಾಗಲಿ ಸಿದ್ಧಿಸುತ್ತದೆ ಎಂದು ಹೇಳಲ್ಪಟ್ಟಿತು ಈ ಅಭಿಪ್ರಾಯವನ್ನು ವೇದಾರ್ಥಸಙ್ಗ್ರಹದಲ್ಲೂ ಕಾಣಬಹುದು. ಅಲ್ಲಿ ಹೇಳಿರುತ್ತಾರೇನೆಂದರೆ "**ಅಶೇಷ ಜಗದ್ಧಿತಾನುಶಾಸ ಶ್ರುತಿನಿಕರಶಿರಸಿ ಸಮಧಿಗತೋಽಯಮರ್ಥಃ— ಜೀವ ಪರಯಾಥಾತ್ಮ್ಯ ಜ್ಞಾನಪೂರ್ವಕ ವರ್ಣಾಶ್ರಮಧರ್ಮೇತಿಕರ್ತವ್ಯತಾಕ ಪರಮಪುರುಷಚರಣಯುಗಳ ಧ್ಯಾನಾರ್ಚನ ಪ್ರಣಾಮಾದಿ ರತ್ಯರ್ಥ ಪ್ರಿಯಸ್ತತ್ಪ್ರಾಪ್ತಿಫಲಃ**" ಸಮಸ್ತ ಜಗತ್ತಿಗೂ ಹಿತವನ್ನು ಸರ್ವೋಪನಿಷತ್ತುಗಳಲ್ಲಿ ವಿಧಿಸಿರುವದು ಇಷ್ಟೇ. ಜೀವಾತ್ಮನ ಮತ್ತು ಪರಮಪುರುಷನ ಯಥಾರ್ಥಜ್ಞಾನಪೂರ್ವಕವಾದ, ತನ್ನ ಇತಿಕರ್ತವ್ಯತಾರೂಪವಾದ ವರ್ಣಾಶ್ರಮಧರ್ಮಗಳಿಂದ ಮಾಡಿದ ಪರಮಪುರುಷನ ಪಾದಕಮಲಗಳ, ಧ್ಯಾನ ಅರ್ಚನ, ಪ್ರಣಾಮಾದಿಗಳು ಪರಮಪುರುಷನಿಗೆ ವಿಶೇಷ ಪ್ರಿಯವಾದುವಾಗಿ ಆತನ ಪ್ರಾಪ್ತಿಯನ್ನೇ ಫಲವಾಗಿವುಳ್ಳದು" ಎಂಬುದಾಗಿ.

ಉತ್ತರಾರ್ಧದಲ್ಲಿ ಹೇಳುವದು ಏನೆಂದರೆ— ಮೂರು ಯೋಗಗಳಲ್ಲೂ, ಕರ್ಮಜ್ಞಾನ ಭಕ್ತಿಗಳುಂಟೆಂದೂ, ಹಾಗಾದರೆ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳೆಂಬ ಭಿನ್ನ ವ್ಯವಹಾರಗಳು ಏತರಿಂದ ಎಂದರೆ? ಕರ್ಮಜ್ಞಾನ ಭಕ್ತಿಗಳ ಪ್ರಾಧಾನ್ಯದಿಂದ ಹಾಗೆ ಹೆಸರುಗಳೆಂದು ತಿಳಿಸುತ್ತಾರೆ. ಈ ಮೂರು ಯೋಗಗಳಲ್ಲಿ ಕರ್ಮಯೋಗ ಜ್ಞಾನಯೋಗಗಳು ಅಂಗಗಳು; ಭಕ್ತಿಯೋಗವೇ ಅಂಗಿಯು. ಆದರೂ ಮೂರು ಯೋಗಗಳಲ್ಲೂ ಕರ್ಮಜ್ಞಾನ ಭಕ್ತಿಗಳು, ಉಂಟೆಂದು ಹೇಳುತ್ತಾರೆ. ಆದರೆ ಅವುಗಳ ಸ್ವರೂಪಗಳು ಭಿನ್ನವಾಗಿರುವುವು. ಕೆಲವರು ಮೂರು ಯೋಗಗಳಲ್ಲೂ ಮೂರು ಯೋಗಗಳೂ ಉಂಟೆಂಬ ಅಪಾರ್ಥವನ್ನು ಹೇಳಿ, ಮೂರೂ ಉಪಾಯಗಳೆಂದು ವಾದಿಸುವರು ಇದು ಅಪಾರ್ಥವು. ಮೂರು ಯೋಗಗಳಲ್ಲೂ ಕರ್ಮಜ್ಞಾನ ಭಕ್ತಿಗಳು ಉಂಟೆಂಬುದೇ ಶಾಸ್ತ್ರಾರ್ಥವು. **ತ್ರಯಾಣಾಮಪಿ ಯೋಗಾನಾಂ.** ಈ ಮೂರು ಯೋಗಗಳಲ್ಲೂ, **ತ್ರಿಭಿಃ** - (೧) ಕರ್ಮಾನುಷ್ಠಾನ, (೨) ಜ್ಞಾನ— ಪರಾವರ ತತ್ವ ಜ್ಞಾನ, (೩) ಪರಮಾತ್ಮನಲ್ಲಿ ಪ್ರೀತಿ ರೂಪ ಭಕ್ತಿ ಇವು ಮೂರರಿಂದಲೂ, **ಅನ್ಯೋನ್ಯಸಂಗ್ರಹಃ** ಅನ್ಯೋನ್ಯವಾಗಿ ಸೇರಿರುವಿಕೆಯುಂಟು ಹೇಗೆಂದರೆ— ಕರ್ಮಯೋಗದಲ್ಲಿ— (೧) ನಿತ್ಯ ನೈಮಿತ್ತಿಕ ಐಚ್ಛಿಕ ಕರ್ಮಾನುಷ್ಠಾನವೂ, (೨) ಜೀವಾತ್ಮನು ಅಣುತ್ವ, ನಿತ್ಯತ್ವ, ಜ್ಞಾನತ್ವ, ಜ್ಞಾತೃತ್ವ, ಕರ್ತೃತ್ವ, ಅಚ್ಛೇದ್ಯತ್ವ, ಅಕ್ಲೇದ್ಯತ್ವ, ಅದಾಹ್ಯತ್ವ, ದೇಹಾದ್ವಿಲಕ್ಷಣತ್ವ, ಪರಮಾತ್ಮ ಶೇಷತ್ವ ಇತ್ಯಾದಿಗಳಿಂದ ಆತ್ಮಯಾಥಾತ್ಮ್ಯಜ್ಞಾನ, ಆತ್ಮಸಮತ್ವಜ್ಞಾನ, ಐಹಿಕವೆಲ್ಲಾ ಅಲ್ಪಾಸ್ಥಿರತ್ವ, ತಾನು ಮಾಡುವದೆಲ್ಲಾ ಪರಮಾತ್ಮನಾದ ಶೇಷಿಗೆ ಕೈಙ್ಕರ್ಯ ಇತ್ಯಾದಿ ಜ್ಞಾನವೂ, (೩) ತಾನು ಮಾಡುವ ವಿಹಿತ ಕೈಙ್ಕರ್ಯವೆಲ್ಲಾ ಪರಮಾತ್ಮನ ಆರಾಧನೆ ಎಂಬ ಭಾವದಿಂದ ಪರಮಾತ್ಮನಲ್ಲಿ ಪ್ರೀತಿಯೂ, ಇರುವದರಿಂದ ಕರ್ಮಯೋಗದಲ್ಲಿ ಕರ್ಮಮಾತ್ರವಲ್ಲದೆ ಜ್ಞಾನ ಭಕ್ತಿಗಳೂ ಉಂಟು.

ಹಾಗೆಯೇ ಜ್ಞಾನಯೋಗದಲ್ಲಿ (೧) ಆತ್ಮಾದೇಹಕ್ಕಿಂತ ಅತ್ಯಂತ ವಿಲಕ್ಷಣನೆಂಬ ಆತ್ಮಾನುಭವರೂಪ ಜ್ಞಾನದೊಂದಿಗೆ (೨) ಅಙ್ಗವಾಗಿ ನಿತ್ಯನೈಮಿತ್ತಿಕಾನುಷ್ಠಾನಗಳನ್ನು ಆವಶ್ಯಕವಾಗಿ ಆತ್ಮಚಿನ್ತನ ವ್ಯತಿರಿಕ್ತ ಕಾಲದಲ್ಲಿ ಅನುಷ್ಠಿಸೋಣವೂ, (೩) ಇವುಗಳಿಂದ ಆರಾಧ್ಯನು ಸರ್ವೇಶ್ವರನೆಂದು ಆತನಲ್ಲಿ ಭಕ್ತಿಯೂ, ಇರುತ್ತವೆ.

ಭಕ್ತಿಯೋಗದಲ್ಲಿ (೧) ಪರಮಾತ್ಮನಲ್ಲಿ ಪರಮೈಕಾನ್ತಿಕ ಭಕ್ತಿಯೂ (೨) ಈ ಪ್ರೀತ್ಯತಿಶಯದಿಂದ ಮನೋಪ್ರವೃತ್ತಿಮೂಲಕ ತೈಲಧಾರೆಯಹಾಗೆ ಸ್ಮೃತಿಸಂತಾನರೂಪವಾದ ಉಪಾಸನೆಯಾದುದರಿಂದ ಕರ್ಮಭಾಗವೂ, ಅದೂ ಅಲ್ಲದೆ ಉಪಾಸನವಿಲ್ಲದ ಕಾಲದಲ್ಲಿ ನಿತ್ಯ ನೈಮಿತ್ತಿಕಗಳು ಪರಮಾತ್ಮನ ಆರಾಧನೆ ಎಂದು ಭಾವಿಸಿ ಅನುಷ್ಠಿಸೋಣವು ಮತ್ತು ಆತನಿಗೆ ನಮಸ್ಕಾರ, ದಿವ್ಯಚೇಷ್ಟಿತಗಳ ಕಥನಶ್ರವಣ ಇವೇ ಮೊದಲಾದ ಕರ್ಮಗಳೂ (೩) ಉಪಾಸನವೇ ಮೊದಲು ಮನಸ್ಸಿನ ಪ್ರವೃತ್ತಿಯಾದುದೇ ಜ್ಞಾನರೂಪವಾಗುವದರಿಂದ, ಸರ್ವಶ್ರೇಯಸ್ಸಿಗೂ ಆತನೇ ನಿಧಿ ಎಂದು ತಿಳಿದು ಆತ್ಮನನ್ನು ಸಾಕ್ಷಾತ್ಕರಿಸೋಣವೂ ಇರುವದರಿಂದ ಜ್ಞಾನ ಭಾಗವೂ ಇವೆ ಆದುದರಿಂದ ಮೂರು ಯೋಗಗಳಲ್ಲೂ ಹೀಗೆ ಇನ್ನೆರಡೂ ಇರುವದರಿಂದ ಕರ್ಮಜ್ಞಾನ ಭಕ್ತಿಗಳ ಸಮ್ಮೇಳನವು ಮೂರರಲ್ಲೂ ಇರುತ್ತವೆಂದು ಹೇಳಲ್ಪಟ್ಟಿದೆ. ಹಾಗಾದರೆ ಬೇರೆ ಬೇರೆ ಹೆಸರುಗಳು ಏತಕ್ಕೆ ಎಂದರೆ ಕರ್ಮಯೋಗದಲ್ಲಿ ಕರ್ಮಾನುಷ್ಠಾನವೇ ಪ್ರಧಾನವಾಗಿ, ಜ್ಞಾನಯೋಗದಲ್ಲಿ ಅನ್ತಚಿನ್ತನವೇ ಮುಖ್ಯವಾಗಿ, ಭಕ್ತಿಯೋಗದಲ್ಲಿ ಭಗವಂತನಲ್ಲಿರುವ ಪ್ರೀತಿಯು ನಿರತಿಶಯವಾದುದರಿಂದಲೂ, ಒಂದೊಂದರಲ್ಲೂ ಪ್ರವೃತ್ತಿಯೂ ಬೇರೆ ಬೇರೆಯಾದುದರಿಂದಲೂ ಭಿನ್ನವ್ಯವಹಾರವು ಸಮಂಜಸವಾದುದೇ ಎಂಬ ಭಾವವು.

ಹಾಗೆಯೇ **ಪರಾರಾಧನರೂಪಿಣಾಂ** – ಪರಮಪುರುಷನ ಆರಾಧನೆಯರೂಪವಾದ, **ನಿತ್ಯನೈಮಿತ್ತಿಕಾನಾಂಚ**-ನಿತ್ಯನೈಮಿತ್ತಿಕಗಳಿಗೂ, **ತ್ರಿಭಿಃ** ಈ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳೊಂದಿಗೂ, **ಅನ್ಯೋನ್ಯಸಙ್ಗಃ** – ಅಙ್ಗಾಙ್ಗಿ ರೂಪದಲ್ಲಿ ಸಂಬಂಧ ಉಂಟು. ನಿತ್ಯನೈಮಿತ್ತಿಕಗಳ ಅನುಷ್ಠಾನವು **ಪರಾರಾಧನರೂಪ**ಗಳೆಂದು ಎಲ್ಲಿ ಹೇಳಿದೆ? ಎಂದರೆ **"ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ"** ಎಂಬಲ್ಲೂ, **"ಕ್ಷಿಪ್ರಂ ಹಿ ಮಾನುಷೇಲೋಕೇ ಸಿದ್ಧಿರ್ಭವತಿ ಕರ್ಮಜಾ"** (೪-೧೨) ಎಂಬಲ್ಲೂ, **"ಬ್ರಹ್ಮಾರ್ಪಣಃ ಬ್ರಹ್ಮಹವಿಃ"** ಎಂಬಲ್ಲೂ, **"ಏವಂ ಬಹುವಿಧಾಯಜ್ಞಾಃ ವಿತತಾ ಬ್ರಹ್ಮಣೋಮುಖೇ"** ಎಂಬಲ್ಲೂ, **"ಬ್ರಹ್ಮಣ್ಯಾಧಾಯ ಕರ್ಮಾಣಿ" "ಭೋಕ್ತಾರಂ ಯಜ್ಞತಪಸಾಂ ಸರ್ವಲೋಕ ಮಹೇಶ್ವರಮ್"** (ಗೀ. ೫-೨೯) ಎಂಬಲ್ಲೂ ಉಪಪಾದಿತವು ಈ ನಿತ್ಯನೈಮಿತ್ತಿಕಗಳು ಅಂಗವಾಗಿ ಭಕ್ತಿಯೋಗನಿಷ್ಠನಿಗೆ ಆವಶ್ಯಕವು. ಇದು **"ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್"** (ಶಾ ೩-೪-೨೬); **"ವಿಹಿತತ್ವಾಚ್ಚ ಆಶ್ರಮಕರ್ಮಾಪಿ"** (೩-೪-೩೨) (ಇತ್ಯಾದಿ ಸೂತ್ರಗಳಲ್ಲಿ ಅಂಗವಾಗಿ ವಿಧಿಸಲ್ಪಟ್ಟಿವೆ. ಹಾಗೆಯೇ ಪ್ರಪದನಾನುಷ್ಠಾನದಲ್ಲಿ ಶರಣಾಗತನಿಗೆ ಅಂಗವಾಗಿ ಇಲ್ಲದಿದ್ದರೂ, **"ಅಹ ರಹ ಸ್ಸಂಧ್ಯಾ ಮುಪಾಸೀತ"** ಇತ್ಯಾದಿ ಬೇರೆ ವಿಧಿವಾಕ್ಯಗಳಿಂದ ನಿತ್ಯನೈಮಿತ್ತಿಕಾನುಷ್ಠಾನಗಳನ್ನು ಪರಮಪುರುಷನ ಆರಾಧನೆಯ ರೂಪದಲ್ಲಿ ನಡೆಸಲೇಬೇಕು ಎಂದು ಎರಡು ವಿಧ ಉಪಾಯಾನುಷ್ಠಾತೃಗಳಿಗೂ ಹೇಳಲ್ಪಟ್ಟಿತು.

ಮುಮುಕ್ಷುವಿಗೆ ಅನ್ಯದೇವತಾ ಸಂಬಂಧವು ಸರ್ವಾತ್ಮನಾ ಕೂಡದೆಂದು ನಿಷೇಧಿಸಲ್ಪಟ್ಟಿರುವ ಮೋಕ್ಷಧರ್ಮದಲ್ಲಿ **"ಬ್ರಹ್ಮಾಣಂ ಶಿತಿಕಂಠಂ ಚ ಯಾಶ್ಚಾನ್ಯಾದೇವತಾಸ್ಮೃತಾಃ । ಪ್ರತಿಬುದ್ಧಾನಸೇವನ್ತೇ ಯಸ್ಮಾತ್ಪರಿಮಿತಂಫಲಮ್"** (ಭಾ ಮೋ. ೩೫೦-೩೬) ಎಂದು ಪ್ರಪನ್ನನಿಗೆ ಬ್ರಹ್ಮಾದಿ ದೇವತಾರಾಧನಾದಿಗಳು ನಿಷೇಧಿಸಲ್ಪಟ್ಟಿರುವಾಗ, ಸೂರ್ಯಾಗ್ನಿ ಇಂದ್ರಾದಿ ದೇವತಾರಾಧನ ರೂಪವಾದ ನಿತ್ಯನೈಮಿತ್ತಿಕಗಳು ಈ ಮೂರು ಯೋಗಗಳಿಗೂ ಅಂಗವಾಗಿ ಅನುಷ್ಠಿಸತಕ್ಕದ್ದೆಂಬ ವಿಧಿಯು ಸಾಧುವೋ? ಎಂದರೆ ಶ್ರುತಿಯಲ್ಲೂ ಇಲ್ಲಿಯೂ ಸಹ **"ಕುರ್ವನ್ನೇವೇಹಕರ್ಮಾಣಿ"** (ಈಶಾವಾಸ್ಯ ೨) **"ನಿಯತಸ್ಯ ಚ ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ"** (೧೮-೭) **"ಯತಃ ಪ್ರವೃತ್ತಿ ರ್ಭೂತಾನಾಂ ಯೇನ ಸರ್ವಮಿದಂತತಂ । ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂವಿಂದತಿಮಾನವಃ"** (೧೮-೪೬) ಎಂಬಲ್ಲೂ, ಹಾಗೆಯೇ **"ಆಚಾರಪ್ರಭವೋಧರ್ಮಃ ಧರ್ಮಸ್ಯಪ್ರಭುರಚ್ಯುತಃ"** (ಭಾರ. ಅನು. ೨೫೪-೧೩೯) ಎಂದೂ, **"ವರ್ಣಾಶ್ರಮಾಚಾರವತಾಪುರುಷೇಣ ಪರಃಪುಮಾನ್ । ವಿಷ್ಣುರಾರಾಧ್ಯತೇಪಂಥಾನಾನ್ಯಸ್ತತ್ತೋಷಕಾರಕಃ"** (ವಿ. ಪು. ೩ ೬.೭) ಎಂದೂ, ಹೀಗೆಲ್ಲಾ ಶ್ರುತಿ ಸ್ಮೃತಿ ಪುರಾಣೇತಿಹಾಸಗಳೆಲ್ಲೆಲ್ಲಾ ವಿಧಿಸಿರುವದು ಹೇಗೆ? ಎಂದರೆ ಪ್ರತರ್ದನ ವಿದ್ಯೆಯಲ್ಲಿ ಉಪದೇಶಿಸಿರುವ ಹಾಗೆ ಸೂರ್ಯಾಗ್ನೀಂದ್ರಾದಿಗಳು ಆರಾಧಿಸಲ್ಪಟ್ಟರೂ ತತ್ತಚ್ಛರೀರಕ ಪರಮಾತ್ಮನೇ ಆರಾಧಿಸಲ್ಪಡುವದರಿಂದ ಬಾಧಕವಿಲ್ಲವು; ಅಥವಾ **"ಸಾಕ್ಷಾದಪ್ಯವಿರೋಧಂ ಜೈಮಿನಿಃ"** ಎಂಬ ಬ್ರಹ್ಮಸೂತ್ರದಲ್ಲಿ (ಶಾರೀ ) ಹೇಳಿರುವ ಹಾಗೆ ಸೂರ್ಯ, ಅಗ್ನಿ, ಇಂದ್ರ ಮೊದಲಾದ ಪದಗಳೂ ಕೂಡ ವ್ಯುತ್ಪತ್ತಿಯ ಮೂಲಕ ಸಾಕ್ಷಾತ್ತಾಗಿ ಪರಮಾತ್ಮನನ್ನೇ ಬೋಧಿಸುತ್ತವೆ ಎಂದು ಜೈಮಿನ್ಯಾಚಾರರು ಹೇಳಿದಹಾಗೆ ಅಭಿಪ್ರಾಯಪಟ್ಟರೂ ಬಾಧಕವಿಲ್ಲವು ಆದುದರಿಂದ ಅನ್ಯದೇವತಾಭಜನದೋಷವು ಇರುವದಿಲ್ಲವು. ಈ ನಿತ್ಯನೈಮಿತ್ತಿಕಾನುಷ್ಠಾನದ ಆರಂಭಾಂತ್ಯಗಳಲ್ಲಿ ಸಾತ್ವಿಕ ತ್ಯಾಗವನ್ನು ಹೇಳುವದರಿಂದಲೂ, ಅನ್ಯದೇವತಾರಾಧನಾ ರೂಪವಾದ ದೋಷಕ್ಕೆ ಕಾರಣವಿಲ್ಲವು ಆದುದರಿಂದ ಪರಮಪುರುಷನೇ ಇವುಗಳಿಂದ ಆರಾಧಿಸಲ್ಪಡು

**ಮೂ. ಆತ್ಮದೃಷ್ಟೇಸ್ತ್ರಯೋಪ್ಯೇತೇ ಯೋಗದ್ವಾರೇಣ ಸಾಧಕಾಃ ॥ ೨೫ ॥**

ವನು. ಈ ಅಭಿಪ್ರಾಯವು ಮೋಕ್ಷಧರ್ಮದ **"ಯಜ್ಞಾಗ್ರಹರಾಧ್ಯಾಯವಾದ"** ೪೯ ನೆಯ ಅಧ್ಯಾಯದಲ್ಲಿ ಉಪಪಾದಿತವು. ಶಾಸ್ತ್ರವು ಹೀಗಿರುವದರಿಂದ ಅವುಗಳ ಪರಿತ್ಯಾಗಕ್ಕೆ ಅನುಮತಿಯನ್ನು ಕೊಡದೇ ಸಾಯುವತನಕ ಮುಮುಕ್ಷುವು ತನ್ನ ನಿತ್ಯನೈಮಿತ್ತಿಕ ಕರ್ಮಗಳನ್ನು ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳಿಗೆ ಅಂಗವಾಗಿ ಅನುಷ್ಠಿಸಲೇಬೇಕೆಂಬುದು ಸ್ಥಾಪಿತವು. ತನಗೆ ಈ ಗುರೂಪಾಯವಾದ ಉಪಾಸನೆಗೆ ಶಕ್ತಿಯಿಲ್ಲದೆ ಲಘೂಪಾಯವಾದ ಭರನ್ಯಾಸವನ್ನು ಅನುಷ್ಠಿಸಿದ ಪ್ರಪನ್ನನಿಗೂ ಕೂಡ ಆ ಉಪಾಯಕ್ಕೆ ಅಂಗವಾಗಿ ನಿತ್ಯನೈಮಿತ್ತಿಕಗಳ ಅನುಷ್ಠಾನವು ಬೇಡದಿದ್ದರೂ **"ಅಹರಹಸ್ಸಂಧ್ಯಾಮುಪಾಸೀತ"** ಇತ್ಯಾದಿ ವಿಧಿಗಳಿಗನುಸಾರವಾಗಿ ಅನುಷ್ಠಿಸಲೇಬೇಕು. ಹಾಗೆ ನಡೆಸದಿದ್ದರೆ, **"ಆಜ್ಞಾಛೇದೀಮಮದ್ರೋಹೀ"** ಎಂಬಲ್ಲಿ ಹೇಳಿರುವ ಭಗವನ್ನಿಗ್ರಹಕ್ಕೆ ಒಳಗಾಗುವನು ॥ ೨೪ ॥

ಕ್ರಮವಾಗಿ ಈ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಗಳ ಅನುಷ್ಠಾನದಿಂದ ಲಭಿಸತಕ್ಕದ್ದು ಪರಭಕ್ತಿಯು ಪರಜ್ಞಾನ ಪರಮಭಕ್ತಿಗಳು; ಅವುಗಳಿಂದ ಪರಮಾತ್ಮಸಾಕ್ಷಾತ್ಕಾರವು, ಇದು ಉಂಟಾಗುವಾಗ ಪ್ರತ್ಯಗಾತ್ಮರೂಪವಾದ ಅವಾಂತರವ್ಯಾಪಾರವೂ ಉಂಟಾಗುತ್ತದೆಂದು ಉಪದೇಶಿಸುತ್ತಾರೆ. **ತ್ರಯೋಪ್ಯೇತೇ**-ಈ ಮೂರು ಯೋಗಗಳೂ, **ಯೋಗದ್ವಾರೇಣ**-ಇಲ್ಲಿ ಯೋಗವೆಂದರೆ ಸಮಾಧಿರೂಪವಾದ ಮನಸ್ಸನ್ನು ಪರಮಾತ್ಮನಲ್ಲೇ ಐಕಾಗ್ರ್ಯಚಿತ್ತತೆಯಿಂದ ಇಡೋಣವು, ಇದರ ಮೂಲಕವಾಗಿ, **ಆತ್ಮದೃಷ್ಟೇಃ**-ಆತ್ಮಸಾಕ್ಷಾತ್ಕಾರಕ್ಕೆ, ಆತ್ಮಾವಲೋಕನಕ್ಕೆ, **ಸಾಧಕಾಃ**-ಈ ಮೂರು ಯೋಗಗಳಿಂದಲೂ ಆತ್ಮಸಾಕ್ಷಾತ್ಕಾರವು ಸಿದ್ಧಿಸುತ್ತದೆಂಬುದು ತಾತ್ಪರ್ಯವು.

ಹಿಂದೆಯೇ ೫ ನೆಯ ಅಧ್ಯಾಯದಲ್ಲಿ ಕರ್ಮಯೋಗವೇ ಜ್ಞಾನಯೋಗದಾವಶ್ಯಕತೆಯಿಲ್ಲದೆ ಆತ್ಮಾವಲೋಕನವನ್ನು ಸುಕರವಾಗಿಯೂ ಲಭಿಸುತ್ತದೆಂದು ಹೇಳಲ್ಪಟ್ಟಿರುವಾಗ ಭಕ್ತಿಯೋಗವೂ ಅದನ್ನು ಸಾಧಿಸಿಕೊಡುತ್ತದೆಂದು ಇಲ್ಲಿ ಹೇಳಿರುವದು ಅಯುಕ್ತವಲ್ಲವೋ? ಎಂದರೆ ಹಾಗಲ್ಲವು; ಒಂದುವೇಳೆ ಅದರಿಂದಲೇ ಲಭಿಸದಿದ್ದ ಪಕ್ಷದಲ್ಲಿ ಭಕ್ತಿಯೋಗವನ್ನಾರಂಭಿಸಿ ಉಪಾಸನೆಯನ್ನು ಮಾಡಿದರೆ ಆತ್ಮಯಾಥಾತ್ಮ್ಯ ಜ್ಞಾನವೂ, ಅದರ ಸಾಕ್ಷಾತ್ಕಾರವೂ ಅದರಿಂದುಂಟಾಗುವ ಫಲವೂ ಸರ್ವವೂ ಸಿದ್ಧಿಸುತ್ತದೆ ಎಂಬ ಭಾವವು. ಆದುದರಿಂದಲೇ ಭಕ್ತಿಯೋಗದಲ್ಲಿ ಆತ್ಮಾವಲೋಕನ ಉಂಟಾದನಂತರವೇ **"ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿನಕಾಂಕ್ಷತಿ । ಸಮಸ್ಸರ್ವೇಷು ಭೂತೇಷುಮದ್ಭಕ್ತಿಂ ಲಭತೇ ಪರಾಮ್"** (ಗೀ. ೧೮-೫೪) ಪರಮಾತ್ಮನ ಸಾಕ್ಷಾತ್ಕಾರರೂಪವಾದ ಪರಭಕ್ತಿಯು ಲಭಿಸುತ್ತದೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ನಾವು ಗ್ರಹಿಸತಕ್ಕದ್ದೇನೆಂದರೆ—ಆತ್ಮಾವಲೋಕನವು ಭಕ್ತಿಯೋಗಾರಂಭಕಾಲದಲ್ಲಿಲ್ಲದಿದ್ದರೂ ಸ್ತುತಿ ನಮಸ್ಕಾರ ಕೀರ್ತನಾದಿ ನಿಷ್ಠೆಯಿಂದ ಉತ್ಪನ್ನವಾದ ಭಕ್ತಿಯಿಂದ ಆತ್ಮಾವಲೋಕನವು ಲಭಿಸುತ್ತದೆ ಎಂಬುದು. ವೇದಾರ್ಥ ಸಂಗ್ರಹದಲ್ಲಿ ಇಂತಹ ಭಕ್ತಿತಾರತಮ್ಯವು ಉಪಪಾದಿತವಾಗಿರುತ್ತದೆ— ಮೊದಲು ಸಾಮಾನ್ಯವಾಗಿದ್ದುದು ಪರಮಪುರುಷ ಸೇವೆಗಳಿಂದ ವೃದ್ಧಿಹೊಂದಿ ಆತ್ಮಾವಲೋಕನವನ್ನುಂಟುಮಾಡಿ ಅನಂತರ ನಿರತಿಶಯ ಪ್ರೀತಿರೂಪವಾಗಿ ಪ್ರತ್ಯಕ್ಷತಾಪನ್ನಧ್ಯಾನರೂಪ ಭಕ್ತಿರೂಪವನ್ನು ಹೊಂದುತ್ತದೆಂದೂ, ಅದರಿಂದಲೇ ಪರಮಪುರುಷನು ಲಭ್ಯನೆಂದೂ ಹೇಳಲ್ಪಟ್ಟಿರುತ್ತದೆ— **"ಪರಮ**

**ಮೂ.** ನಿರಸ್ತನಿಖಿಲಾಜ್ಞಾನೋ ದೃಷ್ಟ್ವಾತ್ಮಾನಂ ಪರಾನುಗಮ್ ।
ಪ್ರತಿಲಭ್ಯ ಪರಾಂಭಕ್ತಿಂ ತಯೈವಾಪ್ನೋತಿ ತತ್ಪದಮ್ ॥೨೬॥

**ಪುರುಷಾರಾಧನರೂಪ ನಿತ್ಯನೈಮಿತ್ತಿಕ ಕರ್ಮೋಪಸಂಭೃತ ನಿಷಿದ್ಧಪರಿಹಾರ ನಿಷ್ಠಸ್ಯ ಪರಮಪುರುಷ ಚರಣಯುಗಳ ನ್ಯಸ್ತಾತ್ಮಾತ್ಮೀಯಸ್ಯ ತದ್ಭಕ್ತಿ ಕಾರಿತಾ ನವರತಸ್ತುತಿ ಸ್ಮೃತಿ ನಮಸ್ಕೃತಿ ಯತನ ಕೀರ್ತನ ಗುಣಶ್ರವಣ ವಚನಧ್ಯಾನಾರ್ಚನ ಪ್ರಣಾಮಾದಿಭಿಃ ಪ್ರೀತತತ್ತ್ವ ಪರಮಕಾರುಣಿಕಃ ಪುರುಷೋತ್ತಮಪ್ರಸಾದ ವಿಧ್ವಸ್ತಸ್ವಾನ್ತಧ್ವಾನ್ತಸ್ಯಾನನ್ಯಪ್ರಯೋಜನಾನವರತ ನಿರತಿಶಯಪ್ರಿಯ ವಿಶದತಮ ಪ್ರತ್ಯಕ್ಷತಾಪನ್ನಾನುಧ್ಯಾನ ರೂಪಭಕ್ತ್ಯೇಕಲಭ್ಯಃ"** ಇದರಿಂದ ಕರ್ಮಯೋಗದಲ್ಲಿ ಸಾಧಾರಣರೂಪದಲ್ಲಿದ್ದ ಭಕ್ತಿಯು, ವೃದ್ಧಿಹೊಂದಿ ಆತ್ಮಾವಲೋಕನ ಸಿದ್ಧಿಗೂ ಅನಂತರ ನಿರತಿಶಯ ಪ್ರತ್ಯಕ್ಷತೆಯನ್ನು ಹೊಂದಿದ ಪರಮಾತ್ಮನನ್ನು ಸಾಕ್ಷಾತ್ಕರಿಸುವ ಅನುಧ್ಯಾನರೂಪವಾಗಿ ಭಕ್ತಿಯು ವೃದ್ಧಿಯನ್ನು ಹೊಂದುತ್ತದೆಂದು ಉಪದೇಶಿಸಲ್ಪಟ್ಟಿತು. ಈ ಮಹಾಗುರುಗಳಾದ ಶ್ರೀ ಯಾಮುನೇಯರವರೇ ತಾವು ರಚಿಸಿರುವ ಸಿದ್ಧಿತ್ರಯದ ಆತ್ಮಸಿದ್ಧಿಯಲ್ಲಿ "**ಉಭಯಪರಿಕರ್ಮಿತಸ್ವಾಂತಸ್ಯೈಕಾನ್ತಿಕಾತ್ಯನ್ತಿಕ ಭಕ್ತಿಯೋಗಲಭ್ಯಃ**" ಎಂದು ಸೂಕ್ಷ್ಮವಾಗಿ ಹೇಳಿರುತ್ತಾರೆ. **ಉಭಯ ಪರಿಕರ್ಮಿತ** - ಕರ್ಮಜ್ಞಾನಗಳೆರಡರಿಂದಲೂ ಉಪಕರಿಸಲ್ಪಟ್ಟ ಎಂದರೆ ಕರ್ಮಯೋಗ ಜ್ಞಾನ ಯೋಗಗಳಿಂದ ಉಪಕರಿಸಲ್ಪಟ್ಟ ಅಥವಾ ಕರ್ಮಯೋಗದ ಕರ್ಮಾಂಶ ಜ್ಞಾನಾಂಶ ಇವೆರಡರಿಂದಲೂ, ಉಪಕರಿಸಲ್ಪಟ್ಟ, **ಸ್ವಾಂತಸ್ಯ** - ಪರಿಶುದ್ಧಾಂತಃಕರಣವುಳ್ಳವನ, **ಐಕಾನ್ತಿಕಃ** ಅವ್ಯಭಿಚರಿತವಾದ ಎಂದರೆ ಅನ್ಯದೇವತಾ ಸಂಬಂಧವಿಲ್ಲದಿರುವ, **ಆತ್ಯನ್ತಿಕ** - ನಿರತಿಶಯವಾಗಿ ತೈಲಧಾರೆಯಹಾಗೆ ಸ್ಮೃತಿಸಂತತಿರೂಪವಾದ, **ಭಕ್ತಿಯೋಗೈಕಲಭ್ಯಃ** - ಭಕ್ತಿಯೋಗ ಮಾತ್ರದಿಂದಲೇ ಲಭ್ಯನು ಎಂದು ವಿಶದವಾಗಿ ಉಪದೇಶಿಸಿರುತ್ತಾರೆ. ಇದರಿಂದ ಕರ್ಮಜ್ಞಾನ ಭಕ್ತಿಗಳು ಮೂರರಲ್ಲಿದ್ದರೂ ಭಕ್ತಿಯೋಗದ ಭಕ್ತಿಯೇ ಸಾಕ್ಷಾತ್ತಾಗಿ ಉಪಾಯವೆಂದು ವ್ಯಕ್ತಪಡಿಸಿರುತ್ತಾರೆ; ಕರ್ಮಜ್ಞಾನಯೋಗಗಳು ಸಾಕ್ಷಾದುಪಾಯವಲ್ಲವು; ಸದ್ವಾರಕವೆಂದರೆ ಅವ್ಯವಹಿತವಾದ ಉಪಾಯಗಳೇ. ಆದರೆ ಕೆಲವು ಮಹನೀಯರು ಈ ದಿವ್ಯಸೂಕ್ತಿಗೆ ವಿರುದ್ಧವಾಗಿ "**ತ್ರಯಾಣಾಮಪಿಯೋಗಾನಾಂ ತ್ರಿಭಿರನ್ಯೋನ್ಯಸಙ್ಗಮಃ**" ಎಂಬ ಶ್ಲೋಕದಲ್ಲಿ **ತ್ರಿಭಿಃ** ಎಂದರೆ ಕರ್ಮಜ್ಞಾನ ಭಕ್ತಿ ಎಂದು ಹೇಳದೆ, ಮೂರರಲ್ಲೂ ಮೂರು **ಯೋಗಗಳೇ** ಇವೆ ಎಂದು ಅರ್ಥಮಾಡಿ, ಮೂರೂ ಸಾಕ್ಷಾತ್ತಾಗಿ ಉಪಾಯಗಳೇ ಎಂದು ಭ್ರಮಿಸಿ ಅರ್ಥವನ್ನು ಹೇಳುವರು; ಆವಾಗ ಈ ಯಾಮುನೇಯರ ಈ ದಿವ್ಯಸೂಕ್ತಿಗೂ "**ಉಭಯ ಪರಿಕರ್ಮಿತ**" ವೆಂದು ಹೇಳಿದ ದಿವ್ಯಸೂಕ್ತಿಗೂ ಪರಸ್ಪರ ವಿರೋಧವನ್ನೂ, ಹಾಗೆಯೇ ಗೀತಾರ್ಥಸಙ್ಗ್ರಹದ ಪ್ರಥಮ ಶ್ಲೋಕವಾದ "**ಸ್ವಧರ್ಮಜ್ಞಾನವೈರಾಗ್ಯಸಾಧ್ಯಭಕ್ತ್ಯೇಕ ಗೋಚರಃ**" ಎಂಬುದಕ್ಕೂ ವಿರೋಧವಾಗುತ್ತದೆಂಬುದು ಅವರ ಸ್ಮೃತಿಪಥಕ್ಕೆ ಬರಲಿಲ್ಲವು. ॥ ೨೫ ॥

**ಮೂಲಕ್ಕೆ ಅರ್ಥವು**—ಮೂರು ಯೋಗಗಳ ಸಹಾಯದಿಂದಲೂ ಉತ್ಪನ್ನವಾದ ಆತ್ಮಾವಲೋಕನಗಳನ್ನುಳ್ಳವನೂ, ಅಥವಾ ಜಿತಸ್ವಾಂತನಾಗಿ ಸರ್ವೇನ್ದ್ರಿಯೋಪರತಿಯುಂಟಾಗುವದು ಕಷ್ಟವಾಗಿ, ಕರ್ಮಯೋಗ ಭಕ್ತಿಯೋಗಗಳಲ್ಲೇ ತನಗೆ ಅಧಿಕಾರವೆಂದು ಭಾವಿಸಿ ಅನುಷ್ಠಿಸಿದವನೂ, ಪರಮಾತ್ಮ ಸಾಕ್ಷಾತ್ಕಾರವನ್ನು ಹೊಂದಿ ಆತನ ಪದವಾದ ದಿವ್ಯವೈಕುಂಠವನ್ನು ತನ್ಮೂಲಕ ಹೊಂದುವನೆಂದು ಹೇಳುತ್ತಾರೆ. ೧೮ ನೆಯ ಅಧ್ಯಾಯದ ೫೩, ೫೪ ನೆಯ

ಶ್ಲೋಕಗಳಲ್ಲಿ ಆತ್ಮಾವಲೋಕನ ಪ್ರಾಪ್ತಿಯನ್ನು ಹೊಂದಿದನಂತರ ಪರಭಕ್ತಿಯುಂಟಾಗುತ್ತದೆಂದು ಹೇಳಿ, ೫೫ ನೆಯ ಶ್ಲೋಕದಲ್ಲಿ ಆ ಪರಭಕ್ತಿಯ ಮೂಲಕವೇ **ವಿಶತೇತದನಂತರಂ** ಎಂದೂ, ೫೬ ರಲ್ಲೂ **ಶಾಶ್ವತಂ ಪದಮವ್ಯಯಂ** ಎಂದೂ ಹೇಳಿದ ಅಭಿಪ್ರಾಯವನ್ನೇ ಈ ಶ್ಲೋಕದ ಮೂಲಕ ತಿಳಿಸುತ್ತಾರೆ—**ನಿರಸ್ತನಿಖಿಲಾಜ್ಞಾನಃ** - ಜ್ಞಾನಾಂಶದಿಂದ ಕೂಡಿದ ಕರ್ಮಯೋಗಾನುಷ್ಠಾನದಿಂದ ಭಕ್ತಿಯೋಗಾರಂಭಕ್ಕೆ ಪ್ರತಿಬಂಧಕಗಳಾದ ಸಮಸ್ತ ಅಜ್ಞಾನವನ್ನೂ ಪಾಪಗಳನ್ನೂ ಕಳೆದುಕೊಂಡವನು, **ದೃಷ್ಟ್ವಾತ್ಮಾನಂ** - ಐಕಾನ್ತ್ಯಮನಸ್ಸಿನಿಂದ ಹೊಂದಿದ ಆತ್ಮಾವಲೋಕನವನ್ನೂ, **ಪರಾನುಗಂ** - ಪರಮಪುರುಷನಿಗೆ ಅನುಗುಣವಾಗಿ ನಡೆಯೋಣವನ್ನೂ ಎಂದರೆ ಪರಮಪುರುಷೈಕಶೇಷತ್ವವನ್ನೂ, **ಪ್ರತಿಲಭ್ಯ** - ಪರಮಾತ್ಮಾನುಗ್ರಹದಿಂದ ಹೊಂದಿದವನಾಗಿ, **ತೆಯೈವ** - ಪರಮಾತ್ಮನ ಅನುಗ್ರಹದಿಂದಲೇ ಉಂಟಾದ ಪರಮಭಕ್ತಿರೂಪವಾದ ವಿಪಾಕಾವಸ್ಥೆಯಿಂದಲೇ, **ಪರಾಂಭಕ್ತಿಂ** - ಪರಮಾತ್ಮಸಾಕ್ಷಾತ್ಕಾರವನ್ನೂ ಸಹ, **ಪ್ರತಿಲಭ್ಯ** - ಹೊಂದಿದವನಾಗಿ, **ತತ್ಪದಮ್** - ಆ ಪರಮಾತ್ಮನ ದಿವ್ಯಚರಣಾರವಿಂದವನ್ನು ಅಥವಾ **ಪದ್ಯತೆಇತಿ** - ಎಂಬ ವ್ಯುತ್ಪತ್ತಿಯಿಂದ ಪರಮಪುರುಷನ ಅಪ್ರಾಕೃತಸ್ಥಾನವಾದ ದಿವ್ಯವೈಕುಂಠವನ್ನು ಅಥವಾ ಪರಮಪುರುಷನ ಸ್ವರೂಪಕ್ಕೆ ಸಮವಾದ ಸ್ವರೂಪವನ್ನು ಹೊಂದುತ್ತಾನೆಂಬ ತಾತ್ಪರ್ಯವು. ಇದರಿಂದ "**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ । ಸಮ ಸ್ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥ ಭಕ್ತ್ಯಾ ಮಾ ಮಭಿಜಾನಾತಿ ಯಾವಾ ನ್ಯಶ್ಚಾಸ್ಮಿ ತತ್ತ್ವತಃ । ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್**" (ಗೀ. ೧೮-೫೪, ೫೫) ಎಂದು ಗೀತೆಯಲ್ಲಿ ಹೇಳಿರುವ ಎರಡು ಶ್ಲೋಕಗಳ ಸಙ್ಗ್ರಹವೇ ಈ ಶ್ಲೋಕವೆಂಬುದು ಸ್ಪಷ್ಟವು, **ಆಪ್ನೋತಿ** - ಹೊಂದುತ್ತಾನೆ. ಇಲ್ಲಿನ ಏವಕಾರದಿಂದ ಇನ್ನು ಯಾವುದರ ಅಪೇಕ್ಷೆಯಿಲ್ಲದೆ ಪರಮ ಭಕ್ತಿಯಿಂದಲೇ ಎಂಬ ಭಾವವು ಸೂಚಿತವು ; ಆದುದರಿಂದ ಪರಮಾತ್ಮ ಸಾಕ್ಷಾತ್ಕಾರವೇ ಅವ್ಯವಹಿತೋಪಾಯವೆಂದೂ, ಇನ್ನು ಯಾವುದೂ ಸಾಕ್ಷಾದುಪಾಯವಲ್ಲವು ಎಂಬ "**ನಾನ್ಯಃ ಪಂಥಾ ವಿದ್ಯತೇ ಅಯನಾಯ**" ಎಂದು ಶ್ರುತಿಯಲ್ಲಿ ಹೇಳಿರುವ ಅರ್ಥವು ಜ್ಞಾಪಿಸಲ್ಪಟ್ಟಿತು. ಯಾವಾಗ ಕರ್ಮಯೋಗವನ್ನು ಆತ್ಮಯಾಥಾತ್ಮ್ಯಜ್ಞಾನದೊಂದಿಗೆ ಅನುಷ್ಠಿಸುತ್ತಾನೋ ಆಗ ತಾನು ಪರಮಾತ್ಮನಿಗೇನೇ ಶೇಷನೇ ವಿನಾ ಅನ್ಯದೇವತೆಗಳಿಗೆ ಅಲ್ಲವೆಂಬ ಜ್ಞಾನವು ಉಂಟಾಗುತ್ತದೋ, ಆಗ ಉಪಾಯಾನುಷ್ಠಾನಕ್ಕೆ ವಿರೋಧವಾದ ಪಾಪಗಳೂ ಭ್ರಮಜ್ಞಾನಗಳೂ ತೊಲಗಿ ಉಪಾಯಾನುಷ್ಠಾನಕ್ಕೆ ಬೇಕಾದ ಐಕಾಂತ್ಯಭಕ್ತಿಯು ಲಭಿಸಿ, ಪರಮಾತ್ಮಸಾಕ್ಷಾತ್ಕಾರ ಉಂಟಾಗಿ, ಮೋಕ್ಷವನ್ನು ಹೊಂದುವನೆಂಬ ಭಾವವು. ಆತ್ಮನ ಯಥಾರ್ಥಸ್ವರೂಪವೂ, ಪರಮಾತ್ಮ ಶೇಷತ್ವವೂ "**ನಾಯಂದೇವೋ ನಮರ್ತ್ಯೋವಾ ನತಿರ್ಯಕ್ ಸ್ಥಾವರೋಪಿವಾ । ಜ್ಞಾನಾನಂದಮಯಸ್ತ್ವಾತ್ಮಾಶೇಷೋಹಿ ಪರಮಾತ್ಮನಃ**" ಎಂದೂ (            ) "**ದಾಸಭೂತಾಸ್ಸ್ವತಸ್ಸರ್ವೇಹ್ಯಾತ್ಮಾನಃ ಪರಮಾತ್ಮನಃ" ಅತೋ ಹ ಮಪಿ ತೇ ದಾಸ ಇತಿಮತ್ವಾನಮಾಮ್ಯಹಮ್**" ಎಂದೂ (ಮನ್ತ್ರರಾಜಪದಸ್ತೋತ್ರದಲ್ಲಿ ಸರ್ವಜ್ಞನಾದ ರುದ್ರನ ವಾಕ್ಯವು, ಹೇಳಲ್ಪಟ್ಟಿವೆ. **ಪ್ರತಿಲಭ್ಯಪರಾಂಭಕ್ತಿಂ** ಎಂದು ಇಷ್ಟುಮಾತ್ರ ಹೇಳಿದುದು ಮುಂದಕ್ಕೆ ಉಂಟಾಗುವ ಪರಜ್ಞಾನ ಪರಮ ಭಕ್ತಿಗಳಿಗೂ ಉಪಲಕ್ಷಣವೆಂದು ಭಾವಿಸಿ, ಅನಂತರವೇ **ಆಪ್ನೋತಿ ತತ್ಪದಂ** ಎಂದು ಭಾವಿಸತಕ್ಕದ್ದು.

**ಮೂ. ಭಕ್ತಿಯೋಗ ಸ್ತದರ್ಥೀ ಚೇತ್ಸಮಗ್ರೈಶ್ವರ್ಯಸಾಧಕಃ ।**
**ಆತ್ಮಾರ್ಥೀ ಚೇತ್ತ್ರಯೋಽಪ್ಯೇತೇ ತತ್ಕೈವಲ್ಯಸ್ಯ ಸಾಧಕಾಃ ॥೨೬॥**

**ಮೂಲಕ್ಕೆ ಅರ್ಥವು**— ಕರ್ಮಯೋಗನಿಷ್ಠನು ಭಕ್ತಿಯೋಗಾರಂಭಕ್ಕೆ ಪ್ರತಿಬಂಧಕಗಳಾದ ಪಾಪಗಳನ್ನು ಕಳೆದುಕೊಂಡು ಆತ್ಮಯಾಥಾತ್ಮ್ಯಜ್ಞಾನದಿಂದ ತಾನು ಪರಮಾತ್ಮನಿಗೆ ಶೇಷ ಭೂತನೆಂದು ಯಾವಾಗ ಪರಮಾತ್ಮೋಪಾಸನದ ಮೂಲಕ ತಿಳಿಯುವನೋ, ಆಗ ಆತನಿಂದ ಅನುಗ್ರಹವನ್ನು ಪಡೆಯುವನು ಹೀಗೆ ಭಕ್ತಿಯೋಗವನ್ನವಲಂಬಿಸುವರು ನಾಲ್ಕು ಅಧಿಕಾರಿ ಗಳೆಂದು "**ಚತುರ್ವಿಧಾ ಭಜಂತೇಮಾಂ**" (೧೯ ೭ ೧೬) ಎಂಬಲ್ಲಿ ಹೇಳಿ, ಅವರುಗಳಿಗೆ ಇರುವ ವ್ಯತ್ಯಾಸವೆಲ್ಲಾ ಮಧ್ಯಮಷಟ್ಕದಲ್ಲಿ ಉಪಪಾದಿಸಲ್ಪಟ್ಟಿತು. ಇವರು ನಾಲ್ವರೆಂದು ಆರ್ತನು ಅರ್ಥಾರ್ಥಿಯು, ಜಿಜ್ಞಾಸುವು, ಜ್ಞಾನಿಯು ಎಂಬದಾಗಿ ಅವರವರಿಗೆ ಬೇಕಾದ ಅನುಭವಗಳ ವ್ಯತ್ಯಾಸದಿಂದ ಹೇಳಲ್ಪಟ್ಟಿತು ಆರ್ತನೂ ಅರ್ಥಾರ್ಥಿಯೂ ಐಹಿಕಾಮುಷ್ಮಿಕ ನಶ್ವರವಾದ ಐಶ್ವರ್ಯಾನುಭವಾಕಾಂಕ್ಷಿಗಳಾಗಿ ಅಚಿದನುಭವವನ್ನು ಕೋರುವರಾಗಿ ಪುನರಾ ವೃತ್ತಿಯನ್ನು ಹೊಂದುವರು ; ಜಿಜ್ಞಾಸುವು ಚಿದನುಭವವನ್ನು ಎಂದರೆ ಪ್ರಕೃತಿವಿಯುಕ್ತ ಪರಿಶುದ್ಧಾತ್ಮಾನುಭವವನ್ನು ಕೋರುವನಾಗಿ ಕೈವಲ್ಯವನ್ನು ಹೊಂದಿ ಪುನರಾವೃತ್ತಿಯಿಲ್ಲದೆ ಮೋಕ್ಷವನ್ನು ಹೊಂದುವನು ; ಜ್ಞಾನಿಯಾದರೋ ಈಶ್ವರಾನುಭವವನ್ನು ಕೋರುವವನಾಗಿ ಏಕಾನ್ತ್ಯಭಕ್ತಿಯಿಂದ ಪರಮಾತ್ಮನನ್ನು ಉಪಾಸಿಸುವನು ಹೀಗೆ ಮೂರು ವಿಧ ಭಕ್ತಾಧಿ ಕಾರಿಗಳಿಗೂ ಕೋರಿಕೆಯಲ್ಲಿ ವ್ಯತ್ಯಾಸವಿರುವದರಿಂದ ವ್ಯತ್ಯಸ್ತ ಫಲಗಳನ್ನು ಅವರವರ ಇಷ್ಟಾ ನುಸಾರ ಹೊಂದುವರು. ಇದನ್ನೇ ಮುಂದಿನ ಮೂರು ಶ್ಲೋಕಗಳಿಂದ ಸಂಗ್ರಹಿಸಿ ಹೇಳು ತ್ತಾರೆ —ಆದರೆ ಪರಮಾತ್ಮೋಪಾಸನ ರೂಪವಾದ ಭಕ್ತಿಯೋಗವು ಬಹು ವ್ಯತ್ಯಸ್ತವಾಗಿರುವ ಅಪುನರಾವೃತ್ತಿ ಮತ್ತು ಪುನರಾವೃತ್ತಿರೂಪ ಫಲಗಳನ್ನುಂಟುಮಾಡುತ್ತದೆ ಎಂದು ಹೇಳು ವದು ಸರಿಯೋ? ಎಂದರೆ ಸಾಮಂಜಸ್ಯಕ್ಕೇನೂ ನ್ಯೂನತೆಯಿಲ್ಲವು. ಹೇಗೆಂದರೆ ರಾಜನಿಗೆ ಸಮರ್ಪಿಸಿದ ಎರಡು ನಿಂಬೆಯ ಹಣ್ಣುಗಳು ರಾಜನ ಅನುಗ್ರಹವನ್ನು ಸಂಪಾದಿಸಿಕೊಡು ಅದಕ್ಕನುಗುಣವಾಗಿಯೂ ಭಿನ್ನ ಭಿನ್ನ ಫಲಗಳನ್ನು ಭಿನ್ನಭಿನ್ನ ಅಧಿಕಾರಿಗಳು ತಮ್ಮ ಇಷ್ಟಾನು ಸಾರ ಕೇಳಿಕೊಂಡು ಪಡೆದಿರುವದು ಲೋಕಸಿದ್ಧವು ಹಾಗೆಯೇ "**ಸರ್ವೇಭ್ಯಃ ಕಾಮೇ ಭ್ಯೋ ಜ್ಯೋತಿಷ್ಟೋಮಃ**" ಎಂಬಲ್ಲಿ ಜ್ಯೋತಿಷ್ಟೋಮವು ಸಮಸ್ತ ಕೋರಿಕೆಗಳಿ ಗಾಗಿಯೂ ಅನುಷ್ಠಿಸಬಹುದೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಭಗವಂತನೂ, ತನ್ನನ್ನು ಆಶ್ರಯಿಸಿ ಕೋರಿದ ಫಲವನ್ನೇ ಕೊಡಬೇಕಷ್ಟೇ?

**ತದರ್ಥೀ ಚೇತ್**-ಐಶ್ವರ್ಯವನ್ನು ಅಪೇಕ್ಷಿಸುವ ಅಧಿಕಾರಿಯಾದರೆ, **ಭಕ್ತಿಯೋಗವು, ಸಮಗ್ರೈಶ್ವರ್ಯಸಾಧಕಃ**-ಇಲ್ಲಿ **ಸಮಗ್ರ** ಶಬ್ದದಿಂದ ಸರ್ವೇಶ್ವರನು ಅದರಿಂದ ಕೊಡಬಹುದಾದ ಸಂಪೂರ್ಣವಾದ ಐಶ್ವರ್ಯವು ಬೋಧಿತವು. ಚತುರ್ಮುಖ, ರುದ್ರ, ಇಂದ್ರಾದಿ ಲೋಕಾಧಿಕಾರ ಗಳನ್ನೆಲ್ಲಾ ಕೊಡುವ ಸಾಮರ್ಥ್ಯವು ಸರ್ವೇಶ್ವರನಿಗೆ ಉಂಟಷ್ಟೇ. ಇಷ್ಟೇ ಅಲ್ಲವು. ಇವರು ಗಳಿಗಾದರೆ ತಮ್ಮ ತಮ್ಮ ಲೋಕಾಧಿಪತ್ಯವನ್ನೂ ಕೂಡ ಕೊಡುವ ಯೋಗ್ಯತೆ ಇಲ್ಲವು. ತಮ್ಮ ತಮ್ಮ ಲೋಕಗಳ ಪ್ರಾಪ್ತಿಯನ್ನು ತುಂಬಾ ಪ್ರೀತರಾದರೆ ಸ್ವಾಮಿಯ ಅನುಮತಿಯಿಂದ ಕೊಡಬಲ್ಲರು ಸರ್ವೇಶ್ವರನಾದರೋ ಹಾಗಲ್ಲವು. ಆ ಲೋಕಗಳ ಆಧಿಪತ್ಯವನ್ನೂ ಕೊಡು ವದಲ್ಲದೆ ತನಗೆ ಸಮವಾದ ಆನಂದವನ್ನು ಉಂಟುಮಾಡಬಲ್ಲನು. ಬ್ರಹ್ಮನಿಗೆ ಕೊಟ್ಟಿರುವ ಅಧಿಕಾರವೂ ಸ್ವಾಮಿದತ್ತವೆಂದು ತಾನೇ ಹೇಳಿಕೊಂಡಿರುತ್ತಾನೆ— "**ಪ್ರಾಜಾಪತ್ಯಂ ತ್ವಯಾ**

**ಕರ್ಮ ಸರ್ವಂ ಮಯಿ ನಿವೇಶಿತವ್** ". ಎಂಬದಾಗಿ. ಹಾಗೆಯೇ ಇನ್ನೊಂದು ಕಡೆಯಲ್ಲೂ **" ಯುಗಕೋಟಿ ಸಹಸ್ರೇಣ ವಿಷ್ಣುಮಾರಾಧ್ಯ ಪದ್ಮಭೂಃ । ಪುನಸ್ತ್ರೈಲೋಕ್ಯಧಾತೃತ್ವಂ ಪ್ರಾಪ್ತವಾನಿತಿಶುಶ್ರುಮ** ". ರುದ್ರನಿಗೂ ಆತನ ಲೋಕಪ್ರಾಪ್ತಿಯಲ್ಲಿ **" ಅಸ್ಯದೇವಸ್ಯ ಮೀಢುಷೋ ವಯೋ ವಿಷ್ಣೋರೇಷಸ್ಯ ಅವಭೃತೇ ಹವಿರ್ಭಿಃ । ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾನೇಷ್ಟುಂ ವರ್ತಿರಾಶ್ವಿನಾರಾವಿವತ್** " **ಅಸ್ಯ**-ಸರ್ವವಿಲಕ್ಷಣನೆಂದು ಶ್ರುತಿಪ್ರತಿಪಾದ್ಯನಾದ, **ದೇವಸ್ಯ**-ಲೀಲಾಪರನಾದ, **ಮೀಢುಷಃ**-ಉದಾರನಾದ, **ವಯಃ**-ಶಾಖಾಭೂತನಾದ, ಎಲ್ಲವೂ ತನಗೆ ಶರೀರವಾಗಿ ಹೊಂದಿದ, **ವಿಷ್ಣೋಃ**-ಎಲ್ಲವನ್ನೂ ವ್ಯಾಪಿಸಿ ಅವುಗಳಿಗೆ ಅಂತರ್ಯಾಮಿಯಾದ ನಾರಾಯಣನ, **ಏಷಸ್ಯ**-ಸರ್ವಮೇಧವೆಂಬ ಯಾಗದಲ್ಲಿ ಪ್ರಾರ್ಥಿಸಲು ಯೋಗ್ಯನಾದವನ, **ಅವಭೃತೇರ್ಹವಿರ್ಭಿಃ**-ವಿಷ್ಣುವಿಗೆ ಸಮರ್ಪಿಸಲ್ಪಟ್ಟ, **ಸ್ವಾತ್ಮ**-ಪರ್ಯನ್ತವಾದ ಹವಿಸ್ಸುಗಳಿಂದ, **ವಿದೇಹಿ**-ಹೊಂದಿದನಷ್ಟೇ, ಹಿ-ಪ್ರಸಿದ್ಧಿಯನ್ನು ಬೋಧಿಸುತ್ತದೆ ; ಏನನ್ನು ಯಾರು ಹೊಂದಿದರೆಂದು ಮುಂದೆ ಹೇಳಲ್ಪಡುತ್ತದೆ **ರುದ್ರಿಯಂ**-ರುದ್ರಸಂಬಂಧವಾದ, ಅಥವಾ ಬ್ರಹ್ಮರುದ್ರೇಂದ್ರಾದಿ ಪದಗಳೆಲ್ಲಾ ಆ ಪ್ರವಾಹನಿತ್ಯಗಳಾಗಿರುವದರಿಂದ, ರುದ್ರ ಸಂಬಂಧವೆಂದು ಪ್ರಸಿದ್ಧಿಹೊಂದಿದ, **ಮಹಿತಂ**-ಮಹಿಮೆಯನ್ನು. ರುದ್ರನು ಹೊಂದಿದನೆಂದು ಹೇಳುವ ಸಂದರ್ಭವು ಹಾಗೆಯೇ ಮಹಾಭಾರತದಲ್ಲೂ ಪ್ರೋಕ್ತವು—**" ಮಹಾದೇವಸ್ಸರ್ವಮೇಧೇ ಮಹಾತ್ಮಾಹುತ್ವಾತ್ಮಾನಂ ದೇವದೇವೋಬಭೂವ** " ರುದ್ರನು ತಾನು ನಡೆಸಿದ ಸರ್ವಮೇಧವೆಂಬ ಯಜ್ಞದಲ್ಲಿ ತನ್ನನ್ನೇ ಹವಿಸ್ಸಾಗಿ ಶ್ರೀ ಮಹಾವಿಷ್ಣುವಿಗೆ ಸಮರ್ಪಿಸಿದುದರಿಂದ ದೇವತೆಗಳಿಗೆಲ್ಲಾ ಸ್ವಾಮಿಯಾದನೆಂದು ಹೇಳಲ್ಪಟ್ಟಿರುತ್ತದೆ ಆದರೆ ಅಧಿಕಾರಿಯು ಜಿಜ್ಞಾಸುವಾಗಿ, **ತ್ರಯೋಪ್ಯೇತೆ**-ಈ ಕರ್ಮಜ್ಞಾನ ಭಕ್ತಿಗಳಾದ ಈ ಮೂರೂ ಸಹ, **ಆತ್ಮಾರ್ಥೀಚೇತ್**-ತನ್ನ ಪರಿಶುದ್ಧಾತ್ಮವನ್ನು ಪ್ರಾಪ್ಯವಾಗಿ ಹೊಂದಬೇಕೆಂದಿರುವವನಾದರೆ, **ತತ್ಕೈವಲ್ಯಸಾಧಕಾಃ**-ಅಂತಹ ಕೈವಲ್ಯಪ್ರಾಪ್ತಿಗೇ ಸಾಧಕಗಳು. ಈ ಕೈವಲ್ಯಪ್ರಾಪ್ತಿಯಾದನಂತರ ಪುನರಾವೃತ್ತಿಯಿಲ್ಲದೆ ಮೋಕ್ಷಪ್ರಾಪ್ತಿ ಎಂಬುದು ೮ ನೆಯ ಅಧ್ಯಾಯದಲ್ಲಿ **" ಅವ್ಯಕ್ತೋಽಕ್ಷರ ಇತ್ಯುಕ್ತಃ "** (೮-೨೧) ಎಂಬಲ್ಲಿ ಹೇಳಿರುವದರಿಂದಲೂ, ಐಶ್ವರ್ಯಾರ್ಥಿಯ ಪ್ರಾಪ್ತಿಯು **" ಆಬ್ರಹ್ಮಭುವನಾಲ್ಲೋಕಾಃ "** (ಗೀ ೮-೧೬) ಎಂಬಲ್ಲಿ ಪುನರಾವೃತ್ತಿಲಕ್ಷಣ ಉಂಟೆಂದು ಹೇಳಿರುವದರಿಂದಲೂ ಐಶ್ವರ್ಯಪ್ರಾಪ್ತಿಗಿಂತ ಈ ಕೈವಲ್ಯರೂಪ ಆತ್ಮಪ್ರಾಪ್ತಿಯು ವಿಲಕ್ಷಣವೆಂಬ ಭಾವವು. ಇಲ್ಲಿ **ತ್ರಯೋಽಪ್ಯೇತೇ** ಐಶ್ವರ್ಯಕ್ಕೂ ಕೈವಲ್ಯಕ್ಕೂ ಸಹ **ಸಾಧಕಾಃ** ಎಂದು ಇಲ್ಲಿ ಹೇಳಿರುವದರಿಂದ ಜ್ಞಾನಿಗೆ ಮಾತ್ರವೇ ಕರ್ಮಯೋಗಾದಿಗಳು ಬೇಕೇ ವಿನಾ ಐಶ್ವರ್ಯಾರ್ಥಿಗೆ ಕರ್ಮಯೋಗವು ಬೇಕಿಲ್ಲವೆಂದು ಹೇಳುವ ಪಂಡಿತರುಗಳ ವಾದವು ನಿರಸ್ತವು. ಕರ್ಮಯೋಗವು ಚತುರ್ವಿಧ ಭಕ್ತಿಯೋಗನಿಷ್ಠರಿಗೂ ಆವಶ್ಯಕವೆಂಬುದು ಶ್ರೀ ಯಾಮುನೇಯರ ದಿವ್ಯಸೂಕ್ತಿಯಿಂದ ಸ್ಥಾಪಿತವು ಗೀತೆಯಲ್ಲಿ ಕರ್ಮಯೋಗವು ಭಕ್ತಿಯೋಗಸಾಧನವೆಂದು ಹೇಳಿ ಅನಂತರ ಈ ಭಕ್ತಿಯೋಗಾಧಿಕಾರಿಗಳು ನಾಲ್ವರು ಎಂದು ಹೇಳಿರುವದರಿಂದಲೇ ವ್ಯಕ್ತವು ||೨೭||

ಹೀಗೆ ಅತಿಶಯಿತೈಶ್ವರ್ಯ, ಕೈವಲ್ಯ, ಭಗವತ್ಪ್ರಾಪ್ತಿಯನ್ನು ಅಪೇಕ್ಷಿಸುವ ಎಲ್ಲಾ ಭಕ್ತಿಯೋಗಾಧಿಕಾರಿಗಳಿಗೂ ಭಕ್ತಿಯ ಸಾರಭೂತವಾದ ಸಾಧಾರಣವಾದ ಆಕಾರವು ಈ ಶ್ಲೋಕದಲ್ಲಿ ಹೇಳಲ್ಪಟ್ಟು ಅಂತಹ ಭಕ್ತಿಪುರಸ್ಸರವಾಗಿ ಭಕ್ತಿಯೋಗನಿಷ್ಠನಾದರೆ ತನ್ನ ಕೋರಿಕೆಯನ್ನು ಸಮಗ್ರವಾಗಿ ಹೊಂದುವನೆಂದು ಉಪದೇಶಿಸುತ್ತಾರೆ. ಭಕ್ತಿಯೋಗನಿಷ್ಠರು ಪರಮಪುರುಷನಿಂದಲೇ ಈ ಐಶ್ವರ್ಯ ಕೈವಲ್ಯ ಭಗವತ್ಪ್ರಾಪ್ತಿಯನ್ನು ಅಪೇಕ್ಷಿಸುವದರಿಂದ ಇವರುಗಳ ಭಕ್ತಿಯು

**ಮೂ. ಐಕಾನ್ತ್ಯಂ ಭಗವತ್ಯೇಷಾಂ ಸಮಾನಮಧಿಕಾರಿಣಾಮ್ ।**
**ಯಾವತ್ಪ್ರಾಪ್ತಿ ಪರಾರ್ಥೀ ಚೇತ್ತದೇವಾತ್ಯನ್ತ ಮಶ್ನುತೇ ॥೨೮॥**

ಅವ್ಯಭಿಚರಿತವಾದುದಾಗಿರಬೇಕು. ಇವುಗಳ ಪ್ರಾಪ್ತಿಯ ವಿಷಯದಲ್ಲಿ ಅನನ್ಯಗತಿತ್ವನು ಸಂಧಾನವುಂಟಾದರೇನೇ ಪರಮಾತ್ಮನು ಕರುಣಿಸುವನು, ಅನ್ಯಥಾ ಇಲ್ಲವಾದುದರಿಂದ **ಅನ್ಯದೇವತಾಭಜನವು ಸರ್ವಾತ್ಮನಾ ಕೂಡದು** ಎಂದು ಹೇಳುತ್ತಾರೆ. ಆದರೆ ಮೋಕ್ಷ ವನ್ನೇನೋ ಅನ್ಯದೇವತೆಗಳು ಕೊಡಲು ಶಕ್ತಿಯುಳ್ಳವರಲ್ಲವು. ಐಶ್ವರ್ಯವನ್ನು ಕೊಡಲು ಅವರಿಗೆ ಶಕ್ತಿಯುಂಟಲ್ಲಾ ಅಂತಹ ಸಂದರ್ಭದಲ್ಲಿ ಅನ್ಯದೇವತಾಭಜನವು ಏಕೆ ಕೂಡದು? ಅವರುಗಳು ಕ್ಷಿಪ್ರವಾಗಿಯೂ ಕೊಡುತ್ತಾರಲ್ಲಾ? ಎಂದರೆ, ಆಗಬಹುದು, ಅದಕ್ಕೆ ಶಾಸ್ತ್ರ ಪ್ರಮಾಣವೂ ಉಂಟು. ಆದರೆ ಅನ್ಯದೇವತಾಭಜನದಿಂದುಂಟಾಗುವ ಐಶ್ವರ್ಯಕ್ಕೂ ಪರಮ ಪುರುಷನ ಧ್ಯಾನದಿಂದುಂಟಾಗುವ ಐಶ್ವರ್ಯಕ್ಕೂ ವಿಶೇಷ ವ್ಯತ್ಯಾಸಗಳುಂಟು. (೧) ಅದು ಭಕ್ತಿಯೋಗವಾಗುವದಿಲ್ಲವು (೨) ಭಗವದನುಗ್ರಹವನ್ನು ಸಂಪಾದಿಸಿಕೊಳ್ಳದಿರುವದರಿಂದ ಪ್ರಮಾದ ದುಃಖಾದಿಗಳಿಲ್ಲದ ಐಶ್ವರ್ಯವೂ ಆಗುವದಿಲ್ಲವು; (೩) ಭಗವದನುಗ್ರಹದಿಂದುಂಟಾಗುವ ಐಶ್ವರ್ಯವು ಧ್ರುವಾದಿಗಳಿಗೆ ಪ್ರಾಪ್ತವಾದಹಾಗೆ ಇಂದ್ರಾದಿಗಳು ಕೊಡುವ ಭೋಗಗಳಿಗಿಂತ ಅತಿಶಯಿತವಾದುದು. ಆದುದರಿಂದಲೇ ೮ ನೆಯ ಸಙ್ಗ್ರಹಶ್ಲೋಕವಾದ "**ಐಶ್ವರ್ಯಾಕ್ಷರ ಯಾಥಾತ್ಮ್ಯ**" ಎಂಬ ಶ್ಲೋಕದಲ್ಲಿರುವ ಐಶ್ವರ್ಯಶಬ್ದಕ್ಕೆ ಶ್ರೀ ನಿಗಮಾನ್ತದೇಶಿಕರವರು "**ಐಶ್ವರ್ಯಮತ್ರೇನ್ದ್ರಪ್ರಜಾಪತಿಭೋಗೇಭ್ಯೋಽತಿಶಯಭೋಗಃ**" ಎಂಬ ಭಾಷ್ಯವನ್ನು ಅನುಗ್ರಹಿಸಿರುತ್ತಾರೆ. ಅನೇಕ ಮಹನೀಯರೂ ಸಹ ಇದರ ಸರಿಯಾದ **ಈ ಮೇಲಿನ** ಅಭಿಪ್ರಾಯವನ್ನು ಗ್ರಹಿಸದೇ ಅಪಾರ್ಥವನ್ನು ಕಲ್ಪಿಸಿರುತ್ತಾರೆ. ಅವರುಗಳ ಅಭಿಪ್ರಾಯವು ಇಲ್ಲಿ ಹೇಳಿರುವ ಐಶ್ವರ್ಯವು, ಐಹಿಕ ಸ್ವರ್ಗಾದಿ ಭೋಗಗಳಲ್ಲವು; ಅವಕ್ಕೂ ಹೆಚ್ಚಿನ ಐಶ್ವರ್ಯ ವೆಂದೂ, ಹೇಳುವರು. ಈ ೨೦ನೆಯ ಶ್ಲೋಕದ ಭಾಷ್ಯದಲ್ಲಿ ಶ್ರೀ ನಿಗಮಾನ್ತದೇಶಿಕರವರು "**ಏವ ಮಟಿತ್ತ್ವಸ್ಯಾನುಭವರೂಪೈಶ್ವರ್ಯಸಾಧಕತ್ವಂ ಭಕ್ತ್ಯೈರುಕ್ತಮ್**" ಆದರೆ ಈ ಐಹಿಕಾಧಿ ಗಳ ಅನುಭವಕ್ಕಾಗಿ ಮಾಡಿದ ಭಕ್ತಿಯೋಗಕ್ಕೆ ಒಂದು ವೈಲಕ್ಷಣ್ಯವೇನೋ ಉಂಟು; ಅದೇನೆಂದರೆ ಸರ್ವೇಶ್ವರನು ಈ ನಶ್ವರ ಸುಖಕ್ಕಾಗಿಯಾದರೂ ನನ್ನನ್ನು ಧ್ಯಾನಿಸಿದನೇ ಎಂಬ ವಾತ್ಸಲ್ಯದಿಂದ ಬೇರೆ ಒಳ್ಳೇ ಜನ್ಮವನ್ನು ಕೊಟ್ಟು ತನ್ಮೂಲಕ ವೈರಾಗ್ಯವನ್ನುಂಟುಮಾಡಿ, ಸಾಧನಾನುಷ್ಠಾನವನ್ನು ಮಾಡಿಸಿ ಅಜಾಮಿಳೋಪಾಖ್ಯಾನದಲ್ಲಿ ಹೇಳಲ್ಪಟ್ಟ ಹಾಗೆ ಕೊನೆಗೆ ದಿವ್ಯ ವೈಕುಂಠಲೋಕ ಪ್ರಾಪ್ತಿಯನ್ನೂ ಉಂಟುಮಾಡುವನು. ಹೀಗೆ ಅಶಾಶ್ವತ ಐಶ್ವರ್ಯ ವಾದರೂ ಮೇಲೆ ಉಪಪಾದಿಸಿದ ಹಾಗೆ ವೈಲಕ್ಷಣ್ಯವುಳ್ಳದ್ದು. (೪) ಇದು ಭಗವದನುಗ್ರಹ ಸಂಪಾದಕನಾದುದರಿಂದ, ಜನನಕಾಲದಲ್ಲಿ ಆತನ ವೀಕ್ಷಣೆಯುಂಟಾಗಿ, ಸಾಧು ಸಮಾಗಮ ಗುರೂಪಸದನಾದಿಗಳು ಲಭಿಸಿ, ಉಪಾಯಾನುಷ್ಠಾನಕ್ಕೆ ಹೇತುವಾಗಿ ಕೊನೆಗೆ ಪರಮಾತ್ಮ ಪ್ರಾಪ್ತಿಯೂ ಲಭಿಸುತ್ತದೆ. "**ಮದ್ಭಕ್ತಾಯಾನ್ತಿಮಾಮಪಿ**" (ಗೀ. ೭-೨೩) ಎಂಬಲ್ಲಿ ಹಾಗೆ ಹೇಳಲ್ಪಟ್ಟಿರುತ್ತದೆ. ಆದುದರಿಂದ ಈ ಮೂರುವಿಧ ಅಧಿಕಾರಿಗಳಿಗೂ ಅನ್ಯದೇವತಾ ಭಜನವು ಇಲ್ಲಿ ನಿಷೇಧಿಸಿ ಹೇಳುತ್ತಾರೆ. **ಏಷಾಂ ಅಧಿಕಾರಿಣಾಂ** ಈ ಮೂರುವಿಧ ಅಧಿಕಾರಿಗಳಿಗೂ ಗೀತೆಯಲ್ಲಿ ಹೇಳಿರುವ ನಾಲ್ವರೂ ಇಲ್ಲಿ ಹೇಳಲ್ಪಟ್ಟರು: ಆರ್ತನೂ ಅರ್ಥಾರ್ಥಿಯೂ ಇಬ್ಬರೂ ಐಶ್ವರ್ಯಾರ್ಥಿಗಳೇಯಾದುದರಿಂದ, **ಭಗವತಿ**-ಪರಮಪುರುಷನಲ್ಲೇ **ಐಕಾನ್ತ್ಯಮ್**-ಅನ್ಯ ದೇವತಾ ಸಂಬಂಧವಿಲ್ಲದ ಐಕಾನ್ತ್ಯವು, **ಸಮಾನಂ**-ಸಮಾನವಾದುದಾಗಿರುತ್ತದೆ. **ಯಾವ**

**ತ್ಪ್ರಾಪ್ತಿಪರಾರ್ಥೀಚೇತ್**-ಕೋರಿಕೆಯು ಲಭಿಸುವವರೆಗೂ ಪರಮಾತ್ಮನನ್ನೇ ಪ್ರಾರ್ಥಿಸುವನಾದರೆ, **ತದೇವ**-ಆ ಕೋರಿಕೆಯನ್ನೇ, **ಅತ್ಯನ್ತಮಶ್ನುತೇ**-ಸಮಗ್ರವಾಗಿ ಹೊಂದುವನು. ಯಾವತ್ಪ್ರಾಪ್ತಿಪರಾರ್ಥಿಯಾಗಿರಬೇಕೆಂದು ಮಧ್ಯದಲ್ಲಿ ಅನ್ಯದೇವತಾ ಭಜನವು ಕೂಡದೆಂದು ನಿಷೇಧಿಸಲ್ಪಟ್ಟಿತು. ಕೋರಿಕೆಯು ಸಿದ್ಧಿಸುವವರೆಗೂ ಪರಮಾತ್ಮಭಜನವೇ ಇರತಕ್ಕದ್ದೆಂದು ಹೇಳಲ್ಪಟ್ಟಿತು. ಶ್ರೀ ವಿದುರರು ಧೃತರಾಷ್ಟ್ರನಿಗೆ "**ಯಾವಜ್ಜೀವಂ ತು ತತ್ಕುರ್ಯಾದ್ಯೇನ ಪ್ರೇತ್ಯ ಸುಖಂ ವಸೇತ್**" ಎಂದು ತಿಳಿಸಿರುತ್ತಾರೆ ಅಥವಾ ಉತ್ತರಾರ್ಧಕ್ಕೆ ಇನ್ನೊಂದು ವಿಧವಾಗಿಯೂ ಅರ್ಥಮಾಡಬಹುದು; ಹೇಗೆಂದರೆ **ಯಾವತ್ಪ್ರಾಪ್ತಿ**-ಪರಮಾತ್ಮಪ್ರಾಪ್ತಿಯುಂಟಾಗುವವರೆಗೂ, **ಪರಾರ್ಥೀಚೇತ್**-ಪರಮಾತ್ಮನನ್ನೇ ಆಶ್ರಯಿಸಿ ಕೋರಿದವನಾದರೆ, **ತದೇವ**-ಆ ಪರಮಾತ್ಮಪ್ರಾಪ್ತಿಯನ್ನೇ, **ಅತ್ಯಂತಮಶ್ನುತೇ**-ಪರಿಪೂರ್ಣ ಬ್ರಹ್ಮಾನುಭವವನ್ನೇ ಹೊಂದುವನು. ಈ ಎರಡನೆಯ ಅರ್ಥವೇ ಮುಂದೆ ಹೇಳಲ್ಪಡುತ್ತದೆ. ಹೀಗೆ ಐಶ್ವರ್ಯಕೈವಲ್ಯ ಭಗವತ್ಪ್ರಾಪ್ತಿಗಳನ್ನು ಅಪೇಕ್ಷಿಸುವ ಭಕ್ತರೆಲ್ಲರೂ ಅನ್ಯದೇವತಾ ಸಂಬಂಧವಿಲ್ಲದ ಏಕಾನ್ತಿಗಳಾಗಿರಬೇಕೆಂದು ಭಾರತ ಶಾನ್ತಿಪರ್ವದಲ್ಲೂ (೩೫೪-೩೪, ೩೫) ಶ್ಲೋಕಗಳಲ್ಲಿ ಹೇಳಲ್ಪಟ್ಟಿರುತ್ತದೆ. **ಚತುರ್ವಿಧಾ ಮಮಜನಾ ಭಕ್ತಾ ಏವಹಿ ತೇ ಸ್ಮೃತಾಃ । ತೇಷಾಮೇಕಾನ್ತಿನಶ್ಶ್ರೇಷ್ಠಾಸ್ತೇಚೈವಾನನ್ಯದೇವತಾಃ ॥ ಅಹ ಮೇವ ಗತಿ ಸ್ತೇಷಾಂ ನಿರಾಶೀಃ ಕರ್ಮಕಾರಿಣಾಮ್ । ಯೇತು ಶಿಷ್ಟಾ ಸ್ತ್ರಯೋ ಭಕ್ತಾಃ ಫಲಕಾಮಾ ಹಿ ತೇ ಮತಾಃ । ಸರ್ವೇ ಚ್ಯವನಧರ್ಮಾಣಃ ಪ್ರತಿಬುದ್ಧಸ್ತು ಮೋಕ್ಷಭಾಕ್** ॥" ಇದರರ್ಥವೇನೆಂದರೆ—**ಚತುರ್ವಿಧಾಃ**-ಆರ್ತನು, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ ಎಂಬದಾಗಿ ನಾಲ್ಕುವಿಧವಾದ, **ಭಕ್ತಾಃ**-ಭಕ್ತಿಯೋಗನಿಷ್ಠರು, **ಮಮ ಜನಾಏವ**-ಉದಾರರು, ನನ್ನನ್ನು ಕೊಂಡಾಡುವರು. ಆದುದರಿಂದ ಸ್ವಕೀಯಜನರು ಎಂಬದಾಗಿ, **ತೇ**-ಅವರು, **ಸ್ಮೃತಾಃ**-ಭಗವದ್ಗೀತೆಯಲ್ಲಿ ಹೇಳಲ್ಪಟ್ಟಿರುವವರು **ತೇಷಾಂ**-ಅವರುಗಳಲ್ಲಿ, **ಏಕಾನ್ತಿನಃ**-ಆತನೊಬ್ಬನನ್ನೇ ಧ್ಯಾನಿಸುವವರು, ಶ್ರೇಷ್ಠರು, ಅದೇತಕ್ಕೆಂದರೆ, **ತೇಚೈವ**-ಅವರುಗಳೇ, **ಅನನ್ಯದೇವತಾಃ**-ಪರಮಾತ್ಮನಲ್ಲದೆ ಇನ್ನು ಯಾವ ಅನ್ಯದೇವತೆಯನ್ನೂ ಭಜಿಸದೇ ಇರುವವರು; ಅದೇನು ಎಂದರೆ **ನಿರಾಶೀಃ ಕರ್ಮಕಾರಿಣಾಂ** ಫಲದಲ್ಲೂ, ಫಲವನ್ನು ಹೇಳಿದುದು ಕರ್ತೃತ್ವ ಮಮತೆಗಳಿಗೂ ಉಪಲಕ್ಷಣವು; ಹೀಗೆ ಈ ಮೂರರಲ್ಲೂ ಆಶೆಯಿಲ್ಲದೆ, **ಕರ್ಮಕಾರಿಣಾಂ**-ವಿಹಿತಕರ್ಮಗಳನ್ನನುಷ್ಠಿಸುವ, **ತೇಷಾಂ**-ಆ ಭಕ್ತರುಗಳಿಗೆ **ಅಹಮೇವಗತಿಃ**-ಅವರ ಕೋರಿಕೆಗಳಿಗೆ ನಾನೇ ಗತಿಯು, ಸಾಧಿಸಿಕೊಡುವವನು, **ಯೇತುಶಿಷ್ಟಾಸ್ತ್ರಯೋಭಕ್ತಾಃ**-ಇವರಲ್ಲಿ ಮೂರು ಮಂದಿಗಳಾದ ಶಿಷ್ಟರಾಗಿರುವ ಭಕ್ತರು ಯಾರೋ ಎಂದರೆ ಆರ್ತನೂ ಅರ್ಥಾರ್ಥಿಯೂ ಜಿಜ್ಞಾಸುವೂ, **ತೇ**-ಅವರು **ಫಲಕಾಮಾಃ** ಜ್ಞಾನಿಯ ಹಾಗೆ ನಿಷ್ಕಾಮರಾಗಿ ಅಲ್ಲದೆ ಫಲದಲ್ಲಿ ಆಶೆಯುಳ್ಳವರಾಗಿ, **ಮತಾಃ**-ನನಗೆ ಇಷ್ಟರು. **ಸರ್ವೇ**-ಹೀಗೆ ಮೂರುವಿಧ ಭಕ್ತರಾದವರೆಲ್ಲರೂ, **ಚ್ಯವನಧರ್ಮಾಣಃ**-ಮೋಕ್ಷಫಲದಿಂದ ಜಾರಿಬೀಳುವ ಸ್ವಭಾವವುಳ್ಳವರು, ತತ್ಕಾಲದಲ್ಲಿ ಮೋಕ್ಷಾನುಭವವಿಲ್ಲದವರು; **ಪ್ರತಿಬುದ್ಧಸ್ತು**-ಪ್ರಾಜ್ಞನಾದವನು ಯಾರೆಂದರೆ, **ಮೋಕ್ಷಭಾಕ್**-ಮೋಕ್ಷವನ್ನು ಹೊಂದಬೇಕೆಂಬ ಜ್ಞಾನಿಯು ಎಂಬರ್ಥವು ಇಲ್ಲಿ ಆರ್ತನನ್ನೂ ಅರ್ಥಾರ್ಥಿಯನ್ನೂ ಚ್ಯವನಧರ್ಮವುಳ್ಳವರೆಂದು ಹೇಳಿದುದೇನೋ ಒಪ್ಪಬಹುದು; ಏತಕ್ಕೆಂದರೆ ಅವರಿಗೆ ಪುನರಾವೃತ್ತಿಯು ಹೇಳಲ್ಪಟ್ಟಿರುವದರಿಂದ, ಆದರೆ ಜಿಜ್ಞಾಸುವೂ ಸಹ ಹೇಗೆ ಚ್ಯವನಧರ್ಮಯುಕ್ತನು ಆತನಿಗೆ ೮ನೆಯ ಅಧ್ಯಾಯದಲ್ಲಿ ಪುನರಾವೃತ್ತಿಯಿಲ್ಲವೆಂದು ಹೇಳಲ್ಪಟ್ಟಿರುತ್ತದೆಯಲ್ಲಾ? ಕೇವಲನ ವಿಷಯದಲ್ಲಿ ಚ್ಯವನಧರ್ಮ ಉಂಟೆಂದು ಹೇಳುವದು ಹೇಗೆ? ಎಂದರೆ ಆತನು ಅಕ್ಷರಮವ್ಯಕ್ತ

**ಮೂ. ಜ್ಞಾನೀತು ಪರಮೈಕಾನ್ತೀ ತದಾಯತ್ತಾತ್ಮಜೀವನಃ ।
ತತ್ಸಂಶ್ಲೇಷ ವಿಯೋಗೈಕ ಸುಖದುಃಖಸ್ತದೇಕಧೀಃ ॥೨೯॥**

ವೆಂದು ಹೇಳಿಸಿಕೊಳ್ಳುವ ಪರಿಶುದ್ಧಾತ್ಮ ಪ್ರಾಪ್ತಿಗಾಗಿ ಉಪಾಸಿಸುವದರಿಂದ, ಈತನಿಗೆ ತತ್ಕ್ರತುನ್ಯಾಯದ ಪ್ರಕಾರ ಪರಿಶುದ್ಧಾತ್ಮಪ್ರಾಪ್ತಿಯು, ತದನಂತರ ಮೋಕ್ಷಪ್ರಾಪ್ತಿಯೂ ಹೇಳಿರುವದರಿಂದ ಈ ಕೇವಲನಿಗೂ ಒಡನೆ ಮೋಕ್ಷವಿಲ್ಲದುದರಿಂದ ಚ್ಯವನಧರ್ಮಯುಕ್ತನು. ಆ ಕಾಲದಲ್ಲಿ ಮೋಕ್ಷಪ್ರಾಪ್ತಿಯಿಲ್ಲದಿದರಿಂದ ಚ್ಯವನಧರ್ಮವೆಂದು ಹೇಳಿಸಿಕೊಳ್ಳಲು ಯಾವ ಅಭ್ಯಂತರವೂ ಇಲ್ಲವು **ಪ್ರತಿಬುದ್ಧಸ್ತುಮೋಕ್ಷಭಾಕ್** ಎಂದು ಹೇಳಿದ ಅಭಿಪ್ರಾಯವೇ ಮುಂದಿನ ಶ್ಲೋಕದಲ್ಲಿ ಹೇಳಲ್ಪಡುತ್ತದೆ

**ಮೂಲಕ್ಕೆ ಅರ್ಥವು**—ಹಿಂದೆ ಹೇಳಿದ ಫಲಕಾಮರಾದ ಏಕಾನ್ತಿಗಳಾದ ಮೂರುವಿಧ ಭಕ್ತರುಗಳಿಗಿಂತ ಜ್ಞಾನಿಯಾದ ಭಕ್ತನು ವಿಲಕ್ಷಣನೆಂದು, **ಪ್ರತಿಬುದ್ಧಸ್ತುಮೋಕ್ಷಭಾಕ್** ಎಂಬಲ್ಲಿಯೂ **ಜ್ಞಾನೀ ತ್ವಾ ತ್ಮೈವ ಮೇ ಮತಮ್** ಎಂಬಲ್ಲಿಯೂ "**ಮಚ್ಚಿತ್ತಾಮದ್ಗತ ಪ್ರಾಣಾಃ**" (ಗೀ. ೧೦-೯) ಎಂಬಲ್ಲೂ ಹೇಳಲ್ಪಟ್ಟ ಅಭಿಪ್ರಾಯವನ್ನು ಮುಂದಿನ ನಾಲ್ಕು ಶ್ಲೋಕಗಳಿಂದಲೂ ಹೇಳಿ ನಿಗಮನಮಾಡುತ್ತಾರೆ. **ಜ್ಞಾನೀತು**-ಜ್ಞಾನಿಯಾದರೋ, ಇಲ್ಲಿ **ತು** ಶಬ್ದವು ಹಿಂದಿನ ಮೂರುವಿಧ ಭಕ್ತರುಗಳಿಗಿಂತ ವೈಲಕ್ಷಣ್ಯವನ್ನು ಸೂಚಿಸುತ್ತದೆ, **ಪರಮೈಕಾನ್ತೀ**-ಆ ಮೂರು ಜನರು ಏಕಾನ್ತಿಗಳು ಎಂದರೆ "**ಭಕ್ತಿರವ್ಯಭಿಚಾರಿಣೀ**" (ಗೀ. ೧೩-೧೦) ಎಂದು ಹೇಳಿರುವ ಹಾಗೆ, ಅವ್ಯಭಿಚರಿತಭಕ್ತಿಯುಳ್ಳವರು, ಅನ್ಯದೇವತಾರಾಧನವಿಲ್ಲದವರು, ಈ ಜ್ಞಾನಿಯಾದರೋ, ಅನನ್ಯ ಭಕ್ತಿಯುಳ್ಳವನೂ ಅಲ್ಲದೆ, ಅನನ್ಯ ಪ್ರಯೋಜನವುಳ್ಳವನು; ತೈಲಧಾರೆಯ ಹಾಗೆ ಅವಿಚ್ಛಿನ್ನ ಸ್ಮೃತಿಸಂತತರೂಪೋಪಾಸಕನು, **ತದಾಯತ್ತಾತ್ಮಜೀವನಃ** ಪರಮಾತ್ಮನಿಗೆ ಅಧೀನ ಆತ್ಮನ ಸತ್ತಾಸ್ಥಿತಿ ವ್ಯಾಪಾರಗಳುಳ್ಳವನು, **ತತ್ಸಂಶ್ಲೇಷವಿಯೋಗೈಕ ಸುಖದುಃಖಃ**-ಆ ಪರಮಪುರುಷನೊಂದಿಗೆ ಸೇರಿರುವದನ್ನೇ ಸುಖವಾಗಿಯೂ, ಅಗಲಿರುವದನ್ನೇ ದುಃಖವಾಗಿವುಳ್ಳವನು, **ತದೇಕಧೀಃ**-ಆತನೊಬ್ಬನನ್ನೇ ಸದಾ ಮನಸ್ಸಿನಳ್ಳುವನಾಗಿರುವವನು. ಲಕ್ಷ್ಮಿಯು ಮನೋವೃತ್ತಿಗೆ ಅನುಸಾರವಾದ ಅಭಿಪ್ರಾಯವುಳ್ಳವನು. "**ಯಸ್ತ್ವಯಾ ಸಹಸಸ್ವರ್ಗೋ ನಿರಯೋಯಂ ತ್ವಯಾವಿನಾ**" ನಿನ್ನೊಂದಿಗಿರುವದು, (ಇಲ್ಲಿ ಆತನ ಚಿನ್ತನವು, ಯಾವುದೋ ಅದೇ) ನನಗೆ ಸ್ವರ್ಗವು; ನಿನ್ನಗಲಿರುವದೇ, (ಇಲ್ಲಿ ನಿನ್ನನ್ನು ಚಿಂತಿಸದೇ ಇರುವದೇ) ನರಕವು ಎಂದು ಹೇಳಿಕೊಂಡಿರುತ್ತಾಳೆ (ರಾ ಅಯೋಧ್ಯಾ. ) **ತದಾಯತ್ತಾತ್ಮಜೀವನಃ** ಎಂಬ ಭಾವವು "**ಮಯಿಸರ್ವಮಿದಂಪ್ರೋತಂ**" (ಗೀ ೭-೭) ಎಂಬಲ್ಲೂ, "**ದೈವಂಚೈವಾತ್ರಪಂಚಮಮ್**" (ಗೀ. ೧೮-೫೫) ಎಂಬಲ್ಲೂ, "**ಈಶ್ವರಸ್ಸರ್ವಭೂತಾನಾಂಹೃದ್ದೇಶೇಽರ್ಜುನತಿಷ್ಠತಿ । ಭ್ರಾಮಯನ್ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ॥**" (ಗೀ. ೧೮-೬೧) ಎಂಬಲ್ಲೂ ಹೇಳಿರುವ ಅರ್ಥವು ಸಙ್ಗ್ರಹಿಸಲ್ಪಟ್ಟಿತು. "**ಮಚ್ಚಿತ್ತಾಮದ್ಗತಪ್ರಾಣಾಬೋಧಯನ್ತಃ ಪರಸ್ಪರಮ್ । ಕಥಯನ್ತಶ್ಚಮಾಂ ನಿತ್ಯಂ ತುಷ್ಯನ್ತಿಚರಮನ್ತಿಚ**" (ಗೀ. ೧೦-೯) ಎಂಬ "**ಭವನ್ತಿಭಾವಾ ಭೂತಾನಾಂ ಮತ್ತಏವಪೃಥಗ್ವಿಧಾಃ**" (ಗೀ ) ಎಂಬ ಪ್ರಮಾಣಗಳು ಅನುಸಂಧೇಯಗಳು ಇಲ್ಲಿ **ತತ್ಸಂಶ್ಲೇಷವಿಯೋಗೈಕಸುಖದುಃಖಃ** ಎಂಬಲ್ಲಿ **ಸಂಶ್ಲೇಷವಿಯೋಗ** ಶಬ್ದಗಳಿಂದ ಹೇಳಲ್ಪಟ್ಟದುದು ಏನೆಂದರೆ—ಜ್ಞಾನಿಗೆ ಬೇಕಾದುದು ಏನೆಂದರೆ ಆತನನ್ನು ಉಪಾಸನೆಯ ಮೂಲಕ ಸದಾ ಚಿನ್ತಿಸೋಣವು, ಅದಿಲ್ಲದ ಕಾಲದಲ್ಲಿ ಆತನ ಗುಣಚೇಷ್ಟಿತ

**ಮೂ. ಭಗವದ್ಧ್ಯಾನಯೋಗೋಕ್ತಿ ವಂದನಸ್ತುತಿಕೀರ್ತನೈಃ ।**
**ಲಬ್ಧಾತ್ಮಾತದ್ಗತಪ್ರಾಣ ಮನೋಬುದ್ಧೀನ್ದ್ರಿಯಕ್ರಿಯಃ ॥೩೦॥**

ಗಳನ್ನು ಕೇಳುವದು, ತಿಳಿದಿದ್ದರೆ ಇತರರಿಗೆ ಬೋಧಿಸುವದು, ಆತನಿಗೂ ಆತನ ಮಹಾ ಭಕ್ತರಿಗೂ ಕೈಂಕರ್ಯಗಳನ್ನು ಎಸಗುವದು, ಶಾಸ್ತ್ರಜ್ಞರಿಂದ ಪರಮಾತ್ಮನ ಮಹಿಮೆಯ ವಿಷಯ ವಾದ ಉಪದೇಶವನ್ನು ಹೊಂದುವದು, ಭಗವಂತನನ್ನು ಆರಾಧಿಸುವದು, ಇತ್ಯಾದಿ ಕರ್ಮಗಳಲ್ಲಿ ಆತನನ್ನು ಸ್ಮರಿಸುತ್ತಿರುವದೇ ಸಂಶ್ಲೇಷವು, ಅದರಲ್ಲೇ ಆನಂದಿಸುವದು ; ಇದಿಲ್ಲದ ಅವಸ್ಥೆಯೇ ವಿಯೋಗವು, ಅದರಿಂದ ದುಃಖಿಸುವದು ಎಂಬ ಭಾವವು ; ಅಂತಹ ಅವಸ್ಥೆಯ ಅಭಾವವನ್ನೇ ಮಹರ್ಷಿಯು “ **ಯನ್ಮುಹೂರ್ತಂ ಕ್ಷಣಂವಾಪಿ ವಾಸುದೇವೋ ನಚಿನ್ತ್ಯತೇ । ಸಾಹಾನಿಸ್ತನ್ಮಹಚ್ಛಿದ್ರಂ ಸಾಭ್ರಾನ್ತಿಸ್ಸಾಚವಿಕ್ರಿಯಾ** ” ಎಂದು ನಿಂದಿಸಿರುತ್ತಾರೆ; ಮುಂದೆ “ **ಏಕಸ್ಮಿನ್ನಪ್ಯತಿಕ್ರಾನ್ತೇ ಮುಹೂರ್ತೇಧ್ಯಾನವರ್ಜಿತೇ । ದಸ್ಯುಭಿರ್ಮುಷಿತೇನೇವಯುಕ್ತಮಾಕ್ರಂದಿತುಂ ಭೃಶಮ್** ” ಎಂದಿರುತ್ತದೆ. ಸ್ವಾಮಿಯ ಧ್ಯಾನವಿಲ್ಲದೆ ಒಂದು ಮುಹೂರ್ತವು ಕಳೆದುಹೋದರೂ, ಕಳ್ಳರು ಬಂದು ಮೇಲೆ ಬಿದ್ದವನಂತೆ ಘಟ್ಟಿಯಾಗಿ ಅಳುವದು ಉಚಿತವು ಎಂಬ ಭಾವವು.

**ಮೂಲಕ್ಕೆ ಅರ್ಥವು**-ಜ್ಞಾನಿಯು ಹಿಂದಿನ ಮೂರು ಅಧಿಕಾರಿಗಳಿಗಿಂತಲೂ ವಿಲಕ್ಷಣನು ಎಂದು ನಾಲ್ಕು ವಿಶೇಷಣಗಳಿಂದ ತಿಳಿಸಿದರು. ಇನ್ನೂ ಹೇಗೆ ವಿಲಕ್ಷಣನು ಎಂಬುದನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. ಹೀಗೆ ಹೇಳುವಾಗ ಭಗವದ್ಗೀತೆಯು ಪರಮ ಹಿತೋಪದೇಶವಾದ “ **ಮನ್ಮನಾಭವಮದ್ಭಕ್ತೋ ಮದ್ಯಾಜೀಮಾಂ ನಮಸ್ಕುರು** ” ಎಂಬಲ್ಲಿ ಕೋರಿಬರುವ ಲಕ್ಷಣವುಳ್ಳವರು ಜ್ಞಾನಿಗಳೆಂದು ತಿಳಿಸುತ್ತಾರೆ— ಈ ಜ್ಞಾನಿಯಾದರೋ ಇನ್ನೂ ಎಂತವನೆಂದರೆ **ಭಗವದ್ಧ್ಯಾನ.........ಕೀರ್ತನೈಃ, ಭಗವದ್ಧ್ಯಾನ**-ಭಗವಂತನ ಅನುಚಿನ್ತನವು, **ಯೋಗ**-ಅದರ ಮೂಲಕವಾದ ಅವಲೋಕನವು, ಈ ಯೋಗವು ಎರಡು ವಿಧವು ಬಾಹ್ಯವೆಂದೂ, ಆನ್ತರವೆಂದೂ ಬಾಹ್ಯಯೋಗವು, ಹೊರಗೆ ಆತನಿಗೆ ಮಾಡುವ ಕೈಂಕರ್ಯವು, ಆನ್ತರವು ಉಪಾಸನೆಯು, **ಉಕ್ತಿಃ** ಕೈಂಕರ್ಯಮಾಡುವ ಅಧಿಕಾರಿಗಳಿಂದ ಪ್ರತಿಪಾದನವು, **ವಂದನ**-ಮನೋವಾಕ್ಕಾಯಗಳ ಮೂರರಿಂದಲೂ ಪ್ರಣಾಮವು, **ಸ್ತುತಿ**-ಆತನ ಗುಣಾನುಕಥನವು, **ಕೀರ್ತನೈಃ**-ಆತನ ಗುಣವಿಭವ ಚೇಷ್ಟಿತಾದಿಗಳನ್ನು ಕೊಂಡಾಡೋಣವು, ಇವುಗಳಿಂದ **ಲಬ್ಧಾತ್ಮಾ**-ಸತ್ತೆಯನ್ನು ಹೊಂದಿದ ಆತ್ಮಸ್ವರೂಪವುಳ್ಳವನು ; ಇವುಗಳಿಲ್ಲವಾದರೆ ತನಗೆ ವಸ್ತುತ್ವವೇ ಇಲ್ಲವೆಂಬ ಭಾವವು ; ಕರಣ ಕಳೇಬರಜ್ಞಾನ ವಿವೇಕಾದಿಗಳು ಇದ್ದೂ, ಇವು ಇಲ್ಲವೆಂದರೆ, ವ್ಯರ್ಥವೆಂಬುದು ತಾತ್ಪರ್ಯವು ; ಅಥವಾ ಈ ಧ್ಯಾನ, ಯೋಗ ಉಕ್ತಿ ಮೊದಲಾದವುಗಳನ್ನು “ **ಯತ್ಕರೋಷಿಯದಶ್ನಾಸಿ ತತ್ಕುರುಷ್ವಮದರ್ಪಣಮ್** ” ಎಂಬಲ್ಲಿ ಹೇಳಿರುವ ಹಾಗೆ, ಭಗವಂತನಲ್ಲಿ ಸಮರ್ಪಿಸೋಣ ದರಿಂದ ಉಂಟಾದ ಭಗವದನುಗ್ರಹಮೂಲಕವಾಗಿ ಸತ್ತೆಯನ್ನು ಹೊಂದಿದವನು ಅಥವಾ ಇವೆಲ್ಲಾ ಇಲ್ಲದೆ ಹೋದರೆ ಪ್ರಶಿಥಿಲಕರಣ ಕಳೇಬರಾದಿಗಳನ್ನು ಹೊಂದಿದವನಾಗುವನೆಂಬ ಭಾವವಾದರೂ ಆಗಬಹುದು. ಜ್ಞಾನಿಯು ಇನ್ನೂ ಎಂತವನೆಂದರೆ **ತದ್ಗತಪ್ರಾಣಮನೋ ಬುದ್ಧೀನ್ದ್ರಿಯಕ್ರಿಯಃ**, “ **ಮಯ್ಯರ್ಪಿತಮನೋಬುದ್ಧಿಃ** ” ( ಗೀ ೮-೭ ) ಎಂದೂ, “ **ಅನನ್ಯಚೇತಾಸ್ಸತತಂ** ” (ಗೀ. ೮-೧೪) ಎಂದೂ ಹೇಳಿರುವ ಹಾಗೆ **ತದ್ಗತ**-ಆ ಪರಮ ಪುರುಷನನ್ನು ಹೊಂದಿದ ಪ್ರಾಣವಾಯು, **ಮನಸ್ಸು** ಎಂದರೆ ಸಙ್ಕಲ್ಪ ವಿಕಲ್ಪವೃತ್ತಿಯನ್ನು ಹೊಂದಿರುವಂತಹ **ಅಂತಃಕರಣವು, ಬುದ್ಧಿ**-ಹೀಗೆಯೇ ನಡೆಯತಕ್ಕದ್ದೆಂಬ ನಿಷ್ಕರ್ಷೆಯು,

**ಮೂ. ನಿಜಕರ್ಮಾದಿ ಭಕ್ತ್ಯನ್ತಂ ಕುರ್ಯಾತ್ಪ್ರೀತ್ಯೈವ ಕಾರಿತಃ |**
**ಉಪಾಯತಾಂ ಪರಿತ್ಯಜ್ಯನ್ಯಸ್ಯೇದ್ದೇವೇತು ತಾಮಭೀಃ ||೩೦||**

**ಇನ್ದ್ರಿಯ**-ಹಿಂದೆ ಅಂತರಿಂದ್ರಿಯವಾದ ಮನಸ್ಸು ಪೃಥಕ್ಕಾಗಿ ಹೇಳಲ್ಪಟ್ಟದುದರಿಂದ **ಗೋಬಲೀವರ್ದನ್ಯಾಯದ** ಪ್ರಕಾರ ಹೊರಗಿನ ಇಂದ್ರಿಯಗಳೂ ಇವುಗಳ **ಕ್ರಿಯಾಃ**-ವ್ಯಾಪಾರವುಳ್ಳವನು ಎಂದರೆ ಜ್ಞಾನಿಯು ಭಗವಂತನಿಗೆ ಅಧೀನವಾದ ಇವುಗಳ ವ್ಯಾಪಾರವುಳ್ಳವನೆಂಬ ಭಾವವು; ಇಂದ್ರಿಯಗಳೆಲ್ಲಾ ಅವನನ್ನೇ ಹೊಂದಿರಬೇಕು ಎಂದು ಹೇಳಿರುವದರ ಅಭಿಪ್ರಾಯವೇನೆಂದರೆ ಬಾಹ್ಯವಿಷಯೋಪಭೋಗಗಳಲ್ಲಿ ಪ್ರವರ್ತಿಸದೆ, ಭಗವಂತನ ಕೈಂಕರ್ಯರೂಪಪ್ರವೃತ್ತಿಯಲ್ಲೇ ಪ್ರವರ್ತಿಸತಕ್ಕದ್ದಾಗಿರಬೇಕು ಹೇಗೆಂದರೆ—“**ವಾಣೀಗುಣಾನುಕಥನೇ, ಶ್ರವಣಂ ಕಥಾಯಾಂ | ಹಸ್ತೌಚಕರ್ಮಸು, ಮನಸ್ತವಪಾದಯೋರ್ನಃ | ಸ್ಮೃತ್ಯಾಂ, ಶಿರಸ್ತವ ನಿವಾಸಜಗತ್ಪ್ರಣಾಮೇ | ದೃಷ್ಟಿಸ್ಸತಾಂ ದರ್ಶನೇಸ್ತು ಭವತ್ತನೂನಾಂ** ”(ಭಾಗ ೧೦-೧೧) ಎಂದು ಹೇಳಿರುವ ಹಾಗೆ ವಾಕ್ಕು ಅವನ ಕಲ್ಯಾಣಗುಣಗಳ ಕಥನದಲ್ಲೂ, ಕಿವಿಯು ಆತನ ದಿವ್ಯಚೇಷ್ಟಿತಗಳನ್ನು ಕೇಳುವದರಲ್ಲೂ, ಕೈಗಳೂ ಕಾಲುಗಳೂ ಸಹ ಆತನಿಗೆ ಕೈಂಕರ್ಯಗಳನ್ನು ಮಾಡುವದರಲ್ಲೂ, ಮನಸ್ಸು ಅವನ ಪಾದಕಮಲವನ್ನು ಸ್ಮರಿಸುವದರಲ್ಲೂ, ಶಿರಸ್ಸು ಅವನಿಗೆ ಪ್ರಣಾಮವನ್ನು ಎಸಗುವದರಲ್ಲೂ, ಕಣ್ಣು ಆತನ ಅವತಾರರೂಪ ದಿವ್ಯಮಙ್ಗಳ ವಿಗ್ರಹಗಳನ್ನು ಮತ್ತು ತದೀಯರಾದ ಭಾಗವತೋತ್ತಮರನ್ನವಲೋಕಿಸುವದರಲ್ಲೂ ಪ್ರವೃತ್ತಿ ಇರಬೇಕೆಂದು ಹೇಳಲ್ಪಟ್ಟಿರುತ್ತದೆ. ಹೀಗೆಯೇ ಮುಕುಂದ ಮಾಲೆಯಲ್ಲೂ ಇಂದ್ರಿಯಗಳ ಪ್ರವೃತ್ತಿಯು ಬೋಧಿಸಲ್ಪಟ್ಟಿರುತ್ತದೆ—“ **ಜಿಹ್ವೇಕೀರ್ತಯ ಕೇಶವಂ ಮುರರಿಪುಂ, ಚೇತೋಭಜಶ್ರೀಧರಂ, ಪಾಣಿದ್ವಂದ್ವಸಮರ್ಚಯಾಚ್ಯುತಕಥಾಃ ಶ್ರೋತ್ರದ್ವಯತ್ವಂ ಶೃಣು | ಕೃಷ್ಣಂ ಲೋಕಯ ಲೋಚನದ್ವಯ, ಹರೇರ್ಗಚ್ಛಾಂಘ್ರಿಯುಗ್ಮಾಲಯಂ | ಜಿಘ್ರಘ್ರಾಣಮುಕುಂದಪಾದತುಲಸೀಂ, ಮೂರ್ಧನ್ನಮಾಧೋಕ್ಷಜಮ್** ||೧೬|| ಅರ್ಥವು ಸ್ಪಷ್ಟವು ಮನಸ್ಸು ಅವನನ್ನು ಹೊಂದಿರಬೇಕು ಎಂಬುದರಿಂದ **ಮಯ್ಯೇವಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ** (ಗೀ. ೧೨-೧೦) ಎಂಬ ಪಾರ್ಥಸಾರಥಿಯ ಉಪದೇಶವು ಅನುಮೋದಿಸಲ್ಪಟ್ಟಿತು. ||೩೦||

**ಮೂಲಕ್ಕೆ ಅರ್ಥವು**-ಹಿಂದೆ ಹೇಳಿದ ಲಕ್ಷಣಗಳುಳ್ಳಜ್ಞಾನಿಯು ಸದಾ ಭಗವಂತನನ್ನೇ ಉಪಾಸಿಸುವನಾಗಿ, ಉಪಾಸನೆಯ ವ್ಯತಿರಿಕ್ತಕಾಲದಲ್ಲಿ, ಶ್ರವಣಮನನ ಕೀರ್ತನ ನಮಸ್ಕಾರಾದಿಗಳಲ್ಲೇ ಸತತ ನಿರತನಾಗಿರುವಾಗ ಅಂತವನಿಗೆ ಅಧಿಕಾರಾನುಗುಣವಾಗಿ ವಿಧಿಸಲ್ಪಟ್ಟ ವರ್ಣಾಶ್ರಮ ಧರ್ಮಗಳಾದ ನಿತ್ಯನೈಮಿತ್ತಿಕಗಳ ಆವಶ್ಯಕತೆ ಏನು? ಅವುಗಳ ಆವಶ್ಯಕತೆ ಬೇಕಿಲ್ಲವೆಂದಲ್ಲವೇ ಕೆಲವು ಸಿದ್ಧಾನ್ತಿಗಳೂಕೂಡ ತೀರ್ಮಾನಿಸಿರುವರು? **ಸರ್ವಧರ್ಮಾನ್ ಪರಿತ್ಯಜ್ಯ** ಎಂದಲ್ಲವೇ ಚರಮಶ್ಲೋಕದಲ್ಲಿ ಹೇಳಿರುವದು? ಇತ್ಯಾದಿ ಆಕ್ಷೇಪಣಗಳನ್ನೆಲ್ಲಾ ನಿರಸನ ಮಾಡಿ ಚರಮಶ್ಲೋಕಾಭಿಪ್ರಾಯವನ್ನು ಇದರಿಂದ ವ್ಯಕ್ತಪಡಿಸುತ್ತಾರೆ. ಜ್ಞಾನಿಯಾದ ಭಕ್ತಿಯೋಗನಿಷ್ಠನು ಹಿಂದೆ ಹೇಳಿದ ಲಕ್ಷಣಗಳುಳ್ಳವನಲ್ಲದೆ ನಿತ್ಯನೈಮಿತ್ತಿಕಾದಿ ವಿಹಿತ ಕರ್ಮಗಳನ್ನು ಯಥಾಧಿಕಾರವಾಗಿಯೂ ಯಥಾಕ್ರಮವಾಗಿಯೂ ಶಾಸ್ತ್ರನಿಯಮನಾನುಸಾರ ಮಾಡಿಯೇ ತೀರಬೇಕೆಂದು ಹೇಳುತ್ತಾರೆ. **ನಿಜಕರ್ಮಾದಿಭಕ್ತ್ಯಂತಂ**-ತನ್ನ ಸ್ವಕೀಯವರ್ಣಾಶ್ರಮಕ್ಕನುಗುಣವಾಗಿ ವಿಹಿತ ನಿತ್ಯನೈಮಿತ್ತಿಕ ಕರ್ಮಗಳು ಮೊದಲುಗೊಂಡು ಭಕ್ತಿಯೋಗ ರೂಪವಾದ ಉಪಾಸನದ್ವಾರ ಪರಮಾತ್ಮ ಸಾಕ್ಷಾತ್ಕಾರವು ಲಭಿಸಿ ದೇಹಾವಸಾನವಾಗುವ

ವರೆಗೂ ಇಲ್ಲಿ ಕೈಂಕರ್ಯಗಳಲ್ಲದೆ, ಆತನ ಮತ್ತು ಅವನ ಭಕ್ತರಾದ ಭಾಗವತೋತ್ತಮರ ಅನುಜ್ಞಾ ಕೈಂಕರ್ಯಗಳೂ ಮತ್ತು ಅದಕ್ಕಾಗಿ ಧನಾರ್ಜನೆ, ಕುಟುಂಬಭರಣ ಲೋಕೋಪಕೃತಿ ರೂಪ ಸಮಸ್ತ ವಿಹಿತಗಳಾದ ಐಚ್ಛಿಕಕರ್ಮಗಳೂ ಸಹ ನಿಜಕರ್ಮಶಬ್ದದಿಂದ ಉಪಲಕ್ಷಣರೂಪದಲ್ಲಿ ಗ್ರಹಿಸಬಹುದು. ಇವೆಲ್ಲವನ್ನೂ **ಪ್ರೀತ್ಯೈವ**-ಕೇವಲ ಪ್ರೀತಿಯಿಂದಲೇ ಪ್ರೇರಿತನಾಗಿ, **ಕಾರಿತಃ**-ಭಗವಂತನಿಂದಲೇ ಮಾಡಿಸಲ್ಪಟ್ಟವನಾಗಿ ಎಂದರೆ ಅಂತಹ ಅನುಸಂಧಾನದಿಂದಲೇ, **ಕುರ್ಯಾತ್** ಮಾಡತಕ್ಕದ್ದು ; ಹೇಗೆ ಮಾಡತಕ್ಕದ್ದೆಂದರೆ ಹೇಳುತ್ತಾರೆ— **ಉಪಾಯತಾಂ ಪರಿತ್ಯಜ್ಯ**-ಈಗ ತಾನು ಹೀಗೆ ಮಾಡುವದೆಲ್ಲಾ ನಿರತಿಶಯ ಫಲಪ್ರಾಪ್ತಿಗೆ ಒಂದು ಉಪಾಯವು, ಎಂಬ ಸಾಧನ ಬುದ್ಧಿಯನ್ನು ಸಂಪೂರ್ಣವಾಗಿ ತ್ಯಜಿಸಿ, **ತಾಂ**-ಆ ಸಾಧನಬುದ್ಧಿಯನ್ನು, **ದೇವೇತು**- ಸೃಷ್ಟಿಕರ್ತನಾಗಿ, ಲೀಲಾಪರನಾಗಿ, ದೇದೀಪ್ಯಮಾನನಾದ ಸರ್ವೇಶ್ವರನಲ್ಲೇ, **ಅಭೀಃ**-ಯಾವದೊಂದೂ ಭಯವಿಲ್ಲದವನಾಗಿ, **ನ್ಯಸೇತ್**-ಸರ್ವಭರವನ್ನೂ ಅವನಲ್ಲಿಟ್ಟು ಶರಣಾಗತಿಯನ್ನು ಮಾಡತಕ್ಕದ್ದು. **ತು** ಶಬ್ದವು ಭಗವಂತನಲ್ಲಿ ಸಮರ್ಪಿಸಿದರೇನೇ ಭಯವಿಲ್ಲದವನಾಗುವನು ; ಅನ್ಯದೇವತೆಗಳಲ್ಲಿ ಅವುಗಳನ್ನಿಟ್ಟರೆ ಭಯ ತಪ್ಪದೆಂಬುದು ಸೂಚಿಸುತ್ತದೆ. ಇಲ್ಲಿ ನಿತ್ಯನೈಮಿತ್ತಿಕಗಳು ಭಕ್ತಿಯೋಗಕ್ಕೆ ಅಂಗವೆಂದೂ, ಭಕ್ತಿಯೋಗವನ್ನು **"ಯಾವಜ್ಜೀವಂ ತು ತತ್ಕುರ್ಯಾತ್ ಯೇನ ಪ್ರೇತ್ಯ ಸುಖಂ ವಸೇತ್ "** (ವಿದುರನೀತಿ) ಎಂದು ಹೇಳಿರುವ ಹಾಗೆ, ಯಾವಜ್ಜೀವವೂ ಅನುಷ್ಠಿಸತಕ್ಕದ್ದಾದುದರಿಂದ ಶ್ರುತಿಯಲ್ಲೂ **"ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ"** ಎಂದು ಹೇಳಿರುವ ಹಾಗೆ ಅನುಷ್ಠಿಸಲೇಬೇಕೆಂದು ತಿಳಿಸುವದಕ್ಕಾಗಿ **" ನಿಜಕರ್ಮಾದಿ ಭಕ್ತ್ಯಂತಂ "** ಎಂಬ ಪ್ರಯೋಗವು. ಶ್ರೀ ಯತಿವರ್ಯರೂ ಗೀ. ೧೮-೫೦ ನೆಯ ಶ್ಲೋಕ ವ್ಯಾಖ್ಯಾನದಲ್ಲಿ **ಸಿದ್ಧಿಂ ಪ್ರಾಪ್ತಃ** ಎಂಬುದಕ್ಕೆ ವ್ಯಾಖ್ಯಾನವಾಗಿ **"ಆಪ್ರಯಾಣಾದಹರಹರನುಷ್ಠೀಯಮಾನ ಕರ್ಮಯೋಗನಿಷ್ಪಾದ್ಯಧ್ಯಾನಸಿದ್ಧಿಂ ಪ್ರಾಪ್ತಃ"** ಎಂದು ವ್ಯಾಖ್ಯಾನ ಮಾಡಿರುತ್ತಾರೆ; ಅವುಗಳು **" ನ ತ್ಯಾಜ್ಯಂ ಕಾರ್ಯಮೇವತತ್ "** (೧೮. ಗೀ ) ಎಂದೂ, ಶ್ರೀ ಕೃಷ್ಣ ಭಗವಾನರವರೂ ಉಪದೇಶಿಸಿರುತ್ತಾರೆ. ಹೀಗೆ ವರ್ಣಾಶ್ರಮ ಧರ್ಮಗಳನ್ನೂ ಯಾವಜ್ಜೀವವೂ ಫಲಕರ್ತೃತ್ವ ಮಮತಾ ತ್ಯಾಗಪೂರ್ವಕವಾಗಿ ಅನುಷ್ಠಿಸತಕ್ಕದ್ದೂ ಅಲ್ಲದೆ, ಇತರ ಕೆಲವು ಕರ್ಮಗಳು ಪುತ್ರ ದಾರ ಸೇವಕಾದಿಗಳ ರಕ್ಷಣಾರ್ಥವಾಗಿ ಇತಿಕರ್ತವ್ಯತಾರೂಪ ಕರ್ಮಗಳೂ ಉಂಟು. ಇವುಗಳೂ ಕೂಡ **ನಿಜಕರ್ಮ** ಎಂಬಲ್ಲೇ ಅಂತರ್ಗತವು. ಇದು ಗೀತಾ ೧೮-೫೬ ನೆಯ ಶ್ಲೋಕವಾದ **ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಹೀಗಿದ್ದರೂ ಅದ್ವೈತಸಿದ್ಧಾಂತಿಗಳೂ, ಹಾಗೆಯೇ ನಮ್ಮಲ್ಲೇ ಕೆಲವರೂ ಸಹ, ನಿತ್ಯನೈಮಿತ್ತಿಕ ಕರ್ಮಗಳ ಆವಶ್ಯಕತೆಯು ಭಕ್ತಿಯೋಗನಿಷ್ಠನಿಗಾಗಲಿ, ಸ್ವತಂತ್ರ ಪ್ರಪತ್ತಿನಿಷ್ಠನಿಗಾಗಲಿ ಇಲ್ಲವೆಂದು ಅಭಿಪ್ರಾಯಪಡುವರು. ಈ ಅಭಿಪ್ರಾಯಗಳನ್ನೆಲ್ಲಾ ಸಂಪೂರ್ಣವಾಗಿ ಶ್ರೀ ನಿಗಮಾಂತ ದೇಶಿಕರವರು ಶ್ರೀಮದ್ರಹಸ್ಯತ್ರಯಸಾರದ ಶಾಸ್ತ್ರೀಯ ನಿಯಮನಾಧಿಕಾರದಲ್ಲಿ ಖಂಡಿಸಿರುತ್ತಾರೆ. ಶಾಸ್ತ್ರೀಯ ನಿಯಮನವನ್ನು ಪರಿತ್ಯಾಗ ಮಾಡೋಣವು ಸರ್ವಾತ್ಮನಾ ಕೂಡದೆಂಬುದು **" ಶ್ರುತಿ ಸ್ಮೃತಿ ರ್ಮಮೈವಾಜ್ಞಾ ಯಸ್ತಾಮುಲ್ಲಂಘ್ಯ ವರ್ತತೇ । ಆಜ್ಞಾಛೇದೀ ಮಮ ದ್ರೋಹೀ ಮದ್ಭಕ್ತೋಽಪಿ ನ ವೈಷ್ಣವಃ "** ಎಂಬಲ್ಲಿ ವ್ಯಕ್ತವು. **ನಿಜಕರ್ಮಾದಿ** ಎಂಬಲ್ಲಿನ **ನಿಜ** ಶಬ್ದದಿಂದ ವರ್ಣಾಶ್ರಮ ಧರ್ಮಗಳು ಶಾಸ್ತ್ರೀಯ ನಿಯಮನಾನುಸಾರ ನಡೆಸಲ್ಪಡಬೇಕೆಂಬುದು ವ್ಯಕ್ತಪಡುತ್ತದೆ. **"ಅಹರಹಸ್ಸಂಧ್ಯಾಮುಪಾಸೀತ"**, **"ಸಂಧ್ಯಾಹೀನೋಽಶುಚಿರ್ನಿತ್ಯಂ ಅನರ್ಹಸ್ಸರ್ವಕರ್ಮಸು"** **" ಮನೀಷೀ ವೈದಿಕಾಚಾರಂ ಮನಸಾಪಿ ನ ಲಂಘಯೇತ್ "** **"ಏವಂ**

**ವಿಲಂಘಯೇನ್ಮರ್ತ್ಯೋ ಮರ್ಯಾದಾಂ ವೇದನಿರ್ಮಿತಾಂ। ಪ್ರಿಯೋಪಿನಪ್ರಿಯೋಽಸೌಮೇ ಮದಾಜ್ಞಾವ್ಯತಿವರ್ತನಾತ್** ” ಇತ್ಯಾದಿ ಪ್ರಮಾಣಗಳು ಇಲ್ಲಿ ಅನುಸಂಧೇಯಗಳು. **ನಿಜಕರ್ಮಾದಿಭಕ್ತ್ಯಂತಂ** ಎಂಬ ಪ್ರಯೋಗವು ಭಕ್ತಿಯೋಗವೇ ಸಾಕ್ಷಾದುಪಾಯವೆಂದು, ಕರ್ಮಯೋಗವು ಅದಕ್ಕೆ ಅಂಗವೆಂದೂ ಹೇಳಿದಂತಾಯಿತು. **ಪ್ರೀತ್ಯೈವ ಕುರ್ಯಾತ್** ಎಂದಿರುವದರಿಂದ ಕರ್ಮಾನುಷ್ಠಾನಕ್ಕೆ ತನ್ನ ಪ್ರೀತ್ಯನುಸಾರ ಮಾಡಬಹುದು, ಶಾಸ್ತ್ರೀಯನಿಯಮವು ಬೇಕಿಲ್ಲವೆಂಬ ಅಭಿಪ್ರಾಯವು ಶಾಸ್ತ್ರವಿರುದ್ಧವಾದುದು. ಇಲ್ಲಿಯೇ “**ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯವ್ಯವಸ್ಥಿತೌ**” (ಗೀ. ೧೬-೨೪) ಎಂಬಲ್ಲೀ ಅಂತಹ ಅಭಿಪ್ರಾಯವು ಖಂಡಿಸಲ್ಪಟ್ಟಿರುತ್ತದೆ. **ನಿಜಕರ್ಮಾದಿಭಕ್ತ್ಯಂತಂ** ಎಂಬುದರಿಂದ ಕರ್ಮಯೋಗ ಮೊದಲುಗೊಂಡು ಭಕ್ತಿಯೋಗದವರೆಗೂ ಮಾಡುವ ಅನುಷ್ಠಾನವೆಲ್ಲಾ ಸೇರಿ ಒಂದೇ ಉಪಾಯವು ಎಂದು ಹೇಳಲ್ಪಟ್ಟಿತು. ಕರ್ಮಯೋಗವು ಭಕ್ತಿಯೋಗದ ಉತ್ಪಾದಕವು ಎಂದು ಶ್ರೀಯಾಮುನೇಯರು ಅಪ್ಪಣೆಕೊಡಿಸಿದ **ಸ್ವಧರ್ಮಜ್ಞಾನವೈರಾಗ್ಯ ಸಾಧ್ಯಭಕ್ತ್ಯೇಕಗೋಚರಃ** ಎಂಬುದರ ಅರ್ಥವನ್ನೇ ಇಲ್ಲಿಯೂ ಅನುವಾದಮಾಡಿ ಹೇಳಿರುತ್ತಾರೆ. ಇದರಿಂದ ಕರ್ಮಯೋಗವೂ ಭಕ್ತಿಯೋಗದಹಾಗೆ ಸಾಕ್ಷಾದುಪಾಯವೆಂಬ ಸಿದ್ಧಾಂತವು ಇದರಿಂದ ನಿರಸನ ಮಾಡಲ್ಪಟ್ಟಿತು. **ಉಪಾಯತಾಂ ಪರಿತ್ಯಜ್ಯ** ಎಂಬುದರಿಂದ ನಾನು ಉಪಾಯವನ್ನನುಷ್ಠಿಸುತ್ತೇನೆಂಬ ಭಾವವು ಕೂಡದೆಂಬುದು ಇಲ್ಲಿ ತೋರಿಬರುತ್ತದೆ. **ಪ್ರೀತ್ಯೈವ** ಎಂಬ **ಅವಧಾರಣವು** ಶಾಸ್ತ್ರೀಯ ನಿಯಮವನ್ನು ವ್ಯವಚ್ಛೇದಿಸಿ ಬೋಧಿಸುವದಿಲ್ಲವು. ಈ ನಿತ್ಯನೈಮಿತ್ತಿಕಾದಿಗಳು ಫಲಕ್ಕೆ ಸಾಧನವೆಂಬ ಬುದ್ಧಿಯನ್ನು ನಿಷೇಧಿಸಿ ಮಾಡಬೇಕೆಂದು ಹೀಗೆ ಉಪದೇಶಿಸುತ್ತಾರೆ — ಆದುದರಿಂದಲೇ **ಉಪಾಯತಾಂ ಪರಿತ್ಯಜ್ಯ** ಎಂಬುದರ ವಿವರಣವು. ಶಾಸ್ತ್ರೀಯ ನಿಯಮಾನುಸಾರವೇ ಪ್ರವೃತ್ತಿ ಇರಬೇಕೆಂಬುದು, **ನಿಜಕರ್ಮಾದಿ** ಎಂಬಲ್ಲಿ ನಿಜ ಶಬ್ದದಿಂದಲೇ ವ್ಯಕ್ತವು. ಶ್ರೀ ನಿಗಮಾಂತ ದೇಶಿಕರವರು ಶಾಸ್ತ್ರೀಯ ನಿಯಮನವನ್ನು ಹೇಗೆ ಹೇಳಿರುತ್ತಾರೇನೆಂದರೆ— “**ಪ್ರೀತ್ಯೈವ ಎಂಬ** ಅವಧಾರಣತ್ತಾಲೇ ಸಾಧನತ್ವಬುದ್ಧಿಯೈ ವ್ಯವಚ್ಛೇದಿತ್ತಾರೆನ್ನುಮಿಡಮ್, ಉಪಾಯತಾಂ ಪರಿತ್ಯಜ್ಯ, ಎನ್ರು ವಿವರಿಕ್ಕಿಯೊಲೇ **ಸುವ್ಯಕ್ತಮ್**” ಮಹೋದಾರರಾದ ಭಗವಂತನಲ್ಲಿ ಸರ್ವಭರವು ಇಡಲ್ಪಟ್ಟಿದೆ. ಆಗ ಫಲವಿಷಯದಲ್ಲಿ ಸಂಶಯವೇಕೆಯೆಂದು? ಆದುದರಿಂದ, **ನ್ಯಸೇದ್ದೇವೇತು ತಾನುಭೌ** ಎಂಬ ಪ್ರಯೋಗವು. ಈತನ ಮೋಕ್ಷಪ್ರಾಪ್ತಿಗೆ ಈ ಅಚೇತನವಾದ ಉಪಾಯದಿಂದ ಮಾತ್ರವೇ ಎಂದಿಗೂ ಇಲ್ಲವು. ಪ್ರಪದನವು ಒಂದು ಕ್ಷಣಕಾಲ ಅನುಷ್ಠೇಯವಾದುದು, ಉಪಾಸನವು ದೇಹಾವಸಾನದವರೆಗೂ ಅನುಷ್ಠೇಯವು. ಅಂತೂ ಎರಡು ಸಂದರ್ಭದಲ್ಲೂ ಮೋಕ್ಷಪ್ರಾಪ್ತಿಯು ಕಾಲಾಂತರದಲ್ಲಿ ಲಭಿಸತಕ್ಕದ್ದಾಯಿತು. ಈ ಅನುಷ್ಠಾನವು ಅಪೂರ್ವ ಒಂದನ್ನುಂಟು ಮಾಡಿ ಆ ಅಪೂರ್ವವು ಫಲವನ್ನು ಕೊಡುವದೆಂಬುದಾಗಿ ಅಪಸಿದ್ಧಾಂತವೆಂದು ಹೇಳಿದಂತಾಯಿತು. ಫಲಪ್ರದಾನನು ಶ್ರಿಯಃಪತಿಯೇ ಆದುದರಿಂದ ಆತನ ಪ್ರೀತಿ ಸಂಪಾದಕವಾದುದು **ಈ ನಿಜಕರ್ಮಾದಿ ಭಕ್ತ್ಯಂತವಾದ ಅನುಷ್ಠಾನವು.** ಈ ಕಾರಣಗಳಿಂದ **ಉಪಾಯತಾಂ ಪರಿತ್ಯಜ್ಯ** ಎಂಬ ಹಿತೋಪದೇಶವು ನ್ಯಾಯಾನುಗುಣವೇ ಮತ್ತು ಶಾಸ್ತ್ರಸಮ್ಮತವಾದುದೇ ಉಪಾಯತಾಬುದ್ಧಿಯು ಎಲ್ಲಿ ಇರತಕ್ಕದ್ದು ಎಂದರೆ “**ಮಾಮೇಕಂ ಶರಣಂ ವ್ರಜ**” ಎಂದು ಹೇಳಿದ ಲೀಲಾಸಾರಥಿಯಲ್ಲೇ ಇರತಕ್ಕದ್ದು ಎಂದು ಇಲ್ಲಿ **ದೇವೇ** ಎಂಬ ಪ್ರಯೋಗವು ಅನಾಶ್ರಿತರಿಗೆ ಬಂಧವನ್ನೂ ಆಶ್ರಿತರಿಗೆ ಮೋಕ್ಷವನ್ನೂ ಏರ್ಪಡಿಸಿದ ಮಹಿಮೆಯುಳ್ಳ, ಲೀಲಾಪರನಾಗಿ ಈ ಲೀಲಾವಿಭೂತಿಯ ಚೇತನರ ವಿಷಯದಲ್ಲಿ ವಿಶೇಷಾನುರಾಗವುಳ್ಳ ಕ್ರೀಡಾಪರ

**ಮೂ. ಏಕಾಂತಾತ್ಯಂತದಾಸ್ಯೈಕರತಿಸ್ತತ್ಪದಮಾಪ್ನುಯಾತ್ ।**
**ತತ್ಪ್ರಧಾನಮಿದಂ ಶಾಸ್ತ್ರಮಿತಿ ಗೀತಾರ್ಥಸಂಗ್ರಹಃ ॥೩೨॥**

ನಾದ ಭಗವಂತನೇ ಎಂದು ತಿಳಿಸುವದಕ್ಕೆ **ದೇವೇ** ಎಂಬ ಪ್ರಯೋಗವು. **ದೇವೇನ್ಯಸ್ಯ** ಎಂಬ ಪ್ರಯೋಗವು **"ಮಯಿಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ ।"** ಎಂಬುದನ್ನು ಸ್ಮರಿಸುತ್ತದೆ. ಆತನ ಆಜ್ಞೆಗಳನ್ನು ನಡೆಸುವದೂ ಒಂದು ಕೈಂಕರ್ಯವೆಂದು ಭಾವಿಸಿ, ಅದರಿಂದ ಆತನ ಪ್ರೀತಿ ಸಂಪಾದನವೇ ತನಗೆ ವಿಶೇಷ ಪ್ರಯೋಜನವೆಂದು ಭಾವಿಸುವನೆಂಬ ಭಾವವು. **"ಯಥಾಪ್ರಿಯಾತಿಥಿಂಪ್ರಾಪ್ತಂ ಭಗವಂತಂ ತಥಾರ್ಚಯೇತ್"** ಎಂದು ಹೇಳಲ್ಪಟ್ಟಿರುತ್ತದೆ. ಭಗವಂತನೇ ಸಿದ್ಧೋಪಾಯನೆಂಬುದು **"ಕೃಷ್ಣಂ ಧರ್ಮಂ ಸನಾತನಂ"** (ಭಾರತ ವನ ೭೧೧-೨೩) ಎಂಬಲ್ಲೂ, **"ನಾಯಮಾತ್ಮಾ"** (ಕಠ. ೧-೨-೨೩) ಅಥವಾ (ಮುಂ. ೩-೧-೩) ಇತ್ಯಾದ್ಯನೇಕ ಪ್ರಮಾಣಗಳಿಂದ ಸಿದ್ಧವು. ಗೀತೆಯಲ್ಲೂ **"ಮತ್ತಃ ಜ್ಞಾನ ಮಪೋಹನಂಚ"** ಎಂಬಲ್ಲೂ **"ಈಶ್ವರಸ್ಸರ್ವಭೂತಾನಾಂ"** ಎಂಬಲ್ಲೂ ಹಾಗೆಯೇ ಹೇಳಲ್ಪಟ್ಟಿರುತ್ತದೆ. ಯಾವಾಗ ಈ ವ್ಯಾಜರೂಪಾನುಷ್ಠಾನಗಳಿಂದ ಭಗವಂತನ ಪ್ರೀತಿಯು ಲಭಿಸಿತೋ, ಆಗ ಫಲವಿಷಯದಲ್ಲಿ ಏನೊಂದೂ ಸಂಶಯವಿಲ್ಲದುದರಿಂದ ತಾನು ಭಯವಿಲ್ಲದೆ ಇರಬಹುದೆಂದು ಇಲ್ಲಿ ಹೇಳಲ್ಪಟ್ಟಿತು. ಸರ್ವೇಶ್ವರನಾದರೋ **"ಅಪಾರ ಕಾರುಣ್ಯ ಸೌಶೀಲ್ಯ ವಾತ್ಸಲ್ಯೌದಾರ್ಯಾದಿ ಗುಣನಿಧಿಯು"** ಆತನು **"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ"** ಎಂದೂ, **"ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂಮಮ"** ಎಂದೂ, **"ಅಪಿಚೇತ್ಸು ದುರಾಚಾರೋ ಭಜತೇಮಾ ಮನನ್ಯಭಾಕ್ । ಸಾಧುರೇವ ಸಮನ್ತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ" "ಮಾಮೇಕಂ ಶರಣಂ ವ್ರಜ । ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ"** ಇತ್ಯಾದ್ಯನೇಕ ಸ್ವೋಕ್ತಿಗಳಿಂದ ಅಭಯವು ಸಿದ್ಧವಾಗಿರುವಾಗ ತನಗೆ ಸಮಾನವಾದ ಆನಂದಾದಿಗಳನ್ನುಂಟುಮಾಡುವ ಕೃಪಾನಿಧಿಯು ಅವಸರ ಪ್ರತೀಕ್ಷೆಯಲ್ಲಿರುವಾಗ, ಅನ್ಯದೇವತೆಗಳಾದ ಬ್ರಹ್ಮರುದ್ರೇಂದ್ರಾದಿಗಳನ್ನು ಆಶ್ರಯಿಸಿದರೆ ಭಯವು ತಪ್ಪದು ಎಂಬ ಭಾವವೂ ಇದರಿಂದ ಸೂಚಿತವು.

**ಮೂಲಕ್ಕೆ ಅರ್ಥವು**- ಹೀಗೆ ಸೂಕ್ಷ್ಮವಾಗಿ ದ್ಯೋತಿತವಾದ ಅನ್ಯದೇವತಾಭಜನ ನಿಷೇಧಾರ್ಥವನ್ನೇ ವ್ಯಕ್ತಪಡಿಸುವರಾಗಿ, ಇತರ ಸಿದ್ಧಾಂತಗಳಿಗಿಂತ ತಮ್ಮ ಸಿದ್ಧಾಂತಕ್ಕೆ ಶಾಸ್ತ್ರಸಮ್ಮತವಾದ ಸತ್ಸಂಪ್ರದಾಯದ ಬಲದಿಂದ ತಾವು ಈ ಗೀತಾರ್ಥಸಙ್ಗ್ರಹದಲ್ಲಿ ಹೇಳಿದುದೇ ತತ್ವವೆಂದು ಹೇಳುತ್ತಾರೆ **ಏಕಾನ್ತಾತ್ಯನ್ತದಾಸ್ಯೈಕರತಿಃ**- ಇಲ್ಲಿ ಅತ್ಯನ್ತ ಶಬ್ದವು ಮಧ್ಯೆ ಇರುವದರಿಂದ **ಅತ್ಯನ್ತಏಕಾನ್ತ, ಅತ್ಯನ್ತದಾಸ್ಯೈಕರತಿಃ** ಎಂದು ಸೇರಿಸಿ ಅರ್ಥಮಾಡಬಹುದು. ಇತರ ಮೂರು ಭಕ್ತರೂ ಏಕಾನ್ತಿಗಳೆಂದು ಹಿಂದೆ ೨೮ ನೆಯ ಶ್ಲೋಕದಲ್ಲಿ ಹೇಳಲ್ಪಟ್ಟಿತು, ಈ ಮೋಕ್ಷಹೊಂದುವ ಜ್ಞಾನಿಯಾದರೋ ಪರಮೈಕಾನ್ತಿಯಾದುದರಿಂದ, **ಅತ್ಯಂತ ಏಕಾನ್ತ**ವೆಂದರೆ ಇನ್ನು ಯಾವುದರ ಅಪೇಕ್ಷೆಯೂ ಇಲ್ಲದೆ ಅವಿಚ್ಛಿನ್ನ ಭಕ್ತಿ ಎನು, ಮತ್ತು ಅತ್ಯನ್ತದಾಸ್ಯೈಕರತಿ ತಾನು ಅತ್ಯಂತ ಪರತಂತ್ರನಾಗಿರುವನೆಂಬ ಭಾವದಿಂದ ತನ್ನ ಶೇಷಿಗೇನೇ ದಾಸನೆಂಬ ಶೇಷತ್ವಾನುಸಂಧಾನವೇನು ಇವುಗಳಲ್ಲೇ ರತಿಃ-ಆಸಕ್ತಿಯುಳ್ಳವನಿಗ, **ತತ್ಪದಮಾಪ್ನುಯಾತ್**-ದಿವ್ಯ ವೈಕುಂಠವನ್ನು ಹೊಂದುವನು, ತನ್ನ ಪ್ರಾಪ್ಯವನ್ನು ಹೊಂದುವನು

**ತತ್ಪ್ರಧಾನಂ** - ಹೀಗೆ ಜೀವಾತ್ಮನಾದ ತಾನು ಪರಮಾತ್ಮನಿಗೆ ದಾಸ್ಯೈಕರಸನು, ಆದುದರಿಂದ ಆತನಲ್ಲಿ ಶರಣಾಗತಿಯನ್ನನುಷ್ಠಿಸಿ, ತನ್ನ ಆತ್ಮವನ್ನು ಅವನಲ್ಲಿ ಸಮರ್ಪಿಸಿ, ಅವನೇ ಅವನ ದಾಸನ ವಿಷಯದಲ್ಲಿ ಸರ್ವಹಿತವನ್ನೂ ಮಾಡುವನು ಎಂದು ನಂಬಿ, ಆತನ ಪ್ರೀತಿಗೆ ಪಾತ್ರನಾದವನೇ "**ನಿತ್ಯೋನಿತ್ಯಾನಾಂ**" ಎಂಬ ಶ್ರುತಿಯಲ್ಲಿ ಹೇಳಿರುವ ಹಾಗೆ ನಮಗೆ **ವಿದಧಾತಿಕಾಮಾನ್**-ಸರ್ವಪುರುಷಾರ್ಥಗಳನ್ನೂ ಕೊಡುವನೆಂದೂ, ಪರಮೈಕಾನ್ತಿಗೆ ತನ್ನ ಸಾಯುಜ್ಯವನ್ನೇ ಕೊಡುವನೆಂಬ ಸಿದ್ಧಾನ್ತವನ್ನೇ ಪ್ರಧಾನವಾಗಿವುಳ್ಳದು, **ಇದಂ ಶಾಸ್ತ್ರಮ್**-ಈ ಲೀಲಾಸಾರಥಿಯ ವದನಾರವಿಂದದಿಂದ ಹೊರಟ ಈ ಭಗವಗ್ಗೀತಾಶಾಸ್ತ್ರವು, **ಇತಿ**-ಎಂಬದಾಗಿ, **ಗೀತಾರ್ಥಸಙ್ಗ್ರಹಃ**-ಭಗವದ್ಗೀತೆಯ ಸಾರಭೂತಾಂಶಗಳ ಸಙ್ಗ್ರಹವು ಪರಮೈಕಾನ್ತಿಯಾಗಿದ್ದು ತನಗೆ ಪರಮಾತ್ಮದಾಸ್ಯವೇ ಪರಮ ನಿಶ್ರೇಯಸ್ಸಿಗೆ ಸಾಧನಭೂತ ವೆಂದು ಈ ಗೀತಾಶಾಸ್ತ್ರವು ಉಪಪಾದಿಸುವದಾದರೆ, ನಶ್ವರವಾದ ಫಲಪ್ರಾಪ್ತಿ ವಿಷಯವಾದ ಆರ್ತನ ಮತ್ತು ಅರ್ಥಾರ್ಥಿಗಳ ಕಥನ, ಅವರುಗಳು ಮಾಡತಕ್ಕ ಕ್ರಮ ಇವುಗಳ ಉಪಪಾದ ನೆಯು ಈ ಗೀತಾಶಾಸ್ತ್ರದಲ್ಲಿ ಏತಕ್ಕೆ ಎಂದು ಆಕ್ಷೇಪಿಸಬಹುದು. ಹೀಗೆ "**ಅನ್ತವತ್ತುಫಲಂ ತೇಷಾಂ**" ಎಂದು ಉಪಪಾದಿಸಿರುವದು ಇವುಗಳಿಗಾಗಿಯೂ ಅನ್ಯದೇವತಾಭಜನವು ಬೇಕಿಲ್ಲ ವೆಂದು ತಿಳಿಸುವದಕ್ಕಾಗಿಯೂ, ಒಂದು ವೇಳೆ ಈ ನಿಷಿದ್ಧವಾದ ಅನ್ಯದೇವತಾ ಭಜನದಿಂದ ಅವರು ಕೊಡುವದೂ, ಭಗವಂತನ ಮೂಲಕವಾಗಿಯೇ; ಭಗವಂತನ ಅನುಮತಿದ್ವಾರವೇ ಎಂದು ತಿಳಿಸುವದಕ್ಕಾಗಿಯೂ, ಇಂತಹ ಅಶಾಶ್ವತವಾದ ಫಲಕ್ಕಿಂತ ತುಂಬಾ ವಿಲಕ್ಷಣವಾದ, ನಿರತಿಶಯವಾದ, ಮುಕುಂದನು ಮಾತ್ರವೇ ಕೊಡಲು ಸಾಧ್ಯವಾದ ಮೋಕ್ಷಾನಂದವೆಂದು ತಿಳಿಸುವದಕ್ಕಾಗಿಯೂ, ಮತ್ತು ಭಗವಂತನ ಭಜನದ ಮೂಲಕ ನಶ್ವರವಾದ ಐಶ್ವರ್ಯಾದಿಗಳು ಲಭಿಸಿದರೆ, "**ಸತ್ಯಯೋರ್ಥಸ್ಯ ಮೋಕ್ಷಸ್ಯ ಸಿದ್ಧಯಸ್ಸಂಪ್ರಕೀರ್ತಿತಃ**" ಎಂದು ಹೇಳಿರುವ ಹಾಗೆ ಮೋಕ್ಷಪ್ರಾಪ್ತಿಯೂ ಹಾಗೆಯೇ ಆತನ ಭಜನದಿಂದ ಲಭಿಸುತ್ತದೆಂಬ ನಂಬಿಕೆಯುಂಟಾ ಗುವದಕ್ಕಾಗಿಯೂ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದು

ಇಲ್ಲಿ **ತದ್ದಾಸ್ಯೈಕರತಿಃ** ಎಂದು ಹೇಳಿರುವದರಿಂದ "**ದಾಸಭೂತಾಸ್ಸ್ವತಸ್ಸರ್ವೆಹ್ಯಾತ್ಮಾನಃ**" ಎಂಬ ಪರಮಾತ್ಮನಿಗೆ ಅತ್ಯನ್ತ ಪರತಂತ್ರನು ತಾನು ಎಂಬ ಯಥಾರ್ಥಜ್ಞಾನವಿಲ್ಲ ದವರಿಗೆ ಸರ್ವಾತ್ಮನಾ ಮೋಕ್ಷಪ್ರಾಪ್ತಿಯನ್ನು ಈ ಗೀತಾಶಾಸ್ತ್ರವು ಹೇಳಲಿಲ್ಲವೆಂಬುದು ತೋರಿ ಬರುತ್ತದೆ. ತಾನೇ ಪರಮಾತ್ಮನೆಂಬ ಅನುಸಂಧಾನವಿರುವವರಿಗೆ **ಮಮಸಾಧರ್ಮ್ಯಮಾಗತಾಃ**" ಎಂಬಲ್ಲಿ ಉಪಪಾದಿಸಿರುವ ಮೋಕ್ಷಸುಖವಿಲ್ಲವೆಂದು ತಿಳಿಸುವದಕ್ಕಾಗಿಯೇ ದಾಸ್ಯೈಕರತಿಯುಳ್ಳವನಿಗೆ "**ತದ್ವಿಷ್ಣೋಃ ಪರಮಂಪದಂ**" ಎಂದು ಹೇಳಿರುವ ತತ್ಪದವೇ ವಿನಾ ಅನ್ಯಥಾ ಇಲ್ಲವು, ಅತ್ಯನ್ತ ಏಕಾನ್ತ ಶಬ್ದದಿಂದ ಅನನ್ಯಗತಿತ್ವವು ಬೋಧಿತವಾಗುವ ದರಿಂದ ನಮ್ಮ ಹಾಗೆಯೇ ಜೀವಕೋಟಿಗೆ ಸೇರಿ ಸುಕೃತ ಪರಿಪಾಕದಿಂದ ಸ್ವಲ್ಪ ಉತ್ಕೃಷ್ಟ ಲೋಕಾಧಿಪತಿಗಳಾಗಿರುವ ಬ್ರಹ್ಮರುದ್ರೇಂದ್ರಾದಿದೇವತೆಗಳಾದುದರಿಂದ ಅಂತವರ ಅನುಗ್ರಹವು ಇಂತಹ ನಿರತಿಶಯ ಮೋಕ್ಷಸುಖವನ್ನು ಕೊಡುವ ಶಕ್ತಿಯುಳ್ಳದ್ದಲ್ಲವೆಂಬುದು ದ್ಯೋತಿತವು ಹಾಗೆ ಅನ್ಯದೇವತಾಭಜನದಿಂದ ಪ್ರಾಪ್ತವಾಗುವ ಪ್ರಯೋಜನ ಮೋಕ್ಷಪ್ರಾಪ್ತಿ ಅಲ್ಲವೆಂದೂ ಗೀ. ೪-೧೨ ನೆಯ ಶ್ಲೋಕದಲ್ಲಿ "**ಕ್ಷಿಪ್ರಂಹಿಮಾನುಷೇಲೋಕೇ ಸಿದ್ಧಿರ್ಭವತಿಕರ್ಮಜಾ**" ಅದು ಅಶಾಶ್ವತ ಫಲರೂಪವಾದುದೆಂದೂ ಹೇಳಲ್ಪಟ್ಟಿರುತ್ತದೆ ಮತ್ತು ೭-೨೩ ನೆಯ ಶ್ಲೋಕವಾದ "**ಅನ್ತವತ್ತುಫಲಂತೇಷಾಂ**" ಎಂಬ ಶ್ಲೋಕದಲ್ಲಿ "**ದೇವಾನ್‌ದೇವ ಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾ ಮಪಿ**" ಎಂಬಲ್ಲಿ ಈ ಅಭಿಪ್ರಾಯವು ವ್ಯಕ್ತವು. ಪುನಃ ಇನೆ

ಅಧ್ಯಾಯದ ೨೫ ನೆಯ ಶ್ಲೋಕವಾದ **"ಯಾನ್ತಿ ದೇವವ್ರತಾ ದೇವಾನ್ ಪಿತೄನ್ಯಾನ್ತಿ ಪಿತೃವ್ರತಾಃ । ಭೂತಾನಿ ಯಾನ್ತಿಭೂತೇಜ್ಯಾಃ ಯಾನ್ತಿಮದ್ಯಾಜಿನೋಽಪಿಮಾಮ್"** ಎಂಬಲ್ಲೂ ಈ ಅಭಿಪ್ರಾಯವೇ ಉಪಪಾದಿತವು. ಮೋಕ್ಷಪ್ರಾಪ್ತಿಗೆ ಸಾಧನಾನುಷ್ಠಾನಗಳು ಭಕ್ತಿಪ್ರಪತ್ತಿಗಳೆಂದು ಹೇಳುವದಕ್ಕಾಗಿಯೇ ಈ ಗೀತಾಶಾಸ್ತ್ರವು ಉಪದಿಷ್ಟವಾದುದು ಎಂದು ಪ್ರದರ್ಶಿಸುವದಕ್ಕಾಗಿಯೇ **ತತ್ಪ್ರಧಾನಮಿದಂ ಶಾಸ್ತ್ರಮ್** ಎಂದು ನಿಗಮನದಲ್ಲಿ ಹೇಳಲ್ಪಟ್ಟಿತು. ಆದುದರಿಂದ ಇಲ್ಲಿನ **ತತ್** ಎಂಬ ಶಬ್ದವು **ತತ್ಪದಮಾಪ್ನುಯಾತ್** ಎಂಬುದರಿಂದ ತೋರಿಬರುವ **ಮೋಕ್ಷಪ್ರಾಪ್ತಿ**ಯೆಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆಂದು ಭಾವಿಸಿ, ಮೋಕ್ಷಪ್ರಾಪ್ತಿಯೇ ಪ್ರಧಾನವಾಗಿವುಳ್ಳ ಶಾಸ್ತ್ರವೆಂದು ಅರ್ಥವಾಗಬಹುದು. ಅಥವಾ ನ್ಯಾಸೋಪಾಸನರೂಪ ಸಾಧ್ಯೋಪಾಯಗಳೆರಡರಲ್ಲಿ ಒಂದರ ನಿಷ್ಠೆಯನ್ನವಲಂಬಿಸಿರುವ ಪರವ್ಯೈಕಾಸ್ತಿಯನ್ನು ಬೋಧಿಸುತ್ತದೆಂದು ಭಾವಿಸಿ, ಅಂತಹ ಪರವ್ಯೈಕಾಸ್ತಿಯನ್ನು ಪ್ರಧಾನವಾಗಿವುಳ್ಳ ಶಾಸ್ತ್ರವೆಂದಾಗಲಿ ಆಗಬಹುದು. ಅಥವಾ ಅಂತಹ ಪರವ್ಯೈಕಾಸ್ತಿಯು ಪ್ರಾಪ್ಯವಾದುದನ್ನೇ ಪ್ರಧಾನವಾಗಿ ಉಳ್ಳ ಶಾಸ್ತ್ರವೆಂಬದಾಗಲಿ ಆಗಬಹುದು. **ಇತಿ ಗೀತಾರ್ಥಸಙ್ಗ್ರಹಃ** ಎಂದು ಹೇಳಿರುವದರಿಂದ ತಮ್ಮ ಶಿಷ್ಯವರ್ಗವಾದ ಮುಮುಕ್ಷುಜನಕ್ಕೆ ಈ ಶೇಷ ಶೇಷಿಭಾವವೇ ಮತ್ತು ಪ್ರಾಪ್ಯಾಪ್ರಾಪ್ಯಭಾವಗಳೇ ಸರಿಯಾದ ಸಿದ್ಧಾನ್ತವಾಗಿ ನಮಗೆ ಉಪಾದೇಯವೇ ವಿನಾ, ಇತರ ಸಿದ್ಧಾನ್ತಗಳು ಯಾವುವೂ ಈ ಗೀತಾಸಿದ್ಧಾನ್ತಕ್ಕೆ ಸರಿಹೋಗುವದಿಲ್ಲವೆಂದು ತಿಳಿಸುವದಕ್ಕಾಗಿಯೂ **ಇತಿಗೀತಾರ್ಥಸಙ್ಗ್ರಹಃ** ಎಂಬ ಪ್ರಯೋಗವು. ಇದರಿಂದ ವೇದಬಾಹ್ಯಸಿದ್ಧಾನ್ತಿಗಳು ಯಾರೂ ಈ ಗೀತೆಗೆ ಸಮಂಜಸವಾದ ಅರ್ಥವನ್ನು ಬೋಧಿಸಲಾರರು ; ಮತ್ತು ಇರುವದೆಲ್ಲಾ ನಿರ್ವಿಶೇಷ ಚಿನ್ಮಾತ್ರ ಪರಬ್ರಹ್ಮ ಒಂದೇ ಪರಮಾರ್ಥವು, ಮಿಕ್ಕ ನಾನಾವಿಧ ಜ್ಞಾತೃಜ್ಞೇಯರೂಪಭೇದಗಳೆಲ್ಲಾ ಮಿಥ್ಯೆ ಎಂಬ ವಾದಕ್ಕೂ ಅವಕಾಶವಿಲ್ಲವು ; **ಯತ್ರ ಯೋಗೇಶ್ವರಃ ಕೃಷ್ಣಃ** ಎಂಬುದರಿಂದಲೇ ನಿರ್ವಿಶೇಷ ವಾದವು ಸರಿಹೋಗುವದಿಲ್ಲವು. ಲೀಲಾಸಾರಥಿಯು ಅನುಗ್ರಹಿಸಿದ ಉಪದೇಶದಾರಂಭ ಶ್ಲೋಕವಾದ **"ನತ್ವೇವಾಹಂ ಜಾತುನಾಸಂ"** (ಗೀ ೨-೧೨) ಎಂಬಲ್ಲೂ, ಗ್ರಂಥಮಧ್ಯದಲ್ಲಿ **"ಉತ್ತಮಃ ಪುರುಷಸ್ತ್ವನ್ಯಃ"** (ಗೀ ೧೫-೧೭) ಎಂಬಲ್ಲೂ, ಅಂತ್ಯದಲ್ಲಿ **"ಮಾಮೇಕಂ ಶರಣಂ ವ್ರಜ"** (ಗೀ ೧೮-೬೬) ಎಂದು ಪ್ರಾಪ್ಯವೇ ಬೇರೆ ಪ್ರಾಪ್ತವೇ ಬೇರೆ ಎಂಬಲ್ಲೂ **"ಪೃಥಗಾತ್ಮಾನಂ ಪ್ರೇರಿತಾರಂಚಮತ್ವಾ" "ದ್ವಾವಜೌ ಈಶನೀಶೌ" "ದ್ವಾಸುಪರ್ಣಾ"** ಇತ್ಯಾದ್ಯನೇಕ ಶ್ರುತಿಗಳಲ್ಲಿ ಉಪಪಾದಿತವಾಗಿರುವ ಪರಮಾತ್ಮ ಜೀವಾತ್ಮ ಭೇದವೇ ಪರಮಾರ್ಥವೆಂದು ಹೇಳಲ್ಪಟ್ಟಿರುತ್ತದೆ. ಆ ಜೀವಾತ್ಮರು ಅನೇಕರು ಎಂಬುದನ್ನು **"ಮಮಸಾಧರ್ಮ್ಯಮಾಗತಾಃ । ಸರ್ಗೇಽಪಿನೋಪಜಾಯನ್ತೇ** (ಗೀ ೧೪-೨) ಎಂಬಲ್ಲಿರುವ ಬಹುವಚನದಿಂದಲೂ **"ಮಾಮುಪೇತ್ಯಪುನರ್ಜನ್ಮದುಃಖಾಲಯಮಶಾಶ್ವತಮ್ । ನಾಪ್ನುವನ್ತಿಮಹಾತ್ಮಾನಃ ಸಂಸಿದ್ಧಿಂ ಪರಮಾಂಗತಾಃ"** (ಗೀ. ೮-೧೫) ಎಂಬಲ್ಲೂ ತೋರುವ ಬಹುವಚನವು ಮುಕ್ತದೆಶೆಯಲ್ಲೂ ಪೃಥಕ್ಕಾಗಿಯೇ ಜೀವಾತ್ಮರು ಅನೇಕರೆಂಬುದು **ತದ್ವಿಷ್ಣೋಃ ಪರಮಂ ಪದಂ ಸದಾಪಶ್ಯನ್ತಿಸೂರಯಃ** ಎಂಬಲ್ಲಿರುವ ಬಹುವಚನ ಪ್ರಮಾಣದಿಂದ ತೋರಿಬರುವ ಹಾಗೆ ಈ ಗೀತಾಶಾಸ್ತ್ರದಿಂದಲೂ ಸಿದ್ಧವು. ಈ ಗೀತಾಶಾಸ್ತ್ರದಲ್ಲಿ ಉಪಪಾದಿತವಾಗಿರುವದು **ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾಂ ಏಕೋಬಹೂನಾಂ ವಿದಧಾತಿಕಾಮಾನ್** ಎಂಬ ಶ್ರುತ್ಯರ್ಥವೇ ; ಆ ಕಾಮಗಳಲ್ಲಿ ಪ್ರಧಾನವಾದುದು **ಪರಬ್ರಹ್ಮಪ್ರಾಪ್ತಿ**ಯಾದುದರಿಂದ **ತತ್ಪ್ರಧಾನ**ವೆಂದು ಇಲ್ಲಿ ಹೇಳಲ್ಪಟ್ಟಿತು. **ತತ್ತ್ವ**ವು ಒಂದೇ ಅಲ್ಲವು, ತನಗೆ ಸೇರಿದುದಾಗಿ ತನಗೆ ಶರೀರವಾಗಿ ತನಗೆ ಶೇಷಭೂತವಾಗಿ

ಇನ್ನೆರಡು ತತ್ತ್ವಗಳುಂಟೆಂದು ವ್ಯಕ್ತವಾಗಿ ಹೇಳಿರುತ್ತಾರೆ-ಎಲ್ಲಿ ಎಂದರೆ ಗೀ ೭ನೆಯ ಅಧ್ಯಾಯದಲ್ಲಿ "**ಭೂಮಿರಾಪೋನಲೋ**" ಎಂದು ಆರಂಭಿಸಿ ಪ್ರಕೃತಿಯು ೮ ವಿಧವೆಂದು ಅಚಿತ್ತತ್ತ್ವವನ್ನು ಹೇಳಿ, "**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂವಿದ್ಧಿಮೇಪರಾಮ್**" ಎಂದು ಚಿತ್ತತ್ತ್ವವನ್ನು ಹೇಳಿ, ಇವೆರಡೂ ನನ್ನ ಸ್ವತ್ತು ಎಂದು **ಮೇ** ಎಂಬುವರಿಂದ ತಿಳಿಸಿ, ಹೀಗೆ ನಿತ್ಯವಾಗಿ ಮೂರು ತತ್ತ್ವಗಳಾದ ಚಿತ್ ಅಚಿತ್ ಈಶ್ವರರುಂಟು ಎಂಬ, "**ಭೋಕ್ತಾಭೋಗ್ಯಂ ಪ್ರೇರಿತಾರಂಚಮತ್ವಾ**" ಎಂಬ "**ಕ್ಷರಂ ಪ್ರಧಾನಂ, ಅಮೃತಾಕ್ಷರಂ ಹರಃ, ಕ್ಷರಾತ್ಮಾನಾ ಈಶತೇ ದೇವ ಏಕಃ**" ಎಂಬ ಇವೇ ಮೊದಲಾದ ಅನೇಕ ಶ್ರುತಿಗಳನ್ನನುಸರಿಸಿ, ತತ್ತ್ವತ್ರಯಗಳುಂಟು ಎಂಬ ಉಪದೇಶವು. ಹಾಗೆಯೇ "**ಪ್ರಕೃತಿಂ ಪುರುಷಂಚೈವ ವಿದ್ಧ್ಯನಾದೀ ಉಭಾವಪಿ**" (ಗೀ. ೧೩-೧೯) ಎಂಬುವ ಶ್ಲೋಕದಿಂದಲೂ ಅನಾದಿಯಾಗಿ ಅಚಿತ್ತು, ಚಿತ್ತು ಅವಕ್ಕೆ ನಿಯಾಮಕನಾಗಿ ಈಶ್ವರನು ಹೀಗೆ ಮೂರು ತತ್ತ್ವಗಳುಂಟೆಂಬುದನ್ನು ಗ್ರಹಿಸಬಹುದು ಹೀಗಿರುವವರಿಂದ ಮಿಥ್ಯಾವಾದಕ್ಕೆ ಈ ಗ್ರಂಥದಲ್ಲಿ ಅನುಕೂಲವೆಲ್ಲಿಯದು? ಸರ್ವನಿಯಾಮಕನಿಗೆ ಶೇಷವರ್ಗವೇ ಇಲ್ಲದೆ ಅವೆಲ್ಲಾ ಮಿಥ್ಯಯಾದರೆ, ಆತನು **ಸ್ವಂ** ಇಲ್ಲದ **ಸ್ವಾಮಿ**ಯಾಗುವದಿಲ್ಲವೇ? ಆಗ ವಿಭೂತಿಯೆಲ್ಲಾ ಮಿಥ್ಯೆಯಾದರೆ ಶ್ರೀ ಕೃಷ್ಣಭಗವಾನರವರು ತುಂಬಾ ಶ್ರಮವನ್ನು ತೆಗೆದುಕೊಂಡು ಆ ವಿಭೂತಿಯನ್ನೆಲ್ಲಾ ವಿಸ್ತರಿಸಿ ಹೇಳೋಣವು ನಿರರ್ಥಕವಲ್ಲವೋ? ಆದಕ್ಕಾಗಿ ವಿಶ್ವರೂಪ ಪ್ರದರ್ಶನವೂ ಸಹ ನಿರರ್ಥಕವಾಗುವದಿಲ್ಲವೋ? ಆದುದರಿಂದ ಅಂತಹ ಸಿದ್ಧಾಂತಗಳೆಲ್ಲಾ ತಮಗೆ ಉಪಾದೇಯವಲ್ಲವೆಂದು ತಿಳಿಸುವದಕ್ಕಾಗಿ "**ದಾಸ್ಯೈಕರತಿಃ**" ಎಂಬ ಪ್ರಯೋಗದಿಂದ ವ್ಯಕ್ತಪಡಿಸಿರುತ್ತಾರೆ. ಹೀಗೆ ಸರ್ವೇಶ್ವರನು ಸ್ವಾಮಿಯಾಗಿಯೂ ಚೇತನರಾದ ನಾವೆಲ್ಲರೂ ದಾಸರಾಗಿಯೂ ಈ ಗ್ರಂಥದಲ್ಲಿ ಹೇಳಲ್ಪಟ್ಟಿರುವದರಿಂದಲೇ ಈ ಗೀತಾಶಾಸ್ತ್ರವು ಅನೇಕ ಪಾಶ್ಚಾತ್ಯರಿಗೆ ಅತ್ಯದ್ಭುತ ಗ್ರಂಥವೆಂದು ತೋರಿ ಇದನ್ನು ಅವರವರುಗಳ ಭಾಷೆಗೆ ತರ್ಜುಮೆ ಮಾಡಿರುತ್ತಾರೆ. ಈ ಅಭಿಪ್ರಾಯದಿಂದಲೇ ಲೋಕದಲ್ಲೆಲ್ಲಾ ಈ ಗ್ರಂಥಕ್ಕೆ ವಿಶೇಷ ಪ್ರಖ್ಯಾತಿಯು.

ಈ ಶೇಷಶೇಷಿ ಸಂಬಂಧವನ್ನೂ ಹಾಗೆಯೇ ಇನ್ನೂ ಎಂಟುವಿಧ ಸಂಬಂಧವನ್ನೂ ಹೀಗೆ ನವವಿಧ ಸಂಬಂಧವನ್ನು ಶ್ರುತಿ ಸ್ಮೃತಿ ಪುರಾಣೇತಿಹಾಸಗಳೆಲ್ಲಾ ಉಪಪಾದಿಸಿದರೂ, ಅವುಗಳನ್ನೆಲ್ಲಾ ನಿರಾಕರಿಸಿ ತಾನೇ ಪರಮಾತ್ಮನೆಂದು ವಾದಿಸುವವರಿಗೆ ಇನ್ನೊಂದು ಹಿತೋಪದೇಶವಾದ ಯುಕ್ತಿವಾದವನ್ನು ಹೇಳುವೆವು ಅವರ ವಾದವೇ ಸತ್ಯವಾಗಿದ್ದರೂ ನಮ್ಮೊಂದಿಗೆ ಇದ್ದು ನಮ್ಮ ಶೇಷಶೇಷಿಭಾವವನ್ನು ಅಙ್ಗೀಕರಿಸಿದರೆ, ಕೊನೆಗೆ ಪರಮಾತ್ಮನೊಂದಿಗೆ ಅವರ ಸಿದ್ಧಾಂತದ ಪ್ರಕಾರ ಏಕೀಭವಿಸುವ ಮೋಕ್ಷಕ್ಕೇನೂ ತೊಂದರೆಯಿರುವದಿಲ್ಲವು ಹಾಗಲ್ಲದೆ ನಮ್ಮ ಸಿದ್ಧಾಂತವಾದ ಶೇಷಶೇಷೀಭಾವವು ಸತ್ಯವಾಗಿದ್ದರೆ ನಾನೇ ಪರಮಾತ್ಮನೆಂದು ಹೇಳುವವರೊಂದಿಗೆ ನಾವೂ ಸೇರಿಕೊಂಡರೆ ಭಗವನ್ನಿಗ್ರಹಕ್ಕೆ ಅವರೂ ನಾವೂ ಸಹ ಗುರಿಯಾಗುವೆವು. ಹೇಗೆಂದರೆ ಅರಮನೆಗೆ ರಾಜನಲ್ಲಿಗೆ ಹೋಗಿ ನಾನೇ ರಾಜನು ಎಂದರೆ ರಾಜನಿಗ್ರಹಕ್ಕೆ ಅವನು ಹೇಗೆ ಗುರಿಯಾಗುವನೋ, ಹಾಗೆ ಎಂದು ಭಾವಿಸತಕ್ಕದು. ಈ ಅರ್ಥದಲ್ಲಿ ಪೌಂಡ್ರಕವಾಸುದೇವ ಇತಿಹಾಸವೇ ನಿದರ್ಶನವು. ಆದುದರಿಂದ ನಮ್ಮ ಸಿದ್ಧಾಂತರೀತ್ಯಾ ಶೇಷ ಶೇಷೀಭಾವವನ್ನು ಅಙ್ಗೀಕರಿಸುವದು ಈ ಜೀವಾತ್ಮನಿಗೆ ಪರಮ ಹಿತೋಪಧಿಯು. ಆದುದರಿಂದಲೇ ಈ ಗೀತಾಶಾಸ್ತ್ರವು ಏನನ್ನು ಬೋಧಿಸುತ್ತದೆ ಎಂದರೆ ಪರಮ ಹಿತೋಪದೇಶರೂಪದಿಂದ ಈ ಕೊನೆಯ ಶ್ಲೋಕದಲ್ಲಿ "**ಏಕಾನ್ತಾತ್ಯನ್ತದಾಸ್ಯೈಕರತಿಸ್ತತ್ಪದಮಾಪ್ನುಯಾತ್ । ತತ್ಪ್ರಧಾನಮಿದಂ ಶಾಸ್ತ್ರಮ್**" ಪರಮಾತ್ಮನಿಗೆ ತಾನು ದಾಸನೆಂಬ ಏಕಾನ್ತ್ಯವುಳ್ಳವನಿಗೇನೇ

ದಿವ್ಯವೈಕುಂಠಪ್ರಾಪ್ತಿಯು, ಇದೇ ಈ ಗೀತಾಶಾಸ್ತ್ರದಲ್ಲಿ ಪ್ರಧಾನವಾಗಿ ಹೇಳಿರುವದು ಎಂದು ಉಪದೇಶಿಸಿರುತ್ತಾರೆ. ಅಂತಹ ಪರಮೈಕಾನ್ತ್ಯದಿಂದ ಆಶ್ರಯಿತಕ್ಕವು ಎರಡೇ ಉಪಾಯಗಳು. ಶಕ್ತನಿಗೆ ೬೫ನೆಯ ಶ್ಲೋಕದಲ್ಲಿ ಹೇಳಿರುವ ಉಪಾಸನೆಯು; ಅದಕ್ಕೆ ಶಕ್ತಿ ಇಲ್ಲದೆ ಶೋಕಿಸುವವನಿಗೆ ೬೬ನೆಯ ಶ್ಲೋಕದಲ್ಲಿ ಹೇಳಿರುವ ಶರಣಾಗತಿಯು ಇದೇ ಎರಡು ಉಪಾಯಗಳಾದ ಭಕ್ತಿಪ್ರಪತ್ತಿಗಳು.

## ಶ್ರೀ ಕೃಷ್ಣಾರ್ಪಣಮಸ್ತು

ಎಂಬಲ್ಲಿಗೆ ತಿರುನಾರಾಯಣಪುರಂ ವಿಜಯರಾಘವ ಶರ್ಮನ ಶ್ರೀ ಯಾಮುನ ಮುನಿಗಳ ಗೀತಾರ್ಥಸಙ್ಗ್ರಹ ವ್ಯಾಖ್ಯಾನದ ಉಪಪಾದನೆಯು ಸಂಪೂರ್ಣವು

ಶ್ರೀಮತೇ ನಿಗಮಾನ್ತ ಮಹಾದೇಶಿಕಾಯನಮಃ

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯನಮಃ

ಇಂತು ಲೀಲಾಸಾರಥಿಯ ದಿವ್ಯಸೂಕ್ತಿಗೆ ಅನೋಘ ಭಾಷ್ಯಗಳು ಶ್ರೀ ಯತಿವರ್ಯರ ಗೀತಾಭಾಷ್ಯವೂ ಮತ್ತು ಶ್ರೀ ದೇಶಿಕವರ್ಯರ ತಾತ್ಪರ್ಯಚಂದ್ರಿಕೆಯೂ ಇವುಗಳನ್ನು ಕನ್ನಡಕ್ಕೆ ಪರಿವರ್ತನೆ ಮಾಡುವಹಾಗೂ ಇನ್ನೂ ಆ ಅರ್ಥಗಳನ್ನು ಶ್ರುತಿ ಸ್ಮೃತಿ ವ್ಯಾಸಸೂತ್ರ ಪುರಾಣೇತಿಹಾಸ ಪ್ರಮಾಣಗಳ ಮೂಲಕ ಉಪಪಾದಿಸಿ ಬರೆಯಬೇಕೆಂದು ಶ್ರೀನಿವಾಸನು ಪರಮ ಕೃಪಯಾ ಪ್ರೇರಿಸಿ ಬರೆಸಿದುದರಿಂದ, ದಾಸನು ಪರಮಸುಕೃತಿಯೆಂದು ಭಾವಿಸಿರುವೆನು. ಆದುದರಿಂದ ಎಲ್ಲರೂ ಪರಮಾದರದಿಂದ ಪರಿಗ್ರಹಿಸಬೇಕಾಗಿ ಪ್ರಾರ್ಥನೆ. **"ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಕೃತಾರ್ಥೋಽಸ್ಮಿ ದಯಾನಿಧೇ"** ಎಂದು ಆ ಕೃಪಾ ಪೀಯೂಷ ಜಲನಿಧಿಯಲ್ಲಿ ಬಿನ್ನಹವು.

ಈ ಗ್ರಂಥವು ತುಂಬಾ ಅನೋಘವಾದುದರಿಂದ ಅನೇಕರಿಗೆ ಇದಕ್ಕೆ ತಾತ್ಪರ್ಯಾರ್ಥವನ್ನು ಬರೆಯಬೇಕೆಂಬ ಕುತೂಹಲ ಉಂಟಾಗಿ ವ್ಯಾಖ್ಯಾನಗಳನ್ನು ಬರೆದಿರುತ್ತಾರೆ. ಆದರೆ ಶ್ರೀ ವ್ಯಾಸರ ಹೃದಯವನ್ನು ಅರಿತು ಯಥಾರ್ಥವನ್ನು ಪ್ರಕಟಿಸುವದು ತುಂಬಾ ಕಷ್ಟವು ಅವರೇ ಒಂದು ಕಡೆಯಲ್ಲಿ ತಾವು ಬರೆದಿರುವ ಬ್ರಹ್ಮವಿದ್ಯೆಯು **"ರಾಜವಿದ್ಯಾ ರಾಜಗುಹ್ಯಂ"** ಎಂದೂ, **"ಗುಹ್ಯತರ"** ವೆಂದೂ, **'ಗುಹ್ಯಾದ್ಗುಹ್ಯತರ"** ವೆಂದೂ **"ಗುಹ್ಯತಮ"** ವೆಂದೂ ಹೇಳಿರುತ್ತಾರೆ. ಇದರಿಂದ ಉಪನಿಷತ್ತುಗಳ, ವ್ಯಾಸಸೂತ್ರ ಮೊದಲಾದವುಗಳ ಜ್ಞಾನವಿಲ್ಲದವರು ಇದಕ್ಕೆ ಯಥಾರ್ಥವಾದ ಅರ್ಥಗಳನ್ನು ಬರೆಯಲಾರರು ಆದುದರಿಂದ ಅಂತಹ ಜ್ಞಾನವಿಲ್ಲದಿರುವವರ ಅರ್ಥಗಳನ್ನು ನಿರಾಕರಿಸಿ ಬರೆಯಬೇಕಾದುದು ಅವಶ್ಯಕವಾದುದರಿಂದಲೂ, ಅನೇಕ ಕಡೆಗಳಲ್ಲಿ ಗೂಢಾರ್ಥವೂ ಧ್ವನ್ಯರ್ಥವೂ ಅಡಗಿರುವದರಿಂದ ಅವುಗಳನ್ನು ವ್ಯಕ್ತಪಡಿಸಬೇಕಾದದರಿಂದಲೂ ಗ್ರಂಥವು ತುಂಬಾ ಬೆಳೆದುಹೋಯಿತು ಸ್ವಲ್ಪ ಶ್ರಮವನ್ನು ತೆಗೆದುಕೊಂಡು ಸಾದರದಿಂದ ಪಠಿಸುವವರಿಗೂ ಆನಂದವುಂಟಾಗಬಹುದೆಂದು ನಂಬಿದ್ದೇನೆ,

ಇಷ್ಟೇ ಅಲ್ಲದೆ ಸ್ವಾಮಿ ಶ್ರೀನಿವಾಸನೂ ಸಹ ಇದರಿಂದ ಸುಪ್ರೀತನಾಗಿದ್ದಾನೆಂದೂ ನಂಬಿದ್ದೇನೆ ಶ್ರೀ ದೇಶಿಕರವರು ಪ್ರಪನ್ನನಿಗೆ ಮುಖ್ಯವಾದ ಇತಿಕರ್ತವ್ಯತಾ ರೂಪದಲ್ಲಿ ಉತ್ತರ ಕೃತ್ಯವು ಯಾವುದೆಂದರೆ ಹೇಳುತ್ತಾರೆ, ಏನೆಂದರೆ **"ಸಂತೋಷಾರ್ಥಂ ವಿಮೃಶತಿಮುಹುಸ್ಸದ್ಭಿರಧ್ಯಾತ್ಮವಿದ್ಯಾಂ ನಿತ್ಯಾಂ ಬ್ರೂತೇ ನಿಶಮಯತಿಚ ಸ್ವಾದುಸುವ್ಯಾಹೃತಾನಿ"** ಎಂದು ಹೇಳಿರುತ್ತಾರೆ. (ದಾಸನು ಬರೆದಿರುವ "ಉತ್ತರಕೃತ್ಯಾಧಿಕಾರದ ೧೬೩೦ ನೆಯ ಪುಟ

ನೋಡಿ) ಭಗವತ್ಪ್ರೀತ್ಯರ್ಥವಾಗಿ ಜ್ಞಾನಿಗಳೊಂದಿಗೆ ಸೇರಿ, ಬ್ರಹ್ಮವಿದ್ಯೆಯ ಚರ್ಚೆ ಉಪದೇಶ ಮೊದಲಾದವುಗಳನ್ನು ನಡೆಸಬೇಕೆಂದು ತಿಳಿಸಿರುತ್ತಾರೆ. ಇಲ್ಲಿ **ಸಂತೋಷಾರ್ಥಂ** ವಿಮೃಶತಿ ಎಂದು ಇಷ್ಟುಮಾತ್ರವೇ ಹೇಳಿದರು. ಯಾರ ಸಂತೋಷಕ್ಕಾಗಿ ಎಂದು ವ್ಯಕ್ತವಾಗಿ ಹೇಳದಿದ್ದರೂ ಭಗವಂತನ ಸಂತೋಷಾರ್ಥಂ ಎಂಬುದು ಸಿದ್ಧವು. ಆದರೆ ಭಗವಂತನು ಕಣ್ಣಿಗೆ ಕಾಣುವದಿಲ್ಲವಲ್ಲಾ, ಆತನು ಈ ಗ್ರಂಥದಿಂದ ಸುಪ್ರೀತನಾದನೆಂಬುದು ಹೇಗೆ ನಿಷ್ಕರ್ಷಿಸುತ್ತೀರಿ ಎಂದು ಆಕ್ಷೇಪಿಸಿದರೆ ತದೀಯರಾದ ಮಹಾಜ್ಞಾನಿಗಳು ಸುಪ್ರೀತರಾದರೆ ಲೀಲಾಸಾರಥಿಯಾಗಿದ್ದ ಶ್ರೀ ಕೃಷ್ಣನೂ ಸುಪ್ರೀತನಾದನೆಂದು ಭಾವಿಸುವೆನು ಎಂದು ಸಮಾಧಾನವು ಆಗಲಿ ಅವರೂ ನಿಮ್ಮ ಸಮ್ಮುಖದಲ್ಲಿ ಮುಖಸ್ತುತಿಗಾಗಿ ಸಂತೋಷಪಟ್ಟೆವೆಂದು ಹೇಳಬಹುದು; ಎಂದು ಪುನಃ ಆಕ್ಷೇಪ ತಂದರೆ ಆಗ ಏನುಸಮಾಧಾನವೆಂದರೆ, ವಿವೇಕ ಬುದ್ಧಿಯುತನಾದ ಈ ಜೀವಾತ್ಮನು ಸಂತೋಷಪಟ್ಟರೆ, ಭಗವಂತನೂ, ತದೀಯರೂ ಸಹ ಪ್ರೀತರಾದರು ಎಂಬುದು ಸಿದ್ಧವೆಂದು ಅರಿಕೆಮಾಡಿಕೊಳ್ಳುತ್ತೇನೆ.

ಶ್ರೀ ಕೃಷ್ಣಾರ್ಪಣಮಸ್ತು

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯನಮಃ

ಶ್ರೀಮತೇ ರಾಮಾನುಜಾಯನಮಃ

ಶ್ರೀಮತೇ ನಿಗಮಾಂತ ಮಹಾದೇಶಿಕಾಯನಮಃ

ಶ್ರಿಯೈನಮಃ ಶ್ರೀನಿವಾಸಾಯನಮಃ



ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ

ಶೌನಕರು ಸೂತಪುರಾಣೀಕರನ್ನು ಕುರಿತು ತಮಗೆ ಲೀಲಾಸಾರಥಿಯ ಮುಖಾರವಿಂದ ದಿಂದ ಹೊರಟ ಗೀತೆಯ ಮಾಹಾತ್ಮ್ಯೆಯನ್ನು ದಯವಿಟ್ಟು ತಿಳಿಸಬೇಕೆಂದು ಕೇಳಿದುದಕ್ಕೆ ಸೂತಪುರಾಣೀಕರು ಅದರ ಮಹಾತ್ಮೆಯನ್ನು ಬಹುವಾಗಿ ಶ್ಲಾಘಿಸಿರುತ್ತಾರೆ ಅವುಗಳಲ್ಲಿ ಕೆಲವು ಮುಖ್ಯ ಶ್ಲೋಕಗಳನ್ನು ಆರಿಸಿ ತಿಳಿಸುವೆವು—

(1) "ಸರ್ವೋಪನಿಷದೋಗಾವೋ" ಎಂಬುದನ್ನು ಅವತಾರಿಕೆಯಲ್ಲೇ ಉದಾ ಹರಿಸಿರುವೆವು.

(2) ಸಾರಥ್ಯಮರ್ಜುನಸ್ಯಾದೌ ಕುರ್ವ್ವನ್ ಗೀತಾಮೃತಂ ದದೌ। ಲೋಕತ್ರಯೋಪ ಕಾರಾಯ ತಸ್ಮೈ ಕೃಷ್ಣಾತ್ಮನೇ ನಮಃ ॥ ಅರ್ಥವು ವ್ಯಕ್ತವು

(3) ಯಸ್ಮಾದ್ಗೀತಾಂ ನಜಾನಾತಿ ನಾಧಮಸ್ತತ್ಪರೋ ಜನಃ ಧಿಕ್ತಸ್ಯ ಮಾನುಷಂ ದೇಹಂ ವಿಜ್ಞಾನಂ ಕುಲಶೀಲತಾಮ್" ಯಾವನು ಗೀತಾಸ್ವಾರಸ್ಯವನ್ನು ತಿಳಿಯದೇ ಇರುತ್ತಾನೋ ಅವನಿಗಿಂತಲೂ ಅಧಮ ಮನುಷ್ಯನು ಬೇರೆ ಇರಲಾರನು; ಆತನ ಮನುಷ್ಯ ಜನ್ಮ, ದೇಹವೂ, ಜ್ಞಾನವೂ, ಕುಲಶೀಲತೆ ಎಲ್ಲವೂ ನಿಂದ್ಯವಾದವು

(4) ತಸ್ಮಾದ್ಧರ್ಮಮಯೀಗೀತಾ ಸರ್ವಜ್ಞಾನಪ್ರಯೋಜಿಕಾ ।
ಸರ್ವಶಾಸ್ತ್ರಸಾರಭೂತಾವಿಶುದ್ಧಾ ಸಾ ವಿಶಿಷ್ಯತೇ ॥

ತನ್ನ ಇತಿಕರ್ತವ್ಯತೆ ಏನು ಎಂದು ತಿಳಿಸುವಂತಾದ್ದಾಗಿ ಸಮಸ್ತಜ್ಞಾನಕ್ಕೂ ಪ್ರಯೋಜಕವಾಗಿ, ಸರ್ವಶಾಸ್ತ್ರಸಾರವನ್ನೂ ಹೊಂದಿದುದಾಗಿ ಈ ಗೀತೆಯು ಇರುತ್ತದೆಂದು ಕೊಂಡಾಡಲ್ಪಟ್ಟಿರುತ್ತದೆ.

(5) ದೇವಕೀ ನಂದನಃ ಕೃಷ್ಣೋ ಗೀತಾಪಾಠೇನ ತುಷ್ಯತಿ ।
ಯಥಾ, ನವೇದ್ಯೈರ್ದಾನೇನ ಯಜ್ಞತೀರ್ಥ ವ್ರತಾದಿಭಿಃ ॥
ಗೀತಾಧೀತಾ ಚ ಯೇನಾಪಿ ಭಕ್ತಿಭಾವೇನ ಚೇತಸಾ ।
ವೇದಶಾಸ್ತ್ರಪುರಾಣಾನಿ ತೇನಾಧೀತಾನಿ ಸರ್ವಶಃ ॥

ಗೀತೆಯ ಪಠನದಿಂದ ಶ್ರೀ ಕೃಷ್ಣಭಗವಾನ್ ಪ್ರೀಣನವನ್ನು ಹೊಂದುವಷ್ಟು ವೇದಾಧ್ಯಯನ ಸತ್ಪಾತ್ರದಾನ, ಯಜ್ಞ, ಪುಣ್ಯತೀರ್ಥಸ್ನಾನ, ವ್ರತ ಮುಂತಾದವುಗಳಿಂದ ಇಲ್ಲವೆಂದು ಹೇಳ ಲ್ಪಟ್ಟಿರುತ್ತದೆ. ಗೀತೆಯೊಂದನ್ನು ಪಾರಾಯಣ ಮಾಡಿದರೆ ಶ್ರುತಿ ಸ್ಮೃತಿ ಪುರಾಣೇತಿಹಾಸ ಗಳನ್ನೆಲ್ಲಾ ಪಾರಾಯಣವನ್ನು ಮಾಡಿದ ಹಾಗಾಗುತ್ತದೆ.

(6) ಯಃ ಶೃಣೋತಿ ಚ ಗೀತಾರ್ಥಂ ಕೀರ್ತಯತ್ಯೇವ ಯಃ ಪರಮ್ ।
ಶ್ರಾವಯೇಚ್ಚ ಪರಾರ್ಥಂ ವೈ ಸಃ ಪ್ರಯಾತಿ ಪರಂ ಪದಮ್ ॥
ತಾಪತ್ರಯೋದ್ಭವಾ ಪೀಡಾ ನೈವ ವ್ಯಾಧಿ ರ್ಭವೇತ್ಕ್ವಚಿತ್ ।
ನ ಶಾಪೋ ನೈವ ಪಾಪಂಚ ದುರ್ಗತಿ ರ್ನರಕಂ ನ ಚ ॥

ಫಲಶ್ರುತಿ ರೂಪದಲ್ಲಿ ಹೇಳಲ್ಪಟ್ಟಿದೆ. ಅರ್ಥವು ವ್ಯಕ್ತವು.

(7) ಹಾಗೆಯೇ,

ಲಭೇತ ಕೃಷ್ಣಪದೇ ದಾಸ್ಯಂ ಭಕ್ತಿಂಚಾಽವ್ಯಭಿಚಾರಿಣೀಮ್ ||
ಅಭಕ್ಷ್ಯ ಭಕ್ಷಜಂ ದೋಷ ಅಸ್ಪರ್ಶಸ್ಪರ್ಶಜಂ ತಥಾ |
ಜ್ಞಾನಾ ಜ್ಞಾನಕೃತಂ ನಿತ್ಯಮಿನ್ದ್ರಿಯೈರ್ಜನಿತಂ ಚಯತ್ |
ತತ್ಸರ್ವಂ ನಾಶ ಮಾಯಾತಿ ಗೀತಾಪಾಠೇನ ತತ್ಕ್ಷಣಾತ್ ||

(8) ಗೋಪಾಲೋ ಬಾಲಕೃಷೋಽಪಿ ನಾರದ ಧ್ರುವಪಾರ್ಷದೈಃ |
ಸಹಾಯೋ ಜಾಯತೇ ಶೀಘ್ರಂ ಯತ್ರಗೀತಾ ಪ್ರವರ್ತತೇ ||

(9) ಗೀತಾಮೇ ಹೃದಯಂ ಪಾರ್ಥ ಗೀತಾಮೇಸಾರಮುತ್ತಮಮ್ |
ಗೀತಾಮೇ ಜ್ಞಾನಮತ್ಯುಗ್ರಂ ಗೀತಾಮೇ ಜ್ಞಾನಮವ್ಯಯಮ್ ||
ಗೀತಾಮೇ ಪರಮಾ ವಿದ್ಯಾ ಬ್ರಹ್ಮರೂಪಾನ ಸಂಶಯಃ |
ಗೀತಾನಾಮಾನಿ ವಕ್ಷ್ಯಾಮಿ ಗುಹ್ಯಾನಿ ಶೃಣು ಪಾಂಡವ |
ಕೀರ್ತನಾತ್ಸರ್ವಪಾಪಾನಿ ವಿಲಯಂ ಯಾನ್ತಿ ತತ್ಕ್ಷಣಾತ್ ||
ಗಂಗಾ ಗೀತಾ ಚ ಗಾಯತ್ರೀ ಸೀತಾ ಸತ್ಯಾಸರಸ್ವತೀ |
ಬ್ರಹ್ಮವಲ್ಲೀ ಬ್ರಹ್ಮವಿದ್ಯಾ ತ್ರಿಸಂಧ್ಯಾ ಮುಕ್ತಿಗೇಹಿನೀ |

ಇತ್ಯಾದಿ ಇದು ಭಗವದ್ವಾಕ್ಯವು.

(10) ಜನಃ ಸಂಸಾರ ದುಃಖಾರ್ತೋ ಗೀತಾಜ್ಞಾನಂ ಸಮಾಲಭೇತ್ |
ಪೀತ್ವಾ ಗೀತಾಮೃತಂ ಲೋಕೇ ಲಬ್ಧ್ವಾಭಕ್ತಿಂ ಸುಖೀ ಭವೇತ್ ||
ಏತನ್ಮಾಹಾತ್ಮ್ಯಸಂಯುಕ್ತಂ ಗೀತಾಪಾಠಂ ಕರೋತಿಯಃ |
ಶ್ರದ್ಧಯಾ ಯಃ ಶೃಣೋತ್ಯೇವ ಪರಮಾಂಗತಿ ಮಾಪ್ನುಯಾತ್ ||

ಹಾಗೆಯೇ ಭೀಷ್ಮಪರ್ವದ ಗೀತಾಧ್ಯಾಯಗಳ ಮುಂದಿನ ಅಧ್ಯಾಯವಾದ ೪೩ನೆಯ ಅಧ್ಯಾಯದಲ್ಲಿ

(1) ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ |
ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ || ೧ ||
ಸರ್ವಶಾಸ್ತ್ರಮಯೀಗೀತಾ ಸರ್ವದೇವಮಯೋಹರಿಃ |
ಸರ್ವತೀರ್ಥಮಯೀ ಗಂಗಾ ಸರ್ವವೇದಮಯೋ ಮನುಃ || ೨ ||
ಗೀತಾ ಗಂಗಾಚಗಾಯತ್ರೀ ಗೋವಿಂದೇತಿ ಹೃದಿ ಸ್ಥಿತೇ |
ಚತುರ್ಗಕಾರ ಸಂಯುಕ್ತೇ ಪುನರ್ಜನ್ಮ ನವಿದ್ಯತೇ || ೩ ||
ಭಾರತಾಮೃತಸರ್ವಸ್ವ ಗೀತಾಯಾ ಮಥಿತಸ್ಯಚ
ಸಾರಮುದ್ಧೃತ್ಯ ಕೃಷ್ಣೇನ ಅರ್ಜುನಸ್ಯಮುಖೇ ಹುತಮ್ || ೪ ||

(2) ಯತ್ರಗೀತಾ ವಿಚಾರಶ್ಚ ಪಠನಂ ಪಾಠನಂ ಶ್ರುತಮ್ |
ತತ್ರಾಹಂ ನಿಶ್ಚಿತಂ ಪೃಥ್ವಿ ನಿವಸಾಮಿ ಸದೈವಹಿ ||

ಎಂಬದಾಗಿ ಭೂಮಿದೇವಿಯನ್ನು ಕುರಿತ ಭಗವದ್ವಾಕ್ಯವು.

ಇಂತು ಸಂಕ್ಷೇಪವಾಗಿ ಗೀತಾಮಹಾತ್ಮೆಯು.

ಶ್ರೀ ಗೀತಾಮೃತವರ್ಷಿಣೇ ಶ್ರೀ ಪಾರ್ಥಸಾರಥ್ಯೆನಮಃ





ಶ್ರೀಮಾನ್ ಸಿ. ಎಂ. ವಿಜಯರಾಘವಾಚಾರ್ಯರವರು